# ಇರುವಂತಿಗೆ

## ವೈದೇಹಿ ಗೌರವ ಗ್ರಂಥ

ಸಂಪಾದಕರು:
**ಸವಿತಾ ನಾಗಭೂಷಣ, ತಾರಿಣಿ ಶುಭದಾಯಿನಿ**



# ಇರುವಂತಿಗೆ

(ವೈದೇಹಿ ಗೌರವ ಗ್ರಂಥ)


ಸಂಪಾದಕರು

**ಸವಿತಾ ನಾಗಭೂಷಣ**
**ತಾರಿಣಿ ಶುಭದಾಯಿನಿ**



**ವೈದೇಹಿ ಗೌರವ ಗ್ರಂಥ ಸಮಿತಿ**
ಶಿವಮೊಗ್ಗ

**IRUVANTIGE** : (Felicitation volume) Presented to Vaidehi edited by Savitha Nagabhushana and Tarini Shubhadayini, published by Vaidehi Gaurava Grantha Samiti, HIG-5, 'NUDI', Kallahalli extension, Vinobanagara, Shivamogga-577204, Karnataka.
Ph: 9481351079 Email: savinudi61@gmail.com

ಮೊದಲ ಮುದ್ರಣ : 2019

ಬಳಸಿರುವ ಕಾಗದ : 70 ಜಿ ಎಸ್ ಎಮ್ ಎನ್ ಎಸ್ ಮೆಪ್ಲಿತೊ

ಪುಸ್ತಕದ ಆಕಾರ : 1/8 ಡೆಮಿ

ಪುಟಗಳು : 574+16

ಬೆಲೆ : ರೂ. 700/–



ಮುಖಪುಟ ವಿನ್ಯಾಸ : ಕೆ ವಿ ಅಕ್ಷರ

ಮುಖಪುಟ ಚಿತ್ರ : ವೇಣು ಹೆಣ್ಣೂರ್ ('ಅಮ್ಮಚ್ಚಿ ಎಂಬ ನೆನಪು' ಸಿನಿಮಾ ಸಂದರ್ಭ)

ಈ ಪುಸ್ತಕವು ಅಂತರ್ಜಾಲ ಮಾರಾಟಕ್ಕೆ ಇಲ್ಲಿ ಲಭ್ಯ:
http://www.aksharaprakashana.com

ಪ್ರಕಾಶಕರ ವಿಳಾಸ
**ವೈದೇಹಿ ಗೌರವ ಗ್ರಂಥ ಸಮಿತಿ**
ಹೆಚ್‌ಐಜಿ–5, 'ನುಡಿ',
ಕಲ್ಲಹಳ್ಳಿ ಬಡಾವಣೆ, ವಿನೋಬನಗರ
ಶಿವಮೊಗ್ಗ–577 204
ಫೋ: 9481351079

ಸ್ವಾನ್ ಪ್ರಿಂಟರ್ಸ್
svanprint@gmail.com
☎ 080-26742233



## ವೈದೇಹಿ ಗೌರವ ಗ್ರಂಥ ಸಮಿತಿ



## ಸಂಪಾದಕೀಯ ಮಂಡಳಿ

## ಮೊದಲ ಮಾತು.........

✦ ಸವಿತಾ ನಾಗಭೂಷಣ

2017 ಆಗಸ್ಟ್‌ನಲ್ಲಿ ಎಂದು ತೋರುತ್ತದೆ, ನಾನು ಎಂ ಕೆ ಇಂದಿರಾ ಜನ್ಮ ಶತಮಾನೋತ್ಸವದ ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಬೇಕಿತ್ತು. ಎಂ ಕೆ ಇಂದಿರಾ ಅವರನ್ನು ನಾನು ಓದಿದ್ದು ಬಾಲ್ಯದಲ್ಲಿ. ಮತ್ತೆ ನಾನು ಅವರ ಕೃತಿಗಳ ಮೇಲೆ ಕಣ್ಣು ಹಾಯಿಸಿರಲಿಲ್ಲ, ಆಕಾಶವಾಣಿಯ ಕಾರ್ಯಕ್ರಮವೊಂದರಲ್ಲಿ ನನ್ನ ಮೆಚ್ಚಿನ ಪುಸ್ತಕಕ್ಕಾಗಿ ಎಂ ಕೆ ಇಂದಿರಾ ಅವರ ಫಣಿಯಮ್ಮ ಕಾದಂಬರಿಯನ್ನು ಆರಿಸಿಕೊಂಡಿದ್ದೆನಷ್ಟೇ. ಅದನ್ನು ಓದಿದ್ದು ಹಾಗೆಯೇ ನನ್ನ ಮನಸ್ಸಿನಲ್ಲಿ ಉಳಿದಿತ್ತು. ಕೇವಲ ಎರಡನೆಯ ತರಗತಿ ಓದಿದ್ದ ಎಂ.ಕೆ. ಇಂದಿರಾ ಫಣಿಯಮ್ಮನಂತಹ ಕ್ಲಾಸಿಕ್ ಕಾದಂಬರಿ ಬರೆದಿದ್ದು, ಅವರು ಅದನ್ನು ಬರೆದ ಕಾಲದಲ್ಲಿ ಅದು ಅಂತಹ ಸದ್ದೇನೂ ಮಾಡದ್ದು, ಅವರ ಪ್ರಥಮ ಕೃತಿ 'ತುಂಗಭದ್ರಾ' ಕಾದಂಬರಿಯ ಹಸ್ತಪ್ರತಿಯನ್ನು ಪ್ರಕಾಶಕರು ಕಳೆದುಕೊಂಡಾಗ ಮತ್ತೆ ಇಡಿಯಾಗಿ ಅವರು ಬರೆದದ್ದು, ಸಹಲೇಖಕಿ ತ್ರಿವೇಣಿ ಆವರಲ್ಲಿ ಬರೆಯುವ ಆಸೆ ಹುಟ್ಟಿಸಿದ್ದು, ಎಲ್ಲಕ್ಕಿಂತ್ತ ಪ್ರತಿಭಾವಂತೆಯಾಗಿದ್ದರೂ ತನ್ನ ನಲವತ್ತನಾಲ್ಕನೆಯ ವಯಸ್ಸಿನವರೆಗೂ ಬರೆಯಲು ಸಾಧ್ಯವಾಗದೇ, ಮನೆಗೆ ಬಂದ ಬಂಧುಗಳು ನಿರೂಪಿಸಿದ ಘಟನೆಯೊಂದು ಅವರಿಗೆ ಬರೆಯಲು ಪ್ರೇರಣೆ ನೀಡಿದ್ದು, ನನಗೆ ಅವರ ಬಗ್ಗೆ ಅಷ್ಟೇ ಅಲ್ಲ, ಅವರ ಸಮಕಾಲೀನ ಲೇಖಕಿಯರು ಬರವಣಿಗೆಯನ್ನು ಶುರುವಿಟ್ಟುಕೊಂಡು, ನಂತರ ಅದನ್ನು ಶ್ರದ್ಧೆಯಿಂದ ಕಾಪಿಟ್ಟುಕೊಂಡ ಬಗ್ಗೆ ನಾನು ಆಲೋಚಿಸುವಂತೆ ಮಾಡಿತು. ಎಂ ಕೆ ಇಂದಿರಾ ಅವರ ಜನ್ಮ ಶತಮಾನೋತ್ಸವದ (ಆಗಸ್ಟ್ 2017) ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಲು ಮತ್ತದೇ ಫಣಿಯಮ್ಮ ಪುಸ್ತಕಕ್ಕಾಗಿ ನಾನು ನಮ್ಮ ಮನೆಯ ಪುಸ್ತಕದ ಕಪಾಟಿಗೆ ಕೈಹಾಕಿದೆ. ಲೇಖಕಿಯರ ಪುಸ್ತಕಗಳನ್ನೆಲ್ಲಾ ಒಂದೆಡೆ ಜೋಡಿಸಿದ್ದೆನಷ್ಟೇ. ತಿರುಮಲಾಂಬಾ, ಕಲ್ಯಾಣಮ್ಮ, ಶ್ಯಾಮಲಾ ಬೆಳಗಾಂವಕರ, ದೇವಾಂಗನಾ ಶಾಸ್ತ್ರಿ, ಕೊಡಗಿನ ಗೌರಮ್ಮ, ತ್ರಿವೇಣಿ, ರಾಜಲಕ್ಷ್ಮಿ ಎನ್ ರಾವ್, ಸರಸ್ವತಿಬಾಯಿ ರಾಜವಾಡೆ, ವೀಣಾ ಶಾಂತೇಶ್ವರ, ಸಾರಾ ಅಬೂಬಕರ್, ಉಮಾರಾವ್, ರೇಖಾರಾಣಿ, ನೇಮಿಚಂದ್ರ, ಬಿ.ಟಿ.ಜಾಹ್ನವಿ,

ಎಚ್. ನಾಗವೇಣಿ ಯಾರೆಲ್ಲಾ ಸಿಗುತ್ತಾ ಹೋದರು. ಈ ಲೇಖಕಿಯರದ್ದು ಒಂದೊಂದು ಪುಸ್ತಕವಾದರೆ ವೈದೇಹಿಯವರದ್ದು ನಾಲ್ಕೈದು ಸಂಗ್ರಹಗಳು ಸಿಕ್ಕವು. ಅಯ್ಯೋ ಎಷ್ಟು ದಿನ ಆಯ್ತು ಕಥೆ ಓದಿ ಎಂದು ಸುಮ್ಮನೆ ಅಲ್ಲೊಂದು ಇಲ್ಲೊಂದು ಪುಟ ಮಗುಚುತ್ತಾ ಹೋದೆ. ಕನ್ನಡದ ಕಥಾ ಸಾಹಿತ್ಯವನ್ನು ವಿಸ್ತರಿಸಿದ ನಮ್ಮ ಲೇಖಕಿಯರ ಬಗ್ಗೆ ಹೆಮ್ಮೆ ಉಕ್ಕಿ ಬಂತು. ವೈದೇಹಿ ಹೆಚ್ಚು ಕಡಿಮೆ ನನ್ನ ತಾಯಿಯ ವಯಸ್ಸಿನವರು. ಆದರೆ ಹನಿದು ಹಳ್ಳವಾಗಿ ನದಿಯಾಗಿ ಹರಿದು ಜೀವಜಲದ ಜಾಲ ವಿಸ್ತರಿಸುವ ತವಕದಲ್ಲಿರುವವರು. ನನ್ನ ತಾಯಿಯೋ ಗಂಡ ಮಕ್ಕಳ ಮೊಮ್ಮಕ್ಕಳ ಸೇವೆ ಮಾಡುತ್ತಾ ನಾಕು ಗೋಡೆಯ ನಡುವಿನ ಈ ಬದುಕು ವ್ಯರ್ಥವೋ-ಸಾರ್ಥಕವೋ ಎಂದು ಅಂದಾಜು ಮಾಡಲಾಗದೆ ದಿನ ದೂಡುತ್ತಿರುವವರು. ನಾನು ಶಾಲೆಗೆ ಹೋಗಬೇಕಿತ್ತು ಎಂದು ಸದಾ ಕೊರಗುತ್ತಿದ್ದ ನನ್ನ ಅಜ್ಜಿ ಗುಲಾಬಿ, ನಾನಾದರೂ ಒಂದು ಕೆಲಸಕ್ಕೆ ಸೇರಿಕೊಳ್ಳುವಷ್ಟು ಓದಿ - ಬರೆದು ಮಾಡಿದ್ದಿದ್ದರೆ ಈ ಗಂಡಸರ ಸೊಕ್ಕು ಮುರಿಯುತ್ತಿದ್ದೆ ಎಂದು ವಟಗುಟ್ಟುತ್ತಿದ್ದ ನನ್ನ ತಾಯಿ, ನಾನು ವೈದೇಹಿಯವರ ಅಂತರಂಗದ ಪುಟ-ಪುಟಗಳನ್ನು ಮಗುಚುತ್ತಿರುವಂತೆಯೇ ಕಣ್ಣ ಮುಂದೆ ಬಂದರು.

ನನಗೆ ನೆನಪಿರುವ ಹಾಗೆ ಅರುವತ್ತು ಎಪ್ಪತ್ತರ ದಶಕದಲ್ಲಿ ಪ್ರತಿಯೊಬ್ಬ ಮಧ್ಯಮ ವರ್ಗದ ತರುಣಿ/ಗೃಹಿಣಿಯ ಕೈಯಲ್ಲಿ ಒಂದು ಕಾದಂಬರಿ ಇರುತ್ತಿತ್ತು. ಎಸ್ ಎಸ್ ಎಲ್ ಸಿ ಗೆ ಓದಿಗೆ ಮಂಗಳ ಹಾಡಿ ಮನೆಯಲ್ಲಿ ಕಸೂತಿ ಹಾಕುತ್ತಾ, ಅಡಿಗೆ ಕೆಲಸದಲ್ಲಿ ನೆರವಾಗುತ್ತಾ ಮುಂದೆ ಮದುವೆ ಯಾವಾಗ ಎಂದು ಆತಂಕದಲ್ಲಿ ಕಾಯುತ್ತಾ, ಬೆಳಗಿನಿಂದ ಸಂಜೆಯ ತನಕ ಗಾಣದೆತ್ತಿನಂತೆ ದುಡಿದು ಸಂಜೆ ಮುಖ ತೊಳೆದು, ತಲೆ ಬಾಚಿ ಹೂ ಮುಡಿದು ಕೈಯ್ಯಲ್ಲಿ ಒಂದು ಪುಸ್ತಕ ಹಿಡಿದು ಪುಸ್ತಕ ಪ್ರಪಂಚದಲ್ಲಿ ಕಳೆದು ಹೋಗುತ್ತಿದ್ದ ಹೆಣ್ಣು ಮಕ್ಕಳು ನೆನಪಾಗಿ, ಮನೆವಾರ್ತೆ, ಸಂಸಾರ, ಗಂಡ-ಮಕ್ಕಳು, ಬಸಿರು-ಬಾಣಂತನಗಳ ನಡುವೆ ನವೆದುದನ್ನೇ ನಾದಿ ನಾದಿ ನವಪಾಕವನ್ನು ಉಣಬಡಿಸಿದ ವೈದೇಹಿಯ ಬಗ್ಗೆ ಮೆಚ್ಚುಗೆ ಮೂಡಿ ವೈದೇಹಿಗೊಂದು ಗೌರವಗ್ರಂಥ ಕೊಟ್ಟರೆ ಹೇಗೆ ಎಂಬ ಸಣ್ಣ ಆಲೋಚನೆಯೊಂದು ಮೂಡಿತು. ಅವರು ಒಪ್ಪುವರೋ ಬಿಡುವರೋ ಕೇಳಿ ನೋಡೋಣ ಎನಿಸಿತು. ಮನಸ್ಸಿಗೇನೋ ಬಂತು. ಕೇಳುವುದು ಹೇಗೆ? ಮನಸ್ಸು ಹೊಯ್ದಾಡಿತು. ಯಾಕೆಂದರೆ ವೈದೇಹಿ ನನಗೆ ಬರಹದ ಮೂಲಕ ಆಪ್ತರಾಗಿದ್ದರೇ ಹೊರತು ವೈಯಕ್ತಿಕವಾಗಿ ಅಷ್ಟು ಪರಿಚಿತರಾಗಿರಲಿಲ್ಲ. ನೀನಾಸಂ ಸಂಸ್ಕೃತಿ ಶಿಬಿರಗಳಲ್ಲಿ ಭಾಗವಹಿಸಿದಾಗ ಅವರು ಎದುರಾದ ಸಂದರ್ಭಗಳಲ್ಲಿ ಐದು ಆರು ನಿಮಿಷ ಅವರೊಂದಿಗೆ ಮಾತಾಡಿದ್ದು ಬಿಟ್ಟರೆ ಹೆಚ್ಚಿನ ಸಂಪರ್ಕವಿರಲಿಲ್ಲ. ನಾನು ಇಪ್ಪತ್ತೈದು ವರ್ಷ ಶಿವಮೊಗ್ಗೆಯಲ್ಲಿ ಕಳೆದರೂ ಒಮ್ಮೆಯಾದರೂ ಯಾವುದೇ ಸಾಹಿತ್ಯ ಸಮಾರಂಭದಲ್ಲಿ ಎಂ.ಕೆ. ಇಂದಿರಾ ಅವರನ್ನಾಗಲೀ, ವೈದೇಹಿಯವರನ್ನಾಗಲೀ ನೋಡಿರಲಿಲ್ಲ. ನಮ್ಮ ಶಾಲೆ ಕಾಲೇಜಿಗೂ ಅವರನ್ನು ಕರೆಸಿದ್ದು ನೆನಪಿಲ್ಲ. ಶಿವಮೊಗ್ಗೆಯ

ಕರ್ನಾಟಕ ಸಂಘದಲ್ಲೂ ಅವರನ್ನು ನೋಡಿದ್ದು ನೆನಪಿಲ್ಲ. ನಾನು ಸಣ್ಣಪುಟ್ಟ ಬರವಣಿಗೆ ಮಾಡುವ ಹೊತ್ತಿಗೆ ಎಂ. ಕೆ. ಇಂದಿರಾ ವಯಸ್ಸಾಗಿ ಬೆಂಗಳೂರಿನಲ್ಲಿದ್ದರು. ಮನಸ್ಸು ಮಾಡಿದ್ದರೆ ಭೇಟಿಯಾಗಲು ಸಾಧ್ಯವಿತ್ತು, ಆದರೆ ಆಗಲಿಲ್ಲ. ವೈದೇಹಿಯವರು 1981ರ ಹೊತ್ತಿಗೆ ಶಿವಮೊಗ್ಗೆ ತೊರೆದು ಉಡುಪಿಯಲ್ಲಿ ನೆಲೆಸಿದ್ದರು. ನಾನು ಶಿವಮೊಗ್ಗೆಯವಳಾದರೂ 1981ರ ತನಕ ವೈದೇಹಿಯವರು ಶಿವಮೊಗ್ಗೆಯಲ್ಲಿ ಇದ್ದರು ಎಂಬುದೇ ನನಗೆ ಗೊತ್ತಿರಲಿಲ್ಲ. ಆದಾಗ್ಯೂ ಸುಧಾ ವಾರಪತ್ರಿಕೆ-ಪ್ರಜಾವಾಣಿ ವಿಶೇಷಾಂಕಗಳಲ್ಲಿ ಅವರ ಕಥೆಗಳನ್ನು ಓದುತ್ತಾ ನಂತರ ಸತತವಾಗಿ ಲಂಕೇಶ್ ಪತ್ರಿಕೆಯಲ್ಲಿ ಅವರ ಬರಹಗಳನ್ನು ಗಮನಿಸುತ್ತಾ, ಅವರ ಬರಹಗಳ ಜೊತೆ ಒಂದು ರೀತಿಯ ಆಪ್ತತೆಯನ್ನು ಬೆಳೆಸಿಕೊಂಡಿದ್ದೆನು. ಒಂದೆರಡು ಬಾರಿ ಪತ್ರಿಕೆಗಳಲ್ಲಿ ಅವರ ಕಥೆ ಕವನಗಳನ್ನು ಓದಿ ಅವರಿಗೆ ಪತ್ರ ಬರೆದದ್ದು ಉಂಟು.

ನಾನು ಸಾಹಿತ್ಯ ಸಂವಾದದ ಸಂಪಾದಕಿಯಾಗಿ ಕೆಲಕಾಲ ಕೆಲಸ ಮಾಡುತ್ತಿದ್ದಾಗ ಸಂವಾದದ ಮಹಿಳಾ ವಿಶೇಷಾಂಕ ಹೊರತರುವ ಸಂದರ್ಭದಲ್ಲಿ ಒಮ್ಮೆ ಅವರಿಗೆ ಕರೆ ಮಾಡಿ 'ಮೇಡಂ, ನೀವು ಈ ತನಕ ನಿಮ್ಮ ಜೀವನದಲ್ಲಿ ಯಾರಿಗೂ ಹೇಳದೇ, ಎದೆಯೊಳಗೆ ಮುಚ್ಚಿಟ್ಟಿರುವ ಸಂಗತಿಗಳ ಬಗ್ಗೆ 'ಹೇಳದೇ ಉಳಿದಿದ್ದು' ಶೀರ್ಷಿಕೆಯಡಿ ಒಂದೆರಡು ಪುಟ ಬರೆದುಕೊಡುವಿರಾ' ಎಂದು ಕೇಳಿದ್ದೆ. ಅವರು ಖಡಕ್ಕಾಗಿ, 'ಅಲ್ಲವೇ- ಕೆಲವು ಸಂಗತಿಗಳು ಸಾಯುವ ತನಕ ನಮ್ಮೊಂದಿಗೇ ಇದ್ದು ಸುಟ್ಟು ಬೂದಿಯಾಗುತ್ತವೆ. ಅದನ್ನು ನಾವೇಕೆ ಬಹಿರಂಗಪಡಿಸಬೇಕು? ಅವು ತೀರಾ ವೈಯಕ್ತಿಕ, ನೀನು ಕೇಳಲೂ ಬಾರದು ನಾನು ಹೇಳಲೂ ಬಾರದು' ಎಂದು ಮುಖದ ಮೇಲೆ ಹೊಡೆದ ಹಾಗೆ ಹೇಳಿದ್ದರು. ತೀರಾ ಎಳಸಾಗಿದ್ದ ನಾನು ಅರೆ ಹೌದಲ್ಲ ಎಂದು ತಲೆದೂಗಿ ತೆಪ್ಪಗಾಗಿದ್ದೆ. ಆದರೆ ಇದು ಹಳೆಯ ಕಥೆ. ಈಗ ಅವರ ಕಥಾ ಪಾತ್ರಗಳಾದ ವಿಜಿ, ಅಂಜು, ಸುಮ, ವನಜ, ಉಮಾ ದೇಶಪಾಂಡೆ, ನೋರಾ, ಬಾಬಿ, ರಂಗಜ್ಜಿ, ಶಾರದೆ, ಯಶಿ, ಶಾಂತಿ, ಮಂದಕ್ಕ, ಇಂದಿ, ಚಂದು, ದುಗ್ಗು, ಸಣ್ಣಿ, ಮೀರಾ, ಬಚ್ಚಮ್ಮ ಅಕ್ಕು, ಪುಟ್ಟಮ್ಮತ್ತೆ, ಸಿರಿ, ಮೀನಾಕ್ಷತ್ತೆ, ವಾಗತ್ತೆ, ವಾರಿಜ, ಸೌಗಂಧಿ, ಸುಬ್ಬಕ್ಕ, ಸುಬ್ಬಿ, ಮಾಕಾಳಿ, ಲಿಲ್ಲಿಬಾಯಿ, ಮಂಜಮ್ಮತ್ತೆ, ವಿಶಾಖಾ ಬೆನ್, ಮೂಕತ್ತೆ, ನರ್ಮದಾ, ಬಾಬುಲಿ, ಸೀತತ್ತೆ, ರುಕ್ಮಿಣಿ, ರತ್ನ, ಸಬಿತಾ ಇವರೆಲ್ಲರೂ ನನಗೆ ಪರಿಚಿತರು. ಅಂತೆಯೇ ಆ ಪಾತ್ರಗಳೊಡನೆ ಬಂಧ -ಅನುಬಂಧ ಬೆಳೆಸಿಕೊಂಡವಳಾಗಿ ನಾನು ಧೈರ್ಯದಿಂದ, 'ಮೇಡಂ ನೀವು ಶಿವಮೊಗ್ಗೆಯಲ್ಲೇ ನಿಮ್ಮ ಕಥೆಗಾರಿಕೆಯ ದಿಕ್ಕು ಕಂಡುಕೊಂಡವರು. ನಾವು ಶಿವಮೊಗ್ಗೆಯ ಐದಾರು ಜನ ಗೆಳೆಯ ಗೆಳತಿಯರು ಸೇರಿಕೊಂಡು ನಿಮಗೊಂದು ಗೌರವ ಗ್ರಂಥ ನೀಡುವ ಬಯಕೆ ಹೊಂದಿದ್ದೇವೆ ಒಪ್ಪಿಕೊಳ್ಳಿ' ಎಂದು ವೈದೇಹಿಯವರನ್ನು ಕೇಳಿದೆ. ಅವರು ಒಂದೇ ಮಾತಿನಲ್ಲಿ 'ಬೇಡ ಕಣೆ' ಎಂದರು. ನಾನು ಬಿಡದೇ ಯಾಕೆ ಎಂದಾದರೂ ಹೇಳಿ ಎಂದೆ. 'ಈ ಗೌರವ - ಗೀರವ ಎಲ್ಲ ಪುರುಷಲೋಕದ್ದು, ನಂಗ್ಯಾಕೆ? ಆದರೆ

ಹಾಗೆ ಮಾಡಬೇಕು ಅಂತ ನಿಮಗೆ ಅನಿಸಿತಲ್ಲ ಅದು ದೊಡ್ಡದು, ಅಷ್ಟೇ ಸಾಕು. ಅದೇ ಗೌರವ' ಎಂದರು. ನಾನು ಬಿಡದೇ ಅದೆಲ್ಲಾ ನಮಗೆ ಬಿಡಿ, ಒಪ್ಪಿಕೊಳ್ಳಿ, ಈ ಗೌರವ ಗ್ರಂಥಕ್ಕೆ ನೀವು ಒಂದು ನೆಪ ಅಷ್ಟೇ. ನಿಮ್ಮನ್ನು ಗೌರವಿಸುವ ಮೂಲಕ ಅಕ್ಷರಮಾಲೆಯನ್ನು ತೊಟ್ಟು ಸಂಭ್ರಮಿಸಿದ ಆ ನಿಮ್ಮ ತಲೆಮಾರನ್ನು ಗೌರವಿಸುತ್ತಿದ್ದೇವೆ ಎಂದುಕೊಳ್ಳಿ ಎಂದು ಭಿನ್ನವಿಸಿದೆ. ಏನನ್ನಿಸಿತೋ ಯೋಚಿಸಿ ಹೇಳುವೆ ಎಂದು ಹೇಳಿದವರು ಎರಡು ದಿನ ಬಿಟ್ಟು ಕರೆ ಮಾಡಿ, 'ಇದೆಲ್ಲಾ ಬೇಕಾ? ಯೋಚಿಸು' ಎಂದು ನನಗೇ ತಿರುಗುಬಾಣ ಬಿಟ್ಟರು.

'ಕವಿತೆ, ಕಥೆ, ಕಾದಂಬರಿ, ಪ್ರಬಂಧಗಳು, ಮಕ್ಕಳ ನಾಟಕಗಳು, ಅನುವಾದ, ವ್ಯಕ್ತಿನಿರೂಪಣೆಗಳು, ಅಂಕಣ ಬರಹಗಳು, ಸಂಪಾದನೆ ಇಷ್ಟೆಲ್ಲಾ ಬರೆದಿರುವಿರಲ್ಲಾ? ಬರೋಬ್ಬರಿ 100 ಕಥೆಗಳನ್ನು ಬರೆದಿರುವಿರಿ ಸಾಕಾ?' ಎಂದು ನಗೆಯಾಡಿ, 'ನಿಮ್ಮ ಒಪ್ಪಿಗೆ ಕೊಡಿ ಮಿಕ್ಕದ್ದು ನನಗೆ ಬಿಡಿ' ಎಂದೆ. ಅದರ ಫಲವೇ ಈ ಹೊತ್ತಿಗೆ ಇರುವಂತಿಗೆ.

ಏನಾದರೂ ಕೆಲಸ ಹಚ್ಚಿಕೊಂಡರೆ ಹೆಣ್ಣುಮಕ್ಕಳಿಗೆ ಒದಗಿ ಬರುವ ತರಲೆ ತಾಪತ್ರಯಗಳ ಅರಿವುಳ್ಳವಳಾಗಿ ಸದಾ ಸಮಾಲೋಚಿಸಲು ಮತ್ತು ಸಹಾಯ ಮಾಡಲು ಮನಸ್ಸು ಮತ್ತು ಶಕ್ತಿ ಎರಡೂ ಇರುವ ನನ್ನ ಆಸುಪಾಸಿನಲ್ಲೇ ಇರುವ ಆಪ್ತರಾದ ಶ್ರೀದೇವಿ ಶಾಮಣ್ಣ, ಡಿ.ಎಸ್.ನಾಗಭೂಷಣ, ವಿದ್ಯಾ ಹೆಗಡೆ, ಟಿ.ಅವಿನಾಶ್, ತಾರಿಣಿ ಶುಭದಾಯಿನಿ, ಸಬಿತಾ ಬನ್ನಾಡಿ, ಟಿ.ಎಲ್.ರೇಖಾಂಬಾ, ಕೆ.ಪದ್ಮಾಕ್ಷಿ ಇವರನ್ನು ಸಂಪರ್ಕಿಸಿ ಅವರಿಗೆ ಮನದಿಂಗಿತ ತಿಳಿಸಿದೆನು. ಎಲ್ಲರೂ ಒಂದೇ ಉಸಿರಿನಲ್ಲಿ ಖಂಡಿತಾ ಮಾಡೋಣ ಎಂದು ಕೈಜೋಡಿಸಿದ್ದರಿಂದ ವೈದೇಹಿ ಗೌರವ ಗ್ರಂಥಕ್ಕೆ ಚಾಲನೆ ಸಿಕ್ಕಿತು.

ವೈದೇಹಿ ಗೌರವ ಗ್ರಂಥ ಸಮಿತಿಯ ಸದಸ್ಯರು ಮತ್ತು ಸಂಪಾದಕರು ನಿಮಿತ್ತ ಅಷ್ಟೇ. ನಮ್ಮ ಫೋನ್ ಕರೆ, ಪತ್ರ, ಸಂದೇಶಗಳಿಗೆ ಪ್ರತಿಸ್ಪಂದಿಸಿ, ವೈದೇಹಿಯವರ ಕಳ್ಳುಬಳ್ಳಿಗಳು, ಒಡಹುಟ್ಟುಗಳು, ಬಂಧು ಬಳಗ, ಆಪ್ತರು, ಮಿತ್ರರು, ಅಭಿಮಾನಿಗಳು, ಹಿರಿಯ-ಸಮಕಾಲೀನ ಲೇಖಕ-ಲೇಖಕಿಯರು ಸಕಾಲದಲ್ಲಿ ಬರಹಗಳನ್ನು ಬರೆದುಕೊಟ್ಟು ಈ ಗೌರವ ಗ್ರಂಥ ರೂಪುಗೊಳ್ಳುವುದಕ್ಕೆ ತಮ್ಮ ಸಮಯ, ಸಹಕಾರ ನೀಡಿರುವರು. ಈ ಎಲ್ಲಾ ಪ್ರೀತಿಯ ಜೀವಗಳಿಗೆ ಅನಂತ ಕೃತಜ್ಞತೆಗಳು.

ವೈದೇಹಿಯವರ ಸಮಗ್ರ ಬರವಣಿಗೆಯ ಮೇಲೆ ಕಣ್ಣಾಡಿಸಿದ ನಂತರ ಅನಿಸಿದ್ದು ಅರೆ ಇದೇನಿದು? ಇವರು ಮಹಿಳಾ ಮಾನಸ ಲೋಕವನ್ನರಿಯಲು-ಬರೆಯಲು ಹುಟ್ಟಿಬಂದ ಇತಿಹಾಸಕಾರ್ತಿಯೇ? ಸಂಶೋಧಕಿಯೇ? ಅಥವಾ ಕೇವಲ ಸಾಕ್ಷಿಪ್ರಜ್ಞೆಯೇ? ಹನಿಯನ್ನೇ ಹಳ್ಳವಾಗಿಸಿ ನದಿಯಾಗಿಸಿ ಕಡಲಿನತ್ತ ಹರಿಸಿದ ಪರಿಶ್ರಮಿಯೇ? ಒಂದು ಹೆಂಗೂಸಿನ ದೇಹದ ಚಲನೆ, ಮನಸ್ಸಿನ ಆಲೋಚನೆ ಅದರ ಅಷ್ಟೂ ಆಯಾಮಗಳಲ್ಲಿ ಇವರು ಸೆರೆ ಹಿಡಿಯುವ ಪರಿ ಸೋಜಿಗವನ್ನು ಉಂಟುಮಾಡುತ್ತದೆ. ಹೆಣ್ಣಿನ ಯಾತನೆ

ಮತ್ತು ಯೋಚನೆಯನ್ನು ಒಂದು ಹದದಲ್ಲಿ ಬೆರೆಸಿ ಪ್ರಸ್ತುತಪಡಿಸುವ ಇವರ ಕಥೆಗಾರಿಕೆ ಬೆರಗು ಹುಟ್ಟಿಸುತ್ತದೆ. ಇದನ್ನೆಲ್ಲ ವಿವರವಾಗಿ ನಮ್ಮ ಲೇಖಕ-ಲೇಖಕಿಯರು, ವಿಮರ್ಶಕರು ಈ ಹೊತ್ತಿಗೆಯಲ್ಲಿ ಚರ್ಚಿಸಿರುವರು. ಕುಂದಾಪುರದಂತಹ ಸಣ್ಣ ಊರಿನಲ್ಲಿ ಹುಟ್ಟಿ ಬೆಳೆದು ತನ್ನ ಪ್ರತಿಭೆ-ಪರಿಶ್ರಮದಿಂದ ಕನ್ನಡ ಸಾಹಿತ್ಯ ಪ್ರಪಂಚವನ್ನು ಬೆಳಗಿದ ವೈದೇಹಿಯ ಕಥಾಪ್ರಪಂಚವನ್ನು ನನ್ನ ಕಾವ್ಯದ ಕಣ್ಣಿಂದ ನೋಡಿದ ಬಗೆಯನ್ನು ಎರಡೇ ಮಾತಿನಲ್ಲಿ ಹೇಳುವುದಾದರೆ-

**ಬಿಡುಗಡೆ**

ಎಲ್ಲಿ ಎಡವಿ ಬೀಳುವಳೋ
ಅಪ್ಪನಿಗೆ ಆತಂಕ
ಅಂಕೆಯಲ್ಲಿ ಇಡಲು
ಗಂಡನಿಗೆ ಆನಂದ

ಮಂಕಾಗಿರುವಳು
ಮಗನಿಗೆ ಅನುಮಾನ

ನಾಕು ಗೋಡೆಯ ನಡುವೆ
ಕಾಲ ನೂಕಿದವಳು

ಕಾದು ನಿಂತಳು
ಏರಿ ಕುಳಿತಳು
ತಿಳಿಯದೂರಿಗೆ
ಹಾರಿ ಹೋಯಿತು ವಿಮಾನ

ಇವರ ಕಥಾನಾಯಿಕೆಯರು ಅಡಿಗೆಮನೆಯ ಕಿಟಕಿಯಿಂದಲೇ ಚಂದ್ರನನ್ನು ನೋಡುವರು. ಇವರ ಕಥಾನಾಯಿಕೆಯರು ಬೆರಣಿ ತಟ್ಟುತ್ತಲೇ ಚಂದ್ರಾಮ ದೇವರನ್ನು ಮಾತನಾಡಿಸುವರು, ಅಡಿಗೆಮನೆಯ ಕಿಟಕಿಯಿಂದಲೇ ವಿಮಾನ ಹಾರುವುದನ್ನು ನೋಡಿ ಬೆರಗಾಗಿ ವಿಮಾನ ಹತ್ತಿ ಹೋದಂತೆಯೇ ಕನಸು ಕಾಣುವರು. ಈ ಕನಸನ್ನು ಬಿತ್ತಿ ಪೊರೆದ ಹಿರಿಯ ಜೀವ ವೈದೇಹಿಗೆ- ಈ ಹೊತ್ತಿಗೆ 'ಇರುವಂತಿಗೆ'.

ಈ ಹೊತ್ತಿಗೆ 'ಇರುವಂತಿಗೆ' ರೂಪುಗೊಳ್ಳಲು ನೆರವಾದ ಎಲ್ಲ ಸಹೃದಯರಿಗೆ ವೈದೇಹಿ ಗೌರವ ಗ್ರಂಥ ಸಮಿತಿ ಮತ್ತು ಸಂಪಾದಕ ಬಳಗದ ಪರವಾಗಿ ಹೃದಯ ಪೂರ್ವಕ ಕೃತಜ್ಞತೆಗಳು...



# ನುಡಿಯ ಉಡುಗೊರೆಗೆ ಮುನ್ ಮಾತಿನ ಮುನ್ನುಡಿ

✦ ಆರ್. ತಾರಿಣಿ ಶುಭದಾಯಿನಿ

ಸವಿತಾ ಮೇಡಂ ಒಂದು ದಿನ ಕರೆ ಮಾಡಿ ವೈದೇಹಿಯವರಿಗೊಂದು ಅಭಿನಂದನ ಗ್ರಂಥ ನೀಡೋಣ ನೀವು ನಮ್ಮ ಜೊತೆ ಕೈಜೋಡಿಸುವಿರಾ? ಎಂದು ಕೇಳಿದಾಗ ಮರು ಮಾತಿಲ್ಲದೇ ನಾನು ಒಂದೇ ಬಾರಿಗೆ ಒಪ್ಪಿಕೊಂಡೆ. ಒಂದು, ನನ್ನ ಕನ್ನಡದ ಓದಿನಲ್ಲಿ ಮತ್ತೆ ಮತ್ತೆ ಸಂದರ್ಶಿಸುವ ಕಥಾಜಗತ್ತಿನ ಲೇಖಕಿಗೆ ಸಲ್ಲಿಸುವ ಒಂದು ಸಣ್ಣ ಸೇವೆ ಎನ್ನುವ ಭಾವ; ಇನ್ನೊಂದು, ವೈದೇಹಿ ಕಂಡುಂಡ ಜಗತ್ತು ವಿಸ್ಮೃತಿಗೋ ಎಂಬಂತೆ ಮೆಲ್ಲ ಮೆಲ್ಲನೆ ಜಾರುತ್ತಾ ಇದ್ದು ಒಂದು ತಲೆಮಾರಿನ ಸಂವೇದನೆಯ ಸಂಕ್ರಮಣ ಘಟ್ಟಕ್ಕೆ ಬಂದು ನಿಂತಿರುವಾಗ ಆಕೆ ಕಂಡ ಬದುಕಿನ ಬಗೆಗೆ ಹಾಗು ಅದನ್ನು ಅವರು ತಮ್ಮ ಸೃಜನಶೀಲ ಬರಹಗಳ ಮೂಲಕ ಹಿಡಿದಿಟ್ಟ ಬಗೆಗೆ ಒಂದು ಕೃತಜ್ಞತೆ ಸಲ್ಲಿಸಬೇಕಾದ ಪ್ರೀತಿಯ ಜವಾಬ್ದಾರಿ. ಈ ಒತ್ತಾಸೆಗಳ ಜೊತೆಗೆ ಲೇಖಕಿಯರ ಬರವಣಿಗೆಯ ಹೆಮ್ಮೆಯೂ ಸೇರಿಕೊಂಡು ಈ ಕೆಲಸದಲ್ಲಿ ನಾನು ಪಾಲ್ಗೊಳ್ಳಲೇಬೇಕೆಂಬ ಆಸೆ, ಹಂಬಲ ಮನದುಂಬಿತು. ಪುಸ್ತಕದ ರೂಪುರೇಷೆಯಿಂದ ಹಿಡಿದು ಅದರ ಸ್ವರೂಪವನ್ನು ಹೀಗೀಗೆ ಇರಬೇಕೆಂದು ಕನಸಿದವರು ಸವಿತಾ ಮೇಡಂ. ಅವರಿಗೆ ಅದಾಗಲೇ ಬರಹಗಾರ್ತಿಯ ಅಸ್ಮಿತೆ ಇದ್ದುದರಿಂದ ಅವರು ವೈದೇಹಿಯವರಂತಹ ಅನೇಕ ಹಿರಿಯ ಲೇಖಕಿಯರ ಜೊತೆ ಒಡನಾಡುತ್ತಾ ಇದ್ದವರು. ಅಲ್ಲದೆ ಅವರ ಬರಹಗಳ ಬಗೆಗೆ ಆಸಕ್ತಿ ತಾಳಿ ಹೆಣ್ಣು ಬರವಣಿಗೆಯ ಬಗೆಗೆ ವಿಶೇಷ ಕಾಳಜಿ ಇಟ್ಟುಕೊಂಡು ತಮ್ಮ ಸಮಕಾಲೀನ ಗೆಳತಿಯರಿಗೆ ಕನ್ನಡದ ಅನೇಕ ಲೇಖಕಿಯರನ್ನು ಓದಿಸುತ್ತಾ ಬಂದವರು. ಇದರ ಮುಂದುವರೆದ ಭಾಗವಾಗಿ ವೈದೇಹಿಯವರಿಗೆ ಎಪ್ಪತ್ತೈದು ವರ್ಷಗಳು ತುಂಬುತ್ತಿದ್ದು ಗೌರವ ಸಲ್ಲಿಸಬೇಕೆನ್ನುವ ಯೋಜನೆ ಹುಟ್ಟಿದ್ದು. ಖ್ಯಾತನಾಮರಾದ ಪುರುಷ ಲೇಖಕರಿಗೆ ಸಿಗುವ ಗೌರವ, ಸಮ್ಮಾನಗಳೆಲ್ಲ ವೈದೇಹಿಯವರಿಗೆ ಸಂದಿದ್ದರೂ ಅವರ ಹೆಸರಿನಲ್ಲಿ ಒಂದು ಕ್ರಿಟಿಕಲ್ ರೀಡರ್ ಎನ್ನುವ ಪೂರ್ಣ ಪ್ರಮಾಣದ ಹೊತ್ತಗೆಗಳು ಬಂದಿರುವುದು ಬೆರಳೆಣಿಕೆಯಷ್ಟು. ಇದೇ ನೆಪದಲ್ಲಿ ನಾವು ಯಾಕೆ ಅವರಿಗೊಂದು ನುಡಿಯ ಉಡುಗೊರೆ ನೀಡಬಾರದು

ಎಂದು ಸವಿತಾ ಆಲೋಚಿಸಿದರು. ಹೀಗೆ ಆಲೋಚಿಸುವುದರ ಹಿಂದೆ ಸ್ತ್ರೀ ಅಸ್ಮಿತೆಯ ಒಂದು ಹೋರಾಟದ, ಹೆಮ್ಮೆಯ ಸಂಕಥನವೇ ಇದೆ ಎನ್ನುವುದಕ್ಕೆ ಅಡ್ಡಿಯಿಲ್ಲ. ಇದು ಮುನ್ ಮಾತಿನ ಮುನ್ನುಡಿ.

ಬರವಣಿಗೆ ಎನ್ನುವುದು ದುಬಾರಿ ಎನಿಸಿದ ಕಾಲದಿಂದಲೂ ಬರೆಯುತ್ತಲೇ ಬಂದಿರುವ ಅನೇಕ ಲೇಖಕಿಯರು ಬರಹಗಾರ್ತಿಯರಾಗಿ ರೂಪುಗೊಳ್ಳಬೇಕಾದರೆ ಅನೇಕ ಕೊಂಡಗಳನ್ನು ಹಾದು ಬಂದವರು. ಗೃಹಿಣಿಯಾಗಿ ಮನೆಗೆಲಸದ ಹೊರೆ ಒಂದೆಡೆ. ಇನ್ನೊಂದೆಡೆ ಜೈವಿಕ ಕೊಡುಗೆಗಳಾದ ಮುಟ್ಟು, ಹೆರಿಗೆ, ಬಾಣಂತನಗಳ ಅನಿವಾರ್ಯತೆ ಲೇಖಕಿಯಾಗಿ ರೂಪುಗೊಳ್ಳಲು ಇರುವ ಸಹಜ ಅಡ್ಡಿ ಆತಂಕಗಳು. ಇದರಾಚೆ ಲೇಖಕಿಯಾಗಿ, ಓದುಗಳಾಗಿ ರೂಪುಗೊಳ್ಳಬೇಕಾದ ಸಂದರ್ಭದಲ್ಲಿ ಹೊರಗಿನ ನೆರವು, ಆಕರಗಳು ಸಕಾಲಕ್ಕೆ ಸಿಗದೇ ಇರುವುದು, ಬರೆದಿದ್ದನ್ನು ಓದಿ ಹೀಗೆ ಬರೆಯಬಹುದು, ಚೆನ್ನಾಗಿದೆ, ಚೆನ್ನಾಗಿಲ್ಲ ಎಂಬ ವಿಮರ್ಶಾತ್ಮಕ ಒಡನಾಟ ಸಿಗದೇ ಇರುವುದು ಅವರನ್ನು ಹಿಂಜರಿಕೆಗೆ ತಳ್ಳಿದ ಅಂಶಗಳು. ಎಷ್ಟೋ ಬಾರಿ ಲೇಖಕಿಯರ ಮನೆಯವರಿಗೇ ತಮ್ಮ ಅಮ್ಮ/ಮಡದಿ ಲೇಖಕಿ ಎನ್ನುವ ಸತ್ಯ ತಿಳಿಯದೇ ಇರುವುದೂ ಉಂಟು. ಹೀಗೆ ಬರಹಗಾರ್ತಿಯ ಅಸ್ಮಿತೆಯನ್ನು ಜಗತ್ತಿಗೆ ಪ್ರಸ್ತುತ ಪಡಿಸುವ ಆಸೆ, ಹಂಬಲಕ್ಕೆ ನೂರಾರು ಅಡ್ಡಿ ಆತಂಕಗಳು. ಮೊದಲ ತಲೆಮಾರಿನ ಲೇಖಕಿಯರ ಈ ಕಷ್ಟಗಳನ್ನು ತಾವೂ ಅನುಭವಿಸುತ್ತಲೇ ಇನ್ನೊಂದೆರಡು ಹೆಜ್ಜೆ ಮುಂದೆ ಇಟ್ಟ ತಲೆಮಾರಿಗೆ ಸೇರಿದವರು ವೈದೇಹಿ. ಸ್ವತಃ ಗೃಹಿಣಿಯಾಗಿ ಸಾಹಿತ್ಯದ ನೇರ ವಿದ್ಯಾರ್ಥಿಯೂ ಅಲ್ಲದೆ ಒಂದು ಬಗೆಯ ಸಂಕೋಚ ಹಿಂಜರಿಕೆಗಳೊಂದಿಗೆ ಬರವಣಿಗೆ ಆರಂಭಿಸಿದವರು ಅವರು. ತಮ್ಮ ಓರಗೆಯವರಂತೆಯೇ ಸ್ತ್ರೀಲೋಕಗಳ ಬಗೆಗೇ ಬರೆದರೂ ಅದು ತೀವ್ರ ವ್ಯಾಮೋಹವ ಬರವಣಿಗೆಯಾಗಿ ರೂಪುಗೊಳ್ಳತೊಡಗಿದ್ದು ಅವರ ಸಾಹಿತ್ಯದ ಒಳನೋಟಗಳಿಂದ. ಅವರ ಬರವಣಿಗೆಯ ಚಹರೆ ಎಂದರೆ ತೀವ್ರ ವಿಷಾದ, ಪ್ರತಿರೋಧ, ಬದುಕಿನ ಬಗೆಗಿನ ವ್ಯಾಮೋಹಗಳು. ಎಂಬತ್ತರ ದಶಕದಲ್ಲಿ ಲಂಕೇಶ್ ಪತ್ರಿಕೆ ಸ್ತ್ರೀ ಬರವಣಿಗೆಗೆ ನೀಡಿದ ಆದ್ಯತೆಯಿಂದ ವೈದೇಹಿ ತಮ್ಮ ಗದ್ಯವನ್ನು ಇನ್ನಷ್ಟು ಹದಗೊಳಿಸಿಕೊಂಡು ಬರೆದರು. ಅದೇ ಸಮಯದಲ್ಲಿಯೇ ಅವರ ವಿಶಿಷ್ಟ ಪ್ರಬಂಧಗಳು ಕನ್ನಡಿಗರಿಗೆ ದೊರೆತಿದ್ದು. ಮಹಿಳಾ ಕಾವ್ಯ ಬಂಡಾಯದ ಹೊತ್ತಿಗೆ ಒಂದು ಲಯವನ್ನು ಕಂಡುಕೊಳ್ಳುತ್ತಿರುವ ಸಂದರ್ಭದಲ್ಲಿ ವೈದೇಹಿಯದೇ ಎನ್ನಿಸುವ ಛಾಪು ಮೂಡಿಸುವ ಕವಿತೆಗಳನ್ನು ಬರೆದರು. ಈ ಮೂಲಕ ಕನ್ನಡದ ಅನೇಕ ಪ್ರಕಾರಗಳಲ್ಲಿ ಕೈಯಾಡಿ ಎಲ್ಲದರಲ್ಲಿಯೂ ತಮ್ಮ ಸ್ಪರ್ಶವನ್ನು ತುಂಬಿದರು. ಹೀಗೆ ಕ್ರಿಯಾಶೀಲ ಬದುಕು ಬರವಣಿಗೆಗಳಲ್ಲಿ ತೊಡಗಿಕೊಂಡಿರುವ ವೈದೇಹಿಯವರಿಗೆ ಒಂದು ಅಭಿನಂದನೆ ಹೇಳುವ ಸಂದರ್ಭ ಸೃಷ್ಟಿಯಾಗಿದ್ದು ಅವರಿಗೆ ಎಪ್ಪತ್ತೈದು ತುಂಬುವ ಹೊತ್ತಿನಲ್ಲಿ.

ಅಕ್ಕುವಿನ ಟುವಾಲು, ಅಡುಗೆಮನೆಯ ತಿಳಿಸಾರು, ಹೆಣ್ಣುಗಳ ಸ್ವಗತ, 'ಹೊಯ್ಕ್', 'ಬರ್ಕ್', 'ಅಂಬ್ರಲೆ'ಗಳ ಭಾಷಾನಾದ ಇವುಗಳು ವೈದೇಹಿಯವರ ಸಿಗ್ನೇಚರ್ ಪದಗಳು. ಹೀಗೆ ಬರಹಗಾರರು ತಮ್ಮದೇ ಆದ ಶೈಲಿಯಿಂದ ನುಡಿಚಿತ್ರಗಳ ಮೂಲಕ ಪರಿಚಿತರಾಗುವುದೆಂದರೆ ಅದು ಅವರ ಸೃಜನಶೀಲ ಪ್ರತಿಭೆಯ ದ್ಯೋತಕ. ಕವಿ ಎಷ್ಟೋ ಸಾಲುಗಳನ್ನು ಬರೆದರೂ ನಾಲ್ಕು ಸಾಲು ಹೃದಯದಲ್ಲಿ ನಿಂತು, ಪುನಾ ಪುನಾ ಬಾಯಿಗೆ ಮನಸಿಗೆ ಓಡಿಯಾಡುತ್ತಿದ್ದರೆ ಕವಿ ಗೆದ್ದಂತೆ ಅಲ್ಲವೇ? ಹಾಗೆಯೇ ಒಬ್ಬ ಗದ್ಯ ಬರಹಗಾರ/ರ್ತಿ ತನ್ನ ನುಡಿಚಿತ್ರಗಳಿಂದ ಒಂದು ದೃಶ್ಯಾವಳಿಯನ್ನೇ ಸೃಷ್ಟಿಸಿ ಆ ಜಾಗದಲ್ಲಿ ನಾವು ಎಲ್ಲೋ ಓಡಿಯಾಡಿದ್ದೇವೆ ಎನ್ನುವ ಭಾವ ಮೂಡಿಸಿದರೆ ಗೆದ್ದಂತೆಯೇ. ಕಥನವೆಂಬುದು ನಿಜಕ್ಕೂ ಸುಳ್ಳಿಗೂ ಹೆಣಿಗೆ ಹಾಕುತ್ತಾ ಸೃಷ್ಟಿಸುವ ಇನ್ನೊಂದು ವಾಸ್ತವವೇ. ಇದನ್ನು ನೂರು ಕತೆ, ಪ್ರಬಂಧ, ಕಾದಂಬರಿಗಳ ಮೂಲಕ ಸಾಬೀತು ಮಾಡಿದ್ದು ವೈದೇಹಿ ಎಂಬ ಲೇಖಕಿ. ಮಲೆನಾಡು, ಮೂಡಿಗೆರೆ, ಚಾಮರಾಜನಗರ, ಹನೇಹಳ್ಳಿ, ಕೋಲಾರಗಳೆಲ್ಲ ಹೀಗೆ ಕರ್ನಾಟಕವೆಂಬ ಮ್ಯಾಪಿನೊಳಗಿದ್ದುಕೊಂಡೇ ನಮ್ಮ ಲೇಖಕರ ಕೈಯಲ್ಲಿ ಬೇರೆಯದೇ ಪ್ರದೇಶಗಳಾಗಿ ಬಿಟ್ಟಿರುವಂತೆ ವೈದೇಹಿಯವರ ಕುಂದಾಪುರವೆನ್ನುವ ಜಗತ್ತು ವೈದೇಹಿಯವರಲ್ಲಿ ಮತ್ತೊಮ್ಮೆ ಮೈದಳೆಯಿತು. ನಿಜಕ್ಕೂ ನಿಜವಾದ ಕುಂದಾಪುರ ಹೇಗಿದೆಯೋ ಯಾರು ಬಲ್ಲರು? ಆದರೆ ಆ ಸೀಮೆಯ ಜನ, ಭಾಷೆ, ಊಟ, ಬದುಕಿನ ಕಾಣ್ಕೆ ಎಲ್ಲ ಸೃಷ್ಟಿಯಾಗಿದ್ದು ಮಾತ್ರ ವೈದೇಹಿಯವರ ಕಥನಗಳಲ್ಲಿ. ವೈದೇಹಿ ಎನ್ನುವ ಲೇಖಕಿ ಹೀಗೆ ಲ್ಯಾಂಡ್‌ಸ್ಕೇಪ್‌ಗಳನ್ನು ಸೃಷ್ಟಿಸಿಕೊಳ್ಳುವುದರ ಮೂಲಕವೇ ತಮ್ಮದೊಂದು ಕಥಾ ಜಗತ್ತನ್ನು ಕಟ್ಟಿದ್ದು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಒಂದು ಇತಿಹಾಸ. ಜೇನ್ ಆಸ್ಟಿನ್ ಎನ್ನುವ ಲೇಖಕಿ ತನ್ನ ಪುಟ್ಟ ಹಳ್ಳಿಯಲ್ಲಿ ಕುಳಿತು ಹೆಂಗಸರ ಸಮಾಚಾರಗಳನ್ನು ಕುರಿತು ಕಥೆ ಕಟ್ಟಿದಳು. ಮದುವೆ, ಒಲವಿನ ಕೋರಿಕೆಗಳ ನಡುವೆಯೇ ಮನುಷ್ಯತ್ವದ ಸಣ್ಣ ಸಣ್ಣ ಸಂಗತಿಗಳನ್ನು ಗಾಢವಾಗಿ ಬಿಂಬಿಸಿದಳು. ಇಂದಿಗೂ ಆಕೆಯ ಮಟಾಣಿ ಜಗತ್ತಿನ ರೋಮಾಂಚನದ ಸಂಗತಿಗಳನ್ನು ಮರೆಯುವಂತೆಯೇ ಇಲ್ಲ. ಕನ್ನಡದ ಮಟ್ಟಿಗೆ ವೈದೇಹಿ ಹೀಗೆ ತಮಗೊಪ್ಪಿದ ತಾವು ಕಂಡ ಜಗತ್ತನ್ನು ಸೂಕ್ಷ್ಮವಾಗಿ ಹಿಡಿದಿಟ್ಟರು. ಹೆಂಗಸರ ಕಣ್ಣಿನ ಮೂಲಕ ನೋಡಿದ್ದು ಸಣ್ಣ ಜಗತ್ತು ಎನ್ನುವ ಕೀಳರಿಮೆಯಿಲ್ಲದೆ ತಾನು ಕಂಡ ಜಗತ್ತಿನ ಸಣ್ಣ ಪುಟ್ಟ ಗುಟ್ಟುಗಳಲ್ಲಿ ಅಡಗಿರುವ ಚೆಲುವು ಮತ್ತು ಸತ್ಯಗಳನ್ನು ಮೆಲುದನಿಯಲ್ಲಿಯೇ ಹೇಳಿದರು. ಇದೇ ಅವರ ಕಥೆಗಳೊಳಗಿನ ಬನಿಗೆ ಕಾರಣ ಎಂಬಂತೆ ಅವರ ಕಥೆಗಳು ಕಾಣುತ್ತವೆ.

ವೈದೇಹಿ ಸಾಹಿತ್ಯದ ವೈಶಿಷ್ಟ್ಯ ಎಂದರೆ ಅದು ವಿಪುಲತೆ ಮತ್ತು ವೈವಿಧ್ಯತೆಗಳಿಂದ ಕೂಡಿರುವುದು. ಪ್ರಾಯಶಃ ನವ್ಯರು ಬರೆಯುತ್ತಿದ್ದ ಏರುಗಾಲದಲ್ಲಿಯೇ ತಮ್ಮ

ಬರವಣಿಗೆಗಳನ್ನು ಶುರು ಮಾಡಿದ ವೈದೇಹಿಯವರು ತಮ್ಮ ಬರವಣಿಗೆಗಳನ್ನು ನವ್ಯದ ರೂಢಿಯಂತೆ ಹೆಚ್ಚು ಬರೆಯುವುದೆಂದರೆ ಆಳ್ಳಕವಾಗುವುದೆಂಬ ನಂಬಿಕೆಯನ್ನು ತೊಡೆದುಕೊಂಡಂತೆ ಕಾಣುತ್ತದೆ. ಈ ದಿಸೆಯಲ್ಲಿ ಅವರದು ನವೋದಯ ಕಾಲದ ಪರಂಪರೆಯ ಮುಂದುವರಿಕೆ ಎನ್ನಬಹುದು. ನವೋದಯದ ಬರಹಗಾರರು ಎಲ್ಲ ಬಗೆಯ ಪ್ರಕಾರಗಳನ್ನು ಪ್ರಯತ್ನಿಸಿದರು ಮತ್ತು ತಾವು ಎತ್ತಿಕೊಂಡ ಸವಾಲುಗಳ ಶ್ರೇಷ್ಠ ಮಾದರಿಗಳನ್ನು ಸೃಷ್ಟಿಸುವ ಸವಾಲನ್ನು ತಮಗೆ ತಾವೇ ಹಾಕಿಕೊಂಡಿದ್ದರು. ಹೀಗೆ ಸಾಹಿತ್ಯದ ಒಟ್ಟು ಧಾತು ಸತ್ವಗಳನ್ನು ಪರೀಕ್ಷಿಸಿಕೊಳ್ಳುವುದು ವೈದೇಹಿಯವರಿಗೂ ಪ್ರಿಯವಾದ ಸಂಗತಿ. ವೈದೇಹಿ ಈವರೆಗು ನೂರಕ್ಕೂ ಮಿಕ್ಕು ಕತೆಗಳನ್ನು ಬರೆದಿದ್ದಾರೆ (ಹೀಗೆ ಅವರು ತಣ್ಣಗೆ ಮಾಸ್ತಿ ದಾಖಲೆಯನ್ನು ಸರಿಗಟ್ಟಿದ್ದಾರೆ); ಕತೆಗಳಂತೆಯೇ ಬನಿಯಿರುವ ಪ್ರಬಂಧಗಳನ್ನು ಬರೆದಿದ್ದಾರೆ. ಕನ್ನಡದಲ್ಲಿ ಮಹಿಳಾ ಕಾವ್ಯ ಎನ್ನುವ ಅಲೆ ಹುಟ್ಟಿದಾಗ ಆ ಯುಗಧರ್ಮಕ್ಕೆ ಸ್ಪಂದಿಸಿ ಕಾವ್ಯ ಬರೆದಿದ್ದಾರೆ. ಮಕ್ಕಳಿಗಾಗಿ ನಾಟಕ ಬರೆದಿದ್ದಾರೆ; ಎಲ್ಲಕ್ಕಿಂತ ಮುಖ್ಯವಾಗಿ ಕನ್ನಡದ ಪ್ರಮುಖ ಲೇಖಕರಾದ ಸೇಡಿಯಾಪು, ಕೋ.ಲ.ಕಾರಂತ, ಬಿ.ವಿ.ಕಾರಂತ, ರಾಜವಾಡೆ ಮುಂತಾದವರ ಬಾಯಿಂದ ಹೊರಡುವ ತಮ್ಮ ಮನಸಿನ ದನಿಗಳನ್ನು ಸಮರ್ಥವಾಗಿ ನಿರೂಪಣೆ ಮಾಡಿದ್ದಾರೆ. ಇನ್ನು 'ಹೆಸರಿಲ್ಲದ' ಅನೇಕ ಪ್ರಕಾರಗಳನ್ನು (ಅವರು ದೇಶಕಾಲ ವಿಶೇಷಾಂಕಕ್ಕಾಗಿ ಹೋಟೆಲ್‌ನವರ ಜೊತೆ ಕಷ್ಟ ಸುಖ ಮಾತಾಡಿದ ಬರಹ ಇಲ್ಲಿ ಹೆಸರಿಸಬಹುದು) ಅವರು ರೂಢಿಸಿಕೊಳ್ಳಲು ಯತ್ನಿಸಿದ್ದಾರೆ. ವೈದೇಹಿಯವರು ಹೀಗೆ ಪರಂಪರೆಯ ಜೊತೆ ಸಾತತ್ಯವನ್ನು ಇಟ್ಟುಕೊಂಡೇ ತಮ್ಮ ಸೃಜನಶೀಲತೆಯನ್ನು ತೋರಿದವರು.

ವೈದೇಹಿಯವರ ಸಾಹಿತ್ಯ ಸಮಗ್ರವಾಗಿ ಓದುವವರ ಮುಂದೆ ಸ್ತ್ರೀಸತ್ವಗಳ ನೆಲೆಗಟ್ಟಿನಲ್ಲಿ ಬರೆಯುವ ಈ ಲೇಖಕಿಯನ್ನು ಸ್ತ್ರೀವಾದೀ ಸಾಹಿತ್ಯದ ಹೆಸರಿನಲ್ಲಿ ಓದಬೇಕೇ? ಎನ್ನುವ ಆಗ್ರಹ ಸಹಜವಾಗಿ ಉಂಟಾಗುತ್ತದೆ. ಸಾಮಾನ್ಯವಾಗಿ ಸ್ತ್ರೀ ಸಾಹಿತ್ಯವನ್ನು 'ಗೆಟ್ಟೊ' ಸಾಹಿತ್ಯ ಎಂದು ಓದುವ ಕ್ರಮವು ರೂಢಿಯಲ್ಲಿದೆ. ಹೀಗೆ ಕಿರುಧಾರೆಯ ಸಾಹಿತ್ಯ ಎಂದು ಗುರುತಿಸಿಕೊಳ್ಳುವುದರಲ್ಲಿ ಒಂದು ವಿಶಿಷ್ಟತೆ, ಅನನ್ಯತೆಯನ್ನು ಕಂಡುಕೊಳ್ಳುವುದಕ್ಕೆ ಸಹಾಯಕವೆನಿಸಿದರೂ ಈ ಬಗೆಯ ಅಭಿವ್ಯಕ್ತಿ ಅಪಾರವಾದ ಒತ್ತಡವನ್ನು ಸೃಷ್ಟಿಸುತ್ತಿರುತ್ತದೆ. ಹೆಣ್ಣೆಂಬ ಅಸ್ಮಿತೆಯ ಮೂಲಕವೇ ತಮ್ಮ ಅನನ್ಯತೆಯನ್ನು ನಿರೂಪಿಸಿಕೊಡುವುದರ ಜೊತೆಗೆ ಅದನ್ನು ಸಾರ್ವತ್ರಿಕಗೊಳಿಸಬೇಕಾದ ಒತ್ತಡಗಳೂ ಇಲ್ಲಿರುತ್ತವೆ. ಇಲ್ಲಿ ಅನುಭವಗಳ ಸಂವಹನವೇ ಸಮಸ್ಯೆಯಾಗಿ ಅದನ್ನು ಮುಟ್ಟಿಸುವ ತೊಡಕು ಕಾಣುತ್ತದೆ. ಸಾಮಾನ್ಯವಾಗಿ ಮಹಿಳಾ ಸಾಹಿತ್ಯಕ್ಕೊಂದು ಸಾಮಾನ್ಯೀಕರಣದ ಚಹರೆ ಇರುತ್ತದೆ. ಅದು ಮಹಿಳಾಲೋಕವನ್ನು ಸ್ತ್ರೀಯರ ಅನುಭವ ಕೋಶವನ್ನಾಗಿ ನೋಡುತ್ತಾ ಮದುವೆ, ಹೆರಿಗೆ, ಮಕ್ಕಳ ಲಾಲನೆ, ಪಾಲನೆಗಳನ್ನು ಈ ಅನುಭವ ವಲಯದ ವಿಶಿಷ್ಟತೆಗಳನ್ನಾಗಿ ಗ್ರಹಿಸುತ್ತದೆ. ಹೀಗೆ ಜೈವಿಕತೆ ಹಾಗು ಕೌಟುಂಬಿಕ

ಜಗತ್ತಿಗೆ ಅಂಟಿಸಿ ಸ್ತ್ರೀ ಸಾಹಿತ್ಯವೆಂದರೆ ಇವೇ ಎನ್ನುವ ಪೂರ್ವಾಗ್ರಹಗಳು ಇರುವಾಗಲೇ ಅದರ ಹೊರತಾದ ವಿಸ್ತರಣೆಗಳು ವೈದೇಹಿಯವರ ಸಾಹಿತ್ಯದಲ್ಲಿ ಕಾಣುತ್ತವೆ.

ಸ್ತ್ರೀ ಎನ್ನುವ ಒಂದು ನೆಲೆಯಲ್ಲಿ ನಿಂತು ಅನುಭವದ ಶೋಧ ಮಾಡಹೊರಟಾಗ ಯಾವ ಅನುಭವವನ್ನು ಪ್ರಮಾಣವನ್ನಾಗಿಟ್ಟುಕೊಂಡು ಸೃಜಿಸಬೇಕು ಎನ್ನುವ ಸವಾಲು ಎಲ್ಲ ಲೇಖಕಿಯರಂತೆ ವೈದೇಹಿಯವರಿಗೂ ಎದುರಾಗಿದೆ. ತಾವು ಮೀಟುತ್ತಿರುವ ಅನುಭವ ಜಗತ್ತು ಹೆಣ್ಣಿನದೇ ಆದರೂ, ಹೆಣ್ಣಿನ ಕಣ್ಣಿನಿಂದ ನೋಡಿದ್ದೇ ಆದರೂ ಅದಕ್ಕೊಂದು ಸಾರ್ವತ್ರಿಕತೆ ಇದೆ ಎನ್ನುವ ನಂಬಿಕೆಯಿಂದ ಅವರು ಬರೆಯುತ್ತಾರೆ. ಆದರೆ ಹೆಣ್ಣಿನ ರಚನೆಗಳನ್ನು ಸ್ತ್ರೀತ್ವದ ಅನುಭವಗಳಿಗೇ ಸೀಮಿತಗೊಳಿಸುವುದು ರೂಢಿ ಬಿದ್ದುಹೋಗಿದೆ. ಆದುದರಿಂದಲೇ ಮಹಾಶ್ವೇತಾರಂತಹ ಲೇಖಕಿ ಕೂಡ ಕೆಲವು ಸಂದರ್ಭಗಳಲ್ಲಿ ತಾವು ಫೆಮಿನಿಸ್ಟ್ ಅಲ್ಲ ಎಂದು ಹೇಳಬೇಕಾಯಿತು. ಆದರೆ ಸ್ತ್ರೀತ್ವದ ನೆಲೆಗಟ್ಟಿನಲ್ಲಿಯೇ ಒಂದು ಪಿತೃತ್ವದ ಅಧಿಕಾರವನ್ನು ವಿರೋಧಿಸುವ ಛಲ ಹುದುಗಿದ್ದು ಅದನ್ನು ವೈದೇಹಿಯಂತಹ ಗಟ್ಟಿ ಲೇಖಕಿಯರು ಗುರುತಿಸಿಕೊಳ್ಳುತ್ತಾರೆ. ಸಾಹಿತ್ಯದ ಕೆಲಸ ಅಧಿಕಾರ ಕೇಂದ್ರಗಳನ್ನು ಪ್ರತಿರೋಧಿಸುವ ಮೂಲಕ ಜೀವಕಾರುಣ್ಯದ ಸೆಲೆಗಳನ್ನು ಹುಡುಕಿಕೊಳ್ಳುವುದಾದರೆ ಸ್ತ್ರೀತ್ವದ ನೆಲೆಗಟ್ಟು ವಿಶಾಲಾರ್ಥದಲ್ಲಿ ಇದನ್ನೇ ಪ್ರತಿಪಾದಿಸುತ್ತದೆ. ಸ್ತ್ರೀತ್ವವನ್ನು ಒಂದು ಆದ್ಯತೆಯಾಗಿಟ್ಟುಕೊಂಡು ಬರೆಯುವ ಮೂಲಕ ಪಿತೃತ್ವದ ವಿಸ್ತರಣೆಯಾಗಿ ಇರುವ ಎಲ್ಲ ಅಧಿಕಾರ ಕೇಂದ್ರಗಳನ್ನು ಪ್ರತಿರೋಧಿಸುವುದು. ಕ್ರೌರ್ಯ ಎನ್ನುವ ಮನಸ್ಥಿತಿಯನ್ನು ಪ್ರಶ್ನಿಸುವ ರೀತಿಯಾಗಿ ಸ್ತ್ರೀತ್ವದ ನೆಲೆಯನ್ನು ಬಳಸುವುದು ಉಚಿತ ಎಂದು ಅವರ ಬರವಣಿಗೆ ನಂಬಿದೆ.

ಕ್ರೌರ್ಯವನ್ನು ವೈದೇಹಿಯವರು ಅರ್ಥೈಸುವ ರೀತಿ ಕೂಡ ಗಂಭೀರವಾದುದು. ಒಂಟಿಯಾಗಿ ಬಾಳುವೆ ಮಾಡಬೇಕಾದ ಅನಿವಾರ್ಯತೆಯುಳ್ಳ ಸೌಗಂಧಿ ತನ್ನ ಸೀಮಿತ ಚೌಕಟ್ಟಿನ ಬದುಕನ್ನು ಬದಲಾಯಿಸಬಲ್ಲ ಯಾರಾದರೂ ಬಂದಾರು ಎಂದು ಕಾಯುವುದನ್ನು ಅಲ್ಲಗಳೆಯುವಂತೆ ಸಾಮಾಜಿಕ ಕ್ರೌರ್ಯ ಅವಳ ಸುತ್ತ ಹರಡಿದೆ. ಅದು ಅಪ್ಪ ಅಮ್ಮ ಹಾಗು ಮನೆ ಯಜಮಾನಿಯ ಕಾಳಜಿಯೂ ಆಗಿ ಬರಬಹುದು! ಅಕ್ಕು ತನ್ನ ಪಿರ್ಕಿತನದಲ್ಲಿ ತೊಟ್ಟಿಲು ತೂಗುತ್ತಾ ಇದ್ದರೆ 'ಹಾಲು ಮಸ್ತಿತ್ತ ಕೇಣ್ ವಾಸು' ಎಂದು ನಕ್ಕು ಕುಶಾಲು ಮಾಡುವ ಕ್ರೌರ್ಯ. ಬಸ್ಸಿನಲ್ಲಿ ಹೆಣ್ಣೊಬ್ಬಳು ಸೀಟು ಕೇಳಿದ್ದಕ್ಕೆ ಬಸ್ಸಿನ ಕಂಡಕ್ಟರ್ ಮನಸೋ ಇಚ್ಛೇ ಬಯ್ಯುತ್ತಾ ತನ್ನದೇ ಸರಿ ಎನ್ನುವ ದಾರ್ಷ್ಟ್ಯವನ್ನು ಸಾರ್ವಜನಿಕವಾಗಿ ಅಸಹ್ಯವಾಗಿ ನಿರೂಪಿಸುವುದು ಕಡಿಮೆ ಕ್ರೌರ್ಯವೇನಲ್ಲ. ಮನೆಗೆಲಸದ ಅಹಲ್ಯೆಯನ್ನು ಪೂರ್ತಿಯಾಗಿ ದುಡಿಸಿಕೊಂಡು ಖಾಲಿ ಕೈಯಲ್ಲಿ ಹೊರದೂಡುವ ಶಾರದೆಯದು ಸ್ವಾರ್ಥದ ರೂಪದ ಕ್ರೌರ್ಯವೇ. ಹೀಗೆ ವೈಯಕ್ತಿಕ ನೆಲೆಯಲ್ಲಿ ಆರಂಭಗೊಳ್ಳುವ ಕ್ರೌರ್ಯವು ಸಾಮಾಜಿಕವಾಗಿ ವಿಷಮಿಸುವ ಮಟ್ಟಕ್ಕೆ ತಲುಪುವುದನ್ನು ವೈದೇಹಿ ಸಾಹಿತ್ಯ ಸೂಚಿಸುತ್ತದೆ.

ಕ್ರೌರ್ಯಕ್ಕೆ ಪ್ರತಿಯಾಗಿ ವೈದೇಹಿ ಸಾಹಿತ್ಯ ಪ್ರತಿಭಟನೆಯನ್ನು ದಾಖಲಿಸುತ್ತದೆ. ವೈದೇಹಿಯವರ ಸಾಹಿತ್ಯ ಪ್ರತಿರೋಧವನ್ನು ಹೊಟ್ಟೆಯಲ್ಲಿ ಹೊತ್ತುಕೊಂಡಂತಿದ್ದರೂ ಅಬ್ಬರದಲ್ಲಿ ಬಾಯ್ಮಾತಿನಲ್ಲಿ ಜಾಡಿಸಿ ಹೇಳದಂತಹ ವಿದ್ರೋಹಾತ್ಮಕ ರೀತಿಯನ್ನು ಅನುಸರಿಸುತ್ತದೆ. ದೈನಿಕ ವಿವರಗಳಲ್ಲಿಯೇ ಅಡಗಿರುವ ಸ್ತ್ರೀ ಜಗತ್ತಿನ ಅನುಭವಗಳು ಪ್ರತಿರೋಧದ ದನಿಯನ್ನು ಸೂಚಿಸಬಲ್ಲವು ಎನ್ನುವುದನ್ನು ವೈದೇಹಿಯವರು ಸೂಕ್ಷ್ಮವಾಗಿ ತಮ್ಮ ಬರಹಗಳಲ್ಲಿ ತೋರಿಸುತ್ತಾರೆ. ಅವರ ಕಥನದಲ್ಲಿ ಬರುವ ಬಹುತೇಕ ಹೆಣ್ಣುಗಳು ತಮ್ಮ ಒಳಬಾಳುಗಳ ಸತ್ವವನ್ನು ಕಂಡುಕೊಂಡವರಾಗಿದ್ದಾರೆ. ತೀವ್ರವಾಗಿ ಬದುಕುವ ಮೂಲಕವೇ ತಮ್ಮ ವಿರುದ್ಧದ ನೆಲೆಗಳನ್ನು ನಿಷ್ಕ್ರಿಯಗೊಳಿಸಬಲ್ಲವರಾಗಿದ್ದಾರೆ. ಗಂಡಸರ ಜಾಗವಾದ 'ಜಗುಲಿ'ಯನ್ನು ತಮ್ಮ ಜಾಗವಾದ 'ಹಿತ್ತಿಲಿ'ನಿಂದಲೇ ಎದುರಿಸಬಲ್ಲ ಶಕ್ತಿ ಅವರ ಸ್ತ್ರೀಪಾತ್ರಗಳಿಗಿದೆ. ಅಜ್ಜಿ, ಅಮ್ಮ, ಹುಡುಗಿಯರು ಸಮಾಜಶಾಸ್ತ್ರಜ್ಞೆಯರಾಗಿ ಲೋಕವನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಬಂದಿದ್ದಾರೆ. ಹೀಗೆ 'ನಿತ್ಯ ನಾರಕಿ'ಗಳೆನಿಸುವ ಜೀವಗಳೇ ಬದುಕಿನ ಜಿನುಗುಹಳ್ಳಗಳನ್ನು ಜೀವಂತವಾಗಿಡುವಂತವು ಎನ್ನುವುದನ್ನು ವೈದೇಹಿ ತಮ್ಮ ಕಥನಗಳ ಮೂಲಕ ಇನ್ನೂ ತೋರುತ್ತಲೇ ಇದ್ದಾರೆ. 'ಅಕ್ಕು' ಕಥೆಯ ನಾಯಕಿ ಅಕ್ಕು ತನ್ನ 'ಪಿರ್ಕಿತನ'ದಿಂದ ಕಾಣಿಸುವ ಸತ್ಯಗಳು ಲೋಕದ ಪೊಳ್ಳುತನಗಳನ್ನು ಬಯಲಿಗೆಳೆಯುತ್ತಾಳಲ್ಲದೆ ತನಗರಿವಿಲ್ಲದೆ ಅಧಿಕಾರಗಳನ್ನು ಪ್ರಶ್ನೆ ಮಾಡುವ ಧೈರ್ಯವನ್ನು ತೋರುತ್ತಾಳೆ. ಹೆಣ್ಣಿನ ಕಾಲಿನಂತಹ ಸುಂದರ ಕಾಲುಗಳನ್ನು ಹೊಂದಿರದ ವಾಣಿಮಾಯಿ ತನ್ನ ಮೆಟ್ಟು ಮೆಟ್ಟುವ ಬಯಕೆಯಿಂದಲೇ ಬಜಾರಿ ಎಂದು ಗುರುತಿಸಿಕೊಂಡವಳು. ಸಾಯುವ ಹಾಸಿಗೆಯಲ್ಲಿದ್ದರೂ ಅದೇ ಕಾಲಿನಿಂದಲೇ ತನ್ನ ಹೀಗಳೆಯುವ ಗಂಡಸನ್ನು ಒದ್ದು ಓಡಿಸುವವಳು. ಆದರೆ ಅದೇ 'ಆರತಿ ತಟ್ಟೆ'ಯ ಮೀನಾಕ್ಷತ್ತೆ ಗಂಡಿನ ಅಧಿಕಾರದ ಒಳಗೆ ಇದ್ದುಕೊಂಡೇ ತನ್ನ ಅಧಿಕಾರಗಳನ್ನು ಬಳಸಬಲ್ಲ ಚಾಣಾಕ್ಷತನ ಹೊಂದಿದವಳು. ವೈದೇಹಿಯವರ ಕಥನಗಳಲ್ಲಿ ಅಂತಹ ಎಷ್ಟೊ ಹೆಣ್ಣುಗಳು ತಮ್ಮ ಪ್ರತಿಭಟನೆಯ ರೀತಿಗಳನ್ನು ನಡೆಸುವ ರೀತಿ ಯಾರೂ ಊಹಿಸಲಾರಂದಂತವು. ಅವರ ಗೆಲುವುಗಳು ಕೂಡ ಹೊರಜಗತ್ತಿಗೆ ಅಷ್ಟೇನು ಮುಖ್ಯವಾಗಿ ಕಾಣದೆ ತಲೆಹರಟೆಯಂತೆ ಕಾಣಬಹುದು. ಆದರೆ ಪ್ರತಿಭಟನೆಯ ಸತ್ವದ ಇರುವಿಕೆಯನ್ನು ಈ ಲೇಖಕಿ ಗುರುತಿಸಿಕೊಳ್ಳುತ್ತಾರೆ ಎನ್ನುವುದೇ ಮುಖ್ಯ. ಪ್ರತಿರೋಧ ಎನ್ನುವುದು ಹೊರಗಿನ ಮಾತಲ್ಲ; ಅದು ಅಂತರಂಗದ ಸತ್ವ ಕೂಡ. ಅದು ಒಂದೇ ಭಾವದಲ್ಲಿ ಉಸಿರಾಡುವುದಿಲ್ಲ; ಅಳು, ವಿಷಾದ ಮೂಕ ಅಭಿವ್ಯಕ್ತಿಗಳೆಂಬ ವ್ಯಭಿಚಾರಿ ಭಾವಗಳ ಮೂಲಕ ಜೀವಂತವಾಗಿರುತ್ತವೆ. ಈ ಲಯಗಳನ್ನು ಹಿಡಿಯುವುದರಲ್ಲಿ ವೈದೇಹಿಯವರಿಗೆ ಯಶಸ್ಸು ಸಿಕ್ಕಿದೆ.

ಸ್ತ್ರೀಮೀಮಾಂಸೆ ಎನ್ನುವುದು ಇನ್ನೂ ಅಸ್ಪಷ್ಟವಾಗಿದ್ದಾಗ ವೈದೇಹಿಯವರು ತಮ್ಮ 'ತಿಳಿಸಾರು' ಕವಿತೆಯ ಮೂಲಕ ಒಂದು ಮೀಮಾಂಸೆಯ ಸೂಚನೆಯನ್ನು ಕೊಟ್ಟರು. ತಾವು ಬರೆಯಬಹುದಾದ ಬರಹಗಳ ಸ್ವರೂಪವನ್ನು ಎತ್ತಿ ಹೇಳುತ್ತಲೇ ಮುಖ್ಯವಾಹಿನಿಯ

ವಿಮರ್ಶೆ, ಮೀಮಾಂಸೆಗಳು ಅಳವಡಿಸಿಕೊಳ್ಳಬೇಕಾದ ಸೂಕ್ಷ್ಮ ಆಯಾಮವನ್ನು ಅವರ ಕವಿತೆ ಸೂಚಿಸಿಕೊಟ್ಟಿತು. 'ಹಂಗಸರ ಜಂಬದ ಚೀಲ'ದ ಒಳಗೆ ಇರುವ ಸಣ್ಣಪುಟ್ಟ ವಸ್ತುಗಳ ಜೀವಾಳವನ್ನು ಕಾಪಿಟ್ಟುಕೊಂಡು ಬರೆಯುವುದೇ ಅನನ್ಯತೆ ಎನ್ನುವುದರಲ್ಲಿ ಯಾವ ಹಿಂಜರಿಕೆಯೂ ಇಲ್ಲ. ಹೆಣ್ತನದ ಮೀಮಾಂಸೆಯನ್ನು ಮಂಡಿಸುವಲ್ಲಿ ವೈದೇಹಿಯವರ ಬರವಣಿಗೆಯಲ್ಲಿ ಯಾವ ಹಿಂಜರಿಕೆಯೂ ಕಾಣದು. ಪ್ರಾಯಶಃ ಸ್ತ್ರೀ ಅನನ್ಯತೆಯೆನ್ನುವುದನ್ನು ಕನ್ನಡದಲ್ಲಿ ವಿಶಿಷ್ಟವಾಗಿ ಮಂಡಿಸಿದ ಲೇಖಕಿ ಎಂದರೆ ವೈದೇಹಿಯವರೇ. ಬರಹಗಾರ್ತಿಯಾಗಿ ತಾವು ದಾಖಲಿಸುತ್ತಿರುವ ಪ್ರತಿರೋಧವು 'ಚಹಾಕಪ್ಪಿನೊಳಗಿನ ಅಲೆ'ಯಂತೆ ಮೆಲ್ಲನೆ ಸುಳಿಯುವಂತದ್ದು ಎಂದು ಅವರು ಬಲ್ಲರು. ಹಿಂಸೆಯಿಂದ ತುಂಬಿದ ಜಗತ್ತಿಗೆ ಹೀಗೆ ಪ್ರತಿಭಟನೆಯ ದನಿಯಲ್ಲಿ ಉತ್ತರ ಕೊಟ್ಟುಬಿಟ್ಟರೆ ಸಾಕಾಗದು ಅಥವಾ ಅದನ್ನು ಹಾಗೆ ಮಾಡಿ ಮುಗಿಸಿದರೆ ಎಲ್ಲವೂ ಮುಗಿದಂತಲ್ಲ ಎನ್ನುವ ಸೂಕ್ಷ್ಮ ಅವರಲ್ಲಿ ಹೊಳೆಯುತ್ತದೆ. ತಾವು ಬದುಕುತ್ತಿರುವ ಒಳಜಗತ್ತುಗಳು ಹೇಗೆ ಪಿತೃತ್ವದ ಅಧಿಕಾರ, ಹಿಂಸೆಗಳಿಂದ ಬಾಧಿತವಾಗಿದ್ದು ಅದು ವಿಶಾಲಾರ್ಥದಲ್ಲಿ ಹಿಂಸೆಯ ಸ್ಫೋಟಕ ಗುಣವನ್ನು ಸಾಂಕೇತಿಕವಾಗಿ ಸೂಚಿಸುತ್ತಿವೆ. ಹೊಸಗನ್ನಡ ಸಾಹಿತ್ಯದಲ್ಲಿ ಪ್ರತಿರೋಧದ ಘಟ್ಟ ಒಂದು ತಾರ್ಕಿಕ ಹಂತ ಮುಟ್ಟಿ ಸ್ತ್ರೀಯರ, ದಲಿತರ, ಶೋಷಿತರ ಅನುಭವ ಧಾರೆಗಳಲ್ಲಿ ಕಾಣಿಸಿಕೊಳ್ಳತೊಡಗಿದಾಗ ಹೀಗೆ ಹಿಂಸೆ ಎನ್ನುವುದು ಸೂಕ್ಷ್ಮವಾಗಿ ಸ್ಥೂಲವಾಗಿ ಇರುವ ಬಗೆಯನ್ನು ವಿಭಿನ್ನ ರೀತಿಗಳಲ್ಲಿ ಅಭಿವ್ಯಕ್ತಿಸಲು ತೊಡಗಿತು. ಅಂತಹ ಸಂದರ್ಭದಲ್ಲಿ ಸೂಕ್ಷ್ಮದ ನೆಲೆಯಲ್ಲಿ ಸ್ಥೂಲದ ಸಮಗ್ರತೆಯನ್ನು ಹಿಡಿಯುವ ಕೆಲಸಕ್ಕೆ ಕೈಹಾಕಿ ಒಂದು ನೋಟಕ್ರಮವನ್ನು ರೂಢಿಸಿಕೊಟ್ಟವರು ವೈದೇಹಿ ಎಂದು ಹೇಳಬಹುದು.

ವೈದೇಹಿಯವರ ಬರವಣಿಗೆಯ ಸೊಬಗು ಬಲ್ಲವರಿಗೆ ಮತ್ತೆ ಎಲ್ಲ ಹೇಳಬೇಕಿಲ್ಲ. ಆದರೆ ಈ ತಲೆಮಾರಿನ ತನಕ ಪ್ರಸ್ತುತಗೊಳ್ಳುವಂತೆ ಬರೆಯುವುದು ಸಾಧಾರಣದ ಸಂಗತಿಯಲ್ಲ. ಅವರ ಚೈತನ್ಯ, ಉಲ್ಲಾಸಗಳು ಹೀಗೆ ಇನ್ನೂ ಹಲವು ತಲೆಮಾರುಗಳನ್ನು ಪ್ರಭಾವಿಸಲಿ ಎಂದು ಆಶಿಸಿ ಈ ನುಡಿಯ ಗುಚ್ಛವನ್ನು ಅವರಿಗೆ ಅರ್ಪಿಸುತ್ತಿದ್ದೇವೆ. ಈ ಹೊತ್ತಗೆಗಾಗಿ ವಿಶೇಷ ಶ್ರಮವಹಿಸಿ ದುಡಿದ ರೇಖಾಂಬ ಮತ್ತು ಪದ್ಮಾಕ್ಷಿಯರು, ಸಹ ಲೇಖಕಿಯರ ಬಗೆಗೆ ಪ್ರೀತಿ ತುಂಬಿಕೊಂಡಿರುವ ಸವಿತಾ ಇವರೊಂದಿಗೆ ನಾನು ಇದ್ದುದಕ್ಕಾಗಿ ಸಂತಸವಾಗಿದೆ. ಅದರ ಅಭಿವ್ಯಕ್ತಿಯಾಗಿ ಈ ಕೆಲವು ಮಾತುಗಳು.





## ಇರುವಂತಿಗೆಯೊಳಗೆ...

**ವೈದೇಹಿ ಕಥಾ ಸಾಹಿತ್ಯ: ಒಂದು ಪ್ರತಿಸ್ಪಂದನ...**



**ವೈದೇಹಿ ಕಾವ್ಯಲೋಕದೊಳಗೊಂದು ಸುತ್ತು...**

**ವೈದೇಹಿ ಪ್ರಬಂಧ ಪ್ರಪಂಚ...**



**ವೈದೇಹಿಯವರ ಮಕ್ಕಳ ಸಾಹಿತ್ಯ – ಒಂದು ನೋಟ...**



**ಸಂಕೀರ್ಣ–ಆತ್ಮಕಥೆಗಳು, ರಂಗಭೂಮಿ, ಸಿನಿಮಾ, ಅನುವಾದ ಸಾಹಿತ್ಯ, ಕಾದಂಬರಿ ಇತ್ಯಾದಿ...**

**ಒಡನಾಟ...**

### ಗಡಿಯಾಚೆಗಿನ ನಂಟು......



### ವೈದೇಹಿಯೊಂದಿಗಿನ ಸಂದರ್ಶನ...



### ಆಧುನಿಕ ಕನ್ನಡ ಮಹಿಳಾ ಸಾಹಿತ್ಯಾವಲೋಕನ

## ಕೃತಜ್ಞತೆಗಳು....

- 'ಇರುವಂತಿಗೆ'ಯನ್ನು ಕೊಡಮಾಡಲು ಕೇಳಿಕೊಂಡಾಗ ಒಪ್ಪಿಗೆ ಸೂಚಿಸಿದ ಶ್ರೀಮತಿ ವೈದೇಹಿ(ಜಾನಕಿ ಶ್ರೀನಿವಾಸ ಮೂರ್ತಿ)ಯವರಿಗೆ ಮತ್ತು ದಾಖಲೆ ಮಾಹಿತಿ ಚಿತ್ರ-ಪತ್ರಗಳನ್ನು ಒದಗಿಸಿ ನೆರವಾದ ಅವರ ಕುಟುಂಬ ವರ್ಗಕ್ಕೆ
- ಸಕಾಲದಲ್ಲಿ ಲೇಖನಗಳನ್ನು ಬರೆದುಕೊಟ್ಟು ಸಹಕರಿಸಿದ ಎಲ್ಲ ಸಹೃದಯ ಲೇಖಕರಿಗೆ
- ಮುಖಪುಟ ವಿನ್ಯಾಸ/ಚಿತ್ರ ಸಂಪುಟ ಮಾಡಿಕೊಟ್ಟ ಶ್ರೀ ಅಕ್ಷರರವರಿಗೆ
- ಅಂದವಾಗಿ ಮುದ್ರಿಸಿಕೊಟ್ಟ ಸ್ಯಾನ್ ಪ್ರಿಂಟರ್ಸ್‌ನ ಶ್ರೀ ಎಂ ಕೃಷ್ಣಮೂರ್ತಿಯವರಿಗೆ ಮತ್ತು ಸಿಬ್ಬಂದಿ ವರ್ಗದವರಿಗೆ
- ವೈದೇಹಿಯವರ ಬಗೆಗೆ ಉಪಯುಕ್ತ ಮಾಹಿತಿ ಪಡೆಯಲು ಸಹಕಾರಿಯಾದ ವಿವಿಧ ಆಕರ ಗ್ರಂಥಗಳ ಲೇಖಕ/ಸಂಪಾದಕರುಗಳಿಗೆ

ತುಂಬು ಹೃದಯದ ಕೃತಜ್ಞತೆಗಳು.
ಸಂಪಾದಕರು ಮತ್ತು ಸದಸ್ಯರು
**ವೈದೇಹಿ ಗೌರವ ಗ್ರಂಥ ಸಮಿತಿ, ಶಿವಮೊಗ್ಗ**

‘ಕಥೆಗಳಿಗೆ ಕಾವ್ಯದ ಸೊಬಗನ್ನು ತಂದವರು ವೈದೇಹಿ. ಅವರ ಹಾಗೆ ಭಾಷೆಯನ್ನು ದುಡಿಸಿಕೊಂಡ ಲೇಖಕರು ಕನ್ನಡದಲ್ಲಿ ಅಪರೂಪ. ಇದುವರೆಗೆ ನಾವು ಓದಿರುವ ಕಥೆಗಳಿಗಿಂತ ಇಲ್ಲಿನವು ಭಿನ್ನ ಜಾಡನ್ನು ಹಿಡಿದಿವೆ. ಇವರ ಕಥೆಗಳಲ್ಲಿ ವಸ್ತುವಿಗಿಂತ ಭಾವಕ್ಕೆ ತಂತ್ರಕ್ಕೆ ಮತ್ತು ಧ್ವನಿಗೆ ಪ್ರಾಧಾನ್ಯ.

ಈ ಬಗೆಯ ಕಥೆಗಳು ಕನ್ನಡಕ್ಕೆ ಹೊಸವು. ಕಾಲದ ಉಯ್ಯಾಲೆಯಲ್ಲಿ ಲೇಖಕಿ ತೂಗಿ ತೋರುವ ಚಿತ್ರಮಾಲಿಕೆಗಳು ರಾಗರಂಜಿತ, ವರ್ಣಬಂಧಿತ. ಮನಸ್ಸಿನ ಪದರುಗಳ ವಿಶ್ಲೇಷಣೆ ಗಿಡ ಬೆಟ್ಟ ಆಕಾಶ ಭೂಮಿ ಪಾತ್ರಗಳಾಗಿ ರೆಕ್ಕೆಬಿಚ್ಚಿಕೊಳ್ಳುವ ಮೋಜು ಅಪರೂಪದ ಅನುಭವ ನೀಡುತ್ತವೆ. ಇಲ್ಲಿ ಸೆರೆಹಿಡಿದಿರುವ ಒಂದು ಭಾವ, ಒಂದು ಭಂಗಿ, ಒಂದು ದೃಶ್ಯ, ಒಂದು ಮಾತಿನ ವಿಲಾಸ ಹೆಕ್ಕಿ ತೆಗೆದಿಟ್ಟು ಹೃದಯದ ಹತ್ತಿರ ಇಟ್ಟುಕೊಳ್ಳುವಂಥವು-ಮತ್ತೆ ಮತ್ತೆ ನೋಡಲಿಕ್ಕಾಗಿ. ಮೊಗೆದಷ್ಟೂ ಸಿಗುವ ಅನುಭವ ಸಂಪತ್ತು ಇಲ್ಲಿ ಅಕ್ಷಯವಾಗಿದೆ.

ರಂಗಿನಂಗಳ ನಿರ್ಮಿಸುವ ಸೂರ್ಯ, ಕೂತಲ್ಲಿಂದ ಮಿಸುಕಾಡದ ಆದರೆ ಇಡೀ ಜಗತ್ತನ್ನು ಕುಣಿಸುವ ಕಲಿಪುರುಷ, ಬದುಕು-ಮೃತ್ಯುಗಳ ನಿಗೂಢತೆ, 'ಎಲ್ಲವನ್ನೂ ಕಳೆದು ಚೊಕ್ಕವಾಗಿ ತಾಜಾ ಪ್ರಕೃತಿಯಾಗುವ' ಶಕುಂತಲೆ, ಸಾವಿಗೆ ಜೀವದ ಹೋಳಿಗೆ ಹಾಕುವ ಮುಸ್ತಫಾ, ಈ ಚಿತ್ರಗಳು ವಾಸ್ತವತೆ ಮತ್ತು ಫ್ಯಾಂಟಸಿಗಳ ಮಧ್ಯೆ, ಭಾವ ಭಾಷೆಗಳ ಸೇತುವೆ ನಿರ್ಮಿಸಿ ಬೇರೊಂದು ಲೋಕವನ್ನೇ ನಮ್ಮ ಮುಂದೆ ಅನಾವರಣಗೊಳಿಸುತ್ತವೆ.

ಕತೆಗಾರ್ತಿ ವೈದೇಹಿ ಹೊಸ ಭರವಸೆಗಳ ಆಗರ.’

- **ಅನುಪಮಾ ನಿರಂಜನ**

(ವೈದೇಹಿಯವರ 'ಗೋಲ'-೧೯೮೬ ಕಥಾಸಂಕಲನದ ಬೆನ್ನುಡಿಯಲ್ಲಿ)

# ವಸಂತಿ ಎಂಬ ನನ್ನ ತಂಗಿ

✦ ಎ.ಎಸ್.ಎನ್.ಹೆಬ್ಬಾರ್(ಅಣ್ಣ)

ನಮ್ಮದು ದೊಡ್ಡ ಒಟ್ಟು ಕುಟುಂಬ. ನಮ್ಮ ಮನೆಯಲ್ಲೇ ಬಂದು ಕಲಿಯುತ್ತಿದ್ದ ಬಂಧುಗಳು ಬೇರೆ. ಮನೆತುಂಬಾ ಜನ. ಬಂದು ಹೋಗುವವರೆಷ್ಟೋ. ಒಳಗಿನ ಕೆಲಸಕ್ಕೆ, ಹೊರಗಿನ ಕಾಯಕಕ್ಕೆ ಎಂತ ಒಂದಷ್ಟು ಆಳುಕಾಳುಗಳು. ಹಿತ್ತಲ ಕೆಲಸದ ಜನಗಳು. ಆಗುಹೋಗುಗಳಿಗೆ ಆಗುವ ಕಟ್ಟಾಳುಗಳು. ಒಬ್ಬೊಬ್ಬರದ್ದೂ ಒಂದೊಂದು ಕಥೆ, ವ್ಯಥೆ. ಅವನ್ನೆಲ್ಲ ಕಂಡು, ಕೇಳಿ ಬೆಳೆದವರು ನಾವು. ಒಟ್ಟು ಕುಟುಂಬದ ನೋವು, ನಲಿವು, ಸಿಹಿ, ಕಹಿಗಳನ್ನೆಲ್ಲ ಹಂಚಿಕೊಂಡು ಬೆಳೆದವರು. ಅಪ್ಪಯ್ಯ ವಿದ್ವಾಂಸರು–ಬಹುಭಾಷಾ ಪರಿಣತರು. ಸಾಹಿತ್ಯಾಸಕ್ತರು, ಪುಸ್ತಕಪ್ರಿಯರು. ನಮ್ಮಮ್ಮ ಮನೆವಾರ್ತೆಯಲ್ಲಿ ಗಟ್ಟಿಗಿತ್ತಿ. ಮದುವೆಯಾಗಿ ಬಂದ ಮೇಲೆಯೇ ನಮ್ಮೂರ 'ಕುಂದಗನ್ನಡ'ದ ಪ್ರಭುತ್ವ ಪಡೆದು ಅದರಲ್ಲೂ ಗಟ್ಟಿಗಿತ್ತಿ ಎನ್ನಿಸಿಕೊಂಡವಳು. ಅವಳ ಬಾಯಲ್ಲಿ ಬರುತ್ತಿದ್ದ ಗಾದೆ, ನುಡಿಗಟ್ಟುಗಳೇ ಇಂದಿಗೂ ನಮಗೆಲ್ಲ ಬಾಯಿಪಾಠ. ಅಪ್ಪಯ್ಯ ರಾಮಾಯಣ ಪ್ರಿಯರು. ದಿನಾ ವಾಲ್ಮೀಕಿ ರಾಮಾಯಣ, ತುಳಸೀ ರಾಮಾಯಣ ಓದದೇ ಊಟಕ್ಕೇಳುವವರಲ್ಲ. ಹಾಗಾಗಿ ಅದೇ ಪ್ರೀತಿಯಿಂದ ವಸಂತಿಯನ್ನು ಶಾಲೆಗೆ ಸೇರಿಸುವಾಗ 'ಜಾನಕಿ' ಎಂದು ಹೆಸರಿಟ್ಟಿದ್ದರು. ಅವಳೇ ಜಾನಕಿ ಹೆಬ್ಬಾರ್ ಆದವಳು–ನಂತರ 'ವೈದೇಹಿ'ಯಾದದ್ದು ಬೇರೆಯೇ ಕತೆ.

ವಸಂತಿಗೆ ಮಾತು ಬಂದದ್ದು ತಡ. ಮೂಕಿಯಂತೆಯೇ ಇದ್ದವಳು, ನಂತರ ಮಾತು ಕಲಿತರೂ ಮಾತಿಗಿಂತ ಚಿಂತನೆಯನ್ನೇ ಹೆಚ್ಚು ಬೆಳೆಸಿಕೊಂಡವಳು. ಪರಿಣಾಮವಾಗಿ ಮನೆ, ಜನ, ಪರಿಸರ, ಸಮಾಜದ ಸೂಕ್ಷ್ಮಾವಲೋಕನದಿಂದ ಲೇಖಕಿಯಾದಳು, ಕಥೆಗಾರ್ತಿಯಾದಳು, ಕವಯಿತ್ರಿ, ನಾಟಕಕಾರ್ತಿ, ಪ್ರಬಂಧಕಾರ್ತಿಯೂ ಆಗಿಬಿಟ್ಟಳು. ಅವಳು ಎಸ್‌ಎಸ್‌ಎಲ್‌ಸಿ ಮುಗಿಸಿದ ನಂತರ ಆಗಷ್ಟೇ ಕುಂದಾಪುರದಲ್ಲಿ ಶುರುವಾದ ಭಂಡಾರ್‌ಕಾರ್ಸ್ ಕಾಲೇಜು ಸೇರಬೇಕೆಂದಿದ್ದಳು. ನಮ್ಮದೆಲ್ಲ ಬೆಂಬಲ ಅವಳಿಗಿದ್ದಿತ್ತು. ಆದರೆ ಆ ವರೆಗೆ ನಮ್ಮ ಮನೆಯಲ್ಲಿ ಹೆಣ್ಣು ಮಕ್ಕಳು ಯಾರೂ ಕಾಲೇಜು ಮೆಟ್ಟಲು ಹತ್ತಿದವರಲ್ಲ. ಎಷ್ಟೇ ಆಸೆ ಇದ್ದಿದ್ದರೂ ಹತ್ತಿಟ್ಟುಕೊಂಡವರೇ ಎಲ್ಲ. ಪ್ರತಿಯೊಬ್ಬರೂ ಪ್ರತಿಭಾವಂತರೇ–ಆದರೆ ಆಗ ಕುಂದಾಪುರದಲ್ಲಿ ಕಾಲೇಜೇ ಇರಲಿಲ್ಲ! ನನ್ನ ದೊಡ್ಡ ಅಣ್ಣ

ಸುಬ್ರಾಯ ಹೆಬ್ಬಾರ ಮದ್ರಾಸ್‌ನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಓದಿದವ. ಇಂಗ್ಲೀಷ್ ಸಾಹಿತ್ಯ ಅರಗಿಸಿಕೊಂಡವ. ಇಂಗ್ಲೀಷ್ ಪ್ರಾಧ್ಯಾಪಕನಾಗಿದ್ದವ. ಮಂಗಳೂರಿನ ಸರಕಾರಿ ಕಾಲೇಜಿನಲ್ಲಿ ಆತ ತರಗತಿಯಲ್ಲಿ ಇಂಗ್ಲೀಷ್ (ಶೇಕ್ಸ್‌ಪಿಯರ್ ನಾಟಕ) ಪಾಠ ಮಾಡಲಾರಂಭಿಸಿದರೆ, ಅವನಿಗೆ ಮೈಮೇಲೆ ಬಂದಂತಾಗುತ್ತಿತ್ತು. ಪಾತ್ರಗಳನ್ನು ತನ್ನಲ್ಲಿ ಆವಾಹಿಸಿಕೊಂಡೇ ಪಾಠ ಮಾಡುತ್ತಿದ್ದವ. ಮಾರ್ಕ್ ಆ್ಯಂಟನಿ ಮಾತುಗಳನ್ನು ತಾನೇ ಮಾರ್ಕ್ ಆ್ಯಂಟನಿ ಎಂಬಂತೆ ಅಭಿನಯಿಸಿ ಹೇಳಿ ಮನಸೂರೆಗೊಳ್ಳುವವ. ಇದನ್ನೆಲ್ಲ ಕೇಳಲು, ಅನುಭವಿಸಿ ಆನಂದಿಸಲು ಬೇರೆ ತರಗತಿಯ ವಿದ್ಯಾರ್ಥಿಗಳೂ ಬಂದು ಅವನ ತರಗತಿಯಲ್ಲಿ ಕೂರುತ್ತಿದ್ದರು! ಮನೆಯಲ್ಲೂ ಇಂತಹ ಅವತಾರ ತಳೆಯುತ್ತಿದ್ದಾಗ ನಾವೆಲ್ಲ ಮೈ ಮರೆತು ಮೈಯೆಲ್ಲ ಕಣ್ಣಾಗಿ, ಕಿವಿಯಾಗಿ ಕಾಣುತ್ತಿದ್ದೆವು, ಕೇಳುತ್ತಿದ್ದೆವು. ನಮ್ಮ ಮೇಲೂ ಇವೆಲ್ಲದರ ಪರಿಣಾಮ– ಸಾಹಿತ್ಯಾಸಕ್ತಿ ಹಾಗಾಗಿಯೇ ಬಂದಿರಲೇಬೇಕು. ನಾನು ಅದೇ ಕಾಲೇಜಿನಲ್ಲಿ ಅವನ ವಿದ್ಯಾರ್ಥಿಯಾಗಿದ್ದವ.

ಇನ್ನೊಬ್ಬ ಅಣ್ಣ ರಾಮಕೃಷ್ಣ ಹೆಬ್ಬಾರ ಅದೇ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಅರ್ಥಶಾಸ್ತ್ರ ಕಲಿತವ. ನಾನು ಎಸ್‌ಎಸ್‌ಎಲ್‌ಸಿ ಮುಗಿಸಿ ಮುಂದೆಲ್ಲಿಗೆ? ಎನ್ನುವಾಗ, ಹಿರಿಯಣ್ಣ ಮಂಗಳೂರಲ್ಲೇ ಪ್ರಾಧ್ಯಾಪಕನಾಗಿದ್ದ ಸರ್ಕಾರಿ ಕಾಲೇಜಿಗೆ ಸೇರುವಂತಾಯಿತು. ಅವನ ಪ್ರಭಾವದಿಂದಲೋ ಏನೋ ಸಾಹಿತ್ಯಾಸಕ್ತಿ ಚಿಗುರಿ ಆಗಲೇ ಕಥೆ, ಕವನ ಬರೆಯಲಾರಂಭಿಸಿದ್ದೆ. ಗಂಧರ್ವ, ಕೀರ್ತಿ–ಎಂತ ಕಾವ್ಯನಾಮಗಳೂ ಇದ್ದುವು.

ಈ ಹಿನ್ನೆಲೆಯಲ್ಲಿ–ಕುಂದಾಪುರದಲ್ಲೇ ಕಾಲೇಜು ಆರಂಭವಾದದ್ದು ವಸಂತಿಗೆ ಅದೃಷ್ಟ ತಂದಂತಾಗಿತ್ತು. ಅಮ್ಮನಿಗೆ ಹೆಣ್ಣು ಮಕ್ಕಳು ಕಾಲೇಜಿಗೆ ಹೋಗುವುದು ಇಷ್ಟ ಇದ್ದಂತಿರಲಿಲ್ಲ. ಅಪ್ಪಯ್ಯ ಧರ್ಮಿಷ್ಠರು, ಹಿರಿಯ ವಕೀಲರೂ. ದೊಡ್ಡ ಸಂಸಾರವನ್ನು ನಿಭಾಯಿಸುವವರು– ಕಾಲೇಜು, ಶಿಕ್ಷಣ ಎಂದರೆ ಇನ್ನಷ್ಟು ಖರ್ಚಿನ ಬಾಬತ್ತು ಎಂಬ ಯೋಚನೆ ಇದ್ದಂತಿತ್ತು. ಅಪ್ಪಯ್ಯನ ಹತ್ತಿರ ವಸಂತಿ ಪರವಾಗಿ ನಾನೇ ವಕಾಲತ್ತು ಮಾಡಿದ್ದೆ. ನಮ್ಮ ಮನೆಯಿಂದ ಹೊಸ ಕಾಲೇಜಿಗೆ ಕೊಡುಗೆ ಆಗಿಯಾದರೂ ವಸಂತಿಯನ್ನು ಕಳಿಸುವ ಎಂದೆ. (ನಾನು ವಕಾಲತ್ತು ಮಾಡಿ ಗೆದ್ದ ಮೊದಲ ಕೇಸೇ ಅದು) ಅಪ್ಪಯ್ಯ 'ಸೈ' ಎಂದ ಮೇಲೆ ಅಮ್ಮನೂ 'ನಂಗೇನು' ಎಂದುಬಿಟ್ಟಳು. ವಸಂತಿ ಕಾಲೇಜಿಗೆ ಸೇರಿಬಿಟ್ಟಳು.

ಆಗೆಲ್ಲ ನಾನು ತುಂಬ ಬರೆಯುತ್ತಿದ್ದೆ. ಉಡುಪಿಯಲ್ಲಿ ಲಾ ಕಾಲೇಜಿನಲ್ಲಿ ಕಲಿಯುತ್ತಿದ್ದಾಗಲೇ 'ಪ್ರಜಾವಾಣಿ' ದೀಪಾವಳಿ ಕಥಾಸ್ಪರ್ಧೆಯಲ್ಲಿ ಬಹುಮಾನ, ಕಾರಂತರ ಕುರಿತು ಪ್ರಬಂಧಕ್ಕೆ ಪ್ರಶಸ್ತಿ ಎಲ್ಲ ಬಂದಿತ್ತು. ಪ್ರತೀ ವಾರ ಉಡುಪಿಯಿಂದ ಮನೆಗೆ ಬರುವಾಗ ಆಗಿನ 'ಒಂದಾಣೆ ಮಾಲೆ' ಪುಸ್ತಕಗಳನ್ನು ಕೊಂಡು ತರುತ್ತಿದ್ದೆ. ವಸಂತಿ ಸಹಿತ ಮನೆಯ ಮಕ್ಕಳಿಗೆಲ್ಲ ಹಿಗ್ಗು. ನಾನು ತಂದ ಪುಸ್ತಕಗಳನ್ನೋದುವುದರಲ್ಲೇ ಸಂತೋಷ. ನನ್ನ ಸಾಹಿತ್ಯ ಸಾಹಸಗಳನ್ನು ಕೇಳುವುದರಲ್ಲೇ ಪುಳಕ. ನನ್ನೆಲ್ಲ ತಂಗಿಯಂದಿರು

ಹಾಗೆಯೇ-ಅವರ ಪಾಲಿಗೆ ನಾನೊಬ್ಬ ಹೀರೋ ಆಗಿದ್ದೆ! ಊರಲ್ಲೂ ಜನ ನನ್ನನ್ನು ಆಗಲೇ ಲೇಖಕ- ಕಥೆಗಾರನಾಗಿ ಕಂಡಿದ್ದರು. ಇದನ್ನೆಲ್ಲ ನನ್ನನ್ನು ನಾನೇ ಹೊಗಳಿಕೊಳ್ಳಲು ಹೇಳುತ್ತಿಲ್ಲ. ವಸಂತಿ ಬಗ್ಗೆ ಬರೆಯುವಾಗ ಇದೆಲ್ಲ ಬೇಕಾಗುತ್ತದೆ, ನೋಡಿ.

ವಸಂತಿ ಕಾಲೇಜಿಗೆ ಹೋಗಲಾರಂಭಿಸಿದವಳು, ಅವಳೇ ಹೇಳುತ್ತಿದ್ದಂತೆ- 'ನಮ್ಮಣ್ಣ ಬರೀತಾನೆ. ನಾನೂ ಯಾಕೆ ಬರೀಬಾರದು?' ಎಂದುಕೊಂಡು ಬರೆಯಲಾರಂಭಿಸಿದಳು. ಭಂಡಾರ್‌ಕರ್ಸ್ ಕಾಲೇಜಿನಲ್ಲಿ 3ನೇಯ ಬಿಕಾಂನಲ್ಲಿದ್ದಾಗಲೇ ಅವಳು 'ಎ. ಜಾನಕಿ ಹೆಬ್ಬಾರ್' ಹೆಸರಲ್ಲೇ ಬರೆದ 'ಶಬರಿ' ಪ್ರಬಂಧಕ್ಕೆ ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಪ್ರಬಂಧ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಬಂದಿತ್ತು. ಅದೇ ಹೆಸರಿಟ್ಟುಕೊಂಡು ಆಗ ಅವಳು ಬರೆದ 'ನನ್ನ ಮನೆಯೇ ನಂದನ' ಕಥೆಗೆ ಸಣ್ಣ ಕಥೆಗಳ ಸ್ಪರ್ಧೆಯಲ್ಲಿ ಮೊದಲ ಬಹುಮಾನ ದೊರೆಯಿತು. ವಸಂತಿ 'ವೈದೇಹಿ'ಯಾದ ಕತೆ ಕುತೂಹಲಕರವಾಗಿದ್ದರೆ, ಆ ನಂತರದ ಕಥೆಯೂ ಸ್ವಾರಸ್ಯದ್ದೇ. ಕುಂದಾಪುರದ ದೊಡ್ಡ ಮನುಷ್ಯರೆನ್ನಿಸಿಕೊಂಡವರ ಪತ್ನಿಯರೇ ತುಂಬಿದ್ದ ಮಹಿಳಾ ಸಂಘಟನೆಯೊಂದು 'ಮಹಿಳಾ ದಿನಾಚರಣೆ' ಆಚರಿಸಿದ ಪರಿ ಕಂಡು ವಸಂತಿ ನವಿರು ಹಾಸ್ಯದಲ್ಲಿ 'ನೀರೆಯರ ದಿನ' ಎಂಬ ಲೇಖನವನ್ನು 'ಜಾನಕಿ ಹೆಬ್ಬಾರ್' ಹೆಸರಲ್ಲೇ ಬರೆದು 'ಸುಧಾ'ಕ್ಕೆ ಕಳಿಸಿದ್ದಳು. ಆ ಮೇಲೆ, ಊರಲ್ಲಿ ಅದರಿಂದಾಗಬಹುದಾದ ಅವಾಂತರ ಊಹಿಸಿ 'ಲೇಖನ ಹಾಕಬೇಡಿ' ಎಂದು ಬರೆದಳು. ಅವಳ ಮುಜುಗರ ತಪ್ಪಿಸಲು, ಸುಧಾ ಪತ್ರಿಕೆ ಆಕೆಗೆ 'ವೈದೇಹಿ' ನಾಮಕರಣ ಮಾಡಿ, ಪ್ರಕಟಣೆಗೆ ಸಿದ್ಧವಾಗಿದ್ದ ಲೇಖನ ಪ್ರಕಟಿಸಿಯೇ ಬಿಟ್ಟಿತು. ಲೇಖನ ಬಂದ ಮೇಲೆ ಇಲ್ಲಿಯ ಮನುಷ್ಯರಿಗೂ, ಅವರ ಪತ್ನಿಯರಿಗೂ ನಾನೇ 'ವೈದೇಹಿ' ಹೆಸರಲ್ಲಿ ಆ ಲೇಖನ ಬರೆದು ಅವರನ್ನೆಲ್ಲ ಗೇಲಿ ಮಾಡಿದಂತೆ ತೋರಿತು. ಈ ತಪ್ಪು ತಿಳುವಳಿಕೆಯಿಂದಾಗಿ ನನ್ನ ಸಾಮಾಜಿಕ ಚಟುವಟಿಕೆಗಳಲ್ಲಿ, ಸಂಘ-ಸಂಸ್ಥೆಗಳಲ್ಲಿ ಬಹಳಷ್ಟು ಪೀಡೆ, ಕಿರಿಕಿರಿ ಮಾಡಿಬಿಟ್ಟರು, ದೊಡ್ಡಮನುಷ್ಯರೆನ್ನಿಸಿಕೊಂಡವರು. ನಾನದನ್ನೆಲ್ಲ ಎದುರಿಸಿಯೂ ಇದ್ದೆ. ಈ ಸಂಘರ್ಷದ ಸಂದರ್ಭದಲ್ಲೇ ಮಹಿಳಾ ಮಣಿಯೊಬ್ಬರು ಬಾಯಿಬಿಟ್ಟದ್ದು-'ನೀವೇ ಅಂತಲ್ಲ, 'ವೈದೇಹಿ' ಹೆಸರಲ್ಲಿ ನಮ್ಮನ್ನೆಲ್ಲ ಕುಶಾಲು ಮಾಡಿ 'ಸುಧಾ'ದಲ್ಲಿ ಲೇಖನ ಬರೆದದ್ದು?' ಎಂತ. ನಾನು ಅಲ್ಲವೆಂದರೂ ಅವರು ನಂಬುವ ಮನಸ್ಥಿತಿಯವರಾಗಿರಲೇ ಇಲ್ಲ! ವಸಂತಿಗಾಗಲೀ, 'ವೈದೇಹಿ' ಹೆಸರಿಟ್ಟ 'ಸುಧಾ'ದ ಸಿಂಗ್‌ರವರಿಗಾಗಲೀ ಇದೆಲ್ಲ ಗೊತ್ತೇ ಇಲ್ಲ!

ಅಪ್ಪಯ್ಯ ಕಾಲವಶರಾಗಿದ್ದರು. 14ರಲ್ಲಿ 9ನೇಯವಳಾಗಿದ್ದ ತಂಗಿ ಲಲಿತಾಳ ಮದುವೆ ನೆರವೇರಿಸಿದ್ದೆವು. ನಂತರದ ಮದುವೆ ಈ ವಸಂತಿಯದ್ದು. ಶಿವಮೊಗ್ಗದಿಂದ ಒಬ್ಬ ಹುಡುಗನ ಪ್ರಸ್ತಾಪ ಬಂತು. ಹುಡುಗ-ಹುಡುಗಿ ನೋಡುವ ಮುಂಚೆಯೇ ಜಾತಕ ತರಿಸಿ ತಾಳೆ ನೋಡಿದೆವು. ಮುಂದುವರಿದು ಮನೆಯಲ್ಲೇ ವಿಜೃಂಭಣೆಯ ಮದುವೆ

ಮಾಡಿದೆವು. ಕುಂದಾಪುರದ ವಸಂತಿ ಶಿವಮೊಗ್ಗದ 'ವೈದೇಹಿ'ಯಾದಳು. ಪತಿ ಶ್ರೀನಿವಾಸಮೂರ್ತಿಯವರ ಸಂಪೂರ್ಣ ಬೆಂಬಲ ಅವಳಿಗಿದ್ದಿತ್ತು. ಶಿವಮೊಗ್ಗದ ಸಾಹಿತ್ಯಕ ವಾತಾವರಣ ಹುಲುಸಾಗಿತ್ತು-ಆಕೆಗೆ ಬೆಳೆಯಲು ಪೂರಕವೇ ಆಗಿತ್ತು. ಅಲ್ಲಿಂದ ಆಕೆ ಹಿಂದೆ ನೋಡಿದ್ದೇ ಇಲ್ಲ. ಪ್ರಶಸ್ತಿಗಳು, ಪುರಸ್ಕಾರಗಳು ಅವಳನ್ನು ಅರಸಿ ಬಂದುವು. ಎತ್ತರದಿಂದ ಎತ್ತರಕ್ಕೆ ಏರುತ್ತಲೇ ಹೋದಳು. ಮಕ್ಕಳು ನಯನಾ, ಪಲ್ಲವಿ ಇಬ್ಬರೂ ಪ್ರತಿಭೆಯ ಕುಡಿಗಳೇ ಆದರು. ನಯನಾ ಮಡಿಕೇರಿಯ ಬಾಲಾಜಿಯನ್ನು ವರಿಸಿ ನಯನಾ ಕಾಶ್ಯಪ್ ಆಗಿ ಬರಹಗಾರ್ತಿಯೂ ಆಗಿಬಿಟ್ಟಳು. ಪಲ್ಲವಿ ಬೆಂಗಳೂರಿನ ಅನಿಲ್ ರಾವ್‌ರನ್ನು ವರಿಸಿ ಪಲ್ಲವಿ ರಾವ್ ಆಗಿ ಕಲಾವಿದೆಯಾಗಿಬಿಟ್ಟಳು.

'ಮರ-ಗಿಡ-ಬಳ್ಳಿ' ವಸಂತಿ 'ವೈದೇಹಿ'ಯಾಗಿ ಹೊರತಂದ ಮೊದಲ ಕಥಾ ಸಂಕಲನ. ಅವಳ ಕಥೆಗಳನ್ನು ಓದಿ ಮೆಚ್ಚಿದ ಹಿರಿಯರಾದ ಹೆಗ್ಗೋಡಿನ ಕೆ.ವಿ.ಸುಬ್ಬಣ್ಣ ತಮ್ಮ 'ಅಕ್ಷರ ಪ್ರಕಾಶನ'ದಲ್ಲಿ ಅದನ್ನು ಪ್ರಕಟಿಸಲು ತೆಗೆದುಕೊಂಡಿದ್ದರು. ಕುಂದಾಪುರದಲ್ಲೇ ಈ ಮೊದಲ ಕೃತಿ ಬಿಡುಗಡೆಯಾಗಬೇಕು ಎಂಬುದು ನಮ್ಮ ಹಂಬಲವಾಗಿತ್ತು. ಆಗ ನಾನು ಕುಂದಾಪುರ ಕನ್ನಡ ಸಂಘದ ಅಧ್ಯಕ್ಷನಾಗಿದ್ದವ. ನಮ್ಮ ಸಂಘದ ಆಶ್ರಯದಲ್ಲೇ ಅವಳ ಮೊದಲ ಕೃತಿ ಬಿಡುಗಡೆಯಾಯಿತು. ಕೆ.ವಿ.ಸುಬ್ಬಣ್ಣ ಸ್ವತಃ ಬಂದು 'ವೈದೇಹಿಯ ಕಥೆಗಳೆಂದರೆ ಜಪಾನಿನ ಹ್ಯಾಕುಗಳಿದ್ದಂತೆ' ಎಂದದ್ದು ನನಗೆ ತುಂಬ ಇಷ್ಟವಾಗಿ ಅದನ್ನೇ ಶೀರ್ಷಿಕೆಯಾಗಿಸಿ ಆಗ 'ಉದಯವಾಣಿ'ಯ ಪತ್ರಕರ್ತನೂ ಆಗಿದ್ದ ನಾನು ವರದಿ ಪ್ರಕಟಿಸಿದ್ದು ನೆನಪಿನಲ್ಲಿದೆ.

ಕುಂದಾಪುರದಲ್ಲಿ 'ಸೈನ್ಸ್ ಮಾಸ್ಟರ್' ಎಂದೇ ಹೆಸರಾಗಿದ್ದ ಸಮಾಜ ಸೇವಕರೂ ಆಗಿದ್ದ ಕೋ.ಲ. ಕಾರಂತರ ಸ್ವಾರಸ್ಯಕರ ಬದುಕಿನ ಕುರಿತು 'ತರಂಗ' ಮತ್ತು 'ಕರ್ಮವೀರ'ಗಳಲ್ಲಿ ನಾನು ಲೇಖನಗಳನ್ನು ಬರೆದಿದ್ದೆ. ಆದರೆ ಅದು ಸಾಲದು, ಅವರ ಇಡೀ ಜೀವನ ವೃತ್ತಾಂತವನ್ನೇ ಬರೆಯಬೇಕು ಅನ್ನಿಸಿತು. ಅಷ್ಟು ಸಾಹಸಮಯ ಅವರ ಜೀವನ. ನನಗಂತೂ ವಕೀಲಿ, ಭಾಷಣ, ಸಂಘಟನೆಗಳ ನಡುವೆ ಅವರೊಡನಿದ್ದು, ಕೇಳಿ, ಬರೆಯಲು ಪುರಸೊತ್ತೇ ಇರಲಿಲ್ಲ. ವಸಂತಿಗೆ ಹೇಳಿದರೆ ಹೇಗೆ? ಎಂತ ಅನ್ನಿಸಿ ಅವಳ ಹತ್ತಿರ ಕೇಳಿದೆ. ಅವಳು ಆಯಿತು ಎಂದಳು. ವರ್ಷವಿಡೀ ಕಾರಂತರ ಬಳಿ ಕುಳಿತು ಅವರು ನೆನಪಿನಿಂದ ಹೇಳಿದ್ದನ್ನೆಲ್ಲ ಟಿಪ್ಪಣಿ ಮಾಡಿಕೊಂಡು, ಭಟ್ಟಿಯಿಳಿಸಿ 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು' ಎಂಬ ಸುಂದರ, ರೋಚಕ ಆತ್ಮಕಥನ ರಚಿಸಿದಾಗ ಕೋ.ಲ.ಕಾರಂತರಿಗೂ ತೃಪ್ತಿ! ಅವರ ತಮ್ಮನೇ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿ ಕೋಟ ಶಿವರಾಮ ಕಾರಂತರು.

ನಾನು ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಥಮ ಅಧ್ಯಕ್ಷನಾದ ಸಂದರ್ಭ. ಅಮೇರಿಕಾದಲ್ಲಿನ ಒಂದು ಸಾಹಿತ್ಯ ಸಮಾವೇಶಕ್ಕೆ ವಸಂತಿಗೆ ಆಹ್ವಾನ ಬಂದಿತ್ತು. ವಿದೇಶ ಪ್ರಯಾಣಕ್ಕೆ ಹೊರಟು ನಿಂತ ಅವಳನ್ನು ಬೀಳ್ಕೊಡಲು ಉಡುಪಿಯ

ಎಂಜಿಎಮ್ ಕಾಲೇಜಿನಲ್ಲೊಂದು ಸಮಾರಂಭ ಏರ್ಪಡಿಸಿದೆವು. ಅಂದು ಅವಳಿಗೆ ಶುಭ ಕೋರಿದ ನಾನು 'ಕುಂದಗನ್ನಡ'ದಲ್ಲಿ ಮಾತಾಡಿದ್ದೆ-ಆತ್ಮೀಯವಾಗಿ. ಅದನ್ನೇ ಮರುದಿನ 'ಉದಯವಾಣಿ' ಹೀಗೆ ವರದಿ ಮಾಡಿತ್ತು. 'ನಮ್ ಹೆಣ್ಣ್ ಒಬ್ಬೆ ಅಮೆರಿಕಕ್ ಹೋತ್ಲಲೆ' ಶೀರ್ಷಿಕೆಯಲ್ಲಿ 'ನಮ್ಮ ಅಪ್ಪಯ್ನಿಗೆ ರಾಮಾಯ್ಣ ಅಂದ್ರೆ ಇಷ್ಟ. ನಮ್ ಹೆಣ್ಣಿಗೆ ಶಾಲೆಲಿ ಜಾನಕಿ ಅಂದ್ ಹೆಸ್ರ್ ಇಟ್ರ್, ಮನೇಲಿ ನಾವ್ ವಸಂತಿ ಅಂದ್ ಪ್ರೀತಿಯಿಂದ ಕರೀತಿತ್. ಈಗ್ಲೂ ಅವ್ಳ್ ನಮ್ಗೆ ಪ್ರೀತಿಯ ವಸಂತಿ. ಅವ್ಳ್ ಇಟ್ಕಂಡ್ ಹೆಸ್ರ್ ವೈದೇಹಿ. ನಾಸ್, ಅವ್ಳ್ ಒಟ್ಟಿಗೇ ಹಿತ್ಲಲ್ಲಿ, ಚಾವ್ಡಿಲೀ ಆಡ್ಕಂಡ್, ಕುಣ್ಕಂಡ್ ಅಮ್ನ ಹತ್ರ ಪೆಟ್ಟ್ ತಿಂದದ್ದ್ ನೆನ್ಪಾತ್. ಈಗ ಅವ್ಳ್ ಒಬ್ಳೇ ಅಮೇರಿಕಕ್ ಹೋತ್ಲಲೆ, ಹ್ಯಾಂಗ್ ಹೋತ್ಲೋ ಏನೋ ಅಂತ ಎಣ್ಸತ್. ಈಗ ಅವ್ಳ್ ನಮ್ ಹೆಣ್ಣ್, ಕುಂದಾಪ್ರದ್ ಹೆಣ್ಣ್, ಉಡುಪಿ ಹೆಣ್ಣ್ ಆಯಿ ಉಳೀಲಿಲ್ಲೆ, ಈಗ ಅವ್ಳ್ ಭಾರತದ ಹೆಣ್ಣ್ ಆಯಿ ಅಂತಾರಾಷ್ಟ್ರೀಯ ಸಮ್ಮೇಳನಕ್ ಹೋದ್ರೆ ನಮ್ಗೆಷ್ಟ್ ಸಂತೋಷ ಆತ್ತಿಲ್ಲೆ? ಅವ್ಳಿಗೆ ಒಳ್ಳೇದಾಯ್ಲಿ'

ನನಗೆ 2000ದಲ್ಲಿ 60 ತುಂಬಿದಾಗ ಕುಂದಾಪುರದಲ್ಲಿ ಸ್ನೇಹಿತರು ಜರುಗಿಸಿದ 'ವಸಂತೋತ್ಸವ'ದಲ್ಲಿ ನನ್ನ ಮೇಲೇ 'ಸಮ್ಮಣ್ಣನೆಂಬಾತ' ಕವನ ಬರೆದು ಕವಿಗೋಷ್ಠಿಯಲ್ಲಿ ವಸಂತಿ ವಾಚಿಸಿದಾಗ, ನಮ್ಮೆಲ್ಲರ ಮನಸ್ಸು ತುಂಬಿ ಬಂದಿತ್ತು. ಅದನ್ನೇ 2001ರಲ್ಲಿ 'ಲಂಕೇಶ್ ಪತ್ರಿಕೆ' ಪ್ರಕಟಿಸಿತ್ತು. ವಸಂತಿ ಮದುವೆಯಾಗಿ 7 ವರ್ಷ ತುಂಬಿದಾಗ ನಾನೂ ಈ ದಂಪತಿ ಮೇಲೆ ಒಂದು ಕವನ ಬರೆದಿದ್ದೆ. ಅವಳ ಮಗಳು ನಯನಾಳ ಹುಟ್ಟುಹಬ್ಬಕ್ಕೆ ನಾನು ಬರೆದು ಕಳಿಸಿದ ಕವನಕ್ಕೆ ಪ್ರತಿಯಾಗಿ ವಸಂತಿ ಮಗಳ ಹೆಸರಲ್ಲೇ 'ಮರುಕವನ' ಬರೆದು ಕಳಿಸಿದ್ದಳು. ಅವಳ ಇನ್ನೊಬ್ಬ ಮಗಳು ಪಲ್ಲವಿಯ ಹುಟ್ಟುಹಬ್ಬದಂದು ಇಂಗ್ಲೀಷಿನಲ್ಲೇ 'Ode to Pallavi' ಪದ್ಯ ಬರೆದಾಗ ಅವಳ ಶಾಲೆಯವರು ಅದನ್ನು ಮೆಚ್ಚಿ ನೋಟೀಸ್ ಬೋರ್ಡಿಗೆ ಹಾಕಿ ಮಕ್ಕಳಿಗೆ ನೀವೂ ಬರೀರಿ ಎಂದಿದ್ದರು. ಹೀಗೆ ಅಣ್ಣ ತಂಗಿ, ಮಾವ ಸೊಸೆಯಂದಿರ ಅಚ್ಚುಮೆಚ್ಚು ನಡೆದಿತ್ತು.

ನಾನು ಕಾಸರಗೋಡಿನ ಸುಧಾಳನ್ನು ಮದುವೆಯಾದಾಗ ಮಧುಚಂದ್ರಕ್ಕೆ ಬೇರೆಲ್ಲೂ ಹೋಗುವುದು ಬೇಡ-ಶಿವಮೊಗ್ಗಕ್ಕೇ ಬನ್ನಿ ಎಂತ ತಮ್ಮ ಮನೆಗೇ ಕರೆಸಿಕೊಂಡ ವಸಂತಿ-ಮೂರ್ತಿ ದಂಪತಿ, ಕೆಮ್ಮಣ್ಣುಗುಂಡಿಯ ಗಿರಿಧಾಮಕ್ಕೂ ನಮ್ಮಿಬ್ಬರನ್ನು ಕರಕೊಂಡು ಹೋಗಿ ನಾವು ಖುಷಿಪಟ್ಟಾಗ ತಾವೂ ಖುಷಿಪಟ್ಟಿದ್ದರು. ನನ್ನಾಕೆಗಂತೂ ನನ್ನ ಈ ತಂಗಿ ಎಂದರೆ ಅತ್ತಿಗೆಗಿಂತ ಹೆಚ್ಚು ಸ್ನೇಹಿತೆಯ ತರ. ಅವಳ ಬಳಿ ಹೇಳದ ಗುಟ್ಟಿಲ್ಲ! ಅವರಲ್ಲಿದ್ದ ಅಚ್ಚುಮೆಚ್ಚು ಕಂಡು ನನಗೇ ಹೊಟ್ಟೆಕಿಚ್ಚಾಗುತ್ತಿತ್ತು!

ನಮಗೆಲ್ಲ ಕತೆಗಳ ಕೊಪ್ಪರಿಗೆಯೇ ಆಗಿದ್ದ ಗೋವಿಂದ ಮಾಸ್ಟರು ಕಲಿಸುತ್ತಿದ್ದ ಕುಂದಾಪುರದ ಬಿ.ಅರ್.ರಾಯರ ಹಿಂದೂ ಹಿ.ಪ್ರಾ ಶಾಲೆಯಲ್ಲೇ ನಾವೆಲ್ಲ-ವಸಂತಿ ಕೂಡಾ ಕಲಿತದ್ದು. ಕ್ರಮೇಣ ಶತಮಾನ ತುಂಬಿದ, ಇನ್ನೇನು ಬೀಳುತ್ತದೆ ಎಂಬಂತಿದ್ದ

ಶಾಲೆಯನ್ನು ಆಡಳಿತ ಮಂಡಳಿಯ ಅಧ್ಯಕ್ಷನಾಗಿ ಪುನರ್ ನಿರ್ಮಾಣ ಮಾಡಿದ ನಂತರ ಅದೇ ಶಾಲಾ ವಾರ್ಷಿಕೋತ್ಸವದಲ್ಲಿ ನಮ್ಮ ವಸಂತಿಯನ್ನು ಕರೆದು ಅದೇ ಶಾಲೆಯ ಹೆಮ್ಮೆಯ ಹಳೆ ವಿದ್ಯಾರ್ಥಿನಿಯಾಗಿದ್ದ ನಮ್ಮ ಹಿರಿಯಕ್ಕ ಗಿರಿಜಕ್ಕನಿಂದ ಸನ್ಮಾನ ನಡೆಸಿದ್ದೆವು. ತನ್ನೂರ, ತನ್ನ ಶಾಲೆಯ ಈ ಸನ್ಮಾನವೇ ಇತರೆಲ್ಲ ಸನ್ಮಾನಗಳಿಗಿಂತ ದೊಡ್ಡದು ಮತ್ತು ಸಂತಸ ತಂದದ್ದು ಎಂತ ಖುಷಿಪಟ್ಟಿದ್ದಳು ವಸಂತಿ.

ಬರೆಯುತ್ತಾ ಹೋದರೆ ಎಷ್ಟೂ ಬರೆಯಬಹುದು ನಮ್ಮ ವಸಂತಿ ಬಗ್ಗೆ-ಶ್ರೀನಿವಾಸಮೂರ್ತಿ ಬಗ್ಗೆ-ಮಕ್ಕಳ ಬಗ್ಗೆ. ಅಭಿಮಾನದ ಸಂಗತಿ ಎಂದರೆ ಕುಂದಾಪುರದ ಈ ಹುಡುಗಿ 'ಕುಂದಾಪ್ರ ಕನ್ನಡ'ವನ್ನು ಅವಳ ಬರಹಗಳಲ್ಲಿ ಮೆರೆಸಿದ್ದಳಲ್ಲ ಎಂಬುದು. ಅವಳಿಗೆ ಬಂದ ಕೀರ್ತಿ ಕುಂದಾಪ್ರಕ್ಕೆ ಬಂದ ಕೀರ್ತಿ. ಅದು ತುತ್ತ ತುದಿಗೇರಲಿ ಎಂಬುದೇ ನಮ್ಮೆಲ್ಲರ ಹರಕೆ- ಹಾರೈಕೆ.



## ವಸಂತಿ–ಮೂರ್ತಿಗೆ

(ಮದುವೆಯಾಗಿ ಏಳನೆಯ ವರ್ಷದ ಸಂದರ್ಭದಲ್ಲಿ ಬರೆದಿರುವುದು)

ವರುಷವಾಯಿತೇ, ಏಳು! ಈ ಮದುವೆ ಆಗಿ!
ನೀವೀಗ ಹಳಬರೇ? ಛೇ, ಅಲ್ಲ, ಹೋಗಿ!
ಈ ಶ್ರೀನಿವಾಸ –ಜಾನಕಿಯ ಜೋಡಿ
ಮದುಮಕ್ಕಳಂತೆ ಎಳೆ–ಕಳೇ–ಮೋಡಿ.
ಹಸೆಮಣೆಯ ಮೇಲೆ ಕೂಡಿ ನೀವಿಂದು,
ಹೊಸತು ಮದುಮಕ್ಕಳಿಗೆ ಹರಸುವೆವು ಇಂದು
ಬರಲೊಬ್ಬ ವೀರಾಧಿವೀರ ಕುಮಾರ
ಆನಂದಕಂದನವ ನವನೀತ ಚೋರ
ಎಂದು ನಿಮ್ಮಿಬ್ಬರಿಗೂ ನಾವೆಲ್ಲ ಹರಸಿ
ಎರಚುವೆವು ತಲೆಮೇಲೆ ಅಕ್ಷತೆಯ ಬೆರಸಿ
ನಯನಾ– ಪಲ್ಲವಿಯರೇ ಎತ್ತುವರು ಆರತಿ
ನಮ್ಮ ರಾಗಕ್ಕೊಂದು ಬೇಕು ತಮ್ಮನ ಶ್ರುತಿ.
ಇದಕ್ಕಾಗಿ ನಮಗಿಂದು ಬೇಕು ಬಿಸಿ ಪಾಯಸ
ಜತೆಗೆ ಸಿಹಿ ಲಡ್ಡಿರಲಿ, ಎಂದು ಶುಭ ರಾಯಸ.

– **ಶಂಕ್ರಣ್ಣಯ್ಯ** (ಎ.ಎಸ್.ಎನ್.ಹೆಬ್ಬಾರ್)



# ತಂಗಿ ವೈದೇಹಿ

✦ ಲೀಲಾ ವೆಂಕಟೇಶ್ (ಅಕ್ಕ)

ಏನು, ವೈದೇಹಿಗೆ, ಎಪ್ಪತ್ತೈದು ಆಗುವುದೆ! ನನಗೇ ಇನ್ನು ಐವತ್ತೋ ಐವತ್ತೈದೋ ಎಂದುಕೊಂಡಿದ್ದೆನಲ್ಲ! ಅಚ್ಚರಿಯಾಗುತ್ತಿದೆ. ನಮಗೆಲ್ಲ ಅವಳು ವಸಂತಿ. ತಂದೆಯವರಿಗೆ ಜಾನಕಿ. ಮೂರ್ತಿ ಭಾವಯ್ಯನ 'ಜಾನ್ಕಿ'. ನಾನು ಅವಳ ಲೀಲಕ್ಕ. ಪುಣ್ಯ ಎಂದರೆ, ನಮ್ಮ ಅಷ್ಟೂ ಮಂದಿ ಒಡಹುಟ್ಟಿದವರಿಗೆ ವಯಸ್ಸಾಯಿತು ಎಂಬ ಭಾವನೆಯೇ ಬರುತ್ತಿಲ್ಲ. ಇದಕ್ಕೆ ಕಾರಣ ನಾವೆಲ್ಲ ಜೊತೆಯಾಗಿ ಕಳೆದ ಸಮೃದ್ಧ ಬಾಲ್ಯವೇ; ಮಸುಕಾಗದ ಅದರ ನೆನಪುಗಳೇ ನಮ್ಮನ್ನು ಹೀಗಿರಿಸಿವೆ ಅಂತ ನನಗೆ ಅನಿಸುತ್ತಿದೆ.

ಬಾಲ್ಯದ ಆ ದೊಡ್ಡ ಮನೆಯಲ್ಲಿ ಕಪಾಟುಗಳ ತುಂಬಾ ಪುಸ್ತಕಗಳು. ಕನ್ನಡ, ಹಿಂದಿ, ಇಂಗ್ಲಿಷ್, ಸಂಸ್ಕೃತ–ಇತ್ಯಾದಿ. ತಂದೆಯವರ ಸಂಗ್ರಹ ಅದು. ಪುಸ್ತಕಗಳೇ ಆ ಮನೆಯ ನಿಧಿ. ತಂದೆಯವರು ಪ್ರಸಿದ್ಧ ವಕೀಲರು, ತುಂಬ ಓದಿಕೊಂಡವರು. ಅವರಿಂದಾಗಿ ನಮಗೂ ಓದು ಇಷ್ಟ. ಇವತ್ತಿಗೂ ಎಷ್ಟೇ ಕೆಲಸದ ಇಕ್ಕಟ್ಟಿರಲಿ, ರಾತ್ರಿ ಮಲಗುವ ಮೊದಲಾದರೂ ನಾನು ಓದದೇ ಇರುವುದಿಲ್ಲ. ಸ್ಪಷ್ಟ ಉಚ್ಚಾರಣೆ ಅವರಿಂದ ನಮಗೆ ಬಂದ ಬಳುವಳಿ. ಪ್ರಶಾಂತ ವ್ಯಕ್ತಿತ್ವ ಅವರದು. ಘನಗಂಭೀರ ಸ್ವರ. ನಮಗೆ ಅವರೆಂದರೆ ಗೌರವ ಭಯ ಭಕ್ತಿ ಪ್ರೀತಿ ಎಲ್ಲವೂ. ಅವರ ಕೊನೆಕೊನೆಯ ದಿನಗಳಲ್ಲಿ ಹೊತ್ತುಹೊತ್ತಿಗೆ ಮಾತ್ರೆ ಮದ್ದು ಕೊಡುತಿದ್ದವಳು, ದಿನಾ ವಾಕಿಂಗ್‌ಗೆ ಕರೆದೊಯ್ಯುತಿದ್ದವಳು ವೈದೇಹಿ. ಸಂಜೆ ಅವರು ಹೊರಡಲು ಸಿದ್ಧರಾಗಿ ವಾಕಿಂಗ್‌ಸ್ಟಿಕ್ ಹಿಡಿದು 'ಜಾನಕೀ' ಎಂದು ಪ್ರೀತಿಯಿಂದ ಕರೆಯುವರು. ಅವರ ಆ ಧ್ವನಿ ಈಗಲೂ ಕೇಳಿದಂತಿದೆ. ಅವರು ಕರೆದದ್ದೇ, ಎಲ್ಲಿದ್ದರೂ ಜಾನಕಿ ಓ ಎಂದಾಯಿತು. ಬಂದು ಅವರ ಕೈ ಹಿಡಿದು ಕೊಂಡಾಯಿತು. ಮನೆಯಿಂದ ಹೊರಟವರು ಗಾಂಧೀ ಮೈದಾನದವರೆಗೂ ಮೆಲ್ಲನೆ ಸಾಗಿ ಅಲ್ಲಿನ ಸೀಟೊಂದರಲ್ಲಿ ಕುಳಿತುಕೊಳ್ಳುವರು. ಆ ಕಾಲದಲ್ಲಿ ಕುಂದಾಪುರದ ಗಾಂಧೀ ಮೈದಾನದಲ್ಲಿ ಸಂಜೆ ಹೊತ್ತು ರುಮುರುಮು ಗಾಳಿ ಬೀಸುತಿತ್ತು. ಅಲ್ಲಿ ಆಗಲೇ ಬಂದಿರುವವರ ಜೊತೆ ತಂದೆಯವರು ಪ್ರಸ್ತುತ ಸಮಾಚಾರ ಇತ್ಯಾದಿ ಮಾತನಾಡುತ್ತ ತುಸು ಹೊತ್ತು ಕಳೆದು ಹಿಂತಿರುಗುವರು. ಅವರ ಕಾಲೊತ್ತುತ್ತ ನಾವು ಮಕ್ಕಳು ಅವರಿಂದ ಕೇಳಿದ ರಾಮಾಯಣ

ಮಹಾಭಾರತದ ಕತೆಗಳು ಲೆಕ್ಕವಿಲ್ಲ. ವೈದೇಹಿಯೂ ಅಷ್ಟೆ, ಅವರ ಕಾಲು ತಿಕ್ಕಿ ತನಗೆ ಸಮಾಧಾನವಾದ ಮೇಲೆಯೇ ಓದಲೋ ಮಲಗಲೋ ಹೋಗುತ್ತಿದ್ದುದು. ವೈದೇಹಿ ಹುಟ್ಟಿದ ವರ್ಷ ನನ್ನ ತಂದೆಗೆ ತೀರಾ ಅನಾರೋಗ್ಯವಾಗಿ ಮದ್ರಾಸಿನಲ್ಲಿ ಆರು ತಿಂಗಳು ಚಿಕಿತ್ಸೆಯಲ್ಲಿದ್ದರಂತೆ. ಅಂದಿನಿಂದ ಅವರ ಆರೋಗ್ಯ ಸೂಕ್ಷ್ಮವೇ ಇತ್ತು. ಅಮ್ಮ ಅವರನ್ನು ಅತ್ಯಂತ ಜೋಪಾನ ನೋಡಿಕೊಳ್ಳುತಿದ್ದುದು ನೆನಪಾಗುತ್ತಿದೆ. 'ಈ ಹೆಣ್ಣೊಂದು ಹುಟ್ಟಿ ತಂದೆಗೆ ಹೀಗಾಯಿತು' ಎಂದು ಕೆಲಮಂದಿ ಹೇಳುತಿದ್ದರಂತೆ. ಅದಕ್ಕೆ ನಮ್ಮಮ್ಮ ಅಪ್ಪ 'ಹಾಗೆಲ್ಲ ಹೇಳಬೇಡಿ. ಉಳಿದು ಬರುವಂತಾದುದು ಅವಳಿಂದಲೇ' ಎನ್ನುತಿದ್ದರಂತೆ. ಆ ಮೇಲೆ ತಂದೆಯವರು ಸುಮಾರು ಹದಿನೆಂಟು ವರ್ಷ ಇದ್ದರು. 1965ರಲ್ಲಿ ತೀರಿಕೊಂಡರು.

ಅಮ್ಮ ಕುಟುಂಬದಲ್ಲಿ 'ಹಲವು ಮಕ್ಕಳ ತಾಯಿ' ಎಂದು ಹೆಸರಾದವಳು. ಮನೆಗೆ ಹಳ್ಳಿಯಿಂದ ಓದಿಗೆಂದು ಬಂದಿರುವ ಎಲ್ಲರಿಗೂ ಅವಳು ಅಮ್ಮನೆ. ಒಂದು ಯುನಿವರ್ಸಿಟಿಯಂತೆ ಇದ್ದ ಆ ದೊಡ್ಡ ಮನೆಯಲ್ಲಿ ಅಮ್ಮ ಎಲ್ಲರನ್ನೂ ಯಾವ ಭೇದಭಾವವಿಲ್ಲದೆ ಶಿಸ್ತಿನಿಂದ ನಡೆಸಿಕೊಂಡು ಹೋದಳು. ಪ್ರತಿಯೊಂದು ವಿಷಯದಲ್ಲಿಯೂ ನಮಗೆ ಒಂದು 'ಹದ' ಕಲಿಸಿದ್ದಳು. ಅವಳು ಕಲಿಸಿದ ಆ ಹದ ನಮ್ಮ ಜೀವನವನ್ನು ಸುಖವಾಗಿ ಮುನ್ನಡೆಸಿತು. ಎಷ್ಟು ಮೃದುವೊ ಅಷ್ಟೇ ದೃಢ ಮಾತಿನವಳಾದ ಅವಳ ಗುಣ ವೈದೇಹಿಗೂ ಬಂದಿದೆ. ಅಪ್ಪನ ಕೆಲಸದಲ್ಲಿನ ಶ್ರದ್ಧೆ, ಅಮ್ಮನ ಸತ್ಯನಿಷ್ಠುರತೆ ಎರಡೂ ಅವಳಲ್ಲಿ ಮೇಳೈಸಿವೆ.

ವೈದೇಹಿಗೆ ಮಾತು ಸರಿಯಾಗಿ ಬಂದದ್ದೇ ತೀರಾ ತಡವಾಗಿ. ಅವಳ ಆರನೇ ವರ್ಷಕ್ಕೆ. ಆಗ ಇದಕ್ಕಾಗಿ ಯಾರೂ ತಲೆ ಕೆಡಿಸಿಕೊಂಡಿರಲಿಲ್ಲ. ಬರುತ್ತದೆ, ಬರದೆ ಎಲ್ಲಿಗೆ ಹೋಗುತ್ತದೆ ಎಂಬ ಅನುಭವದ ನಂಬಿಕೆ ಆಗಿನದು. ಅದಕ್ಕೆ ಸರಿಯಾಗಿ ತಾನಾಗಿ ಅವಳು ಮಾತನಾಡಲಾರಂಭಿಸಿದಳು. ಎಂತಲೇ ಆರನೇ ವರ್ಷಕ್ಕಲ್ಲ, ಏಳನೇ ವರ್ಷಕ್ಕೆ ಅಂದರೆ ಒಂದು ವರ್ಷ ತಡವಾಗಿ ಅವಳನ್ನು ಶಾಲೆಗೆ ಸೇರಿಸಿದರು. ನನ್ನ ದೊಡ್ಡಣ್ಣ ಇದ್ದಾಗ ಮಾತಾಡಲಾರದ ಆ ಪುಟ್ಟ ವೈದೇಹಿ ಮಾತಾಡುತಿದ್ದ ರೀತಿಯನ್ನು ತೋರಿಸುತಿದ್ದ. ಈಗ ಅವಳು ವೇದಿಕೆಯಲ್ಲಿ ಮಾತಾಡುವಾಗೆಲ್ಲ ನನಗೆ ಇದು ನೆನಪಾಗುತ್ತದೆ. ಆತ ಅವಳನ್ನು 'ಎಳೆಬಿಸಿಲ ಕನ್ಯೆ' ಎಂದು ಕುಶಾಲು ಮಾಡುತಿದ್ದ. ಕಾರಣ ಚಿಕ್ಕಂದಿನಲ್ಲಿ ಅವಳಿಗೆ ರಿಕೆಟ್ಸ್ ಆಗಿ ಕಾಡ್‌ಲಿವರ್ ಆಯಿಲ್ ಹಚ್ಚಿ ಎಳೆಬಿಸಿಲಲ್ಲಿ ಕೂಡಿಸುತಿದ್ದರಂತೆ. ಅದೆಲ್ಲ ದೊಡ್ಡವರಿಂದ ತಿಳಿದದ್ದೆ ಹೊರತು ನನಗೆ ಅಷ್ಟು ನೆನಪಿಲ್ಲ.

ಅವಳಿಗೆ ಬಾಲ್ಯದಿಂದಲೂ ಆಟವೆಂದರೆ ಪ್ರಾಣ. ಸಂಜೆ ಶಾಲೆಯಿಂದ ಬಂದೊಡನೆ ಸೀದಾ ಉಪ್ಪರಿಗೆಗೆ ಹೋಗಿ ಶಾಲೆಯ ಉಡುಗೆ ಬದಲಿಸಿ ಮನೆಯಂಗಿ ತೊಟ್ಟು ಬರುವುದು ರೂಢಿ. ಇವಳೋ, ಕೈಗೆ ಸಿಕ್ಕಿದ ಅಂಗಿಯನ್ನು ಕೊಳಿಸಿಕೊಂಡು, ಬದಲಿಸಿದ ಅಂಗಿಯನ್ನು ಎತ್ತಿಯೂ ಇಡದೆ ಆಡಲು ಓಡುತಿದ್ದಳು. ಅದು ಅಲ್ಲಿಯೇ ಚಕ್ರಾಕಾರವಾಗಿ ಬಿದ್ದಿರುತಿತ್ತು.

ಅಂಗಿ ಮಡಚಿಡುವ ಮುಂತಾದ ಅವಳ ಕೆಲಸಗಳನ್ನೆಲ್ಲ ಎರಡು ಗದರುತ್ತ ಮಾಡುತಿದ್ದವಳು ನಾನು. ಈಗಲೂ 'ಎಷ್ಟು ಮಾಡಿದ್ದೀಯೇ ನನಗೆ!' ಎಂದು ನೆನೆಯುವಳು. 'ಇಂದಿಗೂ ಅವಳಿಗೆ ಬಟ್ಟೆ ಮಡಚಿಡುವ ಕೆಲಸವೆಂದರೆ ಆಗದು' ಎಂದೂ 'ನೀವು ಆಗಲೇ ಕಿವಿತಿಪ್ಪಿ ಅವಳಿಂದಲೇ ಅದನ್ನು ಮಾಡಿಸಬೇಕಿತ್ತು' ಎಂದೂ ಅವಳ ಮಕ್ಕಳು ಹೇಳಿ ನಗುತ್ತಿರುತ್ತಾರೆ.

ಆಟ ಮಾತ್ರವಲ್ಲ ಆಗಿಂದಲೂ ಓದು, ಬರವಣಿಗೆ, ಹಾಡು ಎಲ್ಲದರಲ್ಲಿಯೂ ಆಸಕ್ತಿ ಅವಳಿಗೆ. ಶಾಲೆಗಳಲ್ಲಿ ಹಸ್ತಪತ್ರಿಕೆ ಇದ್ದಂತೆ ಮನೆಯಲ್ಲಿಯೂ ಹಸ್ತಪತ್ರಿಕೆಯೊಂದನ್ನು ನಾವು ಸಿದ್ಧಮಾಡುತಿದ್ದೆವು. ತಂದೆಯವರು ಅದಕ್ಕೆ ಮುನ್ನುಡಿ ಬರೆಯುತಿದ್ದರು! ಒಂದು ವರ್ಷ ನಮ್ಮ ಶಂಕರಣ್ಣಯ್ಯ ಪ್ರಜಾವಾಣಿ ದೀಪಾವಳಿ ಕಥಾಸ್ಪರ್ಧೆಗೆ ಕಳಿಸಿದ ಕತೆಗೆ ಬಹುಮಾನ ಬಂತು. ನಮಗೆಲ್ಲರಿಗೂ ಹೆಮ್ಮೆ ಒಂದಡೆಯಾದರೆ, ಎಂದ ಮೇಲೆ ನಾವೂ ಬರೆಯಬಾರದೇಕೆ? ಎಂಬ ಹುರುಪೂ. ನಾನೂ ನನ್ನ ನಂತರದ ತಂಗಿ ಲಲಿತಳೂ ಅಂದಿನ ವಾರಪತ್ರಿಕೆಗಳಿಗೆ ಆಗಾಗ ಸಣ್ಣಸಣ್ಣದು ಬರೆಯಲು ತೊಡಗಿದೆವು. ಆದರೆ, ಮದುವೆ ಆದ ಮೇಲೆ ಬದುಕು ಬಳಗ ಮಕ್ಕಳು ಅಂತ ನಾವೆಲ್ಲ ಒಬ್ಬೊಬ್ಬರಾಗಿ ಸಂಸಾರದಲ್ಲಿಯೇ ತನ್ಮಯರಾದೆವು. ವೈದೇಹಿ ಮಾತ್ರ ಗೃಹಿಣಿಯಾಗಿಯೂ ತನ್ನ ಮನಸ್ಸಿನ ಮಾತನ್ನ ಬರಹಕ್ಕೆ ಇಳಿಸುವಲ್ಲಿ ಯಶಸ್ವಿಯಾದಳು. ಹುಟ್ಟಿದ ಮನೆ ಸೇರಿದ ಮನೆ ಎರಡೂ ಕಡೆಯೂ ದೊಡ್ಡ ಪರಿವಾರ ಅವಳದು. ಇವುಗಳ ನಡುವೆಯೇ ಅವಳ ಬರಹಗಳು ಅರಳಿದವು.

ವೈದೇಹಿ ಕುಟುಂಬ ಶಿವಮೊಗ್ಗೆಯಿಂದ ಉಡುಪಿಯಲ್ಲಿ ನೆಲೆಸಬೇಕಾಗಿ ಬಂದಾಗ ಅಮ್ಮನ ವೃದ್ಧಾಪ್ಯದ ದಿನಗಳು. ಅಮ್ಮ ಬಹಳ ನೊಂದ ಸಂಗತಿಗಳಲ್ಲಿ ಇದು ಒಂದು. ಅಮ್ಮ ಮಾತ್ರವಲ್ಲ, ನಾವೂ. ಆದರೆ ಎಲ್ಲ ದಿನಗಳೂ ದಾಟಿ ಹೋಗುತ್ತವೆಯಷ್ಟೆ? ಹಾಗೆ ನಿಧಾನವಾಗಿ ಅವರ ಬದುಕಿನಲ್ಲಿ ಚೇತರಿಕೆಯಾಯಿತು. ಅಮ್ಮ ತನ್ನ ತವರುಮನೆ, ಅಕ್ಕನ ಮನೆ, ಮುಂತಾದ ಕಡೆಗೆಲ್ಲ ಹೋಗಬೇಕೆಂದು ಆಸೆ ಪಟ್ಟಾಗ ಅಲ್ಲಿಗೆಲ್ಲ ವೈದೇಹಿ ಮತ್ತು ತಂಗಿ ಪ್ರೇಮಾ ಕರೆದುಕೊಂಡು ಹೋಗುತಿದ್ದರು. ಅಮ್ಮನ ತವರಿನ ಕಡೆಯ ಕನ್ನಡ ಭಾಷೆಯೇ ಬೇರೆ. ನಮಗೆಲ್ಲ ತುಂಬ ಇಷ್ಟವಾದ ಭಾಷಾ ವಿಧಾನವದು. ನಾನೂ ವೈದೇಹಿ ಎಷ್ಟೋ ಸಲ ಫೋನಿನಲ್ಲಿ ಆ ಭಾಷೆಯಲ್ಲಿಯೇ ಮಾತನಾಡಿ ಖುಷಿ ಪಡುತ್ತೇವೆ.

ವೈದೇಹಿ ಸೃಷ್ಟಿಸಿದ ಒಂದು ಪದ 'ಶಿವನ ಮೀಸುವ ಹಾಡು' ಕವನದಲ್ಲಿ ಬರುವ 'ಆರ್ದ್ರಗರ್ವ'. ಈ ಆರ್ದ್ರಗರ್ವ ಎಂಬುದು ವೈದೇಹಿಯದೇ ಗುಣವೆಂದು ಅವಳ ಅಕ್ಕನಾಗಿ ನಾನು ಚೆನ್ನಾಗಿ ಬಲ್ಲೆ. ಅವಳ ಸಾಹಿತ್ಯ ಮಹಿಳಾ ಪರವಾದ್ದು ಹೌದು. ಆದರೆ ಅವಳು ಪುರುಷದ್ವೇಷಿ ಅಲ್ಲ. ಶಿವ ಎಂದರೆ ಅವಳಿಗೆ ಬಲು ಪ್ರೀತಿ. ಅಂತೆಯೇ ಸೂರ್ಯ ಸಹ. 'ಮಗೂ ಪೃಥ್ವೀ, ನೋಡೀಗ, ಸಂಜೆ ಮುಗಿಯಿತು, ಅವನಿಲ್ಲ, ಎಲ್ಲಿ ಹೋಗುವನೋ ಯಾರು ಬಲ್ಲ. ನೀನಂತೂ ಹೇಳಿದರೆ ಕೇಳುವುದಿಲ್ಲ. ಇಂಥವನ ಸುತ್ತ

ತಿರುಗುತ್ತಿ. ಸುಸ್ತಾಗುತ್ತಿ. ಕತ್ತಲಾಯಿತು, ಜೋಕೆ, ಬಿದ್ದೀಯಾ ಎಡವಿ' ಎಂಬ ಅವಳ ಕವನಬಿಂದು ಓದಿ ನಾನು 'ಯಾಕೆ ಸೂರ್ಯನ ಬಗ್ಗೆ ಹೀಗೆ ಯೋಚಿಸುತ್ತೀ. ಸೂರ್ಯ ಪಾಪ ಕರ್ತವ್ಯಧಾರಿ. ಹೋಗಲು ಮನಸ್ಸಿಲ್ಲದಿದ್ದರೂ ಹೋಗಲೇಬೇಕು. ಆದರೂ ಬೆಳಿಗ್ಗೆ ಓಡೋಡಿ ಬರುತ್ತಾನಲ್ಲ. ಅದು ಹೇಳು' ಎಂದೆ. 'ಏ, ನಾನು ಈ ಮುಖವಾಗಿ ಯೋಚಿಸಲೇ ಇಲ್ಲ. ಎಷ್ಟು ಚೆನ್ನಾಗಿ ಹೇಳಿದೆ!' ಎಂದು ಖುಶಿ ಪಟ್ಟಳು. ಹೀಗೆ ನಿರ್ವ್ಯಾಜವಾಗಿ ಖುಶಿ ಪಡುವ ಪೈಕಿ ಅವಳು.

ಅವಳು ಬರೆದ ಹುಡುಗಿಯರ ಬದುಕುಗಳನ್ನು ನಾನೂ ಕಂಡವಳು. ಅಕ್ಕು ಅಂತೂ ಆಯಿತಲ್ಲ? 'ಅವಲಂಬಿತರು' ಕತೆಯ ನಾಯಕಿ ಅಹಲ್ಯ! ಆ ಕೆಲಸದ ಹುಡುಗಿಯ ಆಸೆ ಕನಸುಗಳು ಎಷ್ಟು! ಅದೇ ರೀತಿ ಭೂತಕತೆಯ ಪಾರ್ವತಿ, ಅಮ್ಮಚ್ಚಿ, ಸಣ್ಣಿ, ದುಗ್ಗು, ಚಂದು, ಕ್ರೌಂಚ ಪಕ್ಷಿಗಳು ಕತೆಯ ಲಕ್ಷ್ಮಮ್ಮ. ಎಲ್ಲಕ್ಕಿಂತ ಮರಗಿಡ ಬಳ್ಳಿ ಕತೆಯ ಅಮ್ಮ! ಪ್ರತೀಸಲ ಆ ಕತೆಯನ್ನು ಓದಿದಾಗಲೂ ನೋಯುತ್ತೇನೆ. ನಾನೇ ಆ ತಾಯಿ ಎಂಬಂತೆ. ಅವಳಲ್ಲಿನ ತಾಯ್ತನವೇ ಇದನ್ನೆಲ್ಲ ಗ್ರಹಿಸಲು ಅವಳಿಗೆ ವಿಶೇಷ ಶಕ್ತಿ ಕೊಟ್ಟಿದೆ ಎಂದು ನನಗನಿಸುವುದು.

ಚಿಕ್ಕಂದಿನಲ್ಲಿ ನಾವೆಲ್ಲ ಎಷ್ಟು ಜಗಳ ಮಾಡಿಕೊಳ್ಳುತಿದ್ದೆವು, ಬೈದುಕೊಳ್ಳುತಿದ್ದೆವು, ತಿವಿದು ಚಿವುಟಿ ಹಿಂಸೆ ಮಾಡುತಿದ್ದೆವು ಲೆಕ್ಕವಿಲ್ಲ. ಅಮ್ಮ ಬಂದಳೆಂದರೆ ಎಲ್ಲ ಗಪ್‌ಚಿಪ್. ದೊಡ್ಡವರಾದಂತೆ ಜಗಳಗಳೆಲ್ಲ ಮಾಯವಾದವು. ಪರಸ್ಪರ ಎಷ್ಟು ಬೆಸೆದುಕೊಂಡೆವೆಂದರೆ ಒಬ್ಬರಿಗೋಸ್ಕರ ಒಬ್ಬರು ಇರುವಂತೆ. ಅಮ್ಮ ತೀರಿಕೊಂಡ ಮೇಲಂತೂ ನಾವು ಅಕ್ಕತಂಗಿಯರು ಒಬ್ಬರಿಗೊಬ್ಬರು ಅಮ್ಮನಂತೆ ಆಗಿರುವೆವು.

ನಮ್ಮ ಮನೆಯಲ್ಲಿ ಯಾವುದೇ ಶುಭ ಸಮಾರಂಭಗಳಲ್ಲಿ ದುಃಖದ ದಿನಗಳಲ್ಲಿಯೂ ಸದಾ ತಾಯಿಯಂತೆಯೇ ಓಡಿಬಂದು ಜತೆಯಲ್ಲಿದ್ದು ಎಲ್ಲ ಮುಗಿದ ಮೇಲೆ ಏನೂ ಮಾಡಿಲ್ಲ ತಾನು ಎಂಬಂತೆ ನಡೆದು ಬಿಟ್ಟವಳು ಅವಳು. ನನ್ನ ಮೊಮ್ಮಗುವಿನ ನಾಮಕರಣದಲ್ಲಿ ಬೆಳಿಗ್ಗೆ ಮನೆಯಿಂದ ಹೊರಡುವಾಗ ಸಂಭ್ರಮದಿಂದ ಮಗುವನ್ನು ತೆಕ್ಕೆಗೆ ತೆಗೆದುಕೊಂಡ ಅವಳು ಕೆಳಗಿಟ್ಟದ್ದು ನಾಮಕರಣದ ಶಾಸ್ತ್ರ ಸುರುವಾದಾಗಲೇ. ಮೂರ್ತಿಭಾವಯ್ಯ 2006ರಲ್ಲಿ ಒಮ್ಮೆ ಅಸ್ವಸ್ಥರಾದರು, ಆಮೇಲೆ ಆರೋಗ್ಯಕ್ಕೆ ಮರಳಿದರೂ ಅವತ್ತಿನಿಂದ ಆಕೆ ಬರುವುದೂ ಕಡಿಮೆ, ಇರುವುದಂತೂ ಇಲ್ಲವೇ ಇಲ್ಲ.

ಅವಳಿಗೆ ಪ್ರಶಸ್ತಿಗಳು ಬಂದಾಗ ಒಂದೋ ಪೇಪರಿನಲ್ಲಿ ಇಲ್ಲವೆ ಟಿ.ವಿ.ಯಲ್ಲಿ ನೋಡಿಯೇ ನಮಗೆ ಗೊತ್ತಾಗಬೇಕು. ಮೊದಲೇ ಹೇಳಲೂ ಸಂಕೋಚ ಅವಳಿಗೆ. ಅಭಿನಂದನೆ ಸ್ವೀಕರಿಸಿದಾಗಲೂ ಅದೇ ವಿನಯ. 'ಬಿಡು ಲೀಲಕ್ಕ, ಹೊಗಳಬೇಡ, ಬರೆದಿದ್ದರೆ ನೀನೂ ಚೆನ್ನಾಗಿ ಬರೆಯುತಿದ್ದೆ' ಎಂದು ವಿಷಯಾಂತರ ಮಾಡುವಳು.

ಪ್ರೀತಿ, ಸ್ನೇಹ, ಹೃದಯವಂತಿಕೆ, ಗಾಂಭೀರ್ಯ, ಜೊತೆಗೆ ಪ್ರಾಂಜಲ ಹಾಸ್ಯ ವೈದೇಹಿಯ ಮುಖ್ಯಗುಣ. ಅಷ್ಟೇ ಗಟ್ಟಿ ಮನಸ್ಸಿನವಳು. ಅವಳ ಮನೆಗೆ ಹೋದಾಗಲೆಲ್ಲ ನಾನು ಅವಳ ಬರೆಯುವ ಕೋಣೆಗೆ ಹೋಗಿಯೇ ಹೋಗುತ್ತೇನೆ. ಎತ್ತ ನೋಡಿದರೂ ಪುಸ್ತಕಗಳು. ಅಸ್ತವ್ಯಸ್ತ. 'ಅಯ್ಯೊ ಹೋಗಬೇಡ ಅಲ್ಲಿ' ಎನ್ನುವಳು. ಆದರೆ ನನ್ನ ಮಟ್ಟಿಗೆ ಆ ಕೊಠಡಿ ಬರೀ ಕೊಠಡಿಯಲ್ಲ. ಓದು ಮತ್ತು ಬರವಣಿಗೆ ನಡೆಯುತ್ತಿರುವ ವಿಶೇಷತೆ ಅದಕ್ಕಿದೆ. ನಿರ್ಮಲ ಅಂತಃಕರಣದ, ನಿರಹಂಕಾರದ, ಬೆಚ್ಚಗಿನ ಮೈತ್ರಿಯ ಅನಂತನಗರದ ಅವಳ ಮನೆಯಿಂದ ಹೊರಡುವಾಗ ಯಾವಾಗಲೂ ಮಾತು ಮೌನ, ಹೃದಯ ಭಾರ. ಕಳಿಸಲು ಅವಳಿಗೂ ಮನಸ್ಸಿಲ್ಲ, ಹೊರಡಲು ನನಗೂ ಕಾಲು ಬರದು. ನನಗೆ ಒಮ್ಮೊಮ್ಮೆ ತೀರಾ ನಿಶ್ಶಕ್ತಿ ಎನಿಸಿದಾಗೆಲ್ಲ ನಾನು ತಂಗಿ ವೈದೇಹಿಯನ್ನು ನೆನೆದುಕೊಳ್ಳುತ್ತೇನೆ. ಅವಳ ಜೀವನೋತ್ಸಾಹ, ನಗೆ, ಮಾತು, ಪ್ರೀತಿಸುವ ಪರಿ, ಸಹಿಷ್ಣುತೆ ಎಲ್ಲವೂ ನನ್ನನ್ನು ಮತ್ತೆ ಜೀವನ್ಮುಖಿಯನ್ನಾಗಿ ಮಾಡುತ್ತವೆ.

ಜಾನಕಿ ಮತ್ತು ಮೂರ್ತಿ ಭಾವಯ್ಯ ಅವರದು ಐವತ್ತು ವರ್ಷಗಳ ಸಮರಸ ದಾಂಪತ್ಯ. ಭಾವಯ್ಯ ಅತ್ಯಂತ ಪ್ರಸನ್ನ ಮುಖದ ಸುಸಂಸ್ಕೃತ ವ್ಯಕ್ತಿ. ಸದಾ ಒಳ್ಳೆಯ ಮಾತನ್ನೇ ಆಡುವವರು. ಮಕ್ಕಳಾದ ನಯನಾ ಪಲ್ಲವಿಯರೂ ಇಂದು ಬಲು ಅಪರೂಪವಾದ ಪ್ರೀತಿಯ ಬೆಲೆ ಅರಿತವರು. ತಮ್ಮ ಬದುಕಿನ ದಾರಿಯಲ್ಲಿ ಚಂದದಿಂದ ಮುನ್ನಡೆದಿದ್ದಾರೆ. ಇವರಿಬ್ಬರ ಮದುವೆ ವಿಚಾರದಲ್ಲಿ ವೈದೇಹಿ ದಂಪತಿಗಳು ಪುಣ್ಯವಂತರು ಎಂದು ನಾವು ಮಾತಾಡಿಕೊಳ್ಳುತಿರುತ್ತೇವೆ. ಇಬ್ಬರು ಅಳಿಯಂದಿರೂ ಅತ್ಯಂತ ಸಹೃದಯರು. ನಯನಾ ಬಾಲಾಜಿ ಗೌರಿ, ಪಲ್ಲವಿ ಅನಿಲ್ ಅಖಿಲ್ ಕುಟುಂಬದವರಿಗೆಲ್ಲ ಪ್ರಿಯರಾದವರು.

ವೈದೇಹಿಗೆ ಎಪ್ಪತ್ತೈದು ತುಂಬುತ್ತಿರುವ ಈ ಸಂದರ್ಭದಲ್ಲಿ ಈ ದಂಪತಿಗಳಿಗೆ ಆಯುರಾರೋಗ್ಯದೊಂದಿಗೆ ಎಲ್ಲ ಶುಭವಾಗಲಿ ಎಂದು ಹರಸುವುದರ ಜೊತೆಗೇ ಕೊನೆಯದಾಗಿ ಒಂದು ಮಾತು. ಗ್ರಂಥದ ಸಂಪಾದಕರಿಂದ ನನಗೆ ಬಂದ ಪತ್ರದಲ್ಲಿ 'ಒಬ್ಬ ಸಾಮಾನ್ಯ ಹೆಣ್ಣುಮಗಳು ಕುಂದಾಪುರ ಎಂಬ ಪುರದಿಂದ ಶಿವಮೊಗ್ಗೆಯವರೆಗೆ ಅಲ್ಲಿಂದ ಅಮೆರಿಕೆಯವರೆಗೆ ತಮ್ಮ ಸ್ವಂತ ಪ್ರತಿಭೆ ಮತ್ತು ಪರಿಶ್ರಮದಿಂದ ಪಯಣಿಸಿದ್ದು ಒಂದು ಅಪರೂಪದ ಕತೆಯೇ ಸೈ.' ಅಂತಿದೆ. ಇದನ್ನು ಬರೆದವರಾರೋ ನನಗೆ ಗೊತ್ತಿಲ್ಲ. ಆದರೆ ಅದು ಸತ್ಯಸ್ಯ ಸತ್ಯ. ಇದು ಒಬ್ಬಳು ಮಾನವತಾವಾದಿ ಹೆಣ್ಣುಮಗಳಿಗೆ ಸಲ್ಲುವ ಗೌರವ ಎಂದಷ್ಟೇ ಹೇಳಬಲ್ಲೆ.



## ನನ್ನ ವಸಂತಿ ಅಕ್ಕ

ವೈದೇಹಿ (ವಸಂತಿ) ನನ್ನ ಅಕ್ಕ
ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಹರಡಿಕೊಂಡಿದ್ದಾಳೆ
ಈಗೆಲ್ಲಾ ತನ್ನೆಲ್ಲ ರೆಕ್ಕೆ ಪುಕ್ಕ
ಅವಳ ಕಥೆ ಕವನ ಓದಿದವರೆಲ್ಲ
ಹೇಳುವರು, ನಮ್ಮ ಹೆಣ್ಣು ಅಕ್ಕಾ!...*

ತಾಯಿ ಮನೆ ಕುಂದಾಪುರ ದಾಟಿ
ಗಂಡನ ಮನೆ ಶಿವಮೊಗ್ಗ ಸೇರಿದಳು
ದಾರಿ ಯಾವುದು ಗೊತ್ತೆ ?
ಆಗುಂಬೆ ಘಾಟಿ
ಆಗಲೇ ಶುರುವಾಯಿತು ಬರವಣಿಗೆ ಈ ಪಾಟಿ
ಅಲ್ಲೆಲ್ಲಾ ಎಂದರು ಹುಡುಗಿ ಬಲು ಚೂಟಿ

ವೈದೇಹಿ ಪತಿ ಶ್ರೀನಿವಾಸ ಮೂರ್ತಿ
ಅವರೇ ಅವಳ ಸಾಹಿತ್ಯಕ್ಕೆ ಸ್ಫೂರ್ತಿ
ಆಗಲೇ ಅವಳಿಗೆ ತಂದುಕೊಟ್ಟದ್ದೆ ಕೀರ್ತಿ
ಎಲ್ಲರ ಅಭಿಮಾನ ಪಡೆದಿದ್ದಾಳೆ ಪೂರ್ತಿ

ತೊಟ್ಟಿಲು ತೂಗಿದ ಕೈ
ದೇಶವನ್ನೇ ಆಳಬಲ್ಲದು ಎಂಬಂತೆ
ಇವಳು ಪೆನ್ನು ಹಿಡಿದರೆ ಸೈ
ಸಾಹಿತ್ಯದ ಮಹಾಪೂರವೇ ಹರಿಯುವುದು
ವೈದೇಹಿ ನಮ್ಮ ಹೆಮ್ಮೆಯ ಕನ್ನಡದ ಕಂದ
ಅವಳು ಕಾಟನ್ ಸೀರೆ ಉಟ್ಟು

ನಡೆದು ಬಂದರೆ ಅದೇ ಒಂದು ಅಂದ
ಪೂರ್ವ ತಯಾರಿ ಇಲ್ಲದೇ ನುಡಿದರೂ
ನುಡಿಮುತ್ತಿನ ಚೆಂದ
ಅವಳು ಏನು ಬರೆದರೂ ಆಗುವುದು ಸುಗಂಧ
ಸಾಹಿತ್ಯ ಕೃಷಿಯ ಘಮ ಘಮ ಶ್ರೀಗಂಧ

ವೈದೇಹಿಯದು ಸದಾ ಹೊಳಪು ಕಣ್ಣಿನ ಕಾಂತಿ
ಜೊತೆಯಲ್ಲಿ ಮಕ್ಕಳ ಮೊಮ್ಮಕ್ಕಳ ಪ್ರೀತಿ
ಅಕ್ಕ ತಂಗಿ ತಮ್ಮ ಅಣ್ಣಂದಿರ ಅರ್ತಿ
ಅವಳ ಬರವಣಿಗೆ ಹೊಸತೊಂದು ಕ್ರಾಂತಿ

ಅವಳದು ಮೃದು ಹೃದಯ ನಯ ವಿನಯ
ಸಂಸಾರದ ಕೊಳದಲ್ಲಿಯೂ ಬರವಣಿಗೆಯಲ್ಲಿ ತನ್ಮಯ
ಹರಿದು ಬಂದರೆ ಸಾಹಿತ್ಯ ಅತ್ಯಂತ ರಸಮಯ
ಬರಹಗಳಲ್ಲಿ ಸಮಾಜದ ಸೂಕ್ಷ್ಮ ಚಿಂತನೆ
ಬಾಳಿನ ಕಷ್ಟ ಸುಖಗಳೆಲ್ಲಾ ಅವುಗಳಲ್ಲಿ ಮಿಶ್ರಣ

ವೈದೇಹಿ ನನ್ನ ಪ್ರೀತಿಯ ಅಕ್ಕ
ಹಿರಿತನದಲ್ಲಿ ನನಗೆ ಅಮ್ಮ ಸಮಾನ
ಸಂಕಟ ಬಂದಾಗೆಲ್ಲಾ ಅವಳೊಡನೆ
ಹಂಚಿಕೊಳ್ಳುವ ಹಂಬಲ
ಕೂಡಲೇ ಸಿಗುವುದು ಸಮಾಧಾನದ ಸಂಚಲನ
ಬಾಳಿನ ಕೊಳದಲ್ಲಿ ಈಜುತ್ತಿರುವ ವೈದೇಹಿಗೆ
ದೇವರೀಯಲಿ ಸುಖ, ಶಾಂತಿ, ಸಂತೋಷ ಅನುದಿನ
ನಾವೆಲ್ಲರೂ ಪ್ರಾರ್ಥಿಸೋಣ ದಿನ ದಿನ.

* ('ಅಕ್ಕಾ' ಎಂದರೆ ಕುಂದಾಪುರ ಭಾಷೆಯಲ್ಲಿ 'ಪರವಾಗಿಲ್ಲ' ಎಂದರ್ಥ)

**– ಮನೋರಮಾ ಹೇರ್ಳೆ**

# ನಮ್ಮಕ್ಕ ವೈದೇಹಿ, ನಮ್ಮ ಹೆಮ್ಮೆ

✦ ಸೀತಾ ಶ್ರೀಧರ್(ತಂಗಿ)

ನನ್ನ ಹೆಸರು ಸೀತಾ, ವೈದೇಹಿಯ ತಂಗಿ. ಹಾಗೆಂದ ಮಾತ್ರಕ್ಕೆ ಇವಳೂ ವೈದೇಹಿಯ ಇನ್ನೊಂದು ಹೆಸರು, ಇವಳು ಲೇಖಕಿ ಅಂದುಕೊಳ್ಳಬೇಡಿ. ಆ ಕಷ್ಟವನ್ನೆಲ್ಲಾ ಅವಳಿಗೇ ಬಿಟ್ಟುಕೊಟ್ಟು ನಾನು ಹಾಯಾಗಿದ್ದೇನೆ. ಅವಳಿಗೆ ಗೌರವ ಪುರಸ್ಕಾರ ಸಂದಾಗಲೆಲ್ಲಾ ಖುಷಿಯನ್ನು ಮನಃಪೂರ್ವಕ ಹಂಚಿಕೊಳ್ಳುತ್ತೇನೆ.

ವೈದೇಹಿ, ಜಾನಕಿ, ವಸಂತಿ ಇವರೆಲ್ಲಾ ನನ್ನ ಅಕ್ಕಂದಿರೇ ಹೌದು, ಎಲ್ಲರೂ ಸೇರಿ ಒಬ್ಬ ವಸಂತ್ಯಕ್ಕ ಆಗಿಬಿಟ್ಟಿದ್ದಾಳೆ. ಅಲ್ಲ ಅವರೆಲ್ಲಾ ನಮ್ಮ ವಸಂತ್ಯಕ್ಕನಲ್ಲಿ ಏಕೀಭವಿಸಿದ್ದಾರೆ. ನಮ್ಮ ಅಪ್ಪಯ್ಯ ಕರೆಯುತ್ತಿದ್ದ 'ಜಾನಕಿ' ಒಬ್ಬಳು ಹದಿಹರಯದ, ಕಲಿಕೆಗೆ ಹಾತೊರೆಯುವ, ಜಿಗುಪು ಜಿಮ್ಮಾನದ ಪ್ರೀತಿ ಸುಮ್ಮಾನದ ಏನನ್ನೋ ಧೇನಿಸುವ, ಮನದೊಳಗೇ ಕಾತರಿಸುವ 'ಆರ್ದ್ರಗರ್ವ'ದ (ಇದು ಅವಳೇ ಸೃಷ್ಟಿಸಿದ ಪದ) ಹುಡುಗಿ, ಬಹುಮುಖೀ ವ್ಯಕ್ತಿತ್ವದವಳು. ಸಾಹಿತ್ಯ, ಸಂಗೀತ, ಕ್ರೀಡೆ, ಅಡುಗೆಮನೆ ಎಲ್ಲದರಲ್ಲಿಯೂ ಆಸಕ್ತಿ ಹರಡಿಕೊಂಡವಳು. ಆಗಲೇ ನಮ್ಮ ತಂದೆ ಅವಳ ಮುಂದಿನ ವೈಚಾರಿಕ ಪಯಣದ ಹಾದಿಯನ್ನು ಗುರುತಿಸಿದ್ದರೇನೋ. ಅವಳ ಆ ಥರದ ಚಟುವಟಿಕೆಗಳಿಗೆ ತುಂಬಾ ಪ್ರೋತ್ಸಾಹ ಅವರದು. ಅವರ ಅಭಿಮಾನದ ಜಾನಕಿಯಾಗಿಯೇ ಆ ದಿನಗಳಲ್ಲಿ ಅವಳು ರೂಪುಗೊಂಡಿದ್ದಳು.

ರಾಮಾಯಣ, ಅದರಲ್ಲಿಯೂ ತುಳಸೀ ರಾಮಾಯಣದ ಅನನ್ಯ ಭಕ್ತರಾಗಿದ್ದರು ನಮ್ಮ ತಂದೆ. ಭಕ್ತಿಪೂರಿತ ತುಂಬುಕಂಠದಿಂದ ತುಳಸೀ ರಾಮಾಯಣದ ಸಾಲುಗಳನ್ನು ರಾಗಪೂರ್ವಕವಾಗಿ ಮೆಲುದನಿಯಲ್ಲಿ ಅವರು ಹಾಡುತ್ತಾ ಮನೆಯಲ್ಲಿ ಓಡಾಡುತ್ತಿದ್ದರೆ ಕೇಳುತ್ತಾ ಇರೋಣ ಅನಿಸುತ್ತಿತ್ತು. ಸಾಹಿತ್ಯಾಸಕ್ತರಾಗಿದ್ದ ಅವರು ಕಪಾಟುಗಳ ಭರ್ತಿ ಎಲ್ಲ ವಿಚಾರಗಳಿಗೂ ಸಂಬಂಧಿಸಿದ ಪುಸ್ತಕಗಳನ್ನು ತಂದು ತಂದು ತುಂಬಿಸಿದ್ದರು. ನಮಗೋ, ಓದುವ ಹುಚ್ಚು. ವಕೀಲ ವೃತ್ತಿಯ ಕಾರ್ಯಬಾಹುಳ್ಯದಿಂದಾಗಿ ತನಗೆ ಸಾಹಿತ್ಯ ರಚನೆ ಸಾದ್ಯವಾಗಿಲ್ಲ ಎಂಬ ಕೊರಗನ್ನು ಅಪ್ಪಯ್ಯ ಆಗಾಗ್ಗೆ ಹೊರಹಾಕುತ್ತಿದ್ದರು. ಅವರ ಹಂಬಲದ ಹನಿ ಸಿಂಚನವಾದಂತೆ ನಮ್ಮ ಅಣ್ಣ ಎ.ಎಸ್. ಎನ್. ಹೆಬ್ಬಾರ್

ಕಾಲೇಜು ದಿನಗಳಲ್ಲೇ ಆಗಾಗ ಕತೆ, ಲೇಖನ ಬರೆಯುವ ಹವ್ಯಾಸ ಶುರುಮಾಡಿಕೊಂಡಿದ್ದ. ಅವನಂತೆ ನನ್ನ ಅಕ್ಕಂದಿರಾದ ಲೀಲಕ್ಕ ಮತ್ತು ಲಲ್ತಕ್ಕರೂ (ತಮ್ಮ ಬರವಣಿಗೆಯನ್ನು ಮುಂದುವರಿಸಿದ್ದರೆ ಪ್ರಾಯಶಃ ಇವತ್ತು ಅವರ ಹೆಸರೂ ಕನ್ನಡದ ಉತ್ತಮ ಲೇಖಕಿಯರ ಯಾದಿಯಲ್ಲಿರುತ್ತಿತ್ತು.) ಬಹುಶಃ ಈ ಸಿಂಚನ ಧಾರೆ ಎರೆಸಿಕೊಂಡು ಲೇಖಕಿ ಜಾನಕಿ ತಲೆ ಎತ್ತಿದಳು. ತನ್ನ ಮನಸ್ಸಿಗೆ ತೋಚಿದ ಕತೆ ಕವನ ಬರೆಯುತ್ತಿದ್ದಳು. ಆಗಲೇ ಅವಳದು ತುಸು ವಿಶಿಷ್ಟ ಶೈಲಿ. ಪ್ರೋತ್ಸಾಹ ಕೊಡಲು, ಹುರಿದುಂಬಿಸಲು ಮನೆಮಂದಿಯೆಲ್ಲ ಇದ್ದೆವಲ್ಲ. ನಾವೆಲ್ಲ ಆಗ ವರ್ಷಕ್ಕೊಂದು 'ಸಾಹಿತ್ಯ ಜ್ಯೋತಿ' ಎಂಬ ಹಸ್ತಪತ್ರಿಕೆ ತಯಾರು ಮಾಡುತ್ತಿದ್ದೆವು. ಅವರವರ ವಯಸ್ಸಿಗೆ ಅನುಗುಣವಾಗಿ ಕತೆ ಕವನ ನೀಳ್ಗತೆ ಎಲ್ಲವನ್ನೂ ಬರೆಯುತ್ತಿದ್ದೆವು. ಬರೆದದ್ದನ್ನು ಅಚ್ಚುಕಟ್ಟಾಗಿ ಸುಂದರ ಹಸ್ತಾಕ್ಷರಗಳಲ್ಲಿ ದೊಡ್ಡ ಪುಸ್ತಕದಲ್ಲಿ ಮರುದಾಖಲಿಸುತ್ತಿದ್ದೆವು. ಅದರ ಸಕ್ರಿಯತೆಯಲ್ಲಿ ಜಾನಕಿಯೂ ಒಬ್ಬಳು. ಆ ಲೇಖನಗಳಿಗೆ ತಕ್ಕ ಚಿತ್ರಗಳಿಗೆ ಅಣ್ಣಂದಿರು ಅಕ್ಕಂದಿರೇ ಕಲಾವಿದರು. ಸಂಪಾದಕೀಯ ಬರೆಯಲು ನಮ್ಮ ತಂದೆ. ತುಂಬಾ ಸಂತೋಷದಿಂದ ಅವರು ಅದನ್ನು ಮಾಡುತ್ತಿದ್ದರು. ಜಾನಕಿ ಒಮ್ಮೆ ಅದರಲ್ಲಿ ಒಂದು ನೀಳ್ಗತೆಯನ್ನು ಬರೆದಿದ್ದಳು. ಪತ್ರಿಕೆ ಬಿಡುಗಡೆಗೆ ಮನೆಯಲ್ಲಿಯೇ ಪುಟ್ಟ ಸಮಾರಂಭ. ನಮ್ಮ ತಂದೆ ತಾಯಿಯರೇ ಮುಖ್ಯ ಅತಿಥಿಗಳು. ಮನರಂಜನಾ ಕಾರ್ಯಕ್ರಮವೂ ನಮ್ಮದೇ. ಅಣ್ಣಂದಿರು, ಅಕ್ಕಂದಿರು, ತಂಗಿ, ತಮ್ಮ. ಆ ದಿನಗಳ ಆನಂದ ಮರೆಯಲಾಗದು.

ಇನ್ನು ವಸಂತಿ. ಅಮ್ಮನ ಗರಡಿಯಲ್ಲಿ ಬೆಳೆದ ವಸಂತಿಗೆ ಅಮ್ಮನಷ್ಟೇ ಛಾತಿ. ಮಾತಿಗೂ ಸೈ, ಕೆಲಸಕ್ಕೂ ಸೈ. 'ಜಾನಕಿ' ಅಪ್ಪಯ್ಯ ಶಾಲೆಯಲ್ಲಿ ದಾಖಲಿಸಿದ ಹೆಸರಾದರೆ (ಅವಳ ಗೆಳತಿಯರಿಗೆಲ್ಲ ಅವಳು ಜಾನಕಿಯೇ) 'ವಸಂತಿ' ಅಮ್ಮ ಅಚ್ಚೆಯಿಂದ ಆರಿಸಿದ ಹೆಸರು. ಮನೆಯಲ್ಲಿ ಕುಟುಂಬ ವಲಯದಲ್ಲಿ ಅಮ್ಮನ ಶಿಸ್ತುಬದ್ಧ ಮನೆವಾರ್ತೆಯಲ್ಲಿ ಪಳಗಿದ್ದ ವಸಂತ್ಯಕ್ಕ ಕೆಲಸ ಬೊಗಸೆಯಲ್ಲಿ ಎಂದೂ ಹಿಂದೆಗೆಯದ ಛಲಗಾರ್ತಿ. ದನ ಎಮ್ಮೆ ಕರೆಯಲೂ ಅವುಗಳ ಚಾಕರಿಗೂ ಎಲ್ಲದಕ್ಕೂ ರೆಡಿ. ಎಸೆಸೆಲ್ಸಿ ಮುಗಿದು ಒಂದು ವರ್ಷದ ನಂತರ ಕುಂದಾಪುರದಲ್ಲೇ ಕಾಲೇಜು ಸುರುವಾದಾಗ ಹಟ ಹಿಡಿದು ಕಾಲೇಜಿಗೆ ಸೇರಿದಳು ವಸಂತ್ಯಕ್ಕ. ಅಲ್ಲಿನ ಶೈಕ್ಷಣಿಕ ವಾತಾವರಣದಲ್ಲಿ ಇನ್ನಷ್ಟು ಅರಳಿದಳು. ದೊಡ್ಡ ಕುಟುಂಬ, ದೊಡ್ಡ ಮನೆ, ಬಂದು ಹೋಗುವವರು ಲೆಕ್ಕವಿಲ್ಲ. ಇಡ್ಲಿ, ದೋಸೆ ಶಾವಿಗೆ... ಆ ದೊಡ್ಡ ಅರೆಯುವ ಕಲ್ಲಿಗೆ ಬಿಡುವೆಂಬುದಿರಲಿಲ್ಲ. (ಮಿಕ್ಸರ್, ಗ್ರೈಂಡರ್ ಇಲ್ಲದ ಕಾಲವಷ್ಟೆ ಅದು) ಸದಾ ಮುಗಿಯದ ಕೆಲಸ. ಬೇಸಗೆಯಲ್ಲಿ ನಮ್ಮ ಮನೆಯೋ ಹಪ್ಪಳ ಸೆಂಡಿಗೆ ಕಾರ್ಖಾನೆಯಂತೆ. ಅಮ್ಮನ ಕಣ್ತಪ್ಪಿಸಿ ಕದ್ದು ಓಡುವ ಹಾಗಿಲ್ಲ. ಕೆಲಸ ಕೆಲಸ. ಅಷ್ಟೆ. ಎಲ್ಲವೂ ಚೊಕ್ಕ ಆಗಬೇಕು. ಮುಗಿಸಿಯೇ ಶಾಲೆ ಕಾಲೇಜಿಗೆ ಹೋಗಬೇಕು. ಇದೆಲ್ಲಾ ನಿಭಾಯಿಸಿಕೊಂಡು ಕಾಲೇಜು ಮುಗಿಸಿದಳು ವಸಂತ್ಯಕ್ಕ. ಆವಾಗೆಲ್ಲ 99 ಪರ್ಸೆಂಟ್, 99.9 ಪರ್ಸೆಂಟ್ ತೆಗೆದುಕೊಳ್ಳುವ ಸಾಧ್ಯತೆಯೇ ಇರಲಿಲ್ಲ. ಶಿಕ್ಷಣದ

ಚೌಕಟ್ಟೇ ಬೇರೆ ರೀತಿ ಇತ್ತು. ತುಂಬಾ ಕಟ್ಟುನಿಟ್ಟಾದ ಮೌಲ್ಯಮಾಪನ. ಫಲಿತಾಂಶ ಇದ್ದದ್ದೇ ಫಸ್ಟ್, ಸೆಕೆಂಡ್ ಮತ್ತು ಥರ್ಡ್ ಕ್ಲಾಸ್ ಅಂತ. ಎಷ್ಟು ಪರ್ಸೆಂಟ್ ಎಂಬುದಕ್ಕಿಂತ ಯಾವ ಕ್ಲಾಸ್ ಎಂಬುದೇ ಪ್ರಶ್ನೆ. ವಸಂತ್ಯಕ್ಕನಿಗೆ ಬಿ.ಕಾಮ್ ನಲ್ಲಿ ಫಸ್ಟ್ ಕ್ಲಾಸಿಗೆ ಒಂದು ಗೇಣು ಕಡಿಮೆಯಾಯ್ತು. ಆಗ ನಮ್ಮ ಸಂಬಂಧಿ ನಿವೃತ್ತ ಹೈಸ್ಕೂಲ್ ಹೆಡ್ಮಾಸ್ತರೊಬ್ಬರು ನಮ್ಮ ಮನೆಗೆ ಬಂದವರು, ಅವಳ ರಿಸಲ್ಟ್ ಕೇಳಿ ಹೆಮ್ಮೆಯಿಂದ 'ಬಿ. ಕಾಮ್ ನಲ್ಲಿ ಹೈ ಸೆಕೆಂಡ್ ಕ್ಲಾಸ್ ಎಂದರೇನು! ಇಟ್ ಈಸ್ ಎ ಮ್ಯಾಟರ್ ಆಫ್ ಮೆರಿಟ್' ಎಂದದ್ದು ಇನ್ನೂ ನನ್ನ ತಲೆಯಲ್ಲಿ ಭದ್ರವಾಗಿ ಕುಳಿತಿದೆ. ನಾನಿನ್ನೂ ಆಗ ಹೈಸ್ಕೂಲಿನಲ್ಲಿದ್ದೆ. 'ಸುಮ್ಮನೆ ಹೇಳುವುದಿಲ್ಲ, ನಮ್ಮ ವಸಂತಿ ಕೆಲಸದಲ್ಲಿ ಕಟ್ಟಾಣಿ, ಕಲಿಯುದರಲ್ಲೂ ಅಡ್ಡಿಲ್ಲೆ' ಎಂದು ಅಮ್ಮನ ಅಪರೂಪದ ಸರ್ಟಿಫಿಕೇಟ್ ಪಡೆದಳು. ಅವಳ ಮದುವೆಯಾಗಿ ಗಂಡನ ಮನೆಗೆ ಕಳಿಸಿದ ಆ ಸಂಜೆ ಎಲ್ಲ ಬೇಜಾರಿನಲ್ಲಿ ಮಾತಿಲ್ಲದೆ ಸುಮ್ಮನೆ ಕುಳಿತಿದ್ದೆವು. ವಿಷಣ್ಣ ಇದ್ದ ಅಮ್ಮ ಮೆಲ್ಲನೆ 'ಮನೆಯೆಲ್ಲ ಖಾಲಿ ಖಾಲಿ. ವಸಂತಿನ್ ಕಳ್ಸಿದ್ದ್ ನನ್ನ್ ಬಲಗೈಯೇ ಹೋದ್ಹಾಂಗಿತ್' ಎಂದು ಗಂಟಲುಕಟ್ಟಿ ನುಡಿದಳು. ಕೇಳಿ ನಮಗೆಲ್ಲ ಅಳು. ಇವತ್ತಿಗೂ ಬೇಸಗೆಯಲ್ಲಿ ನಾವೆಲ್ಲ 'ಸಾಕಪ್ಪಾ' ಎಂದು ನಿಲ್ಲಿಸಿ ಬಿಟ್ಟ ಹಪ್ಪಳ ಸೆಂಡಿಗೆಯ ಸಂಭ್ರಮವನ್ನೂ ಈಗಲೂ ಬಿಡದೆ ತನ್ನ ಕೈಲಾದಷ್ಟು ಮಾಡಿ ಸುಖವಾಗಿ ದಣಿಯುತ್ತ ಅನುಭವಿಸುತ್ತಾಳೆ. ರಜೆಗೆ ಬರುವ ಅವಳ ಮಕ್ಕಳು ನಯನಾ ಮತ್ತು ಪಲ್ಲವಿಯರೂ ಅವಳ ಜೊತೆ ಕೈ ಜೋಡಿಸುತ್ತಾರೆ. ಅವರೂ ಅದನ್ನು ತಮ್ಮ ಮನೆಯಲ್ಲಿ ಪ್ರತೀವರ್ಷ ಮಾಡುತ್ತ ಮುಂದರಿಸಿಕೊಂಡು ಹೋಗುತ್ತಿದ್ದಾರೆ. ಅಮ್ಮನನ್ನು ನೆನೆಯುವ ಪರಿ ಇದೂ ಒಂದು ಎಂದು ಅವಳು ಹೇಳುವಾಗ ನಮಗೂ ಹೌದಲ್ಲ ಅನಿಸುತ್ತದೆ. ಅಮ್ಮನ ಬಗ್ಗೆ ಅತೀವ ಮಮತೆ, ಮಾರ್ದವತೆ ಅವಳಿಗೆ. ನಮ್ಮ ತಾಯಿ ತೀರಿಕೊಳ್ಳುವ ಕೆಲಸಮಯದ ಮುಂಚೆ ಅವಳು ಬರೆದ 'ನನ್ನ ಅಮ್ಮನ ಸೀರೆ' ಕವಿತೆ ಓದುವಾಗ ಇಂದಿಗೂ ನನ್ನ ಕಣ್ಣು ಒದ್ದೆಯಾಗುತ್ತದೆ.

ಇನ್ನು ವೈದೇಹಿ– ಒಂದು ಅನಿವಾರ್ಯ ಸಂದರ್ಭದಲ್ಲಿ 'ಜಾನಕೀ ಹೆಬ್ಬಾರ್' ಹೋಗಿ 'ವೈದೇಹಿ' ಆದ ವಿಚಾರ ಈಗಾಗಲೇ ಎಲ್ಲರಿಗೂ ತಿಳಿದಿದೆ ಅಂದುಕೊಳ್ಳುವೆ. ಅಲ್ಲಿಂದ ಸುರುವಾಯ್ತು ಅವಳ ವ್ಯಕ್ತಿತ್ವದ ಇನ್ನೊಂದು ಆಯಾಮ. ಆಗಿನ ನಮ್ಮ ಬದುಕಿನ ಸಂಕೀರ್ಣ ಸನ್ನಿವೇಶಗಳು, ಕ್ಲೀಷೆಗಳು, ಕೋಮಲ ಅನಿಸಿಕೆಗಳು, ಗಡಸು ಪಾತ್ರಗಳು, ಸೂಕ್ಷ್ಮ ಸಂವೇದನೆಗಳು, ಶೋಷಿತರು ಎಲ್ಲರೂ ಎಲ್ಲವೂ ಅವಳ ತೀವ್ರ ಗ್ರಹಿಕೆಗೆ ಒಳಗಾಗಿ ಮನಸ್ಸಿನ ಆಳದಲ್ಲಿಳಿದು ಸೆರೆಯಾಗಿ ಸೃಜನಶೀಲ ಬರವಣಿಗೆಯಲ್ಲಿ ಬಿಡುಗಡೆಗೊಂಡವು. ಒಂದೇ, ಎರಡೇ, ನಮಗೆಲ್ಲ ತೀರಾ ಸಾಮಾನ್ಯವಾಗಿ ಕಂಡದ್ದು ಅವಳಿಗೆ ಮಾನವೀಯ ಸಂಬಂಧಗಳ ಮೂಲಭೂತ ಅಸ್ತಿತ್ವಗಳ ಹೋರಾಟವಾಗಿ ಕಂಡಿತ್ತು. ಸಾಮಾನ್ಯರಲ್ಲಿ ಸಾಮಾನ್ಯರಲ್ಲೂ ನಡೆಯುವ ಸುಖದುಃಖ ದುಗುಡ ದುಮ್ಮಾನಗಳ ಮನೋವ್ಯಾಪಾರವನ್ನು ಪದರಪದರವಾಗಿ ಗುರುತಿಸಿ ಒಳದೃಷ್ಟಿಯಿಂದ ವಿಶ್ಲೇಷಿಸುವಲ್ಲಿ

ಅನ್ಯಾದೃಶ ತಾದಾತ್ಮ್ಯ ಅವಳಿಗೆ ಸಿದ್ಧಿಸಿತು. ನಾವೂ ಆ ಎಲ್ಲರನ್ನೂ ನೋಡಿದವರೇ, ನಮಗೂ ಇವರೆಲ್ಲ ನೆನಪಿರುವವರೇ, ಇದೆಲ್ಲವೂ ನಮಗೂ ಗೊತ್ತಿರುವಂಥದೇ. ಆದರೆ ಈ ಅನುಭವ ನಮಗೆ ಯಾಕೆ ಅಪೂರ್ವವಾಗಿ ಕಾಣಲಿಲ್ಲ? ಆ ಸಂದರ್ಭಗಳ ನೋವುನಲಿವುಗಳು ಇಷ್ಟು ಅನನ್ಯವಾಗಿ ಇನ್ನೊಬ್ಬರಿಗೆ ತಿಳಿಯಪಡಿಸುವಷ್ಟು ನಮ್ಮ ಸ್ಮೃತಿಯಲ್ಲಿ ಯಾಕೆ ಉಳಿಯಲಿಲ್ಲ?- ಎಂದು ನಮಗೆಲ್ಲ ಅಚ್ಚರಿಯಾಗುವಷ್ಟು ಅವಳು ಪಕ್ವ ಲೇಖಕಿಯಾದಳು.

ನಮ್ಮ ಹೊರಗೊಂದು ಜಗತ್ತಿದೆ, ಆ ಜಗತ್ತಿನಲ್ಲಿ ಬಂಧುಗಳಿದ್ದಾರೆ, ಮಿತ್ರರಿದ್ದಾರೆ, ಪರಿಚಿತ ವ್ಯಕ್ತಿಗಳಿದ್ದಾರೆ, ಅವರೆಲ್ಲರ ನೋವು ನಲಿವು ಒಲವು ಸಂಭ್ರಮ ನಮಗೂ ತಟ್ಟುತ್ತದೆ. ಸರೀ, ಅದರಿಂದಾಚೆಗೆ? ನಮಗೆ ಅದರ ಪರಿವೆ ಇಲ್ಲ ಆದರೆ ಅದರಿಂದಾಚೆಗೆ ವೈದೇಹಿಯ ಭಾವನಾಲೋಕ ಕ್ರಿಯಾಶೀಲವಾಗುತ್ತದೆ. ಒಳಧ್ವನಿಯ ದ್ವಂದ್ವ ಸುರುವಾಗುತ್ತದೆ. ಹೃದಯ ಮಿಡಿಯುತ್ತದೆ. ನೆನಪುಗಳನ್ನು ಮೀಟುತ್ತದೆ. ಲೇಖನಿ ತೊಡಗುತ್ತದೆ. ಅರಿಯದಂತೆ ಬರುವ ಅರಿವು ಅದು. ಭಗವಂತ ಅವಳಿಗೆ ನೀಡಿದ ವರ!

ಮದುವೆಯಾಗಿ ಶಿವಮೊಗ್ಗಕ್ಕೆ ಹೋದ ಮೇಲೆ ಹೊಸ ವಾತಾವರಣ, ಹೊಸ ಪರಿಚಯಗಳ ಜೊತೆ ನಮ್ಮ ಭಾವಯ್ಯನ ಉತ್ತಮ ಸಾಹಚರ್ಯ ಮತ್ತು ಪ್ರೋತ್ಸಾಹದಿಂದ ವೈದೇಹಿಯ ಬರವಣಿಗೆ ಇನ್ನಷ್ಟು ಶಕ್ತಿ ಪಡೆಯಿತು ಎನ್ನಬೇಕು. ತುಂಬಿದ ಮನೆಯ ಹಿರಿಯ ಸೊಸೆ. ಒಳಗೂ ಹೊರಗೂ ಏಕಪ್ರಕಾರವಾಗಿ ದುಡಿಮೆ ಹಾಗೂ ಸಾಧನೆ ಮಾಡಿ ಅವಳು ಮನ್ನಣೆ ಪಡೆದುಕೊಂಡದ್ದು ದೊಡ್ಡ ಸಾಹಸವೇ ಸರಿ. ಮುಂದೆ ಅವಳ ಜೀವನ ಅನೇಕ ಏರಿಳಿತಗಳಿಗೆ ಒಳಗಾಯಿತು. ಕಂಗೆಡುವ ಸಂದರ್ಭಗಳು ಎದುರಾದವು. ಆದರೆ ಹೊರಗಣ್ಣಿಗೆ ಕಾಣದಂತಹ ದಿಟ್ಟೆ ಆಕೆ, ಬರವಣಿಗೆಯನ್ನೇ ತೆಪ್ಪವನ್ನಾಗಿ ಮಾಡಿಕೊಂಡು ಮೌನವಾಗಿ ಆ ದುರ್ಗಮ ಅಲೆಗಳನ್ನು ದಾಟಲು ಯತ್ನಿಸಿದಳು ಎಂಬುದು ಈಗ ನಮ್ಮ ಕಣ್ಣಿಗೆ ಗೋಚರಿಸುತ್ತಿದೆ.

ಉಡುಪಿಗೆ ಬಂದ ಮೇಲೆ ಹಂತಹಂತವಾಗಿ ನನ್ನಕ್ಕ ಒಬ್ಬ ಶ್ರೇಷ್ಠ ಲೇಖಕಿಯಾಗಿ ಬೆಳೆದಳು. ಸಾಹಿತ್ಯಿಕ ವಲಯದಲ್ಲಿ ಅವಳ ಕೃತಿಗಳು ಗುರುತಿಸಲ್ಪಟ್ಟವು. ಗೌರವಿಸಲ್ಪಟ್ಟವು. ಆದರೆ ಅಂದಿನಿಂದ ಇದುವರೆಗೂ ತಪ್ಪಿಯೂ ಯಾವುದೇ ಪ್ರಶಸ್ತಿಗೂ ಆಸೆ ಪಡದೆ ತಾನಾಯಿತು, ತನ್ನ ದೈನಂದಿನ ಆಗುಹೋಗುಗಳಾಯಿತು, ತನ್ನ ಬರವಣಿಗೆಯಾಯಿತು ಎಂದು ಇರುವವಳು ನನ್ನಕ್ಕ ವೈದೇಹಿ. ಪ್ರತೀ ಸಲ ಯಾವುದೇ ಪ್ರಶಸ್ತಿ ಪುರಸ್ಕಾರ ಬಂದಾಗಲೂ ಅವಳನ್ನು ಸಂಕೋಚ ಆವರಿಸುತ್ತದೆ. ಆದರೆ ಅವಳ ಪರವಾಗಿ ಸಂತೋಷ ಪಡುವವರು ನಾವು, ಆ ಭಾಗ್ಯ ನಮ್ಮದು. ಅವಳಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಬಂದಾಗ ಇಲ್ಲೇ ಬೆಂಗಳೂರಿನಲ್ಲಿ ನನ್ನ ತಮ್ಮ ರಾಘವೇಂದ್ರ ಹೆಬ್ಬಾರ್ ತನ್ನ ಮನೆಯಲ್ಲಿ ಒಂದು ಸಂತೋಷಕೂಟ ಏರ್ಪಡಿಸಿದ್ದ. ಮನೆಮಂದಿಯಾದಿಯಾಗಿ ಎಲ್ಲ

ಬಂಧುಬಳಗ ಸ್ನೇಹಿತರು ಸೇರಿ ಹರಸಿದ ಸಂಭ್ರಮಿಸಿದ ಸ್ಮರಣೀಯ ಸಮಾರಂಭವದು. ಆದರೆ ಅವಳಿಗೋ ಹೇಳತೀರದ ಸಂಕೋಚ, ಮುಜುಗರ!

ಇನ್ನು, ಅಕ್ಕನಾಗಿ ವಸಂತ್ಯಕ್ಕ, ಅಕ್ಕ ಎಂದರೆ ಅಕ್ಷರಶಃ ಅಕ್ಕರೆಯ ಅಕ್ಕ. ನಮ್ಮೆಲ್ಲರ ನಲಿವು ಅವಳಿಗೆ ಹಿಗ್ಗು. ನಮ್ಮ ಕಷ್ಟ ಅವಳದೇ ಕಷ್ಟ. ತನ್ನದೇ ನೂರೆಂಟು ತಾಪತ್ರಯಗಳ ನಡುವೆಯೂ ನಮ್ಮದೇನಾದರೂ ಸಂಕಷ್ಟ ಕಿವಿಗೆ ಬಿತ್ತೆಂದರೆ ತಕ್ಷಣ ಸಂಪರ್ಕಿಸಿ ಕೇಳಿ, ಏನಾಯಿತು, ತನ್ನಿಂದ ಏನು ಮಾಡಲು ಸಾಧ್ಯ ಎಂದು ಚಿಂತಿಸುವಳು. 'ನನಗೆ ಅರ್ಜೆಂಟಾಗಿ ಇಂಥ ಒಂದು ಆಗಬೇಕಿತ್ತಲ್ಲ ವಸಂತ್ಯಕ್ಕ, ಅಲ್ಲಿಗೆ ಬರುವುದರೊಳಗೆ ಎಲ್ಲ ವಿಚಾರಿಸಿಡಲು ಸಾಧ್ಯವಾ?' ಎಂದು ಕೇಳಿದರೆ ಸಾಕು. ಶತಾಯ ಗತಾಯ ಅವಳು ಅದನ್ನು ಮಾಡುವವಳೇ. ಜೀವಕ್ಕೆ ಸುಸ್ತಾದರೂ ಅದನ್ನು ಮೀರಿ ನೆರವಾಗುವ ಎದೆಗಾರ್ತಿ.

ನನ್ನ ಮೊದಲ ಮಗಳ ಮದುವೆಯ ಸಂದರ್ಭದಲ್ಲಿ ಅನುಭವವಿಲ್ಲದೆ ನಾನು ಧೈರ್ಯಗೆಡಬಾರದೆಂದು ನನಗೆ ಬೆಂಬಲವಾಗಿ ಎರಡು ದಿನ ಮೊದಲೇ ಬಂದು ನನ್ನ ಜೊತೆಬಿಡದೆ ಎಲ್ಲಾ ತಯಾರಿಯಲ್ಲಿ ಸಹಾಯ ಮಾಡಿದಳು. ಮದುವೆ ಮುಗಿಸಿ ಮನೆಗೆ ವಾಪಾಸು ಬಂದ ಮೇಲೆ ಹುಡುಗಿಯನ್ನು ಕಳಿಸಿಕೊಟ್ಟ ತಳಮಳದಲ್ಲಿ ಏನೂ ತೋಚದಂತಿದ್ದ ನನಗೆ ಮನೆಯನ್ನು ಯಥಾಸ್ಥಿತಿಗೆ ತಂದು ತಂಪೆರೆದದ್ದು ಮರೆಯುವ ಹಾಗೆಯೇ ಇಲ್ಲ.

ನಮ್ಮ ಭಾವಯ್ಯನ ಕಡೆಯವರು, ಒಡಹುಟ್ಟಿದವರು ನಾವು ಯಾರೇ ಮನೆಗೆ ಹೋದರೂ ಪ್ರಶಸ್ತವಾದ ಆದರಾತಿಥ್ಯ ಅವಳದು. ನಮಗಿಷ್ಟವೆಂದು ಕಷ್ಟಬಿದ್ದು ಯಾವ ತಿಂಡಿಯನ್ನೂ ಯಾವುದೋ ಮಾಯದಲ್ಲಿ ಮಾಡಿಬಿಡುತ್ತಾಳೆ. ಯಾವುದೋ ಸುಲಭದ ವಿಧಾನವನ್ನೂ ತಾನೇ ಕಂಡುಕೊಂಡು ನಮಗೂ ಹೇಳಿಕೊಡುತ್ತಾಳೆ. ನಮ್ಮ ಮೂರ್ತಿ ಭಾವಯ್ಯನೋ ಅವಳಿಗೆ ಎಲ್ಲ ರೀತಿಯಲ್ಲೂ ಸಹಕರಿಸುವ ಪಕ್ಕಾ ಸಂಗಾತಿ, ಮನೆಯಲ್ಲಿನ ಸೌಹಾರ್ದಮಯ ವಾತಾವರಣದಿಂದಾಗಿಯೇ ನಮ್ಮಕ್ಕ ಬರೆಯಲು ಸಾಧ್ಯವಾಗಿದ್ದು. ತಿಳಿಮನಸ್ಸಿನ ಹಗುರಹಾಸ್ಯದ ಸರಳಮಾತಿನ ವಸಂತ್ಯಕ್ಕನೇ ಬೇರೆ, ಗಂಭೀರ ಚಿಂತನೆಯ ವೈದೇಹಿಯೇ ಬೇರೆ ಎಂದು ಒಮ್ಮೊಮ್ಮೆ ವಿಸ್ಮಯವಾಗುವುದಿದೆ. ಆದರೆ ನಮ್ಮ ಒಡನಾಟದಲ್ಲಿರುವಾಗ ಇವತ್ತಿಗೂ ಅವಳು ಅದೇ ನಮ್ಮ ವಸಂತ್ಯಕ್ಕನೇ. ಅವಳೂ ನಾನೂ ಸೇರಿದೆವೆಂದರೆ ನಮ್ಮಿಬ್ಬರ ಮಾತಿನ ಝಗಮಗ, ಛಕಛಕ ಬಾಣ ಪ್ರತಿಬಾಣ, ವಾಚಾಳಿ ಭಾಷೆಗೆ ಸುರುಳಿ ನಗುವಿನ ಹೊಯ್ಲಿಗೆ ಲಂಗುಲಗಾಮಿಲ್ಲ. ಕೇಳುತ್ತ ಸುತ್ತ ಹಬ್ಬದಂತೆ ಆನಂದಿಸುವ ಉಳಿದವರು. ನನ್ನನ್ನು ನೋಡಿದಾಗಲೆಲ್ಲಾ 'ಬರೆ ಸೀತಾ, ನಿನ್ನಲ್ಲಿ ಆ ಶಕ್ತಿ ಇದೆ' ಎಂದು ಎಷ್ಟು ಸಲ ಹೇಳುವಳೋ. 'ಸುಮ್ಮನಿರು ಮಾರಾಯ್ತಿ, ನನ್ನಷ್ಟಕ್ಕೆ ನಾನು ಉಂಡು ತಿಂದು ಆರಾಮಾಗಿದ್ದೇನೆ. ನನಗಿಂತ ಮುಂಚೆ ನನ್ನದೇ ಹೆಸರಿಟ್ಟುಕೊಂಡು ಯಾಕೆ ಹುಟ್ಟಿದೆ ಮತ್ತೆ? ಅದಕ್ಕೆ ನೀನೇ ಬರೆ. ಹೆಚ್ಚು ರಗಳೆ ಮಾಡಿದರೆ ಇದುವರೆಗೆ

ನೀನು ಬರೆದದ್ದೆಲ್ಲ ನಾನೇ ಹೇಳಿಕೊಟ್ಟದ್ದು ಎಂದು ಜಗತ್ತಿಗೆ ಸಾರಿ ಬಿಡುತ್ತೇನೆ. ಹುಶಾರ್' ಅಂತಂದು ಹೆದರಿಸಿದ್ದೇನೆ. (ಅಬ್ಬ ಹೆದರುವ ಪೈಕಿಯೆ ಅವಳು?!)

ಎಪ್ಪತ್ತೈದರ ಅಂಚು ತಲುಪಿರುವ ವಸಂತ್ಯಕ್ಕನಿಗೆ ನನ್ನ ಪ್ರೀತಿಯ ಬೆಚ್ಚನೆಯ ಹಾರೈಕೆ. ಆರೋಗ್ಯಪೂರ್ಣ ಸುಖೀ ದೀರ್ಘಾಯುಶ್ಯ ನಿನ್ನದಾಗಲಿ. ದಾಂಪತ್ಯದ ಸುವರ್ಣವರ್ಷ ಕಳೆದ ನಿಮ್ಮಿಬ್ಬರ ಬದುಕಿಗೆ, ನಿನ್ನ ಬರೆಯುವ ಕೈಗೆ ದಣಿವು ಬಾರದಿರಲಿ. ಚಿಂತನಶೀಲತೆ ನಿರಂತರವಾಗಲಿ. ನಮಗೂ ಜತೆಗಿದ್ದು ಸಂತೋಷಿಸುವ ಭಾಗ್ಯವಿರಲಿ!



# ನನ್ನ ವಸಂತ್ಯಕ್ಕ

✦ ಪ್ರೇಮಲತಾ ಸೋಮಯಾಜಿ(ಕೊನೆಯ ತಂಗಿ)

ನಿಮ್ಮೆಲ್ಲರ ಅತಿಪರಿಚಿತ ಸಾಹಿತಿ ವೈದೇಹಿ, ನನಗೆ–ಪ್ರೀತಿಯ ವಸಂತ್ಯಕ್ಕ. ಕುಂದಾಪುರದಲ್ಲಿ ತುಂಬು ಕುಟುಂಬದ ಮನೆಯಲ್ಲಿ ನಾವು ಒಟ್ಟಿಗೇ ಒಡನಾಡಿ ಬೆಳೆದವರು. ಆ ಮನೆಯಲ್ಲಿ ಸಾಹಿತ್ಯ, ಸಂಗೀತ, ಭಜನೆ, ನಾಟಕ, ನೃತ್ಯ ಇವುಗಳೆಲ್ಲದರ ನಡುವೆಯೇ ಅಡುಗೆಮನೆಯ ಕೆಲಸ, ನಮ್ಮ ಅಕ್ಕ ತಂಗಿಯರ ಆಟ ಜಗಳಗಳೂ ಬಂಧುಮಿತ್ರರ ಬರಹೋಗುವಿಕೆಗಳೂ ನಮ್ಮಲ್ಲಿ ಒಂದು ಚಿಕ್ಕ ಜಗತ್ತನ್ನೇ ಸೃಷ್ಟಿ ಮಾಡಿದ್ದವು. ಹಟ್ಟಿಯ ಎಮ್ಮೆ ದನಗಳೂ, ನಾಯಿ ಬೆಕ್ಕುಗಳೂ ನಮ್ಮ ಜಗತ್ತಿನ ಅವಿಭಾಜ್ಯ ಅಂಗಗಳು. ಜೀವನ ಪ್ರೀತಿಯನ್ನೂ ಸವಾಲುಗಳನ್ನು ಎದುರಿಸುವ ತಾಕತ್ತನ್ನೂ ಕೊಟ್ಟ ಆಡುಂಬೊಲ ಆ ನಮ್ಮ ಮನೆ.

ಒಟ್ಟಿಗೇ ಆಡಿ ಬೆಳೆದ ನಮ್ಮೆಲ್ಲರ ನಡುವೆಯೇ ಈ ವಸಂತ್ಯಕ್ಕ (ವೈದೇಹಿ) ಬೇರೇಯೇ ಆಗಿ, ಭಾವನಾ ಪ್ರಪಂಚದ ಅನುಭಾವಿಯಾಗಿ ಬೆಳೆದದ್ದು ನಮಗೆ ಅರಿವಾಗಲೇ ಇಲ್ಲ. (ಅವಳು ಇರುವ ರೀತಿಯೂ ಹಾಗೆಯೇ ಬಿಡಿ. ಎಲ್ಲಿಯೂ ಅಂಥ ಪೋಸು ಕೊಡುವವಳಲ್ಲ). ನಮ್ಮ ಸುತ್ತಮುತ್ತವೇ ಬಂದು ಹೋಗುವವರ ನೆಂಟರಿಷ್ಟರ ಆಳುಕಾಳುಗಳ ವ್ಯಕ್ತಿತ್ವಗಳು ಅವಳ ಕತೆಗಳ ಪಾತ್ರಗಳಾಗಿ ಬೆಳೆದದ್ದು, ಮಿಂಚಿದ್ದು, ಹೆಸರಾದದ್ದು ಎಲ್ಲವೂ ನಮ್ಮ ಬೆರಗಿನ ಸೀಮೆಯನ್ನೇ ದಾಟಿಸಿಬಿಟ್ಟವು. ಎಷ್ಟು ವಿಚಿತ್ರವೆಂದರೆ ಅವಳ ಕತೆಗಳ ಪಾತ್ರಧಾರಿಗಳಾದ ಅಕ್ಕುವಾಗಲೀ ಸೀತು, ಚಂದು, ಶೀನರಾಗಲೀ – ಎಲ್ಲರನ್ನೂ ನಾವು ಕೂಡ ಹತ್ತಿರದಿಂದ ಕಂಡವರೇ. ಆ ಮನೆಯ ತಳಿಕಂಡಿ, ಚಾವಡಿ, ಪಡಸಾಲೆ, ಉಪ್ಪರಿಗೆ, ದೇವರಕೋಣೆ ಅಡುಗೆಮನೆಯಲ್ಲಿ ನಾವೂ ಎಲ್ಲ ಪಟ್ಟಾಂಗ ಹೊಡೆದವರೇ. ಜಗಲಿಯಲ್ಲಿ ಪಗಡೆ, ಗಜ್ಜುಗ, ಚನ್ನೆಮಣೆ, ಅಂಗಳದಲ್ಲಿ ವಿಷಾಮೃತ, ಮೈಫೋಲಿ ಫಿರ್‌ಫೋಲಿ, 'L- O- N- D- O- N – ಲಣ್‌ಣ್‌ಣ್‌ಣ್‌ಡನ್', 'ಕೋಟೆಯಲ್ಲಿ ದನ ಉಂಟಾ?' ಎಂಬ ದನಹುಲಿ ಆಟ, ಆಡಿದವರೇ. ಕರುವೊಂದು ಬಾಲ ಎತ್ತಿ ಕಿವಿ ನಿಮಿರಿಸಿಕೊಂಡು ಓಡುತ್ತಿರುವಾಗ ಅದರ ಹಿಂದೆಯೇ ಓಡುತ್ತ ಕೇಕೆ ಹಾಕಿ ನಕ್ಕು, ಆಡಿ, ಅದನ್ನು ಅದರಮ್ಮನ ಹಾಲು ಕುಡಿಯಲು ಬಿಟ್ಟು ಚಂದ ಕಂಡವರೇ, ಬೈಸಿಕೊಂಡವರೇ. ಆದರೆ ಆ

ಎ...ಲ್ಲ...ವನ್ನೂ ನಮ್ಮ ಮರೆವಿನ ನೇಪಥ್ಯಕ್ಕೆ ಸರಿಸಿಬಿಟ್ಟು, ಬದುಕಿನ ಗೊಂದಲ, ಗೋಜಲುಗಳಿಗೆ ಮುಖವಾದವರು ನಾವೆಲ್ಲ. ಆದರೆ ಈ 'ಜಗಜಟ್ಟಿ' ವಸಂತ್ಯಕ್ಕ ತನಗೆದುರಾದ ಬಿರುಗಾಳಿ ಸುಳಿಗಾಳಿಗೆ ಸಡ್ಡುಹೊಡೆದು, ಭಾವನಾ ಪ್ರಪಂಚದ ನೆನಪುಗಳ ಸಿಹಿಬುತ್ತಿಯನ್ನು ನಮಗೆ ಉಣಬಡಿಸಿದಾಗ, ವಾಹ್! ಎಷ್ಟು ಸುಂದರ ನಮ್ಮ ಬಾಲ್ಯ! ಈಗಿನ ಜೀವನ ಕೂಡಾ ಅಂಥಾ ಅಸಹನೀಯವೇನಲ್ಲ. ಅವಳ ಕತೆಗಳ ಪಾತ್ರಗಳ ಜೀವನದಷ್ಟು ದುಸ್ತರವೇನಿಲ್ಲ ಅಂತೆಲ್ಲ ಅನ್ನಿಸಿ ಜೀವನ ಪ್ರೀತಿಯನ್ನು ಪುನಃ ಪ್ರಜ್ವಲಿಸುವಂತೆ ಮಾಡಿದ್ದು ಸುಳ್ಳಲ್ಲ. ನಮ್ಮ ಭಜನೆಯ ಪದ್ಯ 'ತನು ನಿನ್ನದು, ಜೀವನ ನಿನ್ನದು. ಅನುದಿನದಲಿ ಬಹ ಸುಖದುಃಖ ನಿನ್ನದಯ್ಯಾ' ಅನ್ನುವ ಅಧ್ಯಾತ್ಮವನ್ನು ನೆನಪಿಸಿದ್ದೂ ಸತ್ಯಸ್ಯ ಸತ್ಯ.

ನನ್ನ ವಸಂತ್ಯಕ್ಕ ಪ್ರೀತಿ ಹಂಚುವ ವಿರಳರಲ್ಲಿ ಒಬ್ಬಳು. ತನ್ನ ಮಕ್ಕಳಿಗೂ ಪ್ರೀತಿ ಮಾಡುವುದನ್ನೇ ಕಲಿಸಿದವಳು. ಕಷ್ಟದಲ್ಲಿರುವವರ ಬಗ್ಗೆ ಅವಳ ಕರುಳು ಮಿಡಿಯುವ ಬಗೆ ನೋಡಬೇಕು. ಇನ್ನೊಬ್ಬರ ಕಷ್ಟ ಕಳೆಯಲು ತನ್ನಿಂದ ಏನೆಲ್ಲ ಸಾಧ್ಯವೋ ಅವನ್ನು ಒಂಚೂರೂ ಕೊರೆ ಇಲ್ಲದಂತೆ ಮಾಡುವಳು. ಯಾವ ರೀತಿ ಅವರ ಮುಖದಲ್ಲಿ ನಗು ತರಿಸಲಿ ಎಂದು ಚಿಂತಿಸುತ್ತಿರುವವಳು. ಅದೇ, ತೀರಾ ಅನ್ಯಾಯ ಕಂಡಳೆಂದರೆ ಉರಿವ ಅಗ್ನಿ. ಎಲ್ಲಾದರೂ 'ಬರೀ ಮುಖವಾಡ'ದ ದರ್ಶನ ಸುಸ್ಪಷ್ಟ ಆಗಿಬಿಟ್ಟಿತೋ, ದುಃಖಿತಳಾಗುವಳು. ಅವಳು ಮೌನಿಯಾದಳೆಂದರೆ ಒಂದೋ ತೀವ್ರ ದುಃಖವಾಗಿದೆ ಇಲ್ಲ, ಆಳ ನೋವಾಗಿದೆ ಅಂತಲೇ. ನಾವೆಲ್ಲಾದರೂ ಉದಾಸೀನ, ಅಹಂ ತೋರಿಸಿದೆವೆಂದರೆ ಸಾತ್ವಿಕ ಕೋಪ ತೋರಿಸಿಯೇ ಶುದ್ಧ ಅವಳು. ಸ್ವತಃ ತನ್ನ ಜೀವನವನ್ನು ಅವಳು ನಿಭಾಯಿಸಿದ ರೀತಿಯನ್ನು ಬಹಳ ಹತ್ತಿರದಿಂದ ಕಂಡವಳು ನಾನು. ಅವಳಿಗೆ ಸಮಯದಲ್ಲಿ ಒದಗಿ ಬರುವ ದೇವತಾ ಅನುಗ್ರಹವನ್ನೂ ಸಹ. ಆ ಬೆರಗನ್ನೆಲ್ಲ ಹೇಳಬೇಕು ಅಂತ ಅನಿಸುತ್ತಿದೆ. ಆದರೆ ಹೇಳಹೋದರೆ ಅವಳೇ ಗದರಿಸಿಯಾಳು.

ಅವಳ ಸಾಹಿತ್ಯದ ಕಾವ್ಯ ನಾಟಕಗಳ ವಿಶೇಷತೆಯನ್ನು 'ತಿಳಿಸಾರಿ'ನ ರುಚಿಯನ್ನೂ ತಿಳಿದ ನಿಮಗೆ ಅವಳ ಕೆಲವು 'ರಸಪಾಕ' ಗಳ ಅರಿವಿಲ್ಲವೇನೋ. ಅಕ್ಕಿರೊಟ್ಟಿ, ಶ್ಯಾವಿಗೆ, ಮಲೆನಾಡಿಗೆ ಮದುವೆಯಾಗಿ ಹೋದಮೇಲೆ ಅಲ್ಲಿನ ಓಡಪ್ಪೆ ಇತ್ಯಾದಿ ತಿಂಡಿಗಳನ್ನು ಅವಳು ಮಾಡಬೇಕು, ನಾವು ತಿನ್ನಬೇಕು. ಫ್ರೈಡ್‌ರೈಸ್ ಅನ್ನು ನೀನು ಮಾಡಬೇಡ, ವಸಂತಿ ದೊಡ್ಡಮ್ಮನ ಕೈರುಚಿಯಲ್ಲೇ ಇರಲಿ ಎನ್ನುತ್ತಾರೆ ನನ್ನ ಮಕ್ಕಳು. ಆದರೆ ಇದನ್ನು ಅವಳ ಬಳಿ ಹೇಳುವೆನೆ, ಅವಳು ನನ್ನ ತಿಂಡಿಗಳನ್ನು ನೆನೆದು ಹೊಗಳುವವಳು!

ಕುಟುಂಬದ ಯಾವ ಸಮಾರಂಭಗಳಿಗೆ ಹೋಗುವುದಾದರೂ ನಾನೂ ಅವಳೂ ಜೋಡಿ. ಅಮ್ಮನನ್ನು ಕಳಕೊಂಡ ನಂತರ ತಾಯಿ ಮಮತೆಯ ಇವಳೇ ನನಗೆ ದ್ವಿತೀಯ ಅಮ್ಮ. ನನ್ನ ಮಕ್ಕಳಿಗಂತೂ ಅವಳು ಒಲವಿನ 'ದೊಡ್ಡ' ಅಮ್ಮ. ನನ್ನ ಮಗಳು ಹುಟ್ಟಿದಾಗ 'ಚಂದ್ರನ ಚೂರಿನಂತಿದೆ' ಎಂದು ಕಾವ್ಯಮಯವಾಗಿ ಆನಂದಿಸಿ, ನನ್ನ ಸಂತೋಷದ

ಮಿತಿಯನ್ನು ಮೀರಿಸಿದವಳು. ಆಸ್ಪತ್ರೆಯಲ್ಲಿ ಆ ಹತ್ತೂದಿನ ರಾತ್ರಿಯಿಡೀ ನನ್ನ ಜೊತೆ ಇದ್ದವಳು. 'ಜಾಗರದ ಒಂದು ರಾತ್ರಿ' ಎಂದೊಂದು ಬರಹ ಇದೆ ಅವಳ 'ಮಲ್ಲಿನಾಥನ ಧ್ಯಾನ' ಕೃತಿಯಲ್ಲಿ. ಅದನ್ನು ಬರೆದದ್ದು ನನ್ನ ಮಗುವಿನ ಕುರಿತೇ, ಆ ಹತ್ತು ರಾತ್ರಿಗಳಲ್ಲಿ ಒಂದು ರಾತ್ರಿ, ಅದು ಮಲಗಿದ ಹೊತ್ತಲ್ಲಿ. ಆ ಮೇಲೆ ನನಗೆ ಅದನ್ನು ಓದಿ ಹೇಳಿದ್ದಳು. ನನ್ನ ಮಕ್ಕಳಿಗೆ ಕತೆ ಪದ್ಯ ನಾಟಕಗಳನ್ನೆಲ್ಲ ಓದಿ ಹೇಳುತ್ತಾ ಅವರೊಳಗೆ ಸಾಹಿತ್ಯ ಪ್ರೀತಿಯನ್ನು ಬೆಳೆಸಿದ್ದು ಈಕೆಯೇ.

ಹಾಡಲು ಕುಳಿತಳೆಂದರೆ ತದೇಕ ಧ್ಯಾನದಿಂದ ಹೃದಯ ಮುಟ್ಟುವಂತೆ ಹಾಡುತಿದ್ದವಳು ನನ್ನ ವಸಂತ್ಯಕ್ಕ. 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ। ನೀ ದೇಹದೊಳಗೋ ನಿನ್ನೊಳು ದೇಹವೋ ಹರಿಯೇ' ಹಾಡನ್ನು ಅವಳು ಕಣ್ತುಂಬಿ ಅನುಭವಿಸಿ ಹಾಡುವುದನ್ನು ನಾನು ಕಂಡವಳು ಕೇಳಿದವಳು. ಅವಳೊಂದಿಗೆ ದನಿಗೂಡಿಸುವ ಮಕ್ಕಳು ಮದುವೆಯಾಗಿ ಹೋದ ಮೇಲೆ ಯಾಕೋ ಅವಳು ಹಾಡುವುದನ್ನು ಕಡಿಮೆ ಮಾಡಿದಳು. ಕೇಳಿದರೆ ತಮಾಷೆಯಾಗಿ 'ಸ್ವರವೆಲ್ಲ ಒಳಹೋಯಿತು' ಎನ್ನುತ್ತಾಳೆ. ಮರೆತೆ, ವಸಂತ್ಯಕ್ಕ ಎಷ್ಟು ಗಂಭೀರಳೋ ಅಷ್ಟೇ ನಗಿಸುವವಳೂ. ಹಾಸ್ಯದಲ್ಲಿ ತನ್ನನ್ನೂ ಬಿಡದವಳು. ಜೀವನದ ಕಷ್ಟಗಳಿಗೆ ಅವಳಿಂದ ಆ ಸುಂದರ ಹಾಸ್ಯ ಮನೋವೃತ್ತಿಯನ್ನು ಕಸಿಯಲು ಸಾಧ್ಯವೇ ಆಗಿಲ್ಲ.

ನಮ್ಮ ಭಾವ, ಶ್ರೀನಿವಾಸ ಮೂರ್ತಿಯವರಂತೂ ಅತ್ಯಂತ ಒಳ್ಳೆಯವರು. ಸಭ್ಯ, ಆಪ್ತ ಮನೋಭಾವದವರು. ಅವಳಿಗೆ ಎಲ್ಲದರಲ್ಲಿಯೂ ಪೂರಕವಾಗಿರುವರೇ ಹೊರತು ದಬ್ಬಾಳಿಕೆ ಮಾಡುವವರೇ ಅಲ್ಲ. ಅವರಿಲ್ಲದೇ ಹೋಗಿದ್ದರೆ ತನ್ನ ಬರವಣಿಗೆ ಎಲ್ಲ ಯಾವತ್ತೋ ಮೂಲೆ ಸೇರುತಿತ್ತು ಅಂತ ವಸಂತ್ಯಕ್ಕನೇ ಹೇಳುತಿರುತ್ತಾಳೆ. ನಾವೆಲ್ಲ ಅಂದರೂ ಅಷ್ಟು ಪ್ರೀತಿ ಅವರಿಗೆ.

ಬದುಕೆಂಬುದು ಒಂದು ಉದ್ದಾನುದ್ದ ಪಯಣ. ಕಷ್ಟ ಸುಖಗಳಲ್ಲಿ ಏರು–ಪೇರಿನಲ್ಲಿ ನಾವೆಲ್ಲ ಕೈ ಕೈ ಹಿಡಿದೇ ಸಾಗಬೇಕು. ಇಲ್ಲಿ ಎಲ್ಲವೂ ಪರಸ್ಪರ. ಬಿದ್ದವರನ್ನು ಎತ್ತಿ, ನೊಂದವರ ಕಣ್ಣೊರಸಿ ಜತೆಜತೆಯಲ್ಲೇ ಎಲ್ಲರೂ ಒಂದಾಗಿ ಸಾಗೋಣ–ಎಂಬ ಅವಳ ಜೀವನತತ್ವ ನನಗಂತೂ ತುಂಬಾ ಪ್ರಿಯ. ಅದನ್ನವಳು ಯಾವ ಅಟಾಟೋಪವಿಲ್ಲದೆ ತನ್ನಷ್ಟಕ್ಕೆ ನಿಶ್ಶಬ್ದ ಸಾಧಿಸಿಕೊಂಡು ಬಂದವಳು. ಒಬ್ಬರನ್ನೊಬ್ಬರು ಬಯ್ದು, ಹಂಗಿಸಿ, ಮತಧರ್ಮಗಳ ಹೆಸರಲ್ಲಿ ಕಲಹ ನಡೆಸಿ, ಹೆಣ್ಣೆಂದರೆ ಆಟಿಕೆ ಎಂದು ಭಾವಿಸುವ, ಧನಮದ ಅಧಿಕಾರ ಮದ ಇತ್ಯಾದಿಗಳಿಂದ ಇತರರ ಬದುಕನ್ನು ದುರ್ಭರವಾಗಿಸುವವರ ಬಗ್ಗೆ ಅವಳಿಗೆ ಕಡುದುಃಖ, ಕಡುವಿಷಾದ. ಅವಳ 'ಕೈ ಕೈ ಹಿಡಿದು ಜತೆಯಲ್ಲೇ ಮುಂದೆ ಸಾಗುವ' ಜೀವನದ ಸರಳ ತತ್ವ ಎಂದಾದರೊಂದು ದಿನ ಸಾಕಾರ ಪಡೆದೀತೆ? ಪಡೆಯಲಿ ಎಂದು ನಾನು ಮನಃಪೂರ್ವಕ ಹಾರೈಸುತ್ತೇನೆ.



# ಅಂದಿಗೂ ಇಂದಿಗೂ ಅದೇ ವಸಂತ್ಯಕ್ಕ

✦ ಎ. ರಾಘವೇಂದ್ರ ಹೆಬ್ಬಾರ್(ತಮ್ಮ)

ಅಪ್ಪಯ್ಯನ ಪ್ರೀತಿಯ ಮಗಳು ಜಾನಕಿಯ ಅರ್ಥಾತ್ ವೈದೇಹಿಯ ಪ್ರೀತಿಯ ತಮ್ಮ ನಾನು, ರಾಘು. ಅಪ್ಪಯ್ಯ ಮಾತ್ರ ಅವಳನ್ನು ಜಾನಕೀ ಎಂದು ಕರೆಯುತಿದ್ದುದು ಹೊರತು ಒಳಮನೆಯಲ್ಲಿ ಎಲ್ಲರೂ ಅವಳನ್ನು ವಸಂತಿ ಎನ್ನುತಿದ್ದುದರಿಂದ ಅವಳು ನನಗೆ ವಸಂತ್ಯಕ್ಕ. ಕುಂದಾಪುರದ ಭಂಡಾರ್ಕಾರ್ಸ್ ಕಾಲೇಜಿನ ಪ್ರಥಮ ಬ್ಯಾಚಿನ ವಿದ್ಯಾರ್ಥಿನಿ ನಮ್ಮ ವಸಂತ್ಯಕ್ಕ. ನಮಗೆ ತಿಳಿದಂತೆ ಆಗಲೇ ಬರೆಯಲು ಆರಂಭಿಸಿದ್ದಳು. ಆಕೆಯೇ ವೈದೇಹಿ ಎಂದು ಹೆಚ್ಚಿನವರಿಗೆ ತಿಳಿದದ್ದು, ಆಕೆ ಮದುವೆಯಾದ ಮೇಲೆಯೇ. ಈ ಅರ್ಥದಲ್ಲಿ ವೈದೇಹಿ ಹುಟ್ಟಿದ್ದು ಮದುವೆಯ ನಂತರ.

1968ರಲ್ಲಿ ಅಕ್ಕ ಮದುವೆಯಾಗಿ ಶಿವಮೊಗ್ಗಕ್ಕೆ ತೆರಳಿದಳು. ನನಗಾಗ ಹತ್ತು ವರ್ಷ. ಅವಳ ಮದುವೆಯಲ್ಲಿ ಮುಂಡಾಸು ಕಟ್ಟಿ ಸರ ಹಾಕಿಕೊಂಡು ಲಾಜಾಹೋಮಕ್ಕಾಗಿ ಅಕ್ಕ ಭಾವನ ಬೊಗಸೆಗೆ ಅರಳು ಹೊಯ್ದುವ ನಾನೇ! 'ಪುಟ್ಟ ತಮ್ಮನ' ಆ ಫೋಟೋ ಈಗಲೂ ಅವರಿಗೆ ಬಹಳ ಇಷ್ಟವಂತೆ. ಎಷ್ಟೋ ಸಲ ಅಕ್ಕನನ್ನು ಹಬ್ಬ ಹರಿದಿನಗಳಿಗೆ ಗಂಡನ ಮನೆಯಿಂದ ಕರಕೊಂಡು ಬರಲು ನಾನು ಹೋಗುತಿದ್ದೆ. ಆ ಬಸ್ಸು, ಅದರಲ್ಲಿ ಬಾಲಕನಾದ ನಾನು, ಮಂಜಪ್ಪ ಎಂಬ ಡ್ರೈವರ್, ಆತ ಉದ್ದಕ್ಕೂ ಪ್ರೀತಿಯಿಂದ ಮಾತಾಡಿಸುತ್ತಿದ್ದುದು, (ಅಕ್ಕನ ಕುಶಾಲಿನ ಭಾಷೆಯಲ್ಲಿ 'ದೊಡ್ಡ ಯಜಮಾನ'ನಂತೆ) ಒಬ್ಬನೇ ಪಯಣಿಸುವ ಆ ಪಯಣ, ಮನದಲ್ಲಿ ತುಂಬಿರುತಿದ್ದ ಹಿಗ್ಗು; ಪಯಣದ ಕೊನೆಯಲ್ಲಿ ಇಳಿಯುವ ಮೊದಲೇ ಇಣುಕಿಣುಕಿ ನೋಡಿದರೆ ಬಸ್‌ಸ್ಟಾಂಡಿನಲ್ಲಿ ನನಗಾಗಿ ಕಾದು ನಿಂತಿರುವ ಅಕ್ಕ ಭಾವ– ಎಲ್ಲ ಈಗ ತಾನೇ ಕಳೆದಂತಿದೆ. ಅದನ್ನೆಲ್ಲ ಈಗ ನೆನೆದರೆ ನಮಗೆ ಅಚ್ಚರಿಯೂ ಆಗುತ್ತದೆ. ಆ ದಿನಗಳೇ ಹಾಗೆ, ಒಳ್ಳೆಯ ಹಾಗೂ ಧೈರ್ಯದ ದಿನಗಳು.

ಪ್ರತೀವರ್ಷ ನನಗೆ ರಜೆ ಸಿಕ್ಕಿದಾಗಲೂ ಶಿವಮೊಗ್ಗದ ಡಾ। ಶ್ಯಾಮಪ್ರಸಾದ ಮುಖರ್ಜಿ ರಸ್ತೆಯಲ್ಲಿದ್ದ ಅವರ ಮನೆಗೆ ಹೋಗುತಿದ್ದೆ. ಭಾವ, ಮಾವ ಶ್ರೀ ಕಾರ್ಗಡಿ ಲಕ್ಷ್ಮಣರಾಯರು

ಮತ್ತು ಅತ್ತೆ ಶ್ರೀಮತಿ ಸರಸ್ವತಿಯಮ್ಮ ತುಂಬ ಪ್ರೀತಿ ತೋರಿಸುತಿದ್ದರು. ಅವಳ ನಾದಿನಿಯರಾದ ಗೀತಾ, ತಾರಾ, ಮೈದುನ ರವಿ ನಾನು ಎಲ್ಲ ಹೆಚ್ಚು ಕಡಿಮೆ ಒಂದೇ ವಯಸ್ಸಿನವರು, ಚಿಕ್ಕವರು ಆಗ. ನಾವೆಲ್ಲ ಸೇರಿ ಆಟವಾಡುತ್ತ ರಜೆ ಕಳೆಯುತಿದ್ದೆವು. ಇಸ್ಪೀಟಿನ 'ನಾಟ್ ಎಟ್ ಹೋಂ' ಆಡಿದ್ದೇ ಹೆಚ್ಚು. ಅವರ ತಂದೆ ಶ್ರೀ ಲಕ್ಷ್ಮಣ್‌ರಾವ್ ಅವರು ನಡೆಸುತಿದ್ದ ದಿನಸಿ ಅಂಗಡಿಯ ವ್ಯಾಪಾರ ವಹಿವಾಟು ಅಂದು ಭಾರೀ ಜೋರಾಗಿತ್ತು. ಮನೆಯೆದುರಿಗೇ ಅವರ ದೊಡ್ಡ ಅಂಗಡಿ ಇತ್ತು. ಭಾವ ಕೂಡ ತಂದೆಯೊಡನೆ ಅಂಗಡಿಯ ಉಸ್ತುವಾರಿ ನೋಡಿಕೊಳ್ಳುತಿದ್ದರು. ದಿನಸಿ ಮೂಟೆಗಳೆಲ್ಲ ಹೆಚ್ಚಾಗಿ ಮನೆಯ ಉಗ್ರಾಣದಲ್ಲೇ ಇಟ್ಟುಕೊಂಡದ್ದರಿಂದ ಆಳುಗಳು ಸದಾ ಅಂಗಡಿಗೂ ಮನೆಗೂ ಓಡಾಡಿಕೊಂಡಿರುತಿದ್ದರು. ವಿಶಾಲವಾದ ಮನೆ, ಅಕ್ಕನ ಕೋಣೆ ಮಹಡಿಯ ಮೇಲೆ. ಅಲ್ಲಿನ ತಾರಸಿ, ಅಲ್ಲಿಂದ ಸೂರ್ಯಾಸ್ತವನ್ನು ತಪ್ಪದೇ ವೀಕ್ಷಿಸುತಿದ್ದ ನಮ್ಮಕ್ಕ ನಿಧಾನವಾಗಿ ವೈದೇಹಿಯಾಗಿ ಗಟ್ಟಿಗೊಂಡಳು. ಕುಂದಾಪುರದಲ್ಲಿದ್ದ ವೈದೇಹಿ ನನ್ನ ಪ್ರಕಾರ ಪ್ರಬುದ್ಧತೆಯನ್ನು ಪಡೆದದ್ದು ಶಿವಮೊಗ್ಗಕ್ಕೆ ತೆರಳಿ ಕುಂದಾಪುರದ ನೆನಪಿನ ಸುರುಳಿಯನ್ನು ಬಿಚ್ಚಲು ಸುರುಮಾಡಿದಾಗ.

ಅರ್ಥಶಾಸ್ತ್ರದಲ್ಲಿ ಎಮ್.ಎ. ಪದವೀಧರರು ನಮ್ಮ ಭಾವ. ಶಿವಮೊಗ್ಗದ ಜೇಸೀಸ್, ನಂತರ ಲಯನ್ಸ್ ಸಂಸ್ಥೆಗಳ ಸಕ್ರಿಯ ಸದಸ್ಯರಾಗಿದ್ದರು. ಅತ್ಯಂತ ದೊಡ್ಡ ಸ್ನೇಹಿತರ ಗುಂಪು ಅವರದು. ಎಲ್ಲ ಸದಭಿರುಚಿಯ ಗೆಳೆಯರು. ದೊಡ್ಡ ಸಂಗೀತಾಭಿಮಾನಿ. ವರ್ಷಂಪ್ರತಿ ನಡೆಯುತ್ತಿರುವ ಶ್ರೀ ವಿದ್ಯಾಗಣಪತಿ ಸೇವಾ ಸಂಘಕ್ಕೆ ಇವರ ಸಂಘಟನಾ ಪ್ರಭಾವದಿಂದ ಬಾರದ ಕಲಾವಿದರಿಲ್ಲ ಎನ್ನಬೇಕು. ಘಟಾನುಘಟಿ ಕಲಾವಿದರೆಲ್ಲ ಕಛೇರಿ ಕೊಡಲು ಶಿವಮೊಗ್ಗಕ್ಕೆ ಬಂದಾಗ ಭಾವನ ಮನೆಯಲ್ಲಿ ಆತಿಥ್ಯ ಇದ್ದೇ ಇರುತಿತ್ತು. ತರಂಗಿಣಿ ಎಂಬ ಸಂಗೀತ ಸಂಸ್ಥೆಯನ್ನು ಹುಟ್ಟು ಹಾಕುವಲ್ಲಿಯೂ ಅವರ ದೊಡ್ಡ ಪಾಲಿತ್ತು. ನಮ್ಮಂತೆ ಅವರದೂ ದೊಡ್ಡ ಕುಟುಂಬ. ಅವರ ಸೋದರ ಮಾವ, ಅತ್ತೆಯಂದಿರು ಅಪಾರ ಸಂಖ್ಯೆಯ ಕಸಿನ್ಸ್ ಮುಂತಾಗಿ ಕುಟುಂಬದಲ್ಲಿ ಎಲ್ಲರಿಗೂ ಆತ್ಮೀಯ ಅವರು. ವೈದೇಹಿಯ ಸಾಹಿತ್ಯಾಸಕ್ತಿಗೆ ತುಂಬು ಮನಸ್ಸಿನಿಂದ ಪ್ರೋತ್ಸಾಹ ನೀಡಿದವರು ನಮ್ಮ ಮೂರ್ತಿ ಭಾವ. ಇತ್ತೀಚೆಗಷ್ಟೇ ಅಕ್ಕ ಭಾವ ತಮ್ಮ ಮದುವೆಯ ಐವತ್ತನೇ ವರ್ಷದ ಸಂತಸವನ್ನು ಅತ್ಯಂತ ಸರಳವಾಗಿ ಆಚರಿಸಿಕೊಂಡರು.

1979 ರ ಏಪ್ರಿಲ್ ತಿಂಗಳಲ್ಲಿ ನಾನು ಕರ್ನಾಟಕ ಬ್ಯಾಂಕಿನಲ್ಲಿ ಕೆಲಸ ಸಿಕ್ಕಿ ಶಿವಮೊಗ್ಗ ಶಾಖೆಗೆ ಬಂದೆ. ಮೊದಲು ಪ್ರೊಬೇಶನರಿಯಾಗಿ ಇಪ್ಪತ್ತೊಂದು ದಿನ, ಆಮೇಲೆ ಅಲ್ಲಿಯೇ ನೇಮಕಗೊಂಡೆ. ನಾನು ಕೆಲಸ ಸಿಕ್ಕ ವಿಚಾರ ಹೇಳಿದಾಗ ವಸಂತ್ಯಕ್ಕನಿಗಾದ ಸಂತೋಷ ಅಷ್ಟಿಷ್ಟಲ್ಲ. ಅದೂ ಶಿವಮೊಗ್ಗದಲ್ಲೇ ಅಂತ ಎಂದು ತಿಳಿದಾಗ ಅದು ಇಮ್ಮಡಿಗೊಂಡಿತು. ನನಗೆ ವಾಸ್ತವ್ಯ ಸಿಗುವವರೆಗೆ ಅವಳ ಮನೆಯಲ್ಲೇ ಇದ್ದೆ. ಮೊದಲ ಇಪ್ಪತ್ತೊಂದು ದಿನಗಳ ಪ್ರೊಬೇಶನರಿ ಅವಧಿಯಲ್ಲಿ ಅವಳು ಒಂದು ಪಂಥ

ಕಟ್ಟಿದಳು. ಆ ಇಪ್ಪತ್ತೊಂದು ದಿನ ಇಪ್ಪತ್ತೊಂದು ಬಗೆಯ ಬೆಳಗಿನ ತಿಂಡಿ ಮಾಡುವೆ, ನೋಡುತ್ತಿರು ಎಂದು, ಅವಳು. ಅದೆಲ್ಲ ಆಗದ ಮಾತು ಎಂದು, ನಾನು. ಗೆದ್ದದ್ದು ಆಕೆಯೇ. ನಮ್ಮ ಪಂಥದ ನೆಪದಲ್ಲಿ ಮನೆಮಂದಿಗೆ ಒಟ್ಟು ತಿಂಡಿಗಳ ಸುಗ್ಗಿ.

ಮುಂದೆ ರೂಮು ಮಾಡಿ ಇರತೊಡಗಿದ ಮೇಲೆಯೂ ಪ್ರತೀದಿನ ರಾತ್ರಿ ಅರ್ಧಗಂಟೆಯಾದರೂ ಅಕ್ಕ ಭಾವ ಮತ್ತು ಆಗ ಇನ್ನೂ ಪುಟ್ಟಮಕ್ಕಳಾದ ನಯನಾ ಪಲ್ಲವಿಯರ ಜೊತೆ ಕಳೆದು ರೂಮಿಗೆ ಹಿಂತಿರುಗುತಿದ್ದೆ. ಅವಳ ಮನೆಯ ಹತ್ತಿರದಲ್ಲಿಯೇ ತುಂಗಾ ನದಿ. ನದಿಯ ದಡದಲ್ಲಿ 'ಕುಪ್ಪಯ್ಯನ ಹೋಟೆಲು'. ಅಲ್ಲಿ ರಾತ್ರಿ ಊಟದ ನಂತರ ಹತ್ತು ನಿಮಿಷದ ಮಟ್ಟಿಗಾದರೂ ನಾನು ಅವರನ್ನೆಲ್ಲ ನೋಡದೆ ಹೋಗುತ್ತಿರಲಿಲ್ಲ. ಸಂಜೆ ಆರಕ್ಕೆ ಬಂದರೆ ಆಗಲೇ ಹೇಳಿದಂತೆ ತಾರಸಿಯ ಮೇಲೆ ಸೂರ್ಯಾಸ್ತವನ್ನು ತದೇಕ ಚಿತ್ತಳಾಗಿ ನೋಡುತ್ತಾ ಕುಳಿತಿರುವ ಅಕ್ಕನ ಚಿತ್ರ ಈಗಲೂ ನನ್ನ ಕಣ್ಣಲ್ಲಿದೆ. ನಾನು ಬಂದದ್ದು ತಿಳಿದೊಡನೆ, 'ಬಾ ಬಾ, ಒಂದು ಹೊಸ ಕವನ ಓದುವೆ' ಎಂದು ನನ್ನ ಮುಂದಿನದನ್ನು ಬಲ್ಲಂತೆ ಸಣ್ಣಗೆ ಮುಗುಳು ನಗುವಳು. ನಾನೋ, ಹುಸಿಭಯ ತೋರಿ ಓಡುವಂತೆ ನಟಿಸಿ, ಮತ್ತೆ ಬಂದು ಕುಳಿತುಕೊಂಡು ಅವಳ ಕವನವನ್ನು ಆಲಿಸುತಿದ್ದುದೆಲ್ಲ ಇದೀಗಷ್ಟೇ ಎಂಬಂತಿದೆ. (ಈ ಬಗ್ಗೆ ನಮ್ಮ ಜೋಕುಗಳೂ ಬಹಳ ಇವೆ. ಈಗಲೂ ಅವುಗಳನ್ನು ನೆನೆಯುತ್ತ ನಾವು ನಗುತ್ತಿರುತ್ತೇವೆ) ಹೀಗೆ ವೈದೇಹಿ ಅಂದು ಬರೆದ ಕವನಗಳಿಗೆ ನಾನೇ ಪ್ರಥಮ ಶ್ರೋತೃ ಎಂಬ ಹೆಗ್ಗಳಿಕೆ ನನಗೆ. ಸಂಜೆ ಏಳರ ನಂತರ ಬಂದರೆ ತಾರಸಿ ಬಾಗಿಲುಹಾಕಿ ಕೆಳಗಿಳಿದು ಬಂದು ದೇವರಗೂಡಿನೆದುರು ಅವಳ ಶ್ಲೋಕಪಠನ ನಡೆಯುತಿತ್ತು. ನಾನು ಬಂದು ಅವಳ ಏಕಾಗ್ರತೆಗೊಂದು ಕೊಮ ಹಾಕಿದಂತೆ ನನ್ನ ರೂಮಿನ ಉದ್ದ ಬೀಗದಕೈಯನ್ನು ಅವಳೆದುರು ಠಣ್ಣನೆ ಎಸೆದು ನನ್ನ ಬರುವಿಕೆಯ ಘೋಷಣೆ ಮಾಡಿದಾಗ ಶ್ಲೋಕಗೀಕ ಏನಿದ್ದರೂ ಅಲ್ಲಿಗೇ ಕಟ್ ಮಾಡಿ ಸಂಭ್ರಮದಿಂದ 'ಬಂದ್ಯ, ಕೂತುಕೋ' ಎಂದು ತಾನೂ ಬಳಿ ಕುಳಿತುಕೊಳ್ಳುವಳು. ಮಾತು ಮಾತು, ನಾವು ಮುಗಿಸಿದರೆ ಮಾತ್ರ ಮುಗಿಯುವ ಮಾತು ಅದು. ನಾನು ಶಿವಮೊಗ್ಗೆಯಲ್ಲಿ ಇದ್ದಷ್ಟು ದಿನವೂ ಅನೇಕ ಸಲ ಸಂಜೆಯೋ ರಾತ್ರಿಯೋ ನಾವು ವಾಕಿಂಗ್ ಹೋಗುತ್ತಿದ್ದೆವು. ನದೀದಡ, ದೇವಸ್ಥಾನ, ನೆಹ್ರೂ ರಸ್ತೆ, ಬಿ ಎಚ್ ರಸ್ತೆ ಹೀಗೆ ಮನಸ್ಸು ಬಂದ ಕಡೆಗೆ ಹೋಗಿ ಬರುತಿದ್ದೆವು. ಒಮ್ಮೆ ಕ್ರಿಸ್ಮಸ್‌ನಂದು ತಡರಾತ್ರಿ ಚರ್ಚಿಗೂ ಹೋಗಿದ್ದು ಮರವೆಯೇ ಆಗದು. ವಾಕಿಂಗ್ ಉದ್ದಕ್ಕೂ ನಾವು ಮಾತಾಡುತ್ತ ಬರುತ್ತಿರುವಾಗ, ಮಾತಾಡದೆ ನಮ್ಮ ಜೊತೆಗೇ ಶಾಲು ಮುಚ್ಚಿಕೊಂಡು, ಸುಮ್ಮನೆ ಬರುವ ಅಕ್ಕರೆಯ ಆ ಪುಟ್ಟ ಅಕ್ಕತಂಗಿಯರು. ಅವೆಲ್ಲ ಅಂದಿನ ನಿರಾತಂಕದ ಖುಶಿಯ ದಿನಗಳು. ಅದೆಷ್ಟೋ ಬಾರಿ ನಾನು ರೂಮಿಗೆ ವಾಪಾಸು ಹೋಗುವಾಗ ಮೂರ್ತಿಭಾವನೂ ಸೇರಿ ನನ್ನನ್ನು ಆಂಜನೇಯ ದೇವಸ್ಥಾನದವರೆಗೂ ಬಿಟ್ಟು ಮರಳುತಿದ್ದುದು ಈಗಲೂ ಸವಿಸವಿ ನೆನಪು.

ಅವಳ ಪ್ರಥಮ ಕಥಾ ಸಂಕಲನ 'ಮರ ಗಿಡ ಬಳ್ಳಿ' ಕುಂದಾಪುರ ಕನ್ನಡ ಸಂಘದಲ್ಲಿ ನಮ್ಮಣ್ಣ ಶ್ರೀ ಎ ಎಸ್ ಎನ್ ಹೆಬ್ಬಾರ್ ಅವರ ಅಧ್ಯಕ್ಷತೆಯಲ್ಲಿ ಶ್ರೀ ಕೆ. ವಿ. ಸುಬ್ಬಣ್ಣನವರಿಂದ ಬಿಡುಗಡೆಗೊಂಡಿತು. ಮ್ಯಾಗಸೆಸೆ ಪ್ರಶಸ್ತಿ ಪುರಸ್ಕೃತರಾದ ಹೆಗ್ಗೋಡಿನ ಶ್ರೀ ಕೆ. ವಿ. ಸುಬ್ಬಣ್ಣನವರ ಮೇಲೆ ಅವಳಿಗೆ ಇನ್ನಿಲ್ಲದಷ್ಟು ಅಭಿಮಾನ ಮತ್ತು ಅಖಂಡ ಗೌರವ. ಸಾಹಿತ್ಯಾಸಕ್ತನಾದ ನಮ್ಮಣ್ಣ ವೈದೇಹಿ ಕತೆ ಬರೆಯಲು ಮೂಲದಲ್ಲಿರುವ ಸ್ಫೂರ್ತಿ; ಇದನ್ನು ಆಕೆಯೂ ಹೇಳಿಕೊಂಡಿದ್ದಾಳೆ.

1981ರಲ್ಲಿ ಕಾರಣಾಂತರದಿಂದ ಅವಳ ಕುಟುಂಬ ಉಡುಪಿಗೆ ಬಂದು ನೆಲೆಸಿತು. ಶಿವಮೊಗ್ಗದಿಂದ ಅವಳನ್ನು ಕುಂದಾಪುರಕ್ಕೆ ತವರಿಗೆ ಕರೆತರುತಿದ್ದವ, ಏನು ನಂಟೋ, ಶಿವಮೊಗ್ಗ ಬಿಟ್ಟು ಉಡುಪಿಗೆ ಅವರು ಹೊರಟಾಗ ಅವರ ಅಗತ್ಯ ವಸ್ತುಗಳನ್ನು ವಾಹನದಲ್ಲಿ ಹಾಕಿಸಿ, ಅದರ ಜೊತೆಗೇ ಪಯಣಿಸಿ ಅವನ್ನು ಉಡುಪಿಗೆ ತಂದು ಮುಟ್ಟಿಸಿದವನೂ ನಾನೇ. ಅದೊಂದು ನೋವಿನ ಪಯಣ ನನಗೆ. ಆದರೆ ಆಮೇಲೆ ಅವಳ ಬರವಣಿಗೆ ಇನ್ನಷ್ಟು ವಿಪುಲವಾಗಿ ಬೆಳೆಯಿತು. ನನ್ನ ನೋವೂ ಕಡಿಮೆಯಾಯಿತು. ಅವಳ ಸಾಹಿತ್ಯಪಯಣ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯವರೆಗೂ ಸಾಗಿ ಬಂದಾಗ ನಮಗೆಲ್ಲ ಬಹಳ ಹರ್ಷ ಉಂಟಾಯಿತು. ಭಾವನ ಜೊತೆಗೂಡಿ ಅವಳು ಪ್ರಶಸ್ತಿ ಸ್ವೀಕಾರಕ್ಕಾಗಿ ದೆಹಲಿಗೆ ಹೊರಡುವ ಮುನ್ನಾದಿನ ನಾನು ಬೆಂಗಳೂರಿನ ನಮ್ಮ ಮನೆಯಲ್ಲಿ ಬಂಧು ಬಾಂಧವರು ಸ್ನೇಹಿತರನ್ನೆಲ್ಲ ಕರೆದು ಒಂದು ಸಂತಸ ಕೂಟ ಏರ್ಪಡಿಸಿದ್ದೆ. ಇವತ್ತಿಗೂ ಅದೊಂದು ಸವಿ ನೆನಪು ನನಗೆ. ಅವಳೂ ಅದನ್ನು ಖುಶಿಯಲ್ಲಿ ಮೆಲುಕುತ್ತಿರುತ್ತಾಳೆ.

ಅದೆಷ್ಟೇ ಎತ್ತರ ಏರಿದರೂ ಇಂದಿಗೂ ಕುಟುಂಬ ಸದಸ್ಯರೆಲ್ಲರ ಫೋನ್ ಸಂಪರ್ಕ ಇಟ್ಟುಕೊಂಡು ಕುಶಲೋಪರಿ ವಿಚಾರಿಸುವ ಇವಳು ಎಲ್ಲರ ಆಪ್ತ ವಲಯದಲ್ಲಿದ್ದಾಳೆ. ಇಂದಿಗೂ ಅವಳ ಶಿವಮೊಗ್ಗದ ನಂಟು ಚೆನ್ನಾಗಿದೆ. ಮೈದುನ ರವಿ ದಂಪತಿ, ನಾದಿನಿಯರಾದ ಅರುಣಾ, ಗೀತಾ, ತಾರಾ ಹಾಗೂ ನಳಿನಿ ಇವರೆಲ್ಲರಿಗೂ ಬೇಕೆನಿಸಿಕೊಂಡಿದ್ದಾಳೆ. ನಮ್ಮೆಲ್ಲರ ಮುದ್ದು ಮಾಲವಿಕಾಗೆ ಈ ವಸಂತಿ ದೊಡ್ಡಮ್ಮ ಬಹಳ ಹತ್ತಿರದ ಗೆಳತಿ ಕೂಡ. ಬದಲಾವಣೆ ಬೇಕೆನಿಸಿದಾಗ ಮಾಲು ಈ ದೊಡ್ಡಮ್ಮನ ಮನೆಯಲ್ಲಿ ಎರಡು ದಿನವಿದ್ದು ಬರುವಳು. ನನ್ನ ಮಗ ಪ್ರದ್ಯುಮ್ನನಿಗೆ ಚಿಕ್ಕಂದಿನಲ್ಲಿ ವಸಂತ್ಯತ್ತೆಯ ಮನೆಗೆ ಹೋದರೆ ಅವಳೇ ಸ್ನಾನ ಮಾಡಿಸಿ ಕಾಲ ಮೇಲೆ ಕೂಡಿಸಿಕೊಂಡು ಹಾಡು ಹೇಳಿ ಕೊಂಡಾಟ ಮಾಡುತಿದ್ದಳು. ಪೈಪ್ ಹಿಡಿದು ಅವಳ ಮನೆಯ ಗಿಡಗಳಿಗೆ ನೀರೆರೆದು ಮೈ ತುಂಬಾ ಒದ್ದೆಮಾಡಿಕೊಂಡು ಕುಣಿದು ಕುಪ್ಪಳಿಸುವುದೆಂದರೆ ಪ್ರದ್ಯುಮ್ನನಿಗೆ ಪಂಚಪ್ರಾಣದ ಆಟವಾಗಿತ್ತು.

ವೈದೇಹಿ ಬೆಳೆಯುತ್ತ ಬಹಳಷ್ಟು ಪ್ರಶಸ್ತಿಗಳಿಂದ ಪುರಸ್ಕೃತರಾದಳು. ಆದರೂ ಸರಳತೆ ಸಜ್ಜನಿಕೆ ಆತ್ಮೀಯತೆ ಅವಳನ್ನು ಬಿಟ್ಟು ಹೋಗಲಿಲ್ಲ. ಒಣ ಜಂಭ ಅವಳ

ಹತ್ತಿರವೂ ಸುಳಿಯದು. ತನ್ನ ತಾನು ಎಂದಿಗೂ ಬಣ್ಣಿಸಲಾರಳು. ಅದು ಇವಳ ಪ್ರಕೃತಿ. ದೊಡ್ಡವರು ಚಿಕ್ಕವರು ಎಂಬ ವ್ಯತ್ಯಾಸವಿಲ್ಲದೆ ಎಲ್ಲರೂ ಬೇಕೆಂಬ ಅವಳ ಮನಸ್ಸು ಅವಳನ್ನು ಬಲ್ಲವರೆಲ್ಲರೂ ಬಲ್ಲರು. ಮಹಿಳೆಯರ ಮೇಲಿನ ದೌರ್ಜನ್ಯ, ಅನ್ಯಾಯವನ್ನು ತನ್ನ ಸಾಹಿತ್ಯದ ಮೂಲಕ ವಿವಿಧ ಬಗೆಯಲ್ಲಿ ಖಂಡಿಸುತ್ತ ಬಂದವಳು ನನ್ನಕ್ಕ ವೈದೇಹಿ. ಇವಳ ಸಾಹಿತ್ಯದಲ್ಲಿ ಮುಖ್ಯವಾಗಿ ನಾನು ಕಂಡುಕೊಂಡಿರುವುದು ಅವಗಣನೆಗೆ ಒಳಗಾದ ವ್ಯಕ್ತಿಗಳ ಬಗೆಗಿನ ಕಾಳಜಿ ಹಾಗೂ ಚಿಂತನೆ. ಕುಂದಾಪುರದ ಆಡುಭಾಷೆಯನ್ನು ತನ್ನ ಸಾಹಿತ್ಯದಲ್ಲಿ ಚೆನ್ನಾಗಿ ಬಳಸಿಕೊಂಡಿದ್ದಾಳೆ. ಮಗಳು ನಯನಾ ಕಾಶ್ಯಪ್, ಮಡಿಕೇರಿಯಲ್ಲಿದ್ದು, ಪ್ರಾಧ್ಯಾಪಕಿಯಾಗಿ ಸಾಹಿತ್ಯ ಕೃಷಿಯನ್ನೂ ಇನ್ನೊಬ್ಬ ಮಗಳು ಪಲ್ಲವಿ ರಾವ್ ಸದ್ಯ ಮುಂಬೈಯಲ್ಲಿದ್ದು ಲೇಖನ ಭಾಷಾಂತರ ಚಿತ್ರಕಲೆಗಳ ಇತ್ಯಾದಿಗಳಲ್ಲಿಯೂ ತಮ್ಮನ್ನು ತಕ್ಕಮಟ್ಟಿಗೆ ತೊಡಗಿಸಿಕೊಂಡಿದ್ದಾರೆ.

ಹೆಸರಾಂತ ಲೇಖಕಿಯಾಗಿದ್ದರೂ ನನಗಂತೂ ಇಂದಿಗೂ ಅವಳು ನಮ್ಮ ಪ್ರೀತಿಯ ವಸಂತ್ಯಕ್ಕ ಆಗಿಯೇ ಉಳಿದಿದ್ದಾಳೆ. ಮಣಿಪಾಲದಲ್ಲಿರುವ ಇವರ ಮನೆ 'ಇರುವಂತಿಗೆ'ಗೆ ಈಗಲೂ ಆಗಿಂದಾಗ್ಗೆ ನಾನು ಕುಟುಂಬ ಸಮೇತ ಹೋಗಿ, ಆಪ್ತರಾದ ಅಕ್ಕ ಭಾವನೊಂದಿಗೆ ಸುಖದುಃಖ, ಪಟ್ಟಾಂಗ ಹೊಡೆದು ಬರುತಿದ್ದೇನೆ. ನಾವು ಹೋದಾಗೆಲ್ಲ ಸಾಕಷ್ಟು ಸಮಯ ನಮ್ಮ ಜೊತೆ ಕಳೆದು ಪ್ರೀತಿಯಿಂದ ಆದರದಿಂದ ನೋಡುತ್ತಾಳೆ. ಬಿಸಿಬಿಸಿಯಾಗಿ ಏನಾದರೂ ತಿಂಡಿ ಮಾಡಿ ಬಡಿಸುವಳು. ಊಟಕ್ಕೆ ಕರೆಯುವಳು. ನನಗೆ, ನನ್ನ ಮಾಣಿಗೆ, ನನ್ನ ಹೆಂಡತಿ 'ವೀಣೆ' ಗೆ ತುಂಬ ತುಂಬಾ ಪ್ರೀತಿ ಕೊಡುವವಳು. ಎಂದೆಂದಿಗೂ ಬದಲಾಗದ ವಸಂತ್ಯಕ್ಕನ ಪ್ರೀತಿ ತುಂಬಿದ ಆಶೀರ್ವಾದ ಸದಾ ನಮಗಿರಲೆಂದು ಆಶಿಸುವೆ. ಜೊತೆಗೆ ಭಾವಯ್ಯ, ಮಗಳಂದಿರು ಅಳಿಯಂದಿರು ಮೊಮ್ಮಕ್ಕಳ ಜತೆ ಅವಳು ಸುದೀರ್ಘಕಾಲ ನಗುನಗುತಿರಲಿ ಎಂದು ಹಾರೈಸುವೆ.



'ತಮ್ಮ ಕಥನ ಕೌಶಲದಿಂದಾಗಿ ವೈದೇಹಿ, ಪ್ರಾಯಶಃ, ಭಾರತದ ಮಹತ್ವದ ಬರಹಗಾರರಲ್ಲಿ ಒಬ್ಬರು. ಇವರನ್ನು ಓದುವಾಗ ನಾವು ಮುದಗೊಳ್ಳುತ್ತಲೇ ನಮಗೆ ತಿಳಿಯದಂತೆ ನಮ್ಮ ಬದುಕಿನ ಅರಿವನ್ನು ಬೆಳೆಸಿಕೊಂಡಿರುತ್ತೇವೆ. ಒಂದು ಪ್ರದೇಶದಲ್ಲಿ ಊರಿ ಹುಟ್ಟಿಕೊಳ್ಳುವ ಈ ಕಥೆಗಳು ಯಾವ ಪ್ರದೇಶದ್ದಾದರೂ ಆಗಬಹುದು; ಯಾವ ವ್ಯಕ್ತಿಯದಾದರೂ ಆಗಬಹುದು. ಹೀಗೆ ಹಿಗ್ಗುವ ಕಥನ ಕೌಶಲದಲ್ಲಿ ಕಾವ್ಯದ ಗುಣವಿರುತ್ತದೆ. ಸುಖ ದುಃಖಗಳ ವಿಚಿತ್ರ ಮಿಶ್ರಣವಾದ ಈ ಬದುಕಿನಲ್ಲಿ 'ಹದ'ವೆಂಬುದು ಇದೆಯಾದರೆ ಅದನ್ನು ಹುಡುಕಿ ಕಾಣುವುದೇ ವೈದೇಹಿಯ ಒಟ್ಟು ಬರವಣಿಗೆಯ ಉದ್ದೇಶ ಎನಿಸುತ್ತದೆ. ಮುಟ್ಟಿದ್ದನ್ನು ಚಿನ್ನ ಮಾಡುವ ವೈದೇಹಿ ಭಾಷೆ ಅನುವಾದಕ್ಕೆ ಅತೀತವಾದರೂ ಅವರ ಅನುವಾದಿತ ಕಥೆಗಳು ಭಾರತದಲ್ಲಿ ಹಲವರ ಮೆಚ್ಚಿಗೆಗೆ ಪಾತ್ರವಾಗಿವೆ. ಇದಕ್ಕೆ ಕಾರಣ ಅವರ ಕಥೆಗಳ ಭಾಷೆಯ ಮುದಕೊಡುವ ಮೆರಗಿನ ಜೊತೆಯಲ್ಲೇ ಬದುಕಿನ ಸತ್ವಗಳನ್ನು ದಾಖಲಿಸುವ ತಿರುಳೂ ಇರುವುದು.'

**-ಯು. ಆರ್. ಅನಂತಮೂರ್ತಿ**

(ವೈದೇಹಿಯವರ 'ಅಂತರಂಗ' ಕಥಾಸಂಕಲನಕ್ಕೆ ಅನಂತಮೂರ್ತಿಯವರು ಬರೆದ ಹಿನ್ನುಡಿ)

# ಯಾವ ಜನ್ಮದ ಮೈತ್ರಿ . .

✦ ಕೆ ಎಲ್ ಶ್ರೀನಿವಾಸ ಮೂರ್ತಿ(ಪತಿ)

ನಾನವಳನ್ನು ಮದುವೆಯಾಗಿದ್ದೇ ಅವಳು ಬರೆಯುತ್ತಾಳೆ ಅಂತ ಕೇಳಿ. ನಮ್ಮ ಮದುವೆಯಾದದ್ದು 1968, ಮಾರ್ಚ್ 8ರಂದು. ಅಂದು ಅದಿನ್ನೂ ಮಹಿಳಾ ದಿನಾಚರಣೆ ಅಂತಿರಲಿಲ್ಲ. ಈ ವರ್ಷಕ್ಕೆ ನಮ್ಮ ಮದುವೆಯಾಗಿ ಐವತ್ತು ವರ್ಷ ಭರ್ತಿಯಾಯಿತು. ನಮ್ಮ ಮದುವೆಯ ನಾಂದಿಯಾದ ಬಳಿಕ ನಮ್ಮ ಕುಟುಂಬದಲ್ಲಿ ವೃದ್ಧರೊಬ್ಬರು ತೀರಿಕೊಂಡು ಸೂತಕ ಬಂತು. ಆ ಪ್ರಯುಕ್ತ ಮದುವೆಯಾಗಿ ವಧು ಗೃಹಪ್ರವೇಶ ಮಾಡಿದ್ದು ನಮ್ಮನೆಯನ್ನಲ್ಲ. ಶಿವಮೊಗ್ಗೆಯ ನಮ್ಮನೆಯ ಸ್ವಲ್ಪವೇ ದೂರದಲ್ಲಿದ್ದ ನನ್ನ ಅಜ್ಜನ ಮನೆಯನ್ನು. ಜಾನಕಿಯನ್ನು ಅಲ್ಲಿ ಒಂದು ವಾರ ಬಿಟ್ಟಿದ್ದೆವು. ನಮ್ಮ ಅಜ್ಜನ ಮನೆ ಆಗ ತುಂಬಿದ ಮನೆ. ಅಜ್ಜ ತೀರಿಹೋಗಿದ್ದರು. ಅಜ್ಜಿ(ದೊಡ್ಡಮ್ಮ) ಇದ್ದರು ಮತ್ತು ನಮ್ಮ ಸೋದರಮಾವ ನಲ್ಲುಂಡೆ ಶಾಮರಾವ್ ಅವರ ಕುಟುಂಬ. ಅಲ್ಲದೆ ಓದಲಿಕ್ಕಿದ್ದ ಹಲವು ಮಂದಿ. ಅವರೆಲ್ಲ ಬಹಳ ಪ್ರೀತಿಯಿಂದ ನೋಡಿಕೊಂಡರು. ಸೂತಕ ಕಳೆದ ಮೇಲೆ ಜಾನಕಿಯನ್ನು ನಮ್ಮ ಮನೆಗೆ ಕರೆತಂದೆವು. ಶಿವಮೊಗ್ಗದಲ್ಲಿ ಎಸ್. ಪಿ. ಎಮ್ ರಸ್ತೆಯಲ್ಲಿದ್ದ ನಮ್ಮ ಮನೆಯೂ ತುಂಬಾ ಮಂದಿ ಇದ್ದ ಮನೆಯಾಗಿತ್ತು. ನಮ್ಮ ತಂದೆಯವರಿಗೆ ಬರೆಯುವ ಸೊಸೆ ಬಂದಳೆಂದು ಅತ್ಯಂತ ಸಂತೋಷ. ಅಂಗಡಿಯಲ್ಲಿ ಗಿರಾಕಿಗಳೊಂದಿಗೆ ಅದನ್ನು ಹೇಳಿಕೊಳ್ಳುತ್ತಿದ್ದರು. ತಂದೆಯಿಲ್ಲದ ಅವಳನ್ನು ತಂದೆ ಕರೆಯುವಂತೆಯೇ ಕರೆಯುವೆನೆಂದು ತಾನೂ ಅವಳನ್ನು ಕೊನೆಯವರೆಗೂ ಜಾನಕೀ ಎಂದೇ ಕರೆದರು. ಘಟ್ಟದ ತಗ್ಗಿನ ಮನೆಯಿಂದ ಬಂದವಳು, ಅನ್ನ, ಅಡುಗೆ ತಿಂಡಿ ಹಬ್ಬ ಆಚರಣೆ ಎಲ್ಲವೂ ಭಿನ್ನ. ಆಕೆ ಹೊಂದಿಕೊಂಡಳು.

ನಮ್ಮ ಮದುವೆ ಆರತಕ್ಷತೆ ನಡೆದದ್ದೂ ನನ್ನ ಅಜ್ಜನ ಮನೆಯಲ್ಲಿ. ಕೊನೆಯಲ್ಲಿ ಎಲ್ಲ 'ಹಾಡು ಹಾಡು' ಎಂದು ಒತ್ತಾಯ ಮಾಡಿದಾಗ ಜಾನಕಿ 'ಯಾವ ಜನ್ಮದ ಮೈತ್ರಿ ನಮ್ಮಿಬ್ಬರನೆ ಮತ್ತೆ ಬಂಧಿಸಿಹುದೊ. . .' ಪದ್ಯವನ್ನು ಹಾಡಿದ್ದಳು. ಹಾಡಿದಳು ಹೇಗೆಂದರೆ ಅಂದಿನಿಂದಲೇ ಅವಳು ಎಲ್ಲರ ಪ್ರೀತಿ ಗಳಿಸಿದಳು ಎಂದೇ ಹೇಳಬೇಕು. ನನ್ನ ಮನಸ್ಸಿನಲ್ಲಿ ಈ ಹಾಡಿನ ನೆನಪು ಹಾಗೆಯೇ ಇದೆ. ನಮ್ಮತ್ತೆ, ಅಂದರೆ ನಮ್ಮ ಸೋದರಮಾವನ

ಹೆಂಡತಿಯಾದ ಮೂಕಾಂಬಿಕಮ್ಮ ಅವರಂತೂ ಜಾನಕಿಯನ್ನು ತುಂಬ ಆಸೆ ಮಾಡಿದರು. ಮುಂದೆಯೂ ಅವರ ಆಸೆ ಎಷ್ಟು ಹೆಚ್ಚಿತೆಂದರೆ ಇವಳನ್ನು ಮಗಳಂತೆಯೇ ನೋಡಿಕೊಂಡರು. ಜಾನಕಿಗೂ ಅವರೆಂದರೆ ತುಂಬಾ ಪ್ರೀತಿ. ಅದು ಅಷ್ಟಿಷ್ಟಲ್ಲ. ನಿಮ್ಮನ್ನು ಮದುವೆಯಾಗಿದ್ದರಿಂದ ನನಗೆ ಅವರು ಸಿಕ್ಕಿದರು. ಅವರೊಂದು ರತ್ನ ಎಂದು ಹೇಳುವುದು ಅವಳು. ಅವರು ತೀರಿಕೊಳ್ಳುವ ಮುಂಚೆ ಜಾನಕಿಯನ್ನು ಕರೆದು ಅವಳ ಕೊರಳಿಗೆ ತನ್ನದೊಂದು ಸುಂದರ ಪದಕದಿಂದ ಕೂಡಿದ ಕರಿಮಣಿ ಸರ ಹಾಕಿ, ನನ್ನ ಮಗಳು ನೀನು, ಇದು ನನ್ನ ನೆನಪಿಗೆ ಎಂದು ತಬ್ಬಿಕೊಂಡದ್ದು, ನಮ್ಮೆಲ್ಲರ ಕಣ್ಣು ತುಂಬಿ ಬಂತು. ಆಭರಣವನ್ನು ಯಾವತ್ತೋ ಬಿಟ್ಟಿದ್ದ ಜಾನಕಿ ಮಕ್ಕಳ ಮದುವೆ ಮಾಡುವಾಗ ಮಾತ್ರ ಅದನ್ನೇ ತೊಟ್ಟುಕೊಂಡಳು. ಉಳಿದವರೆಲ್ಲ ಅವರನ್ನು 'ಸಣ್ಣಕ್ಕ' ಎಂದು ಕರೆಯುವುದು, ಜಾನಕಿ ಮಾತ್ರ 'ಚಿಕ್ಕಮ್ಮ' ಎನ್ನುತಿದ್ದಳು. ('ನನ್ನ ಗಂಡನ ಊರು ತೋರಿಸುವೆ ಬಾರೇ' ಕವನದಲ್ಲಿ ಕುಟುಂಬದ ಉಳಿದವರಿಗೆ ಗುರುತಾಗಲು ಅವರನ್ನು 'ಸಣ್ಣಕ್ಕ'ನೆಂದೇ ನೆನೆದಿದ್ದಾಳೆ.) ಯಾವುದೇ ಶುಭ ಸಮಾರಂಭಕ್ಕೂ ಅವಳು ಹಾಕಿಕೊಳ್ಳುವುದು ಅವರು ಕೊಟ್ಟ ಆ ಸರವನ್ನು ಮಾತ್ರ. 'ಅದರಲ್ಲಿ ಚಿಕ್ಕಮ್ಮ ನನ್ನ ಜೊತೆಗೆ ಇರುತ್ತಾರೆ' ಎನ್ನುವಳು. ನನ್ನ ಸೋದರಮಾವ ನಲ್ಲುಂಡೆ ಶಾಮರಾಯರ ಋಣ ನಮ್ಮ ಮೇಲೆ ಎಷ್ಟು ಇದೆಯೆಂದು ಹೇಳಲಾಗದು. ಅವರು ತೀರಿಕೊಂಡ ಹದಿನೈದೇ ದಿನದಲ್ಲಿ ನಮ್ಮತ್ತೆ ಮೂಕಾಂಬಿಕಮ್ಮನೂ ತೀರಿಕೊಂಡರು. ಅವರಿಬ್ಬರು ಪ್ರೀತಿ ನಮ್ಮ ಮೇಲೆ ಹರಿಸಿದ್ದು ಇಂತಿಷ್ಟೇ ಅಂತ ಹೇಳುವಂತಿಲ್ಲ. ಈಗಲೂ ಅವರೆಲ್ಲ ಸತ್ತಿಲ್ಲ, ನಮ್ಮೊಂದಿಗೆ ಇದ್ದಾರೆ ಎಂದೇ ನಮ್ಮ ಭಾವನೆ.

ಪುಸ್ತಕ ಪ್ರಿಯನಾದ ನಾನು ಆಗಲೇ ಅಂದಿನ ಪ್ರಖ್ಯಾತ ಕಾದಂಬರಿಕಾರರ ಹಾಗೂ ಕತೆಗಾರರ ಪುಸ್ತಕಗಳನ್ನು ಸಂಗ್ರಹಿಸಿಟ್ಟಿದ್ದೆ. ಬಂದವಳು ಅವಳು ಮೊದಲಾಗಿ ಹಿಗ್ಗಿದ್ದೇ ಆ ಪುಸ್ತಕಗಳನ್ನು ನೋಡಿ. ಮುಂದೆ ಆ ಸಂಗ್ರಹ ದೊಡ್ಡದಾಯಿತು. ನನ್ನ ತಂದೆಯವರು ಅವಳಿಗಾಗಿಯೇ ನಮ್ಮ ಮನೆಗೆ ಕೆಲ ಪತ್ರಿಕೆಗಳನ್ನು ತರಿಸತೊಡಗಿದರು. ಮೇಜಿನ ಮೇಲೆ ಬಿಳಿ ಕಾಗದದ ಬಂಡಲು ಎಂದೂ ತಪ್ಪದಂತೆ ನೋಡಿಕೊಳ್ಳುತಿದ್ದೆ ನಾನು. ಮನೆಯಲ್ಲಿ ನಡೆವ ಘಟನೆಗಳಿಂದ ಎಷ್ಟೋ ಬಾರಿ ನೊಂದು ಅವಳು ಸಪ್ಪಗೆ ಕುಳಿತಾಗೆಲ್ಲ 'ನೀನು ಬರೆಯುವವಳು, ನೆನಪಿಡು' ಎಂದು ಎಚ್ಚರಿಸಿದ್ದಿದೆ.

ಮದುವೆಗೂ ಮೊದಲೇ ನಾನು ಕೆಲವು ಸಂಘ ಸಂಸ್ಥೆಗಳಲ್ಲಿ ಸಕ್ರಿಯ ಸದಸ್ಯನಾಗಿದ್ದೆ. ವಿದ್ಯಾಗಣಪತಿ ಸೇವಾ ಸಂಘ, ತರಂಗಿಣಿ, ಶಿವಮೊಗ್ಗ ರೈಫಲ್‌ಕ್ಲಬ್, ಹೋಂ ಗಾರ್ಡ್ಸ್, ಜೇಸೀ, ಮುಂದೆ ಸಹ್ಯಾದ್ರಿ ಚಿತ್ರ ಸಮಾಜ, ಲಯನ್ಸ್ ಕ್ಲಬ್ ಹೀಗೆ. ಇಲ್ಲೆಲ್ಲಾ ಅವಳು ನನ್ನೊಡನೆ ಮನೆಯಲ್ಲಿ ನನ್ನ ಕಾರ್ಯದರ್ಶಿಯಂತೆಯೆ ಎಲ್ಲ ಕೆಲಸ ಮಾಡಿಕೊಡುತಿದ್ದಳು.

ತರಂಗಿಣಿಗೆ ವಿದ್ಯಾಗಣಪತಿ ಸೇವಾ ಸಂಘಕ್ಕೆ ಕಾರ್ಯಕ್ರಮಗಳಿಗಾಗಿ ಬರುತಿದ್ದ ಸಂಗೀತ ದಿಗ್ಗಜರನ್ನು ಊಟಕ್ಕೆ ಕರೆಯುವುದೆಂದರೆ ನನಗೆ ಇಷ್ಟವಾದ್ದು. ಚೆಂಬೈ, ಚಿಟ್ಟಿಬಾಬು,

ಲಾಲ್ಗುಡಿ, ಚಂದ್ರಶೇಖರನ್, ಟಿವಿಜಿ, ಸಿಕ್ಕಿಲ್ ಸಿಸ್ಟರ್ಸ್, ಘಟಂ ಮಂಜುನಾಥ್, ರಾಮಾಚಾರ್, ವಿನಾಯಕ ರಾಂ, ದೊರೈ, ರಮಣಿ– ಹೀಗೆ ಪಟ್ಟಿ ಬೆಳೆಯುತ್ತ ಹೋಗುತ್ತದೆ. ಅವರೆಲ್ಲರಿಗೂ ಊಟೋಪಚಾರ ನಮ್ಮಲ್ಲಿ ನಡೆಸುತಿದ್ದೆವು. (ಅನೇಕರು ಉಡುಪಿ ಮಣಿಪಾಲಕ್ಕೆ ಕಚೇರಿ ನಿಮಿತ್ತ ಬಂದವರು, ನಮ್ಮ ಮನೆಗೆ ಬಂದು ಹೋಗಿದ್ದರು). ಕುಂದಾಪುರದಲ್ಲಿ ಇದ್ದಾಗ ಸಂಗೀತ ಕಚೇರಿಗಳೆಂದರೆ ಏನೆಂದೇ ಗೊತ್ತಿರಲಿಲ್ಲ ಅವಳಿಗೆ. ಶಿವಮೊಗ್ಗಕ್ಕೆ ಬಂದ ಮೇಲೆ ಸಂಗೀತಗಾರರನ್ನು ಹತ್ತಿರದಿಂದ ನೋಡಿದಳು. ಸಂಗೀತ ಕಚೇರಿಗಳನ್ನು ಕೇಳತೊಡಗಿದಳು. ಅದನ್ನೆಲ್ಲ ಸವಿಯುತ್ತ ಭಾರೀ ಖುಶಿ ಪಡುತಿದ್ದಳು. ಹೊರ ಪ್ರಪಂಚದಲ್ಲಿ ಬೆರೆಯಲು ಸಂಕೋಚ ಪಡುತಿದ್ದ ಅವಳಿಗೆ ಇವೆಲ್ಲಾ ಬೇರೆಬೇರೆ ತರದಲ್ಲಿ ಆ ಸಂಕೋಚ ಹರಿಸಿದವು ಎಂದು ನನ್ನ ಭಾವನೆ.

ಕಲಿಯುವ ಆಸೆ ಅವಳಿಗೆ ಯಾವಾಗಲೂ. ಉರ್ದು, ವಚನ, ಭಾವಗೀತೆ ಅದು ಇದು ಅಂತ. ಏನಾದರೂ ಮಾಡುತ್ತಲೇ ಇರಬೇಕು. ಮನೆಯ ಹತ್ತಿರವೇ ಇದ್ದ ಗುರುಗಳಿಂದ ವೀಣಾಭ್ಯಾಸವನ್ನೂ ಮಾಡಿದಳು. ದುರಾದೃಷ್ಟವಶಾತ್ ಅವಳ ಗುರುಗಳು ತೀರಿಕೊಂಡರು. ಮತ್ತೆ ಮನೆಯಿಂದ ದೂರ ಹೋಗಲಾರದೆ ಮುಂದರಿಸಲು ಆಗಲೇ ಇಲ್ಲ. ಸ್ಕೂಟರ್ ಬಿಡುವ ಆಸೆ ಇತ್ತು ಅಷ್ಟಿಷ್ಟಲ್ಲ. ನಾನು ಕಲಿಸಲು ಒಪ್ಪದೆ ಬಾಕಿ ಉಳಿಯಿತು. ಕಾರು ಬಿಡುತ್ತಾಳೆ, ಆದರೆ ನಾನೇ ಅವಳಿಗೆ ಕಾರು ಕೊಡುತ್ತಿಲ್ಲ. ಹಾಗಾಗಿ ಕಡಿಮೆ ಬಿಡುವುದು, ಭಯವಿದೆ. ಶಿವಮೊಗ್ಗ ರೈಫಲ್‌ಕ್ಲಬ್‌ನ ವಾರ್ಷಿಕ ದಿನಾಚರಣೆ ಅಂಗವಾಗಿ ಏರ್ಪಡಿಸಿದ ಶೂಟಿಂಗ್ ಸ್ಪರ್ಧೆಯಲ್ಲಿ ಮಹಿಳೆಯರ ವಿಭಾಗದಲ್ಲಿ ಪ್ರಥಮ ಕಪ್ ಪಡೆದವಳು ಈ ಜಾನಕಿ. ಆಗ ಶ್ರೀ ಬಿ.ಎನ್. ಗರುಡಾಚಾರ್ ಎಸ್ ಪಿ ಆಗಿದ್ದರು. ಅವರೂ ವೈದೇಹಿಯೆಂದರೆ ಬಹಳ ಅಭಿಮಾನ ಪಡುತಿದ್ದರು.

ಶಿವಮೊಗ್ಗದಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವು ಶ್ರೀ ಎಸ್. ವಿ. ರಂಗಣ್ಣನವರ ಅಧ್ಯಕ್ಷತೆಯಲ್ಲಿ ನಡೆಯಿತಷ್ಟೆ? ಸಮ್ಮೇಳನದ ಕಾರ್ಯಾಧ್ಯಕ್ಷ ಸುಪ್ರಸಿದ್ಧ ಲಾಯರ್ ಶ್ರೀ ವೆಂಕಟರಾಮಾ ಶಾಸ್ತ್ರಿಗಳು. ಅವರ ಮನೆಯೂ ನಾವಿದ್ದ ಎಸ್.ಪಿ.ಎಮ್. ರಸ್ತೆಯಲ್ಲೇ. ಸಮ್ಮೇಳನಾಧ್ಯಕ್ಷರ ಮೆರವಣಿಗೆ ಎಸ್.ಪಿ.ಎಮ್. ರಸ್ತೆಗೂ ಬಂದು ನಮ್ಮ ಮನೆ ದಾಟುತಿದ್ದಾಗ ವೆಂಕಟರಾಮಾ ಶಾಸ್ತ್ರಿಗಳು ನನ್ನ ಕೈಯಲ್ಲಿ ಹಾರ ನೋಡಿ, ನಮ್ಮಿಬ್ಬರನ್ನೂ ವಾಹನದ ಮೇಲೆ ಕರೆದುಕೊಂಡು ಅಧ್ಯಕ್ಷರಿಗೆ ಹಾರ ಹಾಕಿಸಿದರು. ಫೋಟೋ ಕೂಡ ತೆಗೆಸಿದರು. ಅದೊಂದು ಮರೆಯಲಾಗದ ನೆನಪು. ಸಮ್ಮೇಳನದ ಕವಿಗೋಷ್ಠಿಯ ನಿರೂಪಣೆ ವೈದೇಹಿಯದು. ಆ ಸಂದರ್ಭದಲ್ಲಿ ಕಯ್ಯಾರ ಕಿಞ್ಞಣ್ಣರೈ, ಇದಿನಬ್ಬ, ಹಾ.ಮಾ.ನಾಯಕರು ಇನ್ನೂ ಕೆಲ ಸಾಹಿತಿಗಳು ನಮ್ಮ ಮನೆಗೆ ಊಟಕ್ಕೆ ಬಂದಿದ್ದರು. ಉಡುಪಿಗೆ ನಾವು ಬಂದ ಮೇಲೆ ಕಯ್ಯಾರ ಅವರು ನನಗೆ ಸಿಕ್ಕಾಗೆಲ್ಲ, 'ನಿಮ್ಮ ಮನೆಯಲ್ಲಿ ಊಟ ಮಾಡಿದ್ದೇನೆ ನಾನು' ಎಂದು ನೆನಪು ಮಾಡಿಕೊಂಡು ಬೆನ್ನು ತಟ್ಟುತಿದ್ದರು. ನಮ್ಮ

ಮನೆಗೆ ಬಂದ ಸಾಹಿತಿಗಳೂ ಅನೇಕರು. ಅನುಪಮಾ ನಿರಂಜನ, ಲಂಕೇಶ್, ಎಕ್ಕುಂಡಿ, ಕೆ.ಎಸ್.ನ, ಎಸ್. ವಿ. ಪಿ, ಕೆ. ವಿ. ಸುಬ್ಬಣ್ಣ, ಬಿ. ವಿ. ಕಾರಂತ, ಶಿವರಾಮ ಕಾರಂತ, ಅನಂತಮೂರ್ತಿ– ಹೀಗೆ ಅನೇಕರು. ಆದರದಿಂದ ಸತ್ಕರಿಸುವುದು ನಮಗೆ ಪ್ರಿಯವಾದ್ದು. ಇವತ್ತಿಗೂ.

ಹೆಗ್ಗೋಡಿನಿಂದ ಚೋಮನ ದುಡಿ, ಬಕ, ಅಲೀಬಾಬಾ, ಕಾಳಿಂಗ ಮರ್ದನ, ಬೆಟ್ಟಕ್ಕೆ ಚಳಿಯಾದರೆ ಇತ್ಯಾದಿ ನಾಟಕಗಳೂ ಬರತೊಡಗಿದ್ದ ಕಾಲವದು. ಮಕ್ಕಳನ್ನು ಕರಕೊಂಡು ನಾವು ಒಂದಷ್ಟು ಮಂದಿ ಸ್ನೇಹಿತರ ಜೊತೆ ನಾಟಕಕ್ಕೆ ಹೋಗುವವರು. ಹೆಗ್ಗೋಡಿನವರೆಗೂ ಹೋಗಿ 'ಬರ್ನಂ ವನ' ನೋಡಿದೆವು. ಸುಬ್ಬಣ್ಣನವರ ಸಂಸ್ಥೆಯೂ ನಮ್ಮ ಸಂಘಸಂಸ್ಥೆಗಳೂ ಪರಸ್ಪರ ಹೊಂದಿಕೊಂಡು ಜಂಟಿಯಾಗಿ ಏರ್ಪಡಿಸುತಿದ್ದ ಕಾರ್ಯಕ್ರಮಗಳು ಎಷ್ಟೋ ಇವೆ. ಆ ಸಂಬಂಧ ನಾನೂ ಅವರೂ ಪತ್ರ ಬರೆದುಕೊಳ್ಳುತಿದ್ದೆವು. ಅವುಗಳಲ್ಲಿ ಕೆಲವು ನನ್ನ ಬಳಿ ಈಗಲೂ ಇವೆ. ಶಿವಮೊಗ್ಗೆಯಲ್ಲಿ ಸಹ್ಯಾದ್ರಿ ಚಿತ್ರಸಮಾಜಕ್ಕೆ ಪ್ರೇರಣೆಯೂ ಅವರದೇ. ಹೆಗ್ಗೋಡಿನ ಮೊದಮೊದಲಿನ ಶಿಬಿರಗಳಿಗೆ ಊಟದ ತಟ್ಟೆ ಲೋಟ ಪ್ಲೇಟು ಇತ್ಯಾದಿಗಳನ್ನು ಅವರ ಕೋರಿಕೆ ಮೇರೆಗೆ ನಾನು ಶಿವಮೊಗ್ಗದ ಪಾತ್ರೆ ಬಾಡಿಗೆಯ ಆರ್‌ಎನ್‌ಆರ್ ಅಂಗಡಿಯಿಂದ ಕಳಿಸುತಿದ್ದೆ. ಶಿವಮೊಗ್ಗೆಯಲ್ಲಿ ಒಂದು ರಂಗಮಂದಿರದ ಬೇಡಿಕೆಗಾಗಿ ಡಿ. ಸಿ. ಆಫೀಸಿಗೆ ಹೋಗಲು ಎಷ್ಟು ಬಾರಿ ಅವರು ಬಂದಿದ್ದರು. ಅವರೊಂದಿಗೆ ನಾನೂ ಮತ್ತು ಗೆಳೆಯರು ಸೇರಿಕೊಳ್ಳುತಿದ್ದೆವು. ಆದರೆ ನಾನು ಶಿವಮೊಗ್ಗೆ ಬಿಡುವವರೆಗೂ ಅದು ನೆರವೇರಲೇ ಇಲ್ಲ.

ಎಸ್‌ಪಿಎಂ ರಸ್ತೆಯ ಕೆಲ ಗೆಳತಿಯರೂ ಜಾನಕಿಯೂ ಸೇರಿ ಪ್ರಕೃತಿ ಎಂಬ ಒಂದು ಸಂಘ ಕಟ್ಟಿಕೊಂಡರು. ದಿನಾ ಸಂಜೆ ಆಟಕ್ಕೆ, ಹಾಡು ಕಲಿಯಲಿಕ್ಕೆ ಅಂತೆಲ್ಲ ಇದ್ದಿರಬೇಕು. ಆಟವೆಂದರೆ ತುಂಬ ಹುರುಪು ಅವಳಿಗೆ. ಆದರೆ ಆ ಸಂಘ ಸುರುವಾದ ಕೆಲ ತಿಂಗಳಲ್ಲೇ ನಾವು ಶಿವಮೊಗ್ಗ ಬಿಟ್ಟು ಉಡುಪಿಗೆ ಬಂದೆವು. ಕಾರಣ ನನ್ನ ಕೆಲ ತಪ್ಪು ಅಂದಾಜಿನಿಂದಾಗಿ ಮತ್ತು ಹತ್ತಿರದ ಕೆಲವರ ಸಂಚಿನಿಂದಾಗಿ ತೀವ್ರ ಆರ್ಥಿಕ ಬಿಕ್ಕಟ್ಟಿಗೆ ಸಿಲುಕಿದ್ದೆ. ನನ್ನ ಭಾವನೆಂಟ ಕುಂದಾಪುರದ ಪ್ರಸಿದ್ಧ ವಕೀಲರಾದ ಎ.ಎಸ್.ಎನ್. ಹೆಬ್ಬಾರರ ಸಪೋರ್ಟ್ ಮೇಲೆ ನಾನು ಕುಟುಂಬ ಸಮೇತ ಉಡುಪಿಗೆ ಬಂದು ನೆಲೆಸುವಂತಾಯಿತು. ಆ ಸಮಯದಲ್ಲಿ ಉದ್ದಕ್ಕೂ ಅವರು ತೋರಿದ ಬೆಂಬಲ ಮತ್ತು ಅಂತಃಕರಣ ಮರೆಯುವಂಥದಲ್ಲ. ಆ ಸಂದರ್ಭದಲ್ಲಿ ಶಿವಮೊಗ್ಗೆಯಲ್ಲೇ ಕರ್ನಾಟಕ ಬ್ಯಾಂಕಿನಲ್ಲಿ ಉದ್ಯೋಗದಲ್ಲಿದ್ದ ಇದ್ದ ನನ್ನ ಇನ್ನೊಬ್ಬ ಭಾವನೆಂಟ ಎ. ಆರ್ ಹೆಬ್ಬಾರ್ ತೋರಿದ ಕಾಳಜಿಯಂತೂ ಅಷ್ಟಿಷ್ಟಲ್ಲ. ಸುಬ್ಬಣ್ಣನವರಿಗೆ ನಾವು ಶಿವಮೊಗ್ಗೆ ಬಿಡುವುದು ತಿಳಿದು ಎಲ್ಲವನ್ನೂ ನನ್ನ ಬಳಿ ವಿಚಾರಿಸಿದರು. ಹೇಳುತಿದ್ದರೆ ಅವರ ಕಣ್ಣಲ್ಲಿ ನೀರು ಹರಿಯುತಿತ್ತು. ಅದು ನನಗೆ ಈಗಲೂ ನೆನಪಾಗುತ್ತದೆ. ಎಲ್ಲ ಸರಿಯಾಗುತ್ತದೆ. ಯೋಚಿಸಬೇಡಿ

ಎಂದು ಅವರು ಧೈರ್ಯ ಹೇಳಿದ್ದು ಮರೆಯುವುದೇ ಇಲ್ಲ. ನಮ್ಮ ಜಾಹೀರಾತು ಸಂಸ್ಥೆಗೆ ತಮ್ಮ ರಂಗಶಾಲೆಗೆ ವಿದ್ಯಾರ್ಥಿ ಆಯ್ಕೆ, ಸಂದರ್ಶನ ಮುಂತಾದ ಕೆಲ ಜಾಹೀರಾತುಗಳನ್ನೂ ಕೊಡುವುದರ ಮೂಲಕ ಅವರು ಸಪೋರ್ಟ್ ನೀಡಿದರು. ಆ ಕಷ್ಟದ ಸಮಯದಲ್ಲಿಯೂ ಜಾನಕಿ 'ಅಂಥದ್ದೇನೂ ಆಗಿಲ್ಲ. ದಾಟುವುದು ಹೇಗೆ ಯೋಚಿಸಬೇಕು. ಧೈರ್ಯವಾಗಿರಿ. ಯಾರಿಂದಲೂ ಏನನ್ನೂ ನಿರೀಕ್ಷಿಸಬೇಡಿ. ನಾವು ನಮ್ಮ ಯಥಾನುಶಕ್ತಿ ಬದುಕುವ' ಎಂದವಳು. ಸಮ್ಮತ್ತೆ–ಎಂದರೆ ವೈದೇಹಿಯ ಅಮ್ಮ ಮತ್ತು ಅವಳ ತಮ್ಮ ಅಕ್ಕತಂಗಿಯರೂ, ನನ್ನ ಬಂಧು ಬಾಂಧವರೂ ಸತತ ವಿಚಾರಿಸುತ್ತ, ಬಂದು ಹೋಗುತ್ತ, ಮಾತುಕತೆ ಕುಶಾಲು ಮನೆಯಲ್ಲಿ ಮಾಯವಾಗದಂತೆ ನೋಡಿಕೊಂಡು ನಮ್ಮನ್ನು ಯಥಾವತ್ ಇಟ್ಟದ್ದು ಕೂಡ ಮರೆಯಲಾಗದ್ದು.

ಇನ್ನು, ಬರೆಯುವ ಮಡದಿ. ಅವಳೆಂದೂ ಹಾಗೆ ತೋರಿಸಿಕೊಳ್ಳಲೇ ಇಲ್ಲ. ಎಲ್ಲರಂತೆಯೇ ನಮ್ಮ ಬದುಕು ಸಾಗಿತು. ಅಡುಗೆಯನ್ನು ಯಾವ ಮಾಯಕದಲ್ಲಿ ಮಾಡುತ್ತಾಳೊ. ಈಗ ಇಲ್ಲಿ ಮಾತನಾಡುತ್ತಿದ್ದಂತೆ ಆ ಕಡೆ ಹೋಗಿ ಬರುತ್ತ ಊಟ ರೆಡಿ ಎನ್ನುತ್ತಾಳೆ. ಆಕೆ ಬರೆದದ್ದೂ ಹಾಗೆಯೇ ಎಂದು ನಾವು ನಗುವುದುಂಟು. ಅವಳು ಬರೆದದ್ದೆಲ್ಲ ಹೆಚ್ಚಾಗಿ ರಾತ್ರಿಯಲ್ಲಿ. ಕೆಲಸ ಕಾರ್ಯಗಳೆಲ್ಲ ಮುಗಿಸಿ. ಯಾರಿಗೂ ತೊಂದರೆಯಾಗಬಾರದು ಎಂಬುದು ಎಂದಿನಿಂದಲೂ ಅವಳ ಶಿಸ್ತು. ಅವಳು ಬರೆಯುತ್ತಿರುವಾಗ ಒಮ್ಮೊಮ್ಮೆ ನಾನು ಎದ್ದು ಬಂದು ಅಲ್ಲೇ ಸುಮ್ಮನೆ ಕುಳಿತು ನೋಡುವುದಿದೆ. ಬರೆಯುವಾಗ ಏಕಾಗ್ರತೆ. ಬರೆಯುವ ಸಮಯದಲ್ಲಿ ಅವಳು ನನ್ನ ಜಾನಕಿ ಅಂತ ಅನಿಸುವುದಿಲ್ಲ. ಎಲ್ಲ ಬರೆದ ಮೇಲೆ ನನಗೆ ಓದಿ ಹೇಳುವುದಿದೆ. ಕೆಲವೊಮ್ಮೆ ನನಗೇ ಓದಲು ಬಿಡುವುದೂ ಇದೆ. ನನಗೆ ತೋಚಿದ ತಿದ್ದುಪಡಿ ಹೇಳಿದರೆ ಗಮನವಿಟ್ಟು ಕೇಳುತ್ತಾಳೆ. ಆ ಬಗ್ಗೆ ಯೋಚಿಸಿ ಸರಿಯೆಂದು ಕಂಡರೆ ತಿದ್ದುತ್ತಾಳೆ.

ಏನೇ ಮನಸ್ಸಿಗೆ ಬಂದರೂ ತತ್ಪರತೆ. ಅದರಲ್ಲೇ ಲೀನ ಅವಳು. ಯಾವ ಕೆಲಸ ಮಾಡಿದರೂ ನಿಷ್ಠೆ. ಹಂಬಲ್ ಆಗಿ ಮಾಡುತ್ತಾಳೆ. ಕೆಲಸದವರು ಅವಳಿಗೆ ಮನೆಯವರಂತೆಯೇ. ಕಾಫಿ ತಿಂಡಿ, ಊಟದ ಟೈಮಾದರೆ ಊಟ, ಹಿತ್ತಲು ಸರಿ ಮಾಡುವವರು ಇತ್ಯಾದಿ ಬೇರೆ ಕೆಲಸಗಳಿಗೆ ಬರುವವರಿಗೆಲ್ಲ ಚಹಾ ತಿಂಡಿ, ಮಾತನಾಡುತ್ತ ಅವರ ಸುಖದುಃಖ ಆಲಿಸುವಳು. ನಾನು ಅವರ ಕೆಲಸದ ಟೈಮು ಸುಮ್ಮನೆ ಕಳೆಯುತ್ತಿದೆ ಎಂದು ಎಚ್ಚರಿಸುತ್ತಿರಬೇಕಾಗುತ್ತದೆ. ಅವಳ ದೊಡ್ಡಗುಣ ಎಲ್ಲರನ್ನೂ ಪ್ರೀತಿಸುವುದು. ಅವರ ಮಾತುಗಳಿಗೆ ಸಂವೇದಿಸುವುದು, ಇನ್ನೊಬ್ಬರ ಬಗ್ಗೆ ತುಂಬಾ ಕಾಳಜಿ.

ದೋಷ ಅಂದರೆ ಎಲ್ಲರೂ ಒಂದೇ ಥರ ಅಂತ ನಂಬುವುದು. ಚೆನ್ನಾಗಿ ಮಾತಾಡಿದರೆ ಸಾಕು ಒಳ್ಳೆಯವರು ಎಂದು ಭಾವಿಸುವುದು, ಸಮಾನ ಯೋಚಿಸುವವರಂತೆ ಎಣಿಸುವುದು, ಅವರೊಡನೆ ಮನಬಿಚ್ಚಿ ಮಾತಾಡುವುದು. ನಾನು ಬುದ್ಧಿವಾದ ಹೇಳದೆ ಬಿಟ್ಟಿಲ್ಲ. ಆದರೆ

ಅದೆಲ್ಲ ಹೇಳಿದ ಹೊತ್ತಿಗೆ ಮಾತ್ರ, ಮರೆತು ಬಿಡುತ್ತಾಳೆ. ಅದು ಅವಳ ಜಾಯಮಾನ.

ಮನಸ್ಸು ನೊಂದಾಗೆಲ್ಲ ಹಾಡಿಕೊಳ್ಳುವುದು ಅವಳ ಅಭ್ಯಾಸ. ಮನೆಯಲ್ಲಿ ಮಕ್ಕಳಿದ್ದ ಕಾಲದಲ್ಲಿ ಹಾಡುಗಳು ಹಾಡುಗಳು. ನಾನು ಶ್ರೋತೃ. ಕರೆಂಟ್ ಹೋದರಂತೂ ಕರೆಂಟ್ ಬರುವವರೆಗೂ ಹಾಡುವಿಕೆ. ಮೂವರೂ ಒಟ್ಟಿಗೆ ಹಾಡುವುದು ಕಿವಿಯಲ್ಲಿ ಗುಂಯ್ಗುಡುತ್ತಿದೆ. ತುಂಬ ಬೇಸರವಾದಾಗ ಬೇಕಷ್ಟೇ ಮಾತು. ಮೌನ ತಿರುಗುತ್ತಿರುತ್ತಾಳೆ. ತನ್ನೊಳಗೇ ಯಾವಾಗಲೂ ಏನೋ ಚಿಂತೆ ಚಿಂತೆ. ಅವಳಿಗೆ ಚಿಂತಾಮಣಿ ಎಂದು ಹೆಸರಿಟ್ಟರೆ ಸರಿಯಾಗುತ್ತದೆ ಎಂದು ನಾನು ಮಕ್ಕಳೂ ನಗುವುದುಂಟು.

ತನ್ನ ತಾಯಿಯಂತೆ ಧಾರಾಳಿ. ಕೊಡುಗೈ. ನಾನು ಲೆಕ್ಕಾಚಾರಸ್ಥ. ಆದರೆ ನಮ್ಮ ನಡುವೆ ಎಷ್ಟೇ ಚಕಮಕಿಗಳಾಗಲಿ, ಒಬ್ಬರನ್ನೊಬ್ಬರು ಬಿಟ್ಟು ನಾವಿಲ್ಲ. ನಾನು ವಿಶ್ವಾಮಿತ್ರ ಗೋತ್ರದವನು. ನನಗೆ ಸಿಟ್ಟು ಜಾಸ್ತಿ. ಸಿಟ್ಟು ಹೋಗುವುದೂ ಬೇಗ. ಅದು ಅವಳಿಗೆ ಗೊತ್ತು. ಅವಳು ಸಮಾಧಾನದಿಂದ ನಿಭಾಯಿಸುತ್ತಾಳೆ. ಅವಳು ಕಣ್ಣಲ್ಲಿ ನೀರು ಹಾಕಿದ್ದು ನಾನು ನೋಡಿದ್ದು ನನಗೆ ಹೃದಯಾಘಾತವಾದಾಗ. ಆ ನಂತರವೂ ಈಗಲೂ ನನ್ನ ಊಟ ತಿಂಡಿಯ ಬಗ್ಗೆ ತುಂಬ ನಿಗಾ. ಯಾವುದೂ ಅತಿಯಾಗಬಾರದು. ಸದಾ ಎಚ್ಚರ. ಈಗ ನನ್ನ ಆರೋಗ್ಯ ಚೆನ್ನಾಗಿದೆ, ಇದಕ್ಕೆ ನನಗಿಂತ ಅವಳೇ ಕಾರಣ. ಅವಳ ಆರೋಗ್ಯವೂ ಮುಂಚಿನಂತಿಲ್ಲ. ಈ ಹೊತ್ತಿನಲ್ಲಿ ನಮ್ಮ ಪಲ್ಲವಿಯ ಮಗ ಅಖಿಲ್ ನಮ್ಮೊಡನೆ ಇದ್ದಾನೆ. ಪಲ್ಲವಿ, ಅವಳ ಪತಿ ಅನಿಲ್ ಬರುತ್ತಿರುತ್ತಾರೆ. ಇದು ನಮಗೆ ಮನಸ್ಸಿಗೆ ಎಷ್ಟೋ ಶಕ್ತಿ, ಆಧಾರ, ಮನೆಯಲ್ಲಿ ಚಟುವಟಿಕೆ.

ರಜೆಯಲ್ಲಿ ನಯನಾ, ಅವಳ ಪತಿ ಬಾಲಾಜಿ, ಮಗಳು ಗೌರಿ ಎಲ್ಲರೂ ಬರುತ್ತಿರುತ್ತಾರೆ. ಮಣಿಪಾಲದ ನಮ್ಮ ಮನೆ 'ಇರುವಂತಿಗೆ'ಯಲ್ಲಿ, ಮಕ್ಕಳು ಮೊಮ್ಮಕ್ಕಳು ಅಳಿಯಂದಿರು ಎಲ್ಲರ ಬಗ್ಗೆ ತೃಪ್ತಿಯಿಂದ ಕೂಡಿದ ನಮ್ಮ ಬದುಕನ್ನು ನಮಗೆ ಕರುಣಿಸಿದ್ದು, ಆ ವಿದ್ಯಾಗಣಪತಿಯೇ ಎಂದು ನನ್ನ ನಂಬಿಕೆ.

❖

`One of the most talented writers we have today is Vaidehi. . . .The stories are well crafted and are generally centred around finely portrayed female characters. Vaidehi's celebrated story Akku may be cited as an example of her skill as a short story writer. They are also marked by a deft use of Kannada in which some of the qualities we normally associate with poetry may be seen.'

**- Dr. Ramachandra Sharma**

(In Saturday times of The times of India)

# ಅಸಾಮಾನ್ಯ ಅಮ್ಮ

✦ ನಯನಾ ಕಾಶ್ಯಪ್(ಮಗಳು)

'ಅಮ್ಮ'ನ ಬಗ್ಗೆ ಹೇಳುವುದೆಂದರೆ ಯಾವ ಮಕ್ಕಳಿಗಾದರೂ ಕಷ್ಟವೇ. ಮಕ್ಕಳು ಅತಿ ಹತ್ತಿರದಿಂದ ಅರಿಯುವ ಜೀವ ಆಕೆಯದು. ಅದರಲ್ಲೂ ಅಸಾಮಾನ್ಯ 'ಅಮ್ಮ'ನ ಕುರಿತು ಮಾತನಾಡುವುದೆಂದರೆ ಮತ್ತಷ್ಟು ಕಷ್ಟ. ಆಕೆಯ ವ್ಯಕ್ತಿತ್ವದ ಯಾವ ಮಗ್ಗುಲನ್ನು ಹೇಳಿದರೂ ಆಕೆಯ ಸಂಪೂರ್ಣ ಚಿತ್ರ ಅಪೂರ್ಣವಾಗೇ ಉಳಿಯುವ ಸಂಭವವಿರುತ್ತದೆ. ಅಂಥದೊಂದು ವ್ಯಕ್ತಿತ್ವ ನಮ್ಮ ಅಮ್ಮನದು. ಆಕೆ ಅಮ್ಮನೋ, ಮಗುವೋ, ಪ್ರೌಢೆಯೋ, ಮಿಡಿವ ಮನದವಳೋ, ವಸ್ತುನಿಷ್ಠಳೋ, ಒಳ್ಳೆಯ ಬಾಣಸಿಗಳೋ, ದೈವಭಕ್ತೆಯೋ, ಪಾರಮಾರ್ಥ ಪ್ರೇಮಿಯೋ, ಲೌಕಿಕಳೋ, ವಿನೋದಿನಿಯೋ, ಹಾಡುಗಾರ್ತಿಯೋ, ಲೇಖಕಿಯೋ, ಚಿಂತಕಿಯೋ.....ಏನೆಲ್ಲ ಒಟ್ಟು ಸೇರಿ ಆದ ಜೀವಂತಿಕೆಯ ರೂಪವಾಗಿ ತೋರುವಳು ಅಮ್ಮ.

ನಾವು ಬಾಲ್ಯದಲ್ಲಿ ಶಿವಮೊಗ್ಗೆಯಲ್ಲಿದ್ದಾಗಿನ ದಿನಗಳು ನೆನಪಾಗುತ್ತವೆ. ನನ್ನ ಮತ್ತು ಪಲ್ಲವಿಯ ಶೈಶವವನ್ನೂ ಬಾಲ್ಯವನ್ನೂ ಅಮ್ಮ ಸಂತಸದಿಂದ ಕಳೆದಿದ್ದಳೆಂತ ಕಾಣುತ್ತದೆ. ನಮ್ಮಿಬ್ಬರ ಅಸಂಖ್ಯ ಫೋಟೋಗಳಿಗೆ ಸ್ವಾರಸ್ಯಕರ ಶೀರ್ಷಿಕೆ ಬರೆದು ಆಲ್ಬಮ್ಮುಗಳಿಗೆ ಅಂಟಿಸಿದ ಅಮ್ಮ ತನ್ನ ತಾಯ್ತನವನ್ನು ಅದೆಷ್ಟು ಆನಂದಿಸಿದ್ದಳು! ನಯನಾ ಪಲ್ಲವಿಯರೆಂದರೆ ಅವಳಿಗೆ ಎರಡು ಕಣ್ಣುಗಳು. ನಾವಿಬ್ಬರು ಅಕ್ಕ ತಂಗಿ ಜಗಳವಾಡಿ ಇತ್ಯರ್ಥಕ್ಕೆ ಅಮ್ಮನ ಬಳಿ ಓಡಿದರೆ ಅವಳು ಹೇಳುತಿದ್ದುದು ಹೀಗೆಯೇ. 'ನೀವಿಬ್ಬರು ನನ್ನ ಕಣ್ಣುಗಳು. ಯಾವ ಕಣ್ಣಿಗೆ ನೋವಾದರೂ ನನಗೆ ನೋವಾಗುತ್ತದೆ. ಜಗಳವಾಡಬೇಡಿ ಮಕ್ಕಳೇ' ಅಂತ. (ಈ ಕುರಿತು ಅವಳದೊಂದು ಒಂದು ಪುಟ್ಟ ಕವನವಿದೆ) ಒಂದು ದಿನವೂ ಅಮ್ಮ ನಮ್ಮನ್ನು ಗದರಿದವಳಲ್ಲ, ಪೆಟ್ಟು ಕೊಟ್ಟವಳಲ್ಲ. ಅವಳದೇನಿದ್ದರೂ ತಿಳಿ ಹೇಳುವ ಕ್ರಮ. ಯಾವುದನ್ನಾದರೂ ಯಾಕೆ ಮಾಡಬೇಕು, ಮಾಡಬಾರದು ಎಂಬುದನ್ನು ತಾಳ್ಮೆಯಿಂದ ತಿಳಿಸಿ ಹೇಳುತ್ತಿದ್ದಳು. ಅರ್ಥಮಾಡಿಕೊಂಡರೆ ಸರಿ, ಆಗದಿದ್ದರೆ ಬೇಸರ ಪಡುತ್ತಿದ್ದಳೇ ಹೊರತು ಹೊಡೆದು ಬಗ್ಗಿಸಲು ಯತ್ನಿಸುತ್ತಿರಲಿಲ್ಲ. ಈಗ ಹಿಂತಿರುಗಿ ನೋಡುವಾಗ ಅನಿಸುತ್ತದೆ ಅಮ್ಮನಿಗೆ ತನ್ನದೇ ಮಕ್ಕಳು ಮಾತ್ರವಲ್ಲ,

ಮಕ್ಕಳೇ ಇಷ್ಟ, ಮಕ್ಕಳಾಟಿಕೆ ಇಷ್ಟ, ಮಕ್ಕಳೊಂದಿಗೆ ಬೆರೆತು ಮಗುವಾಗುವುದು ಇಷ್ಟ, ಈಗಲೂ. ಅವಳ ಮಗುಮನಸ್ಸು ಅವಳು ಬರೆದ ಮಕ್ಕಳ ನಾಟಕಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ.

ನನ್ನ ಮಗಳು ಗೌರಿ ಸಣ್ಣವಳಿದ್ದಾಗ ಅವಳನ್ನು ರಂಜಿಸಲು ನಮ್ಮನೆಯ ಅಂಗಳವೇ ರಂಗಸ್ಥಳವಾಗಿತ್ತು. ಅಲ್ಲಿ ಅಲ್ಲಲ್ಲೇ ಏಳುವಂಥ ಸಣ್ಣಪುಟ್ಟ ನಾಟಕ ಮಾಡುತ್ತಿದ್ದೆವು ನಾವು. ನಾಟಕಕ್ಕೆ ಮೂರು ಮತ್ತೊಂದು ಪ್ರೇಕ್ಷಕರಿದ್ದರೂ ತುಂಬಾ ಜನರಿದ್ದಂತೆ ಅಭಿನಯಪೂರ್ವಕ ಸ್ವಾಗತ ಭಾಷಣ ಮಾಡುತ್ತ ನಗಿಸುವವಳು ಪಲ್ಲವಿ. ಅವಳ ಸ್ವಾಗತ ಭಾಷಣದ ಬಳಿಕ ನಾಟಕ ಆರಂಭ. ಅವುಗಳಲ್ಲಿ ಒಂದು ಹೇಳಬೇಕೆಂದರೆ ಅಮ್ಮ ಮತ್ತು ಗೌರಿ ಅಂಗಳದ ಮೂಲೆಯಲ್ಲಿ ಕುಕ್ಕರಗಾಲಿನಲ್ಲಿ ಕುಳಿತಿದ್ದಾರೆ. ಅಮ್ಮ ತನ್ನೂರಿನ ಕನ್ನಡದಲ್ಲಿ 'ಒಡ್ತಿ' ಎಂದು ಕರೆದರೆ ಪುಟ್ಟ ಗೌರಿ ತೊದಲು ಭಾಷೆಯಲ್ಲಿ ಅದರದೇ ಮರುನುಡಿವಳು. ಮೇಲೆ ಜಗಲಿಯಲ್ಲಿ ಕುಳಿತ ನಾವು ಒಡತಿಯರಂತೆ ಹೂಂಗುಟ್ಟುತ್ತಲೂ 'ಇವತ್ತ್ ಒಂಚೂರ್ ಹಸಿಹುಲ್ಲ್ ಕಡಿಮಿ ಇತ್ತೇ' ಎನ್ನುವಳು ಅಮ್ಮ. ಗೌರಿ ಅದನ್ನೇ ನುಡಿವಳು. ಹೀಗೆ ಅವರಿಬ್ಬರೂ ಅಜ್ಜಿ ಮೊಮ್ಮಗಳಾಗಿ ಉದ್ದಕ್ಕೂ ಕೆಲಸದವರಂತೆ ನಟಿಸುವರು. ಬಡತನದ ಕಠೋರತೆ ಸರಳವಾಗಿ ಮಗುವಿನೆದುರಿಗೆ ಅರ್ಥಕ್ಕೆ ಕಾಯದೆ ಸಣ್ಣಗೆ ತೆರೆದು ಬಿಡುತಿತ್ತು! ಈಗ ಪಲ್ಲವಿಯ ಮಗ ಅಖಿಲ್ ಅಪ್ಪ ಅಮ್ಮರೊಂದಿಗೆ ಇದ್ದುಕೊಂಡು ಓದುತ್ತಿದ್ದಾನೆ. ಅವನಿರುವುದರಿಂದ ಅವರಿಬ್ಬರ ಚೈತನ್ಯ ಚಿಗುರಿಕೊಂಡೇ ಇರುವುದು ನಮಗೆಲ್ಲ ದೊಡ್ಡ ಸಮಾಧಾನ.

ಶಿವಮೊಗ್ಗದಲ್ಲಿದ್ದ ದಿನಗಳಲ್ಲಿ ಪಲ್ಲವಿಯೂ ನಾನು ಇನ್ನೂ ಚಿಕ್ಕವರು. ಪ್ರತಿದಿನ ಸಂಜೆ ಅಮ್ಮ ನಮ್ಮೊಂದಿಗೆ ಭಜನೆ ಮಾಡುತ್ತಿದ್ದಳು. ಅದೇನು ಬರೀ ಹಾಡುವ ಭಜನೆಯಲ್ಲ. ನೃತ್ಯವೂ ನಾಟಕೀಯ ಅಭಿನಯವೂ ಕೂಡಿದ ಭಜನೆ. ಅಮ್ಮನೂ ಸೇರಿಕೊಳ್ಳುತ್ತಿದ್ದಳು. ನಮ್ಮಲ್ಲಿ ಒಬ್ಬಳು ಭಕ್ತೆಯಾದರೆ ಇನ್ನೊಬ್ಬಳು ದೇವರು. ಆ ದೇವರ ಸುತ್ತ ಕುಣಿದು ಹಾಡುವುದು. ಇವತ್ತಿಗೂ ಯಾವುದಾದರೂ ಸುಂದರ ಹಾಡು ಕಿವಿಗೆ ಬಿದ್ದರೆ ಸಾಕು ನಾವು ಮನೆಯವರೇ ಇರುವಾಗ ಅಮ್ಮ ಪುಟ್ಟ ಹುಡುಗಿಯಂತೆ ಕೈಕಣ್ಣು ತಿರುಗಿಸುತ್ತ ನರ್ತಿಸುವುದುಂಟು. ಮಕ್ಕಳಿಗೂ ಮೊಮ್ಮಕ್ಕಳಿಗೂ ನಗೆ ಉಕ್ಕಿಸುತ್ತ ತಾನೂ ಬಿದ್ದುಬಿದ್ದು ನಗುವಳು. ಮಗುವಿನ ಮುಗ್ಧತೆಯನ್ನು ಆಕೆ ಜೀವನದ ಓಘದಲ್ಲಿ ಕಳೆದುಕೊಳ್ಳಲಿಲ್ಲ.

ಬಾಲ್ಯದ ಇನ್ನೊಂದು ಚಿತ್ರ ನನಗೆ ಈಗಲೂ ಕಣ್ಣಿಗೆ ಕಟ್ಟುತ್ತದೆ. ಪುಟ್ಟಮಕ್ಕಳಾದ ನಮ್ಮಿಬ್ಬರನ್ನು ತನ್ನ ಅಚೀಚೆ ಕೂರಿಸಿಕೊಂಡು ಧ್ವನಿ ಹಾಗೂ ಅಭಿನಯಪೂರ್ವಕವಾಗಿ ಲೆಕ್ಕವಿಲ್ಲದಷ್ಟು ಕತೆಗಳನ್ನು ಅವಳು ಓದಿ ಹೇಳುತ್ತಿದ್ದಳು. ಈಗಿನಂತೆ ಆಗಲೂ ಅವಳು ಏನನ್ನಾದರೂ ಓದಿದರೆ ಅದು ಒಣ ಓದಾಗಿರದೆ ರಸಪೂರ್ಣವಾಗಿರುತಿತ್ತು. ಕೇಳುಗರ ಮನಸ್ಸಿನಲ್ಲಿ ಚಿತ್ರ ಕೆತ್ತುವಂತೆ. ಹಾಗೆ ಕತೆ ಹೇಳುವಾಗ ಪುಸ್ತಕದ ಅಕ್ಷರಗಳಿಗೆ ಬೆರಳಿಟ್ಟು

ಓದುವಳು, ಚಿತ್ರಗಳ ವಿವರಗಳತ್ತ ನಮ್ಮ ಗಮನ ಸೆಳೆಯುವಳು – ಈ ರೀತಿ ಅದೊಂದು ಪರಿಪೂರ್ಣ ಓದು ಆಗಿರುತ್ತಿತ್ತು. ಅಂದು ಅವಳು ಹೇಳಿದ ಎಷ್ಟೋ ಕತೆಗಳು ಈಗಲೂ ಅವಳ ದನಿಯಲ್ಲೆ ನಮ್ಮ ಮನಃಪಟಲದಲ್ಲಿ ಜೀವಂತವಾಗಿವೆ.

ದಿನದಲ್ಲಿ ಅಮ್ಮನ ಅತ್ಯಂತ ಪ್ರೀತಿಯ ಸಮಯ ಬಹುಶಃ ಸಂಜೆಯ ಹೊತ್ತು. ಶಿವಮೊಗ್ಗೆಯ ನಮ್ಮ ಮನೆಯಲ್ಲಿ ತಾರಸಿಯಿತ್ತು. ಸಂಜೆಯಾಗುತ್ತಿದ್ದಂತೆ ಎಲ್ಲ ಕೆಲಸ ಮುಗಿಸಿ ಅಮ್ಮ ತಾರಸಿಯ ದಂಡೆಯ ಮೇಲೆ ಕುಳಿತು ಏನೋ ಗಾಢವಾಗಿ ಚಿಂತಿಸುತ್ತ ಕೆಂಪು ಸೂರ್ಯಗೋಲವನ್ನು ತದೇಕ ದಿಟ್ಟಿಸುವ ಚಿತ್ರ ನನ್ನ ಮನದಲ್ಲಿ ಅಚ್ಚೊತ್ತಿದೆ. ಆ ಕೆಲ ಕ್ಷಣ ಅವಳು ತನ್ನ ಮಕ್ಕಳನ್ನೂ ಮರೆಯುತ್ತಿದ್ದಳೆಂತ ಕಾಣುತ್ತದೆ. ಹಾಗೆ ದಿಟ್ಟಿಸುತ್ತ ತನ್ನ ಜೀವನದ ಗೋಜಲಿಗೆ ಉತ್ತರ ಅರಸುತ್ತಿದ್ದಳೋ, ಪ್ರಕೃತಿಯ ದಿವ್ಯತೆಯೆದುರು ಮೂಕವಾಗುತ್ತಿದ್ದಳೋ, ಬದುಕಿನ ಮುಂದಿನ ಹಾದಿಯ ಕುರಿತು ಧೇನಿಸುತ್ತಿದ್ದಳೋ.....

ಅಮ್ಮನಿಗೆ ಮನಸ್ಸಿಗೆ ಧೈರ್ಯ ಕೊಡುವ, ಸಾಂತ್ವನ ನೀಡುವ, ಮುದವೀಯುವ ಎಲ್ಲವೂ ಇಷ್ಟ. ಸಂಗೀತ, ಚಿತ್ರಕಲೆ, ನಿಟ್ಟಿಂಗ್, ಹೂಜೋಡಣೆ, ಶೂಟಿಂಗ್, ಡ್ರೈವಿಂಗ್, ಶಟಲ್, ಟೆನ್ನಿಕಾಯ್ಟ್ ಆಡುವುದು, ಸ್ತೋತ್ರ ಹೇಳುವುದು, ಓದುವುದು, ಅತಿಥಿಗಳ ಆಗಮನ, ಅಡುಗೆ ತಿಂಡಿ ಮಾಡಿ ಬಡಿಸುವುದು – ಹೀಗೆ ಏನು ಮಾಡಿದರೂ ಬಹಳ ಖುಶಿಯಿಂದ ಶ್ರದ್ಧೆಯಿಂದ ಮಾಡುವ ಗುಣ. ಮುಂದೆ, ಓದುವುದು ಮತ್ತು ಬರೆಯುವುದು ಪ್ರಧಾನವಾದ ಪರಿಣಾಮ, ಅವಳ ಅನೇಕ ಹವ್ಯಾಸಗಳು ಹಿಂದೆ ಬಿದ್ದವು. ಆಗ ನಮ್ಮ ಮನೆಯಲ್ಲಿ ಒಂದು ವೀಣೆಯಿತ್ತು. ಅಮ್ಮ ಅದನ್ನು ನುಡಿಸುತ್ತಿದ್ದುದು ನೆನಪಿದೆ. ನಮ್ಮ ಅಪ್ಪನಿಗೂ ಇವೆಲ್ಲ ಬಹು ಇಷ್ಟವಾದುದರಿಂದ, ಅವರು ಸ್ವತಃ ಸಂಗೀತ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದ್ದುದರಿಂದ ಅಮ್ಮನ ಹವ್ಯಾಸಗಳಿಗೆ ಅವರು ಯಾವತ್ತೂ ಪೂರಕವಾಗಿ ಇದ್ದರು. ಅಮ್ಮ ಹುಟ್ಟಿ ಬೆಳೆದದ್ದು ಕುಂದಾಪುರದಲ್ಲಿ. ಜನಪದ ಸಂಸ್ಕೃತಿಯ ನೆಲವದು. ಶಾಸ್ತ್ರೀಯ ಸಂಗೀತ, ಸಾಹಿತ್ಯ, ನಾಟಕಗಳಿಗೆ ಆಗ ಇನ್ನೂ ಹೆಚ್ಚು ತೆರೆದುಕೊಂಡಿರಲಿಲ್ಲ. ಅಪ್ಪನನ್ನು ಮದುವೆಯಾಗಿ ಸಾಂಸ್ಕೃತಿಕ ನಗರಿ ಶಿವಮೊಗ್ಗೆಗೆ ಬಂದ ಮೇಲೆ ಹೊಸಲೋಕವನ್ನೇ ಪ್ರವೇಶ ಮಾಡಿದಂತಾಯಿತು ಅಂತ ಅಮ್ಮ ಹೇಳುತ್ತಿರುತ್ತಾಳೆ.

ಶಿವಮೊಗ್ಗದಲ್ಲಿರುವಾಗಲೇ ನಮಗೆ ಶ್ರೀ ವಿದ್ಯಾಗಣಪತಿ ಸೇವಾ ಸಂಘದ ಮೂಲಕ ಶಾಸ್ತ್ರೀಯ ಸಂಗೀತ ಪ್ರಪಂಚದ ಪರಿಚಯವಾದದ್ದು. ಅಪ್ಪ ಶಿವಮೊಗ್ಗದ ತರಂಗಿಣಿ ಮತ್ತು ಶ್ರೀ ವಿದ್ಯಾಗಣಪತಿ ಸೇವಾ ಸಂಘದ ಸ್ಥಾಪಕ ಸದಸ್ಯರೂ, ಕಾರ್ಯದರ್ಶಿಗಳೂ ಆಗಿ ತುಂಬ ಕೆಲಸ ಮಾಡಿದವರು. ಗಣಪತಿ ಹಬ್ಬದ ಸಮಯದಲ್ಲಿ ದೂರದ ಮದ್ರಾಸಿನಿಂದಲೂ ಸಂಘದ ಆಹ್ವಾನದ ಮೇರೆಗೆ ಸಂಗೀತ ಕಛೇರಿ ನೀಡಲು ಅತ್ಯುತ್ತಮ ಕಲಾವಿದರು ಆಗಮಿಸುತಿದ್ದರು. ಎಂ. ಎಸ್. ಸುಬ್ಬಲಕ್ಷ್ಮೀ, ಚೆಂಬೈ ವೈದ್ಯನಾಥ ಭಾಗವತರು, ಘಟಂ ಮಂಜುನಾಥ್, ಡಿ.ಕೆ. ಪಟ್ಟಮ್ಮಾಳ್, ಸೂಲಮಂಗಲಂ ಸಿಸ್ಟರ್ಸ್, ವಿಕ್ಕು

ವಿನಾಯಕ ರಾಮ್, ಚಿಟ್ಟಿಬಾಬು, ಪರ್ವೀನ್ ಸುಲ್ತಾನ, ಹರಿಪ್ರಸಾದ್ ಚೌರಾಸಿಯಾ, ಎಂ.ಎಲ್.ವಸಂತಕುಮಾರಿ, ಟಿ.ಆರ್ ಮಹಾಲಿಂಗಂ, ಸಿಕ್ಕಿಲ್ ಸಿಸ್ಟರ್ಸ್, ಲಾಲ್‌ಗುಡಿ ಜಯರಾಮನ್, ಎಸ್. ರಮಣಿ, ಎಸ್. ಬಾಲಚಂದರ್, ಪರೂರು ಎಂ.ಎಸ್. ಗೋಪಾಲಕೃಷ್ಣನ್, ಟಿ.ವಿ. ಗೋಪಾಲಕೃಷ್ಣನ್, ಪಾಲ್ಘಾಟ್ ಮಣಿ ಅಯ್ಯರ್, ಶೀರ್ಕಾಳಿ ಗೋವಿಂದರಾಜನ್, ಮಧುರೈ ಸೋಮಸುಂದರಂ ಮುಂತಾದ ಇನ್ನೂ ಹಲವು ದಿಗ್ಗಜರೆಲ್ಲ ಶಿವಮೊಗ್ಗೆಗೂ, ಅವರಲ್ಲಿ ಅನೇಕರು ನಮ್ಮ ಮನೆಗೂ ಭೇಟಿ ನೀಡುತಿದ್ದುದು, ನಮ್ಮಲ್ಲಿ ಅವರ ಊಟೋಪಚಾರ ನಡೆಯುತಿದ್ದುದು – ಇವೆಲ್ಲ ಮರವೆಯೇ ಆಗದ ನೆನಪುಗಳು. (ಅವರಲ್ಲಿ ಹಲವರು ಮುಂದೆ ಉಡುಪಿಗೆ ಕಛೇರಿ ನಿಮಿತ್ತ ಬಂದವರು ನಮ್ಮ ಮನೆ ಅರಸಿಕೊಂಡು ಬಂದು ಹೋಗಿದ್ದರು) ಪ್ರತಿವರ್ಷ ಒಂದು ವಾರದ ಸಂಭ್ರಮೋತ್ಸವ ಕಾಲ ಅದು. ಮನೆಯ ಎಲ್ಲರೂ ಕಛೇರಿಗೆ ತಪ್ಪದೇ ಹೋಗುತ್ತಿದ್ದರು. ಅಮ್ಮ ನನ್ನನ್ನೂ ತಂಗಿಯನ್ನೂ ಕರೆದುಕೊಂಡು ಹೋಗಿ ರಾತ್ರಿ ಕಛೇರಿ ಮುಗಿಯುವುದು ತಡವಾದರೆ ಅಲ್ಲೆ ತನ್ನ ಕಾಲ ಮೇಲೆ ತಲೆಯೊರಗಿಸಿಕೊಂಡು, ಮುಗಿಯುತ್ತಲೂ ಎಬ್ಬಿಸಿ ಮನೆಗೆ ಹಿಂದಿರುಗುತ್ತಿದ್ದಳು. ಅರೆಮಂಪರು, ಎಲ್ಲೋ ಆಳದಲ್ಲಿ ಕೇಳಿದಂತಾಗುವ ಸಂಗೀತ, ಮತ್ತೆ ಅವಳ ತೊಡೆ ಮೇಲೆ ಮಿಸುಕಾಡಿ ನಿದ್ದೆಗಿಳಿಯುವ ಆ ಮಧುರ ಕ್ಷಣಗಳನ್ನು ಮರೆಯಲಾರೆವು. ಅಂದು ನಮ್ಮೊಳಗೆ ಸೇರಿದ ಸಂಗೀತ ಸಂಸ್ಕಾರದಿಂದ, ನಾವು ಸಂಗೀತಗಾರರಾಗದಿದ್ದರೂ, ಸಂಗೀತ ಆಲಿಸುವ ಆಸ್ವಾದಿಸುವ ಒಲವನ್ನಂತೂ ಬೆಳೆಸಿಕೊಂಡೆವು. ನೀನಾಸಂ ಸಂಪರ್ಕ ದೊರಕಿದ್ದೂ, ನಾಟಕಗಳನ್ನು ನೋಡಿದ್ದೂ ಸಾಹಿತ್ಯಿಕವಾಗಿ ಪುಷ್ಟಿ ದೊರಕಿದ್ದೂ ನಾವು ಶಿವಮೊಗ್ಗೆಯಲ್ಲಿದ್ದಾಗಲೇ. ಅವತ್ತು ನಮಗೆ ದೊರೆತ ಪ್ರೀತಿಯ ಹೆಗ್ಗೋಡಿನ ನಂಟು ಇವತ್ತಿಗೂ ಹಾಗೆಯೇ ಇದೆ. ಸುಬ್ಬಣ್ಣ ಮಾವನ ವ್ಯಕ್ತಿತ್ವವಂತೂ ನನ್ನ ಮತ್ತು ಪಲ್ಲವಿಯ ಮನದಾಳದಲ್ಲಿ ನೆಟ್ಟು ಹೋಗಿದೆ.

ವಿವಾಹಾನಂತರದ ಕೌಟುಂಬಿಕ ಜೀವನದ ಹೊರೆ ವಿರಸಗಳನ್ನು ನಿಭಾಯಿಸುವಲ್ಲಿ ಅಮ್ಮನಿಗೆ ನೆರವಾದದ್ದು ಸಂಗೀತ ಸಾಹಿತ್ಯಗಳು ಎಂಬುದು ನನ್ನ ಖಚಿತ ನಂಬಿಕೆ. ತುಂಬಿದ ಕುಟುಂಬದಲ್ಲಿ ಏಕಾಂಗಿಯಂತಿದ್ದ ಆಕೆಗೆ ಮಕ್ಕಳೇ ಮಿತ್ರರಾದರು. ಮನೆಗೆಲಸ, ಮಕ್ಕಳ ಕೆಲಸ, ಮಕ್ಕಳೊಂದಿಗೆ ಆಟ, ಮಕ್ಕಳಿಗೆ ಪಾಠ ಹೀಗೆ ಅವಳ ಸಮಯ ಕಳೆದುಹೋಗುತ್ತಿತ್ತು. ಆದರೆ ಅಮ್ಮನೊಳಗಿನ ತೆರೆದ ಕಣ್ಣಿನ ಲೇಖಕಿ ಮಾತ್ರ ಕಳೆದು ಹೋಗಲಿಲ್ಲ. ರಾತ್ರಿ ತಂಗಿಯೂ ನಾನೂ ಅಪ್ಪನೂ ಮನೆಯ ಎಲ್ಲರೂ ಮಲಗಿದ ಮೇಲೆ ತನಗೇಂತ ಸ್ವಲ್ಪ ಸಮಯ ದೊರೆತಾಗ ಅವಳು ಮತ್ತು ಅವಳ ಮೇಜು ಸಂಭಾಷಿಸುತ್ತಿದ್ದರು. ನಿದ್ದೆ ಬಂದ ಮೇಲೆ ಆಗೊಮ್ಮೆ ಈಗೊಮ್ಮೆ ಹೊರಳಿಕೊಳ್ಳುವಾಗ ಸ್ವಲ್ಪವೇ ಕಣ್ಣು ತೆರೆದು ನೋಡಿದರೆ ಟ್ಯೂಬ್‌ಲೈಟ್ ಉರಿಯುತ್ತಿರುತ್ತಿತ್ತು. ಅದರ ಕೆಳಗಿದ್ದ ಮೇಜಿನ ಮೇಲೆ ಅಮ್ಮ ಏಕಾಗ್ರತೆಯಿಂದ ಏನೋ ಬರೆಯುತ್ತ ಕುಳಿತಿರುತ್ತಿದ್ದಳು. ಇದನ್ನು ನಾವು ಕಂಡದ್ದೇ ಸ್ವಲ್ಪ ದೊಡ್ಡವರಾದ ಮೇಲೆ. ಸಣ್ಣದಿನಲ್ಲಿ ಮಾತ್ರ ಅಮ್ಮ ಯಾವಾಗ ಬರೆಯುತ್ತಿದ್ದಳೆಂತಲೇ

ನಮಗೆ ತಿಳಿಯುತ್ತಿರಲಿಲ್ಲ. ಇವತ್ತಿಗೂ ಅಮ್ಮನಿಗೆ ನಿಸ್ಸಂಶಯವಾಗಿ ಮಧ್ಯರಾತ್ರಿಯೇ ಬರವಣಿಗೆಗೆ ಪ್ರಶಸ್ತ ಸಮಯವೆನಿಸುತ್ತಿದೆ. ಈಗಲೂ ಮಣಿಪಾಲಕ್ಕೆ ಹೋದಾಗ ರಾತ್ರಿ ನೀರು ಕುಡಿಯಲೋ ಇನ್ನಾವುದಕ್ಕೋ ಎದ್ದರೆ ಅಮ್ಮ ಕಂಪ್ಯೂಟರಿನಲ್ಲಿ ಬರೆಯುತ್ತಿರುವುದು ನಾವು ಕಾಣುವ ಸಾಮಾನ್ಯ ದೃಶ್ಯವಾಗಿದೆ.

* * *

1981 ನವೆಂಬರಿನಲ್ಲಿ ನಾವು ಶಿವಮೊಗ್ಗ ಬಿಟ್ಟು ಉಡುಪಿಗೆ ಬಂದು ನೆಲೆಸುವಂತಾಯಿತು. ಆ ದಿನಗಳನ್ನು ನೆನೆದರೆ, ಅಲ್ಲಿಗೆ ನಾವು ಬಂದ ಮರುವರ್ಷವೇ, ಜೂನ್ ತಿಂಗಳಲ್ಲಿ, ಆಕಾಶ ಬಿರಿದಂತೆ ಸುರಿದ ಆ ಮಳೆಯ ನೆನಪು ಬಾರದೆ ಇರದು. ಅಂದು ಊರೆಲ್ಲ ನೆರೆಯಲ್ಲಿ ಮುಳುಗುತ್ತಿದೆ, ಶಾಲೆಗೆ ರಜೆ ಕೊಟ್ಟಿದ್ದಾರೆ, ನಾವು ಮನೆಗೆ ಮರಳುತಿದ್ದೇವೆ. ಶಾಲೆಯ ದಾರಿಯಲ್ಲಿ ದೊಡ್ಡ ದೊಡ್ಡ ಮರಗಳು, ಗಾಳಿ ಒಬ್ಬಿಗೆ ಸುಯ್ದಾಡುತಿದ್ದವು. ನಾವು ತುಸು ದೂರ ನಡೆದು ತಗ್ಗಿನಲ್ಲಿರುವ ಒಂದು ಖಾಲಿ ಮೈದಾನದಂತಹ ಜಾಗ ದಾಟಿದ ಬಳಿಕ ಸಿಗುವುದು ಮನೆಯ ಹಾದಿ. ಆ ಮೈದಾನ ಜಾಗದಲ್ಲಿ ಕೆಲವು ಮನೆಗಳು ಮತ್ತು ಒಂದು ತೆರೆದ ಬಾವಿ. ಅವತ್ತು ಬಂದ ಮಳೆಗೆ ಮೈದಾನದಲ್ಲಿ ನೀರು ತುಂಬಿ, ಮನೆಗಳೂ ನೀರಿನಿಂದ ಆವೃತವಾಗಿ ಆ ಬಾವಿಯೂ ತುಂಬಿ ಬಾವಿಯೆಲ್ಲಿ ನೆಲವೆಲ್ಲಿ ತಿಳಿಯದ ಹಾಗಾಗಿತ್ತು. ನಾವೋ ಇನ್ನೂ ಸಣ್ಣ ಮಕ್ಕಳು. ಅಪಾಯ ತಿಳಿಯದೆ ನೀರಿನಾಟದ ಹುಮ್ಮಸ್ಸಿನವರು. ಬಂದು ಬಂದು ಆ ಮೈದಾನದ ಅಂಚಿಗೆ ಇಳಿಯುತಿದ್ದೇವೆ, ನೋಡಿದರೆ ಇನ್ನೊಂದು ಅಂಚಿನಲ್ಲಿ ಅಮ್ಮ! ಪಾಪ, ಎಷ್ಟು ಕಂಗಾಲಾಗಿದ್ದಳೋ! ಆ ಜಾಗವೆಲ್ಲ ಗೊತ್ತಿದ್ದ ಮುದುಕಿ ಸೀತುವಿನೊಂದಿಗೆ ಬಂದು ನಿಂತಿದ್ದಾಳೆ. ಮುಂದೆ ಬರಬೇಡಿ ಎಂದು ಕೂಗು ಹಾಕುತಿದ್ದಾಳೆ. ಅದನ್ನು ಕೇಳಿ ನಾವು ನಿಂತಲ್ಲೆ ನಿಂತೆವು. ಇಬ್ಬರೂ ಸೊಂಟಮಟ್ಟಕ್ಕೂ ಮಿಕ್ಕಿದ ನೀರಿನಲ್ಲಿ ಬಂದು ನಮ್ಮನ್ನು ಜಾಗ್ರತೆಯಿಂದ ಈಚೆ ದಾಟಿಸಿಕೊಂಡು ಬಂದರು. ಹಾಗೆ ದಾಟುವಾಗ ನೀರಿನಲ್ಲಿ ಹರಿದಾಡುತ್ತಿದ್ದ ನೀರುಹಾವು, ಕಪ್ಪೆ ಇತ್ಯಾದಿಗಳು; ನಮಗೆ ಭಯವೂ, ಸಂತಸವೂ. ಇಲ್ಲೇ ಬಿತ್ತು ಎಂಬಂಥ ಸಿಡಿಲು, ಗುಡುಗು, ಮಳೆಯೊಂದಿಗೆ ಹುಚ್ಚುಗಾಳಿ ಬೀಸುವ ರಾತ್ರಿಗಳಲ್ಲಿ, 'ಎಲ್ಲರೂ ಒಟ್ಟಿಗೆ ಒಂದೇ ಕಡೆ ಮಲಗುವ, ಸತ್ತರೆ ಎಲ್ಲರೂ ಒಟ್ಟಿಗೇ ಸಾಯುವ' ಎಂದು ಅಮ್ಮ ನಮ್ಮನ್ನು ಅವುಚಿಕೊಂಡು ಮಲಗುತಿದ್ದುದು ನೆನಪಾಗುತ್ತಿದೆ. ಈಗಲೂ ಮಳೆ ಕಣ್ಣುಮುಖವಿಲ್ಲದೆ ಹೊಡೆಯುತ್ತಿರುವಾಗೆಲ್ಲ ನಮ್ಮೊಳಗೆ ಏನೋ ತಲ್ಲಣ. ಮನೆ ಭದ್ರವಿಲ್ಲದ ಎಷ್ಟು ಜನರಿಗೆ ಏನೆಲ್ಲ ಆತಂಕ ಆಗುತ್ತಿದೆಯೋ. ಮೊನ್ನಿನ ರಕ್ಕಸಮಳೆಗೆ ಕೆಲ ಮಕ್ಕಳು ತೇಲಿ ಹೋದ ಸುದ್ದಿ ಕೇಳಿಯಂತೂ. . .

ಮಣಿಪಾಲದಲ್ಲಿ ಸ್ವಂತ ಮನೆಗೆ ಬರುವ ಮೊದಲು ಉಡುಪಿಯಲ್ಲಿ ಮೊದಲು ಒಂದು, ಆಮೇಲೆ ಮತ್ತೊಂದು ಬಾಡಿಗೆ ಮನೆಯಲ್ಲಿದ್ದೆವು. ಅದು ಬಲು ಹೋರಾಟದ

ಅವಧಿ. ಆಗಲೂ ಅಪ್ಪ ಅಮ್ಮ ಧೃತಿಗೆಡಲಿಲ್ಲ. ಮನೆಯ ಕ್ಷೋಭೆಯ ಬಿಸಿ ನಮಗೆ ತಾಗದಂತೆ ನೋಡಿಕೊಂಡಿದ್ದರು. 'ದೊಡ್ಡಮ್ಮ' (ಎಂದರೆ ಅಮ್ಮನ ಅಮ್ಮ, ಅಜ್ಜಿ) ಮತ್ತು ದೊಡ್ಡಮ್ಮ ಚಿಕ್ಕಮ್ಮಂದಿರ, ಮಾವಂದಿರ ಪ್ರೀತಿಕೊಂಡಾಟದಲ್ಲಿಯೂ ಅಂದಿನ ಝಳ ನಮಗೆ ಹೆಚ್ಚು ಸೋಕಲೇ ಇಲ್ಲ. ಅಂಥಾ ಸಮಯದಲ್ಲೂ ಅಮ್ಮ ನಗೆ, ಆಟ, ಬರಹ ಬಿಡಲಿಲ್ಲ. ನಾನೂ ಪಲ್ಲವಿಯೂ ಇನ್ನೂ ಚಿಕ್ಕವರೇ. ಪ್ರೈಮರಿ ಶಾಲೆಯಲ್ಲಿದ್ದೆವು. ಅಮ್ಮ ನಮ್ಮೊಂದಿಗೆ ಸಾಕಷ್ಟು ಸಮಯ ಕಳೆಯುತ್ತಿದ್ದಳು. ನಮಗೆ ಅಮ್ಮನ ಒಂದು ನಿಯಮವಿತ್ತು. ಅದು ಅವಳಿಗೆ ಅವಳ ಅಮ್ಮನಿಂದ, ನಮ್ಮ ದೊಡ್ಡಮ್ಮನಿಂದ, ಬಂದದ್ದು. "ಎಲ್ಲ ಕೆಲಸವೂ ಗೊತ್ತಿರಬೇಕು ಯಾವುದೂ 'ಗೊತ್ತಿಲ್ಲ' ಅಂತಿರಬಾರದು, ಯಾವುದು ಯಾವಾಗ ಅಗತ್ಯ ಬೀಳುತ್ತದೆ ಹೇಳಲು ಬಾರದು" – ಎಂಬ ನಿಯಮವದು. ಅಂತೆಯೇ ಅಮ್ಮ ನಮ್ಮನ್ನು ತಿದ್ದಿದಳು. ಇನ್ನೂ ಬೆಳೆಯುತ್ತಿರುವ ಹಂತದಲ್ಲಿದ್ದ ನಮ್ಮನ್ನು ಎಲ್ಲ ಕೆಲಸಗಳಿಗೂ ಸೇರಿಸಿಕೊಳ್ಳುತ್ತಿದ್ದಳು. ಅಡುಗೆ, ಹಪ್ಪಳ ಸೆಂಡಿಗೆ ಮಾಡುವುದು, ತಿಂಡಿ ಮಾಡುವುದು, ಹೂ ಕಟ್ಟುವುದು, ಅಂಗಳಕ್ಕೆ ಸೆಗಣಿ ಗುಡಿಸಿ ಸಾರಿಸುವುದು, ನಲ್ಲಿಯ ನೀರು ಬಾರದಾಗ ಬಾವಿಯಿಂದ ನೀರು ಸೇದುವುದು, ಕರೆಂಟು ಇಲ್ಲದಾಗ ಅರೆಯುವ ಕಲ್ಲಿನಲ್ಲಿ ಕಡೆಯುವುದು, ಮಜ್ಜಿಗೆ ಕಡೆಯುವುದು, ರಂಗೋಲಿ ಹಾಕುವುದು, ಕಥೆ ಕವನ ಓದುವುದು, ತಾನು ಬರೆದದ್ದನ್ನು ನಮಗೆ ಓದಿ ಹೇಳುವುದು ನಾವು ಕೇಳುವುದು ಎಲ್ಲವನ್ನೂ ಜೊತೆಜೊತೆಗೇ ಮಾಡುತ್ತಲೇ ನಾವು ಬೆಳೆದು ದೊಡ್ಡವರಾದೆವು. ಇಷ್ಟರಲ್ಲಿ ಅಮ್ಮ ಬರೆಯುವವಳೆಂತ ನಮ್ಮಿಬ್ಬರಿಗೂ ದೃಢವಾಗಿ ಅರಿವಿಗೆ ಬಂದಿತ್ತು. ಅಮ್ಮ ಬರೆಯಲು ಕುಳಿತರೆ, ಏನಾದರೂ ತಿದ್ದುತ್ತಿದ್ದರೆ ನಾನೂ ತಂಗಿಯೂ ತೊಂದರೆ ಕೊಡುತ್ತಿರಲಿಲ್ಲ. ಆ ಹೊತ್ತಿಗೆ ಅವಳು ಬೇರೆಯೇ ವ್ಯಕ್ತಿಯೆಂಬಂತೆ ನಮಗೆ ಅನಿಸುತಿತ್ತು.

ಬದುಕಿನಲ್ಲಿ ಚೆಲುವು ಕಾಣುವ ದೃಷ್ಟಿ ಆಕೆಯದು. ಬೇಸಗೆ ರಜೆಯಲ್ಲಿ, ನಾವಿದ್ದ ಆ ಪುಟ್ಟ ಮನೆಯ ಅಂಗಳಕ್ಕೆ ಸಂಭ್ರಮದಿಂದ ಸೆಗಣಿ ಸಾರಿಸುತಿದ್ದೆವು ನಾವು. ಮಾರನೆಯ ದಿನ ಬೆಳಿಗ್ಗೆ ನೋಡಿದರೆ ಆ ನೆಲದ ಮೇಲೆ ಅಂಗಳದಂಚಿನಲ್ಲಿದ್ದ ಐದು ಪಕಳೆಯ ನಂದಿಬಟ್ಟಲು ಗಿಡ ತನ್ನ ಬಿಳಿಯ ಹೂವಿನ ಮಳೆ ಸುರಿಸಿರುತಿತ್ತು. ಅದು ಎಂತಹ ಪ್ರಸನ್ನ ಅನುಭವವೆನ್ನಲಿ! ನಾವೋ ಬಿಸಿಲು ಬೀಳುವವರೆಗೂ ಮೆಟ್ಟಿಲ ಮೇಲೆ ಕುಳಿತು ಒಟ್ಟಿಗೇ ಅದನ್ನು ಸವಿಯುತ್ತಿದ್ದೆವು.

ದೇಹ ಬಳ್ಳಿಯಂತಿದ್ದರೂ ಕೆಲಸದ ಕಟ್ಟಾಳು ನಮ್ಮಮ್ಮ. ಅದು ಬರವಣಿಗೆಯೇ ಇರಲಿ, ಅಡುಗೆ ಮನೆ ಕೆಲಸವೇ ಆಗಿರಲಿ, 'ಕಷ್ಟ, ಸಮಯ ಇಲ್ಲ' ಎಂಬ ಸಮಸ್ಯೆ ಅವಳಿಗಿಲ್ಲವೇ ಇಲ್ಲ. ಬೆಳಗಿನ ತಿಂಡಿ, ಅಡುಗೆ, ನೆಂಟರು ಇಷ್ಟರು, ಮಣಿಪಾಲ ಆಸ್ಪತ್ರೆಗೆ ಬರುವ ಬಂಧುಗಳು, ಸಂಜೆ ಬಂದು ಹೋಗುವವರು, ಚಕ್ಕುಲಿ, ಕೋಡುಬಳೆ, ಉಂಡಲಕಾಯಿ, ಶ್ಯಾವಿಗೆ, ದೊಡ್ಡ, ಪತ್ರೊಡೆ, ರಾತ್ರಿ ಎಲ್ಲರೊಡನೆ ಟಿ.ವಿ., ಪಟ್ಟಾಂಗ,

ಊಟ-ಎಲ್ಲವನ್ನು ನಿಭಾಯಿಸಿಕೊಂಡೇ ಇದೆಲ್ಲದರ ನಡುವೆಯೇ ಅಪ್ಪನ ಜೊತೆ ಮನೆಯ ಸಮಸ್ಯೆಗಳ, ಪರಿಹಾರದ ದಾರಿಯ ಮಂಥನ-ತಡರಾತ್ರಿ ಬರಹ!

ಮುಂದೆ ಅಧ್ಯಯನದ ಉದ್ದೇಶದಿಂದ ಅಮ್ಮನ ಕತೆಗಳನ್ನು ಓದಿದಾಗ ಅವಳ ಚಿಂತನೆ ಹಾಗೂ ಪ್ರತಿರೋಧಗಳ ಆಳ ಮತ್ತು ಹರವು, ಬದುಕಿನ ಸಂಘರ್ಷಗಳಿಗೆ ಅವಳು ಮಿಡಿಯುವ ಪರಿ ನನಗೆ ಗಾಢವಾಗಿ ಗೋಚರಿಸಿತು. ನಮ್ಮೊಡನೆ ಸಣ್ಣಗೆ ಚರ್ಚಿಸುತ್ತ, ಮನಸ್ಸಿನಲ್ಲಿ ಬೆಳಕು ಹರಿಸುತ್ತಿದ್ದ ಅನೇಕ ವಿಷಯಗಳು ಹೇಗೆ ಅವಳ ಬರವಣಿಗೆಯಲ್ಲಿ ಸಾಹಿತ್ಯರೂಪ ಪಡೆದಿವೆ ಎಂದು ನನಗಾದ ಸೋಜಿಗಕ್ಕೆ ಮಿತಿಯಿಲ್ಲ. ಸೋಜಿಗವೊಂದೇ ಅಲ್ಲ, ಅದು ಅಮ್ಮನ ದರ್ಶನವೂ.

ಯಾವತ್ತೂ ನಮ್ಮನ್ನು ಇದೇ ಓದಿ ಅದೇ ಓದಿ ಎಂದವರಲ್ಲ ಅಪ್ಪ ಅಮ್ಮ. ನಾವು ಇಷ್ಟಪಟ್ಟು ಓದಿದ ಕೋರ್ಸನ್ನು ಓದಿಸಿದರು. ಸದಾ ನೆಂಟರು, ಪರಿಚಯದವರು, ಸಾಹಿತಿಗಳು ಮುಂತಾಗಿ ಬಂದು ಹೋಗುವವರೊಡನೆ ಬೆರೆಯುತ್ತ ಇದ್ದ ನಾವು ಯಾವಾಗ ಓದಿದೆವೋ ನಮಗಂತೂ ಸರಿಯಾಗಿ ನೆನಪಿಲ್ಲ. ನಾನು ಇಷ್ಟಪಟ್ಟ ಹುಡುಗನನ್ನು ಆತನ ಜಾತಿ, ಮತ ಕೇಳದೆ ತಮ್ಮ ಮಗಳ ಜೊತೆ ಬಾಳಲು ಯೋಗ್ಯನೇ ಎಂದಷ್ಟೇ ನೋಡಿ ಹಸಿರು ನಿಶಾನೆ ನೀಡಿದರು ಅಮ್ಮ ಅಪ್ಪ. ಇವತ್ತಿಗೂ ಇಬ್ಬರೂ ಅಳಿಯಂದಿರನ್ನೂ ತಮ್ಮ ಮಕ್ಕಳಂತೆಯೇ ವಾತ್ಸಲ್ಯದಿಂದ ತಮಾಷೆ-ಕುಶಾಲು ಮಾತಾಡುತ್ತ ಕಾಣುವರು. ಅವರೂ ಇವರನ್ನು ಅತ್ತೆ ಮಾವ ಎಂದೆಣಿಸದೇ ಹೆತ್ತವರಂತೆ ಕಾಣುವ ಗುಣದವರು.

ಅಮ್ಮನಲ್ಲಿ ವಿಶಿಷ್ಟವಾಗಿ ನನಗೆ ಕಾಣುವ ಗುಣಗಳು ಅನೇಕ. ಆಕೆಯ ಮನೋಬಲ ಎಲ್ಲಕ್ಕಿಂತ ಪ್ರಬಲವಾದುದು. ಮನಸ್ಸು ಮಾಡಿದಳೆಂದರೆ ಎಂತಹ ಕಠಿಣ ಕೆಲಸವನ್ನೂ ಆಕೆ ಮುಗಿಸದೆ ಬಿಡುವವಳಲ್ಲ. ಮಾಡುವ ಎಲ್ಲ ಕೆಲಸಗಳಲ್ಲಿಯೂ ಅವಳಿಗೆ ಏಕಪ್ರಕಾರದ ಏಕಾಗ್ರತೆ, ಉತ್ಸಾಹ. ಇನ್ನೂ ಒಂದು ಆಕೆಯ ಅತ್ಯಂತ ಮಾನವೀಯ ಗುಣ-ಕಷ್ಟದಲ್ಲಿದ್ದವರಿಗೆ, ತೊಂದರೆ ಅನುಭವಿಸುತ್ತಿರುವವರಿಗೆ ತನ್ನಿಂದಾದ ಸಹಾಯ ಮಾಡುವಳು. ಅವರಿವರಿಗೆ ಫೋನು ಮಾಡಿ ಸಹಾಯ ಬೇಕಾದವರ ಪರವಾಗಿ ಮಾತನಾಡಿ ನೊಂದವರ ಬೇಗೆ ಒಂದಿಷ್ಟು ಕಡಿಮೆ ಮಾಡಲು ತನ್ನಷ್ಟಕ್ಕೇ ಯಾವ ಸದ್ದುಗದ್ದಲವಿಲ್ಲದೆ, ಉಳಿದವರಿಗೆ ಗೊತ್ತೇ ಆಗದಂತೆ, ಆದಷ್ಟೂ ಪ್ರಯತ್ನ ಮಾಡುವಳು. ಅದಕೋಸ್ಕರ ಯಾರನ್ನು ಸಹಾಯ ಕೇಳಲೂ ಆಕೆ ಹಿಂಜರಿಯಳು. ನಮಗೆ ಯಾವಾಗಲೂ ಹೇಳುವುದುಂಟು ಆಕೆ 'ಯಾರು ನಮಗೇನು ಮಾಡಿದರು ನೋಡಬೇಡಿ. ನೀವೇನು ಮಾಡಿದಿರಿ ಪ್ರಶ್ನಿಸಿಕೊಳ್ಳಿ, ನಮ್ಮೊಳಗಿನ ಪ್ರೀತಿಯೇ ಎಲ್ಲರನ್ನೂ ಸೇರಿಸಿಕೊಂಡು ಹೋಗಲು ನಮಗೆ ಶಕ್ತಿ ಕೊಡುತ್ತದೆ.' ಹಾಗೆಂತ ತೀರಾ ವಂಚಕ ಪ್ರವೃತ್ತಿಯವರು, ಕೃತಕ ಗುಣದವರ ಜೊತೆ, ಒಮ್ಮೆ ಅದು ಅವಳಿಗೆ ಮಂದಟ್ಟಾಯಿತೆಂದರೆ, ಸಂಬಂಧ ಕಳೆದುಕೊಳ್ಳದಿದ್ದರೂ ಮೌನವಾಗಿಯೇ ಅವರನ್ನು ದೂರವಿರಿಸುತ್ತಾಳೆ ಅಮ್ಮ.

ಇನ್ನು ಆಕೆಯ ಕುಟುಂಬ ಪ್ರೀತಿ. ನೆಂಟರಿಷ್ಟರನ್ನು ಖುಶಿಯಿಂದ ಉಪಚರಿಸುತ್ತ 'ಇನ್ನೊಮ್ಮೆ ಆರಾಮವಾಗಿ ಬನ್ನಿ' ಎನ್ನುತ್ತಲೇ ತನ್ನ ಬರವಣಿಗೆಯ, ಚಿಂತನೆಯ ದೀಪವನ್ನು ಹಚ್ಚಿ ಇಟ್ಟುಕೊಂಬವಳು. ದೊಡ್ಡ ಕುಟುಂಬದಲ್ಲಿ ಹುಟ್ಟಿ ಬೆಳೆದು, ತುಂಬಿದ ಕುಟುಂಬಕ್ಕೆ ಮದುವೆಯಾಗಿ ಹೋಗಿ ಅನೇಕ ಏಳು ಬೀಳುಗಳನ್ನು ಕಂಡವಳು ಅವಳು. ಸಣ್ಣ ದೊಡ್ಡ ಮಾತುಗಳು ಬಂದು ಹೋಗುವ ಪ್ರಮೇಯಗಳು ಅಲ್ಲಿ ಸಾಮಾನ್ಯ. ಅವ್ಯಾವುದನ್ನು ಹೆಚ್ಚು ಗೊಡವೆಗೆ ತೆಗೆದುಕೊಳ್ಳದೆ ನಿರ್ವ್ಯಾಜವಾಗಿ ಪ್ರೀತಿಸುವ ಗುಣ ಅವಳದು. 'ಕುಟುಂಬವೆಂದ ಮೇಲೆ ಕಷ್ಟವೋ ಸುಖವೋ ನಿಭಾಯಿಸಿಕೊಂಡು ಹೋಗಬೇಕು' ಎಂಬ ಅಮ್ಮನ ನೀತಿಯನ್ನು ನಾವೂ ಎಂದಿಗೂ ಕೈಬಿಡೆವು.

ಹಾಗೆ ಅಮ್ಮನಿಗೆ ಸಿಟ್ಟು ಬರುವುದೇ ಇಲ್ಲ ಅಂತೇನಿಲ್ಲ. ಸಾಕಷ್ಟು ದೊಡ್ಡವರಾದ ಮೇಲೆ ಕೆಲವು ಸಂಗತಿಗಳು ಹೇಳದೆಯೂ ಗೊತ್ತಾಗಬೇಕು, 'ಗ್ರಹಿಕೆ' ಬೇಕು ಎಂಬ ಕಾರಣಕ್ಕೆ ಗದರುತ್ತಿದ್ದಳು. ನನ್ನ ಮಗಳು ಆರನೇ ತರಗತಿಗೆ ಬರುವಾಗ ನಾವು ಅವಳನ್ನು ವಸತಿಶಾಲೆಯಲ್ಲಿ ಹಾಕಬೇಕೆಂದು ನಿರ್ಧರಿಸಿದೆವು. ಆ ನಿರ್ಧಾರವನ್ನು ಅಮ್ಮನಿಗೆ ಸಹಿಸಲಿಕ್ಕೇ ಆಗದೆ ತೀವ್ರವಾಗಿ ಖಂಡಿಸಿದಳು. ನಾನೂ ಮಗಳೂ ಆ ಸಮಯ ಮಣಿಪಾಲದ ಮನೆಗೆ ಹೋಗಿದ್ದಾಗ ಮೂರು ದಿನ ಸತತವಾಗಿ ನಮ್ಮೊಡನೆ ಒಂದು ಮಾತನ್ನೂ ಆಡಲಿಲ್ಲ. ಜೊತೆಗೇ ಉಣ್ಣುವುದು ತಿನ್ನುವುದು ಎಲ್ಲ, ಆದರೆ ಮಾತಿಲ್ಲ ವಾತಾವರಣ ಉಸಿರುಗಟ್ಟಿಸಿ ಬಿಟ್ಟಿತ್ತು. ಹೀಗೆ ತನಗೆ ಸರಿಯಲ್ಲವೆಂದು ಕಂಡದ್ದನ್ನು ನಿಲ್ಲಿಸಲು ಸಾಧ್ಯವಾಗದಾಗ ತೀರಾ ಮೌನಿಯಾಗಿಬಿಡುವಳು ನನ್ನಮ್ಮ.

ಬದುಕಿನುದ್ದಕ್ಕೂ ಅಮ್ಮನಿಗೆ ಬೆನ್ನೆಲುಬಾಗಿ ನಿಂತಿದ್ದು ಬರವಣಿಗೆಯ ಶಕ್ತಿ. ಅದು ಅವಳನ್ನು ಆಯ್ಕೆ ಮಾಡಿಕೊಂಡಿತೋ ಅವಳದನ್ನು ಆಯ್ಕೆಮಾಡಿಕೊಂಡಳೋ.... ಪರಿಶ್ರಮವಂತೂ ಅವಳದೇ. ಆದರೆ ಈಗವಳಿಗೆ ಮುಂಚಿನ ವೇಗವಾಗಲೀ ದೇಹಶಕ್ತಿಯಾಗಲೀ ಇಲ್ಲವೆಂಬುದು ನಮಗೇ ತಿಳಿಯುತ್ತಿದೆ. ಒಮ್ಮೊಮ್ಮೆ 'ಹೇಳಲು ಇನ್ನೂ ಬಹಳ ಇದೆ. ಹೆಚ್ಚು ಸಮಯ ಮಾತ್ರ ಇಲ್ಲ' ಎನ್ನುವುದುಂಟು. 'ನಿನ್ನ ಬ್ಲಾಕ್‌ಮೇಲ್ ಎಲ್ಲ ಬೇಡ, ಹೇಳಬೇಕಾದ್ದನ್ನೆಲ್ಲ ಹೇಳುವವರೆಗೂ ನೀನಿರುತ್ತೀ, ಕಿವಿಯಾಗಿ ಅಪ್ಪನೂ ನಾನೂ ಪಲ್ಲವಿಯೂ ನಿನ್ನ ಪ್ರಿಯ ಓದುಗರೂ ಎಂದಿನಂತೆ ಸಿದ್ಧ ಇರುತ್ತೇವೆ' ಎಂದು ನಾವು ಪ್ರತಿನುಡಿದು ನಗುತ್ತಿರುತ್ತೇವೆ. ಎಷ್ಟು ಬೇಗ ದಿನಗಳು ಕಳೆದು ಹೋದವು ಎಂಬ ಕಳವಳದೊಂದಿಗೇ.



# ಭಾತಿವಂತೆ, ಛಲಗಾತಿ ನನ್ನಮ್ಮ

✦ ಪಲ್ಲವಿ ರಾವ್ (ಮಗಳು)

ಯಾರಿಗೇ ಆಗಲಿ, ತಮ್ಮ ತಂದೆತಾಯಿ ಕುರಿತು ಬರೆಯುವುದು ಕಷ್ಟ. ಅಮ್ಮನ ಕುರಿತಂತೂ ಬಹಳ ಕಷ್ಟ. ಅದರಲ್ಲೂ 'ವೈದೇಹಿ' ಅಮ್ಮ ಆಗಿರುವಾಗ. ಅಂತೂ ಸುರುಮಾಡಿದ್ದೇನೆ. ಏನು ಹೇಳಿದರೂ ಅದು ಅರ್ಧಂಬರ್ಧ ಎಂದು ಗೊತ್ತಿದ್ದೂ.

ಏಳನೇ ತಿಂಗಳಿಗೇ ಹುಟ್ಟಿದವಳು ನಾನು. ಎಷ್ಟು ಸಣ್ಣ ಮಗು ಅಂದ್ರೆ, ಸ್ನಾನ ಮಾಡಿಸಹೋದರೆ ಜಾರಿ ಜಿಡುತ್ತಿದ್ದೆನಂತೆ. ಅಮ್ಮ ನನ್ನನ್ನು ಯಾರಿಗೂ ಎತ್ತಿಕೊಳ್ಳಲೂ ಜಿಡದೆ ಹಗಲಿರುಳು ಕಣ್ಗೊಂಬೆಯಂತೆ ಜೋಪಾನ ಮಾಡಿಕೊಂಡು ಮೂರು ತಿಂಗಳಾಗುವ ಹೊತ್ತಿಗೆ ಸಮಸ್ಥಿತಿಗೆ ತಂದಳು ಎನ್ನುತ್ತಾರೆ ನೋಡಿದವರು. ಈಗಲೂ 'ಇವಳಾಗಿದ್ದಕ್ಕೆ ಈ ಮಗು ಬದುಕಿತು' ಎಂದು ಅಮ್ಮನಿಗೆ ಶಿಫಾರಸು ಕೊಡುವುದುಂಟು. ಏಳು ತಿಂಗಳಿಗೇ ಹುಟ್ಟಿದ್ದರಿಂದ ನನ್ನನ್ನ ಎಲ್ಲರೂ ಚುರುಕು ಎನ್ನುತ್ತಾರೆ, ಆದರೆ ನಿಜಾಂಶ ಅಂದರೆ ಅಮ್ಮನೇ ಚುರುಕಿನ ಬುರುಡೆ. 'ನಿನ್ನ ಚುರುಕಿನಿಂದಾಗಿ ಮನಸ್ಸಿಲ್ಲದಿದ್ದರೂ ನಾನು ಏಳು ತಿಂಗಳಿಗೆ ಹುಟ್ಟಬೇಕಾಯ್ತು' ಎಂದು ನಾನವಳನ್ನು ಚುಡಾಯಿಸುವುದಿದೆ.

ನಾವು ಚಿಕ್ಕಂದಿನಲ್ಲಿ ಆಟವಾಡುತ್ತಿರುವಾಗ, ಅಲ್ಲೇ ಏನೋ ಕೆಲಸದಲ್ಲಿರುತ್ತಿದ್ದ ಅಮ್ಮ ಅದನ್ನೆಲ್ಲ ಬಿಟ್ಟು ಫಕ್ಕನೆ ಏನೋ ನೆನಪಾದಂತೆ ಹೋಗಿ ಎರಡು ನಿಮಿಷ ಏನೋ ಬರೆದು ಬರುತ್ತಿದ್ದುದು ನೆನಪಿದೆ. ಮಧ್ಯರಾತ್ರಿ ದೀಪ ಹಚ್ಚಿದಂತಾಗಿ ಕಣ್ಣು ತೆರೆದು ನೋಡಿದರೆ ಅಮ್ಮ ತನ್ನ ಮೇಜಿನಲ್ಲಿ ಬರೆಯುತ್ತಿರುವ ಚಿತ್ರ ಮಕ್ಕಳಾದ ನಮಗಿಬ್ಬರಿಗೂ ಇನ್ನೂ ಅಚ್ಚೊತ್ತಿದಂತಿದೆ. ಮೊದಲಿಂದಲೂ ಅವಳ ತಲೆದೆಸೆಯಲ್ಲೊಂದು ಪೆನ್ನು-ಪೇಪರು. ಮಲಗಿದಾಗ ಏನೋ ಹೊಳೆದಾಗೆಲ್ಲಾ ಥಟ್ಟಂತ ಎದ್ದು ಕತ್ತಲೆಯಲ್ಲೇ ಗೀಚಿ ಥಟ್ಟಂತ ಮಲಗುವುದು ಅವಳ ಅಭ್ಯಾಸ. ನಾವು ಬೆಳಿಗ್ಗೆ ಎದ್ದು ಅದನ್ನು ಓದಲು ಪ್ರಯತ್ನಿಸಿದರೆ ಊಹೂಂ ಅದು ನಮ್ಮೊಂದಿಗೆ ಮಾತಾಡದು. ಬಹುಶಃ ಡಾಕ್ಟರು ಬರೆಯುವ ಮದ್ದಿನ ಚೀಟಿಯನ್ನಾದರೂ (ಔಷಧಿಯ ಹೆಸರು ಗೊತ್ತಿಲ್ಲದಿದ್ದರೂ) ಓದಬಹುದೇನೋ, ಈ ಅಮ್ಮನ ಟಿಪ್ಪಣಿಯನ್ನಲ್ಲ. ಹಾಗೆಂತ ಅವಳ ಅಕ್ಷರ ತುಂಬ ಚಂದ, ಪ್ರೌಢ.

ಮೊದಲೆಲ್ಲ ಕೈಯಲ್ಲಿ ಬರೆದು ತಿದ್ದಿ ಪುನಃ ಬರೆದು ಅಚ್ಚಿಗೆ ಕಳಿಸುತ್ತಿದ್ದಳು. ಕಳಿಸಿದ ಮೇಲೂ ಎಷ್ಟೋ ಸಾರಿ ಯಾವುದೋ ಶಬ್ದ, ವಾಕ್ಯ ಬದಲಿಸಿ ಪುನಃ ಪೂರ್ತಿ ಪ್ರತಿ ತೆಗೆದು ಕಳಿಸಿದ್ದುಂಟು. ನಾವು ಹೈಸ್ಕೂಲಿಗೆ ಬರುತ್ತಿದ್ದಂತೆ ಕೆಲವು ಸಲ ಅವಳು ಕರಡನ್ನು ಓದಿ ಹೇಳುತ್ತಿದ್ದಳು, ನಾವು ಮುದ್ರಣದ ಪ್ರತಿ ಬರೆದುಕೊಳ್ಳುತ್ತಿದ್ದೆವು. ಮುಂದೆ ನಾನು ಕಂಪ್ಯೂಟರ್ ಕಲಿತು, ಮನೆಯಲ್ಲೇ ಸೆಂಟರ್ ನಡೆಸುತ್ತಿದ್ದಾಗ ಅಮ್ಮನ ಕೆಲವು ಕೃತಿಗಳನ್ನು (ಅಮ್ಮಚ್ಚಿಯೆಂಬ ನೆನಪು, ಜಾತ್ರೆ, ಪಾರಿಜಾತ, ಸಂಗೀತ ಸಂವಾದ, ಕೋ.ಲ. ಕಾರಂತ ಕೃತಿಯ 2ನೇ ಮುದ್ರಣ) ನಾನು ಮುದ್ರಣಕ್ಕೆ ರೆಡಿ ಮಾಡಿದೆ; ಆಗೆಲ್ಲ ಜತೆಗೇ ಕುಳಿತಿರುತ್ತಿದ್ದ ಅಮ್ಮನಿಗೆ ಕಂಪ್ಯೂಟರ್ ಬಗ್ಗೆ ಹೇಳುತ್ತಿದ್ದೆ. ಕಲಿಯುವಾಗ ನನ್ನ ಹತ್ತಿರ ಎಷ್ಟು ಬೈಸಿಕೊಂಡಳು ಎಂದರೆ, ಈಗ ಎಣಿಸಿದರೂ ಹೊಟ್ಟೆ ಚುರ್ರ್ ಎನ್ನುತ್ತದೆ. ಆದರೆ ಕಲಿತು ಬಿಟ್ಟಳಲ್ಲ! ಈಗ ಸೀದಾ ಕಂಪ್ಯೂಟರಿನಲ್ಲೇ ಬರೆದು ತಿದ್ದಿ, ಕಳಿಸಿ – ಎಲ್ಲಾ ಸಲೀಸಾಗಿ ಮಾಡುತಾಳೆ.

ಅಮ್ಮನ ಎರಡೂ ಬದಿಗಳಲ್ಲಿ ಅವಳ ಹೆಗಲಿಗಾನಿಸಿ ಅಕ್ಕ–ನಾನು ಕತೆ ಕೇಳುತ್ತಿದ್ದುದು ಒಂದು ಬೆಚ್ಚಗಿನ ನೆನಪು. ನಾವೋ ಸುಮ್ಮನೆ ಕತೆ ಕೇಳುವ ಅಕ್ಕ ತಂಗಿಯರಲ್ಲ. 'ನನಗೆ ಹೇಳು, ನನ್ನನ್ನು ನೋಡಿ ಹೇಳು, ಆಗಿಂದ ಅವಳನ್ನೇ ನೋಡುತಿದ್ದೀ' ಎಂದೋ 'ಆ ಚಿತ್ರ ಅವಳು ನೋಡಿದಳು. ಆದರೆ ನಾನಿನ್ನೂ ಸರಿಯಾಗಿ ನೋಡಿಲ್ಲ, ಪುಟ ತಿರುಗಿಸು' ಎಂದೋ ಒಟ್ಟು ಅವಳನ್ನು ಅತ್ತ ಇತ್ತ ಎಳೆಯುತ್ತ ಕತೆ ಮುಂದರಿಯಲು ಬಿಡದೆ ಕಷ್ಟ ಕೊಡುತ್ತಿದ್ದೆವು ಸ್ವಲ್ಪವೇನಲ್ಲ. ಈಗಲೂ ಅದನ್ನು ನೆನೆದು ನಗುತಿರುತ್ತೇವೆ.

ಅಮ್ಮ ಒಮ್ಮೆಯೂ ನಮಗೆ ಹೊಡೆದವಳಲ್ಲ, ಗಟ್ಟಿ ಸ್ವರ ತೆಗೆದು ಬೈದವಳೂ ಅಲ್ಲ. (ಹಾಗಾಗಿ ಕೆಲವೊಮ್ಮೆ ನಮ್ಮ ಗಂಡಂದಿರು–'ಅದಕ್ಕೇ ನೀವು ಹೀಗೆ' ಎಂದು ತಮಾಷೆ ಮಾಡುವುದುಂಟು). ಅವಳದೊಂದು ಬಗೆಯ ಮೌನವಿದೆ. ನಮಗೆ ಆ ಮೌನವನ್ನು ಸಹಿಸುವುದೇ ಕಷ್ಟ. ಈಗಲೂ ಅವಳ ಮೌನ ಎಣಿಸಿದರೆ ಸಾಕು ಕಣ್ಣು ಹನಿಯುತ್ತದೆ. ಅಷ್ಟು ಪವರ್‌ಫುಲ್ ಆದ, ನಮ್ಮನ್ನು ತಿದ್ದುವ ಮೌನವದು. ಅಷ್ಟೇ ಅಲ್ಲ, ಅದು ಅವಳೇ ಅವಳೊಳಗೆ ಇಳಿದು ತನ್ನನ್ನು ತಣಿಸಿಕೊಳ್ಳುವ ವಿಧಾನ ಇದ್ದಿರಬಹುದು ಅಂತಲೂ ಅನಿಸುತ್ತಿದೆ. ಇವತ್ತಿಗೂ ತಪ್ಪು ಮಾಡಿದಾಗ ದೂರದಲ್ಲಿದ್ದೇ ನಮ್ಮ ಆತ್ಮಸಾಕ್ಷಿಯೋ ಎಂಬಂತೆ ಏನೂ ಹೇಳದೆ ನಮ್ಮನ್ನು ಎಚ್ಚರಿಸುವುದು ಅವಳ ಈ ಅಸ್ತ್ರವೇ. ಅನೇಕ ಸಂದರ್ಭಗಳಲ್ಲಿ ಅವಳು ತಾಳಿದ ಅನೇಕ ಬಗೆಯ ಮೌನಗಳನ್ನು ಕಂಡವಳು ನಾನು. ಕೆಲ ಕಹಿ ಕಾರ್ಕೋಟಕ ಗಳಿಗೆಗಳನ್ನು ಆಕೆ ಮೌನದಲ್ಲಿ ಕಣ್ಮುಚ್ಚಿ ನುಂಗಿ ಬಿಟ್ಟದ್ದನ್ನು ಹತ್ತಿರದಿಂದ ಕಂಡವಳು. ಅಚ್ಚರಿಯೆಂದರೆ ಒಮ್ಮೊಮ್ಮೆ ಅಂಥ ಸಮಯದಲ್ಲಿಯೂ ಅವರಿವರೊಡನೆ ಹೊರಗಿಂದ ಮಾತಾಡುತ್ತಿರುತ್ತಾಳೆ. ಅಷ್ಟು ಚೆನ್ನಾಗಿ ಮಾತಾಡುತ್ತಿರುವ ಅವಳು ಒಳಗಿಂದ ಮೌನವಿದ್ದಾಳೆ ಅಂತ ನಮಗೆ, ಜೊತೆಗೆ ಇರುವವರಿಗೆ ಮಾತ್ರ ಗೊತ್ತಾಗುತ್ತಿರುತ್ತದೆ.

ನಾವು ಸಣ್ಣವರಿದ್ದಾಗ ಅಮ್ಮ ನಮ್ಮಿಬ್ಬರಿಗೂ ಶನಿವಾರ ಅರ್ಧದಿನದ ಶಾಲೆ ಮುಗಿಸಿ ಮನೆಗೆ ಬಂದಾಗ ಪುಸ್ತಕ ಕೊಳ್ಳಲು ದುಡ್ಡು ಕೊಡುತ್ತಿದ್ದಳು. ನಾವು ಶಿವಮೊಗ್ಗದ ಗಾಂಧಿ ಬಜಾರಿನಲ್ಲಿರುವ ರಾಜಾರಾಂ ಪುಸ್ತಕ ಭಂಡಾರಕ್ಕೆ ಹೋಗಿ ಪುಸ್ತಕ ತೆಗೆದುಕೊಳ್ಳುತ್ತಿದ್ದೆವು. ಆ ಗಿರ ಎಷ್ಟಿತ್ತೆಂದರೆ, ನಮ್ಮ ಅತ್ತೆ (ನಮ್ಮ ಅಪ್ಪನ ಅಮ್ಮ, ಅಮ್ಮ 'ಅತ್ತೆ' ಎನ್ನುವುದನ್ನು ನೋಡಿ ನಾವು ಮಕ್ಕಳೂ ಹಾಗೇ ಅವಳನ್ನು ಕರೆಯುತ್ತಿದ್ದೆವು) ಗೌರಿ ಹಬ್ಬದಲ್ಲಿ 'ಬಳೆ ಇಟ್ಟುಕೊಳ್ಳಿ ಮಕ್ಕಳೆ' ಎಂದು ದುಡ್ಡು ಕೊಟ್ಟು ಕಳಿಸಿದರೆ, ನಾವು ಹೋಗುತ್ತಿದ್ದದ್ದು, ರಾಜಾರಾಂ ಬುಕ್‌ಹೌಸಿಗೆ. ಬೇಸಿಗೆಯ ರಜೆಗಳಲ್ಲಿ ಆಡುತ್ತಿದ್ದೆವೇನೋ ಹೌದು. ಆದರೆ ಅಷ್ಟೇ ಆಗಬಾರದು ಎಂದು ಅಮ್ಮ ಉಪಾಯ ಮಾಡಿದ್ದಳು. ಎಷ್ಟು ಪುಸ್ತಕ ಓದುತ್ತೀರೋ ಅಷ್ಟು ದುಡ್ಡು ಎಂದಿದ್ದಳು. ಸಣ್ಣ ಪುಸ್ತಕ ಓದಿದರೆ ಇಪ್ಪತ್ತೈದು ಪೈಸೆ. ಸ್ವಲ್ಪ ದೊಡ್ಡ ಪುಸ್ತಕಕ್ಕೆ ಐವತ್ತು ಪೈಸೆ. ದೊಡ್ಡ ಪುಸ್ತಕಕ್ಕೆ ಒಂದು ರೂಪಾಯಿ! ಕಲೆಕ್ಷನ್ನೇ ಕಲೆಕ್ಷನ್ನು ಆಗ.

ಸಣ್ಣವಳಿದ್ದಾಗ ಇದ್ದಬದ್ದ ಕಾಂಪಿಟಿಷನ್‌ಗಳಿಗೆಲ್ಲ ಹೆಸರು ಕೊಡುವ ಹುಚ್ಚು ಇತ್ತು ನಂಗೆ. ನಾನು ಅದರಲ್ಲಿ ಅರ್ಹಳೋ ಅಲ್ಲವೋ ಎಂದೂ ಯೋಚಿಸದೆ. ಅಮ್ಮ ಎಲ್ಲಾದರೂ 'ಬೇಡ' ಎಂದರೆ ಸಾಕು, ಬೇಜಾರೋ ಬೇಜಾರು. ಒಮ್ಮೆ ಒಂದು ಗಾಯನ ಸ್ಪರ್ಧೆಗೆ ಹೆಸರು ಕೊಟ್ಟಿದ್ದೆ. ಅದೋ ಜಿಲ್ಲಾ ಮಟ್ಟದ್ದು! ನಾನೇನು ಹಾಡುಗಾರ್ತಿ ಅಲ್ಲ, ಆದರೂ! ಮನೆಗೆ ಬಂದು ಅಮ್ಮನ ಹತ್ತಿರ ಹೇಳಿದಾಗ 'ಆಯ್ತು ಕರೆದುಕೊಂಡು ಹೋಗುತ್ತೇನೆ' ಅಂದಳು. ನೂರಾರು ಮಕ್ಕಳು ಹಾಡಿದ ನಂತರ ನನ್ನ ಸರದಿ. ಪಾಪ ಅಮ್ಮನೂ ಆ ಎಳೆಯ ಮನಸ್ಸು ಬಾಡುವುದು ನೋಡಲಾಗದೆ ಗಂಟೆಗಟ್ಟಲೆ ಕಾದಳು. ಅಂತೂ ಹಾಡಿ ಮುಗಿಯಿತು. ಮುಗಿದರೆ ಸರಿಯೆ? ಅಮ್ಮ 'ಇನ್ನು ಮನೆಗೆ ಹೋಗುವ ಬಾ' ಎಂದರೆ 'ತಡಿ, ನನಗೆ ಬಹುಮಾನ ಕೊಡುತ್ತಾರೆ' ಎಂದೆ! ಅಮ್ಮ ಆಚೆ ಹೋಗಿ ಈಚೆ ಬಂದಂತೆ ಮಾಡಿ 'ಬಹುಮಾನ ಮನೆಗೇ ಕಳಿಸುತ್ತಾರಂತೆ. ನಾವು ಮನೆಗೆ ಹೋಗಬಹುದಂತೆ' ಅಂತ ಹೇಳಿ ನನ್ನನ್ನು ಮನೆಗೆ ಕರೆದುಕೊಂಡು ಬಂದಳು. ಮರುದಿನ 'ನಿನ್ನ ಬಹುಮಾನ ಕಳಿಸಿದ್ದಾರೆ ನೋಡಿಲ್ಲಿ' ಎಂದು ಕಟ್ಟು ಬಿಚ್ಚಿದಳು. ಅದರಲ್ಲಿ ಒಂದು ಹೊಸಾ ಕಥೆ ಪುಸ್ತಕ ಮತ್ತು ಪೆನ್ನು ಇತ್ತು. ನನಗೆ ಹಿಗ್ಗೋ ಹಿಗ್ಗು. ಅದು ಕಟ್ಟು ಕತೆ ಅಂತ ತಿಳಿದದ್ದು ಬಹಳ ದಿನಗಳ ಮೇಲೆ. ಅಮ್ಮಂದಿರ ಒಡಲೇ!

ಶಾಲಾ ಕಾಲೇಜು ಪರೀಕ್ಷೆಯ ತಯಾರಿಯಲ್ಲಿ ನಾನು ರಾತ್ರಿಯಿಡೀ ಓದುತ್ತಿದ್ದರೆ, ಅಮ್ಮ ನನ್ನ ಜತೆ ಎದ್ದಿರಲೇಬೇಕಿತ್ತು. ರಾತ್ರಿ ಹತ್ತು ಗಂಟೆಗೆಲ್ಲ ಅವಳು ನಿದ್ದೆ ಮಾಡುವುದು ರೂಢಿ. ಒಂದು ನಿದ್ದೆಯಾದ ಮೇಲೆ ಪುನಃ ಬೇಕಾದರೆ ಏಳುತ್ತಾಳೆ. ಆದರೆ ನಾನು ಮಾತ್ರ ಅವಳಿಗೆ ನಿದ್ದೆ ಮಾಡಲು ಬಿಡುತ್ತಲೇ ಇರಲಿಲ್ಲ. ಓದಿದ್ದು ಅರ್ಥವಾಗುವುದೇ ಅಮ್ಮ ಬಳಿ ಇದ್ದರೆ ಮಾತ್ರ ಅಂತ. ಅಂಥಾ ರಾತ್ರಿಗಳಲ್ಲೇ ಅವಳ ಎಷ್ಟೋ ಕತೆಗಳು

ಹುಟ್ಟಿಕೊಂಡಿವೆ (ಈ ರೀತಿಯಲ್ಲಿ ಕೆಲ ಕತೆಗಳಿಗೆ ಕಾರಣಕರ್ತೆ ನಾನೇ! ಹೂಂ!). ಗಣಿತದಲ್ಲಿ ತುಂಬಾ ಜಾಣೆ ಅವಳು. ಟೀಚರ್ ಹೇಳಿಕೊಟ್ಟ ಸೂತ್ರ ನನಗೆ ಅರ್ಥವಾಗದಿದ್ದರೆ, ಅಮ್ಮ ಹೇಳಿಕೊಟ್ಟ ಸೂತ್ರ ಎಷ್ಟು ಸುಲಭವೆನಿಸುತ್ತಿತ್ತು! ಹಿಂದಿ ಪಾಠಕ್ಕೂ ಅಷ್ಟೆ. ಅವಳು ಪಾಠ ಮಾಡಿದರೆ ನನಗೆ ಮಾರ್ಕು ಬಂತೆಂತಲೇ.

ನಮ್ಮಲ್ಲಿ ನಿತ್ಯವೂ ಮುಸ್ಸಂಜೆ ಭಜನೆಯಂತೂ ಇರುತ್ತಿತ್ತು. ಭಜನೆ ಅಂತ ಹೆಸರು ಅಷ್ಟೆ. ಅಲ್ಲಿ ನಾವು ಹಾಡುವುದು ದಾಸರ ಪದ, ವಚನಗಳು, ಅಭಂಗಗಳು, ಸ್ತೋತ್ರಗಳ ಜೊತೆಗೆ ಭಾವಗೀತೆಗಳನ್ನೂ! ಇನ್ನು ಕರೆಂಟು ಹೋಯಿತೆಂದರೆ ಮಂಗಳಾರತಿ ಆದ ಮೇಲೆಯೂ ಹಾಡುವಿಕೆ ಮುಂದರಿಯುವುದು. ಇಳಿದು ಬಾ ತಾಯೆ... ಎಂದು ನಾವು ಮೂವರೂ ಅಕ್ಕಪಕ್ಕದ ಫಿಕರೇ ಇಲ್ಲದೆ ದನಿತೆಗೆದು ಹಾಡುತಿದ್ದುದು, ನಮ್ಮ ಅಪ್ಪ ಶ್ರೋತೃವಾಗಿ ತಲೆದೂಗುತ್ತ ನಮ್ಮನ್ನು ಮೆಚ್ಚುತಿದ್ದುದು ನೆನಪಾಗುತ್ತಿದೆ.

ಶಿವಮೊಗ್ಗದಲ್ಲಿ ನಮ್ಮ ಅಜ್ಜ (ತಂದೆಯ ತಂದೆ) ಅನೇಕ ಪತ್ರಿಕೆಗಳನ್ನು ಮನೆಗೆ ತರಿಸುತ್ತಿದ್ದರಂತೆ. 'ಇನ್ನೇನಾದರೂ ಬೇಕೆ? ಹೇಳು, ತರಿಸುವೆ' ಎನ್ನುತಿದ್ದರಂತೆ. ಅಮ್ಮ ಯಾವಾಗಲೂ ಅದನ್ನು ನೆನೆಯುತ್ತಿರುತ್ತಾಳೆ. 'ನನ್ನ ಸೊಸೆ ಬರೀತಾಳೆ' ಅಂತ ಅಜ್ಜ ಅವರಿವರೊಡನೆ ಹೇಳಿ ಖುಶಿ ಪಡುತಿದ್ದುದನ್ನು ನಾನೂ ನೋಡಿದ್ದೇನೆ.

ಅಮ್ಮನಿಗೆ ಆಸಕ್ತಿಯಿಲ್ಲದ ವಿಷಯಗಳೇ ಇಲ್ಲ. ಸಾಹಿತ್ಯ ಮಾತ್ರ ಅಲ್ಲ, ಆಕೆ ಯಾವ ವಿಷಯವನ್ನು ಆಯ್ಕೆ ಮಾಡಿ ಮುಂದರಿಸಿದ್ದರೂ ಅದರಲ್ಲಿ ತನ್ನಿಂದ ಮುಟ್ಟಬಹುದಾದ ಮಟ್ಟವನ್ನು ತಲುಪಿಯೇ ತಲುಪುತಿದ್ದಳು, ಸಂಶಯವಿಲ್ಲ. ನನಗೆ ನೆನಪಿದ್ದಂತೆ ಶಿವಮೊಗ್ಗದಲ್ಲಿದ್ದಾಗ ಅಮ್ಮ ಉರ್ದು ಕಲಿಯುತ್ತಿದ್ದಳು. ಉರ್ದು ಟೀಚರ್ ಮನೆಗೇ ಬರುತ್ತಿದ್ದರು. ಅವರೊಬ್ಬ ಮುಸ್ಲಿಂ ಮಹಿಳೆ. ತಲೆಮೇಲೆ ಸೆರಗು ಹಾಕಿಕೊಂಡು ಸಂಕೋಚದಿಂದ ಅವರು ಒಳ ಬರುತಿದ್ದುದು ನೆನಪಾಗುತ್ತಿದೆ. ಅಮ್ಮ, ಅವರ ಬಳಿ ಪಾಠ ಕೇಳುವುದಕ್ಕಿಂತ ಅವರಿಗೆ ಕಾಫಿತಿಂಡಿ ಕೊಟ್ಟು ಸುಖದುಃಖ ಮಾತಾಡುತಿದ್ದುದೇ ಹೆಚ್ಚು. ಸಮಯದ ತುದೀಯಲ್ಲಿ ಉರ್ದು ಪಾಠ. ಅವರು ಹೋದ ಮೇಲೆ ಅಮ್ಮ ಅವರ ಕಷ್ಟಗಳ ಕುರಿತು ಆಗಿನ್ನೂ ಸಣ್ಣಮಕ್ಕಳಾದ ನಮ್ಮೊಡನೆ ಹೇಳುತಿದ್ದಳು. ಅದೆಲ್ಲ ನಮಗಷ್ಟು ತಲೆಗೆ ಹೋಗುತ್ತಿರಲಿಲ್ಲ. ಒಟ್ಟು ಹೂಂಗುಡುತಿದ್ದೆವು. ಆದರೆ ನಾವು ಬೆಳೆಯುತ್ತ ಬಂದಂತೆ ಅವಳು ಅಂದು ಹೇಳಿದ ಆ ಜನಗಳ ಬಡತನ, ದುಃಖಗಳು ಅಷ್ಟಷ್ಟೇ ತಿಳಿಯುತ್ತ ಸಂಕಟಗಳು ಎಲ್ಲರಿಗೂ ಒಂದೇ ಎಂಬ ಅರಿವಿಗೆ ದಾಟಿಕೊಂಡವು. ಉರ್ದು ಪಾಠ ನಿಧಾನವಾಗಿ ಟೀಚರರ ಏನೋ ತಾಪತ್ರಯದಿಂದ ನಿಂತು ಹೋಯಿತು. 'ನನಗೆ ಗೊತ್ತೇ ಇಲ್ಲದ ಆ ಜನರ ಜೀವನವನ್ನು ತಿಳಿದೆನಲ್ಲ, ಸಾಲದೆ!' ಎಂದಳು ಅಮ್ಮ. ನಮ್ಮ ಅಜ್ಜ (ಅಮ್ಮನ ತಂದೆ) ವಯಲಿನ್ ನುಡಿಸುತ್ತಿದ್ದರಂತೆ. ಅದರ ಪ್ರಭಾವವಿರಬಹುದು, ಅಂತೂ ಸುಮ್ಮನಿರಲಾರದವಳು, ವೀಣೆಯನ್ನೂ ಸ್ವಲ್ಪ ಮಟ್ಟಿಗೆ ಕಲಿತಳು. ಅವಳ ಅಂದಿನ ದಿನಗಳು

ಕಳೆದ ರೀತಿಯನ್ನು ಎಣಿಸಿಕೊಂಡರೆ ತನ್ನನ್ನು ಏನಾದರೊಂದರಲ್ಲಿ ಹೀಗೆ ಸಿಗಿಸಿಕೊಂಡೇ ಇರುವ ಅಗತ್ಯ ಅವಳಿಗೆ ಇತ್ತೆಂದೇ ಅನಿಸುತ್ತಿದೆ. ಚಿತ್ರವನ್ನೂ ಬಿಡಿಸುತ್ತಿದ್ದಳು. ಮುಂದೆ ಉಡುಪಿಯಲ್ಲಿದ್ದಾಗ ಹೆಸರಾಂತ ಕಲಾವಿದರಾದ ಶ್ರೀ ಬಿ.ಪಿ. ಬಾಯರಿ ಅವರಿಂದ ಚಿತ್ರರೇಖೆಗಳ ಬಗ್ಗೆ ಕಲಿಯ ತೊಡಗಿದಳು ('ಚಿತ್ರ ಕಲಿಸಿದ ಪಾಠ' ಎಂಬ ಲೇಖನಕ್ಕೆ ಪ್ರೇರಣೆ ಇದುವೇ). ಆದರೆ ನಾವೇ ನೋಡಿದಂತೆ ಯಾವುದನ್ನೂ ಬಹುಕಾಲ ಹಿಂಬಾಲಿಸಲು ಅವಳಿಗೆ ಆಗಲೇ ಇಲ್ಲ. ಕೊನೆಗೂ ಅವಳನ್ನು ಕೈ ಹಿಡಿದು ಮುನ್ನಡೆಸಿದ್ದು ಅವಳ ಪ್ರಥಮ ಆಯ್ಕೆಯ ಬರವಣಿಗೆಯೇ.

ಇನ್ನು, ನಾವು ಚಿಕ್ಕವರಿದ್ದಾಗಿನಿಂದಲೂ (ನಮಗೆ ಅರ್ಥವಾಗುತ್ತದೆಯೇ ಇಲ್ಲವೇ ಎಂದು ನೋಡದೆ) ಇವತ್ತಿನ ತನಕವೂ ಕತೆ ಬರೆದಾಗ ಸಾಧ್ಯವಾದಾಗೆಲ್ಲ ಕರೆದು ಓದಿ ಹೇಳುತ್ತಾಳೆ. ಅವಳ ಓದುವ ರೀತಿಯಿಂದಾಗಿ ಅವಳ ಕತೆ-ಕವನಗಳನ್ನು ಇವತ್ತು ನಾನು ಇಲ್ಲಿ ದೂರದಲ್ಲಿದ್ದು ಓದುವಾಗಲೂ ಮನಸ್ಸಿನೊಳಗೆ ಅವಳ ದನಿಯಲ್ಲೇ ಕೇಳುತ್ತಿರುತ್ತದೆ. ಸದಾ ಅಪ್ಪ-ಅಕ್ಕ-ನಾನು ಅವಳ ಮೊದಲ 'ಕೇಳುಗರು'. ಈಗವಳು ಮೊಮ್ಮಕ್ಕಳು ಸಿಕ್ಕಾಗ ಅವರನ್ನೂ ಕರೆದು ಕೂರಿಸಿಕೊಳ್ಳುತ್ತಾಳೆ!

ನನ್ನ ಮಗನಿಗೆ ಚಿಕ್ಕಂದಿನಲ್ಲಿ ಕತೆ ಹೇಳಿದರೆ ಸಾಲದು. ಅದನ್ನು ಆಡಿ ತೋರಿಸಬೇಕು. ಮರಕುಟಿಕ ಕತೆಯನ್ನಿಡೀ ಕೇಳಿಯಾದ ಮೇಲೆ ಅಮ್ಮ ಮತ್ತು ಅಖಿಲ್ ಇಬ್ಬರೂ ಅದನ್ನು ಅವರವರ ಶಬ್ದಗಳಲ್ಲಿ ಕಲ್ಪಿಸಿ ಕಲ್ಪಿಸಿ ಆಡುತ್ತ ಅದರಲ್ಲಿ ಜೀವಿಸಿದ್ದು, ಮರವೆಂದು ಕಿಟಕಿ ದಾರಂದವನ್ನು ಕುಟ್ಟುತಿದ್ದುದು, ನಾವು (ಸುಭಗರು) ನೋಡುತ್ತ ಕುಳಿತದ್ದು... ನೆನಪಿನ ಚೀಲದಲ್ಲಿ ಎಲ್ಲ ಹಾಗೆಯೇ ಇದೆ. ಅಮ್ಮ ದಾರಂದವನ್ನು ಹುಸಿಕುಟ್ಟಿದರೆ ಅಖಿಲ್ ಶಕ್ತಿಯೆಲ್ಲ ಹಾಕಿ ಕೊಡಲಿಯಿಂದ ತಾನು ಮರವನ್ನೇ ಕುಟ್ಟುತ್ತಿದ್ದೇನೆ ಎಂದು ನಿಜಕ್ಕೂ ನಂಬಿ ಫಟ್ ಫಟ್ ಹೊಡೆಯ ತೊಡಗುತಿದ್ದ. ಆಗ ಆಟದಿಂದ ಹೊರಬಂದು ಮರಕುಟಿಕ ಅಮ್ಮ, 'ದೊಡ್ಡ' ಆಗಿ 'ಅಷ್ಟು ಜೋರು ಹೊಡೆಯಬೇಡ ಮಣೀ, ಹೊಡೆದ ಹಾಗೆ ಮಾಡೂ' ಎಂದು ಕೂಗಿದ್ದು, ಆಚೆ ಅಜ್ಜನ ದನಿ; ಹೀಗೆ ಇನ್ನೂ ಎಷ್ಟೋ. ಗೌರಿಗಾಗಿ ಅಖಿಲನಿಗಾಗಿ ನಮ್ಮಲ್ಲಿ ನಡೆದ ಹಿಂದು ಮುಂದಿಲ್ಲದ ನಾಟಕಗಳು ಸ್ವಲ್ಪವೆ? ನೀನಾಸಂ ತಿರುಗಾಟ ನಾಟಕದ ಹಾಡುಗಳೆಲ್ಲ ನಮಗೆ ಕಂಠಪಾಠ. ಆ ಹಾಡುಗಳನ್ನೆಲ್ಲ ನನ್ನ ಮಗನಿಗೂ ದಾಟಿಸಿದ್ದೇನೆ.

ಅಮ್ಮ ಮಕ್ಕಳ ನಾಟಕ ಬರೆಯುವುದರಲ್ಲಿ ಅಚ್ಚರಿಯೆಲ್ಲಿದೆ? ಅವಳ ಸ್ಪಿರಿಟ್ಟೇ ಮಕ್ಕಳದು. ಅವರು ಇವರೆನ್ನದೆ, ಮಕ್ಕಳೊಂದಿಗೆ ಮಕ್ಕಳಾಗಿ ಬೆರೆಯಬಲ್ಲಳು ನನ್ನಮ್ಮ. ನನ್ನ ಮಗನೂ 'ನನ್ನ ಫ್ರೆಂಡ್ 'ದೊಡ್ಡ'. ಅವಳೊಬ್ಬಳಿಗೇ ನಾನು ಸರಿಯಾಗಿ ಅರ್ಥವಾಗುವುದು' ಎಂದು ನಮ್ಮನ್ನೇ ಕೆರಳಿಸುವುದುಂಟು. ಒಟ್ಟಾರೆ ಮಕ್ಕಳೆಂದರೇ ಅಮ್ಮನಿಗೆ ಇಷ್ಟ. ಅವರ ಸಂಗದಲ್ಲಿ ಎಷ್ಟು ಹೊತ್ತಾದರೂ ಕಳೆಯುವಳು. ಅದು ಅವಳ

ತವರುಮನೆಯ ಗುಣ. ಅಲ್ಲಿ ಎಲ್ಲರೂ ಹಾಗೆಯೇ. ಅಲ್ಲಿನ ನಮ್ಮ ಮಾವಂದಿರ ದೊಡ್ಡಮ್ಮ ಚಿಕ್ಕಮ್ಮಂದಿರ ಪ್ರೀತಿಯನ್ನು ಬಸಿದು ಉಂಡ ಮಕ್ಕಳು ನಾವು.

ಪುಸ್ತಕ-ಸಂಗೀತ-ನಿತ್ಯಭಜನೆಯ ಮಧ್ಯೆ ಬೆಳೆದವಳು ಅಮ್ಮ. ಮನೆ ತುಂಬ ಜನರಿದ್ದು, ಬಂದು ಹೋಗುವವರ ಮಧ್ಯೆ ಬೆಳೆದವಳು. ನಾನು ಗಮನಿಸಿದಂತೆ ಆಕೆಯ ಬಾಲ್ಯ, ತಂದೆ, ತಾಯಿ (ಎಂದರೆ ನಮ್ಮ 'ದೊಡ್ಡಮ್ಮ'), ತನ್ನ ಮತ್ತು ನಮ್ಮ ಅಪ್ಪನ ಕಡೆಯ ಅನೇಕ ಮಂದಿ ಎಲ್ಲಾ ಇವತ್ತಿಗೂ ಅವಳನ್ನು ಪದೇ ಪದೇ ಭಾವನಾತ್ಮಕವಾಗಿ ಸ್ಪರ್ಶಿಸುತ್ತಿರುತ್ತಾರೆ.

ನೆಂಟರು ಇಷ್ಟರು ಬಂಧು ಬಾಂಧವರು ಬಂದುಹೋಗುವ ಮನೆ ನಮ್ಮದು. ಬಂದು ಉಳಿಯುವ ಮನೆಯೂ. ಅಪ್ಪನಿಗೂ ಅವಳಿಗೂ ಅದೆಲ್ಲ ತುಂಬ ಇಷ್ಟ. ಚಿಕ್ಕಂದಿನಿಂದಲೂ ನಮ್ಮನೆಗೆ ಬಂದು ಹೋಗುತ್ತಿದ್ದ ಕೆಲವರಂತೂ ನಮ್ಮ ಮನೆಯವರೇ ಆಗಿಬಿಟ್ಟಿದ್ದಾರೆ. ಅವರಲ್ಲಿ ಬಹಳ ಆಪ್ತರೆಂದರೆ ಹೆಗ್ಗೋಡಿನ ಸುಬ್ಬಣ್ಣಮಾವ. ಅವರು ನಮಗೆ ತೋರಿದ ಪ್ರೀತಿ, ನಮ್ಮೊಡನೆ ಮಾತಾಡುತಿದ್ದ ರೀತಿ, ಎಲ್ಲವೂ ನಮ್ಮ ಮನದಲ್ಲಿ ಎಂದೂ ಅಳಿಯದ ಸ್ಮರಣೆಯಾಗಿದೆ. ಸುಬ್ಬಣ್ಣಮಾವನಿಗೆ ನಯನಾ ಮತ್ತು ನಾನು ಕಾಗದ ಬರೆದು ನಮ್ಮ ವಿಷಯಗಳನ್ನು ತಿಳಿಸುತ್ತಿದ್ದೆವು. ಅವರೂ ಮಕ್ಕಳ ಪತ್ರವೆಂದು ಅಲಕ್ಷಿಸದೆ ಉತ್ತರ ಬರೆಯುತ್ತಿದ್ದರು. ಕೆಲವೊಮ್ಮೆ ತಮ್ಮ ಪತ್ರಗಳೊಂದಿಗೆ ನಮಗೆ ಇಷ್ಟವೆಂದು ಕೆಲ ಅಪರೂಪದ ಸ್ಟಾಂಪುಗಳನ್ನೂ ಕಳಿಸುತಿದ್ದರು. ಸಾಹಿತ್ಯಿಕ ವಲಯದ ಇನ್ನೂ ಅನೇಕರನ್ನು ಹತ್ತಿರದಿಂದ ಕಂಡು ಕೇಳಿ ಬೆಳೆಯುತ್ತ ನಾವು ಮಕ್ಕಳು ಪಡೆದುಕೊಂಡದ್ದು ಎಷ್ಟೋ! ಬಂದವರೊಡನೆ ಮಾತಾಡುತ್ತ, ಅಡುಗೆ ತಿಂಡಿ ಮಾಡಿ ಬಡಿಸುತ್ತ, ಮಧ್ಯರಾತ್ರಿಯಲ್ಲಿ ಓದು ಬರಹ ಮಾಡುತ್ತಿದ್ದಳು ಅಮ್ಮ. ಈಗಲೂ ವಯಸ್ಸಿಗೆ ತಕ್ಕಂತೆ ಬರುವ ಕೆಲ ದೈಹಿಕ ತಾಪತ್ರಯಗಳಿದ್ದರೂ ಅತಿಥಿಗಳು ಬಂದರೆಂದರೆ ಅದು ಎಲ್ಲಿಂದ ಅವಳಿಗೆ ಚೈತನ್ಯ ಎದ್ದು ಬರುವುದೋ, ಸೊಂಟಕ್ಕೆ ಸೆರಗು ಸಿಕ್ಕಿಸಿಯಾಯಿತು. ಬಂದುಹೋಗುವವರ ಕುರಿತು ಅವಳು ಹೇಳುವ ಮಾತಿದೆ 'ಹೊರಗಿಂದ ಜನ ಬಂದರು ಎಂದರೆ ಹೊರಜಗತ್ತು ನನ್ನ ಬಳಿ ಬಂತು ಎಂದು. ನನ್ನನ್ನು ಬೆಳೆಸುವವರು ಅವರೆಲ್ಲ'. ಹೆಸರಾಂತರಷ್ಟೇ ಅಲ್ಲ, ತರಕಾರಿ ಮಾರುವವರು, ಜಾಣದವನು, ಮರ ಹತ್ತುವವನು, ಎಲ್ಲರಲ್ಲೂ ಪ್ರೀತಿ ಅಮ್ಮನಿಗೆ. ಅವರಿಗೆ ಹೊಟ್ಟೆತುಂಬ ತಿನ್ನಲೋ ಕುಡಿಯಲೋ ನೀಡಿ ಮಾತುಕತೆಯಾಡುತ್ತಿರುವುದು ಅವಳ ಬದುಕಿನ ಒಂದು ಲಕ್ಷಣವೇ ಆಗಿದೆ. ಅವಳ ನಿತ್ಯ ಸ್ನೇಹದವರಲ್ಲಿ ಅಂಚೆಯವರ ಪಾಲೂ ದೊಡ್ಡದು.

ನಾವು ಚಿಕ್ಕವರಿದ್ದಾಗಿನಿಂದಲೂ ನೋಡಿದ್ದು ಅಮ್ಮ-ಅಪ್ಪನ 'ಮನೆಗೆ ಬನ್ನಿ' ಅಂತ ಕರೆಯುವ ಗುಣ. ಅವರಿಂದಾಗಿ 'ಮನೆಗೆ ಬನ್ನಿ' ಎಂದು ಕರೆಯುವುದು ನನಗೂ ದಾಟಿಕೊಂಡಿದೆ. ನನಗೆ ಸುಸ್ತಾದಾಗ 'ಅಮ್ಮ ಈ ಪ್ರಾಯದಲ್ಲಿ ಎಲ್ಲಾ ಸ್ವತಃ ಮಾಡಿ,

ಬರೆಯಲೂ ಬಲ್ಲಳು. ಹಾಗಾದರೆ ನನಗೆ ಇಷ್ಟೂ ಆಗದೆ?' ಎಂದೆಣಿಸಿ ಮತ್ತೆ ಮೇಲೇಳುತ್ತೇನೆ. ಹಾಗೆಂತ ಅಮ್ಮ ಶಕ್ತಿವಂತಳೆ? ಹಾಗೆ ದೃಢವಾಗಿ ಹೇಳುವಂತೆಯೂ ಇಲ್ಲ. ಅವಳು ಬದುಕು ನಡೆಸಿದ್ದೇ ಮನೋಬಲದಿಂದ ಅಂತ ನಾವು ಮಾತಾಡಿ ಕೊಳ್ಳುತಿರುತ್ತೇವೆ. ಒಂದು ತಲೆನೋವು (ನಮ್ಮಿಬ್ಬರಿಗೂ ಅವಳಿಂದ ಇದೂ ದಾಟಿಕೊಂಡಿದೆ!) ಬಂತೂ ಅಂದರೆ ಅವಳು ಈ ಪ್ರಪಂಚದಲ್ಲೇ ಇರುವುದಿಲ್ಲ. ಅವಳ ಆಯುಷ್ಯದ ಒಂದೆರಡು ದಿನ ಉಚಿತವಾಗಿ ಅದು ಕಸಿಯಿತೆಂದೇ ಲೆಕ್ಕ. ಈಗೀಗ ನಿಶ್ಶಕ್ತಿ, ತಲೆನೋವು, ನಡುವೆ ಹತ್ತತ್ತು ನಿಮಿಷದ ನಿದ್ದೆ ಮಲಗಿ ಎದ್ದು ಪುನಃ ಕೆಲಸ ಮುಂದರಿಸುವಳು. ಈಗ ನಾವು ಮನೆಗೆ ಹೋದಾಗೆಲ್ಲ ನಾವೇ ಅಡುಗೆಮನೆ ವಹಿಸಿಕೊಳ್ಳುತ್ತೇವೆ. ಅವಳಿಗೆ ಒತ್ತಾಯದ ವಿಶ್ರಾಂತಿ ಘೋಷಿಸುತ್ತೇವೆ.

ಅಮ್ಮನಿಗೂ ನನಗೂ ಒಂದು ವಿಶೇಷ ನಂಟು. ನನ್ನ ಮತ್ತು ಅಮ್ಮನ ಪ್ರೀತಿ ಮತ್ತು ಜಗಳ, ಅದು 'ನಮ್ಮ ಜಗತ್' ಪ್ರಸಿದ್ಧ! ಒಂಚೂರೂ ದಾಕ್ಷಿಣ್ಯವಿಲ್ಲದೆ ಜಗಳಾಡುವೆವು, ಕ್ಷಣದಲ್ಲಿ ರಾಜಿಯಾಗುವೆವು. ಅಮ್ಮ ನನ್ನನ್ನು 'ಚಿಕ್ಕವಳು' ಎಂದೇ ತಿಳಿಯುತ್ತಾಳೆ ಅಂತ ಜಗಳ (ಇದು ಇವತ್ತಿಗೂ ಇದೆ). ನಾನು ಮದುವೆಯಾಗಿ ಹೋದಾಗ ಅಮ್ಮ ಬರೆದ 'ಮಗಳಿಗಾಗಿ' ಕವನದಲ್ಲಿ ನಮ್ಮಿಬ್ಬರ ಚಕಮಕಿ-ಪ್ರೀತಿಯ ನೈಜ ಚಿತ್ರಣ ಕೊಟ್ಟಿದ್ದಾಳೆ. ನಾವು ಒಟ್ಟಿಗೆ ತಿರುಗಾಡಿದ್ದೂ ಜಾಸ್ತಿ, ಚರ್ಚಿಸಿದ್ದೂ ಜಾಸ್ತಿ, ನಗಾಡಿದ್ದೂ ಜಗಳಾಡಿದ್ದೂ ಕುಣಿದದ್ದೂ ಖುಶಿ ಪಟ್ಟದ್ದೂ.

ತನ್ನ ಅಮ್ಮನೊಂದಿಗೆ ಅವಳಿಗೂ ವಿಶೇಷ ನಂಟು ಇತ್ತು. ದೊಡ್ಡದಾಗಿ ನಗದ ನಮ್ಮ ದೊಡ್ಡಮ್ಮನನ್ನು ಎಷ್ಟು ನಗಿಸುತಿದ್ದಳು ಅವಳು. ದೊಡ್ಡಮ್ಮ ಇದ್ದಾಗ ಅಮ್ಮನೊಳಗೆ ಒಂದು 'ಮಂಗ' ಇತ್ತು. ಅದು ತಮಾಷೆ, ಹಾವಭಾವ ಒಮ್ಮೊಮ್ಮೆ ಸಣ್ಣಪುಟ್ಟ ಫಾರ್ಸ್ ಇತ್ಯಾದಿ ಮಾಡಿ ನಮ್ಮನ್ನೆಲ್ಲ ಬಾಯಿಕಳೆದು ನೋಡುವಂತೆ ಮಾಡಿ ಎಷ್ಟು ರೀತಿಯಲ್ಲಿ ರಂಜಿಸುತ್ತಿತ್ತು! ದೊಡ್ಡಮ್ಮ ತೀರಿಕೊಂಡರು. ಅವರು ಹೋದದ್ದೇ ಆ ಚುರುಕು ಮಂಗವೂ ಸತ್ತುಹೋಯಿತು. ಆ ಕುರಿತು ಅವಳ ಸಣ್ಣದೊಂದು ಪದ್ಯವಿದೆ. ದೊಡ್ಡಮ್ಮ ತೀರಿಹೋಗುವ ಮುನ್ನಿನ ಅಮ್ಮನೇ ಬೇರೆ, ನಂತರದ ಅಮ್ಮನೇ ಬೇರೆ.

ಅಂದಿನ ನನ್ನ ವಯಸ್ಸಿಗೆ ಸರಿಯಾಗಿ, ಇಂದಿಗೂ ಸರಿಯಾಗಿ ನನ್ನ ಸ್ನೇಹಿತೆಯೆಂದರೆ – ಅಮ್ಮ. ಅವಳ ಹತ್ತಿರ ನಾನು ಹೇಳಿಕೊಳ್ಳದ ವಿಷಯವೇ ಇಲ್ಲ. ದೇವರ ಹತ್ತಿರ ಹೇಳಿಕೊಂಡಂತೆ ಎಲ್ಲವನ್ನೂ ಹೇಳುತ್ತೇನೆ. ಅವಳೊಡನೆ ಹೇಳುತ್ತ ಹೇಳುತ್ತ ನನಗೇ ಕೆಲ ವಿಷಯ ಸ್ಪಷ್ಟವಾಗುತ್ತದೆ. ಕೆಲ ಸಮಸ್ಯೆಗಳಿಗೆ ತಂತಾನೇ ದಾರಿಯೂ ಕಾಣುತ್ತದೆ. ಅವಳು ಮನಕೊಟ್ಟು ಆಲಿಸುತ್ತಾಳೆ. ನನಗೆ ಬೇಕಾಗುವುದು ಅದೇ, ಮತ್ತು ಅಷ್ಟೇ. ಅಮ್ಮ ಒಳ್ಳೆಯ ಕೇಳುಗಳು. ಮನೆಗೆ ಜನ ಬರುತ್ತಿರುತ್ತಾರಷ್ಟೆ ಮಕ್ಕಳು, ಅಭಿಮಾನಿಗಳು, ಮುದುಕರಾದಿಯಾಗಿ, ಗುರುತಿನವರು, ಗುರುತಿಲ್ಲದವರು ಯಾರು ಬಂದರೂ ಅವರ ಮಾತನ್ನು ಬಹಳ

ತಾಳ್ಮೆಯಿಂದ ಆಲಿಸುತ್ತಾಳೆ. ಒಮ್ಮೆ ಯಾರೋ ಒಬ್ಬರು ಬೆಂಗಳೂರಿನಿಂದ ಯಾವುದೋ ಕೊಂಡಿಯ ನೆಪದಲ್ಲಿ ಬಂದಿದ್ದರು. ಬೆಳಗಿನ ಜಾವ ಬಂದು ಮಾತು ಸುರುಮಾಡಿದವರು ಮುಗಿಸುತ್ತಲೇ ಇಲ್ಲ! ಅಪ್ಪಂಗೂ ನನಗೂ (ನಾನಾಗ ಮಣಿಪಾಲದಲ್ಲೇ ಇದ್ದೆ.ಇನ್ನೂ ಮದುವೆಯಾಗಿರಲಿಲ್ಲ) ಸಾಕುಸಾಕಾಗಿ ರೇಗಿ ಹೋಗಿತ್ತು. ಆದರೆ ಅಮ್ಮ ಅವರಿಗೆ ಊಟ ಬಡಿಸಿ ಅಷ್ಟೂ ಮಾತೂ ಆಲಿಸಿ ಅವರನ್ನು ಕಳಿಸಿದಳು! ಇಂಥ ಪ್ರಕರಣಗಳು ಎಷ್ಟೋ. ಪ್ರಾಯಶ: ಅವಳಿಗೇ ಗೊತ್ತಿಲ್ಲದಂತೆ ಅವಳೊಳಗಿನ ಕತೆಗಾರ್ತಿ ಮಾಡುವ ಕೆಲಸವಿದು.

ನಯನಾ ಜತೆ ಯಾವಾಗಲೂ ನಾನು ಹಿಗ್ಗುವುದಿದೆ: ಅಮ್ಮನ ಜತೆ ನಿನಗಿಂತ ನಾನು ಇದ್ದಿದ್ದೇ ಹೆಚ್ಚು ಅಂತ. ಹೌದು. ಅಮ್ಮನ ಜತೆ ಇದ್ದೇ ನನ್ನ ಓದು ಮುಗಿಸಿದೆ. ನಂತರ ಬೆಂಗಳೂರಿನಲ್ಲಿ ಕೆಲಸ ಸಿಕ್ಕಿದ್ದಾಗ ಅಪ್ಪ ಅಮ್ಮನನ್ನು ಬಿಟ್ಟಿರಲಾರೆ ಅಂತ ಕೆಲಸ ಬಿಟ್ಟು ಕೆಲವೇ ತಿಂಗಳಲ್ಲಿ ಓಡಿ ಬಂದೆ. ಮದುವೆಯಾದ ಮೇಲೆ ನನ್ನ ಗಂಡನಿಗೆ ಭಾರತದ ಉದ್ದಗಲ ವರ್ಗವಾಗುತಿದ್ದರೂ ಎಡೆ ಸಿಕ್ಕಾಗೆಲ್ಲ ಬಂದು ಹೋಗುತ್ತಿದ್ದೆ. ಈಗಂತೂ ನನ್ನ ಮಗ ಅವರ ಜತೆಯಲ್ಲೇ ಇದ್ದು ಓದುತ್ತಿರುವುದರಿಂದ ಆಗಾಗ ಹೋಗಿಬರುತ್ತೇನೆ.

ಇಂದಿಗೂ ನಾನು ಎಲ್ಲೇ ಹೋಗಲಿ, ಅಮ್ಮನಿಗೇನು ತರಲಿ ಎಂಬುದೆ ಮೊದಲು ಮನಸ್ಸಿಗೆ ಬರುತ್ತದೆ. ಅವಳು ಯಾವತ್ತೋ ಮಾತಿನಭರ ಏನನ್ನೋ ಹೇಳಿದ್ದನ್ನು ನೆನಪಿಟ್ಟುಕೊಂಡು ಅರಸತೊಡಗುತ್ತೇನೆ. ಯಾಕೆಂದರೆ ಅವಳು ತನಗಾಗಿ ಅಂಗಡಿಗೆ ಹೋಗಿ ಇಂಥದ್ದು ಬೇಕು ಎಂದು ತಂದುಕೊಂಡದ್ದು ನಾನು ನೋಡಿಯೇ ಇಲ್ಲ. ಇತರರಿಗಾಗಿಯಾದರೆ ಹೋದಾಳು. ನಾನು ತಂದದ್ದು ಖುಶಿಯಾದರೆ ಅವಳ ಕಣ್ಣಲ್ಲಿಯೇ ಇಂಗಿತ ಕಾಣುತ್ತದೆ. ಅಷ್ಟು ಅಲೆದು ಹುಡುಕಿ ಅವಳಿಗಾಗಿ ತಂದ ವಸ್ತುವನ್ನು ಯಾರಾದರೂ ಚೆನ್ನಾಗಿದೆ ಎಂದರೆ ಸೈ 'ನಿನಗೆ ಇಷ್ಟವಾಯಿತೇ, ತಕೊ. ಇದು ನಿನಗೆ' ಎಂದು ಕೊಟ್ಟುಬಿಡುತ್ತಾಳೆ! ಕೆಲವೊಮ್ಮೆ ನಾವು ಬೆದರಿಸುವುದಿದೆ 'ಇದು ನಿನಗೇ. ಯಾರಿಗಾದರೂ ಕೊಟ್ಟರೆ ನೋಡು...' ಅಂತ.

ನಾವು ವರ್ಗವಾಗಿ ಹೋದ ಕಡೆಗೆಲ್ಲಾ ಸುಮಾರಾಗಿ ಅಪ್ಪ-ಅಮ್ಮ ಬಂದಿದ್ದಾರೆ. ನಾನಿದ್ದ ಊರು ಮತ್ತದರ ಸುತ್ತಮುತ್ತಲನ್ನು ಅವರಿಗೆ ತೋರಿಸುವ ಭಾಗ್ಯ ಎಷ್ಟೋ ಸಲ ನನಗೊದಗಿದೆ. ಹಾಗೆ ಕಂಡ ಯಾವುದೋ ಜಾಗ ಹಾಗೂ ಜನ ಅವಳ ಒಳಗಿಳಿದು ಇನ್ನೊಂದೇ ರೂಪದಲ್ಲಿ ಅವಳ ಕತೆಯಾಗಿ ಬಂದಾಗ ಅಚ್ಚರಿಗೊಂಡಿದ್ದೇನೆ. ಆಗ ಸಾರ್ಥಕವೆನಿಸುತ್ತದೆ.

* ಎಲ್ಲವನ್ನೂ ತೂಗಿಸಿಕೊಂಡು ಅಪ್ಪನ ಸಹಾಯದಿಂದ ಗೆರೆ ಎಳೆದಷ್ಟು ಸಲೀಸಾಗಿ ಮನೆ ನಡೆಸಿಕೊಂಡು ಹೋಗುತ್ತಲೇ ಎಲ್ಲೋ ಇದ್ದಂತೆ ಇರುವವಳು ನನ್ನಮ್ಮ. ಹಾಗಾಗಿ ತೀರಾ ಓರಣಗೀರಣ ಕೇಳಬೇಡಿ. ಪ್ರತೀಸಲ ನಾನು ಮಣಿಪಾಲಕ್ಕೆ ಹೋದಾಗಲೂ

ಓರಣ ಮಾಡುವುದು ನನ್ನ ದೊಡ್ಡ ಕೆಲಸ. ಆದರೆ ಇನ್ನೊಮ್ಮೆ ಅಲ್ಲಿಗೆ ಹೋದಾಗ ನೋಡಿದರೆ ಮತ್ತೆ ಎಲ್ಲಾ ಉಲ್ಟಾಂಪಲ್ಟ! ಅವಳೇ ಇಟ್ಟ ವಸ್ತುಗಳ ಜಾಗ ಅವಳಿಗೇ ನೆನಪಿರುವುದಿಲ್ಲ. ಅದು ಎಲ್ಲಿದೆ ಎಂದು ಒಮ್ಮೊಮ್ಮೆ ಅಪ್ಪ ಹೇಳಬೇಕು. ಎಷ್ಟೋ ಸಲ ಅವಳು ಆ ಮನೆಯ ಯಾವುದು ಎಲ್ಲಿದೆ ಅಂತ ಕಣ್ಮುಚ್ಚಿ ಹೇಳಬಲ್ಲ ನನಗೆ ಫೋನ್ ಮಾಡಿ ಕೇಳುವುದಿದೆ. ಅವಳ ಕತೆ ಕವನಗಳು ಕಂಪ್ಯೂಟರಿನಲ್ಲಿ ಯಾವ ಫೋಲ್ಡರ್‌ನಲ್ಲಿದೆ ಅಂತಲೂ. ಮನೆಯಲ್ಲಿ ಉಯ್ಯಾಲೆ ಮಾಡಿಸಿದಾಗ ನಾನು ಬಂದು ಅದರ ಹಲಗೆ ಯಾವುದರ ತುಂಡು ಎಂದು ಗುರುತು ಹಿಡಿದದ್ದನ್ನ ನೋಡಿ ಇಬ್ಬರೂ ಆಶ್ಚರ್ಯಪಟ್ಟಿದ್ದರು. ಅಮ್ಮ ಕೆಲವೊಮ್ಮೆ ನಯನನ ಹತ್ತಿರ ನನ್ನ ಕುರಿತು 'ಈ ಹೆಣ್ಣಿನ ಕಣ್ಣು ತಪ್ಪಿಸುವಂತಿಲ್ಲಪ್ಪಾ' ಎಂದು ಉದ್ಗರಿಸುತ್ತ ಮೆಚ್ಚುವುದಿದೆ. ನಯನ ಕೂಡ ಹಿಗ್ಗಿನಿಂದಲೇ 'ಅಪ್ಪ-ಅಮ್ಮನ ಸೆಕ್ರೆಟರಿ' ಅಂತ ನನ್ನನ್ನು ಛೇಡಿಸುತ್ತಾಳೆ. ಅದಕ್ಕೆ ತಕ್ಕಂತೆ ಅಮ್ಮ ಏರ್ಪಡಿಸಿದ 'ಅಡುಗೆ ಮನೆ ಜಗತ್ತು' ಸಂಕಿರಣಕ್ಕಾಗಿ ಹಗಲುರಾತ್ರಿ ಅವಳೊಡನೆ ಕಾರ್ಯದರ್ಶಿಯಂತೆಯೇ ಕೆಲಸ ಮಾಡಿದ್ದು ನನಗೆ ದೊರೆತ ಒಂದು ಯೋಗವೇ. ಕೆಲವೊಮ್ಮೆ ನಾನು ಅಧಿಕಪ್ರಸಂಗ ಮಾಡಿದ್ದೂ ಇದೆ. ಒಮ್ಮೆ ಅಮ್ಮನ ಒಂದು ಕೃತಿ ಅಚ್ಚಾಗಿ ಬರುವಾಗ ಅದರ ಶೀರ್ಷಿಕೆ ಕೇಳಿ, ನನಗದೇನೂ ಇಷ್ಟವಾಗದೆ, ತುಂಬಾ ಚರ್ಚಿಸಿದ್ದೆ. ಆದರೂ ಅಮ್ಮ ಬಿಡದೆ ಅದನ್ನೇ ಅಚ್ಚು ಹಾಕಿಸಿದಳು. ಲೇಖಕಿಯಾದರೂ ಅವಳು ನನ್ನ 'ಅಮ್ಮ' ಎನ್ನುವ ಅಪನಾಪನ್ ಹೀಗೆಲ್ಲ ಮಾಡಿಸಿರಬೇಕು.

ಇದು ಅಮ್ಮನ ವಿಚಾರವಾದ್ದರಿಂದ ಅವಳ ಕುರಿತೇ ಬರೆದೆ. ಅಪ್ಪನ ವಿಚಾರ ಬರೆಯಲು ಹೋದರೆ ಅದೂ ತುಂಬ ಇದೆ. ಸಂಕ್ಷಿಪ್ತವಾಗಿ, ಅಪ್ಪನಿಂದ ನಮಗೆ ಸಂಗೀತದ ಅಭಿರುಚಿ ಹುಟ್ಟಿತು. ಅಪ್ಪನ ಬಳಿ ಆಗ ಒಳ್ಳೆಯ ಟೇಪ್‌ರೆಕಾರ್ಡರ್ ಇತ್ತು. ಬಾಲ್ಯದಲ್ಲಿ ನಾವು ನಿದ್ದೆ ತೂಗುತ್ತಿರುವ ಸಮಯ ನೋಡಿ ಅವರು ಹೆಸರಾಂತ ಸಂಗೀತಗಾರರ ಸಂಗೀತ ಆನ್ ಮಾಡುತಿದ್ದರು. ಕೇಳುತ್ತ ನಾವು ಮಲಗುತಿದ್ದೆವು. ಶಿವಮೊಗ್ಗದ ವಿದ್ಯಾಗಣಪತಿ ಸೇವಾ ಸಂಘದಲ್ಲಿ ಅಪ್ಪ ಎಷ್ಟು ಒಂದಾಗಿ ಬಿಟ್ಟಿದ್ದರೆಂದರೆ, ತನ್ನನ್ನೇ ಮರೆಯುತ್ತಿದ್ದರು. ಎಂತೆಂತಹ ಕಛೇರಿಗಳು ಅಲ್ಲಿ ಏರ್ಪಾಡಾಗುತಿದ್ದವು. ಮನೆಯಲ್ಲಿ ಎಲ್ಲರೂ ಹೋಗುವವರೇ. ಅಪ್ಪನ ಸಂಗೀತಪ್ರೀತಿಯಿಂದ ನಾವು ಸಂಗೀತಗಾರರಾಗಲಿಲ್ಲ, ಅಮ್ಮನ ಬರವಣಿಗೆಯ ಪ್ರಭಾವದಿಂದ ಲೇಖಕಿಯರೂ ಆಗಲಿಲ್ಲ. ಸರಿಯೆ. ಆದರೆ ಸಂಗೀತ ಆಸ್ವಾದಿಸುವ ಕಿವಿ ಮತ್ತು ಮನಸ್ಸು, ಹಾಗೂ ನಾಟಕ ಸಾಹಿತ್ಯ ಪ್ರೀತಿ ನಮ್ಮಲ್ಲಿ ಬೆಳೆಯಿತು. ಅದೃಷ್ಟವಶಾತ್ ನಮ್ಮನ್ನು ಮದುವೆಯಾದವರಿಗೂ ಆ ಕಡೆ ಒಲವು ಇರುವುದರಿಂದ ನಾವು ಬಚಾವಾಗಿದ್ದೇವೆ.

ನಮ್ಮನ್ನು ನೋಡಿದೊಡನೆ ಎಲ್ಲ ಕೇಳುವ ಒಂದು ಕ್ಲೀಷೆಯ ಪ್ರಶ್ನೆ ಇದೆ. 'ನೀವೂ ಬರೆಯುತ್ತೀರ?'. ಇಲ್ಲ ಎನ್ನುತ್ತೇವೆ ಧೈರ್ಯವಾಗಿ. ಅದೇನು, ಡಾಕ್ಟರ ಮಗ ಡಾಕ್ಟರಾದಂತಹ ಪ್ರಕ್ರಿಯೆಯೆ? ಕಲಿತು ಬರುವ ಸಂಗತಿಯೆ? (ಒಮ್ಮೊಮ್ಮೆ 'ಬರೆಯುತ್ತಿದ್ದೆವಲ್ಲಾ, ಆದರೆ ಬರವಣಿಗೆ ನಮ್ಮನ್ನು ಆಯ್ಕೆ ಮಾಡಿಕೊಳ್ಳಲೇ ಇಲ್ಲ' ಎಂದು ನಗುವುದುಂಟು).

* ಛಾತಿವಂತೆ ಛಲಗಾತಿ ನನ್ನಮ್ಮ. ಯಾವುದೇ ಕೆಲಸ ಒಮ್ಮೆ ಕೈಗೆತ್ತಿಕೊಂಡಳೆಂದರೆ ಬಿಡುವವಳಲ್ಲ. ತುಂಬಾ ತುಡಿತ, ಎಲ್ಲದಕ್ಕೂ, ಎಲ್ಲರ ಮೇಲೂ. ಮಕ್ಕಳು, ಕುಟುಂಬದಲ್ಲಿ ಯಾರಿಗೇ ಆಗಲಿ ಏನಾದರೂ ಸಮಸ್ಯೆಯಾದರೆ ಯೋಚಿಸಿ ಯೋಚಿಸಿ ತನ್ನಿಂದ ಆಗಬೇಕಾಗಿದ್ದನ್ನು ಮಾಡಿಯೇ ಶುದ್ಧ. ಎಲ್ಲೋ ಏನೋ ಆಗಬಾರದ್ದು ಆಯ್ತು ಅಂದರೆ ತನ್ನೊಳಗೇ ಒದ್ದಾಡುತ್ತಿರುತ್ತಾಳೆ. ಶತಪಥ ತಿರುಗುತ್ತ ಚಿಂತಿಸುತ್ತಾಳೆ. ಯಾವ ಪರಿಸ್ಥಿತಿಯಲ್ಲೂ ಹೆದರುವವಳಲ್ಲ. ಅಂಥಾ ಕಷ್ಟದ ದಿನಗಳಲ್ಲೂ (ಅವಳ ಪ್ರಕಾರ 'ಎಲ್ಲರಿಗೂ ಬರುವ ಜೀವನದ ಕಷ್ಟಗಳು ಅವು, ವಿಶೇಷವೇನಿಲ್ಲ') ಅವಳು ಕಣ್ಣೀರಿಟ್ಟಿದ್ದಾಗಲೀ, ಅಪ್ಪ-ಅಮ್ಮ ಜಗಳಾಡಿದ್ದಾಗಲೀ ಎಂದೂ ನಾವು ನೋಡಿದ್ದೇ ಇಲ್ಲ. ಕಣ್ಣಂಚಲ್ಲಿ ನೀರು ತೋರಿದಂತಾಗಿ ಕ್ಷಣದಲ್ಲಿ ಮಾಯ. ಬದುಕಿನಲ್ಲಿ ಬಂದು ಹೋದ ಕರಾಳ ಜನರ ಹಾಗೂ ಘಟನೆಗಳ ನೆನವರಿಕೆಯಲ್ಲಿ ಕರಗಿ ಹೋಗಲಿಲ್ಲ. ಬರೆಯುವುದನ್ನೇ ನೆಚ್ಚಿಕೊಂಡಳು. ಇವತ್ತಿಗೂ, ನಾವಿಬ್ಬರೂ ಸಮಸ್ಯೆಗಳು ಎದುರಾದಾಗ 'ಅಮ್ಮ ಆಗಿದ್ದರೆ ಹೇಗೆ ಸಂಭಾಳಿಸುತ್ತಿದ್ದಳು' ಎಂದು ಯೋಚಿಸಿ ಧೈರ್ಯ ತೆಗೆದುಕೊಳ್ಳುತ್ತೇವೆ.

ನನ್ನಮ್ಮ ಎಪ್ಪತ್ತೈದಕ್ಕೆ ಹತ್ತಿರವಾಗಿದ್ದಾಳೆ ಎಂದರೆ ನಂಬಲಸಾಧ್ಯ. ಮನಃಶಕ್ತಿ ಕುಂದಿಲ್ಲ. ಚುಸ್ತಿ ಕಮ್ಮಿಯಾಗಿಲ್ಲ, ಧೈರ್ಯ ಕಂಪಿಸಿಲ್ಲ, ಲವಲವಿಕೆ ತಮಾಷೆ ಕುಶಾಲು ಕುಗ್ಗಲಿಲ್ಲ... ಒಂದು ಸುತ್ತೂ ದಪ್ಪವಾಗಲೂ ಇಲ್ಲ! ಅವಳ ಕುರಿತ ನನ್ನ ಮಾವನ ತಮಾಷೆಯೊಂದು ನೆನಪಾಗುತ್ತದೆ. ಮಳೆ ಬಹಳ ಇಷ್ಟ ಅವಳಿಗೆ. ಮಳೆ ಸುರಿದಂತೆ ಅವಳ ಬರೆಯುವ ಉಮೇದೂ ಹೆಚ್ಚುತ್ತದೆ. ಮಳೆ ಬರುತ್ತಿರುವಾಗೊಮ್ಮೆ ಅಮ್ಮ ಕೊಡೆ ಇಲ್ಲದೆ ಅಂಗಳದಲ್ಲಿ ಓಡುತ್ತಿದ್ದಳು. ಯಾರೋ 'ಅಯ್ಯೊ ಅವಳಿಗೆ ಕೊಡೆ ಹಿಡಿಯಿರೀ' ಎಂದಾಗ, ನನ್ನ ಮಾವ 'ಅವಳಾ? ಎರಡು ಹನಿಗಳ ಚಡಿಯಲ್ಲಿ ಓಡಬಲ್ಲಳು' ಎಂದು ನಗಿಸಿದ್ದು ಮರೆತೇ ಹೋಗುವುದಿಲ್ಲ. ಅದು, ಅವಳು ಸಪುರ ಎಂದಷ್ಟೇ ಅಲ್ಲ, ಚುರುಕು ಎಂಬರ್ಥದಲ್ಲಿಯೂ.

ನಮ್ಮ ಅಮ್ಮ ಹೀಗೆಯೇ ಬರೆಯುತ್ತಿರಲಿ, ತನ್ನ ಎಂದಿನ ಉತ್ಸಾಹ, ತಮಾಷೆ-ಕುಶಾಲಿನಿಂದ, ತನ್ನ 'ಡೇಂಗ್ಸ್' (ಡಾನ್ಸ್)ಗಳಿಂದ, ಕತೆ ಹೇಳುತ್ತ, ಕವನ ಬರೆಯುತ್ತ ಹೇಳುತ್ತ ಓದುತ್ತ, ಬಂದು ಹೋಗುವವರೊಡನೆ ಮಾತುಕತೆಯಾಡುತ್ತ, ಅಪ್ಪನ ಜತೆ ಆರೋಗ್ಯದಿಂದಿರಲಿ ಎಂದೇ ನನ್ನ ಆಶಯ.

ಮುಕ್ತಾಯದಲ್ಲೊಮ್ಮೆ ಹಿಂದಿರುಗಿ ನೋಡಿದರೆ,

ನಾವು ನಾಲ್ವರ ಜೀವನದಲ್ಲಿ ಅನೇಕ ತೊಡರುಗಳ ನಡುವೆಯೂ ನಮ್ಮ ಉಲ್ಲಾಸದ ನಗೆಯೇ ಹೆಚ್ಚು ಕಾಣಿಸುತ್ತಿದೆ.



# ಜೀವದ ಜೀವ ನನ್ನಮ್ಮ

ಕಳೆದೆ ನೀ ವರುಷಗಳನ್ನೇ
ಹತ್ತಾರು ಕಂಗಳ ಮಧ್ಯೆ
ನಂದಾದೀಪ
ಸಣ್ಣಗೆ
ಬೆಳಕ ಕೊಟ್ಟೆ, ಜ್ವಾಲೆಯನ್ನಲ್ಲ
ಅಳುಮುಂಜಿ ಮಗುವಿಗೂ
ಉಳ್ಳುಳ್ಳುಳ್ಳಾಯೀ, ನೀ ಚಂದ

ನಿನ್ನ ಅಳುವೂ ಚಂದ
ಎನ್ನುತ್ತ
ಅಳುತ್ತಿರಬಹುದೇ ಅರ್ಥವಾಗಿ ಎಲ್ಲ
ಕುಡಿಯಲ್ಲವೇ ಎಂಬ ಸಂಶಯಾಶಯದಿಂದ
* * *

ಓಡುತ್ತಿದ್ದೆ ನಾ ನಿನ್ನ ಬಳಿಗೆ
ಹೇಳಲು ನಾ ನಕ್ಕೆನೆಂದು
ಓಡುತ್ತಿದ್ದೆ ನಾ ನಿನ್ನ ಬಳಿಗೆ
ಹೇಳಲು ನಾ ಅತ್ತೆನೆಂದು

ಕರೆಯುತಿರುವೆ ಈಗಲೂ ಮನದ ಮೂಲೆಯಿಂದ
ಓಡುವ ಕಾಲವಲ್ಲವಿದು, ಹೇಳಿಕೊಳ್ಳಲೂ
ತಲುಪಿತೆನಗೆ ನಿನ್ನ ಮೌನ
ಸಾಕೆ–ನಗೆ
ಪಳಗಿ ಗಟ್ಟಿಯಾಗಲು, ಕಳೆಯಲು ಭ್ರಾಂತಿ
* * *

ತಲುಪಿತಂದೇ ನಿನ್ನ ಪತ್ರ

ಓದುತ್ತ ಆಲಿಸುತ್ತ
ಕಣ್ಣು ಕಿರಿದಾಗಿ
ಮಂಜು ಮಂಜಾಯಿತು

ಮುಷ್ಟಿಯೊಳಗೆ ಮುಚ್ಚಿಕೊಳ್ಳುವೆ
ನಿನ್ನ ಆ ಸಾಲುಗಳ
ದಾರಿ ಮರೆಯದೆ ಹೆಜ್ಜೆ ತಪ್ಪದೆ
ಗುರಿಯನ್ನೂ ಬಿಡದೆ
ಚಿಂತಿಸಬೇಡ ಆ ಪುಟ್ಟ ಹುಡುಗಿ ಬೆಳೆದಿರುವಳು ನೋಡು
ಅರ್ಥವಾಗುವುದೀಗ ಅರ್ಥವಾಗದ್ದೂ
ಅಂದು ಕನಸ ಕಟ್ಟಿದಳು
ಆದರೀಗ ದಿನನಿತ್ಯ ಜೀವನದ ನಿಜನೇಯ್ಗೆ ನೇಯುತಿಹಳು
* * *

ನೆನಪಿದೆಯಾ ಅಂದು
ಭಾರ ಮನಹೊತ್ತು ಬಸ್ಸಿನಲಿ
ನಾವಿಬ್ಬರೇ
ಮೌನ
ಏನೊಂದೂ ತಿಳಿಯದೆ

ನೀನೆಂದೆ – ಅಕ್ಕಾ ನೀನೆನಗೆ ಧೈರ್ಯ
ಕಾಣದ ಆ ಅಕ್ಕನನ್ನು ನೆನೆದು
ನನಗೋ ನೀನೇ ಧೈರ್ಯ
ಎಂದೆಂದಿಗೂ

ಪಾರಿಜಾತ ಕಿಸ್ಕಾರ ರಂಜ ಸುರುಗಿ ಹೂವಿನಲೂ
ನಿನ್ನದೇ ನೆಂಪು
ಗ್ಲಾಡಿಯೋಲ್ಲ ಜರ್ಬರಗಳಿಗಿನ್ನೂ
ತಿಳಿಯದು ನಿನ್ನ ಕಂಪು
* * *

ಬರುತ್ತಿದ್ದೆ ನಾ ನೀ ಹೋದಲೆಲ್ಲ
ಅಡಿಗೆ ಮನೆ, ಪಡಸಾಲೆ, ಘಟ್ಟ, ಸೆಮಿನಾರು
ಮರೆಯಬೇಡ ನಿನ್ನ ಆ ಕೊನೆಯ ಪಯಣಕೂ
ನಾನೇ ನಿನ್ನ ಜತೆ

ಎಂಥೆಂಥಾ ಗಳಿಗೆಯಲ್ಲೂ
ನೀನು
ನಾನಿದ್ದೇನೆ ಎಂಬಂತೆ ಹಾಜರು!
ದೂರವಿದ್ದರೂ –
ಈಗಲೂ
ನೀನಿರುವ ಭಾಸ
ನನ್ನ ಸುತ್ತಲೂ

**– ಪಲ್ಲವಿ ರಾವ್**

# ನನ್ನ ದೊಡ್ಡ

✦ ಗೌರಿ ಕಾಶ್ಯಪ್ (ಮೊಮ್ಮಗಳು)

ನಾನು ಸಣ್ಣವಳಿದ್ದಾಗ ಪ್ರತೀ ಬೇಸಿಗೆಯ ರಜೆಗೆ ನನ್ನ ಅಮ್ಮನೊಂದಿಗೆ ಮಣಿಪಾಲಕ್ಕೆ ಹೋಗುತಿದ್ದೆ. ಅದೊಂದು ಖುಶೀಯಿಂದ ಹೊರಡುವ ಪ್ರಯಾಣ ನನಗೆ. ಇಂದಿಗೂ ನನಗೆ ರಜೆ ಎಂದರೆ ಅಜ್ಜ ಮತ್ತು ದೊಡ್ಡ, ಮಣಿಪಾಲದ ಸೆಕೆ, 'ಇರುವಂತಿಗೆ' ಮನೆಯ ಉಯ್ಯಾಲೆ. ನಾನು ರಜೆಗೆ ಬರುತಿದ್ದೇನೆ ಎಂದು ಗೊತ್ತಾದ ಕೂಡಲೆ ಅಜ್ಜ ನನಗೆಂದು ಹಲಸಿನಕಾಯಿ ಚಿಪ್ಸ್, ಚರುಮುರಿ ಮಂಡಕ್ಕಿ, ಚಕ್ಕುಲಿ ತರುತಿದ್ದರು. ಅಡುಗೆಮನೆಯಲ್ಲಿ ದೊಡ್ಡ ನನಗಾಗಿ ಕೆಲ ತಿಂಡಿಗಳನ್ನು ಮಾಡಿ 'ಎಂತ ಬೇಕ್ ಹೇಳ್? ಅದನ್ನೆ ಮಾಡ್ತೆ' ಎನ್ನುತಿದ್ದಳು. ಈಗಲೂ ನಾನು ಮತ್ತು ನನ್ನ ತಮ್ಮ ಅಖಿಲ್ ಮಣಿಪಾಲಕ್ಕೆ ಬಂದರೆ ನಾವೇನೋ ವಿಐಯ್‌ಪಿಗಳು ಎನ್ನುವ ಹಾಗೆ ಅವರು ಇಬ್ಬರೂ ಸಂಭ್ರಮದಿಂದ ಗೇಟಿನತ್ತ ವೇಗವಾಗಿ ಬರುವ ದೃಶ್ಯ ನಮ್ಮ ಮನಸ್ಸಿನಲ್ಲಿ ಸ್ಪಷ್ಟ ನಿಂತಿದೆ. ನಮಗೋ ನಾವು ಏನು ಮಾಡಿದರೂ ನಡೆಯುವ, ಏನು ಮಾಡಿದರೂ ಚಂದ ಎನ್ನುವ, ಕೊಂಡಾಟದ ವಾತಾವರಣಕ್ಕೆ ಬಂದ ಹಿಗ್ಗು. ಮಣಿಪಾಲದ ಮನೆಯಲ್ಲಿಯೋ, ಹೊರಗೆ ಮಳೆ ಬರುತಿದ್ದರೂ ಒಳಗೆ ಸೆಕೆ ಎಂದರೆ ಸೆಕೆ. ಕರಾವಳಿ ಜಿಲ್ಲೆಗಳೇ ಹಾಗೆಯಲ್ಲವೆ? 'ಮಡಿಕೇರಿಯ ಅಂಥಾ ತಂಪು ವಾತಾವರಣ ಬಿಟ್ಟು ಈ ಸೆಕೆಯಲ್ಲಿ ಬೇಯಲು ಬಂದ ಹಾಗಾಯ್ತಲ್ಲ ಹೆಣೆ' ಎಂದು ದೊಡ್ಡ ಎಷ್ಟು ಸಲ ಬೇಸರಗೊಳ್ಳುವಳೊ. 'ಮಡಿಕೇರಿಯಲ್ಲಿ ತಂಪು ಇದೆ ಹೌದು, ಅಲ್ಲಿ ದೊಡ್ಡ ಮತ್ತು ಅಜ್ಜ ಇದ್ದಾರೆಯೇ?' ಅಂತಂದೋ 'ಹಾಗಾದರೆ ರಜೆ ಬಂದಾಗ ನೀವೇ ಎಲ್ಲರೂ ಮಡಿಕೇರಿಗೇಯೇ ಬಂದು ಬಿಡಿರಲ್ಲ' ಎಂದೋ 'ಅಡ್ಡಿಲ್ಲ ದೊಡ್ಡ, ನೀನೆಂದಷ್ಟು ಸೆಕೆ ಆಗುತ್ತಿಲ್ಲ' ಎಂದೋ ಒಮ್ಮೊಮ್ಮೆ ಒಂದೊಂದು ಉತ್ತರ ಕೊಡುತ್ತ ರಜೆಯನ್ನು ದಾಟುತಿದ್ದೆ.

ಒಮ್ಮೆ ನನ್ನ ಹುಟ್ಟಿದ ದಿನದಂದು ಅಜ್ಜ ದೊಡ್ಡ ಚಿಕ್ಕಿ ಎಲ್ಲರೂ ಮಡಿಕೇರಿಗೆ ಬಂದಿದ್ದರು. ಅವತ್ತೇ ರಾತ್ರಿ ಮಡಿಕೇರಿಯ ಆಕಾಶವಾಣಿಯಲ್ಲಿ ಬಾಲರ ಕಾರ್ಯಕ್ರಮ ಪ್ರಸಾರವಾಯಿತು. ಅದರಲ್ಲಿ ನಾನೂ ಇದ್ದೆ. ನನ್ನ ಸ್ವರವನ್ನು ಆಕಾಶವಾಣಿಯಲ್ಲಿ ಕೇಳಿದ್ದೇ ನನಗೆ ಒಮ್ಮೆಗೇ ಒಂದು ಸಂಕೋಚ ಮತ್ತು ನಾಚಿಗೆ ಆಯಿತು ಅಷ್ಟಿಷ್ಟಲ್ಲ. ಹಾಸಿಗೆಯ

ಮೇಲೆ ಕುಳಿತಿದ್ದ ನಾನು ಬೆಡ್‌ಶೀಟ್‌ಅನ್ನು ದಸಕ್ಕ ಎಳೆದು ಒಳಗೆ ಅಡಗಿಕೊಂಡೆ. ಇದನ್ನು ನೋಡಿದ ಎಲ್ಲರಿಗೂ ಮೋಜೇ ಮೋಜು. ಕಾರ್ಯಕ್ರಮ ಮುಗಿಯುವವರೆಗೂ ಯಾರು ಎಷ್ಟು ಕರೆದರೂ ನಾನು ಬೆಡ್‌ಶೀಟ್‌ನಿಂದ ಹೊರಗೆ ಬರಲಿಲ್ಲ. ದೊಡ್ಡ ಇದನ್ನು ಇವತ್ತಿಗೂ ಮರೆತಿಲ್ಲ. ಪ್ರಶಸ್ತಿ ಬಂದಾಗೆಲ್ಲ ಅವಳಿದನ್ನು ಫ್ರೆಶ್ ಆಗಿ ಮತ್ತೆ ನೆನಪು ಮಾಡಿಕೊಳ್ಳುತ್ತಾಳೆ. 'ಅವತ್ತು ನೀನು ಮಾಡಿದ ಹಾಗೆ ಮುಚ್ಚಿಕೊಂಡು ಎಲ್ಲಾದರೂ ಅಡಗಿ ಕುಳಿತುಕೊಳ್ಳುವಾ ಅಂತ ಅನಿಸುತ್ತದೆ. ಮಕ್ಕಳಿಗೆ ಇದೆಲ್ಲ ಎಷ್ಟು ಸುಲಭ ನೋಡು' ಎನ್ನುತ್ತಿರುತ್ತಾಳೆ.

ನನಗಿನ್ನೂ ಆಗ ಮೂರು ವರ್ಷ. ಮಣಿಪಾಲದ ವಾಸ ಮುಗಿಸಿ ಅಪ್ಪ ಅಮ್ಮನೊಂದಿಗೆ ಮಡಿಕೇರಿಗೆ ಹೊರಟಿದ್ದೆನಂತೆ. ನನ್ನನ್ನು ಕಳಿಸಿಕೊಡಲು ಕಷ್ಟವಾಗಿ ದೊಡ್ಡನ ಕಣ್ಣಲ್ಲಿ ನೀರು ತುಂಬಿತ್ತಂತೆ. ಹೊರಡುತಿದ್ದ ನನಗೆ ಹಾಲು ಕೊಡುತ್ತ 'ಇನ್ನು ಯಾವಾಗ ಬರುತ್ತೀ ಪುಟ್ಟಿ?' ಅಂತ ಕೇಳಿದರೆ ನಾನು 'ಅಳಬೇಡ ದೊಡ್ಡ, ಈಗ ಹೋಗದಿದ್ದರೆ ಮತ್ತೆ ಬರಲು ಆಗುತ್ತದೆಯೆ?' ಎಂದು ಅವಳ ಕಣ್ಣು ಒರೆಸಿದೆನಂತೆ. ಇದು ಯಾವುದೂ ನನಗಂತೂ ಒಂಚೂರೂ ನೆನಪಿಲ್ಲ. ಆದರೆ ಅವಳಿಗೋ, 'ಈಗ ಹೋಗದಿದ್ದರೆ ಮತ್ತೆ ಬರಲು ಆಗುತ್ತದೆಯೇ' ಅಂತ ಅಂದು ನಾನು ನುಡಿದದ್ದು ಮರೆಯದೇ ಮರೆಯದು. ಅಷ್ಟು ಸಣ್ಣ ಹೆಣ್ಣಿನ ಬಾಯಲ್ಲಿ ಎಂಥಾ ದೊಡ್ಡ ಮಾತು ಎಂದು ವಿಶ್ವಾಸ ತುಂಬುವಳು, ಅಚ್ಚರಿ ಪಡುವಳು. ಅವಳು ಮರೆಯದಿರುವುದು ಅಷ್ಟೇ ಅಲ್ಲ, ನಮಗೂ ಮರೆತು ಹೋಗದಂತೆ ಆಗಾಗ ಇದು ಮತ್ತು ಇಂಥ ಇನ್ನೂ ಏನೇನೋ ನಮ್ಮ ಬಾಲ್ಯಕ್ಕೆ ಸಂಬಂಧಿಸಿದ್ದನ್ನು ನೆನೆಯುತ್ತಿರುತ್ತಾಳೆ. ದೊಡ್ಡವರು ಇರುವವರೆಗೆ ನಮ್ಮ ಬಾಲ್ಯದ ನೆನಪುಗಳೂ ಜೀವಂತ ಇರುತ್ತವೆ, ಅಲ್ಲವೆ.

ದೊಡ್ಡಂದೂ ನಂದೂ ಬಹಳ ವಿಶೇಷವಾದ ಸ್ನೇಹ. ಯಾವತ್ತೂ ದೊಡ್ಡ ನನ್ನನ್ನು ಸಣ್ಣ ಹುಡುಗಿ ಅಂತ ನೋಡಿದವಳೇ ಅಲ್ಲ. ನಾನು ಸಣ್ಣವಳಿದ್ದಾಗಲೂ ನನ್ನ ಅಭಿಪ್ರಾಯಗಳಿಗೆ ಬಹಳ ಬೆಲೆಯಿದೆ ಎಂಬಂತೆ ನಡೆದುಕೊಳ್ಳುತಿದ್ದಳು. ತಾನು ಬರೆದ ಮಕ್ಕಳ ಕತೆ ಕವಿತೆಗಳನ್ನು ಓದಿ ಹೇಳಿ 'ಹೇಗಿದೆ?' ಎಂದು ನನ್ನೊಡನೆ ಕೇಳುತಿದ್ದಳು. ನಾನಾಗ 'ದೊಡ್ಡ ಕೇಳುತಿದ್ದಾಳಲ್ಲಾ. ಸರಿಯಾದ ಉತ್ತರ ಹೇಳಬೇಕು' ಎಂದು ನನ್ನದೇ ಆದೊಂದು ರೀತಿಯಲ್ಲಿ ಮನಸ್ಸಿನೊಳಗೇ ಆಲೋಚಿಸುತಿದ್ದೆ. ನನಗೆ ಸ್ತ್ರೀವಾದದ ಬಗ್ಗೆ, ಮಹಿಳೆಯರ ಲೋಕದ ಸುಖದುಃಖದ ಬಗ್ಗೆ, ಮನುಷ್ಯರ ಮನಸ್ಸು ಮತ್ತು ಸಮಾಜದ ಬಗ್ಗೆ ಚಿಂತಿಸಲು ಪ್ರಾರಂಭಿಕ ತರಬೇತಿಯನ್ನು ಅದು ತರಬೇತಿ ಅಂತಲೇ ಕಾಣದಂತೆ ನೀಡಿದವಳು ನನ್ನ ದೊಡ್ಡ. ನಾನು ಎಂಟನೆಯದೋ ಒಂಭತ್ತನೆಯದೋ ತರಗತಿಯಲ್ಲಿದ್ದಾಗ ಇಂಗ್ಲಿಷ್ ಕ್ಲಾಸ್‌ನಲ್ಲಿ ಒಬ್ಬ ಸಾಮಾಜಿಕ ಹೋರಾಟಗಾರ್ತಿ ಬಗ್ಗೆ ಪ್ರೆಸೆಂಟೇಶನ್ ಕೊಡಲು ತಯಾರಿ ಮಾಡಬೇಕಿತ್ತು. ನಾನು ದೊಡ್ಡನ ಬಳಿ ಯಾರನ್ನು ಕುರಿತು ಮಾಡಬಹುದು ಎಂದು ಸೂಚಿಸಲು ಕೋರಿದೆ. ಅವಳು ಮಣಿಪುರದ ಇರೋಂ ಶರ್ಮಿಳಾ ಹೆಸರನ್ನು

ಸೂಚಿಸಿದಳು. ಅವಳ ಹೋರಾಟದ ರೀತಿಯನ್ನೂ ಕಾರಣವನ್ನೂ ಹೇಳಿದಳು ಕೂಡ. ನಾನು ಆಮೇಲೆ ಇರೋಂ ಶರ್ಮಿಳಾ ಅವರನ್ನು ವಿವರವಾಗಿ ಓದಿಕೊಂಡೆ. ವಿಷಯ ಸಂಗ್ರಹಿಸಿದೆ. ಈ ನೆಪದಲ್ಲಿ ಎಂತಹ ದಿಟ್ಟ ಮಹಿಳೆಯನ್ನು ನನಗೆ ಪರಿಚಯಿಸಿದಳು ದೊಡ್ಡ! ನಾನು ಪ್ರೆಸೆಂಟೇಶನ್ ಕೊಡುವಾಗ ನನಗೇನೇ ಹೆಮ್ಮೆಯಾಗುವಂತೆ! ನಾನು ಮನಸ್ಸಿನಲ್ಲಿಯೇ ದೊಡ್ಡನಿಗೆ ದೊಡ್ಡ ಥ್ಯಾಂಕ್ಸ್ ಹೇಳಿದೆ. ಯಾವಾಗಲೂ ಅಷ್ಟೆ, ನಮಗೆ ಹೋಂ ವರ್ಕ್ ಕೊಟ್ಟರೆ ಅವಳು ತನಗೇ ಹೋಂ ವರ್ಕ್ ಕೊಟ್ಟಿರುವಂತೆ ಇರುತ್ತಾಳೆ. ಸಹಾಯಕ್ಕೆ ಸದಾ ತಯಾರಿರುತ್ತಾಳೆ.

ಸಾಹಿತ್ಯ ಮತ್ತು ಸ್ತ್ರೀಲೋಕ ಮುಂತಾದ ವಿಷಯಗಳನ್ನು ಮಾತ್ರವಲ್ಲ ಈಗೀಗ ದೊಡ್ಡ ನನ್ನೊಂದಿಗೆ ತನ್ನ ವೈಯಕ್ತಿಕ ಸುಖದುಃಖಗಳನ್ನೂ ಹಂಚಿಕೊಳ್ಳುತ್ತಾಳೆ. ಆಗ ನಾನು ಕೇಳುಗಳೂ, ಒಮ್ಮೊಮ್ಮೆ ಸಮಾಧಾನ ಮಾಡುವವಳೂ ಆಗುತ್ತೇನೆ. ಈ ಹೊತ್ತಿನಲ್ಲಿ ದೊಡ್ಡ ಮತ್ತು ನನ್ನ ಲೋಕವೇ ಒಂದು ಬೇರೆಯಾಗಿ ನನಗೆ ಕಾಣುತ್ತದೆ. ಆ ಸಂಭಾಷಣೆಗಳು ನಮ್ಮಿಬ್ಬರದು ಮಾತ್ರ. ನನ್ನ ಬಗ್ಗೆ ಅಷ್ಟು ನಂಬಿಗೆ ಅವಳಿಗೆ. ಅದು ನನಗೆ ಯಾವತ್ತೂ ಹೆಮ್ಮೆ. ನಾನೂ ಅಷ್ಟೆ, ಸಮಯವಾದಾಗೆಲ್ಲ ಅವಳೊಡನೆ ಕೆಲ ಸಂಗತಿಗಳನ್ನು ಹೇಳಿಕೊಳ್ಳುವುದಿದೆ. ಅವಳು ಹೇಳುವ ಮುಖ್ಯ ಉಪದೇಶ ಒಂದೇ. 'ವ್ಯಕ್ತಿತ್ವ ರೂಪುಗೊಂಡು ನಿನ್ನ ಕಾಲ ಮೇಲೆ ನೀನು ನಿಲ್ಲುವವರೆಗೆ ಪ್ರೀತಿ ಮದುವೆ ಅಂತೆಲ್ಲ ಸಿಕ್ಕಿಹಾಕಿಕೊಳ್ಳದಿರು. ಜಾಗ್ರತೆ.'

ಮುಂಚಿನಿಂದಲೂ ನನ್ನೊಡನೆ ಸುಖದುಃಖ ತಮಾಷೆ ಇತ್ಯಾದಿ ಹಂಚಿಕೊಳ್ಳುವ ಅವಳ ಪರಿಯನ್ನು ಈಗ ನೆನೆಸಿಕೊಂಡರೆ ಜೀವನದ ಸ್ವರೂಪವನ್ನು ಆ ಬಾಲ ಮನಸ್ಸಿಗೆ ಅರ್ಥವಾಗುವಂತೆ ಚೂರು ಚೂರೇ ನನಗೆ ತಿಳಿಸುತಿದ್ದಳು ಅಂತ ಅನಿಸುತ್ತದೆ. ಒಮ್ಮೊಮ್ಮೆ ಅವಳ ತುಂಟತನಕ್ಕೆ ನಮ್ಮ ತುಂಟತನವನ್ನೂ ಬೆರೆಸಿ ಸಣ್ಣಪುಟ್ಟ ಕಿತಾಪತಿಗೂ ಅವಳು ಅಣಿಮಾಡುವುದಿದೆ. ದೊಡ್ಡ ನಮ್ಮೊಂದಿಗೆ ಬರೀ ಗಂಭೀರವಲ್ಲ. ನಾವೆಲ್ಲ ಒಟ್ಟು ಸೇರಿದಾಗ ಮನೆಯೆಲ್ಲಾ ಗೆಲ. ದೊಡ್ಡನ ಕುಶಾಲುಗಳನ್ನು ಅರ್ಥಮಾಡಿಕೊಳ್ಳಲು ಅವಳ ಸದುದ್ದೇಶದ ಸ್ವಭಾವ ಅರ್ಥವಾಗಿರಲೇಬೇಕು. ಕೆಲ ಬಾರಿ ಅವಳೇನಾದರೂ ಹಾಸ್ಯಕ್ಕೆ ಹೇಳಿದಾಗ ಬೇಕೆಂದೇ ಬೇರೆ ರೀತಿಯಲ್ಲಿ ಅರ್ಥ ಮಾಡಿಕೊಂಡಂತೆ ನಾವು ಬೇಜಾರಾದ ಹಾಗೆ ನಾಟಕ ಮಾಡುವುದು, ಅವಳು ಅದಕ್ಕೆ 'ಇಲ್ಲ ಕಣೆ, ಹಾಗಲ್ಲವೇ, ತಮಾಷೆ ಕಣೆ' ಅಂತೆಲ್ಲ ಪುಸಲಾಯಿಸುವುದೂ, ನಾವೆಲ್ಲ ನಗುವುದೂ ಒಂದು ಆಟ. ಮಕ್ಕಳೆಂದರೆ ಪ್ರಾಣ ಅವಳಿಗೆ. ಶಾಲೆಯ ಹೋಂ ವರ್ಕ್ ಅನ್ನು ಸಪ್ಪೆ ಮುಖದಲ್ಲಿ ನಾನು ಮಾಡುತಿದ್ದರೆ ಸಂಕಟಪಡುತಿದ್ದಳು. 'ನಾ ಮಾಡಿಕೊಡುದಾ?' ಅಂತ ಕೇಳಿ ನಗಿಸುತಿದ್ದಳು. ಈಗಲೂ 'ದೊಡ್ಡ, ಯುನಿವರ್ಸಿಟಿ ಪ್ರಾಜೆಕ್ಟ್ ಕೊಟ್ಟಿದ್ದಾರೆ. ಮಾಡಿಕೊಡ್ತೇ' ಎಂದು ನಾನು ಛೇಡಿಸುವುದಿದೆ. ಅವಳೋ ಒಂದು ನಿಮಿಷವೂ ತಡೆಯದೆ 'ಹೋ, ನಾ ರೆಡೀ, ತಕಂಬಾ,

ಕಂಡೇ ಬಿಡ್ತೆ' ಅಂತನ್ನುವಳು. ಎಷ್ಟೆಲ್ಲಾ ಕತೆ ಹೇಳುತ್ತ ನಾಟಕ ಮಾಡುತ್ತ ನಮ್ಮೊಡನೆ ಜೋಡಿಯಾಗಿ ಬಂದ ನಮ್ಮ ದೊಡ್ಡ, ನನಗೆ ಮತ್ತು ಅಖಿಲ್‌ನಿಗೆಂದು ಕೊಟ್ಟ ಅತಿದೊಡ್ಡ ಉಡುಗೊರೆ –

'ಅಜ್ಜಾಲಕ್ಕ ಅಜ್ಜೀಮನೆಗೆ ಹೋಗಿದ್ದು'. ಆ ಕತೆಗಳನ್ನೆಲ್ಲ ನಮಗೆ ಸಣ್ಣದಿನಲ್ಲಿ ಹೇಳಿದ್ದಕ್ಕೋ ಏನೋ ಇವತ್ತಿಗೂ ಅವು ಕೇವಲ ಕತೆಗಳಲ್ಲ, ನಮ್ಮ ಮಟ್ಟಿಗೆ ಜೀವಂತ ಜಗತ್ತು.

ಈಗಲೂ ಇಷ್ಟು ವಯಸ್ಸಾದರೂ ನನ್ನ ಪ್ರೀತಿಯ ಅಜ್ಜ ಮತ್ತು ದೊಡ್ಡ ಮುಂಚಿನಂತೆಯೇ ಇದ್ದಾರೆ. ಸ್ವಲ್ಪ ಅಡುಗೆ, ಸ್ವಲ್ಪ ನಿದ್ದೆ, ಅಕ್ಕ ತಂಗಿ ಬಂಧುಗಳೊಡನೆ ನೆಂಟರೊಡನೆ ಸ್ನೇಹಿತರೊಡನೆ ಮಾತು, ಅಮ್ಮ ಚಿಕ್ಕಿಯರ ಸುತ್ತ ಚಿಂತೆ, ನನ್ನ ಮತ್ತು ಅಖಿಲ್ ಜೊತೆ ಸಲ್ಲಾಪ, ಅಜ್ಜ ಮಾಡುವ ಪೂಜೆಗೆ ಹೂವು ಕೊಯ್ದು ಮಾಲೆ ಮಾಡಿಡುವುದು ಮತ್ತು ಬರವಣಿಗೆ ಓದು ಇತ್ಯಾದಿಗಳಲ್ಲಿ ದೊಡ್ಡ ಮಗ್ನವಾಗಿ ಇರುತ್ತಾಳೆ. ಒಟ್ಟಿನಲ್ಲಿ ಮಾತು, ನಗೆ, ಗೆಲ, ಪ್ರೀತಿ ಮತ್ತು ಶಕ್ತಿ ಹಾಗೂ ಘನತೆಯೇ ನನ್ನ ದೊಡ್ಡ.

ನನ್ನ ಪ್ರೀತಿಯ ಹೆಮ್ಮೆಯ ದೊಡ್ಡ, ನಿನಗೆ ನನ್ನೆಲ್ಲ ಗೌರವ, ಪ್ರಣಾಮ. ನಾವು ಬಂದಾಗ ಸಂಭ್ರಮದಿಂದ ಎದುರುಗೊಳ್ಳುವ ನಿನ್ನ ಮತ್ತು ಅಜ್ಜನ ಉಲ್ಲಾಸ ಲವಲವಿಕೆ ಹೆಜ್ಜೆಯ ವೇಗ ಯಾವತ್ತೂ ಒಂದಿಷ್ಟೂ ಕಡಿಮೆಯಾಗದಿರಲಿ. ಬರೆಯುವ ನಿನ್ನ ಕೈ ಯಾವತ್ತೂ ಶಕ್ತಿ ಕುಂದದಿರಲಿ.



## Dodda, my friend

**✦ T Akhil Rao (Grandson)**

I remember those times when I used to come to Manipal, that is my grandparents house, during my summer vacations. My grandmom would welcome me and my parents in a grand way every time. Not only us, but everyone who ever came to the house were happily welcomed by Ajja and Dodda.

She would serve all kinds of sweets and savouries for me and always made sure that I was happy and comfortable. Later in the day, she would call me and tell several stories, some written by her and some by others. I would rain questions on her. Mind you there, 'many' would be too little a word for the number of questions I asked. But to each of those little, silly questions she would answer patiently and with the same sweet voice. Each time she would transport me to a world filled with fantasies!

On days when I would deny to take bath she would convince me by saying 'ಬೇಗ ಸ್ನಾನ ಮಾಡಿ ತಯ್ಯಾರಾಗು. ಅಳಿಲು ಮನೆಗೆ ಹೋಗೋಣ' and I would be in and out of the bathroom in a flash! Everytime I visited Manipal, I would excitedly wait for her to take me to 'Alilu mane' at least this time. It was much later that I realised that it was only her trick to make me bath!

For the past three years now, I have been staying with my grandparents and pursuing my studies. I realise that not once has

she ever raised her voice at me. She never gets angry and always keeps her poise even if I annoy her. We have a unique way to converse with a good repartee. We joke a lot with each other. Sometimes people around us get amazed and shocked by hearing our banter. But we have a very good understanding and know well what the other implies.

I simply go to her post bed time and wake her up on many occasions to chat. On such occasions she always gets up in no time, as though she hadn't fallen asleep at all! Each day, I come back from college and tell Ajja and Dodda the stories of the day in the red oxide veranda of the house and enter the house only after the chat. Both listen to me curiously.

On Sunday evenings, I would sometimes cook something out of the ordinary for myself, each time trying a new thing and I tell my grandparents that if it turns out good I will share with them. Dodda smilingly nods her head. If ever I become successful in my experiment, Ajja relishes it along with me. Though Dodda also relishes, she has a very limited appetite. So, I tease her about her physical strength! Whatever I do, whether it is my studies or exercises or any house chore like putting the cotton beds to the sun, her usual comment is 'Putta, I'll do that for you. You don't worry'. If it is while putting the bed out in the sun, I would say, 'On the way you might fall down and later I'll have to carry both the bed and you, no Dodda, I'm not that strong'! And again, we laugh. She sometimes comes to my room during my exams and seeing the tension on my face asks, 'ನಾನು ಓದಿ ಕೊಡ್ಲಾ?' and I reply, 'ನೀನು ಓದಿಕೊಟ್ರೆ, ನಾನು ಫೇಲ್ ಆಗುವೆ, ಖಂಡಿತ.' She will laugh it out.

I had a pact with her when I first arrived to Manipal to stay. It was that - she wouldn't leave me alone here and move to her final journey until I start earning. We both refer to this treaty, whenever

she is unwell and we laugh out loud. Dodda always waits for Ajja and me to start having food and only then does she have hers. So both Ajja and I make fun by calling her 'Gandhari'. Like all grandmoms, she is never satisfied with how much ever I eat but happy with whatever marks I score.

The way she lives is just unbelievable. Nobody would have such endurance. I sleep late night due to my study related work, and have seen that Dodda will have a nap and again work on her computer in the middle of the night. Sometimes she'll be awake from midnight to early morning. And yet, she makes and keeps ready many dishes separately for my breakfast and tiffin box next day in time!!! My mother keeps telling that Dodda is spoiling me by taking too much care and that my mother will not be able to do to that extent when I live with her!

I have seen Dodda as a grandmother, a friend, teacher, an amazing cook and much more. The whole world may know her as a writer, as Vaidehi. But I know her as a friend who acts crazy with me.

But most importantly, living with her has showed me the extent of strength that a human being can have. Being limitless and sure-footed. And I want to inherit these qualities from her.



‘ವೈದೇಹಿಯವರ ಕಥೆ- ‘ಅಮ್ಮಚ್ಚಿಯೆಂಬ ನೆನಪು’- ಒಬ್ಬ ತಂದೆಯಿಲ್ಲದ ಎಳೆಯ ಹುಡುಗಿ ಅಮ್ಮಚ್ಚಿಯ ಕುರಿತದ್ದು. ಆಕೆ ಬಂಡಾಯದ ಅರಿವನ್ನು ಒಳಗಿಟ್ಟುಕೊಂಡಿರುವವಳು; ಗಟ್ಟಿಯಾದ ವೈಯಕ್ತಿಕತೆ ಇರುವವಳು. ವೆಂಕಪ್ಪಯ್ಯನಿಂದ ಅತ್ಯಾಚಾರಕ್ಕೂ ದಮನಕ್ಕೂ ಒಳಗಾಗಿ ಆಕೆ ಆತನನ್ನು ಒತ್ತಾಯದಿಂದ ಮದುವೆಯಾಗಿದ್ದಾಳೆ. ಅಮ್ಮಚ್ಚಿಗಿಂತ ಕಿರಿಯಳಾದ ಮತ್ತು ಅಂತಃಶಕ್ತಿಯನ್ನು ಮೆಚ್ಚುವ ಆಕೆಯ ಗೆಳತಿ ಇಲ್ಲಿ ಈ ಕಥೆಯನ್ನು ವಸ್ತುನಿಷ್ಠವಾಗಿ ಹೇಳತೊಡಗಿದ್ದಾಳೆ. ಈ ಕಥೆಯಲ್ಲಿ ಪ್ರೌಢವಾದೊಂದು ಕಾಲ್ಪನಿಕತೆ ಇದೆ. ಗಟ್ಟಿಯಾದ ಹಾಸ್ಯಪ್ರಜ್ಞೆ ಉದ್ದಕ್ಕೂ ಕೆಲಸ ಮಾಡಿದೆ. ಸ್ತ್ರೀವಾದಿ ಧೋರಣೆ ಎಂಬುದು ಇಲ್ಲಿ ಕಥನದ ನೇಯ್ಗೆಯಲ್ಲಿ ಮತ್ತು ಕೇಂದ್ರ ಪಾತ್ರದ ನಿರೂಪಣೆಯಲ್ಲೇ ಅಂತರ್ಗತವಾಗಿದ್ದು ಎಲ್ಲೂ ಅದು ಬುದ್ಧಿಪೂರ್ವಕವಾಗಿ ಮೇಲಿನಿಂದ ಸೇರಿಸಿದಂತೆ ಅನ್ನಿಸುವುದಿಲ್ಲ.’

**- ಶಾಂತಿನಾಥ ದೇಸಾಯಿ**

# ಆರು ದಶಕದ ನಂತರ; ನೂರು ನೆನಪುಗಳ ಹಂದರ

✦ ಸುಶೀಲಾ ಮೂರ್ತಿ (ಅಕ್ಕನ ಮಗಳು)

ನಮ್ಮ ಪಾಲಿಗೆ 'ವಸಂತಿ' ಯಾಗಿದ್ದು, ರಾಮಭಕ್ತರಾಗಿದ್ದ ಅವಳ ತಂದೆ 'ಜಾನಕೀ' ಎಂದು ಕರೆಯುತ್ತಿದ್ದ ಹುಡುಗಿ ಅದು ಯಾವ ಮಾಯದಲ್ಲಿ 'ವೈದೇಹಿ' ಯಾದಳೋ ಇಂದಿಗೂ ನನಗೆ ವಿಸ್ಮಯದ ಸಂಗತಿಯೇ.

ನಮ್ಮ ಬಾಲ್ಯ ಯಾವ ವಿಧದಲ್ಲೂ ವಿಭಿನ್ನವೇನಾಗಿರಲಿಲ್ಲ. ವಸಂತಿ ನನ್ನ ಅಮ್ಮನ ಸ್ವಂತ ತಂಗಿ. ನನ್ನದೇ ವಯಸ್ಸಿನ ಚಿಕ್ಕಮ್ಮ. ಈಗ ಕರ್ನಾಟಕದೆಲ್ಲೆಡೆ ಜನ ನೆನಪಿಡುವಂತಹ ಅರ್ಥಪೂರ್ಣ ಭಾಷಣಗಳನ್ನು ಮಾಡುತ್ತಿರುವ ಈಕೆಗೆ ಮಾತು ಬಂದುದೇ ಆರನೇ ವರ್ಷಕ್ಕೆ. ಹೀಗೆ ಒಂದು ವರ್ಷ ತಡವಾಗಿ ಶಾಲೆಗೆ ಸೇರಿ ನನಗಿಂತ ಒಂದು ವರ್ಷ ಹಿಂದಿನ ತರಗತಿಗೆ ಬಂದಳು. ಆದರೆ ನಾವು ಜತೆಜತೆಯಲ್ಲೇ ಇರುತ್ತಿದ್ದೆವು. ಮನೆಯಲ್ಲಿ (ನನಗೆ ಅಜ್ಜನ ಮನೆ, ಅವಳಿಗೆ ತಂದೆಯ ಮನೆ) ಒಟ್ಟು ಕುಳಿತು ಉಂಡೆವು, ಪಾತ್ರೆ ತೊಳೆದೆವು, ಹಪ್ಪಳ ಒತ್ತಿದೆವು, ಸೆಂಡಿಗೆ ಇಟ್ಟೆವು. ಆ ಸೆಂಡಿಗೆ ಕಾಗೆಗಳ ಪಾಲಾಗದಂತೆ ಕೈಲಿ ಕೋಲು ಹಿಡಿದು ಕಾವಲೂ ಕಾದೆವು. ರಾಶಿ ರಾಶಿ ಪುಸ್ತಕ ಓದಿದೆವು. 'ಚಂದಮಾಮ', 'ಬಾಲಮಿತ್ರ' ಗಳಿಂದ ಹಿಡಿದು ಕೈಗೆ ಸಿಕ್ಕ ಪುಸ್ತಕಗಳನ್ನೆಲ್ಲ ಓದುತ್ತ ಹೋದೆವು. ಸಿಕ್ಕಷ್ಟು ಸಿನಿಮಾ ನೋಡಿದೆವು. ಭಾಷಣ ಸ್ಪರ್ಧೆಗಳಲ್ಲಿ ವಾದಿಸಿದೆವು. ಒಳ್ಳೊಳ್ಳೆಯ ಪ್ರಬಂಧಗಳನ್ನು ಬರೆದು ಕನ್ನಡ ಪಂಡಿತರಿಂದ 'ಸೈ' ಎನಿಸಿಕೊಂಡೆವು. ಈ ಎಲ್ಲಾ 'ಮಾಮೂಲಿ' ಚಟುವಟಿಕೆಗಳ ನಡುವೆ 'ವೈದೇಹಿ' ಎಂಬ ಬೀಜ ಮೊಳಕೆಯೊಡೆದು, ಗಿಡವಾಗಿ, ಮರವಾಗಿ, ಕಥಾಗುಚ್ಛಗಳನ್ನೇ ಬಿಟ್ಟಿತಲ್ಲ! ವ್ಹಾ! ಇದು ಹೇಗಾಯಿತು? ಯೋಚಿಸಿದಷ್ಟೂ ಇದರ ಮೂಲ, ಬೆಳವಣಿಗೆ ಅಗಮ್ಯವಾಗಿಯೇ ಇದೆ. ಎಷ್ಟೋ ಕತೆ ಓದಿ 'ತುಂಬಾ ಚೆನ್ನಾಗಿದೆ ಕಣೇ' ಹೇಗೆ ಬರೆದೆಯೇ ಎಂದರೆ, 'ನಾನೆಲ್ಲೇ ಬರೆದೆ? ಅದೇ ಬರೆಸಿಕೊಂಡು ಹೋಯಿತು' ಎನ್ನುತ್ತಾಳವಳು.

ವೈದೇಹಿ ನಾಟಕಗಳನ್ನು ಬರೆದಿರುವುದು ಅಚ್ಚರಿಯೇನಲ್ಲ. ಅವಳಿಗೆ ಬಾಲ್ಯದಿಂದಲೂ ನಾಟಕ ಅಚ್ಚುಮೆಚ್ಚು. ನಾವು 'ಒಂದಾಣೆ ಮಾಲೆ' ಯಲ್ಲಿ ಅಚ್ಚಾದ ಕತೆಗಳನ್ನು ನಾಟಕವಾಗಿ

ಬರೆದುಕೊಂಡು ಮನೆಯಲ್ಲಿಯೇ ಆಡುತ್ತಿದ್ದೆವು. ಅವಳು ಅಕ್ಬರನಾಗಿ, ನಾನು ಬೀರಬಲನಾಗಿ ಒಮ್ಮೆ ನಾಟಕವಾಡಿದ್ದೆವು. ಪ್ರಸಿದ್ಧ ವಕೀಲರಾಗಿದ್ದ ನನ್ನ ಅಜ್ಜ ಹೇಗೋ ಬಿಡುವು ಮಾಡಿಕೊಂಡು ನಮ್ಮ ನಾಟಕೋತ್ಸವಕ್ಕೆ ಅಧ್ಯಕ್ಷರಾಗಿ ಕುಳಿತು, ನೋಡಿ, ಪುರಸ್ಕಾರಗಳನ್ನು ಕೊಡುತ್ತಿದ್ದರು. ಆದರೆ ಮೊದಲ ಬಹುಮಾನ ಯಾವಾಗಲೂ ನನಗೇ. ಒಮ್ಮೆ ತಡೆಯಲಾಗದೇ 'ಯಾಕಪ್ಪಯ್ಯ, ಯಾವಾಗಲೂ ಸುಶೀಲನಿಗೇ ಫಸ್ಟ್ ಪ್ರೈಸ್?' ಎಂದರೆ, 'ನೋಡು ಮಗೂ, ನೀನು ಮನೆಯವಳು, ಅವಳು ಅತಿಥಿ, ಅವಳಿಗೆ ಕೊಡುವುದೇ ನ್ಯಾಯ' ಎಂದಿದ್ದರು, ಅಂತಹ ವ್ಯಕ್ತಿ ನಮ್ಮ ಅಜ್ಜ.

ಹೈಸ್ಕೂಲಿಗೆ ಬಂದ ಮೇಲೂ ನಾವು ಶಾಲಾ ವಾರ್ಷಿಕೋತ್ಸವದಂದು 'ದಾನಶೂರ ಕರ್ಣ' ನಾಟಕವಾಡಿದ್ದೆವು. ನಾನು ಕರ್ಣ, ವಸಂತಿ ದುರ್ಯೋಧನ. ಆ ಪಾತ್ರಗಳಿಗಿರಬೇಕಾದ ಅಂಗಸೌಷ್ಠವ ನಮಗಿರಲೇ ಇಲ್ಲ. ಸ್ಫುಟವಾಗಿ, ತಪ್ಪಿಲ್ಲದೆ ಕನ್ನಡ ಆಡುತ್ತೇವೆಂಬ ಒಂದೇ ಕಾರಣದಿಂದ ನಮಗೆ ಆ ಪಾತ್ರಗಳು ಲಭಿಸಿದ್ದವು. ಈಗಲೂ, ಆ ದೊಗಲೆ ರಾಜಪೋಷಾಕುಗಳಲ್ಲಿ ಮುಳುಗಿ ಹೋಗಿದ್ದ ನಮ್ಮನ್ನು ನೆನೆನೆನೆದು ನಗುತ್ತಿರುತ್ತೇವೆ.

ಸುಮಾರು ಹನ್ನೊಂದು ವರ್ಷ ವರ್ಗವಿಲ್ಲದೆ ನಮ್ಮ ತಂದೆ ಬೈಕಾಡಿ ಯಜ್ಞನಾರಾಯಣರಾಯರು ಕುಂದಾಪುರದಲ್ಲಿಯೇ ಇದ್ದರು. ನಮ್ಮ ಮನೆಯೂ ಅಜ್ಜನ ಮನೆಗೆ ದೂರವಿರಲಿಲ್ಲ. ಸಂಜೆ ಶಾಲೆಯಿಂದ ಮನೆಗೆ ಬಂದು ಅವಳ ತಿಂಡಿಯಾಗುವ ಹೊತ್ತಿಗೆ ನಾನು ನನ್ನ ಮನೆಗೆ ಹೋಗಿ, ಪುಸ್ತಕಗಳ ಚೀಲ ಎಸೆದು, ತಿಂಡಿ ತಿಂದು ಓಡಿ ಬಂದಿರುತ್ತಿದ್ದೆ. ನಮ್ಮ ಅಜ್ಜನ ಮನೆಯ ಮುಂದೆ ದೊಡ್ಡ ಅಂಗಳವಿತ್ತು. ಇಬ್ಬರೂ ಸೇರಿ ಏನೆಲ್ಲ ಆಟ ಆಡುತ್ತಿದ್ದೆವು. ಕುಂಟಬಿಲ್ಲೆ, ಐಸ್ಪೈ, ಮನೆಆಟ... ಎಲ್ಲಾ. ಒಮ್ಮೊಮ್ಮೆ ನರೀಬೇಣ(ಈಗ ಗಾಂಧೀ ಮೈದಾನ)ದಾಚೆ ಇರುತ್ತಿದ್ದ ಮೀನಾಕ್ಷಮ್ಮ ಎಂಬ ದರ್ಜಿಯ ಮನೆಗೆ ಹೊಲಿದ ಬಟ್ಟೆ ತರಲು ಕಳಿಸುತ್ತಿದ್ದರು. ದಾರಿಯಲ್ಲೊಂದು ಹಾಳುಬಾವಿ. ಯಾರನ್ನೋ ಕೊಲೆಮಾಡಿ, ಗೋಣಿಚೀಲದಲ್ಲಿ ಕಟ್ಟಿ ಆ ಬಾವಿಯೊಳಗೆ ಎಸೆದಿದ್ದರೆಂಬ ಕತೆಯೊಂದು ಪ್ರಚಲಿತವಿತ್ತು. ಆ ಬಾವಿ ಹತ್ತಿರವಾದಂತೆ ಇಬ್ಬರಿಗೂ ಕೈಕಾಲು ನಡುಗುತ್ತಿದ್ದವು. ಕೈ ಕೈ ಹಿಡಿದ 'ರಾಮ ರಾಮ ರಾಮ' ಎನ್ನುತ್ತ, ಅತ್ತ ನೋಡದೆ ದಾಪುಗಾಲು ಹಾಕುತ್ತಿದ್ದೆವು. ವೈದೇಹಿಯ ಯಾವುದಾದರೂ ಕತೆಯಲ್ಲಿ ಇದರ ಪ್ರಸ್ತಾಪವಿರಬಹುದು.

ನಮ್ಮ ಅಜ್ಜನ ಮನೆಯ ಸರೀ ಎದುರು 'ಪೂರ್ಣಿಮಾ' ಎಂಬ ಟಾಕೀಸಿತ್ತು. ರಾತ್ರಿ ಎರಡನೇ 'ಆಟ'ದ ಸಮಯದಲ್ಲಿ, ರಾತ್ರಿಯ ನೀರವತೆಯಲ್ಲಿ ಸಂಭಾಷಣೆಗಳೂ, ಹಾಡುಗಳೂ ಸ್ಪಷ್ಟವಾಗಿ ಕೇಳುತ್ತಿದ್ದವು. ನಾವು ಹೊರ ಚಾವಡಿಯ ದಳಿಗಳಿಗೆ ಮುಖವಾನಿಸಿ ಕುಳಿತು ಎಲ್ಲ ಹಾಡುಗಳನ್ನು ಕಲಿಯುತ್ತಿದ್ದೆವು. ಯಾವ ಕವಿಗಳೋ ಶ್ರಮವಹಿಸಿ ಬರೆದ ಗೀತೆಗಳನ್ನು ಸವಿಯುತ್ತಿದ್ದೆವು. ದೇವರ ಮೇಲಿನ ಹಾಡುಗಳಾದರೆ ದಿನಾ ಸಂಜೆ ಮಾಡುತ್ತಿದ್ದ ಭಜನೆಯಲ್ಲಿ

ಹಾಡುತ್ತಿದ್ದೆವು. ವಸಂತಿಯ ಅಕ್ಕ ಲಲಿತಳದು ಬಲು ಸುಶ್ರಾವ್ಯ ಕಂಠ. ಅವಳು ನಾಯಕಿ. ನಾವು ಹಿಂದಿನಿಂದ ಅವಳಂತೆ ಹಾಡಲು ಪ್ರಯತ್ನಿಸುತ್ತಿದ್ದೆವು. ವಸಂತಿಯ ಶಬ್ದಭಂಡಾರವನ್ನು ಇವು ಖಂಡಿತ ಶ್ರೀಮಂತವಾಗಿಸಿರಬೇಕು.

ಒಂದೇ ಊರಿನಲ್ಲಿದ್ದು, ಒಂದೇ ಶಾಲೆಯಲ್ಲಿ ಓದಿ, ಒಂದೇ ಮನೆಯಲ್ಲಿ ಹಬ್ಬ, ತಿಥಿ, ಪೂಜೆ, ಪುನಸ್ಕಾರ, ಆಚರಿಸಿದವರು ನಾವು. ಗೆಳೆತನದ ನಂಟು ಬಹು ಚಿಕ್ಕಂದಿನಿಂದಲೇ ಇತ್ತು. 'ಮರದ ಬಾಯಾಗಿದ್ದರೆ ಒಡೆದೇ ಹೋಗುತ್ತಿತ್ತು!' ಎಂದು ಅವರಮ್ಮ ಬೈಯ್ಯುವಷ್ಟರ ಮಟ್ಟಿಗೆ ದಿನವೆಲ್ಲ ಮಾತಾಡುತ್ತಲೇ ಇರುತ್ತಿದ್ದೆವು. ಪ್ರಾಸಬದ್ಧವಾಗಿ ಶಬ್ದಗಳನ್ನು ಜೋಡಿಸಿಕೊಂಡು ನಕ್ಕು ನಗಿಸುತ್ತಿದ್ದೆವು. ಕತೆ, ಕವನ ಹೇಳಿಕೊಳ್ಳುತ್ತಿದ್ದೆವು.

ನಮ್ಮಿಬ್ಬರಿಗೂ ಮಳೆ, ಹೂ, ಹಣ್ಣು, ಕಾಡು, ಮೋಡ... ಒಟ್ಟಿನಲ್ಲಿ ಪ್ರಕೃತಿಯ ಮೇಲೆ ಇನ್ನಿಲ್ಲದಷ್ಟು ಮೋಹ, ಒಮ್ಮೆ ನನ್ನ ತಂದೆ ಆಫೀಸಿನ ಕೆಲಸದ ಮೇಲೆ ಜೋಗಕ್ಕೆ ಹೋಗುವಾಗ ನಮ್ಮಿಬ್ಬರನ್ನು ಜತೆಯಲ್ಲಿ ಕರೆದೊಯ್ದಿದ್ದರು. ಅಲ್ಲೊಂದು ವಿಶಾಲ ಟ್ರಾವಲರ್ಸ್ ಬಂಗಲೆಯಲ್ಲಿ ತಂಗಿದ್ದೆವು. ಆ ಟ್ರಾವಲರ್ಸ್ ಬಂಗಲೆಯ ಮುಂದೆ ಅಗಲವಾದ ಹಲವಾರು ಮೆಟ್ಟಿಲುಗಳು. ಎದುರಿನಲ್ಲೊಂದು ವಿಶಾಲ ಕೆರೆ. ಅದರ ಮೇಲೆ ಹಾರಾಡುವ ಪಕ್ಷಿ ಸಮೂಹ. ತ.ರಾ.ಸು. ಅವರ ಕಾದಂಬರಿಗಳನ್ನು ಓದಲೆಂದು ಮೆಟ್ಟಿಲ ಮೇಲೆ ಕುಳಿತವರು ಒಂದಕ್ಷರವನ್ನೂ ಓದದೆ ಆ ಪ್ರಕೃತಿ ಸೌಂದರ್ಯವನ್ನು ಕಣ್ತುಂಬಿಕೊಳ್ಳುತ್ತ ಮೌನವಾಗಿ ಅದೆಷ್ಟೋ ಹೊತ್ತು ಕುಳಿತದ್ದು ಇನ್ನು ಹಚ್ಚ ಹಸಿರು ನೆನಪು.

ಮುಂದೆ ನಾನು ಕಾಲೇಜು ಓದಿಗಾಗಿ ಮೈಸೂರು ಸೇರಿದೆ. 30–40 ಪುಟಗಳಿಗೆ ಕಡಿಮೆ ಇಲ್ಲದಂತೆ ಪತ್ರಗಳನ್ನು ಬರೆದುಕೊಳ್ಳುತ್ತಿದ್ದೆವು. ನಾನು ಕಣ್ಣಿನಿಂದ ನೋಡಿಯೂ ಇರದ ನನ್ನ ಕಲಂ ಸ್ನೇಹಿತ (ಪೆನ್ ಫ್ರೆಂಡ್)ನನ್ನು ಮದುವೆಯಾಗುತ್ತೇನೆಂದರೆ ಮನೆಯಲ್ಲಿ ನಡೆದ ಕೋಲಾಹಲ ಅವಳಿಗೆ ತಲುಪುತ್ತಲೇ ಇತ್ತು. ಭಾರೀ ಅನುಭವಿಯಂತೆ ನನಗೆ ಅವಳು ಧೈರ್ಯ ತುಂಬುತ್ತ ಪತ್ರ ಬರೆಯುತ್ತಿದ್ದಳು. ಆಗ ಅವೆಷ್ಟು ಪಾತ್ರಗಳು ಅವಳ ಮನಸ್ಸಿನಲ್ಲಿ ಮೂಡಿ ಅಚ್ಚಾದವೋ! ನನಗೆ ಮದುವೆಯಾದ ಒಂದೂವರೆ ವರ್ಷದಲ್ಲಿ ಅವಳ ಮದುವೆಯಾಯಿತು. ಅವಳ ಗಂಡ ಶ್ರೀನಿವಾಸಮೂರ್ತಿಯವರು ಶಿವಮೊಗ್ಗದವರು. ಅದೇನು ಯೋಗಾಯೋಗವೋ, ನನ್ನ ತಂದೆಗೂ ಶಿವಮೊಗ್ಗಕ್ಕೆ ವರ್ಗವಾಗಿ, ಊರು ಹಿಡಿಸಿ, ಅಲ್ಲೇ ಮನೆ ಕೊಂಡು ನೆಲೆಸಿಯೇಬಿಟ್ಟರು.

ಹೀಗಾಗಿ ಬೇಸಿಗೆಯ ರಜೆಯಲ್ಲಿ ಅಮ್ಮನ ಮನೆಗೆ ಬಂದ ನಾನು, ವಸಂತಿ ಭೇಟಿಯಾಗಿ ಸಿನಿಮಾ, ಪಾರ್ಕು, ಪಿಕ್ನಿಕ್ ಎಂದು ಓಡಾಡುವುದು ಸುಲಭವಾಯಿತು.

ಮುಂದೆ ವಸಂತಿ ಶಿವಮೊಗ್ಗ ಬಿಟ್ಟು ಗಂಡ ಮಕ್ಕಳೊಂದಿಗೆ ಮಣಿಪಾಲಕ್ಕೆ ಬಂದವಳು. ಶಿವಮೊಗ್ಗ ಬಿಟ್ಟಿದು ಅವಳ ಪಾಲಿಗೆ ತುಂಬ ವೇದನೆಯ ಸಂಗತಿಯಾಗಿತ್ತು. ಅದು

ಯಾವ ತಿರುವಿನಲ್ಲೋ ವಸಂತಿ ಇನ್ನಷ್ಟು ಗಟ್ಟಿಯಾದಳು. ಆ ತೀವ್ರ ಮಾನಸಿಕ ತುಮುಲದಲ್ಲಿಯೇ ಅವಳ ಸುಂದರ ಕತೆಗಳನೇಕ ಅರಳಿಕೊಂಡವು. ಅವುಗಳ ಸುವಾಸನೆ ಕನ್ನಡ ಸವಿಯಬಲ್ಲವರಿದ್ದ ಎಲ್ಲ ಕಡೆ ಹರಡಿದಾಗಲೇ ನನಗೂ ತಿಳಿದದ್ದು. ನಾನಾಗ ಕರ್ನಾಟಕದಿಂದ ಬಲು ದೂರದಲ್ಲಿದ್ದೆ. ದೇಶ, ವಿದೇಶಗಳನ್ನು ಸುತ್ತುತ್ತಲಿದ್ದು ವಸಂತಿಯ ಜತೆ ಸಂಪರ್ಕವೂ ಕಡಿಮೆಯಾಗಿತ್ತು. ಒಮ್ಮೆಗೇ ವೈದೇಹಿಯ ಕತೆಗಳನ್ನೋದುತ್ತಲೇ ಸಂತೋಷ, ಅಚ್ಚರಿ, ಸಂಭ್ರಮ ಮನಸ್ಸನ್ನು ತೊಂಬಿಕೊಂಡವು.

ನಮ್ಮ ನಡುವೆ ಆಗ ಇದ್ದ ದೂರಕ್ಕೆ ಇನ್ನೊಂದು ಕಾರಣವೂ ಇದೆ. ಅದು ವೈದೇಹಿಯ ಸ್ವಭಾವ. ಅವಳು ತಾನಾಗಿಯೇ ಕರೆ ಮಾಡಿ, 'ನನಗೆ 'ಅತ್ತಿಮಬ್ಬೆ ಪುರಸ್ಕಾರ' ಬಂತು ಕಣೇ' ಎಂದವಳಲ್ಲ. 'ನನ್ನ ಕಥಾ ಸಂಕಲನವೊಂದನ್ನು ಅಕ್ಷರ ಪ್ರಕಾಶನದವರು ಹೊರತರಲಿದ್ದಾರೆ' ಎಂಬ ಸುಳಿವನ್ನು ಕೊಡಳು. 'ನನ್ನ ಕತೆಯೊಂದನ್ನು ನಾಟಕವಾಗಿಸಿ 'ರಂಗಶಂಕರ'ದಲ್ಲಿ ಪ್ರದರ್ಶಿಸುತ್ತಿದ್ದಾರೆ' ಎನ್ನಳು. ಆಳ್ವಾಸ್ ನುಡಿಸಿರಿಯ ಸರ್ವಾಧ್ಯಕ್ಷತೆಯ ಗೌರವ ದೊರೆತಾಗಲೂ ಉಸಿರೆತ್ತಳು. ಹೊಗಳಿಕೊಳ್ಳುವುದಿರಲಿ, ಇದ್ದ ವಿಷಯ ಹಂಚಿಕೊಳ್ಳಲೂ ನಾಚಿಕೆ ಅವಳಿಗೆ. ಹೀಗಾಗಿ ದೂರದೂರುಗಳಲ್ಲಿದ್ದು ವರ್ಷಾನುಗಟ್ಟಲೆ ಕನ್ನಡ ಪತ್ರಿಕೆ, ವಾರಪತ್ರಿಕೆಗಳ ಮುಖವನ್ನೇ ನೋಡಲಾಗದಿದ್ದ ನನಗೆ ವಸಂತಿಯ ವಿಕಾಸ ತಿಳಿದದ್ದೇ ನಾಚಿಕೆಗೇಡೆನಿಸುವಷ್ಟು ತಡವಾಗಿ. ಈ ಕುರಿತು ಅವಳೊಂದಿಗೆ ಜಗಳವಾಡದೇ ಬಿಟ್ಟಿಲ್ಲ ನಾನು. ಆದರಿದು ಗುಣಪಡಿಸಲಾಗದ ರೋಗ ಎಂದರಿತು ಇದೀಗ ಕೈ ಚೆಲ್ಲಿದ್ದೇನೆ.

ವಸಂತಿಗೆ ಅಡಿಗೆಯೆಂದರೆ ಭಾರೀ ಇಷ್ಟ. ಬಲು ರುಚಿಯಾದ ಖಾದ್ಯಗಳನ್ನು ಮಾಡಬಲ್ಲಾಕೆ. ನಾನು ಬಂದೆನೆಂದರೆ ಪರವೂರಿನಲ್ಲಿದ್ದು ಬಂದವಳೆಂದು ನನಗೆ ಪ್ರಿಯವಾದ ಊರಿನ ತಿಂಡಿ, ಅಡಿಗೆಗಳನ್ನೆಲ್ಲ ಮಾಡಿಡುವಳು. ಆದರೆ ಮಹಾ ಮರೆಗುಳಿ. ಒಮ್ಮೆ ನನ್ನ ಊಟವಾಗಿ ಭುಕ್ತಾಯಾಸದಿಂದ ಒರಗಿರುವಾಗ, 'ಅಯ್ಯೋ ಆಂಬೊಡೆ ಮಾಡಿಟ್ಟಿದ್ದೆ. ಮರೆತೇ ಹೋಯಿತು. ಈಗ ತಿನ್ನು' ಎನ್ನುವುದೇ! ತೀರ ಇತ್ತೀಚೆಗೆ ಅವಳು ಹೈದರಾಬಾದಿನ ನನ್ನ ಮನೆಗೆ ಬಂದಿದ್ದಳು. ಆಗಲೂ ತೆಲುಗಿನ 'ಪುಲಿಹೋರ' ಮೂರ್ತಿಯವರಿಗೆ ಹಿಡಿಸಿತೆಂದು ರೆಸಿಪಿ ಬರೆದುಕೊಂಡೇ ಹೋದಳು.

ವಸಂತಿಯ ಜತೆ ಇರುವಾಗ ಇವಳೊಬ್ಬ ಪ್ರಸಿದ್ಧ ಕತೆಗಾರ್ತಿ ಎಂದು ನನಗೆ ನೆನಪಾಗುವುದೇ ಇಲ್ಲ. ಏನೆಲ್ಲ ತಮಾಷೆ ಮಾಡುತ್ತ ನಗುತ್ತಿರುತ್ತೇವೆ. ಅವಳಿಗೆ ಬೇಡದ ವಿಷಯವೇ ಇಲ್ಲ. ನಾನು ಸೀರೆಗೆ ಹೊಂದುವ ಬಣ್ಣ ಬಣ್ಣದ ಬಳೆಗಳನ್ನು ತೊಟ್ಟರೆ 'ಏನು ಬೇಜಾರಿಲ್ಲವೇ ನಿನಗೆ, ಮಹಾತಾಯಿ!' ಎಂದು ಕೆಣಕುತ್ತ ಖುಷಿಪಡುವಳು. 'ನೀನೂ ಮ್ಯಾಚಿಂಗ್ ಬಳೆ ಹಾಕಿಕೊಳ್ಳೆ' ಎಂದರೆ ಅದು ನನ್ನ ಜಾಯಮಾನವೇ ಅಲ್ಲ ಬಿಡು !" ಎನ್ನುವಳು.

ಮಣಿಪಾಲದಲ್ಲಿ ಮಳೆಯಾದರೆ ಸಾಕು, ನಾವು ಚಿಕ್ಕಂದಿನಲ್ಲಿ ನೆನೆಯುತ್ತ ಆಡಿದ ಆಟಗಳೆಲ್ಲ ಅವಳಿಗೆ ನೆನಪಾಗುತ್ತವೆ. 'ಮಳೆ ಬರ್ತಿದೆ, ಬಾರೇ ಇಲ್ಲಿಗೆ.' ಎನ್ನುತ್ತಾಳೆ. ಶ್ರೀನಿವಾಸಮೂರ್ತಿಗಳೂ ಅಷ್ಟೇ ತುಂಬ ಪ್ರೀತಿಯಿಂದ 'ಯಾವಾಗ ಇತ್ತ ಕಡೆ?' ಎನ್ನುತ್ತಾರೆ. ಅವಳು ಮಣಿಪಾಲದಲ್ಲಿ, ನಾನು ಹೈದರಾಬಾದಿನಲ್ಲಿ. ಆದರೇನು, ನಾಲ್ಕು ಹನಿ ಮಳೆ ಸಾಕು, ಗಟ್ಟಿ ಸೇತುವೆ ನಿರ್ಮಾಣ ನಮ್ಮನ್ನು ಒಂದಾಗಿಸಲು!

ನಮಗಿಬ್ಬರಿಗೂ ಈಗ ಎಪ್ಪತ್ತು ದಾಟಿದೆ. ಆರು ದಶಕಗಳ ಹಿಂದಿನ ಬಾಲ್ಯದ ನೆನಪುಗಳೆಲ್ಲ ಕೆಲಮಟ್ಟಿಗೆ ಮಸುಕಾಗಿವೆ. ಆದರೂ ನೂರಾರು ನೆನಪುಗಳ ಹಂದರ ಇನ್ನೂ ಇದೆ!..



# A Blessed Friendship

✦ **Shantha Rao (ಅಕ್ಕನ ಮಗಳು)**

It was one of my annual visits to India. A hot summer day- 'Chikki' and I were walking down to a temple nearby. There she was, a withered old bangle seller who was sitting on the ground with her boxes and bundles of colourful glass bangles. Chikki ran to her as if she had met a long lost relative. She selected some old fashioned bangles with gold work and squatted in front of her, chatting her up.The old lady took Chikki's out stretched hands, took the old ones out and with loving care put the shimmering new bangles on them. Chikki's mirth at the bangles running up and down her skinny hands was childlike. I didn't buy any. "In these times, when all shopping is done in big malls and "fancy" stores, an old lady trying to make a living out of selling bangles by the wayside is no mean feat! you must encourage these gritty souls by buying from them," she gently chided me.

On the way back, she was fondly recalling those days of door to door selling when bangle sellers used to visit her mother's place in the month of "Shraavana" and sit for hours in the verandah making conversation with the women folk. Chikki would slowly turn inwards talking of those days of festivities and celebrations.

This genuine respect and faith in the potential of every human being is the thread that runs through all Chikki's writing. Actually

this aunt of mine is more a friend than an aunt. Our friendship blossomed in Shivamogga. An energetic teenager, I used to visit her regularly and discuss passionately about life, my dreams and hopes. She was an excellent listener and I could share everything without inhibition. I trusted her writer's sharp sensibilities to understand me fully. Her perception and belief in my strengths made me feel confident while her honest and humorous reminders of my weaknesses grounded me. This is a rare quality which attracts everyone to her.

I left for the UK soon after my marriage. She was already on her journey as a mature and prolific writer. Soon after I arrived in the UK, full of ideas and enthusiasm to start my new life in a foreign land, I received a letter from her.

*"Find something that is unique... Do something unusual which nobody else has done and celebrate your life, discover the freedom...Fly like a bird..."*

This letter, one of the many that she wrote, had great value for me. I treasure it even today. It is full of heartfelt good wishes and optimism and has always motivated me to challenge myself to find this "unusual" thing and not rest until I have done so.

I have continued to share my experiences in Britiain with her ever since. When I visit India, I eagerly look forward to meeting her and Moorthy Chikkappyya in their lovely home "Iruvantige". She always makes time for me, no matter how busy she is and I am showered with so much warmth by the whole family. These visits are full of joy and excitement with rich memories to carry back with me. Once when I was visiting, somebody called on her with their daughter's wedding invitation. Infact, they had come to seek help. Apparently, they didn't have a clue about Chikki's financial condition. She heard them out and disappeared inside the house. After quite a while, she came out with some cash in her hands. She gave

it to the bride's parents, wishing them well. Why did it take her so long, I wondered? It occurred to me later she must have been searching for whatever savings she had kept here and there in the house. She would always say, "You can't wait for your problems to be over in order to be able to help others. Whatever you can, do it right away without thinking about yourself." Except that Chikki does not just preach she practises. To Chikki money is a means to an end and never an end in itself. She is generous to a fault and with a mind that is never attached to material things, may be this is in her genes. Because my mother, her sister, is exactly the same!

My husband is a psychiatrist. He too loves reading her and remarks that she has an exceptional ability to understand the human psyche.The mystery behind the force of her imagination and the universal appeal of her work are truly magical tome. Ours is a truly blessed friendship. I am really proud that I am a witness to the rich and extraordinary journey of my aunt.

My dearest Chikki,
May you rise to greater heights,
May new horizons beckon you,
May you always be healthy and happy.



# ಜಾನಕಿಯಿಂದ ವೈದೇಹಿ–ಎರಡಿಂಚಿನ ದಂತದ ಕತೆ

✦ ಸುಮತಿ ನಿರಂಜನ್ ಕೆರೋಡಿ (ಅಕ್ಕನ ಮಗಳು)

'. . . the little bit (two inches wide) of ivory on which I work with so fine a brush, as produces little effect after much labour'

– ***Jane Austen.***

ಆ ವಿಶಾಲವಾದ ಮನೆಯ ಜಾವಡಿಯಲ್ಲಿ ಗೋಡೆಗಳೇ ಇದ್ದಂತಿರಲಿಲ್ಲ. ಸುತ್ತಾ ಕಾಣಿಸುತ್ತಿದ್ದುದು ಬರೀ ಮರದ ಕಪಾಟುಗಳು. ಅವುಗಳ ಗಾಜಿನ ಬಾಗಿಲೊಳಗಿಂದ ಕಾಣುವ ಗಟ್ಟಿ ಕವರಿನ ಮೇಲೆ ಚಿನ್ನದ ಬಣ್ಣದ ಅಕ್ಷರಗಳಿರುವ ದಪ್ಪ ದಪ್ಪ ಪುಸ್ತಕಗಳು. ಕನ್ನಡ, ಹಿಂದಿ, ಸಂಸ್ಕೃತ, ಇಂಗ್ಲಿಷ್ ಭಾಷೆಗಳ ಶ್ರೇಷ್ಠ ಸಾಹಿತ್ಯ ಕೃತಿಗಳು, ಅಧ್ಯಾತ್ಮ ಚಿಂತನೆಗಳು, ಕಾನೂನು ಪುಸ್ತಕಗಳು, ಪುರಾಣ ಪುಸ್ತಕಗಳು... ಅವುಗಳೊಳಗೆ ಬಣ್ಣಬಣ್ಣದ ಚಂದ ಚಂದದ ಚಿತ್ರಗಳು. ಮನೆತುಂಬಾ ಮಕ್ಕಳು, ಮೊಮ್ಮಕ್ಕಳು. ಯಾರು ಬೇಕಾದರೂ ಎಷ್ಟೊತ್ತಿಗೆ ಬೇಕಾದರೂ ತೆರೆದೋದುವ ಸ್ವಾತಂತ್ರ್ಯ. ನಾವು ಮಕ್ಕಳು ನೋಡುತ್ತಿದ್ದುದು ಬರೀ ಚಿತ್ರಗಳನ್ನೆ, ಆಗಿದ್ದರೂ ಮನೆಯ ಯಜಮಾನನ ಧೀಮಂತ ವ್ಯಕ್ತಿತ್ವಕ್ಕೂ ಆ ಪುಸ್ತಕ ಭಂಡಾರಕ್ಕೂ ಏನೋ ನಂಟಿದೆ ಅಂತ ನಮಗೆ ಅಸ್ಪಷ್ಟವಾಗಿ ಭಾಸವಾಗುತ್ತಿತ್ತು.

ಮನೆಯ ಯಜಮಾನ, ಕುಂದಾಪುರದ ಹೆಸರಾಂತ ವಕೀಲರು, ಶ್ರೀ ಎ.ವಿ.ಎಸ್ ಪೆಜ್ತಾರ್. ಅವರ ಸತ್ಯಸಂಧತೆ, ನ್ಯಾಯನಿಷ್ಠತೆ, ಔದಾರ್ಯಗಳಿಂದ 'ಯುಧಿಷ್ಠಿರ' ಅಂತಲೇ ಊರವರು ಕರೆಯುತ್ತಿದ್ದ ಧರ್ಮಜೀರು. ಯಕ್ಷಗಾನ, ಅಧ್ಯಾತ್ಮ, ಸಂಗೀತ ಸಾಹಿತ್ಯಗಳಲ್ಲಿ ಆಳವಾದ ಆಸಕ್ತಿ ಇದ್ದ ಅಜ್ಜಯ್ಯ ಪಿಟೀಲು ನುಡಿಸುತ್ತಿದ್ದರು. ಉಮೇದು ಬಂದರೆ ಭಾಗವತಿಕೆಯನ್ನೂ ಮಾಡುತ್ತಿದ್ದರಂತೆ. ಹಲವು ಭಾಷೆಗಳ ಮೇಲೆ ಪ್ರಭುತ್ವ ಹೊಂದಿದ್ದ ಅವರು ಪ್ರಸಿದ್ಧ ವಾಗ್ಮಿ. ತಾನು ಮೆಚ್ಚಿ ಹಾಡುತ್ತಿದ್ದ ಸಂತ ತುಕಾರಾಮನ ಅಭಂಗಗಳ ಭಾವಾರ್ಥವನ್ನು ನೇರ ತಿಳಿಯುವ ಆಸೆಯಿಂದ ತನ್ನ ಅರ್ವತ್ತನೇ ವಯಸ್ಸಿನಲ್ಲಿ ಮರಾಠಿ ಕಲಿಯಲು ಹೊರಟ ಜೀವನೋತ್ಸಾಹಿ. ಆಗೆಲ್ಲ ಕನ್ನಡ ಚಳವಳಿ, ಕನ್ನಡೇತರ ಚಲನಚಿತ್ರಗಳನ್ನು ಬಹಿಷ್ಕರಿಸಬೇಕೆಂಬ ನಿಲುವು ತಾಳಿದ್ದ ತಮ್ಮ ಕೆಲ ಮಕ್ಕಳಿಗೆ 'ಅತಿ

ಅಭಿಮಾನ ಸಲ್ಲದು. ಬೇರೆ ಭಾಷೆಗಳಿಂದಲೂ ನಾವು ಕಲಿಯುವುದು ಬೇಕಾದಷ್ಟಿದೆ' ಎಂದು ತಿಳಿ ಹೇಳಿದ ಮುಕ್ತ ಮನಸಿಗರು.

ಈ ಜನಕರಾಜನ ಪ್ರೀತಿಯ ಏಳನೇ ಮಗಳು ಜಾನಕಿ ಯಾನೆ ವೈದೇಹಿ. ನನ್ನಮ್ಮನ ತಂಗಿ. ನನ್ನ ಹಿರಿಯಕ್ಕ ಸುಶೀಲನ ಓರಗೆಯವಳಾದ ಇವಳನ್ನು 'ಚಿಕ್ಕಿ' ಎಂದದ್ದೇ ನೆನಪಿಲ್ಲ ನನಗೆ. ರಜೆಯಲ್ಲಿ ಅಜ್ಜಯ್ಯನ ಮನೆಗೆ ಹೋದಾಗ ಮನೆಮಕ್ಕಳು ಉಪ್ಪರಿಗೆಯಲ್ಲಿ ಸೀರೆ ಪರದೆ ಕಟ್ಟಿ ರಟ್ಟಿನ ಕಿರೀಟಕ್ಕೆ ಜರಿ ಮೆತ್ತಿ ಆಡುತಿದ್ದ ನಾಟಕಗಳ ಮುಖ್ಯ ಪಾತ್ರಗಳೆಲ್ಲ ಅಕ್ಕ, ವೈದೇಹಿ, ಶಂಕರ ಮಾವಯ್ಯ ಇವರಿಗೇ. ನಾವು ಪುಟಾಣಿಗಳೆಲ್ಲ extras–ಈಟಿ ಹಿಡಿದು ನಿಲ್ಲುವ ಸೈನಿಕ, ಅಂಚೆ ತರುವ ಪೋಸ್ಟ್‌ಮ್ಯಾನ್ ಇತ್ಯಾದಿ. ಮನೆಮಂದಿಯೆಲ್ಲ ಆಹ್ವಾನಿತರು. ನಾಟಕ ಮುಗಿದ ಮೇಲೆ ಅಧ್ಯಕ್ಷ ಭಾಷಣ. ಆಗೆಲ್ಲ ಕುಂದಾಪುರದ ಬೋರ್ಡ್ ಹೈಸ್ಕೂಲ್ ವಾರ್ಷಿಕೋತ್ಸವದಲ್ಲಿ ಅಜ್ಜಯ್ಯನೇ ಎಷ್ಟೋ ಸಲ ಮುಖ್ಯ ಅತಿಥಿ. ವೈದೇಹಿ ದುರ್ಯೋಧನ, ಅಕ್ಕ ಸುಶೀಲಾ ಕರ್ಣನಾಗಿ ಅಭಿನಯಿಸಿದ 'ದಾನಶೂರ ಕರ್ಣ' ನಾಟಕವನ್ನು ನೋಡಿ ಜನ ಅತ್ತಿದ್ದೂ ಅಂದರೆ ಸ್ವಲ್ಪವಲ್ಲವಂತೆ. ಆ ಸಂದರ್ಭದಲ್ಲಿ ಮಾಡಿದ ಭಾಷಣದಷ್ಟೇ 'ಶ್ರೀಮದ್ಗಾಂಭೀರ್ಯ' ದಿಂದ ಮನೆ ಮಕ್ಕಳ ನಾಟಕದ ಕಾರ್ಯಕ್ರಮದಲ್ಲಿಯೂ ಅಧ್ಯಕ್ಷ ಸ್ಥಾನ ನಿರ್ವಹಿಸಿ, ನಾಲ್ಕು ಆಣೆ ಬಹುಮಾನ ವಿತರಣೆ ಮಾಡಿದ ಅಪೂರ್ವ ನಟ ನಮ್ಮ ಅಜ್ಜಯ್ಯ.

ನಮ್ಮ ತಂದೆಗೆ ವರ್ಗವಾಗಿ ಕುಂದಾಪುರದಿಂದ ಬೇರು ಕಿತ್ತು ಕರ್ನಾಟಕದ ಬೇರೆ ಬೇರೆ ಊರಲ್ಲಿದ್ದು ಕೊನೆಗೆ ನಾವು ನೆಲೆಸಿದ್ದು ಶಿವಮೊಗ್ಗೆಯಲ್ಲಿ. ಅದೇನು ಋಣಾನುಬಂಧವೋ ವೈದೇಹಿ ಕಾರ್ಗಡಿ ಶ್ರೀನಿವಾಸ ಮೂರ್ತಿಯವರನ್ನು ಮದುವೆಯಾಗಿ ಒಂದು ವರ್ಷ ಮೊದಲೇ ಅಲ್ಲಿಗೆ ಬಂದು ನೆಲೆಸಿದ್ದಳು. ನಮಗವಳ ನಿಜವಾದ ಪರಿಚಯವಾದದ್ದು ಅಲ್ಲಿಂದಲೇ ಎನ್ನಬೇಕು.

ಘಟ್ಟದ ಕೆಳಗಿನವರ ತೀಕ್ಷ್ಣತೆ, ಚುರುಕು, ಗಡಿಬಿಡಿಯ ನಮಗೆ ಮಲೆನಾಡಿನ ಸೌಜನ್ಯ, ನವಿರಾದ ವ್ಯವಹಾರ, ನೆಮ್ಮದಿಯ ಜೀವನಶೈಲಿ ಎಲ್ಲವೂ ಹೊಸತು ಹೊಸತು. ಶಿವಮೊಗ್ಗೆಯ ಡಾ। ಶ್ಯಾಮ್‌ಪ್ರಸಾದ್ ಮುಖರ್ಜಿ ರಸ್ತೆಯಲ್ಲಿತ್ತು ಕಾರ್ಗಡಿಯವರ ಮನೆ. ಆ ರಸ್ತೆಗೆ ಹೋಗುವುದೆಂದರೆ ಮಲೆನಾಡು ಸಂಸ್ಕೃತಿಯ ಹೃದಯವನ್ನೇ ಹೊಕ್ಕಂತೆ. ಆ ಬೀದಿಯುದ್ದಕ್ಕೂ ಅಡಿಕೆ ವ್ಯಾಪಾರಿಗಳು, ಜಮೀನ್ದಾರರು, ಲಾಯರುಗಳು, ಸಂಗೀತ ಸಾಹಿತ್ಯ ಉಪಾಸಕರು.

ಸಹೃದಯಿ ಮೂರ್ತಿ ಚಿಕ್ಕಪ್ಪಯ್ಯ ಅಲ್ಲಿಯ ವಿದ್ಯಾಗಣಪತಿ ಸೇವಾಸಂಘದ ಸಂಘಟಕರಲ್ಲೊಬ್ಬರು. ಗಣಪತಿ ಹಬ್ಬದ ಸಮಯ ವಾರವಿಡೀ ಸಂಘ ಆಯೋಜಿಸುತಿದ್ದ ಸಂಗೀತ ಕಛೇರಿಗಳಲ್ಲಿ ದೇಶದ ಎಲ್ಲೆಡೆಯಿಂದ ಬರುವ ಮಹಾನ್ ಸಂಗೀತ ವಿದ್ವಾಂಸರನ್ನು

ಪ್ರತ್ಯಕ್ಷ ನೋಡುವ ಕೇಳುವ ಭಾಗ್ಯ ನಮ್ಮದಾಗಿತ್ತು. ಬಂದ ಕಲಾವಿದರನ್ನು ವೈಯಕ್ತಿಕವಾಗಿ ಸತ್ಕರಿಸುತಿದ್ದ ಕಾರ್ಗಡಿಯವರ ಮನೆಯಲ್ಲೂ ನೋಡುವ ಸದವಕಾಶ ಕೂಡ ನಮಗೆ ಲಭಿಸಿತ್ತು. ಲೇಖಕರು, ಕಲಾವಿದರು ಹಾಗೂ ಉಪಾಧ್ಯಾಯರುಗಳಿಗೆ ಸದಾ ತೆರೆದೇ ಇರುತಿದ್ದ ಮನೆ ಅವರದು. ನಮಗೆ ನೀನಾಸಂ ನಾಟಕಗಳ ಪರಿಚಯವಾಗಿದ್ದೇ ಚಿಕ್ಕಪ್ಪಯ್ಯ ಮತ್ತು ಚಿಕ್ಕಿ ನಮ್ಮನ್ನು ಅವರ ಕಾರಿನಲ್ಲಿ ಹೆಗ್ಗೋಡಿಗೆ ಕರೆದೊಯ್ಯುತಿದ್ದಾಗ. ಗಾಜನೂರು, ಮಂಡಗದ್ದೆ, ಜೋಗ ಜಲಪಾತ ಹೀಗೆ ಅದೆಷ್ಟು ಜಾಗಗಳಿಗೆ ನಾವೆಲ್ಲ ಸೇರಿ ಹೋಗುತಿದ್ದ, ಪ್ರೀತಿ ಮತ್ತು ಸ್ನೇಹವೇ ಮುಖ್ಯವಾಗಿದ್ದ ಕಾಲವದು. ಆಗೆಲ್ಲ ಫೋಟೋ ಬೇಕಿದ್ದರೆ ಸ್ಟುಡಿಯೋಗೆ ಹೋಗಿ ತೆಗೆಸಬೇಕಿತ್ತಷ್ಟೆ? ಸ್ವಂತ ಕೆಮೆರಾವೆಂದರೆ ಅದು ಸಿರಿವಂತರಲ್ಲಿ ಮಾತ್ರ ಇರುತಿತ್ತು. ನುರಿತ ಛಾಯಾಚಿತ್ರಗ್ರಾಹಕರಾಗಿದ್ದ ಚಿಕ್ಕಪ್ಪಯ್ಯನ ಬಳಿ ಆಗೊಂದು ಬಹಳ ಒಳ್ಳೆಯ ಕೆಮೆರಾ ಇತ್ತು. ಅವರು ತೆಗೆಯುತಿದ್ದ ಕಪ್ಪು ಬಿಳುಪು ಫೋಟೋಗಳಲ್ಲಿ ನಮ್ಮವು ಕೆಲವು ಈಗಲೂ ನನ್ನ ಆಲ್ಬಂನಲ್ಲಿ ನೆನಪಿನ ಅಪೂರ್ವ ಬುತ್ತಿಗಳಾಗಿ ಉಳಿದಿವೆ.

ಚಿಕ್ಕಮ್ಮನೆಂದರೆ ಅರ್ಧ ತಾಯಿಯೇ ಎಂಬ ಮಾತಿದೆ. ಅದಕ್ಕೂ ಮಿಗಿಲು ನಮ್ಮ ಈ ವೈದೇಹಿ ಚಿಕ್ಕಿ. ನಮ್ಮ ಅಕ್ಕತಂಗಿಯರ ಒಡಲನ್ನು ಅರ್ಥ ಮಾಡಿಕೊಳ್ಳುವ, ಹದಿಹರೆಯದ ಎಲ್ಲ ಗಲಿಬಿಲಿ ಗೊಂದಲಗಳನ್ನೂ ಕಿವಿಗೊಟ್ಟು ಕೇಳುವ ಹೃದಯದ ಸ್ನೇಹಿತೆ, ಒಡನಾಡಿ, agony aunt ಎಲ್ಲವೂ ಅವಳು. ಆಗ ವೀಣೆ ಕಲಿಯುತಿದ್ದ ಅವಳ ಕಂಠವೂ ತುಂಬಾ ಇಂಪು. ಹಾಡು ಹಾಡೆಂದು ನಾವು ಪೀಡಿಸಿದಾಗೆಲ್ಲ ಅವಳು ಹಾಡುತಿದ್ದ ಹಲವು ಹಾಡುಗಳಲ್ಲಿ ಒಂದು 'ಯಾವ ಜನ್ಮದ ಮೈತ್ರಿ'. ಅದರ ಕೊನೇಯಲ್ಲಿ 'ನಮ್ಮಿಬ್ಬರನು' ಎನ್ನುವ ಬದಲು 'ನಮ್ಮೆಲ್ಲರನು ಮತ್ತೆ ಬಂಧಿಸಿದೆಯೊ' ಎಂದಾಗಿ ಬಿಡುತಿತ್ತು. ಸಂಜೆ ಅವರ ಮನೆ ಬಿಸಿಲುಮಚ್ಚಿನಲ್ಲಿ ಸೂರ್ಯ ಮುಳುಗುವುದನ್ನೇ ನೋಡುತ್ತ ನೋಡನೋಡುತ್ತ– 'ಮರಗಿಡಬಳ್ಳಿ' ಯ ವೈದೇಹಿ ಆಕಾಶದೆತ್ತರಕೆ ಕೈ ಚಾಚಿ 'ಗೋಲ'ವನ್ನು ಮುಟ್ಟಿದ್ದಕ್ಕೆ ನಾನು ಮತ್ತು ನನ್ನ ಇನ್ನೊಬ್ಬ ಅಕ್ಕ ಶಾಂತಿಯೇ 'ಸಾಕ್ಷಿ'.

ಕೆಲ ಕಾಲಾನಂತರ–

ಯಾರೋ ಕಲ್ಲೆಸೆದಾಗ ಹಾರಿ ಹೋಗುವ ಹಕ್ಕಿಗಳಂತೆ ನಾವೆಲ್ಲ ಚದುರಿ ಹೋದೆವು. ಮದುವೆಯಾಗಿ ನಾವು ಅಕ್ಕತಂಗಿಯರು ಬೇರೆಬೇರೆ ಊರು ದೇಶಗಳಿಗೆ ಹೋಗಿ ನೆಲೆಸಿದರೆ, ಕಾರಣಾಂತರದಿಂದ ವೈದೇಹಿಯೂ ತನ್ನ ಕುಟುಂಬದೊಂದಿಗೆ 'ಮರಳಿಮಣ್ಣಿಗೆ' – ಅಂದರೆ ಕರಾವಳಿಗೆ –ಬಂದು ನೆಲೆಸಬೇಕಾಯಿತು. ನನ್ನ ತಾಯಿ ತೀರಿಹೋದ ಮೇಲೆ ಮಣಿಪಾಲದ ಅವರ ಮನೆ ನಮ್ಮೆಲ್ಲ ಸೋದರಿಯರಿಗೆ ತವರಿನ ತಂಪನ್ನೆರೆಯುವ 'ಇರುವಂತಿಗೆ' ಆಯಿತು. ಯಾವುದಾದರೂ ಮದುವೆ ಮುಂಜಿಯಲ್ಲಿ ಸಿಕ್ಕಿದಾಗ ನಮಗೆ ಕಾಲ ಗತಿಸಿಯೇ ಇಲ್ಲವೆನ್ನುವಂತೆ ಎಣೆಯಿಲ್ಲದ ಆಪ್ಯಾಯತೆ, ಮುಗಿಯದ ಮಾತು, ಅದೆಷ್ಟೋ ಜನ್ಮದ ಮೈತ್ರಿ.

ಅಂತರ್ಜಾಲ, ಮೊಬೈಲುಗಳ ಸದ್ದು ಗದ್ದಲವಿಲ್ಲದ, ಕೇವಲ ಪತ್ರಲೇಖನದ ಕಾಲವದು. ಎಂತಹ ಅವಸರದಲ್ಲಿ ಗೀಚಿದ್ದರೂ ಕಾವ್ಯ ಗುಣವನ್ನು ಹೊಂದಿರುತಿದ್ದ ಅವಳ ಪತ್ರಗಳು ಜೋಪಾನವಾಗಿ ಎದೆಗವಚಿಕೊಂಡು ಮತ್ತೆ ಮತ್ತೆ ಓದಬೇಕೆನಿಸುವ ಸಾಲುಗಳು, ನಮ್ಮನ್ನು ನಮಗೇ ಪರಿಚಯಿಸುವ ಸೂಕ್ಷ್ಮ ಸಂವೇದನೆಯ ಒಳನೋಟಗಳು, ನಮ್ಮೊಳಗೆ ಹೊಸ ಚೈತನ್ಯ ತುಂಬುವ ಭರವಸೆಯ ನುಡಿಗಳು. . .

ಕನ್ನಡದ ಮಹತ್ವದ ಲೇಖಕಿ, ನಮ್ಮ ವೈದೇಹಿ ಚಿಕ್ಕಿ, ಒಬ್ಬ ಅಪ್ಪಟ ಗೃಹಿಣಿ. ಆಕೆ ತುರ್ತು ಪರಿಸ್ಥಿತಿಯ ವೇಳೆ ಬರೆದ 'ದೇಹವೆಲ್ಲ ಹೊಟ್ಟೆಯೊಂದೇ ಆಗಿ ಮೇಲೋಗರದಲ್ಲಿ ಮಿಣ್ಣಗೆ ಮಾಯವಾಗುವ' ಸಾಸಿವೆ ಕುರಿತ ಕವಿತೆ 'ಅಮ್ಮನ ಗೊಣಗಾಟ' ನನ್ನ ಮೆಚ್ಚಿನ ಕವಿತೆಗಳಲ್ಲೊಂದು. ತಿಳಿಸಾರು, ಮಾಡುವ 'ಹದ'ದಲ್ಲೇ ಕಾವ್ಯದ ಪಾಕವನ್ನೂ, ವ್ಯಾನಿಟಿ ಬ್ಯಾಗಿನ ಒಳಗಿಣಿಕಿ ಜೀವನದರ್ಶನವನ್ನೂ ಕಂಡುಕೊಂಡ ಬಗೆ ನನಗಂತೂ ಜೇನ್ ಆಸ್ಟಿನ್‌ಳ ಎರಡಿಂಚು ದಂತದಲ್ಲಿ ಕೆತ್ತಿದ ಚಿತ್ತಾರದ ನೆನಪು ತರುತ್ತದೆ. ಜೇನ್ ಆಸ್ಟಿನ್‌ಳಂತೆಯೇ ತನ್ನ ಸೀಮಿತ ಗೃಹಲೋಕದ ಬಗ್ಗೆ ಕಿಂಚಿತ್ತೂ ಕೀಳರಿಮೆಯಿಲ್ಲದೆ, ಅದರ ಸೂಕ್ಷ್ಮಗಳನ್ನೇ ಹೆಣೆದು ಅದರಾಚೆಯ ಲೋಕವೈಶಾಲ್ಯಕ್ಕೆ ಸಲ್ಲುವ ಶ್ರೇಷ್ಠ ಸಾಹಿತ್ಯವನ್ನು ರಚಿಸಿದವಳು ನಮ್ಮ ಚಿಕ್ಕಿ, ವೈದೇಹಿ. ಅವಳ ಕೃತಿಗಳ ಬಹುದೊಡ್ಡ ಅಭಿಮಾನಿ ನಾನು.

ನನ್ನ ಮಾವ ಕೆರೋಡಿ ಗುಂಡೂರಾಯರು ಬರೆದಿಟ್ಟಿದ್ದ ನಾಟಕಗಳ ಹಸ್ತಪ್ರತಿಯನ್ನು ಸಂಪಾದಿಸಿ ಪ್ರಕಟಿಸಬೇಕೆಂದು ನಾವೆಂದುಕೊಂಡಾಗ 'ಹಿರಿಯರ ಕೆಲಸ ಎಂದರೆ ನಮ್ಮೆಲ್ಲರ ಕೆಲಸ' ಎಂದದ್ದು ಮಾತ್ರವಲ್ಲ, ಅದಕ್ಕೆ ತಕ್ಕಂತೆ ತನ್ನ ಸಂಪೂರ್ಣ ಸಹಕಾರ, ಸಮಯ, ಮಾರ್ಗದರ್ಶನ ನೀಡಿ, ಅದನ್ನು ಆಗಗೊಳಿಸಿದವಳು ವೈದೇಹಿ. ಹೈದರಾಬಾದಿನಲ್ಲಿ 'ಕನ್ನಡ ನಾಟ್ಯರಂಗ' ಏರ್ಪಡಿಸಿದ 'ಕೆರೊಡಿ ಗುಂಡೂರಾವ್ ಸಮಗ್ರ ನಾಟಕ ಸಂಪುಟ– 'ದೀಪಾವಳಿ' ಮತ್ತು ಇತರ ನಾಟಕಗಳು' ಕೃತಿಯ ಲೋಕಾರ್ಪಣೆ ಸಮಾರಂಭಕ್ಕೂ ವೈದೇಹಿ ಪತಿಯೊಡಗೂಡಿ ನಮ್ಮಲ್ಲಿಗೆ ಬಂದಿದ್ದು, ಪುಸ್ತಕ ಬಿಡುಗಡೆ ಮಾಡಿ ಮಾತಾಡಿದ್ದು ಒಂದು ಸುಂದರ ನೆನಪು. ಆಕೆ ಅಂದು ಆಡಿದ ಮಾತುಗಳನ್ನು ಹೈದರಾಬಾದಿನ ಕನ್ನಡಿಗರು ಇಂದಿಗೂ ನೆನೆಯುತ್ತಾರೆ, ಉದ್ಧರಿಸುತ್ತಾರೆ.

ತಾನು ಪ್ರಸಿದ್ಧ ಲೇಖಕಿ ಎಂಬುದನ್ನು ಮರೆತಂತೆಯೇ ಇರುವ ವೈದೇಹಿ ನಮ್ಮೆಲ್ಲರೊಳಗೊಂದಾಗಿ ಇದ್ದು ಬಿಟ್ಟವಳು. ನಮ್ಮ ಮಾತುಮಾತಲ್ಲಿ ಬಂದ ಹೊಳವುಗಳಿಗೆ 'ನೀವೆಲ್ಲ ಬರೆಯದ ಕವಿಗಳು' ಎಂದು ಹುರಿದುಂಬಿಸುವ ಅವಳ ಪರಿ ಅನನ್ಯ. ಅವಳ ಹೊಸ್ತಿಲಿಗೆ ಬಂದ ಪ್ರಶಸ್ತಿ ಪುರಸ್ಕಾರಗಳ ಬಗ್ಗೆ ಪತ್ರಿಕೆಗಳಲ್ಲಿಯೋ ಯಾರ ಬಾಯಲ್ಲೋ ಕೇಳಿದ ನಾವು 'ನಮಗೆ ಯಾಕೆ ಹೇಳಲಿಲ್ಲ?' ಅಂತ ತರಾಟೆಗೆ ತೆಗೆದುಕೊಂಡರೆ, 'ಬಿಡಿ. ನಾನು ಬರೆದೆ, ನೀವು ಬರೆಯಲಿಲ್ಲ ಅಷ್ಟೆ' ಅಂತಂದು ಮಾತು ತಿರುಗಿಸುವಳು. ಬಾಳಿನ

ಎನಿತೋ ಅಗ್ನಿಪರೀಕ್ಷೆಗಳನ್ನು ಹಾಯ್ದು, ಪುಟಕ್ಕಿಟ್ಟ ಚಿನ್ನವಾಗಿ ಹೊರಬಂದ ವೈದೇಹಿಯ ಸಹನಾ ಶಕ್ತಿ ಮತ್ತು ಅಂತಃಸತ್ವದ ಬಗ್ಗೆ ನಮಗೆಲ್ಲ ಅತ್ಯಂತ ಗೌರವ. ಎದೆ ಬಿರಿಯುವಷ್ಟು ಹೆಮ್ಮೆ.

ಪ್ರೀತಿಯ 'ಚಿಕ್ಕೀ', ನಿನಗೆ ನನ್ನ ಕಣ್ತುಂಬಿ ಅಭಿನಂದನೆ.



## ಅಭಿನಂದನೆ ಚಿಕ್ಕೀ...

ವಸಂತೀ ವೈದೇಹೀ ಜಾನಕೀ
ಗಗನಚುಕ್ಕಿ ನೀ ಭರಪೂರ ಪ್ರೀತಿ ಚಿಕ್ಕಿ
ನಮ್ಮೊಳಗೇ ಇರುವ ಹೆಮ್ಮೆಯ ಲೇಖಕಿ
ಸಾಹಿತ್ಯ ವೈವಿಧ್ಯದಂಗಳದಿ ಆಡಿ
ಮೀಟಿದೆ ನೀ ಅಂತರಂಗದ ನಾಡಿ
ಪ್ರಶಸ್ತಿ ಬಿರುದುಗಳು ಬಂದರೂ ಅನೇಕ
ನೀನಾಗಲಿಲ್ಲ ಎಂದೂ ನಮ್ಮಿಂದ ಪ್ರತ್ಯೇಕ
ಹೊಳೆವ ಕಂಗಳ ಕಳೆ ಮೊಗದ ಸಿರಿ
ಅಭಿನಂದಿಸುವೆವು ನಾವೆಲ್ಲ ಸೇರಿ.

**– ಸುಕನ್ಯಾ ರಮೇಶ (ಅಕ್ಕನ ಮಗಳು)**

## ಮನೆ(ಮನ) ಬೆಳಗಿದವಳು

✦ ಶೋಭಾ ರವೀಂದ್ರ (ಓರಗಿತ್ತಿ)

ನಾನು ಶ್ರೀಮತಿ ವೈದೇಹಿಯವರ ಸೇರಿದ ಮನೆ ತಂಗಿ. ಇವರು ನನ್ನನ್ನು ಈ ಮನೆಗೆ ಸೊಸೆಯಂತೆ ಧಾರೆ ಎರೆಸಿಕೊಂಡವರು. (ಮಾವನಿಗೆ ಹುಷಾರಿಲ್ಲದ ಕಾರಣ) ಅಲ್ಲಿಂದ ಇಲ್ಲಿಯವರೆಗೂ ಅವರು ಕಿವಿ ಹಿಂಡುವ ಅಮ್ಮ. ಅನಿಸಿಕೆಗಳನ್ನು ಹಂಚಿಕೊಳ್ಳುವ ಅಕ್ಕ. ಆಪ್ತತೆಯ ಸ್ನೇಹಿತೆ. ಕೆಟ್ಟದ್ದನ್ನು ಕಟುವಾಗಿ ಟೀಕಿಸುವವರೆಂದರೂ ಹೌದು. ಗಂಡನ ಮನೆಗೆ ಕಾಲಿಟ್ಟ ಹೊಸತರಲ್ಲಿ ಹೃದಯಸ್ಪರ್ಶಿಯಾದವರು ಇವರೆ. ಬಹುಶಃ ನಾನು ಸಹ ಕೋಟದವಳಾದ ಕಾರಣ ಇರಬಹುದು. ಕುಂದಾಪುರ ಕನ್ನಡದ ಬಳಕೆಯೂ ಇದಕ್ಕೆ ಕಾರಣ ಇರಬಹುದು.

ಶಿವಮೊಗ್ಗದ ಎಸ್ ಪಿ ಎಂ ರಸ್ತೆಯಲ್ಲಿರುವ ತುಂಬು ಕುಟುಂಬಕ್ಕೆ ಸೊಸೆಯಾಗಿ ಬಂದವರು. 1981 ರಲ್ಲಿ ಆ ರಸ್ತೆಯಲ್ಲಿರುವ ಸೊಸೆಯಂದಿರನ್ನು ಒಟ್ಟುಗೂಡಿಸಿ ಒಂದು ಸಂಘ ಸ್ಥಾಪನೆ ಮಾಡಿದರು. ಅದೇ 'ಪ್ರಕೃತಿ ಮಹಿಳಾ ಸಂಘ'. ಸಂಜೆ ಒಂದು ಗಂಟೆ ಎಲ್ಲ ಗೆಳತಿಯರನ್ನು ಸೇರಿಸಿ 'ಶಟಲ್ ಕಾಕ್' ಆಡುವುದು, ಲಘು ಸಂಭಾಷಣೆ, ಸಂಗೀತ ಇತ್ಯಾದಿಗಳಲ್ಲಿ ತೊಡಗಿಸಿಕೊಂಡು ತಮ್ಮಲ್ಲಿ ಖುಷಿಪಡುತ್ತಿದ್ದರು. ಈ ಸಂಘ ಈಗಲೂ ಜೀವಂತವಾಗಿದೆ. 15 ಜನರಿದ್ದ ಸಂಘ ಈಗ 50ಕ್ಕೇರಿದೆ. ನಾನು ಸಹ ಅದರಲ್ಲಿ ಒಬ್ಬ ಸದಸ್ಯೆ.

ನಾನು ಅವರ ಸಾಹಿತ್ಯ, ಕಥೆ, ನಾಟಕ ಯಾವುದರ ಬಗ್ಗೆನೂ ಬರೆಯೋಲ್ಲ. ಏಕೆಂದರೆ ಅದೆಲ್ಲ ರಾಷ್ಟ್ರವ್ಯಾಪ್ತಿ ಜನಜನಿತವಾಗಿದೆ. ಅವರಿಗೆ ಬಂದಿರುವ ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿ ಬಗ್ಗೆ ಲೆಕ್ಕವೇ ಇಲ್ಲ. ನಾನು ಅವರ ತಂಗಿಯಾಗಿ ಸೇರಿರುವುದಕ್ಕೆ ಹೆಮ್ಮೆ ಎನಿಸುತ್ತದೆ.

ನನಗೆ ತುಂಬಾ ಮೆಚ್ಚುಗೆಯಾದ ಅವರ ನಡವಳಿಕೆ ಎಂದರೆ ಮಕ್ಕಳ ಬಗ್ಗೆ ಅವರಿಗಿದ್ದ ಒಲವು. ಆಗ ನಮ್ಮತ್ತೆ ಆಗಾಗ ಹೇಳ್ತಾ ಇದ್ದರು. 'ಮಕ್ಕಳನ್ನು ಸಾಕೋದು ವಸಂತಿನ್ನ ನೋಡಿ ಕಲೀಬೇಕು ಒಂದು ಪೆಟ್ ಕೊಟ್ಟವಳಲ್ಲ ಮಕ್ಕಳಿಗೆ' ಅಂತ. ಮಕ್ಕಳ

ಒಂದು ಸಣ್ಣ ಚಟುವಟಿಕೆಯನ್ನು ಗುರುತಿಸುತ್ತಾರೆ. ಅವರ ಮಕ್ಕಳ ನಾಟಕದ ಕೃತಿ ನೋಡಿದರೆ ಗೊತ್ತಾಗುತ್ತೆ.

ಅವರ ಆತಿಥ್ಯವಂತೂ ಕೇಳೋದೇ ಬೇಡ. ಉಂಡಷ್ಟೂ ಸಾಲದು. ಬಗೆ ಬಗೆ ಅಡಿಗೆ ಟೇಬಲ್ ಮೇಲೆ. ತಾವೇ ನಿಂತು ಬಡಿಸ್ತೇಕು. ಎಷ್ಟು ತಿಂದರೂ ನೀನೇನೂ ಊಟನೇ ಮಾಡ್ಲಿಲ್ಲ ಅನ್ನೋದು. ಅವರು ನಮ್ಮ ಮನೆಗೆ ಬಂದ್ರೆ ವೈದೇಹಿ ಅಂತ ದೊಡ್ಡ ವ್ಯಕ್ತಿ ಮನೆಗೆ ಬಂದ್ರು ಅಂತ ಅನಿಸೋದೆ ಇಲ್ಲ. ಏಕೆಂದ್ರೆ ಅವರು ಫ್ರೆಂಡ್. ಒಂದಷ್ಟು ಹರಟೆ ಹೊಡಿತೀವಿ. ಅದರಲ್ಲಿ ನಗುವೇ ಜಾಸ್ತಿ.

ಆದ್ರೆ ಮೊನ್ನೆ ಬಿಡುಗಡೆಯಾದ ಅವರ ಚಿತ್ರ 'ಅಮ್ಮಚ್ಚಿ ಎಂಬ ನೆನಪು' ತೆರೆ ಮೇಲೆ ನೋಡಿದ ಮೇಲೆ ನಿಜಕ್ಕೂ ಅವರು ಎಷ್ಟು ದೊಡ್ಡ ವ್ಯಕ್ತಿ ಅನಿಸಿದ್ದು ಸುಳ್ಳಲ್ಲ. ಅದರ ಸಾಹಿತ್ಯ, ಕಥೆ, ಹಾಡು ಯಾವುದನ್ನು ವಿವರಿಸೋಕೆ ಶಬ್ದಗಳೇ ಸಾಕಾಗ್ತಾ ಇಲ್ಲ. ತುಂಬಾ ತುಂಬಾ ಖುಷಿಯಾಯ್ತು.

ಕಡೆಯದಾಗಿ ಇವರ ಬಗ್ಗೆ ಹೇಳಿದರೆ ಮಾತ್ರ ಸಾಲದೆಂದೆನಿಸುತ್ತೆ. ನಮ್ಮ ಭಾವನ ಬಗ್ಗೆನೂ ಹೇಳ್ಬೇಕಾಗುತ್ತೆ. ಅವರ ಬೆನ್ನ ಹಿಂದೆ ನಿಂತು ಬೆನ್ನೆಲುಬಾಗಿ ಪ್ರತಿಯೊಂದನ್ನು ಪ್ರೋತ್ಸಾಹಿಸಿ, ಉತ್ತೇಜಿಸಿ, ಮುಂದೆ ನಡೆಸಿಕೊಂಡು ಹೋಗ್ತಾ ಇದಾರೆ. 'ನಾನು ಇಷ್ಟು ಮುಂದೆ ಬರುವುದಕ್ಕೆ ಇವರೇ ಕಾರಣ' ಎಂದು ಸ್ವತಃ ವೈದೇಹಿಯವರೇ ಎಷ್ಟೋ ಬಾರಿ ಹೇಳಿದ್ದಾರೆ. ನನಗೂ ಸಹ ಅವರ ಬಗ್ಗೆ ಹೆಮ್ಮೆ ಎನಿಸುತ್ತದೆ. ಕಥೆ, ಕವನ, ನಾಟಕ, ಸಿನೆಮಾ ಎಲ್ಲದರಲ್ಲೂ ತಮ್ಮ ನಿಲುವನ್ನು ತೋರಿಸಿದ ಅವರಿಗೆ ಭಗವಂತ ಹೆಚ್ಚು ಆರೋಗ್ಯ, ಆಯಸ್ಸು ಕೊಡಲೆಂದು ಕೇಳಿಕೊಳ್ಳುತ್ತೇನೆ.



`It was in 1980's that I first met Vaidehi in Shimoga. Her first collection of short stories had appeared. I had read them, but not yet acquainted with her. She had written a beautiful letter appreciating my production of 'Mricchakatika'. She had also come to meet the actors at the end of the play and expressed her delight. Her words and her letter were genuine. More than her words, her eyes expressed clearly what she intended to say. She did not speak much, but whatever little she said was touching enough....Those were the eyes of a consummate artist who absorbed the whole world and gave herself to the world without holding back her thoughts and feelings. Her words accompanied with appropriate tone and suitable gestures always create a lasting impression on the listner's minds. When Vaidehi writes, she has that rare capability to make the readers listen through their minds even the minutest details of accents of her characters. Effertless ease of her writing conceals the tremendous hard labour of their creator. There are not many writers who can make the readers listen to the words they are reading and re-create a living world.'

**O L Nagabhushana swamy**

(On Vaidehi's writing in his preface for 'Vaidehi Kathana' English translation from kannada)

‘ವೀಣಾರ ನಂತರ ಮಹಿಳಾ ಸಣ್ಣಕತೆಗೆ ಮಹತ್ವದ ತಿರುವು ದೊರೆತದ್ದು ವೈದೇಹಿಯವರಿಂದ. ಇಂದು ಕತೆ ಬರೆಯುತ್ತಿರುವ ಹಲವಾರು ಲೇಖಕಿಯರು ಅವರು ತೋರಿಸಿದ ದಾರಿಯಲ್ಲೇ ನಡೆದಿದ್ದಾರೆ. ವೈದೇಹಿಯವರ ನಿಲುವನ್ನು ಸ್ಥೂಲವಾಗಿ 'ದೇಶೀ' ನಿಲುವು ಎಂದು ಕರೆಯಬಹುದು. ಮಾನವೀಯ ಸ್ವಭಾವ, ಸಂಬಂಧ ಸಮಸ್ಯೆಗಳೇ ವೈದೇಹಿಯವರ ವಸ್ತುವಾದರೂ ಅವರು ಈ ವಸ್ತುವನ್ನು ಅತ್ಯಂತ ನೈಜವಾದ, ಖಚಿತವಾದ, ಗತಿಶೀಲವಾದ ಸಾಂಸ್ಕೃತಿಕ ಹಾಗೂ ಸಾಮಾಜಿಕ ಪರಿಸರದಲ್ಲಿಯೇ ಶೋಧಿಸುತ್ತಾರೆ.’

- **ಜಿ.ಎಸ್. ಆಮೂರ**

(‘ಅವಳ ಕತೆಗಳು’ ಸಂಗ್ರಹದ ಮುನ್ನುಡಿಯಲ್ಲಿ)

# ಚಂದಗೋಪನ ಹುಡುಕಾಟದ ಕಥೆ–ವ್ಯಥೆಗಳು

## ವೈದೇಹಿಯವರ ನನ್ನ ಮೆಚ್ಚಿನ ಐದಾರು ಕತೆಗಳ ಒಂದು ಪರಿಶೀಲನೆ

✦ ಡಿ ಎಸ್ ನಾಗಭೂಷಣ

ವೈದೇಹಿ ಅಭಿನಂದನಾ ಗ್ರಂಥಕ್ಕಾಗಿ ಅದರ ಸಂಪಾದಕಿ ಸವಿತಾ, ವೈದೇಹಿಯವರ ಕತೆಗಳ ಬಗ್ಗೆ ಲೇಖನವೊಂದನ್ನು ಬರೆದುಕೊಡಲು ಕೇಳಿದಾಗ ಅದಕ್ಕೆ ಸಿದ್ಧನಾಗಲು ನಾನು ಸ್ವಲ್ಪ ಕಷ್ಟಪಡಬೇಕಾಯಿತು. ನಾನು ವೈದೇಹಿಯವರ ಕಥೆಗಳನ್ನು ಎಂಬತ್ತರ ದಶಕದ ಆರಂಭದಲ್ಲೇ ನಿಯತಕಾಲಿಕಗಳಲ್ಲಿ ಓದುತ್ತಿದ್ದೆ. ಆದರೆ ಹತ್ತು ಕಥೆಗಾರರಲ್ಲಿ ಅವರೂ ಒಬ್ಬರು ಎಂಬಂತೆ; ನಿರ್ದಿಷ್ಟ ಗಮನವಿಲ್ಲದಂತೆ. ಒಮ್ಮೆ ಲಂಕೇಶರು ಇವರ ಬಗ್ಗೆ ವಿಶೇಷ ಗಮನ ಸೆಳೆಯುವ ಟಿಪ್ಪಣಿ ಬರೆದಾಗ ಇವರ ಒಂದೆರಡು ಕಥಾ ಸಂಗ್ರಹಗಳನ್ನು ಕೊಂಡು ಅವುಗಳಲ್ಲಿನ ಕಥೆಗಳನ್ನು ಒಂದಿಷ್ಟು ಗಮನವಿಟ್ಟು ಓದಲಾರಂಭಿಸಿದೆ. ಲಂಕೇಶರು ಮೆಚ್ಚಿ ಪ್ರಕಟಿಸಿದ್ದ 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕುತೂಹಲ ಹುಟ್ಟಿಸಿತಾದರೂ ಅವರು ಉಲ್ಲೇಖಿಸಿದ್ದ 'ಚಂದಲೆ', 'ಶಕುಂತಲೆಯೊಂದಿಗೆ ಒಂದು ಅಪರಾಹ್ನ', 'ಭೂತ' ಮತ್ತು 'ಅವಲಂಬಿತರು' ಕಥೆಗಳು ಒಂದೊಂದು ರೀತಿಯಲ್ಲಿ ಒಂದೊಂದೂ ಚೆನ್ನಾಗಿವೆ ಎನಿಸಿದರೂ ಅಸಾಮಾನ್ಯ ಅಥವಾ ನಾವೀನ್ಯತೆಯವೆಂದೇನೂ ನನಗನ್ನಿಸಲಿಲ್ಲ. ಇದೆಲ್ಲ ಲಂಕೇಶರು ತಾವು ಗುರುತಿಸಿ ಪೋಷಿಸಿದ ಪ್ರತಿಭೆ ಎಂದು ಸಾರಿಕೊಂಡು ಬೀಗಲು ನಡೆಸಿರುವ ಪ್ರಯತ್ನವಷ್ಟೇ ಎಂದು ನಕ್ಕು ಸುಮ್ಮನಾದೆ. ಹಾಗಾಗಿ ಮತ್ತೆ ವೈದೇಹಿಯವರ ಕಥೆಗಳನ್ನು ವಿಶೇಷ ಆಸಕ್ತಿಯಿಂದ ಓದುವ ಉಮೇದು ನನಗೇನೂ ಉಂಟಾಗಲಿಲ್ಲ. ಆದರೆ ಅವರೊಬ್ಬರು ಮುಂದೆ ಎಂದಾದರೊಮ್ಮೆ ವಿಚಿತ್ರ ಶಕ್ತಿಯೊಂದಿಗೆ ಸ್ಫೋಟಿಸಬಹುದಾದ ಕಥೆಗಾರ್ತಿ ಎಂಬ ಸೂಚನೆ ಎಲ್ಲೋ ನನ್ನ ಮನದಾಳದಲ್ಲಿ ನೆಲೆನಿಂತಿತ್ತು. ಏಕೆಂದರೆ ಆ ಹೊತ್ತಿಗೆ ಅವರ 'ಅಕ್ಕು' ಓದಿ ಅದರ ರಭಸಕ್ಕೆ ಬೆಚ್ಚಿದ್ದೆ. ಈ ಮಧ್ಯೆ ಅವರನ್ನು ನಾನು ಮತ್ತು ಸವಿತಾ ಎಲ್ಲಿಯೋ–ಬಹುಶಃ ಹೆಗ್ಗೋಡಿನಲ್ಲಿ–ಕಂಡು ಮಾತಾಡಿಸಿದ್ದ ನೆನಪು. ಅಷ್ಟೆ.

ಅದು 1993–94 ಇರಬಹುದು. ನಾವಾಗ ಮಡಿಕೇರಿಯಲ್ಲಿದ್ದೆವು. ಒಂದು ಭಾನುವಾರ ಮಧ್ಯಾಹ್ನ ನಮ್ಮ ಮನೆಯ ಗುಡ್ಡದ ಕೆಳ ರಸ್ತೆಯಲ್ಲಿ ನಾನು ಮತ್ತು ಸವಿತಾ ಅವರನ್ನು ನೋಡಿದೆವು. ಇಲ್ಲೇಕೆ ಅವರು ಎಂದು ಒಂದು ಕ್ಷಣ ಆಶ್ಚರ್ಯ, ಗಲಿಬಿಲಿಯೂ

ಆಯಿತು. ಮಾತಾಡಿಸಿದಾಗ ಗೊತ್ತಾದದ್ದು, ಅವರ ಹಿರಿಯ ಮಗಳು ನಯನಾರನ್ನು ಮಡಿಕೇರಿಗೆ ಬಾಲಾಜಿ ಅನ್ನುವವರಿಗೆ ಕೊಟ್ಟು ಮದುವೆ ಮಾಡಲಾಗಿದೆ ಎಂದು. ನಮ್ಮ ಆಹ್ವಾನದ ಮೇರೆಗೆ ಅವರು ಆ ಸಣ್ಣ ಗುಡ್ಡ ಹತ್ತಿ ನಮ್ಮ ಮನೆಗೆ ಬಂದು ನಮ್ಮ ಉಪಚಾರ ಸ್ವೀಕರಿಸಿ, ಮಾತಾಡಿ ಹೋದರು. ಹಾಗೇ ಹತ್ತಿರದಲ್ಲೇ ಇರುವ ತಮ್ಮ ಮಗಳ ಮನೆಗೆ ಬರಲು ಆಹ್ವಾನಿಸಿದರು. ಮಾರನೆಯ ದಿನ ಸಂಜೆ ನಾವು ನಯನಾ ಅವರ ಮನೆಗೆ ಹೋದೆವು. ಆತಿಥ್ಯದ ಜೊತೆಗೆ ಅಲ್ಲಿ ವೈದೇಹಿಯವರು ಆಗ ಪ್ರಕಟವಾಗಿದ್ದ ತಮ್ಮದೊಂದು ಕಥಾ ಸಂಕಲನವನ್ನು ನಮಗೆ ನೀಡಿದರು. ಅದರ ಹೆಸರು 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು'.

ಆಗ ನನಗೆ ಕಛೇರಿಯಲ್ಲಿ ಹೆಚ್ಚು ಕೆಲಸವೇನೂ ಇರಲಿಲ್ಲ. ಬೇಸರವಾಗಿ, ಶಿಸ್ತಾಗಿ ಒಂದಿಷ್ಟು ಓದೋಣವೆಂದು ಹದಿನೈದು ದಿನವೋ ಒಂದು ತಿಂಗಳೋ ರಜೆ ಹಾಕಿದ್ದೆ. ಹಾಗಾಗಿ ವೈದೇಹಿಯವರು ಕೊಟ್ಟ ಪುಸ್ತಕ ನಿರಂತರ ಓದಿಗೆ ಒದಗಿಬಂತು. ಒಮ್ಮೆ 'ಲಂಕೇಶ್ ಪತ್ರಿಕೆ'ಯಲ್ಲಿ ಓದಿದ್ದ 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಸೇರಿದಂತೆ ಅದರ ಮೊದಲ ನಾಲ್ಕು ಕಥೆಗಳನ್ನು ಓದಿ ನಾನು ಸುಸ್ತಾದೆ. ಎಂತಹ ಸುಸ್ತದು! ಕನ್ನಡ ಕಥೆಗಾರಿಕೆಯಲ್ಲಿ ಈವರೆಗೆ ಕಂಡರಿಯದ ಮಹಿಳಾ ಸಂವೇದನೆಯ ಸೂಕ್ಷ್ಮಗಳು ನನ್ನನ್ನು ಬೆರಗುಗೊಳಿಸಿ, ಈ ಕಥೆಗಳು ಹೀಗೆ ಸಂಗ್ರಹವಾಗಿ ಬರುವವರೆಗೆ ನನ್ನ ಓದಿನಿಂದ ತಪ್ಪಿಸಿಕೊಂಡಿದ್ದವೆಂದರೆ ಅದು ನನ್ನ ಓದಿನ ಹಿಂದಿನ ಉಡಾಫೆಯೇ ಕಾರಣವೆಂಬ ಅರಿವಿನಿಂದಾದ ಸುಸ್ತು. ಹಾಗೇ ನೋಡಿದರೆ ಈ ಕಥೆಗಳಲ್ಲಿನ ಸಂವೇದನೆಯ ಸೂಕ್ಷ್ಮಗಳನ್ನು ಮಹಿಳೆಯದ್ದೆಂದು ಗುರುತಿಸುವುದೂ ನಾವು ಗಂಡಸರಾಗಿ ಮಾತ್ರ ಓದುತ್ತಿದ್ದೇವೆಂಬ ಸಂಕುಚಿತ ಗ್ರಹಿಕೆಯ ಓದಾಗುವುದೋ ಏನೋ! ಒಟ್ಟಿನಲ್ಲಿ ಅದೊಂದು ಹೊಸ ಅನುಭವ.

ಇಲ್ಲಿಂದಾಚೆ ನಾನು ವೈದೇಹಿಯವರ ಕಥೆಗಳನ್ನು ವಿಶೇಷ ಕುತೂಹಲದಿಂದ ಓದತೊಡಗಿದೆ. ಕೆಲವು ಸಾಮಾನ್ಯ, ಕೆಲವು ಅಸಾಮಾನ್ಯ. ಒಂದಷ್ಟು ವರ್ಷಗಳ ನಂತರ ಇವರ ಇನ್ನೊಂದು ಸಂಗ್ರಹ 'ಕ್ರೌಂಚ ಪಕ್ಷಿಗಳು' ವಿಶೇಷ ಕಾರಣಕ್ಕಾಗಿ ನನ್ನ ಓದಿಗೆ ಸಿಕ್ಕಿತು. ಅದು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯ ಪರಿಗಣನೆಗಾಗಿ ನಮ್ಮ ಮನೆಗೆ ಬಂದಿತ್ತು. ಆ ವರ್ಷ ಸವಿತಾ ಅದರ ತೀರ್ಪುಗಾರರಲ್ಲೊಬ್ಬಳು. ಸವಿತಾ ಈ ಪುಸ್ತಕವನ್ನು ಪ್ರಶಸ್ತಿಗಾಗಿ ಶಿಫಾರ್ಸು ಮಾಡಿದಾಗ ನಾನು ಕೊಂಚ ಆಶ್ಚರ್ಯಪಟ್ಟಿದ್ದುಂಟು. ಆದರೆ ಈ ಅಕಾಡೆಮಿ ಪ್ರಶಸ್ತಿ ನಿಯಮಾವಳಿ ಎಷ್ಟು ವಿಚಿತ್ರವೆಂದರೆ, ಒಮ್ಮೆ ಈ ನಿಯಮಾವಳಿಯ ವ್ಯಾಪ್ತಿಯಿಂದ ಒಬ್ಬ ಲೇಖಕರು ತಪ್ಪಿಸಿಕೊಂಡರೆಂದರೆ ಅವರು ಮುಂದೆ ಈ ಪ್ರಶಸ್ತಿಗೆ 'ಅರ್ಹತೆ' ಪಡೆಯುವುದು ಕಷ್ಟವೇ ಸರಿ. ಜೊತೆಗೆ ಒಂದು ಪುಸ್ತಕದ ಯೋಗ್ಯತೆಯನ್ನು ಆ ವರ್ಷದ ಪ್ರಶಸ್ತಿಗಾಗಿ ಅಳೆಯಬೇಕಾದದ್ದು ಅವುಗಳ ಜೊತೆ ಹಲವು ದೋಷಪೂರ್ಣ ವಿಧಾನಗಳ ಮೂಲಕ ಪರಿಗಣನೆಗೆ ಬಂದ ಪುಸ್ತಕಗಳ ಹೋಲಿಕೆಯೊಂದಿಗೇ. ಆದ್ದರಿಂದ

ಸವಿತಾ ಶಿಫಾರ್ಸು ಅಂತಿಮವಾಗಿ ಸರಿಯಾಗಿಯೇ ಇದೆ ಅನ್ನಿಸಿತು. ಏಕೆಂದರೆ 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು' ಸಂಗ್ರಹದ ಮೇಲೆ ಉಲ್ಲೇಖಿಸಿದ ಕಥೆಗಳನ್ನು ಬರೆದವರಿಗೆ ಸಲ್ಲದೆ ಇನ್ನಾರಿಗೆ ಈ ಪ್ರಶಸ್ತಿ ಸಲ್ಲಬೇಕು?

ಅಂದ ಮಾತ್ರಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಸಂದ 'ಕ್ರೌಂಚ ಪಕ್ಷಿಗಳು' ಸಂಗ್ರಹದಲ್ಲಿ ಒಳ್ಳೆಯ ಕಥೆಗಳಿಲ್ಲ ಎಂದಲ್ಲ. ಅದರಲ್ಲಿನ 'ದಾಳಿ' ಎಂಬ ಕಥೆ, ಈ ಸಂಗ್ರಹದ ಕಥೆಗಳನ್ನು ಮತ್ತೆ ಓದುವಂತೆ ನನ್ನನ್ನು ಒತ್ತಾಯಿಸುತ್ತಲೇ ಇರುವಷ್ಟು ನನ್ನ ಮನಸ್ಸಿನಲ್ಲಿ ಉಳಿದುಬಿಟ್ಟಿತ್ತು. ಈಗ ಓದಿದಾಗ ಅದರೊಂದಿಗೇ 'ನಟಿ' ಎಂಬ ಕಥೆ ನನ್ನನ್ನು ಬಲವಾಗಿ ಅಂಟಿಕೊಂಡಿತು. ಅಷ್ಟೇ ಅಲ್ಲ, ವೈದೇಹಿಯವರ ಕಥೆಗಾರಿಕೆಯ ಸಾರ್ಥಕತೆಯ ಗುಟ್ಟೂ ನನಗೆ ಅದರಿಂದ ಹೊಳೆದಂತಾಯಿತು!

ನಾನು ವೇದೇಹಿಯವರ ಎಲ್ಲ ಕಥೆಗಳನ್ನೂ ಓದಿಲ್ಲ. ಈಗ ಒಮ್ಮೆಗೇ ಓದೋಣವೆಂದರೆ ಅವೇನು ಹತ್ತಿಪ್ಪತ್ತೇ? ಅವೀಗ ನೂರಕ್ಕೆ ಹತ್ತಿರವಾಗುತ್ತಿವೆಯಂತೆ! ಆದರೆ ನಾನು ಅವರ ಎಲ್ಲ ಮಾದರಿಗಳ ಕಥೆಗಳನ್ನೂ ಪ್ರಾತಿನಿಧಿಕವಾಗಿ ಓದಿರುವ ವಿಶ್ವಾಸವಿದೆ. ಈ ವಿಶ್ವಾಸದಿಂದ ಹೇಳಬಹುದಾದರೆ ಅವರು ಎಲ್ಲಿ ತಮ್ಮದೇ ಕಿರು ಸಮಾಜದ ಕಥೆ ಹೇಳುತ್ತಾರೋ ಅಲ್ಲಿ ಅವರ ಕಥೆಗಾರಿಕೆಯ ಪ್ರತಿಭೆಯ ಎಲ್ಲ ಗರಿಗಳೂ ಪೂರ್ಣವಾಗಿ ಬಿಚ್ಚಿಕೊಂಡು ಅವರನ್ನು ನಮ್ಮ ಅತ್ಯುತ್ತಮ ಮತ್ತು ವಿಶಿಷ್ಟ ಕಥೆಗಾರರಲ್ಲೊಬ್ಬರನ್ನಾಗಿ ಮಾಡಿವೆ. ಮಿಕ್ಕಂತೆ ಅವರು ಕಥೆ ಕಟ್ಟುವಂತೆ ಅವು ಕಾಣುತ್ತವೆ. ಹಾಗೆಂದರೆ ಅವುಗಳ ಕಟ್ಟೋಣ ಕೃತಕವಾಗಿವೆ ಎಂದೂ ಅಲ್ಲ ಮತ್ತು ಕಥೆಗಾರನೊಬ್ಬ ತನ್ನ ಆಪ್ತ ಸಮಾಜದ ಕತೆಯನ್ನು ಮಾತ್ರ ಪರಿಪೂರ್ಣತೆಯೊಂದಿಗೆ ಹೇಳಬಲ್ಲ ಎಂದೂ ಅಲ್ಲ. ಹಾಗಾದಲ್ಲಿ ಒಬ್ಬರನ್ನು ಕಥೆಗಾರನನ್ನಾಗಿ ಮಾಡುವ ಮೂಲಶಕ್ತಿಯಾದ ಅನ್ಯವನ್ನು ಆವಾಹನೆ ಮಾಡಿಕೊಳ್ಳುವ ಶಕ್ತಿಯನ್ನೇ ಕಥೆಗಾರಿಕೆಯ ಪ್ರತಿಭಾ ವ್ಯಾಪ್ತಿಯಿಂದ ಹೊರಗಿಟ್ಟ ವಿಪರ್ಯಾಸ ಉಂಟಾಗುತ್ತದೆ. ತಮ್ಮ ಕಿರು ಸಮಾಜವನ್ನು ದಾಟಿ ಬೀರಿದ ನೋಟಗಳ ಮೂಲಕ ಅವರು ಕಟ್ಟಿದ ಕಥೆಗಳು ಹೆಚ್ಚು ಚಿಂತನಾಪರವೆನಿಸುತ್ತವೆ ಮತ್ತು ಕೊಂಚ ಹೆಚ್ಚು ನೇರ, ದಿಟ್ಟವೆನಿಸುತ್ತವೆ ಎಂದಷ್ಟೇ ನಾನು ಹೇಳುತ್ತಿರುವುದು. ಅಲ್ಲದೆ ಅವು ಎಲ್ಲೂ ಸುಳ್ಳೆನಿಸುವುದಿಲ್ಲ ಎಂಬುದನ್ನೂ ಇಲ್ಲಿ ಸೇರಿಸಬೇಕು. ಉದಾಹರಣೆಗೆ 'ಸೌಗಂಧಿಯ ಸ್ವಗತಗಳು' ಕಥೆ ನೋಡಬಹುದು. ಆಧುನಿಕ ಸ್ತ್ರೀಲೋಕದ ಒಳಬಂಡಾಯದ ದನಿಗಳು ಇಲ್ಲಿ ಎಷ್ಟು ಸೂಕ್ಷ್ಮವಾಗಿ, ಆರ್ದ್ರವಾಗಿ– ಎಲ್ಲೂ ಪೋಲಿಯಾಗಿ ಕಾಣದೆ–ಕೇಳಿಸುತ್ತವೆಂದರೆ, ಇದು ಕೂಡ ವೈದೇಹಿಯವರ ಅತ್ಯುತ್ತಮ ಕಥೆಗಳಲ್ಲಿ ಒಂದು–ಮುಂದೆ ವಿವರಿಸುವ ಒಂದು ದೌರ್ಬಲ್ಯದೊಂದಿಗೇ ಆದರೂ– ಎನಿಸದಿರದು. ಹಾಗೇ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಮತ್ತು 'ದಾಳಿ'ಯಂತಹ ಕಥೆಗಳು ಕೂಡ.

ಹಾಗೆ ನೋಡಿದರೆ ಯಾರದ್ದಾದರೂ ಇಂದು ತನ್ನದೇ ಮತ್ತು ತನ್ನದು ಮಾತ್ರ ಎಂದು ಹೇಳಿಕೊಳ್ಳಬಹುದಾದ ಅಪ್ಪಟ ಆಪ್ತ ಸಮಾಜವೆಂಬುದು ಎಲ್ಲಿದೆ? ಇತರೆಯ

ಸಂವಾದಿತ್ವವಿಲ್ಲದೆ ತನ್ನದೆಂಬುದು ಸ್ಥಾಪಿತವಾಗುವುದಾದರೂ ಹೇಗೆ? ಹಾಗಾಗಿ ನಾನು ಇಲ್ಲಿ ಆಪ್ತ ಸಮಾಜ ಎಂದು ಹೇಳುತ್ತಿರುವುದು ಒಂದು ಭಾಷೆ, ಅದರ ಶೈಲಿ, ನುಡಿಗಟ್ಟು, ಅದರ ಹಬ್ಬ-ಹರಿದಿನ ಇತ್ಯಾದಿ ವಿಧಿ ಆಚರಣೆಗಳ ವಿವರ, ಅವುಗಳಲ್ಲಿ ವ್ಯಕ್ತವಾಗುವ ಸಾಮಾಜಿಕ ವಿನ್ಯಾಸಗಳ ಒಂದು ಸಾಂಸ್ಕೃತಿಕ ಸಂರಚನೆ ಮತ್ತು ಅದರ ಒಟ್ಟು ಶಬ್ದವಾಸನೆಯ ಸಾಂದ್ರತೆ. ಇಲ್ಲಿ ಶಬ್ದವಾಸನೆ ಎಂಬ ಪ್ರಯೋಗ ನನ್ನ ಮನಸ್ಸಿಗೆ ಬಂದದ್ದೇ ವೈದೇಹಿಯವರ ಕಥೆಗಾರಿಕೆಯಲ್ಲಿ ಕಾಣುವ ಮಾತುಗಾರಿಕೆಯ ವೈಭವದ ಮೆರವಣಿಗೆಯಿಂದಾಗಿ! ಹೆಣ್ಮಕ್ಕಳ ಈ ಮಾತುಗಾರಿಕೆಯ ಚಂದ-ಚಾತುರ್ಯ-ಚೇಷ್ಟೆಗಳೇ ಕಥೆಯ ಹಲವು ಸುತ್ತುಗಳನ್ನು ಕಟ್ಟಿಬಿಟ್ಟಿರುತ್ತದೆ. ವೈದೇಹಿಯವರು ಯಾವ ಕೇಂದ್ರದಲ್ಲಿ ನಿಂತು ಕಥೆ ಹೇಳುವರೋ ಆ ಸಾಂಪ್ರದಾಯಿಕ ಸಮಾಜದ ಅದುಮಿಟ್ಟ ಸ್ತ್ರೀಶಕ್ತಿಯೆಲ್ಲವೂ ಈ ಮಾತುಗಾರಿಕೆಯ ವಿವಿಧ ವೈಖರಿಗಳಲ್ಲೇ ಹೊರನುಗ್ಗಿ ಕಥೆಯ ಕೇಂದ್ರವನ್ನೂ ನಿರ್ಧರಿಸುವಷ್ಟು ಶಕ್ತಿಯುತವಾಗಿರುತ್ತದೆ. ಹಾಗಾಗಿಯೇ ವೈದೇಹಿಯವರ ಕೆಲವು ಕಥೆಗಳು ತಾವೇ ತಾವಾಗಿ ಕಥೆಯಾಗಿಬಿಡುತ್ತವೆ ಎನಿಸಿದರೆ, ಇನ್ನು ಕೆಲವನ್ನು ಅವರು ದುಡಿದು ಕಟ್ಟಿದ್ದಾರೆ ಎನಿಸುವುದು. ಆದರೆ ಈ ದುಡಿಮೆ ಭಾಷೆಯ ಇನ್ನೊಂದೇ ತೆರನ ದುಡಿಮೆಯಾಗಿದ್ದು, ಅದರ ಚೆಲುವೂ ಕಡಿಮೆ ಮೌಲ್ಯದ್ದೇನಲ್ಲ ಹಾಗೂ ಈ ಎರಡರಲ್ಲೂ ಎದ್ದು ಕಾಣುವುದು ಲೇಖಕಿಯ ಸೃಜನಶೀಲತೆಯಲ್ಲದೆ ಮತ್ತೇನಲ್ಲ ಎಂಬುದನ್ನು ಗಮನಿಸುವುದೂ ಇಲ್ಲಿ ಮುಖ್ಯ.

ನಾನು ನನ್ನ ಈ ಮಾತುಗಳನ್ನು ವೈದೇಹಿಯವರ ಅತ್ಯುತ್ತಮ ಕಥೆಗಳೆಂದು ನಾನು ಭಾವಿಸಿರುವ ಕಥೆಗಳ ಉದಾಹರಣೆಗಳನ್ನಿಟ್ಟುಕೊಂಡೇ ಇಲ್ಲಿ ವಿವರಿಸಬಯಸುವೆ. 'ಅಕ್ಕು', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಮತ್ತು 'ಅಮ್ಮಚ್ಚಿಯೆಂಬ ನೆನಪು' ಈ ಮೂರು ಕತೆಗಳನ್ನು ಅವರ ಕಥೆಗಾರಿಕೆ ಛಾಪನ್ನು-ಅದರ ಅತ್ಯುತ್ತಮ ಗುಣಗಳನ್ನು-ಪ್ರತಿನಿಧಿಸುವ ಕಥೆಗಳೆಂದು ಹೇಳಲಾಗುತ್ತದೆಯಾದರೂ, ಅವುಗಳ ಎಲ್ಲ ಶಕ್ತಿ-ಸೌಂದರ್ಯಗಳನ್ನು ಒಪ್ಪಿಕೊಂಡೂ ನನಗೆ ಅನ್ನಿಸಿದ್ದು, ಅವು ಅತಿ ನಾಟಕೀಯತೆಯಿಂದ ಬಳಲಿವೆ ಎಂದು. ಹಾಗಾಗಿಯೇ ಅವುಗಳನ್ನು ಓದುವಾಗ ಇದ್ದಷ್ಟು ಮನಸ್ಸಿನ ಸಾಂದ್ರತೆ ಅವನ್ನು ಓದಿ ಮುಗಿಸಿದ ಮೇಲೆ ಉಳಿಯುವುದಿಲ್ಲ. ಅವುಗಳ ಗೌಜು ಗದ್ದಲ ಮನಸ್ಸಿನ ದಿಗಂತಗಳನ್ನು ಕಿಂಚಿತ್ತೂ ವಿಸ್ತರಿಸದೆ ಸುಮ್ಮನೆ ಮನಸ್ಸನ್ನು ಪೀಡಿಸುತ್ತಿರುತ್ತದೆ. ಇವು ಒಂದು ನಿರ್ದಿಷ್ಟ ಮಾದರಿಯ ಸಮಾಜದ ಒಳಗಿನ ಕೋಲಾಹಲಗಳನ್ನು ದಟ್ಟ ಕೌಟುಂಬಿಕ ವಾತಾವರಣದ ಚಿತ್ರಣದ ಮಧ್ಯೆ ದಿಟ್ಟವಾಗಿ, ಲವಲವಿಕೆಯಿಂದ, ಸ್ಥಳೀಯ ಭಾಷೆಯ ವಿಶಿಷ್ಟ ಬಾಗು ಬಳುಕುಗಳೊಂದಿಗೆ ಸ್ವಾರಸ್ಯಕರವಾಗಿ ಹೇಳುತ್ತವೆಯೇ ಹೊರತು ಅವಕ್ಕೆ ಕಾರಣವಾದ ಅದರ ಪ್ರಸ್ಥಭೂಮಿಯೊಳಗಿನ ಭೂಕಂಪನಗಳ ಕೇಂದ್ರಗಳ ಕಡೆ ಬೊಟ್ಟು ಮಾಡುವುದಿಲ್ಲ, ಪುರುಷ ಪ್ರಧಾನ ಸಮಾಜ ಎಂಬ ಸ್ಥೂಲ-ಕ್ಲೀಷೆಯ-ನೆಪದ ಹೊರತಾಗಿ. ಹೌದು, ಮೇಲೆ ಹೇಳಿದ ಅವುಗಳ ಶಕ್ತಿ-ಸೌಂದರ್ಯಗಳ ದೃಷ್ಟಿಯಿಂದ ಅವು ಬಹು ಒಳ್ಳೆಯ ಕಥೆಗಳೇ. ಆದರೆ ಪೂರ್ಣ ಕಥೆಗಳಲ್ಲ.

ಆದರೂ ಈ ತ್ರಿವಳಿ ಕಥೆಗಳಲ್ಲಿ 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ನಮ್ಮನ್ನು ಮನುಷ್ಯ ಸಂವೇದನೆಯ ಹೆಚ್ಚು ಆಳಗಳಿಗೆ ಕರೆದುಕೊಂಡು ಹೋಗುವ ಕಥೆ ಎಂದು ಗುರ್ತಿಸಬಹುದು. ಮಿಕ್ಕೆರೆಡು ಕಥೆಗಳನ್ನು ಅವುಗಳ ಒಟ್ಟು ಪರಿಣಾಮ ಕೆಡದಂತೆ ಯಾರಿಗಾದರೂ ಸಾರಾಂಶ ರೂಪದಲ್ಲಿ ಸುಲಭವಾಗಿ ಹೇಳಿಬಿಡಲು ಒದಗಬಲ್ಲ ಹೆಚ್ಚು ಸಂಕೀರ್ಣತೆಯನ್ನು ಒಳಗೊಳ್ಳದ ಕಥೆಗಳು. ಬೇಕಾದರೆ ಪುಟ್ಟಣ್ಣ ಕಣಗಾಲ್ ಮತ್ತು ಕಲ್ಪನಾ ಮತ್ತೆ ಹುಟ್ಟಿಬಂದರೆ ಜನ ಮೆಚ್ಚುವ/ಬೆಚ್ಚುವ, ಮುಗಿಬಿದ್ದು ನೋಡುವ ರೀತಿಯ ಸಿನಿಮಾಗಳನ್ನೂ ಇವುಗಳಿಂದ ಮಾಡಬಹುದು (ಈಗ ಅಂತಹುದಲ್ಲದಿದ್ದರೂ ಒಂದು ಸಿನಿಮಾ ಪ್ರಯತ್ನ ನಡೆದಿದೆ ಎಂದು ಕೇಳಿದ್ದೇನೆ!) ಆದರೆ ಈ ನಿರ್ದಿಷ್ಟ ಕಥೆಯ ಬಹುಭಾಗ ಉಳಿದೆರಡು ಕಥೆಗಳಂತೆಯೇ ಸಾಗಿದರೂ ಒಂದು ಹಂತದ ನಂತರ ಬರುವ ಮೊಮ್ಮಗಳ ಪಾತ್ರ ನಿರೂಪಣೆ ಇಡೀ ಕಥೆಗೊಂದು ಹೊಸ ಆಳ ನೀಡಿ ಕಥೆಗಾರಿಕೆಗೊಂದು ಹೊಸ ಎತ್ತರವನ್ನು ನಿರ್ಮಿಸಿಕೊಡುತ್ತದೆ. ಇಲ್ಲಿ ಮೊಮ್ಮಗಳ ಕಥೆ ನಮ್ಮನ್ನು ಬೆಚ್ಚಿಬೀಳಿಸುವ ರೀತಿಯಲ್ಲೇ ಆ ಕಥೆಯ ಮೊದಲ ದೊಡ್ಡಭಾಗದ–ಪುಟ್ಟಮ್ಮತ್ತೆಯ ಕಥೆಯ–ಹೇಳದೆ ಉಳಿದ ಎಲ್ಲ ಸಂಕೀರ್ಣ ಗಂಟುಗಳೂ ನಮ್ಮ ಮನದಲ್ಲಿ ಬಿಚ್ಚಿಕೊಳ್ಳುತ್ತವೆ. ನೂರಾರು, ಸಾವಿರಾರು ಪುಟ್ಟಮ್ಮತ್ತೆಯರ ಆಳಾತಿಆಳದ ನಿಟ್ಟುಸಿರು, ಬಿಕ್ಕುಗಳೂ ಕೇಳತೊಡಗುತ್ತವೆ. ಇದೊಂದು ಒಳಗೇ ಮೌನವಾಗಿ ಕುದಿಯುತ್ತಾ, ತನ್ನದೇ ಲಯದಲ್ಲಿ ಹೊರಬಂದು ಆರೋಹಣ ಗತಿಯಲ್ಲಿ ಚಲಿಸುತ್ತಾ ಧುತ್ತನೆಯ ತೀವ್ರ ಭಾವ ವಿರಚನೆಯ, ಒಂದು ರೀತಿಯ ಚರಿತ್ರೆಯ ಸೇಡಿನ ಕಥೆಯಾಗಿ–ಸ್ಫೋಟಿಸುತ್ತದೆ. ಹಾಗಾಗಿಯೇ ಈ ಮೊಮ್ಮಗಳ ದುರಂತ ಅಕ್ಕು ಮತ್ತು ಅಮ್ಮಚ್ಚಿಯ ದುರಂತಗಳಿಗಿಂತ ಹೆಚ್ಚು ಸಂಕೀರ್ಣವೆನಿಸಿ, ಈ ಮೂರೂ ಕಥೆಗಳು ಹೇಳುವ ಸಮಾಜದ ಹೆಣ್ಣುಮಕ್ಕಳ ದುರಂತ ಚರಿತ್ರೆಯನ್ನು ಈ ಕಥೆ ಹೆಚ್ಚು ಬೇರಿಳಿಸಿ ಹೇಳುತ್ತದೆನಿಸುತ್ತದೆ. ಪುಟ್ಟಮ್ಮತ್ತೆಯ ತಾಯಿಯ ಮತ್ತು ಪುಟ್ಟಮ್ಮತ್ತೆಯ ಗಂಡನ ಸಾವಿನ ಎದೆ ನಡುಗಿಸುವಂತಹ ಉಪಕಥೆಗಳ ಮೂಲಕ. ಇಲ್ಲಿ ಪುಟ್ಟಮ್ಮತ್ತೆಯ ಅಥವಾ ಅವಳ ಮೊಮ್ಮಗಳ ಕಥೆ ಒಂದು ಸಮಾಜದ ಚರಿತ್ರೆಯ ಕಥೆಯಾಗಿಯೂ ಮೂಡಿ ನಮ್ಮನ್ನು ಒಂದು ದೀರ್ಘ ನಿಟ್ಟುಸಿರಿನಲ್ಲಿ ಸಿಲುಕಿಸಿ ಕಲಕುತ್ತದೆ. ಹಾಗೇ ಈ ಕಥೆ ಬೀಜ–ಬೇರಿನಿಂದ ಶುರುವಾಗಿ ಶಾಖೋಪಶಾಖೆಗಳಾಗಿ ವಿಶಾಲವಾಗಿ ಹರಡಿಕೊಳ್ಳುವ ಮರದಂತೆ ಬೆಳೆದಿರುವುದರಿಂದ ಕಥೆಯೊಂದಿಗೆ ಕಥೆ ಹೇಳುವ ಹದವೂ ಸಾವಯವವಾಗಿ ಸಾಧಿತವಾಗಿರುವುದನ್ನು ನಾವು ಕಾಣಬಹುದು:

> 'ಜಯಲಕ್ಷ್ಮೀ, ಹಸಿವು, ಬಾಯಾರಿಕೆ ಆಗದವರು ಯಾರಿಲ್ಲ? ಆದರೆ ಅದೆಲ್ಲ ಇರುವುದು ಇಗಾ ಇಲ್ಲಿ. ಈ ಎದೆಯಲ್ಲಿ. ಇದನ್ನೊಂದು ಕಲ್ಲು ಮಾಡಿಕೊಂಡರೆ ಎಲ್ಲ ಪಸೆ ಒಣಗಿ ಬೇಗ ಚುರುಟಿ ಹೋದೀತು.' ಆಕೆ ಹಾಗೆಂದ ರೀತಿಗೆ ಜಯಲಕ್ಷ್ಮಿ ನಕ್ಕಾಗ ಪುಟ್ಟಮ್ಮನಿಗೂ ನಗೆಯೇ. ನಗೆಯೂ ಹಲವೊಮ್ಮೆ ಖಾಲಿಯಾಗಿರುತ್ತಲ್ಲ?'

ಆದರೆ 'ಆರತಿ ತಟ್ಟೆ' ಇದನ್ನು ಎಲ್ಲ ರೀತಿಯಲ್ಲಿಯೂ ಮೀರಿಸಿದ ಕಥೆ. ನನ್ನ ಪ್ರಕಾರ ವೈದೇಹಿಯವರ ಅತ್ಯುತ್ತಮ ಕಥೆ. ಹಾಗೆ ನೋಡಿದರೆ ಈ ಕಥೆಯಲ್ಲಿ ಕಥೆಯೇ ಇಲ್ಲ! ಬದಲಿಗೆ ಕಥೆಯ ನೆಪದಲ್ಲಿ ಬಿಚ್ಚಿಕೊಳ್ಳುವ ಒಂದರೊಳಗೊಂದು ಕರುಳುಬಳ್ಳಿಯಂತೆ ಹೆಣೆದುಕೊಂಡ ನಿಗೂಢ ಬಲೆಯಾಗಿ ಕಾಣುವ ಮಾನವ ಸ್ವಭಾವ-ಸಂಬಂಧಗಳ ಸುಂದರ ಸೂಕ್ಷ್ಮ ಹಾಸು ಇದು. ವೈದೇಹಿಯವರು ತಮ್ಮ ಬಹುಪಾಲು ಕಥೆಗಳಲ್ಲಿ ನಡೆಸಿರುವುದು ತಾವು ಹುಟ್ಟಿ ಬೆಳೆದ ಮತ್ತು ಬೆಳೆಯುತ್ತಿರುವ ಸಮಾಜದ ಧಾರಣಾ ಶಕ್ತಿಯ ಅನ್ವೇಷಣೆಯನ್ನೇ-ಅದರ ಸ್ತ್ರೀಲೋಕದ ಕಣ್ಣಿನಿಂದ ಎಂದು ಹೇಳಬಹುದೇನೋ. ಅವರ ಈ ಸಮಾಜವನ್ನು ಒಂದು ಮಾನವ ದೇಹವೆಂದು ಕಲ್ಪಿಸಿಕೊಂಡರೆ ಅವರು ಈ ದೇಹದ ಮೂಲೆ ಮುಡುಕುಗಳನ್ನೂ-ಅದರ ಎಲ್ಲ ಮರ್ಮಸ್ಥಾನಗಳೂ ಸೇರಿದಂತೆ-ಮುಟ್ಟಿ ಮಿಸುಕಾಡಿಸಿ ನೋಡಿ ಕಥೆಯಾಗಿಸಿದ್ದಾರೆ ಎನ್ನಬಹುದು. ಅದರ ಒಂದು ಕಿರು ಮಹಾದರ್ಶನ ಈ ಕಥೆಯಲ್ಲಾಗುತ್ತದೆ. ಬರಿ ವಿವರಗಳಲ್ಲಿ ಅಲ್ಲ; ಕಥೆಯಾಗುವ ಆ ಅನನ್ಯ ಹದದಲ್ಲೂ.

ಈ ಕಥೆ ತಾನು ಹೊಗುವ ಈ ಸಮಾಜದ 'ಹಿರಿಯ'ರೊಬ್ಬರ ಧೂಳು ತಿನ್ನುತ್ತಿರುವ ಪುರಾತನ ಮನೆಯಲ್ಲೆಲ್ಲ ತಟಕಾಯಿಸುತ್ತಾ, ಗಂಡು ಹೆಣ್ಣೆನ್ನದೆ ಅದರ ಸದ್ಯದ ಎಲ್ಲ ವಯೋಮಾನಗಳ ಸದಸ್ಯರ ಚಾಲೂ ಚಹರೆಗಳನ್ನು ಜೀವಂತವಾಗಿ ಹಿಡಿದಿಡುತ್ತಲೇ ಅವುಗಳ ಮೂಲಕ ಆ ಮನೆಯ-ಮನೆತನದ ಚರಿತ್ರೆಯನ್ನು ಕಟ್ಟಿಕೊಡುವ, ಅದರೊಳಗಿಂದಲೇ ದಟ್ಟ ವಿಷಾದವನ್ನು ಹುಟ್ಟಿಸುವ ಪರಿ ಯಾರನ್ನಾದರೂ ಬೆರಗುಗೊಳಿಸುವಷ್ಟು ಪ್ರಬುದ್ಧ ಕಲೆಗಾರಿಕೆಯಿಂದ ಕೂಡಿದೆ. ಅಲ್ಲಿನ ತಣ್ಣನೆಯ ಆವರಣದಲ್ಲಿ ಒಂದು ತಣ್ಣನೆಯ ಭೇಟಿಯ ಮೂಲಕ ಸುಮ್ಮನೆಂಬಂತೆ, ಆ ಮಹಾಮನೆಯ ಕಂಬಗಳೂ ಸೇರಿದಂತೆ ಅಲ್ಲಿನ ಗಾಳಿ-ಬೆಳಕುಗಳಿಂದಲೂ ಒಂದರೊಳಗಿಂದ ಒಂದು ಬಿಚ್ಚಿಕೊಳ್ಳುವ ವಿವರಗಳೇ ತಮಗೆ ಗೊತ್ತಿಲ್ಲದಂತೆಯೇ ಕೊನೆಯಲ್ಲಿ ಒಂದು ದಟ್ಟ ಕತೆಯಾಗಿ ಪರಿಣಮಿಸುವಲ್ಲಿನ ಕಥೆಗಾರಿಕೆಯ ಬೆಡಗಿನ ಬಗ್ಗೆ ನಾನು ಇಲ್ಲಿ ಹೇಳುತ್ತಿರುವುದು. ಮೇಲೆ ಚರ್ಚಿಸಿದ ಮೂರು ಕಥೆಗಳಲ್ಲಿದ್ದಂತೆ ಇಲ್ಲಿ ಯಾವುದೇ ನಾಟಕವಿಲ್ಲ; ಕುತೂಹಲ ಕೆರಳಿಸುವ ಘಟನಾವಳಿಗಳಿಲ್ಲ. ಎಲ್ಲ ತಣ್ಣಗೆ-ಆಳು ಹೆಂಗಸೊಬ್ಬಳನ್ನು ಕಂಬಕ್ಕೆ ಕಟ್ಟಿ ಜಪ್ಪುವ ಘಟನೆಯೂ ಸೇರಿದಂತೆ-ನಡೆದುಹೋಗುತ್ತದೆ, ಕೊನೆಗೂ 'ಕಾಪಿಗೆ ಬಪ್ಪಿರಲೆ' ಎಂದು ಕರೆವ ಮನೆಯ ಸೊಸೆ ತಾರಾಮತಿಯ ಆಹ್ವಾನದಂತೆ, ಎಷ್ಟು ಓಡಿಸಿದರೂ ಮತ್ತೆ ಮತ್ತೆ ಜಗುಲಿಗೆ ಬಂದು ಕರಾ ಕರಾ ಎಂದು ಮನೆಯ ಹಿರಿಯಜ್ಜಿ ಮೀನಾಕ್ಷತ್ತೆಯನ್ನು ಕಾಡುವ ಕಾಕಿಗಳನ್ನು ಮನೆಯ ಸದ್ಯದ ಪಡಪೋಶಿ ಯಜಮಾನ ನರಸಿಂಹ ಒಮ್ಮೆ ಜೋರಾಗಿ ಕೈಬೀಸಿ ಓಡಿಸಿದಂತೆ, ಅದನ್ನು ಕಂಡು ಆಕೆ 'ಒಂದು ಬೀಸಿದ್ದೇ ಎಲ್ಲ ಎಲ್ಲಿದ್ದೋ? ಪುಡ್ಡೋ!' ಎನ್ನುತ್ತಾ ಬೀರುವ ಚಿಟೊಚಿಟಿ ನಗೆಯಂತೆ, ಮಗು ಪ್ರಕಾಶ

ಮಾಣಿ ಪಡು ಹೆಬ್ಬಾಗಿಲಿನಲ್ಲಿ ಹಿಡಿಕಡ್ಡಿಯ ಜಿಲ್ಲಿನಲ್ಲಿ ಹಿಡಿಕಡ್ಡಿ ಬಾಣ ಬಿಡುತ್ತಿದ್ದಷ್ಟೇ ತಣ್ಣಗೆ.

ಈ ತಣ್ಣನೆಯ ಪರಿಣಾಮವನ್ನುಂಟುಮಾಡಲು ಅಲ್ಲಿ ಎಂತೆಂಥ ಬಿಸಿಬಿಸಿ ಕಥೆಗಳು ಅನಾವರಣಗೊಳ್ಳುತ್ತವೆ! ಎಷ್ಟೊಂದು ಪರಿಯ ದಾಂಪತ್ಯಗಳು, ಅವುಗಳ ದುರಂತ ಚಿತ್ರಗಳು! ಈ ಕಥೆಗಳಲ್ಲಿ ಗಿರಿಜಾಮಣಿ, ಕಾಶಿಯ ಗಂಡಂದಿರಿಬ್ಬರನ್ನೇ 'ಪೋಂಕು' (ಪೇತಲಾಂಡಿಗಳು?)ಗಳೆಂದು ವರ್ಣಿಸಲಾಗಿದ್ದರೂ ಇಲ್ಲಿ ಬರುವ ಗಂಡಸರೆಲ್ಲರೂ-ದರ್ಪದ ಜಮೀನ್ದಾರ ಅಪ್ಪಣ್ಣಯ್ಯನೂ ಸೇರಿದಂತೆ-ಒಂದಲ್ಲ ಒಂದು ರೀತಿಯಲ್ಲಿ ಪೋಂಕುಗಳಂತೆಯೇ ಕಾಣಿಸುವುದು ಈ ಕಥೆಯ ಯಶಸ್ಸಿನ ಗುಟ್ಟಾಗಿದೆ. ಇದಕ್ಕೆ ಕಾರಣ, ಇಲ್ಲಿ ಸ್ತ್ರೀಲೋಕ ತನ್ನೆಲ್ಲ ದಮನಿತ ಶಕ್ತಿ-ಸಾಮರ್ಥ್ಯಗಳನ್ನೂ ತನ್ನೆಲ್ಲ ವೈವಿಧ್ಯದೊಂದಿಗೆ ಹೊರಚೆಲ್ಲಿ ಗರಿಗೆದರಿ ನಿಂತಿದೆ. ಇಲ್ಲಿ ಈ ದಮನಕ್ಕೆ ಕಾರಣವಾಗಿರುವುದು ಈ ಹೆಂಗಸರ ಮೇಲೆ ಹೇರಲಾಗಿರುವ ಅವರೊಲ್ಲದ ಗಂಡಂದಿರ ಸಾಮಾಜಿಕ ಭಾರ: ದಾಂಪತ್ಯವೆಂಬ ಸಾರ್ವಜನಿಕ ಪ್ರದರ್ಶನದಲ್ಲಿನ ಹಿಂಸೆ. ಇದಕ್ಕಾಗಿ ಎಲ್ಲರೂ ಒಳಕ್ಕೋ ಹೊರಕ್ಕೋ ಕಣ್ಣೀರಿಡುವವರೇ; ಅದನ್ನು ಒರೆಸಿಕೊಳ್ಳುವುದರ ಭಾಗವಾಗಿ ವಿವಿಧ ಅವತಾರಗಳನ್ನು ತಾಳುವವರೇ! ಗಂಡನ ಪ್ರೇಯಸಿಗೆಂದು ಹಾಲು ಕಾಯಿಸಿ ಕೊಟ್ಟು ಕಳಿಸಿ ಅವರು ಮಲಗುವ ಕೋಣೆಗೆ ಇರುವೆ ಬಿಡುವ ಮೀನಾಕ್ಷತ್ತೆಯಿಂದ ಹಿಡಿದು ಪರಸ್ಪರ ಹಾದರದ ಅನುಮಾನಗಳ ನೆರಳಲ್ಲೇ ಸಂಬಂಧಗಳ ಆಟವಾಡುತ್ತಾ, ಸಾರ್ವಜನಿಕ ಮರ್ಯಾದೆಯ ಪ್ರಶ್ನೆ ಬಂದಾಗ ಎಲ್ಲ ಬಿಟ್ಟು ವಿಕಾರವಾಗಿ ಸ್ಫೋಟಿಸುವ ಹಲವು ಹೆಂಗಸರವರೆಗೆ. ಇದೇ ಕಥೆಯ ವಿಕಟ ಸತ್ಯ-ಸೌಂದರ್ಯಗಳನ್ನು ಸೃಷ್ಟಿಸಿರುವುದು ಕೂಡ. ಹಾಗಾಗಿಯೇ ಇವರಲ್ಲಿ ಒಂದು ಹೆಂಗಸು-ತನ್ನ ದಾಂಪತ್ಯದ ವಿಷಮತೆಯ ಬಗ್ಗೆ ಹೇಳಿಕೊಳ್ಳಲಾಗದ ಸಭ್ಯತೆಗೆ ಸಿಕ್ಕಿ ಕಸಬಿದ್ದಂತೆ ಕಣ್ಣೊರೆಸಿಕೊಳ್ಳುತ್ತಲೇ 'ತಾನೂ ಒಬ್ಬ ಗಂಡಸೇ ಎಂಬಷ್ಟು ದೃಢವಾಗಿ' ಹೇಳುವುದು ಹೀಗೆ : 'ಹೆಂಗಸರ ಪಂಚಾತಿಕೆ ಎಷ್ಟು ಬಿಡ ಹರಡಿದರೂ ಅರ್ಥ ಆಗುವಂಥದಲ್ಲ. ಅವು ಗಂಡಸರ ಹಾಂಗಲ್ಲ. ಗಂಡಸರು ಸೀದ'. ಈ ಸ್ತ್ರೀಲೋಕದ ಸಮಸ್ಯೆಯ ಸೂಚನೆ ಇಲ್ಲೇ ಇದ್ದಂತಿದೆ: ಈ ಹೆಣ್ಣು ಸಮಾಜದ ನೋಟವೂ ಗಂಡು ನೆಲೆಯದ್ದೇ ಆಗಿಬಿಟ್ಟು ಅದರ ಬಾಗಿಲುಗಳು ಮುಚ್ಚಿಬಿಟ್ಟಿವೆ.

ವೈದೇಹಿಯವರು ಈ ವಿಕಟ ಸತ್ಯ-ಸೌದರ್ಯಗಳ ಕಥೆಯನ್ನು ಹೇಳುವುದು ಮೀನಾಕ್ಷತ್ತೆ ಮನೆಯ-ಆದರೆ ಆ 'ಊರ ಸಮಾಜ'ದ ಎಲ್ಲರ ಕುಟುಂಬಗಳ ಶುಭ ಸಮಾರಂಭಗಳಿಗೆ ಒದಗುವ-ಭವ್ಯ ಆರತಿ ತಟ್ಟೆ ಮೇಲಿನ ಸುಳಿಯುಂಡೆಗಳು ಕಳುವಾದ ಪ್ರಸಂಗದ ಹಿನ್ನೆಲೆಯನ್ನು ಒಂದು ನೆಪವಾಗಿಟ್ಟುಕೊಂಡು. ಅದೂ ಆ ತಟ್ಟೆಯು ಅದರ ಒಡೆಯರ ಮನೆ ಭೂಸುಧಾರಣೆ ಶಾಸನಗಳ ಪರಿಣಾಮವಾಗಿ ಸೂಳೆಮನೆ ಸೇರಿ ಈಗ ಆ ಮನೆಯ ಸದ್ಯದ ವಾರಸುದಾರ 'ಒಣಗಿ ಸುರುಟಿ ಹೋಗಿ' ಅಬ್ಬೇಪಾರಿಯಂತಾಗಿರುವ ಅದರ ಚರಿತ್ರೆಯ ತಣ್ಣನೆಯ ವಿಷಾದದ ವ್ಯಾಖ್ಯಾನ ಬರೆಯುತ್ತಾ.

ಆರತಿ ತಟ್ಟೆ ಎಂಬುದು ಸಾಂಪ್ರದಾಯಿಕ ಹೆಣ್ಣು ಸಮಾಜದಲ್ಲಿ ಆರತಿ ಮತ್ತು ಆರತಿ ತಟ್ಟೆಯ ಮಹತ್ವವನ್ನರಿತವರಿಗೆ ಈ ಕಥೆ ಅದರ ಸುತ್ತ ಹುತ್ತಗಟ್ಟಿಕೊಳ್ಳುವ ವಿಚಿತ್ರ ವಿನ್ಯಾಸ ವೈದೇಹಿಯವರ ಕಥೆಗಾರಿಕೆಯ ವಿನ್ಯಾಸದ ಅನನ್ಯತೆಯನ್ನೂ ಸೂಚಿಸುವಂತಿದೆ ಎಂಬುದು ಗೊತ್ತಾಗುತ್ತದೆ. ಹಾಗಾಗಿ ಈ ಕಥೆಯ ವ್ಯಂಗ್ಯದ ಚೂಪು ಓದುಗರಿಗೆ ತಾಗುವುದು ಈ ಕಥೆಯ ಕೇಂದ್ರ ವ್ಯಕ್ತಿ ಮೀನಾಕ್ಷತ್ತೆಯ ಪ್ರಕಾರ ಆರತಿ ಹಾಡೊಂದರಲ್ಲಿ ಬರುವ 'ಚಂದಗೋಪ'ನೆಂದರೆ ಯಾರು ಎಂಬುದನ್ನು ಹೇಳುವ ಈ ಮಾತುಗಳಲ್ಲಿ:

> **'ಮೀನಾಕ್ಷತ್ತೆ ಮಟ್ಟಿಗೆ ಚಂದವಾಗಿ ಕಾಂಬುದೆಂದರೆ ಯಂತಂತ ಮಾಡಿಯೆ? ಉಂಡಿಯ? ತಿಂದಿಯ? ಅಂತ ಗಂಡ ಕೇಂತಿದ್ರೆ ಸೈ. ಅವ ಚಂದಗೋಪ. ರಾತ್ರಿ ಗುಲಾಬಿ ಬಂದ್ ಹೆಬ್ಬಾಗಿಲ ಕೋಣೆಯಾಗೆ ಪ್ರತಿಷ್ಠಾಪನೆ ಆಪ್ಪಮಿಗೆ ಮೀನಾಕ್ಷತ್ತೆ ಕೆಲ್ಸ ಮುಗ್ಸಿ ಒಲೆಗೆ ಸೆಗಣಿ ಬಳಿಯೂ ಹೊತ್ತು. ಅಪ್ಪಣ್ಣಯ್ಯ ಒಳಗೆ ಬಂದ್ 'ಇದಕ್ಕೆಲ್ಲ ಜನ ಇಟ್ಕಂಬುಕಾಗ್ದಾ? ಇನ್ನೂ ಇನ್ನೂ ನೀನೇ ಯಾಕೆ ಮಾಡುದ್?' ಅಂಬರು. 'ಈಗ ಬೆನ್ನ ನೋವ್ ಹ್ಯಾಂಗಿತ್? ಅಡ್ಡಿಲ್ಯ? ಬೇಕಾರೆ ನಾಳೆ ಡಾಕ್ಟ್ರನ್ ಕರ್ಸುವ.' ಅಂಬರು. ಆಗ ಮೀನಾಕ್ಷತ್ತೆಯ ಮುಖ ಕಾಣ್ಕ್, ಅಗಲ ಆರತಿ ತಟ್ಟೆಯೇ... ಅದ್ ಯಂಥಾ ಖುಷಿಯೋ. ಮುಚ್ಚಿಟ್ಟದ್ ಒಂದು ಗಿಂಡಿ ಹಾಲು ಕೊಟ್ 'ಕುಡ್ಕಂಡೇ ಹೋಪಿರಲೇ. ಅವ್ಳ್ ಬಂದ್ ಎಷ್ಟ್ ಹೊತ್ತಾಯ್ತ್' ಅಂಬಳು. 'ಅವ್ಳಿಗೂ ಕಳ್ಸಿಕೊಟ್ಟೆ...' ಅಂತೇಳಿ ನಾಚಿ ನಿಂತಬ್ಳ್. ಅಪ್ಪಣ್ಣಯ್ಯ ಬೊರ್ರ ಹಾಲು ಕುಡ್ದ್ ಅಲ್ಲಿಂದ ಹೊರಡ್ತಿದ್ರ್ (ಅಲ್ಲಿದ್ ಇರುವೆ ಕತೆ ಅಲಾಯ್ದು) ಒಟ್ಟಾರೆ ಮೀನಾಕ್ಷತ್ತೆ ಮಟ್ಟಿಗ್ ಅವ್ನೇ ಚಂದಗೋಪ... ಸುಳ್ಳೆ?'**

ಈ ಮಾತಿನೊಂದಿಗೇನೂ ಕಥೆ ಮುಗಿಯುವುದಿಲ್ಲ. ಓದುವವರ ಎದೆ ಹಿಂಡುತ್ತಾ ಸಾಕಷ್ಟು ಮುಂದುವರೆಯುವುದು. ಮೀನಾಕ್ಷತ್ತೆಯ ಒಡಲತಾಪ ಕಥೆಯ ಒಡಲತಾಪವೇ ಆಗಿ ಏಕೀಭವಿಸಿ ಕಥೆ ಬೆಳೆದು ಬಾಳುವ ಪರಿ ಬೆರಗು ಹುಟ್ಟಿಸುವಂಥಹದ್ದು. ಅದೇ ಈ ಕಥೆಯ ಅನನ್ಯತೆ; ವಿಶೇಷ ಶಕ್ತಿ.

* * *

ವೈದೇಹಿಯವರ ನಾನು ಬಹು ಇಷ್ಟಪಟ್ಟ ಇನ್ನೆರೆಡು ಕಥೆಗಳೆಂದರೆ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಹಾಗೂ 'ಸೌಗಂಧಿಯ ಸ್ವಗತಗಳು'. ಇವು ಈ ಮೇಲೆ ಚರ್ಚಿಸಿದ ಮೂರು ಕಥೆಗಳಂತೆ ಅವರ ಆಪ್ತ ಸಮಾಜಕ್ಕಂಟಿಕೊಂಡ ಕಥೆಗಳಲ್ಲ. ಅವರ ಊರ/ಊರವರ ಕಥೆಗಳು. ಹಾಗಾಗಿ ಸಹಜವಾಗಿಯೇ ಈ ಎರಡೂ ಕಥೆಗಳಲ್ಲಿ ಕಥೆಗೂ ಕಥೆಗಾರ್ತಿಗೂ ನಡುವೆ ಒಂದು ಭಾವನಾತ್ಮಕ ಅಂತರವಿದೆ. ಇದು ಕಥೆಗಳು ಸಾಮಾಜಿಕವಾಗಿ ಹೆಚ್ಚು ಹರಡಿಕೊಳ್ಳಲು ನೆರವಾಗಿದೆ. ವಿಶೇಷವಾಗಿ 'ಗುಲಾಬಿ ಟಾಕೀಸ್...' ಕಥೆಯಲ್ಲಿ. ಆದರೂ 'ಸೌಗಂಧಿಯ ಸ್ವಗತಗಳು' ಹೆಚ್ಚು ಖಾಸಗಿ ಭಾವನೆಗಳ ಮೂಲಕವೇ ತನ್ನ

ಪರಿಣಾಮವನ್ನು ಸ್ಥಾಪಿಸಿಕೊಳ್ಳುವುದಾದರೂ, ಅದರ ಬೇರುಗಳು ಇರುವುದು ಒಂದು ದೊಡ್ಡ ಸಮಾಜದ ಉದ್ವೇಗಗಳಲ್ಲೇ; ಅದರ ರಾಜನೀತಿಯಲ್ಲೇ ಎಂಬುದನ್ನು ನಾವು ಗಮನಿಸದಿರಲಾಗದು. ಅಂದರೆ ನಾನು ಇಲ್ಲಿ ಹೇಳುತ್ತಿರುವುದೇನೆಂದರೆ, ಈ ಮೊದಲು ಚರ್ಚಿಸಿದ ಕಥೆಗಳು ಹೆಚ್ಚು ಕೌಟುಂಬಿಕ ನೆಲೆಯವಾದರೆ ಇವು ಹೆಚ್ಚು ಸಾಮಾಜಿಕವಾದವು ಎಂದು.

ನಾನು ಬಹು ಇಷ್ಟಪಟ್ಟ 'ನಟ' ಕಥೆಯೂ ಒಂದು ಕೌಟುಂಬಿಕ ಕಥೆಯೇ ಆದರೂ, ಅದು ಅದರ ನಡಿಗೆಯಲ್ಲಿ ಅದರಾಚೆಗೂ ಹೆಜ್ಜೆಗಳನ್ನು ಇಡುತ್ತದೆ, ತನ್ನ ದುರಂತಾಂತ್ಯದ ಮೂಲಕ. ಹೆಣ್ಣು ಲೋಕದ ಸರಳ ಆನಂದಗಳ ಹೊರಚಿತ್ರ ಕೊಡುತ್ತಲೇ ಈ ಕಥೆ ಒಳಕ್ಕೆ ತಿರುಗಿ ಓದುಗರಿಗೆ ಉಂಟುಮಾಡುವ ಆಘಾತ ಒಂದು ರೀತಿಯಲ್ಲಿ ನಾಟಕೀಯವೆನಿಸಿದರೂ ಇಲ್ಲಿ ಅದು ಅಂತಿಮವಾಗಿ ಆಂಟಿ-ಕ್ಲೈಮ್ಯಾಕ್ಸ್ ಎನ್ನುವುದೇ ನಿಜ. ಕ್ಲೈಮ್ಯಾಕ್ಸ್ ಆಗುವಂತೆ ಕಥೆಯನ್ನು ಕಟ್ಟಿರುವ ಪರಿ ಕಥೆಗಾರ್ತಿಯ ಕಥನ ಪ್ರತಿಭೆಗೆ ದ್ಯೋತಕವಾಗಿದೆ. ಕಥೆಯ ಅಂತ್ಯದಲ್ಲಿ ಕಥೆಯೇ ಮಗುಚಿಕೊಳ್ಳುವ ಬೆರಗುಗೊಳಿಸುವ ತಂತ್ರದ ದೃಷ್ಟಿಯಿಂದ ಇದು ಲಂಕೇಶರ 'ನಿವೃತ್ತರು' ಕಥೆಯನ್ನು ನೆನಪಿಸುವುದಾದರೂ, ಈ ಕಥೆ ತನ್ನದೇ ಒಂದು ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಿಕೊಳ್ಳುವ ಮೂಲಕ ತನ್ನದೇ ಕಾಲುಗಳ ಮೇಲೆ ನಿಂತ ಸ್ವಂತಿಕೆಯನ್ನೂ ತೋರುತ್ತದೆ. ನಟನೆ ಇತರರ ಪಾತ್ರಗಳದ್ದಾದರೂ ಅದು ತನಗೇ ಗೊತ್ತಿಲ್ಲದಂತೆ ತನ್ನ ಪಾತ್ರವನ್ನೂ ಪ್ರವೇಶಿಸಿ ಆಡುವ ಆಟದ ಹಿಂದಿನ ನಿಗೂಢತೆಯನ್ನು ಈ ಕಥೆ ಆತ್ಯಂತಿಕವಾಗಿ ಹೇಳುವುದು ಮತ್ತೆ ದಾಂಪತ್ಯದ ಕರ್ಮ ಕಥೆ(ಗಳ)ಯನ್ನೇ.

ಹಾಗೆ ನೋಡಿದರೆ ವೈದೇಹಿಯವರ ಬಹುಪಾಲು ಎಲ್ಲ ಕಥೆಗಳೂ ಹೇಳುವುದು (ಹೀಗೆ ನಾನು ಹೇಳಲು ಕಾರಣ, ಅವರ ಎಲ್ಲ ಕಥೆಗಳನ್ನೂ ನಾನು ಓದಲಾಗಿಲ್ಲ ಎಂಬುದೇ ಆಗಿದೆ) ದಾಂಪತ್ಯದ ತೊಡಕುಗಳ ಕಥೆಗಳನ್ನೇ. ಈಗ ಸಾಮಾಜಿಕವೆಂದು ನಾನು ವಿಂಗಡಿಸಿದ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕಥೆಗೂ ಒಂದು ರೀತಿಯಲ್ಲಿ ಕಾರಣವಾಗುವುದೂ ದಾಂಪತ್ಯದ ಒಂದು ತೊಡಕೇ. ಲಿಲ್ಲಿಬಾಯಿಯ ಗಂಡ ಕಲಾಯಿ ನಾಯಕ 'ಯಾರ ಮೇಲೋ(ಇನ್ನಾರ ಮೇಲೆ?) ಸಿಟ್ಟು ತೀರಿಸಿಕೊಳ್ಳುವಂತೆ ತವರನ್ನು ಪಾತ್ರೆಗಳೊಳಗೆ ತಿಕ್ಕಿ ತೀಡುತ್ತ ಸಿಟ್ಟಿಗೇಳುವ ಗುಣವನ್ನೇ ಕಳೆದುಕೊಂಡು' ಅವಳ ಕಲ್ಪನೆಯ ಬದುಕಿಗೆ ನಾಲಾಯಕ್ ಆಗಿ ಹೋಗಿ, ಅವಳು ಅವನನ್ನು 'ಉದ್ಧಾರ'ವಾಗಿ ಬರಲು ಬೊಂಬಾಯಿಗೆ ಹೊತ್ತುಹಾಕಿ ಎಷ್ಟೋ ವರ್ಷವಾಗಿ ಅವನು ನಾಪತ್ತೆಯಾಗಿದ್ದ. ಹಾಗಾಗಿ ಅವಳ ಬದುಕು ಅವಳ ಕಲ್ಪನೆಗೆ ತಕ್ಕಂತೆ ಗರಿಗೆದರುವುದು ಆನಂತರದಲ್ಲಿಯೇ. ಅವಳು ಮುಂದೆ ತನ್ನ ಪಾಡಿಗೆ ಸುಮ್ಮನೆ ತನ್ನ ಸುಖದಲ್ಲಿ ಮಲಗಿದ್ದ ಊರನ್ನು ಕಣ್ಣೊರೆಸಿಕೊಂಡು ಮೈಮುರಿದು ಎದ್ದೇಳುವಂತೆ ಮಾಡಿದ-ಅದೇ ಬೊಂಬಾಯಿ ಜಾದೂ

ಫಲವಾಗಿ ಊರಿನಲ್ಲಿ ಸ್ಥಾಪಿತವಾದ–ಗುಲಾಜಿ ಟಾಕೀಸಿನ ಲೇಡೀಸ್ ಗೇಟ್‌ಕೀಪರ್ ಆಗಿ ಆ ಊರಿನ ಮಧ್ಯಮ ವರ್ಗಗಳ ದಾಂಪತ್ಯದ ಬಿಗು ಸೂತ್ರಗಳನ್ನೇ ಸಡಿಲಿಸಿದ ರೀತಿಯನ್ನು ವೈದೇಹಿಯವರು ಹೇಳುವ ರೀತಿ ಅವರ ಕಥೆಗಾರಿಕೆ ಇನ್ನೊಂದು ವಿಶಿಷ್ಟ ಮುಖವನ್ನು ಪರಿಚಯಿಸುವಂತಿದೆ.

ಟಾಕೀಸು ಬಂದ ಮೇಲೆ ಆ ಊರಿನ ಚಾಲೂ ಚಹರೆಗಳು ಮತ್ತು ಊರ ಜನರ–ವಿಶೇಷವಾಗಿ ಹೆಂಗಸರ–ಭಾವ ಭಂಗಿಗಳು ಸಂಪೂರ್ಣ ಬದಲಾಗಿ ಆ ಊರ ಗಂಡು ಸಮಾಜ ನಿಧಾನವಾಗಿ ತನ್ನ ನೈತಿಕ ಸ್ಥೈರ್ಯವನ್ನು ಕಳೆದುಕೊಳ್ಳುತ್ತ ಹೋಗುವ ಸೂಕ್ಷ್ಮಗಳನ್ನು ಕಥೆ ಹೇಳುವ ರೀತಿ ವೈದೇಹಿಯವರ ಕಥೆಗಾರಿಕೆಯ ಇನ್ನೊಂದು ಮುಖ ಎಂದೆನಲ್ಲ, ಅದಕ್ಕೆ ಸಾಕ್ಷಿಯಂತಿದೆ. ಲಿಲ್ಲಿಬಾಯಿ ಮೇಲು ಸಂಪಾದನೆಗಾಗಿ ಹಿಡಿವ ಅಡ್ಡದಾರಿಯ ಅನೈತಿಕತೆಯಲ್ಲಿ ಪಾಲುದಾರರಾಗುವ ಜವಾಬ್ದಾರಿಯನ್ನು ಈ ಹೆಂಗಸರು ಗಂಡಸರ ಹೆಗಲಿಗೆ ವರ್ಗಾಯಿಸುವ ಜಾಣ್ಮನದ ಚಿತ್ರಣವಂತೂ ವೈದೇಹಿಯವರ ಕಥೆಗಾರಿಕೆಯ ಆವೃತ ಗುಣಕ್ಕಷ್ಟೇ ಸಾಧ್ಯವಾಗುವಂತಹದ್ದು :

> 'ಏನು ಇಷ್ಟು ಜನ ಸಿನಿಮಾಕ್ಕೆ ಹೋಗುವುದೇ? ದುಡ್ಡೆಂದರೆ ಹುಣಿಸೆಬೀಜವೆಂತ ಮಾಡಿದ್ದೀರಾ ಹೇಗೆ?"–
>
> ಆಗ ಈ ದೊಡ್ಡ ಸ್ವರದ ಎದುರಿದ್ದವರು ಕಂಬ ಚಿವುಟುತ್ತಾ ಅಷ್ಟರೊಳಗೆ ಹೆದರಿ ತುಂಬಿನಿಂತ ಕಣ್ಣುಗಳಿಂದಾಗಿ ನೇರ ನೋಡದೆ, 'ಇಲ್ಲ ಅಷ್ಟು ಕೊಡಬೇಕಾದ್ದಿಲ್ಲ. ಲಿಲ್ಲೀಬಾಯಿ..."
>
> ಈ ವ್ಯವಸ್ಥೆ ಗಂಡಸರಿಗೆ ಅಡ್ಡಿಲ್ಲ ಎಂದು ಕಾಣುತ್ತದೆ. ಅವರು ಎಷ್ಟು ಜನಕ್ಕೆ ಸಾಕೆಂದರೋ ಅಷ್ಟು ಜನಕ್ಕೆ ದುಡ್ಡನ್ನು 'ಜಾಗ್ರತೆ ಆಚೆ ಈಚೆ ಕಾಣದೆ ಸೀದ ಹೋಗಿ ಬನ್ನಿ'– ಎಂಬ ಹುಶಾರಿನ ಮಾತಿನೊಂದಿಗೆ ನೀಡತೊಡಗಿದರು.
>
> ಇದು ಸಾಂಕ್ರಾಮಿಕವಾಗಿ ಹರಡತೊಡಗಿ, ಅಂತಿಂಥವರ ಮನೆಗೆ ಹೆಣ್ಣು ಕೊಡುವುದಿಲ್ಲ ಅಥವಾ ತರುವವರಲ್ಲ ಎಂದು ಎಲ್ಲಿಲ್ಲದ ಜರ್ಬು ತೋರುವಂಥ ಹೆಂಗಸರೂ ಇದಕ್ಕೆ ಮಾತ್ರ ಬಹಳ ಬೇಗ ಒಗ್ಗಿಹೋದರು. ಮನೆಯಿಂದ ಹೊರಡುವಾಗ ಮೂರು ಜನರಿದ್ದ ಅವರು ಟಾಕೀಸು ಹತ್ತಿರವಾಗುತ್ತಲೇ ಆರು ಜನರಾದರೆ ಅವರಾದರೂ ಏನು ಮಾಡಿಯಾರು? ಮಕ್ಕಳ ಕಣ್ಣು ತಪ್ಪಿಸಿ ಹೊರಡುವುದೆಂದರೆ ತಪ್ಪುವುದು ಅವರ ಕಣ್ಣೇ. ಅವರಿಗೆ ಗೊತ್ತೇ ಆಗದಂತೆ ಮಕ್ಕಳು ಹಿಂಬಾಲಿಸುತ್ತಿದ್ದವು.
>
> 'ಲಿಲ್ಲಿ ಮೂರು ಟಿಕೆಟ್ ಮಾಡಿಸಿದರೆ ಸಾಲದೆ?'–ಎಂದು ಕೇಳುವಲ್ಲಿವರೆಗೂ ತಯಾರಾದರು.. ಅದಕ್ಕೆ ಎಂದೂ ಮುಖ ನೋಡಿ ಅಭ್ಯಾಸವಿಲ್ಲದ ಲಿಲ್ಲಿ ಗೋಡೆ ನೋಡುತ್ತಾ 'ಸಾಕಲ್ಲ. ಸರಸರ ನಡೆಯಿರಿ.

**ಟಾಕೀಸು ಕವುಂಚಿ ಹೋಗುವುದಿಲ್ಲ.. ಗುಲಾಬಿ ದಿವಾಳಿ ಆಗುವುದೂ ಇಲ್ಲ' ಎನ್ನುವಳು. ಮುಂದಿನದು ಅವರವರ ಅಂತರಂಗಕ್ಕೆ ಗೊತ್ತಿರುವಂಥದ್ದು.**

ಈ ಅಂತರಂಗದ ಆಟಗಳ ಭಾಗವಾಗಿಯೇ ಊರ ಹೆಂಗಸರು ಗಂಡಸರ ಮುಂದೆ ಹೆರುವುದೇ ಎಂದು ನಾಚಿ ನಿರ್ಲಕ್ಷಿಸಿದ್ದ ಆಸ್ಪತ್ರೆಯನ್ನು ಲಿಲ್ಲಿಬಾಯಿ ಸೂಲಗಿತ್ತಿ ಕೆಲಸವನ್ನು ನಿರ್ಲಕ್ಷಿಸಿ ಟಾಕೀಸಿನ ಕಥೆಗಳನ್ನು ಹರಡುತ್ತಾ ತಮ್ಮನ್ನು 'ಜಾಗೃತ'ಗೊಳಿಸುತ್ತಾ ಹೋದಂತೆ ಅದೇ ಹೆಂಗಸರೇ ಗಂಡಸರ ಮುಂದೆ ಹೆರುವ ಸಂಕೋಚವನ್ನು ಬಿಟ್ಟು ಸುಣ್ಣ ಬಣ್ಣಗಳಿಂದ ಕಂಗೊಳಿಸುವಂತೆ ಮಾಡುತ್ತಾರೆ. ಇದರ ಮುಂದಿನ ಹೆಜ್ಜೆಯಾಗಿ 'ಮಕ್ಕಳಾಗದಂತೆ ಮಾಡಿಸಿಕೊಳ್ಳುವ' ಜಾಗೃತಿಯನ್ನೂ ಹೊಂದುತ್ತಾರೆ! ಒಂದು ಸಣ್ಣ ಊರಿನಲ್ಲಿ ಆಗಬಹುದಾದ ಇದಕ್ಕಿಂತ ದೊಡ್ಡ ಕ್ರಾಂತಿ ಅಥವಾ ಜಾಗೃತಿ ಇನ್ನೊಂದಿದೆಯೆ? ಆದರೆ ಇದು ಅವನತಿಯೋ, ಜಾಗೃತಿಯೋ? ಎಂಬ ಬೆರಗಿನ ಸೂಕ್ಷ್ಮ ದ್ವಂದ್ವದೊಂದಿಗೆ ಬೆಳೆಯುವ ಈ ಕಥೆಯ ಈ ದ್ವಂದ್ವದ ಒಡಲ ಉರಿ ಹರಡುತ್ತಾ ಒಮ್ಮೆ ಭಗ್ಗನೆ ಹತ್ತಿಕೊಂಡು ಹೀಗೆ

**ಒಂದು ರೀತಿಯಲ್ಲಿ ಊರು ಹುರುಪಿನಿಂದ ಸಾಗುತ್ತಿರುವಾಗ, ಹೆಂಗಸರು ಸಂಜೆಯ ಹೊತ್ತು ಸಿನಿಮಾಕ್ಕೆ ಹೋಗುವುದಿದ್ದರೆ ಬೇಗ ಹಾಲು ಕರೆಯುತ್ತಾ, ಅವತ್ತು ಮಾತ್ರ ತಡವಾಗಿ ಮನೆ ಸೇರುವಂತೆ ಕಾಣುವ ದನಗಳಿಗೆ ಬೈಯುತ್ತಾ, ಕನ್ನಡಿ ಮುಂದೆ ಪೌಡರು, ಕ್ಲಿಪ್ಪು, ಮುಳ್ಳು, ಬಾಚಣಿಗೆಗಳಲ್ಲಿ ಕಳೆದುಹೋಗುತ್ತಿರುವಾಗ,**

**ಲಿಲ್ಲಿಬಾಯಿಯ ದಾರಿ ಸುಗಮವಾಗಿ ಸಾಗುತ್ತಾ ಮನೆಯೆದುರಿನ ತೆಂಗು ಮೇಲೆ ಬರುತ್ತಿರುವಾಗ, ಒಗೆಯುವ ಕಲ್ಲಿನ ಬುಡದ ಬಾಳೆ ಗೊನೆಹಾಕಿ, ಮರಿಹಾಕಿ, ಹಿಂಡಲಾಗಿರುವಾಗ; ಅವಳ ಕುಡುಕುಗಳಲ್ಲಿ ಎಣ್ಣೆ ಕೂತು 'ಚೊಕ್ಕ ಮಾಡಬೇಕು' ಎಂಬ ನೆಲೆನಿಂತ ಜೀವನದವರ ಚಿಂತನೆಗಳು ಅವಳ ಮನದಲ್ಲಿರುವಾಗ ಬೊಂಬಾಯಿಗೆ ಹೋದ ನಾಯಕನ ನೆನಪೇ ಅಳಿಸಿಹೋಗುವಂತಹ ಬದುಕನ್ನು ಅವಳು ಸಿನಿಮಾದಲ್ಲಿ ಅದ್ದಿಕೊಂಡು ಬಾಳುತ್ತಿರುವಾಗ–**

**ಟಾಕೀಸಿನ ಮ್ಯಾನೇಜರ ಕೊರಾತಿಯನ್ನು ರೂಮಿನೊಳಗೆ ಕರೆದದ್ದನ್ನು ಲಿಲ್ಲಿ ಸ್ವತಃ ಕಂಡುಬಿಟ್ಟಳು.**

ಮತ್ತೆ ಈ ಸಾಮಾಜಿಕ ಕಥೆಯ ನಿರ್ಣಾಯಕ ಚಲನೆಗೆ ಸನ್ನೆಯಾಗುವುದು ಒಂದು ಹಾದರದ ಪ್ರಸಂಗವೇ! ಇಲ್ಲಿಗೆ ಕಥೆಯನ್ನು ಮುಟ್ಟಿಸಲು ಕಥೆಗಾರ್ತಿಯು ಹಿಡಿದಿರುವ ಮೇಲಿನ ನಿರೂಪಣೆಯ ದಾರಿಯ ವಿವರಗಳನ್ನು ಗಮನಿಸಿ. ಮನುಷ್ಯ ಪ್ರಜ್ಞೆಯ ಹರಿವಿನ–'ಜಾಗೃತಿ'ಯ–ದಿಕ್ಕಿಗೆ ನೈತಿಕತೆಯ ತರ್ಕದ ಹಂಗಿಲ್ಲವೇನೋ! ಹಾಗಾಗಿಯೇ ಮುಂದೆ ಲಿಲ್ಲಿ ತಾನು ಎಂದೂ ನೈತಿಕತೆಯ ಎಲ್ಲೆಯನ್ನು ದಾಟಿಲ್ಲವೆಂದು ಅದೇ ಸಮಾಜ ಬಾಯಿ ಮುಚ್ಚಿಕೊಂಡು ಕೇಳುವಂತೆ ಮಾಡಬಲ್ಲವಳಾಗಿದ್ದಾಳೆ. ಆದರೆ

ಇದರ–ಅವಳ ವಿಕ್ಷಿಪ್ತಗೊಂಡ ನೈತಿಕತೆಯ–ಪರಿಣಾಮವಾಗಿ ಸಿರಿವಂತ ಮಂಜುನಾಥಯ್ಯನ ಹೆಂಡತಿ ಮತ್ತು ಆಕೆಯ ವಾರಗಿತ್ತಿಯವರು ಪಡುವ ಪಾಡು ಯಾರಿಗೂ ಬೇಡ! ಅದೇ–ಲಿಲ್ಲಿಯ ಆ ಭಂಡ ನೈತಿಕತೆಯೇ–ಅವರನ್ನು ಸಾಮಾಜಿಕವಾಗಿ ಚಿಂತಿಸುವಂತೆ– 'ಜಾಗೃತಿ'ಗೆ ಮುಖಾಮುಖಿಯನ್ನಾಗಿ–ಮಾಡಿದೆ:

> ... ಎಷ್ಟು ನೂರು ಮುಡಿ ಅಕ್ಕಿ ಹುಟ್ಟುವಳಿ ಇದ್ದರೇನಾಯಿತು? ಮನೆಯಲ್ಲಿ ತಾವು ಬಗ್ಗಿದ ಬೆನ್ನು ಎತ್ತದೆ ಗೇಯ್ದರೇನಾಯಿತು? ಹಾಗಾದರೆ ಹೆಚ್ಚಿಗೆ ಒಂದು ದಮ್ಮಡಿಯಾದರೂ ತನ್ನ ಬಳಿ? ಇರುವಷ್ಟನ್ನಾದರೂ ತಾನು ಬೇಡಿ ಪರದೇಶಿಯಂತೆ ಕೇಳಿ ತೆಗೆದುಕೊಳ್ಳಬೇಕಾಯಿತಲ್ಲವೇ? ...
>
> ಯಾವತ್ತೂ ಅನಿಸದಿದ್ದುದೆಲ್ಲ ಅವರಿಗೆ ಅನಿಸತೊಡಗಿತು... 'ಒಟ್ಟಾರೆ ಅತಂತ್ರವಾದೆವಲ್ಲ; ಕೈತುಂಬಾ ದುಡ್ಡನ್ನು ಗಂಡಸರು ಕೊಟ್ಟಿದ್ದರೆ ಅವರ ಮರ್ಯಾದೆ ಉಳಿಯುತ್ತಿತ್ತು' ಎಂದಾಗ ವಾರಗಿತ್ತಿಯಲ್ಲೊಬ್ಬಳು 'ಸುಮ್ಮನಿರಿ ಅಕ್ಕ, ಊರವರು ಏನು ಹೇಳುತ್ತಾರೆ? 'ಮಂಜುನಾಥಯ್ಯನವರ ಮನೆಯವರು' ಅನ್ನುತ್ತಾರೆ. ನಮ್ಮ ಹೆಸರು ಹೇಳುತ್ತಾರೆಯೇ? ಅಂದ ಮೇಲೆ ನಮ್ಮ ಮರ್ಯಾದೆ ಎಲ್ಲಿ ಹೋಯಿತು?' ಎಂದು ಹೇಳಿದಳು–ಒಂದು ನಮೂನೆ ನಾವು ಹೇಗೂ ಯಾವ ಲೆಕ್ಕಕ್ಕೂ ಇಲ್ಲದವರಲ್ಲವೆ ಎಂಬಂಥ ಕಹಿ ಬೆರೆಸಿ. ಈ ಕಹಿ ಎಷ್ಟು ದಿನ ಎಲ್ಲಿತ್ತೋ. ಆದರೂ ಇದು ಸಮನಲ್ಲ–ಎಂದು ಹಲುಬಿದರು ಮಂಜುನಾಥಯ್ಯನ ಹೆಂಡತಿ.

ಹೀಗೆ ಸ್ತ್ರೀ ಅಸ್ಮಿತೆಯ ಪ್ರಶ್ನೆಯನ್ನೂ ಅದರೆಲ್ಲ ಸಂಕೀರ್ಣತೆಗಳೊಂದಿಗೆ ಸೂಕ್ಷ್ಮವಾಗಿ ತಾಕುತ್ತಾ ಕಟ್ಟಿಕೊಳ್ಳುತ್ತಾ ಹೋಗುವ ಈ ಕಥೆ ಚರಿತ್ರೆಯ ಒಂದು ಸಣ್ಣ ಮಿಸುಕಾಟವನ್ನು ಹೇಳುವ ಸಣ್ಣ ಪ್ರಯತ್ನದಂತೆ ಕಂಡರೂ ಚರಿತ್ರೆಯ ನಿಷ್ಕಾರುಣ್ಯವನ್ನು ಹೇಳುತ್ತಾ ಒಂದು ದೊಡ್ಡ ಕಥೆಯಾಗಿಯೇ ಪರಿಣಮಿಸುತ್ತದೆ: ಚರಿತ್ರೆಯ ಚಲನೆಗೆ ಕಾರಣರಾದವರನ್ನೂ ಚರಿತ್ರೆ ಹೇಗೆ ತನ್ನೊಳಕ್ಕೆ ನುಂಗಿ ನೊಣೆದು ಮುಂದೆ ಸಾಗುತ್ತದೆ ಎಂಬುದನ್ನು ಲಿಲ್ಲಿಬಾಯಿಯ ದರ್ಬಾರು ಮುಗಿದು ಅವಳು ತಾನು ಹುಟ್ಟು ಹಾಕಿದ ಚರಿತ್ರೆಯ ಮಿಸುಕಾಟದ ಒಡಲಿನಲ್ಲಿಯೇ ಕರಗಿಹೋಗುವ ಚಿತ್ರಣವನ್ನು–ಲಿಲ್ಲಿಬಾಯಿ ಕುರಿತು ಆ ಹೊತ್ತಿಗೆ ಕಥೆಗಾರ್ತಿ ಬೆಳೆಸಿಕೊಂಡಿದ್ದ ಕಕ್ಕುಲಾತಿಯೊಂದಿಗೇ–ನೀಡುತ್ತಾ:

> ಆದರೆ ಲಿಲ್ಲಿಯನ್ನು ಊರು ಬಿಟ್ಟು ಹಾಕುತ್ತದೆಯೇ? ಆಸ್ಪತ್ರೆಯಲ್ಲಿ ಹೆರಿಗೆ ಮುಗಿಸಿ ಮನೆಗೆ ಬಂದ ಬಾಣಂತಿ–ಮಗುವಿನ ಮೂರು ತಿಂಗಳ ಚಾಕರಿಗೆ ಲಿಲ್ಲಿಯೇ ಬರಬೇಕಾಯಿತು. ಆದರೆ ಎಷ್ಟು ಸಲ? ಎರಡು ಮೂರು ಮಕ್ಕಳಾದದ್ದೇ ಹೆಚ್ಚಿನವರು ಗುಟ್ಟಿನಲ್ಲಿ 'ಮಕ್ಕಳಾಗದಂತೆ' ಮಾಡಿಸಿಕೊಂಡೇ ಆಸ್ಪತ್ರೆಯಿಂದ ಹೊರಬೀಳುತ್ತಿದ್ದರು. ಕಾಲ ಎಷ್ಟು ಬೇಗ ದಾಟಿತು!

ಆದರೆ ಲಿಲ್ಲಿಬಾಯಿ ತನ್ನ ದಾಂಪತ್ಯದ ಸಮಸ್ಯೆಯನ್ನು ಪರಿಹರಿಸಿಕೊಳ್ಳಲು ನಡೆಸಿದ

ಕಾರುಬಾರು ಊರಿನ ಕುಟುಂಬ ವ್ಯವಸ್ಥೆಯ ಸೂತ್ರಗಳನ್ನೇ ಬದಲಿಸಿದ ಕಥೆಯಾಗಿ ಮೂಡುವ ಪರಿ ಈ ಕಥೆಯ ಹೆಗ್ಗಳಿಕೆ:

> ಈಗ ಟಾಕೀಸಿನಲ್ಲಿ ಲಿಲ್ಲಿ ಇಲ್ಲದಿದ್ದರೇನಾಯಿತು? ಊರಿನ ಹೆಂಗಸರಿಗೆ ಮುಂಚಿನಷ್ಟು ಭೀತಿಯೂ ಇಲ್ಲ. ಮುಂಚಿನಷ್ಟು ಖಾಲಿ ಕೈಯೂ ಇಲ್ಲ. ಸಂಜೆ ಸಿನಿಮಾಕ್ಕೆ ಹೋಗುತ್ತೇವೆ ಎಂದು ದೃಢವಾಗಿ ಹೇಳುವಷ್ಟು ಧೈರ್ಯ ಕಲಿತಿದ್ದಾರೆ. ಗಂಡಸರು ಗದರಿದರೆ, 'ಅದೇನು ಒಂದು ಸಿನಿಮಾ ನೋಡಲು ನಾಲಾಯಕಾದೆವೇ? ಒಳ್ಳೇ ಕತೆ! ನೀವು ಹೇಳಿದಂತೆ ಕೇಳುತ್ತಾ ಕೂತರೆ ಹೇಗೂ ಕುಣೀಸೀರಿ!'- ಎಂದು ತುರುಬಿಗೆ ಮುಳ್ಳು ಕುತ್ತುತ್ತಾ ಉತ್ತರ ಕೊಡಲು ತಯಾರಾಗಿದ್ದಾರೆ. ದುಡ್ಡು? ಪೂರಾ ಸತ್ಯಂಭಟ್ಟರಾದರೆ ಸತ್ತು ನಿಗುರಿ ಹೋದೇವು ಎನ್ನುತ್ತಾ ಮೂರು ಜನ ಹೊರಟರೆ ನಾಲ್ಕು ಜನ ಹೋಗುತ್ತೇವೆಂದು ಜಾಸ್ತಿ ವಸೂಲಿ ಮಾಡುವುದನ್ನು ಮತ್ತು ಹೆಚ್ಚಿಗಿರುವುದನ್ನು ಕೂಡಿಟ್ಟು ಮತ್ತೆ ಯಾವತ್ತಾದರೂ ಉಪಯೋಗಿಸುವುದನ್ನು ಕಲಿತಿದ್ದಾರೆ.

ಬದಲಾವಣೆ ಚರಿತ್ರೆಯ ಬರೀ ಭೌತಿಕ ಮುಂಚಲನೆಯಲ್ಲ. ಅದು ಒಂದು ಬೆಲೆ-ಮೌಲ್ಯಗಳ ಅಪಮೌಲ್ಯೀಕರಣ-ತೆತ್ತೇ ಸಾಕಾರಗೊಳ್ಳುವುದೆಂಬ ನಿಷ್ಠುರ ಸತ್ಯವನ್ನು ಹೇಳುವ ಲೋಕಾಭಿರಾಮ ರೀತಿಯೂ ಈ ಕಥೆಯ ಶಕ್ತಿ-ಸೌಂದರ್ಯಗಳೆರಡನ್ನೂ ಹೆಚ್ಚಿಸಿದೆ. ಇದಕ್ಕಿಂತ ಮುಖ್ಯವಾಗಿ ಈ ಕಥೆಗೊಂದು ಮುನ್ನೆಲೆ ಒದಗಿಸಿರುವ ಕಥೆಗಾರಿಕೆಯ ಕಸುಬುದಾರಿಕೆ ಹೆಚ್ಚು ಗಮನಾರ್ಹವಾಗಿದೆ. ಊರಿನ ಆ ಹಳೆಯ ಬಯಲು, ಅಲ್ಲಿನ ಧೂಪದ ಮರ, ಅಲ್ಲಿ ಸಂಜೆಗೆ ಗಂಡಸರು ಮಾತ್ರ ನೆರೆದು ವರ್ತಮಾನಕ್ಕೆ ಸಲ್ಲದ ಮಾತುಕತೆ ನಡೆಸುತ್ತಿದ್ದು, ಮುಖ್ಯವಾಗಿ ಶಾಲೆಯ ಮಾಸ್ತರನೊಬ್ಬ ಒಬ್ಬ ಹುಡುಗಿಯನ್ನು ಹಾಳು ಮಾಡಲು ಯತ್ನಿಸಿದ ಕಥೆಯನ್ನು ಎಷ್ಟೋ ಕಾಲ ಚರ್ಚಿಸಿದ್ದು, ಹೆಂಗಸರೋ ಬಾಗಿಲಾಚೆಗೆ ಹೋಗದೆ ಬಸುರಿ, ಬಾಣಂತಿ, ಮುಟ್ಟು ಚಟ್ಟು, ಊಟ ತಿಂಡಿಗಳ ಸಿದ್ದತೆಗಳಲ್ಲೇ ಬಂಧಿತರಾಗಿ ಜಿಡುಗಡೆಗಾಗಿ ಮೂಲೆಯೊಂದರಲ್ಲಿ ಕಣ್ಣೀರು ಹಾಕುತ್ತಲೋ ಅಥವಾ ತಾಳತಟ್ಟುತ್ತಾ ಭಜನೆ ಮಾಡುತ್ತಲೋ ಕಾಲ ಕಳೆಯುತ್ತಾ ಒಂದು ರೀತಿಯಲ್ಲಿ ಬಾಯಿಪಾಠ ಹೇಳಿಕೊಟ್ಟಂತೆ ಶಾಂತವಾಗಿದ್ದ, ನಿಯತ್ತಿನಂತೆ ಇದ್ದ ಊರು ತುಸುವಾದರೂ ಅದುರಿದ್ದು ಮತ್ತು ಹೆಂಗಳೆಯರು ಸ್ವಂತ ಕಾಲುಗಳಿಂದ ಹೆಜ್ಜೆ ಇಡಲಾರಂಭಿಸಿದ್ದು-

> ಅಷ್ಟರವರೆಗೆ ಮುತ್ತಜ್ಜನಂತೆ ದೊಡ್ಡಕ್ಕೆ ಹರಡಿಕೊಂಡು ನಿಂತಿದ್ದ ಧೂಪದ ಮರಕ್ಕೆ ರಪರಪನೆ ಪೆಟ್ಟು ಬಿದ್ದಾಗ ಜನ ಇಲ್ಲೇನೋ ನಡೆಯುತ್ತಿದೆ ಎಂದು ಎದ್ದು ಬಂತು. ಏನು ಎಂದು ಕೇಳಿದಾಗ ಅಲ್ಲಿ ಟಾಕೀಸು ಆಗುತ್ತದೆ ಅಂತಾಯಿತು; ಕಟ್ಟಿಸುವುದು ಯಾರೆಂದರೆ ಚಂದ್ರಪ್ಪ. ಬಹಳ ವರ್ಷಗಳ ಹಿಂದೆ ಬೊಂಬಾಯಿಗೆ ಓಡಿಹೋದ ಗುಲಾಬಿ ಎಂಬುವವಳ ದತ್ತುಮಗ. ಈ ಗುಲಾಬಿಯನ್ನು ಊರಿನ ಮೋಹ ಪ್ರತಿವರ್ಷವೂ ಎಳೆದು ತರುತ್ತಿತ್ತು. ಮೋರೆ ಬೇರೆ, ಮೈ ಬೇರೆ

**ಕಾಣುವಂತೆ ಪೌಡರು ಬಳಿದುಕೊಂಡು, ಗುಂಗುರುಗಳನ್ನೆಲ್ಲ ಹಣೆಯ ಮೇಲೆ ಪಸರಿಸಿಕೊಂಡು ಒಮ್ಮೆ ಕೈಬೀಸಿ ಊರೆಲ್ಲ ತಿರುಗುತ್ತಾ ಮತ್ತೆ ಬೊಂಬಾಯಿಗೆ ಮರಳುತ್ತಿದ್ದ ಆಕೆಗೆ ಊರು ಮನೆಯಲ್ಲಿ ತನ್ನದೊಂದು ಸೇವೆ ನಡೆಯಬೇಕೆಂದು ಆಸೆಯುಂಟಾಯಿತು. ಅದರ ಫಲ ಈ ಟಾಕೀಸು.**

ಈ ಪ್ಯಾರಾ ನಾವು ಇವೊತ್ತು ಯಾವುದನ್ನು ಆಧುನಿಕತೆ ಎಂದು ಕರೆಯುತ್ತೇವೋ ಅದರ ಮೂಲವನ್ನೂ, ಆಗಮನವನ್ನೂ ಪ್ರತಿ ಶಬ್ದದಲ್ಲೂ, ಪ್ರತಿ ಮಾಹಿತಿಯಲ್ಲೂ, ಪ್ರತಿ ವರ್ಣನೆಯಲ್ಲೂ ಗುರುತಿಸುವ, ವಿವರಿಸುವ ರೀತಿ ಮುಂದೆ ಕಥೆಗೆ ಒಂದು ಅರ್ಥ ಸಾಂದ್ರತೆಯನ್ನು ಒದಗಿಸುತ್ತಾ ಹೋಗುತ್ತದೆ; 'ಆಧುನಿಕತೆ' ಎಂಬ ಶಬ್ದವನ್ನು ಎಲ್ಲೂ ಬಳಸದೆ, ಆದರೆ ಅದರ ಮೋಹಕ ನೃತ್ಯಕ್ಕೆ ವೇದಿಕೆಯಾಗುತ್ತಾ. ಕನ್ನಡದಲ್ಲಿ ಪರಿವರ್ತನೆಯ, ಆಧುನಿಕತೆಯ ಆಗಮನ ಕುರಿತ ಅನೇಕ ಕಥೆಗಳು ಬಂದಿವೆ. ಅದರಲ್ಲಿ ಹೆಚ್ಚಿನವು ಗಂಡಸರು ಬರೆದಿದ್ದಕ್ಕೋ ಏನೋ, ಅವುಗಳಲ್ಲಿ ಬಹುಪಾಲು ವಿಶೇಷವಾಗಿ ಹೆಣ್ಣಿನ ಪಾಲಿಗೆ–ದುರಂತದಲ್ಲೇ ಕೊನೆಗೊಳ್ಳುತ್ತವೆ. ಆದರೆ ಈ ಕಥೆ ಅಪರೂಪಕ್ಕೆಂಬಂತೆ ಆಧುನಿಕತೆಯನ್ನು ತನ್ನ ಮಿತಿಯಲ್ಲೇ ಕಣ್ಣಲ್ಲಿ ಕಣ್ಣಿಟ್ಟು ನೋಡಿ ಅದಕ್ಕೆ ಕಣ್ಣು ಹೊಡೆಯುತ್ತದೆ! ಆದರೂ ಕೊನೆಯಲ್ಲಿ ಒಂದು ಮಾತು ಹೇಳಬೇಕು. ಈ ಕಥೆ ಅಲ್ಲಲ್ಲಿ ನೆನಪಿಸುವ ಪೂರ್ಣಚಂದ್ರ ತೇಜಸ್ವಿಯವರ ಇದೇ ಹಾದಿಯ ಕಥೆ 'ತುಕ್ಕೋಜಿ'ಯಂತೆ ಆಧುನಿಕತೆಯನ್ನು ಅದರ ಬುಡ ಅಲ್ಲಾಡಿಸುವ ಅದರ ದಾರ್ಶನಿಕ ನೆಲೆಯಲ್ಲಿ ಎದುರಾಗುವುದಿಲ್ಲ. ಇದಕ್ಕೆ ಬಹುಶಃ ಕಾರಣ ಇದು ಸ್ತ್ರೀದೃಷ್ಟಿಗೇ ಸೀಮಿತವಾದ ನೋಟದ ಕಥೆಯಾಗಿರುವುದೇ ಇರಬಹುದು. ಆದರೆ ಇದೇನೂ ಈ ಕಥೆಯ ಸತ್ಯವನ್ನಾಗಲೀ, ಮಹತ್ವವನ್ನಾಗಲೀ ಕಿಂಚಿತ್ತೂ ಮುಕ್ಕಾಗಿಸಿಲ್ಲ. ಲೋಹಿಯಾ ಹೇಳಿದ ತನ್ನ ಮಿತಿಗಳಲ್ಲೇ ಪರಿಪೂರ್ಣವಾದ ಸೌಂದರ್ಯ ಎಂದರೆ–ಶ್ರೀರಾಮನಂತೆ, ಗಾಂಧಿಯಂತೆ–ಇದೇ ಇರಬೇಕು!

'ಸೌಗಂಧಿಯ ಸ್ವಗತಗಳು' 'ಗುಲಾಬಿ ಟಾಕೀಸು...' ಕಥೆಯ ಮುಂದುವರಿಕೆಯೇ ಎಂದು ಹೇಳಬೇಕು. ಆದರೆ ಗುಲಾಬಿ ಟಾಕೀಸಿನ ಊರಿನ ಸ್ತ್ರೀ ಒಂದು ಸಮೂಹದ ಸದಸ್ಯೆಯಾಗಿ ಹೊರನೋಟಕ್ಕೆ ಬಿಡುಗಡೆ ಹೊಂದಿರುವವಳಾದರೂ ವೈಯಕ್ತಿಕವಾಗಿ ಅವಳ ಅಂತರಂಗದ ಭಾವನೆಗಳ ನೆಲೆಯಲ್ಲಿ ಸಾಮಾಜಿಕ ತಡೆಗೋಡೆಗಳ ಮಧ್ಯೆ ಇನ್ನೂ ಬಂಧಿತಳಾಗಿರುವ ಚಿತ್ರ ನೀಡುವ ಬಹು ಸೂಕ್ಷ್ಮ ಹೆಣಿಗೆಯ–ಆದರೆ ಕೊನೆಯಲ್ಲಿ ಆ ಹೆಣಿಗೆಯ ಸೂಕ್ಷ್ಮತೆಗೆ ಕಥೆಗಾರ್ತಿಯೇ ಬಲಿಯಾಗಿರುವಂತೆ ತೋರುವ–ಕಥೆ. ಹಾಗೆ ನೋಡಿದರೆ ಇದು ವೈದೇಹಿಯವರ ಮಟ್ಟಿಗೆ ಮಹತ್ವಾಕಾಂಕ್ಷೆಯದ್ದು ಅನ್ನಿಸುವಂಥ ಕಥೆ. ಇಲ್ಲಿನ ಸೌಗಂಧಿ ಆಧುನಿಕ ಸಂವೇದನೆಯಿಂದ ದಿಟ್ಟಳಾಗಿದ್ದಾಳಾದರೂ ಆ ದಿಟ್ಟತನದ ಸಾಮಾಜಿಕ ವಿಸ್ತರಣೆಯ ಬಾಗಿಲುಗಳು ಕಾಣದೇ ಅಸಹಾಯಕಳಾಗಿ ಪ್ರೀತಿಯ ನೆಪದಲ್ಲಿ, ರಕ್ಷಣೆಯ ಹೆಸರಿನಲ್ಲಿ ಸಾಮಾಜಿಕವಾಗಿ ಬಂಧಿತಳಾಗಿ ವಿಲವಿಲನೇ ಒದ್ದಾಡುತ್ತಿರುವವಳು. ವ್ಯಭಿಚಾರಿ ಭಾವನೆಗಳಿಗೂ ಒಳಗಾಗಿ ತಲ್ಲಣಿಸುವವಳು. ಹಾಗಾಗಿಯೇ ಈ ಕಥೆಯ

ಶಾಖೆಗಳು ಸಮಾಜದ ಅಂಚುಗಳನ್ನು ತಾಕುವಷ್ಟು ಹರಡಿಕೊಂಡಿದ್ದರೂ ಬೀಜ ಮಾತ್ರ ಅಂತರಂಗದ ಗುಡಿಯಲ್ಲೇ ಮೊಳೆಯುತ್ತಾ ತನ್ನದೇ ಕಲ್ಪನಾ ಲೋಕವನ್ನು ಸೃಷ್ಟಿಸಿಕೊಂಡು ಶಾಖೆಗಳಿಗೆ ಚೈತನ್ಯ ರವಾನಿಸದಾಗಿದೆ.

ಮಧ್ಯಮ ವರ್ಗದ ಹೆಣ್ಣು ಮಗಳೊಬ್ಬಳ ಅಂತರಂಗದಲ್ಲಿ ನಡೆಯುವ ಅರ್ಧ ಬಿಡುಗಡೆಯ ಸಂಕಟದ ನಾಟ್ಯೀಕರಣವಿದು. ಅರ್ಧ ಬಿಡುಗಡೆಯ ಈ ಸಂಕಟ ಅವಳದ್ದು ಮಾತ್ರವಲ್ಲ, ಅವಳನ್ನು ಹುಟ್ಟಿಸಿ ಸಲಹುತ್ತಿರುವ ಆಕೆಯ ಕುಟುಂಬದ್ದೂ, ಅದರ ಸಹವರ್ತಿಯಾದ ಸಮಾಜದ್ದೂ ಆಗಿ ಇಲ್ಲಿ ನಿರೂಪಿತವಾಗಿರುವ ರೀತಿ ಕಥೆಯನ್ನು ಮದುವೆಯಾಗದೆ ಉಳಿದುಹೋದ ಹುಡುಗಿಯೊಬ್ಬಳ ಪೋಲಿ ಆಲೋಚನೆಗಳ ಕಥೆಯಾಗಬಹುದಾದ ಸಾಧ್ಯತೆಯೊಂದರಿಂದ ಮೇಲೆತ್ತಿದೆ. ಆ ಮೂಲಕ ಈ ಸೌಗಂಧಿಯ ಸ್ವಗತಗಳಿಗೆ ಪೋಲಿಗಳೂ ಸೇರಿದಂತೆ ಎಲ್ಲರ ಆರ್ದ್ರ ಸಹಾನುಭೂತಿಯ ಸ್ಪಂದನಕ್ಕೆ ಪಾತ್ರ ಮಾಡುತ್ತದೆ. ಏಕೆಂದರೆ, ಸೌಗಂಧಿಯರು ನಮ್ಮ ಮನೆಗಳಲ್ಲಿ, ನಮ್ಮ ಸುತ್ತಮುತ್ತಲೇ ಎಷ್ಟು ಜನ ಇಲ್ಲ? ಹಾಗಾಗಿಯೇ ಅವಳ ಖಾಸಗಿ ಭಾವನೆಗಳು ಇಲ್ಲಿನ ಆವರಣದಲ್ಲಿ ಅನೈತಿಕವೆನಿಸುವುದಿಲ್ಲ. ಹಾಗೆನಿಸಿದರೆ ಸಮಾಜವೇ ಅನೈತಿಕವೆನಿಸಿಕೊಳ್ಳಬೇಕಾಗುತ್ತದೆ.

ಸೌಗಂಧಿ ಸುಂದರಿಯೇ ಹೌದು. ಆದರೆ ಅವರಮ್ಮನ ಪ್ರಕಾರವೇ ಅವಳಿಗೆ ಹುಡುಗರನ್ನು ಕಣ್ಣಲ್ಲೇ ಕೆಡುವುವ ಛಾತಿಯಿಲ್ಲದ ಕಾರಣದಿಂದ ಮದುವೆಯಾಗದೆ ಉಳಿದಿದ್ದಾಳೆ! ಹಾಗಾದರೆ ತಾನು ಏನು ತಾನೆ ಮಾಡಬೇಕಿತ್ತು ಎಂದು ಸೌಗಂಧಿ ಯೋಚಿಸಿ ತಳಮಳಗೊಳ್ಳುತ್ತಾಳೆ. ಇದಕ್ಕೆ ಅವರ ಅಪ್ಪನ ಪ್ರತಿಕ್ರಿಯೆ: 'ಯಾರನ್ನಾದರೂ ಪ್ರೀತಿ-ಗೀತಿ ಮಾಡು... ಜಾತಿ-ಗೀತಿ ಕೆಲಸ ನೋಡಿಕೊಂಡು, ಕೇಳಿದವರು ಹೌದೇ ಎಂದು ಸೈಗುಟ್ಟಬೇಕು, ಅಂತವನನ್ನು. ರಾಜಾರೋಷವಾಗಿ ಮನೆ ಮುಂದೆ ಚಪ್ಪರ ಹಾಕಿ...' ಇದೆಲ್ಲ ನೈತಿಕವಾದರೆ ಸೌಗಂಧಿಯ ಖಾಸಗಿ ಭಾವನೆಗಳೂ ನೈತಿಕವೇ ಅಲ್ಲವೇ? ಹಾಗಾಗಿಯೇ ಅವಳಿಗೆ ಅಪ್ಪನನ್ನು ಚೀರಿ ಕೇಳಬೇಕೆನಿಸುತ್ತದೆ: 'ಅಪ್ಪಾ, ಪ್ರೀತಿ ಎಂದರೆ ಮೊದಲು ಏನು ಹೇಳಿ.'

ಸೌಗಂಧಿಯಾದರೂ ಏನು ಮಾಡಿಯಾಳು? ಅವಳೆಲ್ಲಿಗೆ ಹೋದರೂ, ಎತ್ತ ಹೆಜ್ಜೆ ಇಟ್ಟರೂ ಎದುರಿಗೆ 'ರಕ್ಷಣೆ'ಯ ಅಡ್ಡಗೋಡೆಗಳೇ. ರಕ್ಷಣೆ ಬೇಕೆಂದು ಕೇಳಿದವರಾದರೂ ಯಾರು? ಅವಳು ಕೆಲಸಕ್ಕಾಗಿ ಹೊರ ಊರಿಗೆ ಬಂದು ಅಪ್ಪ ಎಲ್ಲ ಎಚ್ಚರಿಕೆಗಳೊಂದಿಗೆ ಹುಡುಕಿಕೊಟ್ಟ ವಿಧವೆಯೊಬ್ಬರ ಮನೆಯ ಆವರಣದಲ್ಲಿ ವಾಸವಾಗತೊಡಗಿದ್ದಾಳೆ. ಅವರಮ್ಮ ಕಿರಿ ಮಗಳ ಬಾಣಂತನಕ್ಕಾಗಿ ಊರಲ್ಲೇ ಉಳಿದು ಸ್ವಲ್ಪ ಕಾಲದ ನಂತರ ಬರಲಿದ್ದಾಳೆ:

> ...ಸೌಗಂಧಿ ಮಿಂದು ಬಂದು ಮಂಚದ ಮೇಲೆ ಕಾಲು ಚಾಚಿದಳು. ತಾನೀಗ ಏಳು ಕೋಟೆಯ ಆಚಿನ ಅರಮನೆಯಿಂದ ತಪ್ಪಿ ಹಾರಿಬಂದ ಹಕ್ಕಿ. ... ಚಿಲಕ ಸದ್ದಾಯಿತು.

ಪ್ರಥಮ ಬಾರಿಗೆ ತಾನು ಒಬ್ಬಳೇ ಇದ್ದಾಗ ಕೇಳಿದ ಚಿಲಕದ ಸದ್ದು. ಎದೆಯೊಳಗೇ ಇಳಿದು ಡವಗುಟ್ಟಿಸುತ್ತಿದೆಯೇಕೆ? ಮಧುರವಾಗಿ ಕಂಪಿಸುವ ಕೈಯಿಂದ ಚಿಲಕ ತೆಗೆದರೆ–

ಮನೆಯೊಡತಿ!

ಉರಿಯುವ ಬೆಂಕಿಗೆ ನೀರಿನಂತೆ ಎದುರು ನಿಂತಿದ್ದಳು.

'ಮಗೂ, ಎಷ್ಟೊತ್ತಿಗೆ ಬಂದೆ? ಏನಾದರೂ ಬೇಕೆ? ಕೇಳು. ದಾಕ್ಷಿಣ್ಯ ಬೇಡ. ರಾತ್ರಿ ಮಲಗಲು ಬೇಕಾದರೆ ನಮ್ಮ ಅಡಿಗೆ ಹೆಂಗಸನ್ನು ಕಳಿಸುತ್ತೇನೆ'.

'ಬೇಡ, ಬೇಡ'– ಮೊತ್ತ ಮೊದಲಿಗೆಂಬಂತೆ ಒಂದು ಪ್ರತಿರೋಧದ ನುಡಿಯನ್ನಾಡಿದಳು ಸೌಗಂಧಿ. 'ನನಗೆ ಹೆದರಿಕೆ ಇಲ್ಲ. ಒಬ್ಬಳೇ ಇರುತ್ತೇನೆ'.

'ಅಯ್ಯೋ ಅದು ಹೇಗಾಗುತ್ತದೆ? ರಾತ್ರಿ ಒಬ್ಬಳೇ ಇರುವುದೆಂದರೆ! ಏನು ಕುಶಾಲೆ? ನಿನ್ನ ಅಪ್ಪ ಜವಾಬ್ದಾರಿಯನ್ನು ನನ್ನ ತಲೆಗೆ ಹೊರಿಸಿ ಹೋಗಿದ್ದಾರೆ. ತಾಯಿ ಬರುವವರೆಗೆ ನಾನೇ ತಾಯಿ ಅಂತಿಟ್ಟುಕೋ. ಬೇಕಾದರೆ ನಾನೇ ಬಂದು ಮಲಗುತ್ತೇನೆ..... ಆಯಿತೇ?'.–

ಇದೆಲ್ಲ ಬೇಡವೇ ಬೇಡವೆನ್ನಲು ಪರದಾಡಿದಳು ಸೌಗಂಧಿ. ಕಡೆಗೂ–

'ಇಲ್ಲ. ನನಗೆ ಹೆದರಿಕೆ ಇಲ್ಲ. ನೀವು ತೊಂದರೆ ತೆಗೆದುಕೊಳ್ಳುವುದೇ ಬೇಡ' ಎಂದು ಒತ್ತಿಯೊತ್ತಿ ಹೇಳಿದಳು. ನನ್ನನ್ನು ನನ್ನಷ್ಟಕ್ಕೇ ಬಿಡಿ ಎಂದು ಸೀದ ಹೇಳುವುದು ಎಷ್ಟು ಕಷ್ಟ ಈ ಪ್ರಪಂಚದಲ್ಲಿ!

ಆದರೆ ಅವಳಷ್ಟಕ್ಕೇ ಅವಳನ್ನು ಬಿಟ್ಟರೂ ಅವಳೇನು ಮಾಡಬಲ್ಲಳು? ತನ್ನ ಮಧ್ಯಮ ವರ್ಗದ ಪೊರೆಯಿಂದ ಹೊರಬರಬಲ್ಲಳೆ?

ಬೆಳಿಗ್ಗೆ ಹೊರಡುವಾಗ ದಪ್ಪ, ಕೈಮುಗ್ಗದ ಸೀರೆಯನ್ನು ಬೇಕೆಂದೇ ಕೋಣೆಯೊಳಗಿನ ನೇಲೆಯ ಮೇಲೆ ಹರಹುವಳು. ಅಡಗಿಕೊಳ್ಳುವವರಿಗೆ ಒಂದು ಜಾಗ ಕಲ್ಪಿಸುವಂತೆ ಮತ್ತು ತಾನು ಹಾಗೆ ಮಾಡುತ್ತಿರುವುದು ತನಗೂ ಗೋಪ್ಯದ ವಿಷಯವೆಂಬ ಗಪ್‌ಚಿಪ್ಪಿನಲ್ಲಿ.

ಮರ್ಯಾದಸ್ತ ಮನೆಯವಳು ತಾನು. ಮರ್ಯಾದೆ ಬಿಡುವ ತಾಕತ್ತಿಲ್ಲದವಳು. ಯಾರಾದರೂ ತೆಗೆಯಬೇಕಷ್ಟೆ. ತನಗೀಗ ಅನುಭವ ಬೇಕು. ಆವರಣದ ಕಾಪಟ್ಯ ಕಳೆಯಬೇಕು–ಹೇಗೆಂದರೆ ಯಾರೂ ತನ್ನ ಬಗ್ಗೆ ಕೆಟ್ಟದೆಣಿಸದಂತೆ...

ವೈದೇಹಿಯವರ ಈ ಕಥೆ ಮಧ್ಯಮ ವರ್ಗದ ಹೆಣ್ಣೊಬ್ಬಳ ಅಂತರಂಗದ ಹೊಯ್ದಾಟದ ದಿಟ್ಟ ಮತ್ತು ಪ್ರಾಮಾಣಿಕ ಅಭಿವ್ಯಕ್ತಿ ಎನಿಸಿ ಅದರ ಕಟ್ಟೋಣ ಕೂಡ ಆ ಹೊಯ್ದಾಟದ ಪರಿಣಾಮಕಾರಿ ವಿನ್ಯಾಸದಲ್ಲೇ ಮೂಡಿಬಂದು ಬಹು ಒಳ್ಳೆಯ ಕಥೆಯ ಎಲ್ಲ ಲಕ್ಷಣಗಳನ್ನು ಹೊಂದಿದೆಯಾದರೂ, ಈ 'ಮರ್ಯಾದೆ'ಯ ಪ್ರಶ್ನೆ ಈ ಹೊಯ್ದಾಟದ

ಆವರಣದಲ್ಲೇ ಒಂದು ಇತ್ಯರ್ಥಕ್ಕೆ ಬರಲೊಲ್ಲದೇಕೆ ಎಂಬ ಪ್ರಶ್ನೆಯೂ ಇಲ್ಲಿ ಏಳುತ್ತದೆ. ಯೋಚನೆ ಮಾಡಿದಾಗ ಕಥೆಗಾರಿಕೆಗೆ ಸಂಬಂಧಪಟ್ಟಂತೆಯೇ ಒಂದು ದೊಡ್ಡ ಪ್ರಶ್ನೆ ಏಳುತ್ತದೆ: ಕಥೆಯ ರಚನಾತ್ಮಕತೆಗೆ ಅದರ ಓಟದ ಲಯ-ರಭಸಗಳು ರೂಪಿಸುವ ಅದರದ್ದೇ ಆದ ಒಂದು ಸ್ವಾಯತ್ತತೆ ಇದೆಯೇ? ಆ ಸ್ವಾಯತ್ತತೆ ಕೂಡ ಕಥೆಗಾರ/ಗಾರ್ತಿಯ ಕಾಣ್ಕೆಯ ಆತ್ಯಂತಿಕ ಬಲದ ಮಿತಿಯೊಳಗೆ ಮಾತ್ರ ಕ್ರಿಯಾಶೀಲವಾಗಿರ ಬಲ್ಲವಂಥಹುದೇ? ಕಥೆ ಮತ್ತು ಕಥೆಗಾರ್ತಿಯ ತರ್ಕ ಬೇರೆ ಬೇರೆಯಾಗಿ ಇರಲು ಸಾಧ್ಯವೇ? ಈ ಕಥೆಯ ಈ ಮುಕ್ತಾಯ ಈ ಪ್ರಶ್ನೆಗಳ ಮೇಲೆ ಹೆಚ್ಚು ಬೆಳಕು ಚೆಲ್ಲುವಂತಿದೆ:

> **ಯಾರೋ ಬಾಗಿಲು ತಟ್ಟಿದ ಸದ್ದು,**
>
> **ಸೌಗಂಧಿಗೆ ಎಚ್ಚರವಾಗಿ ಎದ್ದು ಕುಳಿತಳು.**
>
> **ಆ ಸದ್ದಿಗಾಗಿ ದಿನವಿಡೀ ಕಾದಿದ್ದಳಲ್ಲವೆ?**
>
> **ಅಂತೂ ತನ್ನ ಮನೆಯ ಬಾಗಿಲೂ ಮುಂಜಾವದ ಮಂಜಿನಲ್ಲಿ ಯಾರದೋ ಬರ ತಿಳಿಸುವಂತಾಯಿತು.**
>
> **ಸೌಗಂಧಿ, ಯುಗಯುಗದಿಂದ ಹಸಿದಂತೆ ಆ ಸದ್ದನ್ನು ಆಲಿಸುವ ಆಸೆಯಿಂದ ಮತ್ತೆ ಮಲಗಿದಳು. ಸದ್ದು ಜೋರಾಗುತ್ತಾ ಬಂತು. ಮೆಲ್ಲನೆ ಅವಳ ಹೆಸರನ್ನು ಕರೆದಂತೆ...**
>
> **ಮತ್ತೆ ಎದ್ದು ಕುಳಿತಳು ಸೌಗಂಧಿ. ಯಾರಿರಬಹುದು? ಕಂಪನವನ್ನೇ ಮರೆತು ಯಂತ್ರದಂತಾಗಿದ್ದ ಎದೆಯಲ್ಲಿ ಈಗ ರಕ್ತ ಸಂಚಾರ ದ್ವಿಗುಣವಾದಂತೆ... ಸೌಗಂಧಿ ತೊದಲಿದಳು. 'ಯಾರು?'**
>
> **-ಅಮಲಿನಲ್ಲಿದ್ದಂತೆ ಮುಂದೆ ಬಂದಳು.**
>
> **ಎಲ್ಲ ಆಕಾಂಕ್ಷೆಗಳನ್ನೂ ಒಟ್ಟುಗೂಡಿಸಿ ಮೃದುವಾಗಿ ಬಾಗಿಲು ತೆರೆದಳು.**
>
> **ಅಲ್ಲಿ-**
>
> **ತಂದೆ ನಿಂತಿದ್ದರು. ಹಿಂದೆ ತಾಯಿ ನಿಂತಿದ್ದಳು!**
>
> **ಸೌಗಂಧಿ ಅಳಲಿಲ್ಲ.**
>
> **ಸೌಗಂಧಿ ನಗಲೂ ಇಲ್ಲ,**
>
> **ಮನೆಯೆದುರಿನ ರಸ್ತೆ ಕಪ್ಪಗೆ ಕತ್ತಲ ವಿಷವೇರಿ ಸತ್ತಂತೆ ನಿಶ್ಚೇಷ್ಟಿತವಾಗಿತ್ತು.**

ಈ ಮುಕ್ತಾಯ ಆನೆಯ ಗರ್ಭಕ್ಕಾಗಿ ಕಾದವರಿಗೆ ಆಡಿನ ಮರಿ ಬಿದ್ದ ಅನುಭವದಂತೆ ತಬ್ಬಿಬ್ಬುಗೊಳಿಸಿದರೆ ಆಶ್ಚರ್ಯವಿಲ್ಲ. ಇದು ನಮ್ಮ ನವೋದಯದ ತೀರಾ ಸಾಧಾರಣ ಕಥೆಯೊಂದರ ಸುಲಭ ಭಾವನಾತ್ಮಕ ತಿರುವಿನ ಜಾಣ ಅಂತ್ಯದಂತೆ ಕಂಡು ಇಡೀ ಕಥೆ ಒಂದು ಹಗಲುಗನಸಿನ ಹುಸಿತನದಲ್ಲಿ ಕಂತಿಹೋದಂತೆನಿಸುತ್ತದೆ. ಕೊನೆಯ ಸಾಲಿನಲ್ಲಿ

ಬರುವ ರಸ್ತೆಯ ವರ್ಣನೆ ಕಥೆಯ ವರ್ಣನೆಯೇ ಆಗಿದ್ದಂತೆ ತೋರುತ್ತದೆ. ನಾನು ಇಲ್ಲಿ ಒತ್ತಿ ಹೇಳಬಯಸುತ್ತೇನೆ: ನನ್ನ ಈ ಮಾತುಗಳು ಕಥೆಯ ಅಂತ್ಯಕ್ಕೆ ಮಾತ್ರ ಸಂಬಂಧಪಟ್ಟಿದ್ದು. ಕಥೆಯ ಸತ್ಯ ಕೊನೆಗೆ ಸುಳ್ಳಾಗಿ ಬಿಡುವ ದುರಂತಕ್ಕೆ ಸಂಬಂಧಪಟ್ಟದ್ದು. ಇದು ವೈದೇಹಿಯವರಂತಹ ಶ್ರೇಷ್ಠ ಕಥಾ ಪ್ರತಿಭೆಯ ಅನಗತ್ಯವಾಗಿ ಆಹ್ವಾನಿಸಿಕೊಂಡ, ಅನಪೇಕ್ಷಣೀಯ ಸೋಲು. ಕಥೆಗಾರ್ತಿಯೇ ಕಥೆಗೆ ಮೋಸ ಮಾಡುವುದೆಂದರೆ? ಅದೆಷ್ಟೇ ಜಾಣತನದಿಂದ ಕೂಡಿದ್ದರೂ! ಕಥೆಯನ್ನು 'ಸ್ವಗತಗಳು' ಎಂದು ಕರೆದಿದ್ದೇನೆ ಎಂದು ಕಥೆಗಾರ್ತಿ ಹೇಳಿದರೂ!! ಏಕೆಂದರೆ ಕಥೆಯ ಒಟ್ಟು ಓಘ ಹಾಗಿಲ್ಲ. ಅಥವಾ ಇದನ್ನು ಹೀಗೂ ಹೇಳಬಹುದು: ಕಥೆಗಾರ್ತಿಯ ಆಶಯ ಮತ್ತು ಆಕೃತಿಗಳ ನಡುವೆ ಬಿರುಕುಂಟಾಗಿದೆ. ಕಥೆಯನ್ನು ಸ್ವಗತದಂತೆಯೇ ಓದುಗರು ಅರ್ಥ ಮಾಡಿಕೊಳ್ಳಬೇಕಿದ್ದರೆ ಸ್ವಗತದ ಹೊರಗೆ ನಡೆಯುವ ಇತರೆಲ್ಲ ಘಟನೆಗಳೂ ಸ್ವಗತದ ನಿರೂಪಣೆಯ ಭಾಗವಾಗಿಯೇ ಬರಬೇಕಿತ್ತು.

ಇಲ್ಲಿ ನಾನು ಸೌಗಂಧಿಯ ಕನಸನ್ನು ನನಸು ಮಾಡುವ ರೀತಿ ಕಥೆಯನ್ನು ಮುಕ್ತಾಯಗೊಳಿಸಬೇಕೆಂದು ಖಂಡಿತ ಹೇಳುತ್ತಿಲ್ಲ. ಅದು ಕಥೆಯ ಹೊರಗೆ ನಿಂತು ಪಡುವ ರೂಕ್ಷ ಅಪೇಕ್ಷೆಯಾದೀತು. ಕಥೆಯ ಅಂತ್ಯ ಹೀಗಾಗಲು ಕಥೆಯಲ್ಲಿ ಕಾರಣವಿಲ್ಲ ಎಂಬ ಕಥಾ ಮೀಮಾಂಸೆಯ ಮಾತನ್ನಷ್ಟೇ ನಾನು ಇಲ್ಲಿ ಹೇಳುತ್ತಿರುವುದು. ಇದು ವೈದೇಹಿಯವರಂತಹ ಪ್ರತಿಭಾನ್ವಿತ ಕಥೆಗಾರ್ತಿ ಇಂತಹ ದಿಟ್ಟ ಕಥನಕ್ಕೆ ಕೈಹಾಕಿ ಕಥೆಯ ಹೊರಗಿನ ಕಾರಣದಿಂದಾಗಿ ಹಿಂದೆಗೆದಂತೆ–ಆಹಾರದ ತುಂಡೊಂದನ್ನು ಸವಾಲಿನ ರೀತಿ ಬಾಯಿಗೆ ಹಾಕಿಕೊಂಡು ಅಗಿದು ಚಪ್ಪರಿಸಿಯಾದ ಮೇಲೆ ನುಂಗಲಾಗದೆ ನೋಡುವವರ ಕಣ್ತಪ್ಪಿಸಿ ಯಾವುದೋ ಮಾಯಕದಲ್ಲಿ ಉಗುಳಲೆತ್ನಿಸುವಂತೆ–ಕಾಣುವ ಈ ದೃಶ್ಯ ಅವರ ಕಥೆಗಾರಿಕೆಯ ಸಮಗ್ರತೆಯ ಬಗ್ಗೆ ನಂಬಿಕೆ ಇಟ್ಟು ಓದುವವರಿಗೆ ಅನಪೇಕ್ಷಣೀಯವಾದದ್ದು. ಇದು ಈ ಹಿಂದೆ ಉಲ್ಲೇಖಿಸಿದ ತನ್ನ ಮಿತಿಗಳಲ್ಲೇ ಪರಿಪೂರ್ಣವಾಗುವ ಸೌಂದರ್ಯಕ್ಕೆ ಸಂವಾದಿಯಾಗಿ ಲೋಹಿಯಾ ಅವರೇ ಪ್ರಸ್ತಾಪಿಸುವ ಶ್ರೀಕೃಷ್ಣನಂತಹ (ಮಿತಿಗಳಿಲ್ಲದ) ಸಮೃದ್ಧ ಸೌಂದರ್ಯ ಸೃಷ್ಟಿಯ ಅಸಮಗ್ರ ಪ್ರಯತ್ನವಾಗಿ ಕಾಣುತ್ತದೆ; ಕಾಡುತ್ತದೆ. ಈ ದೃಷ್ಟಿಯಿಂದ ವೀಣಾ ಯಲಬುರ್ಗಿ (ಶಾಂತೇಶ್ವರ) ಅವರ ಇದೇ ತರಂಗಾಂತರದ ಕಥೆಗಳ ಸ್ವಯಂಪೂರ್ಣತೆಯ ಸಾರ್ಥಕತೆಯ ನೆನಪೂ ಇಲ್ಲಿ ಆಗದಿರದು.

ಕೊನೆಯದಾಗಿ 'ದಾಳಿ' ಎಂಬ ನನಗಿಷ್ಟವಾದ ಇನ್ನೊಂದು ಕಥೆಯ ಬಗ್ಗೆ ಒಂದೆರಡು ಮಾತುಗಳು. ಯು.ಆರ್. ಅನಂತಮೂರ್ತಿಯವರ 'ಮೌನಿ' ಕಥೆಯಿಂದ ಸ್ಫೂರ್ತಿ ಪಡೆದಂತೆ ತೋರುವ ತನ್ನ ತಣ್ಣನೆಯ ನಗೆಯಿಂದಲೇ ಕಂಡಕ್ಟರನ ಆರ್ಭಟವನ್ನು ತಣ್ಣಗಾಗಿಸಿ ಅವನು ಸೋತು ಓಡಿಹೋಗುವಂತೆ ಮಾಡುವ ಈ ಕಥೆಯ ನಾಯಕಿ ವೈದೇಹಿಯವರ ತಣ್ಣತಣ್ಣಗೆ ಕೂಡ ಕಥೆ ಹೇಳಬಲ್ಲ ಕಥನಪ್ರತಿಭೆಗೆ ಸಾಕ್ಷಿಯಂತಿದೆ– ಓದುಗರಲ್ಲಿ ಈ ಕಥೆಯ ನಾಯಕಿ ಆ 'ನಗೆ ಲಾಡಿ'ಯನ್ನೊಮ್ಮೆ ಕಣ್ಣಾರೆ ನೋಡಿ

ಕಣ್ತುಂಬಿಕೊಳ್ಳುವ ಕಾತುರವನ್ನುಂಟುಮಾಡುವಷ್ಟು ಪರಿಣಾಮಕಾರಿಯಾಗಿ! ಹಾಗಾಗಿ ಈ ಕಥೆ 'ಮೌನಿ'ಯಿಂದ ಸ್ಫೂರ್ತಿ ಪಡೆದಂತೆ ಕಂಡರೂ ಇದರ ಚಾಲೂ-ಚಹರೆಗಳು ಬೇರೆಯೇ ಆಗಿ ಕಥೆಯ ಚೆಲುವು ತನ್ನದೇ ವಿಶಿಷ್ಟತೆಯನ್ನು ಪಡೆದಿದೆ.

ಇಷ್ಟೂ ನನ್ನ ಮಿತಿಯ ಓದಿನಲಿ ವೈದೇಹಿಯವರ ನನ್ನ ಮೆಚ್ಚಿನ ನಾಲ್ಕಾರು ಕಥೆಗಳ ಬಗೆಗಿನ ನನ್ನ ಜಿಜ್ಞಾಸೆ. ಈ ಜಿಜ್ಞಾಸೆ ಸಣ್ಣ ಕಥೆಗಳನ್ನು ಕುರಿತ ಮೀಮಾಂಸೆಯನ್ನೂ ನಾನೊಮ್ಮೆ ಒಳಹೊಕ್ಕು ನೋಡಲು ಕಾರಣವಾಗಿದೆ. ಇದಕ್ಕಾಗಿ ವೈದೇಹಿಯವರಿಗೂ, ಸವಿತಾಗೂ ನಾನು ಕೃತಜ್ಞನಾಗಿದ್ದೇನೆ.

ಇನ್ನು ಈ ಮೀಮಾಂಸಾತ್ಮಕ ಜಿಜ್ಞಾಸೆಯ ಹೊರತಾಗಿಯೂ ಹೇಳಬಹುದಾದ ಕೆಲವು ಮಾತುಗಳೆಂದರೆ, ಕಥೆ ಹೇಳಲು ವೈದೇಹಿಯವರು ತಮ್ಮ ಅನುಭವವನ್ನು ಭಾಷೆಯಲ್ಲಿ ಸಾಕಾರಗೊಳಿಸಲೋಸ್ಕರ ತಮ್ಮದೇ ಎನ್ನಬಹುದಾದ, ತಮ್ಮದೇ ಸ್ತ್ರೀಲೋಕ ದೃಷ್ಟಿಯನ್ನು ತಾನಾಗಿ ತೆರೆಯಬಲ್ಲ ವಿವಿಧ ವಿನ್ಯಾಸಗಳಲ್ಲಿ ಬಾಗಿ ಬಳುಕುವಂತಹ ಚುರುಕಾದ ಭಾಷಾ ಶೈಲಿಯನ್ನು ರೂಢಿಸಿಕೊಂಡಿರುವಲ್ಲಿನ ಕಥೆಗಾರಿಕೆಯ ಗಮ್ಮತ್ತು ಗಮನಾರ್ಹವಾದದ್ದು. ಕೆಲವು ನಿರ್ದಿಷ್ಟ ರೀತಿಯ ಕಥೆಗಳ ಪರಿಣಾಮದ ಸಾಂದ್ರತೆಗೆ ಅಗತ್ಯವಾದ ಕುಂದಾಪುರದ ಕನ್ನಡದ ಶಬ್ದ ಸಂಪತ್ತು ಮತ್ತು ನುಡಿಗಟ್ಟುಗಳನ್ನು ಬಳಸುವ ಚಾಕಚಕ್ಯತೆಯೂ ಈ ಗಮ್ಮತ್ತಿನ ಭಾಗವೇ! ಜೊತೆಗೆ ಕಥೆ ಹದವಾಗಿ ಬಿಚ್ಚಿಕೊಂಡು ತನ್ನ ಆಳದ ಎಲ್ಲ ಅರ್ಥಗಳನ್ನೂ ಹೇಳಲು ಬೇಕಾದ ಘಟನಾ ವಿನ್ಯಾಸದ ಹಿಂದಿನ ಕಲ್ಪನಾಶೀಲತೆ ಓರ್ವ ಹುಟ್ಟು ಕಥೆಗಾರ್ತಿಯ ಲಕ್ಷಣವಾಗಿ ವೈದೇಹಿಯವರ ಕಥೆಗಳಲ್ಲಿ ತಾನೇ ತಾನಾಗಿ ಕಂಗೊಳಿಸುತ್ತದೆ. ಹಾಗಾಗಿಯೇ ಇಲ್ಲಿನ ಹೆಚ್ಚಿನ ಕಥೆಗಳಲ್ಲಿ ಪುರುಷರ ಉಸಾಬರಿ ಹೆಚ್ಚಿಗಿಲ್ಲದ ದೋಷವು ದೋಷವಾಗಿ ಕಾಣದೆ ವೈದೇಹಿಯವರ ಸ್ತ್ರೀವಾದವು(ಅದನ್ನು ಹಾಗೆಂದು ಕರೆಯಲೇಬೇಕಾದರೆ!) ಸ್ವಯಂ ಮರುಕ ಅಥವಾ ಮೋಸಹೋದ ಹಾಹಾಕಾರಗಳಿಂದ ಪ್ರೇರಿತವಾದ ಯಾವುದೇ ರಿಯಾಯಿತಿಗಳನ್ನು ಬೇಡದೆ, ಆವೃತ ದೃಷ್ಟಿಯಿಂದ ಪ್ರಫುಲ್ಲಿತವಾದ ಆತ್ಮಾವಲೋಕನದೊಂದಿಗೆ ಹದವಾಗಿ ಬೆರೆತ ತನ್ನದೇ ಆತ್ಮವಿಶ್ವಾಸದೊಂದಿಗೆ ತನ್ನದೇ ಹಾದಿ ಹಿಡಿದು ಪುರುಷರನ್ನು ಹದವಾಗಿ ಪಳಗಿಸಬಲ್ಲ ಸಹಜ ಸಿದ್ಧಿಯಾಗಿ ರೂಪುಗೊಂಡಿದೆ. ಹೇಗೂ 'ಹದ'ವೆಂಬುದು ವೈದೇಹಿಯವರ ಹದವನ್ನು ನಿರ್ಧರಿಸಿರುವ ಹದವಾದ ಶಬ್ದವಲ್ಲವೇ?



# 75ರ ನೆಪದಲ್ಲಿ ವೈದೇಹಿಗೆ ಒಂದು ಪತ್ರ

✦ ಕೆ ವಿ ತಿರುಮಲೇಶ್

ಪ್ರಿಯ ವೈದೇಹಿ,

ನಿಮ್ಮ 75ನೆಯ ಜನ್ಮದಿನವನ್ನು ನೆಪವಾಗಿಟ್ಟುಕೊಂಡು ಈ ಪತ್ರಲೇಖನ ಬರೆಯುತ್ತಿದ್ದೇನೆ. ನಿಮ್ಮ ಕಥೆಗಳನ್ನು ಒಬ್ಬ ಲೇಖಕ ಇನ್ನೊಬ್ಬ ಲೇಖಕ ಅಥವಾ ಲೇಖಕಿಯ ಕೃತಿಗಳನ್ನು ಓದುವ ಸುದೂರದಿಂದ ಓದುತ್ತ ಬಂದವನು ನಾನು. ಒಂದೆರಡು ವರ್ಷಗಳ ಹಿಂದೆ ಉಡುಪಿಯ ಸಾಹಿತ್ಯ ಸಮಾರಂಭವೊಂದರಲ್ಲಿ ನಾವು ಭೇಟಿಯಾದೆವು. ನಿಮ್ಮ ಹೊಸ ಕಥಾಸಂಕಲನದೊಂದಿಗೆ ಇನ್ನಿತರ ಕೆಲವು ಕೃತಿಗಳನ್ನೂ ನನಗೆ ಕೊಟ್ಟಿರಿ. ಅವುಗಳನ್ನೆಲ್ಲ ಊರಿನಲ್ಲಿಯೇ ಓದಿ ನಾನು ನಿಮ್ಮ ಜೊತೆ ಫೋನಿನಲ್ಲಿ ಮಾತಾಡಿರಬೇಕು. ಏನು ಹೇಳಿದೆನೋ ನೆನಪಿಲ್ಲ. ಈಚೆಗೆ ಹೆಗ್ಗೋಡಿನ ಅಕ್ಷರ ಪ್ರಕಾಶನದಿಂದ ನಿಮ್ಮ 'ವೈದೇಹಿ ಕಥೆಗಳು' ಎಂಬ ಇದುವರೆಗಿನ ಎಲ್ಲ ಕತೆಗಳ ಸಂಕಲನ ಪ್ರಕಟವಾಯಿತು (2018). ಕೆ. ವಿ. ಅಕ್ಷರ ನನಗದರ ಒಂದು ಪ್ರತಿಯನ್ನು ಕಳಿಸಿಕೊಟ್ಟಿದ್ದಾರೆ. ಪುಸ್ತಕ ಕೈಸೇರಿದ ತಕ್ಷಣ ಅಬ್ಬಾ! ಎಷ್ಟು ಚಂದವಿದೆ, ವೈದೇಹಿಯವರ ಹಾಗೆಯೇ ಎನಿಸದೆ ಇರಲಿಲ್ಲ; ಒಂದೇ ವ್ಯತ್ಯಾಸವೆಂದರೆ ನೀವು ತೆಳ್ಳಗಿನವರು, ನಿಮ್ಮ ಕತೆಗಳು ಕೂಡ ಏಕದೇಶ ಹಾಗೆಯೇ, ಆದರೆ ಈ ಸಂಪುಟ ಮಾತ್ರ ಬೃಹತ್ತಾದುದು. ಸಣ್ಣ ಫಾಂಟಿನಲ್ಲಿ 800 ಪುಟಗಳು! ಅಂದಿನಿಂದಲೂ ಇದರಲ್ಲಿನ ಕತೆಗಳನ್ನು ಇತರ ಕೆಲಸಗಳ ನಡುವೆ ನಿದನಿಧಾನವಾಗಿ ಓದುತ್ತ ಇದ್ದೇನೆ.

ಹೆಚ್ಚು ವೇಗವಾಗಿ ಓದಬೇಡ, ಹದವಾಗಿ ಓದು ಎನ್ನುವಂತೆ ಪ್ರಕೃತಿಯೇ ನನ್ನ ದೃಷ್ಟಿಯನ್ನೀಗ ಮಂದಗೊಳಿಸಿದೆ ಕೂಡ! (Nec nimis prolixus aut festinus!– 'ಅತಿ ನಿಧಾನವಾಗಿಯೂ ಬೇಡ, ಅತಿ ವೇಗವಾಗಿಯೂ ಬೇಡ' ಎನ್ನುವುದೊಂದು ಪ್ರಸಿದ್ಧ ಲ್ಯಾಟಿನ್ ಮಾತು, ಸಾಹಿತ್ಯದ ಓದಿಗೆ ತಕ್ಕುದಾದ ಮಾತು.)

ಬೃಹತ್ ಎಂದೊಡನೆ ನನಗೆ ನೆನಪಾಗುವುದು ಗುಣಾಢ್ಯನ 'ಬೃಹತ್ಕಥೆ'. ಯಾಕೆಂದರೆ ಕತೆಗಳ ಬೃಹತ್ತಿಗೆ ಅದೊಂದು ಪ್ರಮಾಣ. ನಿಮ್ಮ ಈ ಸಂಕಲನವನ್ನು ಕಂಡೊಡನೆ ನನ್ನ ಮನಸ್ಸಿಗೆ ಬಂದುದು ಅದುವೇ. ಗಗನಂ ಗಗನಾಕಾರಂ ಎಂಬಂತೆ! ಗುಣಾಢ್ಯನ ಆಕಾಶಕ್ಕೆ

ನಿಮ್ಮದೊಂದು ಪ್ರತ್ಯಾಕಾಶ, ಹಾಗೂ ಇದರ ವಿಸ್ತಾರ ಇಲ್ಲಿಗೇ ನಿಲ್ಲುವುದಿಲ್ಲ, ನಿಲ್ಲದಿರಲಿ ಎಂದೂ ಮನಸ್ಸು ಹೇಳುತ್ತದೆ. ನಾನೇನು 'ಬೃಹತ್ಕಥೆ'ಯನ್ನು ಓದಿದ್ದೇನೆಯೇ? ಇಲ್ಲ. ಅಂಥದೊಂದು ಕೃತಿ ಈಗ ಲಭ್ಯವೂ ಇಲ್ಲ; ಆದರೆ ಗುಣಾಢ್ಯನ ನಂತರ ಬಂದ ಕೆಲವು ಅಭಿಜಾತ ಸಂಸ್ಕೃತ ಕವಿ ಕತೆಗಾರರ ಕೃತಿಗಳ ಮುಖಾಂತರ ನಮಗದರ ಒಂದು ದೂರದ ಕಲ್ಪನೆಯಿದೆ. ಆದ್ದರಿಂದ ಜನಜನಿತವಾಗಿದೆ. ಕತೆಗಳ ನಿಜವಾದ ಗುಣವೇ ಜನಜನಿತವಾಗುವುದು ಅಲ್ಲವೇ? ನಿಮ್ಮ ಹಲವಾರು ಕತೆಗಳು ಈಗಾಗಲೇ ಹೀಗೆ ಆಗಿರುವುದರಿಂದ ನಾನೀ ಮಾತು ಹೇಳುತ್ತಿರುವುದು; ಆಗ ಕತೆಗಾರ್ತಿ ಹಿಂದೆ ಸರಿದು ಕತೆಗಳು ಮುಂದೆ ನಿಲ್ಲುತ್ತವೆ.

ಈ ಗುಣಾಢ್ಯನೆಂಬವನು (ಬಹುಶಃ ಕ್ರಿ.ಶ. 6ನೇ ಶತಮಾನ) ಪೈಶಾಚಿಕ ಭಾಷೆಯಲ್ಲಿ ಬರೆವನಂತೆ (ಅಥವಾ ಅವನು ಕೇವಲ ಒರೆದಿರಲೂಬಹುದು). ಎಲ್ಲಾ ಬಿಟ್ಟು ಪೈಶಾಚಿಕ ಭಾಷೆಯಲ್ಲಿ!? ಏನಿದು ಪಿಶಾಚಗಳು ಆಡುವ ಭಾಷೆ? ಖಂಡಿತಾ ಅಲ್ಲ, ಅದೊಂದು ಆ ಕಾಲದ ಪ್ರಾಕೃತ ಭಾಷೆ, ಬಹುಶಃ ಕೆಳಸ್ತರದ ಜನರ ಆಡುಮಾತು, ಮೇಲ್‌ಸ್ತರದವರ ದೃಷ್ಟಿಯಲ್ಲಿ 'ಪೈಶಾಚಿಕ'! ನೀವು ಕೂಡ ಶಿಷ್ಟಶೈಲಿಯಿಂದ ದೂರ ಸರಿದು ಕೋಟ ಉಪಭಾಷೆಗಳಲ್ಲಿ ನಿಮ್ಮ ಅನೇಕ ಕಥಾಪಾತ್ರಗಳನ್ನು ಮಾತಾಡಿಸುವುದನ್ನು ಯಾರೂ ಗಮನಿಸದಿರುವುದು ಸಾಧ್ಯವಿಲ್ಲ. ಮೊದಮೊದಲು ಕೆಲವು ಪದಗಳು, ಪ್ರತ್ಯಯಗಳು, ನುಡಿಗಟ್ಟುಗಳು, ಜಾಡುಗಳು ಅರ್ಥವಾಗದೆ ಇರಬಹುದು, ಆದರೆ ಕ್ರಮೇಣ ಅವು ಆಪ್ಯಾಯಮಾನವಾಗುತ್ತವೆ, ಅವುಗಳನ್ನು ಬಿಟ್ಟರೆ ಪಾತ್ರಗಳೇ ಹೊರಟು ಹೋದಾವು ಎನ್ನುವ ಮಟ್ಟಿಗೆ.

ಪ್ರಿಯ ವೈದೇಹಿ,

ನಿಮ್ಮ ಕತೆಗಳಿಗೆ ಸಾಕಷ್ಟು ಓದುಗರು, ಮಿಗಿಲಾದ ವಿಮರ್ಶಕರು, ಒಳ್ಳೆಯ 'ಪ್ರೆಸ್' ಸಿಕ್ಕಿದೆ. ಯಾರೂ ಎಲ್ಲಿಯೂ ನಿಮ್ಮನ್ನು ಕಡೆಗಣಿಸಿಲ್ಲ. ಇದೊಂದು ಔದಾರ್ಯವೆಂದು ನಾನು ಭಾವಿಸುವುದಿಲ್ಲ, ನಿಮ್ಮ ಕತೆಗಳಿಗೆ ಅವುಗಳ ಅರ್ಹತೆಯ ಮೇಲಿಂದ ದೊರಕಿದ ಮನ್ನಣೆ ಎನ್ನುವುದಕ್ಕೆ ಹೇಳುತ್ತಿದ್ದೇನೆ. ನೀವು ಯಾವುದೇ ಎಕಡೆಮಿಕ್ ಹುದ್ದೆಯಲ್ಲಿ ವೃತ್ತಿಜೀವನ ನಡೆಸಿದವರಲ್ಲ. ಪತ್ರಿಕೋದ್ಯಮದಲ್ಲಾಗಲಿ, ಇತರ ಸಾರ್ವಜನಿಕ ನೌಕರಿಗಳಲ್ಲಾಗಲಿ ತೊಡಗಿಸಿಕೊಂಡವರೂ ಅಲ್ಲ. ನಿಮ್ಮದೇ ವಿದ್ಯಾಭ್ಯಾಸವೂ ಕಾಲೇಜು ಡಿಗ್ರಿಯಿಂದ ಮುಂದೆ ಹೋಗಲಿಲ್ಲ. ಒಬ್ಬ ಗೃಹಿಣಿಯಾಗಿಯೇ ಜೀವಿತದ ಹೆಚ್ಚಿನ ಕಾಲಾವಧಿಯನ್ನೂ ಕಳೆಯುತ್ತ ಬಂದವರು ನೀವು. ತುಂಬು ಕುಟುಂಬ ಜೀವನ, ಸಂಸಾರ ಸಾಗರ. ತೇಲುತ್ತಾ ಮುಳುಗುತ್ತಾ. ಈಗ 75ನೆಯ ವಯಸ್ಸಿಗೆ ಕಾಲಿಡುತ್ತ ಇಂದಿನ ಹೊಸ ಜನಾಂಗಕ್ಕೆ ಮೂರು ತಲೆಮಾರಿನಷ್ಟು ಹಿಂದಿನವರಾಗುತ್ತೀರಿ. ನೀವು ಬರೆಯುವ ಕತೆಗಳು, ಕಥಾವಸ್ತುಗಳು ನಿಮ್ಮದೇ ಬಾಲ್ಯ ಮತ್ತು ಯೌವನದ ಕಾಲಕ್ಕೆ ಸೇರಿದಂಥವು. ಕಥಾಪರಿಸರವೂ ಮುಖ್ಯವಾಗಿ ಕುಂದಾಪುರ ಮತ್ತು ಅದರ ಸುತ್ತಮುತ್ತಲ ಪ್ರದೇಶಗಳಿಗೆ ಸೀಮಿತ. ನೀವು ಚಿತ್ರಿಸುವ ಜನಜೀವನವೂ

ಗ್ರಾಮಾಂತರದ ಮಧ್ಯಮ ಮತ್ತು ಕೆಳವರ್ಗಗಳಿಗೆ ಸೇರಿದಂಥದು. ಇವೆಲ್ಲವೂ ನಿಮ್ಮ ಮಿತಿಗಳೇ? ಶಕ್ತಿಗಳೇ? ಇಂಥ ಪ್ರಶ್ನೆಗಳನ್ನೇ ನಿಮ್ಮ ಕೃತಿಗಳು ಅಪ್ರಸ್ತುತ ಮಾಡುತ್ತವೆ.

ನೀವು ಕಂಡ, ಕೇಳಿದ, ಅನುಭವಿಸಿದ, ಭಾವಿಸಿದ ಜೀವನವನ್ನು ಚಿತ್ರಿಸುತ್ತೀರಿ. ಇದರಿಂದ ಮೊಗೆದಷ್ಟೂ ಮುಗಿಯದ ಕತೆಗಳು ಹುಟ್ಟುತ್ತವೆ. ನಿಮ್ಮದೇ ಪರಿಸರಕ್ಕೆ ಸೇರಿದ ಶಿವರಾಮ ಕಾರಂತರು ಕಾಲಿಗೆ ಚಕ್ರ ಕಟ್ಟಿಕೊಂಡವರಂತೆ ಜಂಗಮರಾಗಿ ದೇಶ ವಿದೇಶ ಸಂಚರಿಸಿ ಬರೆದರು; ಅವರಿಗೆ ಹೋಲಿಸಿದರೆ ನೀವು ಸ್ಥಾವರ. ಆದರೂ ಎಷ್ಟೊಂದು ಕತೆಗಳನ್ನು ಬರೆದಿರಿ, ಇನ್ನೂ ಇದೆ, ಇನ್ನೂ ಇದೆ ಎಂಬಂತೆ. 'I am monarch of all I survey' ಎಂಬ ಸಹಜ ಆತ್ಮವಿಶ್ವಾಸದಲ್ಲಿ! (ಇಂಗ್ಲಿಷ್ ಕವಿಯೊಬ್ಬನು ಆಡಿದ ಮಾತು ಇದು.)

ಇದು ಹೇಗೆ ಸಾಧ್ಯವಾಯಿತು ಎಂದು ನಾವು ಆಶ್ಚರ್ಯಪಡುತ್ತೇವೆ. ಬಹುಶಃ ನೀವು ಕಾಣುವಂತೆ ತೊಡಗಿಸಿಕೊಳ್ಳದಿದ್ದರೂ ಕಾಣದಂತೆ ಅನುಭವಿಸಿದಿರಿ, ಎಂಪತಿ, ಸಿಂಪತಿ, ಟೆಲಿಪತಿ ಎಲ್ಲದರ ಮೂಲಕ. ಕತೆಗೆ ಯಾವುದೂ ಹೊರತಲ್ಲ, ಮೇಲು ಕೀಳೆಂಬುದಿಲ್ಲ, ಯಾರ ಬದುಕೂ ನಿರೂಪಣೆಗೆ ಅನರ್ಹವೂ ಅಲ್ಲ ಎನ್ನುವುದನ್ನು ತೋರಿಸಿದಿರಿ. ಅದರಲ್ಲೂ ಮಾತಿಲ್ಲದವರಿಗೆ ಮಾತುಕೊಡುವುದು, ಅದೃಶ್ಯ ರಾಗಿರುವವರನ್ನು ಬೆಳಕಿಗೆ ತರುವುದು ಸಾಹಿತ್ಯಕ್ಕೆ ಬಹಳ ಮುಖ್ಯ. ನನಗೆ ಅಮೇರಿಕದ ಮಹಾನ್ ಕತೆಗಾರ ವಿಲಿಯಂ ಫಾಕ್ನರ್ ನೆನಪಾಗುತ್ತಾನೆ. ಅವನಿಗೆ ನೊಬೆಲ್ ಪ್ರಶಸ್ತಿ ಸಿಕ್ಕಿತು. ಅದನ್ನು ಸ್ವೀಕರಿಸುತ್ತ ಅವನು ತಾನದನ್ನು ಲೋಕಕ್ಕೆ ಅರ್ಪಿಸುತ್ತೇನೆ ಎಂದ. 'ನನಗೆ ಅವರೆಲ್ಲ ಗೊತ್ತಿಲ್ಲಪ್ಪ,' ಎನ್ನುತ್ತೀರಿ ನೀವು. ಬೇಡ, ನೀವು ನೀವಾಗಿಯೇ ಇದ್ದರೆ ಸಾಕು. ಅಂಥ ಮುಗ್ಧತೆಯ 'ಕತೆ ಕತೆ ಕಾರಣ'ವೇ ಈ ನಿಮ್ಮ ಕತೆಗಳಿಗೂ ಕಾರಣ.

ಕತೆಗಳ ಬಗ್ಗೆ ನಾನು ನಿಮಗೆ ಹೇಳುವುದೆಂದರೆ ಬೆಟ್ಟಕ್ಕೆ ಮಣ್ಣು ಹೊತ್ತ ಹಾಗೆ! ಆದರೂ ಈ ಸಂದರ್ಭದ ಸ್ವಾತಂತ್ರ್ಯವನ್ನು ತೆಗೆದುಕೊಂಡು ನನ್ನ ಮಾತಿನ ಚಪಲವನ್ನು ಸ್ವಲ್ಪ ತೀರಿಸಿಕೊಳ್ಳುವೆ. ಕತೆಗಳೆಂದರೆ ಕೆರೆಯ ನೀರನು ಕೆರೆಗೆ ಚೆಲ್ಲಿದ ಹಾಗೆ: ಅವು ಹುಟ್ಟುತ್ತಲೇ ನಮ್ಮ ಜನರದು, ಜನರಿಗೇ ಅರ್ಪಿತ. ಆಗ ಕೆರೆಯಲ್ಲಿ ಸ್ವಲ್ಪ ಹೊಸ ಅಲೆಗಳಷ್ಟೆ ಮೂಡಬಹುದು. ನಮ್ಮ ಕೊಡುಗೆಗಳೆಂದರೆ ಈ ಅಲೆಗಳು ತಾನೆ? ಆದರೆ ಇವುಗಳಲ್ಲೂ ಆಧುನಿಕ ಮನಸ್ಸು ವ್ಯಕ್ತಿವಿಶಿಷ್ಟತೆಯನ್ನು ಹುಡುಕುತ್ತದೆ. ಈ ದಿಸೆಯಲ್ಲಿ ನಿಮ್ಮದೇ ಒಂದು ಕತೆ, 'ಅಮ್ಮಚ್ಚಿಯೆಂಬ ನೆನಪು', ನಿಮ್ಮ ಮುಂದಿರಿಸುತ್ತೇನೆ. ಇಲ್ಲಿ ನನಗೆ ಖುಷಿಯಾದ ವಿಚಾರವೆಂದರೆ, ವಸ್ತು ವಿಷಯದ ಹೊರತಾಗಿ, ಕತೆಯನ್ನು ನೀವು ನಿಭಾಯಿಸಿದ ಬಗೆ. ಹಲವು ಸೂಕ್ಷ್ಮಗಳನ್ನು ನೀವು ಹಾಗೆಯೇ ಬಿಟ್ಟಿದ್ದೀರಿ, ಎಂದರೆ ಓದುಗರ ಕಲ್ಪನೆಗೆ ಅವಕಾಶ ಕೊಟ್ಟಿದ್ದೀರಿ, ಸೂಚ್ಯವಾಗಿ. ಇಲ್ಲಿ ನಿರೂಪಕಿಯೂ ಒಂದು ಕಥಾಪಾತ್ರ: ಅಮ್ಮಚ್ಚಿಯ ನೆರೆಕರೆಯ ಗೆಳತಿ, ಅವಳಿಗಿಂತ ತುಸು ಚಿಕ್ಕ ಪ್ರಾಯದ ಬಾಲೆ. ಅವಳು ಕತೆಯ ಒಳಗಿದ್ದಾಳೆ, ಹೊರಗೂ ಇದ್ದಾಳೆ. ಅಮ್ಮಚ್ಚಿಗೆ ಮನೆಯಿಂದ ಹೊರ ಹೋಗುವ ಆಸೆ, ಯಾಕೆಂದರೆ ಮನೆ ಅವಳಿಗೊಂದು ಬಂಧನ.

ಅಲ್ಲಿರುವುದು ಅವಳು, ಅವಳ ತಾಯಿ, ಮತ್ತು ಇನ್ನೆಲ್ಲೂ ಗತಿಯಿಲ್ಲದೆ ಅಲ್ಲಿ ಚಾಕರಿಯನ್ನೂ ಆಡಳಿತವನ್ನೂ ಮಾಡಿಕೊಂಡು ಇರುವ ವೆಂಕಪ್ಪಯ್ಯ. ಬೋಳು ಮಂಡೆಯ ಈತ ವಯಸ್ಸಿಗೆ ಮೊದಲೇ ಮುದುಕನಂತಾದವನು. ಮುಂದೆ ಈ ಮಿಡುಕಲಾಡಿ ಅಮ್ಮಚ್ಚಿ ತನ್ನ ಕೈಗೆ ಸಿಗುತ್ತಾಳೆ ಎನ್ನುವ ಭರವಸೆಯಲ್ಲಿರುವವನು. ಅವಳ ಸ್ವಾತಂತ್ರ್ಯವನ್ನು ಈಗಿಂದಲೇ ನಿಯಂತ್ರಿಸಲು ಹೆಣಗುವವನು. ಅವನ ಬಾಯಿಗೆ ಈಕೆ ಎಲ್ಲಿ ಬೀಳುತ್ತಾಳೋ ಎನ್ನುವ ಆತಂಕ ಆರಂಭದಿಂದಲೇ ಓದುಗರನ್ನು ಕಾಡುತ್ತಿರುತ್ತದೆ. ಈ ವೆಂಕಪ್ಪಯ್ಯ ಎಂದರೆ ಅಮ್ಮಚ್ಚಿಗೆ ಜಿಗುಪ್ಸೆ. ಅವಳು ತಿರಸ್ಕರಿಸುವ ಎಲ್ಲದರ ಮೊತ್ತ ಅವನು. ಅವಳ ಮೇಲೆ ಲೈಂಗಿಕ ಬಲಾತ್ಕಾರ ಮಾಡಿ ಅವಳನ್ನು ತನ್ನ ಹೆಂಡತಿಯಾಗಿ ಈ ವೆಂಕಪ್ಪಯ್ಯ (ಅಮ್ಮಚ್ಚಿಯ ಬಾಯಲ್ಲಿ ಅವನು 'ಯಂಕಪ್ಪಯ್ಯ', ಅವಳ ಗೆಳತಿಯ ಬಾಯಲ್ಲಿ 'ಕುಂಕಪ್ಪಯ್ಯ'!) ಮಾಡಿಕೊಳ್ಳುವುದು ಒಂದು ದೊಡ್ಡ ದುರಂತ. ಆದರೆ ಅನಿರೀಕ್ಷಿತವೇನಲ್ಲ. ಇದನ್ನು ನೀವು ಯಾವ ಅತಿರೇಕಕ್ಕೂ ಎಡೆಗೊಡದೆ ಚಿತ್ರಿಸಿದ್ದೀರಿ. ದೈಹಿಕ ಆಕ್ರಮಣವೇ ಮಾನಸಿಕ ಗೆಲುವು ಎಂದು ತಿಳಿದುಕೊಂಡಿರುವ 'ಪೌರುಷ ಸಂಸ್ಕೃತಿ'ಯ ವಿಮರ್ಶೆ ಇಲ್ಲಿದೆ. ಹೀಗೆ ಕೊನೆಗೂ ಅಮ್ಮಚ್ಚಿಯನ್ನು ಕಟ್ಟಿಕೊಂಡು ಹೋಟೆಲಿಡಲಿಕ್ಕೆಂದು ತಿರುಪತಿಗೆ ತೆರಳಿದ ವೆಂಕಪ್ಪಯ್ಯನಿಗೆ ಎಂದೂ ಅಮ್ಮಚ್ಚಿಯ ಮನಸ್ಸು ಸಿಗಲಿಲ್ಲ. ಆತ ಅಲ್ಲಿ ನೇಣು ಹಾಕಿಕೊಂಡು ಸಾಯುತ್ತಾನೆ.

ಸತ್ತರೆ ಒಂದು ರಗಳೆ ಹೋಯಿತು ಎಂಬ ರೀತಿಯಲ್ಲಿ ಅಮ್ಮಚ್ಚಿ ಏಕಾಂಗಿಯಾಗಿ ಅಮ್ಮನ ಮನೆಗೆ ಮರಳುತ್ತಾಳೆ. ಅಮ್ಮಚ್ಚಿಯನ್ನು ಅವಳು ಬರುವ ಹಾದಿಯಲ್ಲಿ ಕಂಡು ಜತೆಗೂಡಿದ ನಿರೂಪಕಿಯ ಬಳಿ ಅವಳಿಗೆ ಹೇಳಲು ಒಂದು ಸುದ್ದಿಯಿರುತ್ತದೆ: ಅದು ಅಮ್ಮಚ್ಚಿ ಇಷ್ಟಪಡಬೇಕಾದ ಸುದ್ದಿ, ಶಂಭಟ್ರ ಮಗ ನಗರದಿಂದ ಊರಿಗೆ ಮರಳಿದ ಸುದ್ದಿ. ಒಮ್ಮೆ ಅವನನ್ನು ಕಾಣಲು ಕಾತರಿಸಿದವಳು ಅವಳು. ಈಗ ಅವನು ಮರಳಿ ಬಂದ ಸುದ್ದಿ ಕೇಳಿ ನೀಡುವ ಪ್ರತಿಕ್ರಿಯೆ:

'ಸಾಯಡ್, ಎಲ್ಲ ಸಾಯಡ್, ಸತ್ ಮಣ್ಣ್ ತಿನ್ನಡ್'

ಇಡೀ ಮನುಕುಲಕ್ಕೆ ಅವಳು ಕೊಡುವ ಶಾಪದಂತಿದೆ ಅದು. ತಾನು ಮತ್ತು ತನ್ನ ಗೆಳತಿ (ನಿರೂಪಕಿ) ಮಾತ್ರವೇ ಲೋಕದಲ್ಲಿ ಉಳಿದರೆ ಸಾಕು ಎನ್ನುವುದು ಅವಳ ಮುಗ್ಧ ಆಶಯ. ಅಂಥಾ ಗೆಳತಿಯನ್ನು ತಬ್ಬಿಕೊಂಡು, 'ನಾ ಮತಾಡುಗೆ, ನೀ ನೆಗಾಡುಗೆ' ಎನ್ನುತ್ತಾಳೆ. ಆದರೆ, 'ಶಿಲೆಕಲ್ಲಿನಂತೆ' ಇದ್ದಳು ಅಮ್ಮಚ್ಚಿ, ನಗೆಯೆಂಬುದು ಮೂಲದಲ್ಲೇ ಮುರುಟಿಹೋದಂತೆ. ಮಗಳನ್ನು ವಾಚಾಮಗೋಚರ ಬಯ್ಯಲು ಹೊರಟ ಅವಳ ತಾಯಿಯಾದರೂ ಇದಕ್ಕೆ ಹೊರತಾಗಿರಲಿಲ್ಲ ಎಂದು ಹೇಳಲು ನೀವು ಮರೆಯುವುದಿಲ್ಲ. ಅವರಿಬ್ಬರೂ ಈಗ ಅನಾಥರು. ಈ ದುರಂತದ ಹಿನ್ನೆಲೆಯಾಗಿ ಬರುವ 'ಹಿಂದುಗುಬ್ಬಿ'ಯ ರವಿಕೆಯ ಪ್ರಸಂಗವನ್ನು ನೀವು ಬಹಳ ಚೆನ್ನಾಗಿ ತಂದಿದ್ದೀರಿ. ಈ ಹಿಂದುಗುಬ್ಬಿಯ ಫ್ಯಾಶನಿನ ರವಿಕೆಗೆ ವೆಂಕಪ್ಪಯ್ಯನ ಮತ್ತು ತನ್ನ ತಾಯಿಯ ವಿರೋಧವಿರುತ್ತದೆ ಎಂದು

ಗೊತ್ತಿದ್ದೂ, ಅಮ್ಮಚ್ಚಿ ಅಂಥದೊಂದು ರವಿಕೆಯನ್ನು ರಮಾಟೀಚರಳಿಂದ ಹೊಲಿಸಿಕೊಳ್ಳುವ ಸಾಹಸಕ್ಕೆ ಕೈಹಚ್ಚುತ್ತಾಳೆ. ನನ್ನ ಬಾಡಿ, ನನ್ನ ರವಿಕೆ ಎಂಬ ಉದ್ಘೋಷದಲ್ಲಿ. ನಮ್ಮ ಹಳ್ಳಿಗಳ ಆ ಕಾಲದ ಹದಿಹರಯದ ಹುಡುಗಿಯರ ವಾರೆ ಬೈತಲೆ, ಹೇರ್ ಪಿನ್, ಬಳೆ, ಪೌಡರ್ ಡಬ್ಬ, ಲೇಟೆಸ್ಟ್ ಮಾದರಿಯ ರವಿಕೆ ಮುಂತಾದವನ್ನೊಳಗೊಂಡ ಫ್ಯಾಶನ್ ಪ್ರಪಂಚವಿದೆಯಲ್ಲ, ಅದು ಬಹಳ ರೋಚಕವಾದ್ದು–ನಾನೂ ಅಂಥದೇ ಊರಿನಿಂದ ಬಂದವನಾದ್ದರಿಂದ ಹೇಳುತ್ತಿದ್ದೇನೆ–ಮತ್ತು ಕಟ್ಟುಕಟ್ಟಳೆಯ ಉಲ್ಲಂಘನೆಯ ಮನೋಭಾವವನ್ನು ಒಳಗೊಂಡುದು. ಆದ್ದರಿಂದಲೇ ಅವಳ ತಾಯಿ ಮತ್ತು ವೆಂಕಪ್ಪಯ್ಯ ಇದನ್ನೆಲ್ಲ ವಿರೋಧಿಸುವುದು. ಅಮ್ಮಚ್ಚಿ ಧಿಕ್ಕರಿಸುತ್ತಲೇ ಇರುತ್ತಾಳೆ.

ಹೊಸ್ತಿಲಾಚೆಗಿನ ಲೋಕದಲ್ಲಿ ಸಂಚರಿಸಬೇಕೆನ್ನುವ ಆಸೆ ಅವಳದು. ಆದ್ದರಿಂದಲೇ ಅವಳು ಶಂಭಟ್ಟರ ಮಗ ಊರಿಗೆ ಮರಳುವುದನ್ನು ಕಾಯುವುದು. ಯಾಕೆಂದರೆ ನಗರದಿಂದ ಊರಿಗೆ ನೆಲಸಲು ಬರುವ ಯುವಕ ಎರಡೂ ಪರಿಸರಗಳಿಗೆ ಒಂದು ಸೇತುವಿದ್ದ ಹಾಗೆ. ಬಹುಶಃ ಅವನಲ್ಲಿ ತನ್ನದೇ ಬಿಡುಗಡೆಯ ದೂರದ ಆಸೆಯನ್ನೂ ಅಮ್ಮಚ್ಚಿ ಕಂಡಿರಬಹುದು. ಏನಿದ್ದರೂ ಹಿಂದುಗುಬ್ಬಿಯ ರವಿಕೆ ಧರಿಸಬೇಕೆನ್ನುವ ಅವಳ ಆಸೆ ಮಣ್ಣುಗೂಡುತ್ತದೆ. ಇದನ್ನು ನೀವು ತುಂಬ ಸೂಚ್ಯವಾಗಿ ತಂದಿದ್ದೀರಿ. ರಮಾಟೀಚರಲ್ಲಿಂದ ರವಿಕೆಯನ್ನು ಮನೆಗೆ ತೆಗೆದುಕೊಂಡು ಬಂದವನು ವೆಂಕಪ್ಪಯ್ಯ. ಅವನು ಮತ್ತು ತಾಯಿ ಮುಸಿಮುಸಿ ನಗುತ್ತ, ಜೊತೆಯಾಗಿ ಪಿತೂರಿಯಲ್ಲಿದ್ದಂತೆ ಕಾಣಿಸುತ್ತಾರೆ. ಹೋಗಿ ತೊಟ್ಟು ನೋಡು ಎನ್ನುತ್ತಾರೆ ಅಮ್ಮಚ್ಚಿಗೆ. ಆಗ ಏನಾಯಿತು ಎನ್ನುವುದನ್ನು ನಿರೂಪಕಿ ಹೇಳುವುದಿಲ್ಲ, ಅವಳಿಗೆ ಅದು ಗೊತ್ತಿರುವುದೂ ಇಲ್ಲ. ಏನೂ ಆಗಿಲ್ಲ ಎಂಬಂತೆ ಅಮ್ಮಚ್ಚಿ ಕೋಣೆಯಿಂದ ಹೊರಬಂದು ಬಾಳೆನಾರಿನ ಬಳ್ಳಿ ಹೊಸೆಯಲು ತಾಯಿಯ ಜತೆ ಕೂತುಕೊಳ್ಳುತ್ತಾಳೆ. ತನ್ನ ಸೋಲನ್ನು ಒಪ್ಪಿಕೊಳ್ಳಲು ಅವಳಿಗೆ ಮನಸ್ಸಿಲ್ಲ. ಪ್ರತಿಯೊಂದು ಸೋಲನ್ನೂ ಅವಳು ಮೀರಬೇಕು. ಏನಾಯಿತು ಎಂದು ಕೇಳಿದ ತಾಯಿಗೆ ಹಾಗೂ ವೆಂಕಪ್ಪಯ್ಯನಿಗೆ ಉತ್ತರವೆಂಬಂತೆ, ಬಳ್ಳಿಯ ಒಂದು ತುದಿಯನ್ನು ಕಡಿದು ಬಾಯಲ್ಲಿ ಕಸ ಸಿಕ್ಕಿದರೆ ಅದನ್ನು ಹೇಗೆ 'ತ್ತು' ಎಂದು ಉಗುಳುತ್ತೇವೆಯೋ ಹಾಗೆ ಉಗುಳುತ್ತಾಳೆ. ಈ ಒಂದು ಸನ್ನೆಯೇ ಅವಳು ಲೋಕದ ಕುರಿತಾಗಿ ತೋರುವ ಭರ್ತ್ಸನೆ. ಆದರೆ ಈ ರವಿಕೆಗೇನಾಯಿತು ಎನ್ನುವುದನ್ನು ನೀವು ಓದುಗರ ಊಹೆಗೆ ಬಿಟ್ಟಿದ್ದೀರಿ. ಆದರೆ ಉತ್ತರ ವೆಂಕಪ್ಪಯ್ಯ ಇಲ್ಲದಿದ್ದಾಗ ಅವಳು ಅವನ ಅಂಗಿಯನ್ನು ಹರಿದು ಗುಬ್ಬಿಗಳನ್ನೆಲ್ಲ ಕಿತ್ತು ಬೇಕಾಬಿಟ್ಟಿ ಬದಲಿಸಿ ಹೊಲಿಯುವುದರಲ್ಲಿದೆ.

ಅಮ್ಮಚ್ಚಿಯಂಥ ಪಾತ್ರಗಳು ನಿಮ್ಮ ಇತರ ಕತೆಗಳಲ್ಲೂ ಬರುತ್ತವೆ ಎನ್ನುವುದು ನಿಜ. ಪಾತ್ರಗಳು ಮರುಕಳಿಸುತ್ತವೆ, ದಿನಗಳು ಮರುಕಳಿಸುವಂತೆ. ಆದರೆ ಒಂದೇ ರೀತಿಯಲ್ಲಿ ಅಲ್ಲ; ಅವು ವೇಷಾಂತರಗೊಂಡಿರುತ್ತವೆ, ಬೇರೆ ದುಃಖಗಳನ್ನು ಹೊತ್ತಿರುತ್ತವೆ. ವಾಸ್ತವದಲ್ಲಿ 'ವೈದೇಹಿ ಕಥೆಗಳು' ಎಂಬ ಕೃತಿ, ಕತೆಗಳ ಶೀರ್ಷಿಕೆಗಳನ್ನು ತೆಗೆದುಹಾಕಿದರೆ, ಒಂದು ಬೃಹತ್ ಕಾದಂಬರಿಯಂತೆ ಕೂಡ ಅನಿಸಬಹುದು.

ನಿಮ್ಮ ಕೃತಿಗಳ ಮೇಲೆ ಸಾಕಷ್ಟು ವಿಮರ್ಶೆಗಳು ಬಂದಿವೆ. ಆದರೆ ನಾನು ಅವು ಯಾವುದನ್ನೂ ಓದಿಲ್ಲ. ಅಂಥ ಘನ ವಿಮರ್ಶೆಯೆದುರು ನನ್ನ ಮಾತುಗಳು ಪುಟಗೋಸಿ. ನಾನು ಕೂಡ ಕೆಲವು ದಶಕಗಳಿಂದ ಸಾಹಿತ್ಯದಲ್ಲಿ ತೊಡಗಿಸಿಕೊಂಡಿರುವುದು ನಿಜ; ಆದರೆ ಸಾಹಿತ್ಯದ ನಿಗೂಢತೆ ನನ್ನನ್ನು ಯಾವತ್ತೂ ಬೆರಗುಗೊಳಿಸಿದೆ-ಅದರೆದುರು ನಾನು ತೀರ ಮುಗ್ಧ. ನಾವಿಂದು ಇಸಮುಗಳ ಬಗ್ಗೆ ಮಾತಾಡುತ್ತೇವೆ. ಎಡ ಬಲ ಪಂಥಗಳ ಬಗ್ಗೆ ವಾದಿಸುತ್ತೇವೆ. ನಿಮ್ಮಂಥ ಒಬ್ಬ ಲೇಖಕಿ ಬರೆಯಲು ಕುಳಿತಾಗ ಈ ಯಾವುದೇ ವಾದಗಳು ಎಷ್ಟು ಕೆಲಸ ಮಾಡುತ್ತವೆ ಎನ್ನುವುದು ಗೊತ್ತಿಲ್ಲ. ಸೃಜನಶೀಲತೆ ಎಂದರೆ ಏನು? ವಾದಗಳನ್ನು, ಸಿದ್ಧಾಂತಗಳನ್ನು, ತತ್ವಗಳನ್ನು ಸಾಹಿತ್ಯಕ್ಕೆ ಒಗ್ಗಿಸಿಕೊಳ್ಳುವುದೇ ಅಥವಾ ಅದಕ್ಕಿಂತ ಬೇರೆಯೇ ಎನ್ನುವುದು ಕೂಡ ಕ್ಲಿಷ್ಟವಾದ ಪ್ರಶ್ನೆ. ಬರೆಯುವ ಖುಷಿಯನ್ನು ಕಳಕೊಂಡವ ಬರೆಯುವುದು ಒಂದು ಅಧ್ವಾನವಾಗುತ್ತದೆ; ಅದೇ ರೀತಿ, ಓದುವ ಖುಷಿ ಎನ್ನುವುದೊಂದು ಇರಬೇಕಲ್ಲವೇ? ಕತೆಯೊಂದು ಆರಂಭದಲ್ಲೇ ತನ್ನನ್ನು ಬಿಟ್ಟುಕೊಟ್ಟರೆ ಇನ್ನೇನು ಉಳಿಯಿತು? ನನಗಾದರೆ ವಾದವೂ ಬೇಕು, ಕತೆಯೂ ಉಳಿಯಬೇಕು; ವಾದದಲ್ಲಿ ಕತೆ ಕರಗಿಹೋಗಬಾರದು!

ಎಲ್ಲದರಿಂದ ಭಾಗಿಸಿಯೂ ಏನೋ ಒಂದಿಷ್ಟು 'ಶೇಷ' ಉಳಿಯಬೇಕಲ್ಲವೇ? ಅಮ್ಮಚ್ಚಿಯ ಕತೆಯನ್ನು ಕೇವಲ ಸ್ತ್ರೀವಾದಕ್ಕೆ ಇಳಿಸಿದರೆ 'ಶೇಷ' ಕಾಣಿಸಲಾರದು. ಅಮ್ಮಚ್ಚಿಯ ಅಮ್ಮನದೂ ಒಂದು ಕತೆಯಿರಬೇಕಲ್ಲವೇ? ಅಂತೆಯೇ ಯೌವನದಲ್ಲಿಯೇ ಬೊಕ್ಕ ತಲೆಯವನಾದ ಆ 'ಕುಂಕಪ್ಪಯ್ಯ'ನ ಕತೆ: ಅಮ್ಮಚ್ಚಿಯ ಪ್ರೀತಿಯನ್ನು ಗೆಲ್ಲುವುದು ಅವನಿಂದ ಸಾಧ್ಯವಾಗಲೇ ಇಲ್ಲ. ಪ್ರೀತಿ ಎನ್ನುವುದೊಂದು ಇದೆಯೆನ್ನುವುದು ಅವನ ಮನಸ್ಸಿಗೆ ಯಾಕೆ ಬರಲಿಲ್ಲ? ಏನವನ ಹಿನ್ನೆಲೆ? ಎಲ್ಲಿಂದ ಬಂದ? ಅವನು ನಡೆಸಿದ ಅತ್ಯಾಚಾರ ಒಂದು ಘೋರ ಅಪರಾಧ. ಅವನ ಆತ್ಮಹತ್ಯೆಗೂ ಅದಕ್ಕೂ ಏನಾದರೂ ಸಂಬಂಧವಿದೆಯೆ? ಹೇಳಿದ ಒಂದು ಕತೆ ಹೇಳದ ಹಲವು ಕತೆಗಳನ್ನು ಎಬ್ಬಿಸಬೇಕು. ಅಂಥದೆಲ್ಲ ನಮ್ಮ ಮನಸ್ಸಿನಲ್ಲಿ ನಡೆಯುವ ವ್ಯಾಪಾರ. ಇದನ್ನೆ ನಾವು ಸರಳ ಭಾಷೆಯಲ್ಲಿ ಸಂಕೀರ್ಣತೆ ಎನ್ನುವುದು. ನನ್ನ ಮಟ್ಟಿಗೆ 'ಅಮ್ಮಚ್ಚಿಯೆಂಬ ನೆನಪು' ಅಂಥದೊಂದು ಸಂಕೀರ್ಣ ಕತೆ.

ಪ್ರಿಯ ವೈದೇಹಿ

ಇಷ್ಟು ಹೇಳಿ ನಿಮಗೆ ಶುಭಾಶಯ ಕೋರುತ್ತ ನಾನೀಗ ವಿರಮಿಸುತ್ತೇನೆ.

ಇತಿ ನಿಮ್ಮ

**ಕೆ. ವಿ. ತಿರುಮಲೇಶ್**



# ನಮ್ಮ ವೈದೇಹಿಯ ಮುಡಿಗೊಂದು ಅತ್ತಿಮಬ್ಬೆ

+ ವಿಜಯಾ ದಬ್ಬೆ

ಕನ್ನಡ ಸಾಹಿತ್ಯದಲ್ಲಿ ಕಳೆದ ಎರಡು ದಶಕಗಳ ಅವಧಿ ಎಂದರೆ ಮಹಿಳೆಯರೂ ಕನ್ನಡ ಸಾಹಿತ್ಯದ ದಿಗಂತಗಳನ್ನು ವಿಸ್ತರಿಸಿದ ಕಾಲ. ಈ ವಿಸ್ತಾರ, ಎತ್ತರಗಳನ್ನು ತಂದುಕೊಟ್ಟ, ತಂದುಕೊಡುತ್ತಿರುವ ಲೇಖಕಿಯರಲ್ಲಿ ಎದ್ದು ಕಾಣುವ ಒಂದು ಹೆಸರು ವೈದೇಹಿ.

ಕೆಲವರು ಸ್ತ್ರೀ ಜೀವಿತವೆಂದರೆ ಕೇವಲ ಸಂಕಟ, ಹೋಗಾಟ, ಅಸಹಾಯಕತೆ ಎಂದು ಮುಂತಾಗಿ ಭಾವಿಸುತ್ತಾರೆ. ಇವೆಲ್ಲ ಅವರ ಬದುಕಿನಲ್ಲಿ ಹೆಚ್ಚಾಗಿಯೇ ಇವೆ. ಆದರೆ ಇಷ್ಟು ಮಾತ್ರ ಇದೆ ಎಂದಲ್ಲ. ಸಂಭ್ರಮ, ಸುಖ, ಸಣ್ಣತನ ವಂಚನೆ, ಆಸೆ, ತಮಾಷೆ, ಬೆಪ್ಪುತನವೇ ಮೊದಲಾದವೆಲ್ಲವೂ ಧಾರಾಳವಾಗಿ ಸಹಜವಾಗಿ ಇವೆ. ವೈದೇಹಿ ಇವೆಲ್ಲದರ ಸಮೇತವಾಗಿ ಮಹಿಳೆಯರ ಜೀವನವನ್ನು ಹಿಡಿಯುವುದರಿಂದ ಆ ಚಿತ್ರಣದಲ್ಲಿ ಇಡಿತನವಿದೆ, ನಿಜದ ಬಿಂಬವಿದೆ. ತನ್ನ ಗಂಡ ತನ್ನ ಮನೆಗೇ ತಂದ ವೇಶ್ಯೆಗೆ ಆ ಮನೆಯ ಗೃಹಿಣಿ ಹಾಲನ್ನೂ ಕೊಡುತ್ತಾಳೆ. ಮಲಗುವ ಮನೆಗೆ ಇರುವೆ ಗೂಡನ್ನೂ ಬಿಡುತ್ತಾಳೆ. ಹೊಸದಾಗಿ ಊರಿಗೆ ಬಂದ ಟಾಕೀಸಿನಲ್ಲಿ ಗೇಟ್‌ಕೀಪರ್ ಆದ ಲಿಲ್ಲಿಬಾಯಿ ತನ್ನ ಚಿಕ್ಕಪುಟ್ಟ ಲಂಚದಾದಾಯದಲ್ಲಿ ಕೊಳ್ಳುವ ಎರಡು ವಾಯಿಲ್ ಸೀರೆಗಳಲ್ಲಿ, ಸ್ಟೀಲ್ ಪಾತ್ರೆಗಳಲ್ಲಿ, ಒಗೆಯುವ ಕಲ್ಲಿನ ಹತ್ತಿರ ಹಾಕಿದ ಎರಡು ಬಾಳೆಕಂದುಗಳಲ್ಲಿ ಪರಮಸುಖ ಕಾಣುತ್ತಾಳೆ. ಕಡು ಕಷ್ಟದ ಬದುಕಿಗೆ ಸಿಕ್ಕ ಬಾಯಿ ಚಪಲದ ಬಚ್ಚಮ್ಮ ಮಕ್ಕಳಿಗಾಗಿ ವಡೆ, ಸುಕ್ಕಿನುಂಡೆಗಳನ್ನು ಕದ್ದು ಸಿಕ್ಕಿ ಬೀಳುತ್ತಾಳೆ– ಹೀಗೆ ಈ ಎಲ್ಲ ಬದುಕಿನ ಸಂಭ್ರಮ, ಆಸೆ ಒತ್ತಡಗಳೆಲ್ಲ ವೈದೇಹಿಯವರ ಕಥಾ ಪ್ರಪಂಚದಲ್ಲಿ ಮೈ ಪಡೆದಿವೆ.

ಬಂಡಾಯ, ಸ್ತ್ರೀವಾದ, ಪ್ರಗತಿ –ಇಂಥ ಶಬ್ದಗಳು ಲೇಖಕರಿಗೆ ಅಂಟಿಕೊಂಡಿರಲಿ, ಬಿಡಲಿ, ಆ ದಿಕ್ಕಿನ ಚಳುವಳಿಗಳೊಂದಿಗೆ ಲೇಖಕರು ಬಹಿರಂಗವಾಗಿ ಗುರುತಿಸಿ ಕೊಂಡಿರಲಿ, ಬಿಡಲಿ ಅಂತಃಕರಣದ ಸಿರಿವಂತಿಕೆಯುಳ್ಳ ಎತ್ತರದ ಸೃಜನಶೀಲತೆ, ಸಮಾಜದ ವಿಪರ್ಯಾಸ, ನಿರ್ದಯೆ, ಹಿಂಸೆಗಳನ್ನೆಲ್ಲ ತುಂಬಾ ಪರಿಣಾಮಕಾರಿಯಾಗಿ ಓದುಗರ ಒಳಮನಸ್ಸಿಗೆ ಮುಟ್ಟಿಸುತ್ತದೆ. ಆ ಬರಹಗಳಲ್ಲಿ ತುಂಬಿದ ಜೀವಪ್ರೀತಿ ಯಾತನೆ ಇಲ್ಲದ ಬದುಕಿನ

ಬಗೆಗಿನ ಆ ಬರಹಗಳ ತುಡಿತವನ್ನು ನಮ್ಮ ಅನುಭವಕ್ಕೆ ತರುತ್ತದೆ. ಮನುಷ್ಯ ಸಂಬಂಧಗಳ ಮೇಲಿರುವ ಜಾತಿ-ವರ್ಗಗಳ ಹಿಡಿತವನ್ನು, ಜಾತಿಯೊಳಗೇ ಇದ್ದ ಕಾಸಿದ್ದವರ ಅಮಾನವೀಯ ನೆಲೆಗಳನ್ನೂ, ವೈದೇಹಿಯಷ್ಟು ಸೂಕ್ಷ್ಮವಾಗಿ, ಶಕ್ತವಾಗಿ ಹಿಡಿಯುವ ಲೇಖಕರು ಕಡಿಮೆ. ಗ್ರಾಮ್ಯ ಜೀವನದ ಒಳಲೋಕದ, ಅಲ್ಲಿನ ಬದಲಾವಣೆಗಳ ಆಧುನಿಕತೆ ಅಲ್ಲಿ ತರುತ್ತಿರುವ ಮಾರ್ಪಾಡುಗಳ ತಾಜಾ ಚಿತ್ರವನ್ನು ವೈದೇಹಿ ಒಳಗಿನಿಂದ ಕೊಡುತ್ತಾರೆ. ಒಂದು ಕಳ್ಳ ವೃತ್ತಾಂತ, ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು, ಅಕ್ಕು ಮೊದಲಾದ ಕತೆಗಳು, ನಮ್ಮ ಕಣ್ಣೆದುರಿದ್ದರೂ ಅಪರಿಚಿತವಾದ ಬದುಕಿನ ಬಾಗಿಲುಗಳನ್ನು ನಮಗೆ ತೆರೆಯುತ್ತವೆ. ಕಥೆಗಳು ಜೀವನದ ಸಮಗ್ರತೆಯನ್ನು ಅದರ ದ್ವಂದ್ವ, ವೈರುಧ್ಯ, ಗೋಜಲುಗಳೆಲ್ಲದರ ಸಮೇತವಾಗಿ ಸೂಕ್ತವಾಗಿ ಹಿಡಿದುಕೊಟ್ಟಿವೆ. ಸಂದರ್ಭದ ಜಟಿಲತೆಯನ್ನು ಆದಷ್ಟೂ ಸೋರಿಸದೆ ಹಿಡಿಯಬಯಸುವ ವೈದೇಹಿ ಮನುಷ್ಯನ ಆಸೆ, ಸಣ್ಣತನ, ಪ್ರೀತಿ, ದೌರ್ಬಲ್ಯ, ಔದಾರ್ಯ, ಮೊದಲಾದವುಗಳನ್ನೆಲ್ಲ ಅವಿರುವ ರೀತಿಯಲ್ಲಿ ಮೌಲ್ಯಗಳ ಹೇರಿಕೆಯಿಲ್ಲದೆ ಹಿಡಿಯಬಲ್ಲರು ಎಂಬುದು ಮುಖ್ಯ. ಬದುಕನ್ನು ತೀವ್ರವಾಗಿ, ಆರ್ದ್ರವಾಗಿ, ಪ್ರೀತಿಸುವ ವೈದೇಹಿ ಅದನ್ನು ಮುಕ್ತವಾಗಿ ಕಾಣುವ ಶಕ್ತಿಯುಳ್ಳವರು. ಅಂತೆಯೇ ಅವರ ಕಥೆಗಳು ಹಲವು ನೆಲೆಗಳ, ರೀತಿಗಳ ಜೀವನಗಳ ಒಳನಾಡಿಗೆ ನಮ್ಮನ್ನು ಒಯ್ಯುತ್ತವೆ.

ವೈದೇಹಿ ಅವರು ಹಲವು ಕಥೆಗಳಲ್ಲಿ ಕುಂದಾಪುರ, ಕೋಟ ಉಪಭಾಷೆಯನ್ನು ಬಳಸಿದರೂ ಕಥೆಗಳ ಹಿನ್ನೆಲೆಯಲ್ಲಿ ಕರಾವಳಿಯ ಬದುಕಿದ್ದರೂ ಈ ಕಥಾ ಪ್ರಪಂಚದ ಅಂತರಂಗದ ದನಿ ಸಮೂಹದ, ಸಂಸ್ಕೃತಿಯ ನಿಜದನಿಯಾಗುತ್ತದೆ. ಬದುಕಿನ ನಾನಾ ಬಗೆಯ ಹೊಡೆತ, ಆಘಾತಗಳಿಂದ ಜರ್ಜರಿತವಾದ ಬದುಕನ್ನು ತನ್ನ ಮಕ್ಕಳು-ಕುಟುಂಬಕ್ಕಾಗಿ, ತನಗಾಗಿ ಕಟ್ಟುವ, ಉಳಿಸುವ ಅವಿರತ ಹೋರಾಟದಲ್ಲಿ ತೊಡಗಿದ ಸ್ತ್ರೀಜೀವನ ವೈದೇಹಿಯನ್ನು ಗಾಢವಾಗಿ ತಟ್ಟಿದೆ.

ಕಥೆ ವೈದೇಹಿಯವರಿಗೆ ಒಲಿದಿದೆಯೆಂಬುದು ಸರಿ. ಆದರೆ ಬೇರೆ ಪ್ರಕಾರಗಳ ವೈದೇಹಿಯವರ ಬರಹದ ಸೊಗಸು, ಕಲಾತ್ಮಕತೆಯೂ ವಿಶಿಷ್ಟ. ಕಥೆಗೆ ಸಮೀಪವಾದ ಪ್ರಬಂಧವೂ ಅವರಿಗೆ ಒಗ್ಗಿದೆ. ನಮ್ಮ ಓದುಗರ ವಿಮರ್ಶಕರ ಮನ್ನಣೆ ವೈದೇಹಿ ಅವರ ಕಥೆಗಳಿಗೆ ಸಿಕ್ಕಬೇಕು. ಸಿಗದಿದ್ದರೆ ನಷ್ಟ ವೈದೇಹಿಗಲ್ಲ ನಮಗೆ.

(* ವೈದೇಹಿಯವರಿಗೆ ಕರ್ನಾಟಕ ಸರ್ಕಾರದ ಅತ್ತಿಮಬ್ಬೆ ಪ್ರಶಸ್ತಿ ಸಂದ ಸಂದರ್ಭದಲ್ಲಿ 5. 10. 1999ರ ಆಂದೋಲನ ಪತ್ರಿಕೆಯಲ್ಲಿ ವಿಜಯಾದಬ್ಬೆಯವರು ಬರೆದ ಅಭಿನಂದನಾ ಲೇಖನದ ಕೆಲಸಾಲುಗಳು. ಕೃಪೆ: 'ವೈದೇಹಿ – ಜೀವನ ಮತ್ತು ಕೃತಿಗಳ ಸಮೂಹ ಶೋಧ', ಸಂ. ಮುರಳೀಧರ ಉಪಾಧ್ಯ ಹಿರಿಯಡಕ)



# ವೈದೇಹಿ : ಅಂತರಂಗದ ಕತೆಗಾರ್ತಿ

+ ಪ್ರೊ.ರಾಜೇಂದ್ರ ಚೆನ್ನಿ

ವೈದೇಹಿ ಕತೆಗಳನ್ನು ಓದುವುದೆಂದರೆ ಅತ್ಯಂತ ಸೂಕ್ಷ್ಮವಾದ ಶ್ರಾವಣ ಪ್ರತಿಭೆಯೊಂದರ ಮೂಲಕ ಜಗತ್ತನ್ನು ಗ್ರಹಿಸುವ ಕೆಲಸ. ಶ್ರಾವಣ ಪ್ರತಿಭೆಯೆನ್ನುವುದು ಟಿ.ಎಸ್.ಎಲಿಯಟ್ ಬಳಸಿದ auditory imagination ಗೆ ಸಮನಾಗಿ ಅನುವಾದಿಸಿ ಮುಖ್ಯವಾಗಿ ಬೇಂದ್ರೆಯವರ ಪ್ರತಿಭೆಯನ್ನು ವಿವರಿಸಲು ಬಳಸಲಾಗಿರುವ ಪದವಾಗಿದೆ. ನಾನು ಇಲ್ಲಿ ಆ ಪದವನ್ನು ಎಲಿಯಟ್ ಬಳಸಿದ ಅರ್ಥದಲ್ಲಿಯೂ ಬಳಸುತ್ತಿಲ್ಲ; ಬೇಂದ್ರೆಯವರ ಪ್ರತಿಭೆಯ ಜೊತೆಗೆ ವೈದೇಹಿಯವರ ವಿಶಿಷ್ಟ ಪ್ರತಿಭೆಯನ್ನು ಹೋಲಿಸಲೂ ಹೊರಡುವುದಿಲ್ಲ. ನಾನು ವಿವರಿಸಲು ಪ್ರಯತ್ನಿಸುತ್ತಿರುವುದು ಒಂದು ಮನುಷ್ಯ ಪ್ರಪಂಚವು ಮಾತಿನ ಮೂಲಕ, ಭಾಷೆಯ ಮೂಲಕ ನಮ್ಮೆದುರಿಗೆ ಬಿಚ್ಚಿಕೊಳ್ಳುವ ಪ್ರಕ್ರಿಯೆ. ವೈದೇಹಿಯವರ ಕತೆಗಳ ಪಾತ್ರಗಳ ಹುಟ್ಟು, ಅಸ್ತಿತ್ವಗಳು ಅವುಗಳಿಗೆ ವಿಶಿಷ್ಟವಾದ, ಅವುಗಳ ಸಂವೇದನೆಯ ಅವಿಭಾಜ್ಯ ಅಂಶವಾಗಿ, ಕರ್ಣನಿಗೆ ಕವಚ ಕುಂಡಲಗಳಿದ್ದಂತೆ ಇರುವ, ಅವುಗಳ ಮಾತಿನಲ್ಲಿವೆ. ನಮ್ಮ ಓದಿನಲ್ಲಿ ಈ ಪಾತ್ರಗಳು ಪ್ರತ್ಯಕ್ಷವಾಗುವುದು, ನಮ್ಮ ಅನುಭವಲೋಕವನ್ನು ಪ್ರವೇಶಮಾಡಿ ನಿಲ್ಲುವುದು ಅವುಗಳ ಮಾತಿನಿಂದಲೇ. ಇದು ಕೇವಲ ಕತೆಗಾತಿಯ ಜಾಣ್ಮೆ ಅಥವಾ ಕೌಶಲ್ಯದ ವಿಷಯವಲ್ಲ. ಅಥವಾ ಅವರು ಬಳಸುವ ಪ್ರಾದೇಶಿಕ ಭಾಷೆಯ ಸೊಗಡಿನ ವಿಷಯವಲ್ಲ. ಮನುಷ್ಯರ ಅಂತರಂಗದ ಅತ್ಯಂತ ಅನಿರೀಕ್ಷಿತವಾದ, ಗೋಚರಕ್ಕೂ ಬರದಷ್ಟು ಸೂಕ್ಷ್ಮವಾದ, ಸಂಗ್ರಹಿಸಿ ಹೇಳಹೊರಟರೆ ತಮ್ಮ ನೈಜ ಸಂಕೀರ್ಣತೆಯನ್ನು ಕಳೆದುಕೊಂಡು ಉಡುಗಿ ಹೋಗುವಂತಹ ವಿಶಿಷ್ಟವಾದ ಆ ಕ್ಷಣದ್ದೇ ಆದರೂ ಆಯಾ ವ್ಯಕ್ತಿಗಳ ಶೀಲವನ್ನು ಅಭಿವ್ಯಕ್ತಿಸುವ ಮಾಧ್ಯಮವಾಗಿ ಇರುವ ಮಾತುಗಳ ಬಗ್ಗೆ ನಾನು ಹೇಳುತ್ತಿದ್ದೇನೆ. ವೈದೇಹಿ ಅವರ ಕತೆಯೊಂದರಲ್ಲಿ ('ಮಾತು ಸೋತ ಕ್ಷಣ') ಸಾವಿನ ಮನೆಗೆ ಶೋಕಿಸಲು ಬಂದ ವೃದ್ಧರೊಬ್ಬರು ಕೊನೆವರೆಗೂ ಏನೂ ಮಾತನಾಡದೇ, ಮಾತನಾಡಲಾಗದೇ ಹೊರಟು ಹೋಗುತ್ತಾರೆ. ಆದರೆ ಅವರ ಉಸಿರಾಟವೇ ಒಂದು ಭಾಷೆಯಾಗಿ ಎಷ್ಟೊಂದನ್ನು ಹೇಳುತ್ತದೆ. ಈ ಉಸಿರಾಟದ ಲಯಗಳಷ್ಟೇ ಸೂಕ್ಷ್ಮವೂ ಅಭಿವ್ಯಕ್ತಿಯ ಪ್ರಬಲ ಮಾರ್ಗವೂ ಆಗಿದೆ ಅವರ ಪಾತ್ರಗಳ

ಮಾತು. ಮನುಷ್ಯಸ್ವಭಾವ ಹಾಗೂ ನಡವಳಿಕೆಯ clairvoyant ಅಂತ ಅನ್ನಬಹುದಾದ ತಿಳುವಳಿಕೆ ಇಲ್ಲದ ಬರಹಗಾರನಿಗೆ ಮಾತುಗಳ ಅಂತರಂಗವನ್ನು ಹೊಕ್ಕು ಅವುಗಳಿಂದಲೇ ಸಾಂದ್ರವಾದ ಕಥಾಪ್ರಪಂಚವನ್ನು ಸೃಷ್ಟಿಸಲಾಗದು. ಇದನ್ನೇ ನಾನು ವೈದೇಹಿಯವರನ್ನ ಶ್ರಾವಣ ಪ್ರತಿಭೆಯೆಂದು ಕರೆದದ್ದು. ಅವರ ಕತೆಗಳಿಂದ ಎದ್ದು ಹೊರಬಂದಂತೆ ತಮ್ಮದೇ ಸ್ವಾಯತ್ತ ಜೀವಂತಿಕೆಯನ್ನು ಹೊಂದಿ ನಮ್ಮ ಮನಸ್ಸಿನಲ್ಲಿ ನಿಲ್ಲುವ ಅವರ ಅನೇಕ ಪಾತ್ರಗಳು? ಅಮ್ಮಚ್ಚಿ, ಅಕ್ಕು, ಜೀನ, ಪುಟ್ಟಮ್ಮತ್ತೆ ಮತ್ತು ಅವರ ಮೊಮ್ಮಗಳು– ಇವೆಲ್ಲವು ಸಶರೀರವಾಗಿ ಅವತರಿಸುವುದು ಮಾತುಗಳಲ್ಲಿಯೆ. ಕತೆಗಾತಿಯಾದ ವೈದೇಹಿಯವರ ಶಕ್ತಿಯಿರುವುದು ಈ ಮಾತಿನ ಪ್ರಪಂಚವನ್ನು, ವಾಸ್ತವ ಪ್ರಪಂಚದಷ್ಟೇ ಮೂರ್ತವಾದ, ಸಾಂದ್ರವಾದ, ನಿಬಿಡವಾದ ಮಾತಿನ ಪ್ರಪಂಚವನ್ನು ನಿರ್ಮಿಸುವುದರಲ್ಲಿ. ಅವರ ಕತೆಗಳಲ್ಲಿ ಆಗುವುದು ನಡೆಯುವುದು ಇವುಗಳ ಅಂಶ ಕಡಿಮೆಯೇ. ಆದರೆ ಮಾತುಗಳ ಮೂಲಕ 'ಘಟಿಸುವುದು' ಮಾತ್ರ ಅಚ್ಚರಿ ಹುಟ್ಟಿಸುವಷ್ಟು ವೈವಿಧ್ಯಪೂರ್ಣವಾಗಿದೆ, ಸಂಕೀರ್ಣವಾಗಿದೆ. ಬಹುಶಃ ಇದಕ್ಕೆ ಒಂದು ಕಾರಣವೆಂದರೆ ವೈದೇಹಿ ತಮ್ಮ ಕತೆಗಳಿಗಾಗಿ ಆಯ್ದುಕೊಳ್ಳುವ ಅನುಭವ ಲೋಕವು ಒಂದು ಅರ್ಥದಲ್ಲಿ ಸೀಮಿತವಾದದ್ದು. 'ಸೀಮಿತ' ಅನ್ನುವುದನ್ನು ಕನ್ನಡ ವಿಮರ್ಶೆಯಲ್ಲಿ ಅದು ಒಂದು ವಿವರಣಾತ್ಮಕವಾದ ಪದವಾಗಿ ಬಳಸಲಾಗಿದೆ. ನಾನು ಅದನ್ನು ಕೇವಲ ಒಂದು ವಿವರಣಾತ್ಮಕವಾದ ಪದವಾಗಿ ಬಳಸುತ್ತಿದ್ದೇನೆ. ಅಮೇರಿಕದ ಶ್ರೇಷ್ಠ ಕವಯಿತ್ರಿಯಾದ ಎಮಿಲಿ ಡಿಕಿನ್‌ಸನ್ ಬಗ್ಗೆ ಬರೆಯುತ್ತ ಆಯಲನ್ ಟೇಟ್ ಅವಳ ಅನುಭವದ ವಿಸ್ತೀರ್ಣವು ಕಡಿಮೆಯಾದಷ್ಟು ಆಳ ಮತ್ತು ತೀವ್ರತೆಗಳು ಅಗಾಧವಾದವು ಎಂದು ಹೇಳುತ್ತಾನೆ. ಬಸವಣ್ಣನ ಅನುಭವ ಲೋಕದ ಸಾಮಾಜಿಕ ವಿಸ್ತಾರ ಅಗಾಧವಾದುದು. ಅಕ್ಕನ ಅನುಭವಲೋಕವು ಹೋಲಿಕೆಯಲ್ಲಿ ಸೀಮಿತವಾದುದು. ಆದರೆ ಅದರ ಆಳ, ತೀವ್ರತೆಗಳು ಅಗಾಧವಾದವು ಎಂದು ಹೇಳುತ್ತಾನೆ. ಬಸವಣ್ಣನ ಅನುಭವ ಲೋಕದ ಸಾಮಾಜಿಕ ವಿಸ್ತಾರ ಅಗಾಧವಾದುದು. ಅಕ್ಕನ ಅನುಭವಲೋಕವು ಹೋಲಿಕೆಯಲ್ಲಿ ಸೀಮಿತವಾದುದು. ಆದರೆ ಅದರ ಆಳ, ತೀವ್ರತೆಗಳು ಮಾತ್ರವಲ್ಲ ಅದರ ಅರ್ಥಪೂರ್ಣತೆ ಸೀಮಿತವಾದದ್ದಲ್ಲ. ಇಂಥ ಹೇಳಿಕೆಗಳ ಹಿಂದೆ ಇರುವ ಅಪಾಯಗಳು ಗೊತ್ತಿವೆ. ಬರಹಗಾರ್ತಿಯರಿಗೆ ದಕ್ಕುವ ಅನುಭವ ಲೋಕವೇ ಚಿಕ್ಕದಾಗಿರುವುದರಿಂದ ಅನಿಯವಾರ್ಯವಾಗಿಯೇ ಅವರು ಈ ಕೊರತೆಯನ್ನು ಆಳ ಹಾಗೂ ತೀವ್ರತೆಯಿಂದ ತುಂಬಿಕೊಳ್ಳುತ್ತಾರೆ ಎನ್ನುವ ಬೀಸು ಹೇಳಿಕೆಯಾಗುವ ಅಪಾಯವು ಅದಕ್ಕಿದೆ. ಬಹಳ ವರ್ಷಗಳ ಕಾಲ ಜೇನ್ ಆಸ್ಟೆನ್‌ಳ ಕಾದಂಬರಿಗಳ ಬಗ್ಗೆ ಇಂಥದೇ ಬೀಸು ಹೇಳಿಕೆ ಚಾಲ್ತಿಯಲ್ಲಿತ್ತು. ಅವಳು ತನ್ನ ಕಾಲದ ಸಣ್ಣ ಪಟ್ಟಣಗಳ ಮಧ್ಯಮವರ್ಗದ ಕೌಟುಂಬಿಕ ಪರಿಸರದ ಬಗ್ಗೆ ಮಾತ್ರ ಬರೆಯುತ್ತಾಳೆ ಎಂದು. ಇದು ಚರಿತ್ರೆಗೆ ಎರವಾಗಿ ಬರೆದಂತೆ ಎನ್ನುವ ಪರೋಕ್ಷವಾದ ಆರೋಪವೂ ಈ ಹೇಳಿಕೆಯಲ್ಲಿತ್ತು. ಆದರೆ ಆಧುನಿಕ ವಿಮರ್ಶಕರು ಅವಳ ಕಾದಂಬರಿಗಳ ಕೌಟುಂಬಿಕ ಜಗತ್ತು ಆ ಕಾಲದ ವರ್ಗಸಂಘರ್ಷವನ್ನೂ, ಮೌಲ್ಯಗಳ

ಸಂಘರ್ಷವನ್ನೂ ಸೂಕ್ಷ್ಮವಾಗಿ ವಿಶ್ಲೇಷಿಸುತ್ತವೆ ಎಂದು ಸರಿಯಾಗಿ ಪ್ರತಿಪಾದಿಸಿದರು(ಇಂಥ ವಿಶ್ಲೇಷಣೆಯನ್ನು ವೈದೇಹಿಯವರ ಕತೆಗಳ ಬಗ್ಗೆ ಮಾಡಬಹುದೇ ಎನ್ನುವ ಸಂದಿಗ್ಧ ನನ್ನಲ್ಲಿದೆ. ಆ ವಿಷಯಕ್ಕೆ ಆಮೇಲೆ ಬರುತ್ತೇನೆ) ವೈದೇಹಿ ಬಳಸುವ ಸನ್ನಿವೇಶಗಳು, ಸಂದರ್ಭಗಳು, ವಸ್ತು ಇವುಗಳು ಸಾಕಷ್ಟು ವಿಭಿನ್ನವಾಗಿವೆ. ಆದರೆ ಅವರ ಅತ್ಯುತ್ತಮ ಕತೆಗಳು 'ಒಂದು ಪ್ರದೇಶದಲ್ಲಿ ಬೇರೂರಿರುವಂಥವು' (ಅನಂತಮೂರ್ತಿಯವರ ಮಾತು). ಅಲ್ಲದೆ ಹೆಚ್ಚಾಗಿ ಕೌಟುಂಬಿಕ ವೆನ್ನಬಹುದಾದ ಸ್ತ್ರೀ ಪ್ರಪಂಚವನ್ನೇ ತಮ್ಮ ಆವರಣವಾಗಿ ಬಳಸಿಕೊಳ್ಳುವಂಥವು. ಈ ಪ್ರಪಂಚವು ಚಿಕ್ಕದಾಗಿರುವುದಕ್ಕೆ ಇರುವ ಕಾರಣಗಳು ಕತೆಗಳ ನೇಯ್ಗೆಯಲ್ಲಿಯೇ ಖಚಿತವಾಗಿ ಸೇರಿಕೊಂಡಿವೆ. ಇವುಗಳು ಸ್ಥೂಲವಾದ ಅರ್ಥದಲ್ಲಿ ಸಾಮಾಜಿಕವಾಗಿರುವಂಥವು; ಪಿತೃಪ್ರಧಾನ ಸಮಾಜಕ್ಕೆ ಸಂಬಂಧಿಸಿದವು. ಪಿತೃಪ್ರಧಾನ ಸಮಾಜದ ಪುರುಷಾಹಂಕಾರ ಯಜಮಾನಿಕೆ, ಅಸೂಕ್ಷ್ಮತೆ ಮತ್ತು ಕ್ರೌರ್ಯದ ಬಗೆಗಿನ ವಿವರಗಳು ನೇರವಾಗಿ, ಸೂಚ್ಯವಾಗಿ ಅದೆಷ್ಟು ನಿಬಿಡವಾಗಿ ವೈದೇಹಿ ಕತೆಗಳಲ್ಲಿ ಬರುತ್ತವೆಯೆಂದರೆ ಅವುಗಳಲ್ಲಿ ಒಂದೇ ಒಂದು ಮಹತ್ವಪೂರ್ಣ ಕತೆ ಇಲ್ಲವೆಂದೇ ಹೇಳಬಹುದು. ಆದರೆ ಇವುಗಳನ್ನು ಉದ್ದೇಶಪೂರ್ವಕವಾಗಿ, ಪ್ರಜ್ಞಾಪೂರ್ವಕವಾಗಿ ತಂದ ಹಾಗೆ ಭಾಸವಾಗುವುದಿಲ್ಲ. ಹೀಗೆ ಮಾಡುವ ಅವಶ್ಯಕತೆ ಕತೆಗಾರ್ತಿಗೆ ಕಂಡಿಲ್ಲ. ಏಕೆಂದರೆ ಅವರು ಚಿತ್ರಿಸುವ ಹೆಂಗಸಿನ ದೈನಂದಿನ ಬದುಕಿನಲ್ಲಿ ಗಂಡಸರ ಯಜಮಾನಿಕೆ ಹಾಸುಹೊಕ್ಕಾಗಿದೆ. ಒಂದು ಸಿನೇಮಾ ನೋಡಲು, ಹೇರ್ ಪಿನ್, ಪೌಡರ್ ಡಬ್ಬ ಖರೀದಿಸಲು ಗಂಡಸರ ಮೇಲೆ ಅವಲಂಬಿತವಾಗಿರುವ ಸ್ಥಿತಿಯಿದೆ. ಅಲ್ಲದೆ ಹೆಂಗಸರಿಗೆ ನೀತಿ ನಿಯಮ, ಕಟ್ಟಳೆಗಳನ್ನು ನಿಯಮಿಸುವುದು ಅವರ ಮೇಲೆ ನಿಗಾ ಇಡುವುದು ಗಂಡಸರ ಕರ್ತವ್ಯವಾಗಿದೆ. ಈ ನೀತಿ–ನೈತಿಕತೆಗಳು ಕೇವಲ ಹೆಂಗಸರ ಮೇಲಿನ ಆಕ್ರಮಣ ಹಾಗೂ ದಬ್ಬಾಳಿಕೆಗಳ ತಂತ್ರಗಳಾಗಿವೆ. ಅಮ್ಮಚ್ಚಿಯನ್ನು ಪ್ರತಿನಿತ್ಯ ಹಿಂಸಿಸುವ ವೆಂಕಪ್ಪಯ್ಯನ 'ಕಟ್ಟಳೆಗಳು' ಲೈಂಗಿಕ ಕ್ರೌರ್ಯದ ಸಾಧನಗಳಾಗಿವೆ. ಅಮ್ಮಚ್ಚಿಯ ಖುಷಿಯನ್ನು, ಲವಲವಿಕೆಯನ್ನು ನಾಶಮಾಡುವ ತಂತ್ರಗಳಾಗಿವೆ. ಅಮ್ಮಚ್ಚಿಗೆ ವೆಂಕಪ್ಪಯ್ಯನ ಕಟ್ಟಳೆಗಳಲ್ಲಿ ಕಾಣುವುದು ದ್ವಂದ್ವ, ಸ್ವಾರ್ಥ ಮತ್ತು ಹಿಂಸೆ. ಆದರೆ ಅವಳ ತಾಯಿಯೂ ಸೇರಿದಂತೆ ಇಡೀ ಸಮಾಜವೇ ಪಿತೃ ಪ್ರಾಧಾನ್ಯವನ್ನು ಅಂತರ್ಗತ ಮಾಡಿಕೊಂಡಿದೆ. ವೈದೇಹಿ ಕತೆಗಳಲ್ಲಿ ಹಿರಿಯ ತಲೆಮಾರಿನ ಹೆಂಗಸರು ಪಿತೃ ಪ್ರಾಧಾನ್ಯದ ಬಗ್ಗೆ ಎರಡು ವಿರುದ್ಧ ಭಾಷೆಗಳಲ್ಲಿ ಮಾತನಾಡುತ್ತಾರೆ. ಒಂದು, ಗಂಡಸರ ಕಟ್ಟಳೆಗಳನ್ನು ಒಪ್ಪಿಕೊಂಡು ಅದನ್ನು ತಮ್ಮ ಹೆಣ್ಣುಮಕ್ಕಳು ಹಾಗೂ ಸೊಸೆಯರ ಮೇಲೆ ಗಂಡಸರ ದಬ್ಬಾಳಿಕೆಯ ಕನ್ನಡಿ ಪ್ರತಿಬಿಂಬವಾದ ರೀತಿಯ ಕ್ರೌರ್ಯದಿಂದ ಹೇರುವುದು. ಈ ಕಟ್ಟಳೆಯನ್ನು ಮುರಿಯುವ ಎಲ್ಲಾ ಹೆಂಗಸರೂ ಅವರಿಗೆ 'ಬಾಂಬೆ ಲೇಡಿ', 'ಸೂಳೆ' ಯರಾಗಿ ಕಾಣುತ್ತಾರೆ. ಅಥವಾ ಮನೆಮುರುಕರಾಗಿ. ವಸಾಹತುಶಾಹಿಯ ಸಂದರ್ಭದಲ್ಲಿ ಆಳುವವರ ನಂಬಿಕೆ, ಮೌಲ್ಯಗಳನ್ನು ಅಂತರ್ಗತ ಮಾಡಿಕೊಂಡು ಒಳೊಳಗೆಯೆ ಪೊಳ್ಳಾಗಿ ಕ್ರೂರವಾಗುವ ವ್ಯಕ್ತಿಗಳಂತೆ, ಈ

ಕತೆಗಳಲ್ಲಿ ಈ ಹೆಂಗಸರು ಕೂಡ ತಮ್ಮ ಸ್ವಪ್ರಜ್ಞೆಯಿಂದ ವಂಚಿತರಾಗಿದ್ದಾರೆ. ಗಂಡಸರ ಕಟ್ಟಳೆಗಳನ್ನು ಒಪ್ಪುವುದು ಮಾತ್ರವಲ್ಲ ತಮ್ಮ ಕಾಲದ, ಅದರ ಹಿಂದಣ ಕಾಲದ ಪುರುಷರ 'ಗಂಡಸುತನ' ಈಗಿನ ಪುರುಷರಲ್ಲಿ ಕಾಣುತ್ತಿಲ್ಲವೆಂದು ಹಲಬುತ್ತಾರೆ. ಸ್ವತಃ ಆ ಗಂಡಸುತನದ ಬಲಿಪಶು ಪಿತೃಪ್ರಧಾನ ಸಮಾಜದ ದುರಂತವಾಗಿದೆ. ಅಮ್ಮಚ್ಚಿ ವಾರೆ ಬೈತಲೆ ತೆಗೆಯುವುದು, ಗುಬ್ಬಿ ಹಿಂದಿರುವ ಕುಪ್ಪುಸವನ್ನು ಹೊಲಿಸಹೋಗುವುದು ವೆಂಕಪ್ಪಯ್ಯನಿಗೆ ಮಾತ್ರವಲ್ಲ ಅವಳ ತಾಯಿಗೂ 'ಅನೈತಿಕ'ವಾಗಿ ಕಾಣುತ್ತದೆ.

ಈ ತಲೆಮಾರಿನ ಹೆಂಗಸರು ಮಾತನಾಡುವ ಇನ್ನೊಂದು ಭಾಷೆ ಪ್ರತಿಭಟನೆಯದು. ಆದರೆ ಯಾವಾಗಲೂ ನೇರ ಪ್ರತಿಭಟನೆಯದಲ್ಲ. ಹೆಚ್ಚಾಗಿ ಮಾತಿನ ಹರಿತವಾದ ವ್ಯಂಗ್ಯದಿಂದ ಅಭಿವ್ಯಕ್ತವಾಗುವ ಪ್ರತಿಭಟನೆಯದು. ನನಗೆ ಗೊತ್ತಿದ್ದ ಮಟ್ಟಿಗೆ ಯಾವ ಉಗ್ರ ಸ್ತ್ರೀವಾದ ಬರಹಗಾರ್ತಿಯು ಈ ಹೆಂಗಸರಂತೆ 'ಗಂಡಸು' ತನವನ್ನು ಈ ಪರಿಯಾಗಿ ಛಿದ್ರಗೊಳಿಸಿದ ಉದಾಹರಣೆಯಿಲ್ಲ. 'ಬ್ರಾಹ್ಮಣ ಜಾತಿ ಹೆಂಗಸರನ್ನು ಬದುಕಲು ಬಿಡುವುದಿಲ್ಲ; ಹೆಂಗಸಿನ ಯಾವ ಸ್ವಾತಂತ್ರ್ಯವನ್ನು ಸಹಿಸುವುದಿಲ್ಲ. ಮಂಜಿಯಂಥವರ ಶೂದ್ರ ಜಾತಿಗಳಲ್ಲಿ ಕೊಂಚವಾದರೂ ಹೆಂಗಸರ ಸ್ವಾತಂತ್ರ್ಯವಿದೆ'. 'ಮಂಜಿಯ' ಕತೆಯ ಉದ್ದಕ್ಕೂ ಸೋಮಾರಿ ಮತ್ತು ಸ್ವಾರ್ಥಿಯಾಗಿ ಉಳಿಯುವ ಗುಂಡಕ್ಕ ವ್ಯಂಗ್ಯವಾಗಿಯೇ ಆಡುವ ಇಂಥ ಮಾತುಗಳಲ್ಲಿ ಮೇಲ್ಜಾತಿಯ ಗಂಡಸರು ಹೆಂಗಸರಿಗೆ ಖುಷಿಯಾಗಿ ಬದುಕಲು ಕೊಡುವುದಿಲ್ಲವೆನ್ನುವುದನ್ನು ಅತ್ಯಂತ ಖಚಿತವಾಗಿಯೇ ವಿವರಿಸುತ್ತಾಳೆ. ಗಂಡನು ಇಟ್ಟುಕೊಂಡ ಹೆಂಗಸಿಗೆ ಮನೆಯಲ್ಲಿ ಹಾಸಿಗೆ ಹಾಸಿಕೊಡುವುದು ಮಾತ್ರವಲ್ಲ, ದಿನವೂ ಹಾಲಿನ ಲೋಟವನ್ನೂ ಕಳಿಸುವ ಮೀನಾಕ್ಷತ್ತೆ ಅವನ ಗಂಡಸುತನದ ನಿಜಸ್ವರೂಪದ ಬಗ್ಗೆ ಎಚ್ಚರವಾಗೇ ಇದ್ದಾಳೆ. ನಾನು ಹಿಂದೆ ಪ್ರಸ್ತಾಪ ಮಾಡಿದ ವೈದೇಹಿಯವರ ಶ್ರಾವಣ ಪ್ರತಿಭೆ ಇಂಥ ಸನ್ನಿವೇಶಗಳಲ್ಲಿ ಅಸಾಧಾರಣವಾದ ರೀತಿಯಲ್ಲಿ ಕೆಲಸ ಮಾಡುತ್ತದೆ. ಪುರುಷತ್ವವನ್ನು ನಿರಚನಗೊಳಿಸುವುದರಲ್ಲಿ (deconstruct) ಮಾತೇ ಈ ಹೆಂಗಸರಿಗೆ ಪ್ರಧಾನವಾದ ಅಸ್ತ್ರವಾಗುತ್ತದೆ. ವ್ಯಂಗ್ಯ, ಕಟಕಿ, ಅಣಕು, ತಾತ್ಸಾರ ಇವೆಲ್ಲ ಧ್ವನಿಗಳು ತೀಕ್ಷ್ಣವಾಗಿ ಮಾತಿನ ಧಾಟಿಯಲ್ಲಿ ಕೆಲಸ ಮಾಡುತ್ತವೆ. ಗಂಡಸಿನ ಯಜಮಾನ ದನಿಯಲ್ಲಿ ಮಾತನಾಡುವ ಹೆಂಗಸರ ಮಾತುಗಳ ಪೊಳ್ಳುತನ ಹಾಗೂ ವೈರುಧ್ಯಗಳನ್ನು ಎಳೆಎಳೆಯಾಗಿ ಅವರು ಬಿಡಿಸಿ ತೋರಿಸುತ್ತಾರೆ. ಅವರ ಮಾತುಗಳಲ್ಲಿ ಹಣಕುವ ಪ್ರತಿಭಟನೆ ವಿಮುಕ್ತಿಯ ಆಸೆ ಅಥವಾ ಸಾಧ್ಯತೆಯಿಂದ ಬಂದುದಲ್ಲ. ಅನಿವಾರ್ಯವೆಂದು ಒಪ್ಪಿಕೊಂಡಿರುವ ಸ್ಥಿತಿಗಳ ಅತಾರ್ಕಿಕತೆಯನ್ನು ತೋರಿಸುವಂಥದು.

ಕೆಲವೊಮ್ಮೆ ಈ ಪ್ರತಿಭಟನೆಯು ಅನಿರೀಕ್ಷಿತವಾದ ನಡವಳಿಕೆಯಲ್ಲಿ ಅಭಿವ್ಯಕ್ತವಾಗುತ್ತದೆ. ಹುಚ್ಚಿಯೆಂದೇ ಎಲ್ಲರೂ ಕರೆಯುವ ಗೇಲಿ ಮಾಡುವ ಅಕ್ಕುವಿನ ಅಸಂಗತ ನಡವಳಿಕೆಯೇ ಒಂದು ಪ್ರತಿಭಟನೆಯಾಗಿದೆ. ಒಂದು ಕಡೆ ನಿಷ್ಪ್ರಯೋಜಕನಾದ ಗಂಡ, ಅವನಿಂದಾಗಿ

ಅವಳಿಗೆ ದೊರೆಯದಿದ್ದ ಲೈಂಗಿಕ ತೃಪ್ತಿ ಮತ್ತು ತಾಯಿತನಗಳು ಅವಳ 'ಹುಚ್ಚು' ನಡವಳಿಕೆಯಲ್ಲಿ ವ್ಯಕ್ತವಾಗುತ್ತವೆ. ಅವಳನ್ನು ಅಪಹಾಸ್ಯ ಮಾಡುವ ಎಲ್ಲರೂ ಅಮಾನವೀಯವಾದ ಕ್ರೌರ್ಯದಲ್ಲಿ ಭಾಗಿಗಳಾಗಿದ್ದರೆ, ಅವಳ ಮೇಲಿನ ಹಿಂಸೆಗೆ ಅನುಮತಿಸುವ ಅಜ್ಜಯ್ಯ ಮತ್ತು ಆ ಹಿಂಸೆಯನ್ನು ಮಾಡುವ ವಾಸು, ಈ ಇಬ್ಬರು ಗಂಡಸರು ಪುರುಷ ಪ್ರಾಧಾನ್ಯದ ಕೌರ್ಯದ ಉದಾಹರಣೆಗಳಾಗಿದ್ದಾರೆ. ಹೀಗಾಗಿ ವಿಕ್ಷಿಪ್ತಳೂ, ಹಠಮಾರಿಯೂ ಆಗಿ ಕಾಣುವ ಅಕ್ಕು ಏಕಕಾಲಕ್ಕೆ ಬಲಿಪಶುವೂ ಮತ್ತು ಬಂಡಾಯಗಾತಿಯೂ ಆಗಿದ್ದಾಳೆ. ಅವಳಲ್ಲಿ ಅದುಮಿಡಲಾದ ಲೈಂಗಿಕತೆಯನ್ನು ಶಿಕ್ಷಿಸಬಯಸುವ ಗಂಡಸರು ಹಾದರಬಡಕರೂ ಕಚ್ಚೆಹರುಕರೂ ಆಗಿದ್ದಾರೆ. ವಿಧೇಯ ಸತಿಮಣಿಗಳಾಗಿರುವ ಇತರ ಹೆಂಗಸರು ಇಂಥ ಗಂಡಸರ ಸಹಾನುವರ್ತಿಗಳಾಗಿದ್ದಾರೆ. ಇವರುಗಳ ಮಧ್ಯ ಅಕ್ಕುವಿನ ಹುಚ್ಚು ಪ್ರತಿಭಟನೆಯ ಮಾರ್ಗವೇ ಆಗಿದೆ. ಸಂಪ್ರದಾಯಸ್ಥ ಕುಟುಂಬ ಮತ್ತು ಸಮಾಜಗಳು ಅವಳ ಈ ಪ್ರತಿಭಟನೆಯನ್ನು ದೈಹಿಕ ಹಿಂಸೆಯ ಮೂಲಕ ಹತ್ತಿಕ್ಕುವ ಪ್ರಯತ್ನ ಮಾಡುತ್ತವೆ. ಅವಳನ್ನು ದನದಂತೆ ಕೂಡಿಹಾಕಿ ಬಡಿಯುವುದಕ್ಕೆ ಕಾರಣವೆಂದರೆ ಅವಳು ಮರ್ಯಾದಸ್ತ ಗಂಡಸರ ಹಾದರವನ್ನು ಬಯಲಿಗೆಳೆದಿದ್ದಾಳೆ ಮತ್ತೆ ಅದಕ್ಕೂ ಮುಖ್ಯವಾಗಿ ತಾನು ಬೇರೆ ಗಂಡಸಿನಿಂದ ತೃಪ್ತಿ ಪಡೆದಿದ್ದೇನೆ ಎಂದು ಹೇಳಿದ್ದಾಳೆ. ಸಿಕ್ಕ ಎಲ್ಲಾ ಸೂಳೆಯರ ಸಹವಾಸವನ್ನು ಮುಗಿಸಿ ಈಗ ಅಕ್ಕುವನ್ನೂ ಮುಟ್ಟಲು ಪ್ರಯತ್ನಿಸುವ ಅವಳ ಗಂಡನನ್ನು ಅವಳೇ ಓಡಿಸಿಬಿಟ್ಟಿದ್ದಾಳೆ. 'ಪೋಂಕು', 'ಎರಡು ಸುತ್ತು ಕಡಿಮೆ ಇರುವ' ಅಕ್ಕುವಿನ ವಿಕ್ಷಿಪ್ತತೆಯನ್ನು ಹಾಸ್ಯಮಾಡುವಂತೆ ಆರಂಭವಾಗುವ ಈ ಕತೆ ಸಂಪ್ರದಾಯಸ್ತ ಸಮಾಜವೊಂದರಲ್ಲಿ ಹೆಣ್ಣಿನ ಲೈಂಗಿಕತೆ ಮತ್ತು ತಾಯಿತನದ ಹಂಬಲಗಳನ್ನು ದಮನ ಮಾಡುವ ಕ್ರೌರ್ಯದ ಬಗೆಗಿನ, ಆಘಾತಗೊಳಿಸುವ ಕತೆಯಾಗಿಬಿಡುತ್ತದೆ. 'ವಾಣಿಮಾಯಿ' ಕತೆಯೂ ಕೂಡ ವಿಭಿನ್ನ ರೀತಿಯ ಪ್ರತಿಭಟನೆಯನ್ನು ದಾಖಲಿಸುತ್ತದೆ. ಮೆಟ್ಟು ತೊಟ್ಟುಕೊಳ್ಳಬೇಕೆನ್ನುವ ಸಣ್ಣ ಆಸೆಯನ್ನು ವಿನಾಕಾರಣ ಕ್ರೌರ್ಯದಿಂದ ನಿರಾಸೆಗೊಳಿಸುವ ನರಸಿಂಹನನ್ನು, ಹಲ್ಲು ಮುರಿಯುವಂತೆ ಸಾಯುತ್ತಿರುವ ವಾಣಿಮಾಯಿ ಒದೆಯುವುದು ಇಂಥ ಅನಿರೀಕ್ಷಿತ ಪ್ರತಿಭಟನೆಯಾಗಿದೆ. ಕೈ ಕಾಲು ಬಿದ್ದು ಹೋಗಿವೆಯೆನ್ನುವ ಹಾಗೆ, ದೇಹವೂ ತಣ್ಣಗಾಗುತ್ತಿರುವ ವಾಣಿಮಾಯಿಯ ಮೈಯಲ್ಲಿ ಪವಾಡ ನಡೆದಂತೆ ಶಕ್ತಿಸಂಚರಿಸಿ ಅವಳು ಒದೆಯುತ್ತಾಳೆ. ಅಲ್ಲಿಯವರೆಗೆ ನರಸಿಂಹ ಮಾತ್ರವಲ್ಲ ಉಳಿದವರು ಕೂಡ ವಾಣಿಮಾಯಿಯನ್ನು ಲಘುವಾಗಿ ನೋಡುತ್ತಾರೆ. ಈ ಕತೆಯ ಸನ್ನಿವೇಶಗಳನ್ನು ಪ್ರಾತಿನಿಧಿಕವಾಗಿ ನೋಡುವುದಾದರೆ ವೈದೇಹಿ ಪಿತೃಪ್ರಧಾನ್ಯವನ್ನು ಕಣ್ಣಿಗೆ ರಾಚುವಂಥ ದೊಡ್ಡ ಘಟನೆಗಳಲ್ಲಿ ಕಾಣುವುದಿಲ್ಲ. ಬಲಾತ್ಕಾರ, ಕೊಲೆ, ದಹನಗಳ ಘಟನೆಗಳು ಅವರ ಕತೆಗಳಲ್ಲಿಲ್ಲ. ಆದರೆ ಇವೆಲ್ಲವನ್ನು ಮೀರುವ ಕ್ರೌರ್ಯ ದೈನಂದಿಕತೆಯಲ್ಲಿ ಅಡಗಿದೆ. ಹಾಗೂ ಈ ದೈನಂದಿಕತೆಯೇ ಒಂದು ಕಾಲಮಾನದವರೆಗಿನ ಸಮಾಜದಲ್ಲಿ ಹೆಂಗಸರ

ವಿಧಿ ಹಾಗೂ ದೈವವಾಗಿತ್ತು. ಅದರಿಂದ ಬಿಡುಗಡೆಯೇ ಇಲ್ಲದ್ದರಿಂದ ಅದುವೇ ಅವರ ಜಗತ್ತಿನ ಪರಿಧಿಯೂ ಆಗಿತ್ತು. ಈ ದೈನಂದಿಕತೆಯ ಅಗೋಚರ ಕ್ರೌರ್ಯದಲ್ಲಿ ಎಲ್ಲಾ ಗಂಡಸರೂ ತಂದೆ, ಸಹೋದರ, ಗಂಡ ಎಲ್ಲರೂ ಭಾಗಿಗಳೇ ಮತ್ತು ಅವರಿಗೆ ಸಂಪ್ರದಾಯ, ಕಟ್ಟಳೆ ಇವೆಲ್ಲವೂ ಹೆಂಗಸರ ವಿರುದ್ಧದ ಆಯುಧಗಳೇ ಆಗಿವೆ. ಈ ಸಮಾಜದ ವಿಶಿಷ್ಟತೆಯೆಂದರೆ ಕಟ್ಟಳೆಗಳನ್ನು ವಿಧಿಸುವ ಗಂಡಸರು 'ಕಂಡ ಕಂಡಲ್ಲಿ ಮೇಯುವ' ಚಟವುಳ್ಳವರು, ಹೀಗೆ ಮಾಡಿ ಬಾಯಿಲೆಯ ಗೂಡಾಗಿರುವವರು' ನಪುಂಸಕರಾಗಿರುವವರು. ಇನ್ನೂ ಹಿಂದಿನ ತಲೆಮಾರಿನವರು ಯಾವ ಗುಟ್ಟೂ ಇಲ್ಲದೇ ವೇಶ್ಯೆಯರನ್ನು ಇಟ್ಟುಕೊಂಡಿರುವವರು. ಇದಾವ ಐಬೂ ಇಲ್ಲದ ಇನ್ನು ಕೆಲವರು ಸ್ವಾಭಿಮಾನವೇ ಇಲ್ಲದ ಬೆಪ್ಪರು. ವೈದೇಹಿ ಕಾಣುವ ವ್ಯಂಗ್ಯವೆಂದರೆ ಇಂಥ ನಮೂನೆಗಳೆಲ್ಲ ಸೇರಿ ಪುರುಷ ಪ್ರಾಧಾನ್ಯವನ್ನು ನಡೆಸಿಕೊಂಡು ಬರುವವರು. ಮಹಾರಾಜನ ಹೊಸ ಬಟ್ಟೆಯಂತೆ ಇದೂ ಕೂಡ ವಾಸ್ತವವಾಗಿರುವುದರಿಂದಲೇ ಪುರುಷಪ್ರಾಧಾನ್ಯದ ವಿರುದ್ಧ ಪ್ರತಿಭಟನೆ ಸಾಧ್ಯವಾಗುವುದು. ವಸಾಹತುಶಾಹಿಯಂತೆ ಪುರುಷಪ್ರಾಧಾನ್ಯವೂ ಎಂದೂ ಪರಿಪೂರ್ಣವಲ್ಲ; ಅದು ಸಮಗ್ರ ವಿಜಯವನ್ನೂ ಸಾಧಿಸುವುದಿಲ್ಲ. ಬದಲಾಗಿ ನೇರ ಪ್ರತಿಭಟನೆ ಅಥವಾ ವಿಡಂಬನೆಗೆ ಅವಕಾಶವಿರುವಂತೆ ಬಿರುಕುಗಳನ್ನು ಉಳ್ಳದ್ದು. ಇಂಥ ಸಂಕೀರ್ಣವಾದ ತಿಳುವಳಿಕೆಯೇ ವೈದೇಹಿಯವರನ್ನು ಒಬ್ಬ ಮಹತ್ವಪೂರ್ಣ ಮಹಿಳಾಪರ ಬರಹಗಾರ್ತಿಯನ್ನಾಗಿಸಿದೆ.

ಅವರು ಬರೆಯುವುದು ಭೌಗೋಳಿಕವಾಗಿ ಕೂಡ ಚಿಕ್ಕ ವಿಸ್ತೀರ್ಣವುಳ್ಳ ಒಂದು ಸಮಾಜದ ಬಗ್ಗೆ. ಹೀಗಾಗಿಯೇ ಅವರು ಬಳಸುವ ಉಪಭಾಷೆ ಕೂಡ ಕೆಲವು ಚದರ ಮೈಲಿ ವಿಸ್ತೀರ್ಣ ಪ್ರದೇಶಕ್ಕೆ ಸೀಮಿತವಾದುದು. ಅವಶ್ಯವಿದ್ದಾಗ ಮಾತ್ರ ಕರ್ನಾಟಕವನ್ನು (ಶಿಷ್ಟ ಕನ್ನಡವನ್ನು) ಆಡುವ ಅವರ ಪಾತ್ರಗಳ ಅಂತರಂಗದ ಆತ್ಮೀಯ ಭಾಷೆ ಈ ಉಪಭಾಷೆಯೇ. ಅಂದ ಹಾಗೆ ಈ ಉಪಭಾಷೆಯ ಬಳಕೆ ಕೇವಲ 'ಪ್ರಾಂತೀಯತೆ', 'ಸ್ಥಳೀಯತೆ'ಯಿಂದ ಪ್ರೇರಿತವಾದದ್ದಲ್ಲ. ಬೇಂದ್ರೆಯವರ ಕಾವ್ಯವನ್ನು ಕುರಿತು ಬರೆಯುವಾಗ 'ಜಾನಪದ' 'ಪ್ರಾದೇಶಿಕ ಸೊಗಡು' 'ದೇಸೀ' ಇವುಗಳನ್ನು ಅರ್ಥದ ಖಚಿತತೆ ಇಲ್ಲದೆ ಬಳಸುವುದನ್ನು ನಾನು ವಿರೋಧಿಸಿ ಬರೆದಿದ್ದೇನೆ. ನಾನು ಆ ಸಂದರ್ಭದಲ್ಲಿ ವಾದಿಸಿದ ಹಾಗೆ ಬೇಂದ್ರೆಯವರಿಗೆ ಧಾರವಾಡ ಪ್ರಾಂತದ ಆಡುವಮಾತು ಯಾಕೆ ಅನಿವಾರ್ಯವಾಗಿತ್ತೆಂದರೆ ಅದು ಅಲ್ಲಿಯ ಸಮುದಾಯದ ಸಮಗ್ರ ಭಾವಕೋಶದ ಕವಚವಾಗಿತ್ತು. ಅದು ಆ ಸಮುದಾಯದ ಭಾವಾಭಿವ್ಯಕ್ತಿಯ ರಿಜಿಸ್ಟರ್ ಗಳಿಂದ ಕೂಡಿತ್ತು. ಇದೇ ಮಾತನ್ನು ವೈದೇಹಿ ಬಳಸುವ ಭಾಷೆಯ ಬಗ್ಗೆಯೂ ಹೇಳಬಹುದು. ಅವರು ಬರೆಯುವ ಸಮುದಾಯದ ಭಾವಕೋಶಕ್ಕೆ ಬೇರೆ ಭಾಷೆಯೇ ಇಲ್ಲ. ಆ ಭಾಷೆಯನ್ನು ಅಭಿವ್ಯಕ್ತಿಯ ಮಾಧ್ಯಮವೆಂದು ಕರೆಯುವುದೂ ತಪ್ಪು. ಏಕೆಂದರೆ ಅದು ಮಾಧ್ಯಮವಲ್ಲ. ಆ ಭಾಷೆಯೇ ಆ ಸಮುದಾಯದ ಮಾನಸಿಕ ಪ್ರಪಂಚವೂ ಆಗಿದೆ.

ಹೀಗಾಗಿ ಕ್ಷೇತ್ರ(territory) ಮತ್ತು ಭಾಷೆ ಇವೆರಡರಿಂದಲೂ ಸೀಮಿತವಾದ ಸಮಾಜವೊಂದರ ಬಗ್ಗೆ ವೈದೇಹಿ ಬರೆಯುತ್ತಾರೆ. ಈ ಸಮಾಜದ ಲಕ್ಷಣವೆಂದರೆ ಇದರಲ್ಲಿ ಹೆಂಗಸರ ಪಾಲಿನ ಜಗತ್ತಿನ ಗಡಿರೇಖೆಗಳನ್ನು ಸ್ಪಷ್ಟವಾಗಿ ಕೊರೆಯಲಾಗಿದೆ. ಕಾರಂತರ 'ಮರಳಿ ಮಣ್ಣಿಗೆ' ಕಾದಂಬರಿಯ ಸರಸೋತಿ–ಪಾರೋತಿಯರ ಜಗತ್ತನ್ನು ನೋಡಿದ ಕೆಲವು ಓದುಗರಿಗೆ ಅದು ಹಪ್ಪಳ ಸಂಡಿಗೆಗಳ ಮಹಾಕಾವ್ಯವಾಗಿ ಕಂಡಿತ್ತು. ವೈದೇಹಿ ಕತೆಗಳ ಅವಸರದ ಓದುಗನಿಗೂ ಅವರು ಚಿತ್ರಿಸುವ ಹೆಂಗಸರ ಜಗತ್ತು ದೈನಂದಿಕತೆಯ, ಬರಡುತನದ 'ಪುನರಾವರ್ತನೆ'ಯ ಜಗತ್ತಾಗಿ ಕಾಣಬಹುದು. ದೊಡ್ಡ ಸವಾಲುಗಳು, ಸಂಘರ್ಷಗಳು ಇಲ್ಲದ ಅತಿ ಸಾಮಾನ್ಯ ಜಗತ್ತಾಗಿ ಕಾಣಬಹುದು. ಆದರೆ ಈ ಜಗತ್ತಿನ ಮೂಲಕವೇ ವೈದೇಹಿ, ಪಿತೃಪ್ರಾಧಾನ್ಯದ ತಣ್ಣಗಿನ ಕ್ರೌರ್ಯಗಳನ್ನು ಶೋಧಿಸುತ್ತಾರೆ. ಈ ಜಗತ್ತಿನಲ್ಲಿ ಹೆಂಗಸರದು ತೀರಾ ಇಕ್ಕಟ್ಟಿನ ಬದುಕು. ಅದು ಅಸ್ವಾತಂತ್ರ್ಯದ, ಪರಾವಲಂಬನೆಯ ಹಾಗು ನಿರಂತರ ಅವಮಾನದ ಜಗತ್ತು. ಮೈಮೇಲೆ ಬೆಟ್ಟದಷ್ಟು ಚಿನ್ನ ತೊಟ್ಟವರೂ (ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ) ಊಟಕ್ಕೂ ಗತಿಯಿಲ್ಲದವರೂ ಈ ದುಗುಡದಲ್ಲಿ ಸಮಾನರೇ, ಬಿಕ್ಕಟ್ಟಿನ, ಅಸಹಾಯಕತೆಯ ವಿಪುಲವಾದ ಚಿತ್ರಗಳು ವೈದೇಹಿ ಕತೆಗಳಲ್ಲಿವೆ. ಪ್ರಜ್ಞೆಯು ಇನ್ನೂ ತೀಕ್ಷ್ಣವಾಗಿದ್ದರೂ ಮಾತು ಹೊರಡದ 'ಮರಗಿಡಬಳ್ಳಿ' ಕತೆಯ ನಿರೂಪಕಿ ತನ್ನ ಮಗ, ಸೊಸೆ, ಮಗಳು ಎಲ್ಲರೂ ತನ್ನನ್ನು ಬಿಸುಟು ಹೊರಡಲು ಸಿದ್ಧವಾಗಿರುವುದನ್ನು ಅನುಭವಿಸುವ ದಾರುಣತೆ, ಬೇರೆ ಸಂದರ್ಭಗಳಲ್ಲಿ ಕೂಡ ಹೆಂಗಸರು ಅನುಭವಿಸುವ ತಬ್ಬಲಿತನದ ದ್ಯೋತಕವಾಗಿದೆ ('ಮರಗಿಡಬಳ್ಳಿ'). ಇಷ್ಟಾದರೂ ಈ ಇಕ್ಕಟ್ಟಿನಿಂದ ಹೊರಬರುವ ಸಾಧ್ಯತೆಗಳು ಈ ಜಗತ್ತಿನಲ್ಲಿ ಇಲ್ಲವೆಂದೇ ಹೇಳಬಹುದು (ಅಂದರೆ ಅಕ್ಕುವಿನ ಹಾಗೆ ಮುಕ್ತಳಾಗದಿದ್ದರೆ). ಹೀಗಾಗಿ ಇಲ್ಲಿ ಹೆಂಗಸರು ಯಾವುದಕ್ಕೂ ಆಸೆಪಡಲಾರರು. ಪಟ್ಟರೂ ಅದನ್ನು ಪೂರೈಸಿಕೊಳ್ಳಲಾರರು. ಹಾಗೆ ಪೂರೈಸಿಕೊಂಡವರು ರಹಸ್ಯಮಯವಾಗಿ, ಒಗಟಾಗಿಯೇ ಉಳಿಯುತ್ತಾರೆ (ಉದಾಹರಣೆಗೆ ರಾಜತ್ತೆ ಮತ್ತು ಶುಭಾಂಟಿ). ಮಿಕ್ಕವರೆಲ್ಲ ಆಸೆಯೆನ್ನುವ ಬಿಸಿಲುಗುದುರೆಯನ್ನು ಮಾತ್ರ ಕಂಡವರು.

ಹೀಗಾಗಿಯೇ ಲೈಂಗಿಕತೆಯ ಪ್ರಶ್ನೆಯು ವೈದೇಹಿಯವರ ಕತೆಯಲ್ಲಿ ಒಂದು motif ಆಗಿ ಮತ್ತೆ ಮತ್ತೆ ವಿವಿಧ ರೂಪಗಳಲ್ಲಿ ಪ್ರಧಾನವಾಗಿಯೇ ಬರುತ್ತದೆ. ಇದನ್ನು ವಿಮರ್ಶೆ ಗಮನಿಸಿದಂತೆ ತೋರುವುದಿಲ್ಲ. ಬಹುಶಃ ಅದು ವಾಚ್ಯವಾಗಿ ಅಥವಾ ಕಣ್ಣಿಗೆ ರಾಚುವಂತೆ ಈ ಕತೆಗಳಲ್ಲಿ ಬರುವುದಿಲ್ಲವಾದ್ದರಿಂದ ಹೀಗಾಗಿರಬಹುದು. ವೈದೇಹಿ ಬರೆಯುವ ಸಮಾಜ ಸಂಪ್ರದಾಯಸ್ಥ ಹೌದು. ಆದರೆ ಬರಹಗಾರ್ತಿ ಸಂಪ್ರದಾಯಸ್ಥೆ ಅಲ್ಲ. ಸಂಪ್ರದಾಯಸ್ಥ ಸಮಾಜವನ್ನು ಅತ್ಯಂತ ಮೂಲಭೂತವಾಗಿ ಪ್ರಶ್ನಿಸುವಂಥವರು. ಜೊತೆಗೆ ಲೈಂಗಿಕತೆಯ ಬಗ್ಗೆ ಸ್ಪಷ್ಟವಾಗಿರುವವರು. ಈ ಮಾತು ಕೇವಲ ಗಂಡಸರ ಲೈಂಗಿಕತೆಯ ಬಗ್ಗೆ ಮಾತ್ರ ಹೇಳಿದ್ದಲ್ಲ. ಅವರು ಹೇರಬಯಸುವ ನೈತಿಕತೆಯು ಬಹುಪಾಲು 'ಟೊಳ್ಳಾಗಿರುತ್ತದೆ' ಅಥವಾ ಲೈಂಗಿಕ ಆಕ್ರಮಣದ ಇನ್ನೊಂದು

ರೂಪವಾಗಿರುತ್ತದೆಯೆನ್ನುವುದನ್ನು ಈಗಾಗಲೇ ಚರ್ಚಿಸಲಾಗಿದೆ. ಇಷ್ಟೇ ಮುಖ್ಯವಾಗಿರುವುದು ಹೆಣ್ಣಿನ ಲೈಂಗಿಕತೆ. 'ಸೌಗಂಧಿಯ ಸ್ವಗತಗಳು' ಕತೆಯಲ್ಲಿ ಇದರ ಪ್ರಸ್ತಾಪ ಹಗುರವಾಗಿ ಬರುತ್ತದೆಯಾದರೂ ಅವಳು ಕಾಣುವ ಹಗಲುಗನಸಿನಲ್ಲಿ ಬರುವ ಗಂಡಸು ಅವಳ ಮೇಲೆ ಹುಲಿಯಂತೆ ಎರಗಿ ಅವಳ ಬಾಯಿಯನ್ನು ಮುಚ್ಚಿ ಅವಳನ್ನು ಒತ್ತಾಯದಿಂದ ಅನುಭವಿಸುವವನು ಎನ್ನುವುದನ್ನು ಗಮನಿಸಬೇಕು. ಅದು ತನ್ನ ತಂದೆ ತಾಯಿಯರ ನಿಗಾದಲ್ಲಿ ಸಾಗಬೇಕಾದ ತನ್ನ ಬದುಕಿನಲ್ಲಿ ಸಾಧ್ಯವಿಲ್ಲವೆನ್ನುವುದು ಸೌಗಂಧಿಗೂ ಗೊತ್ತಿದೆ. ವೈದೇಹಿಯವರ ಕತೆಗಳಲ್ಲಿ ಅವಳಂತೆಯೇ ಆಸೆ ಪಡುವ, ಆಸೆ ಪಡಲಾಗದ, ಆಸೆ ಪಟ್ಟರೂ ಅದನ್ನು ಪೂರೈಸಲಾಗದ ಅನೇಕ ಹೆಂಗಸರು ಏನೂ ಘಟಿಸದ ಬದುಕನ್ನೇ ಸವೆಯಿಸುತ್ತಾರೆ. ಹೆನ್ರಿ ಜೇಮ್ಸ್ (Henry James) ಬಳಸಿದ ಮಾತಿನಲ್ಲಿ ಹೇಳುವುದಾದರೆ ಅವರೆಲ್ಲರದು Tales of unlived life, ಅಂದರೆ ಬದುಕಲಾಗದ ಜೀವನದ ಕತೆಗಳೇ. ಒಂದು ಅರ್ಧದಿನ ತನ್ನ ಮನೆಯಲ್ಲಿಯೇ, ಗಂಡನಿಗೆ ಕೋರಿ ಬೀಗ ಹಾಕಿಸಿಕೊಂಡು ಸ್ವತಂತ್ರಳಾಗಿ ಇರಬಯಸುವ ಮಾಲತಿಗೆ ಅರ್ಥವಾಗುವುದೆಂದರೆ ಅಂಥ ಪರವಾನಗಿ ಮೇರೆಗೆ ಪಡೆದ ಸ್ವಾತಂತ್ರವನ್ನೂ ತಾನು ಮುಕ್ತವಾಗಿ ಅನುಭವಿಸಲಾರೆ ಎನ್ನುವುದು ('ಗೂಡಿನೊಳಗೆ ಒಂದು ಹಕ್ಕಿ') ಕತೆಯ ಕೊನೆಯಲ್ಲಿ ಅವಳು ಅಂದುಕೊಳ್ಳುವ ಹಾಗೂ ಅವಳು ಬಾಡಿಗೆ ಪಡೆದ ಕ್ಷಣಗಳೂ ವ್ಯರ್ಥವಾಗಿ ಕಳೆದು ಹೋಗುತ್ತವೆ. ಚೆತ್ತಲಾದರೂ ಅವಳು ತನ್ನ ಮನಸ್ಸಿನ ಸಂಕೋಲೆಗಳಿಂದ ಮುಕ್ತಳಾಗಲಾರಳು. ಇಂಥ ಕತೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಇವುಗಳ ಹಿಂದಿರುವ ದೊಡ್ಡ ಸಂದಿಗ್ಧತೆ ಹೆಣ್ಣಿನ ಲೈಂಗಿಕತೆಗೆ ಸಂಬಂಧಪಟ್ಟಿರುವುದು. ವೈದೇಹಿ ಚಿತ್ರಿಸುವ ಸಮಾಜದಲ್ಲಿ ಈ ಲೈಂಗಿಕತೆಯು 'The unspeakable, unspoken' (ಹೇಳಲಾಗದ್ದು, ಹೇಳದೇ ಇದ್ದದ್ದು) ಆಗಿಯೇ ಉಳಿಯುತ್ತದೆ. ಅಮೆರಿಕದ ಶ್ರೇಷ್ಠ ಬರಹಗಾರ್ತಿ ಟೋನಿ ಮಾರಿಸನ್ ಈ ಪದವನ್ನು ಬೇರೆ ಸಂದರ್ಭದಲ್ಲಿ ಬಳಸುತ್ತಾಳೆ. ಇದು ಅಗೋಚರವೂ ಆಗಿ ಉಳಿಯುವುದಕ್ಕೆ ಕಾರಣವೆಂದರೆ ಅಂತಿಮವಾಗಿ ಇದು ಕತೆಗಳಲ್ಲಿ ಬರುವ ಹೆಂಗಸರು ಕಲ್ಪಿಸಿಕೊಳ್ಳುವ ಆದರೆ ವಾಸ್ತವವಾಗಿ ಪಡೆಯಲಾಗದ ಅನುಭವವಾಗಿದೆ. ಆದರೆ ಹೀಗಿದ್ದರೂ ಅದು ಅವರ ಬದುಕಿನ ವಕ್ರತೆಗಳಿಗೆ, ದುಗುಡಗಳಿಗೆ ಪ್ರಧಾನ ಕಾರಣವೂ ಆಗಿದೆ. ಪುರುಷಪ್ರಧಾನ ಸಮಾಜದ ಬಗೆಹರಿಯದ ಸಮಸ್ಯೆಯೆಂದರೆ ಲೈಂಗಿಕತೆಯೇ ಆಗಿದೆ. ಇದನ್ನು ವೈದೇಹಿ ಶೋಧಿಸುವ ಬಗೆ ಅದೆಷ್ಟು ಸೂಕ್ಷ್ಮವಾಗಿದೆಯೆಂದರೆ ಅದು ಕತೆಗಳಲ್ಲ ಒಂದು sub-merged, sub-text ಆಗಿ ಇರುತ್ತದೆ. ಕೆಲವೊಮ್ಮೆ ಒಂದೆರಡು ವಾಕ್ಯಗಳಲ್ಲಿ ಕಂಡು ಮಾಯವಾಗಿ ಬಿಡುತ್ತದೆ. ಉದಾಹರಣೆಗೆ 'ಅಂತರಾಳದ ಬದುಕು' ಕತೆಯಲ್ಲಿ ಗಂಡನಿಂದ ದೂರವಿರುವ ಚಿಕ್ಕಮ್ಮ ವಿಕ್ಷಿಪ್ತಳು ಎಂದು ಅವಳ ಮನೆಯಲ್ಲಿ ವಾಸ ಮಾಡುವ ಸಹೋದರಿಯರು ಅಂದುಕೊಳ್ಳುತ್ತಾರೆ. ಏಕೆಂದರೆ ಅವರು ಮನೆಗೆ ವಾಪಸ್ಸು ಬರುವವರೆಗೂ ವಿಹ್ವಲವಾಗಿ ಕಾಯುವ ಚಿಕ್ಕಮ್ಮ ಅವರ ಜೊತೆಗೆಯೇ ಮಲಗುತ್ತಾಳೆ.

ಅವಳು ಚಿಕ್ಕಪ್ಪನಿಂದ ದೈಹಿಕವಾಗಿ ದೂರವಿರುವುದು ಏಕೆ ಎನ್ನುವುದು ಅವಳ ವಿಕ್ಷಿಪ್ತತೆಗೆ ಸಂಬಂಧಿಸಿದಂತೆ ತೋರುತ್ತದೆ. ಆದರೆ ಕೆಲವು ದಿನಗಳ ಕಾಲ ಚಿಕ್ಕಪ್ಪ-ಚಿಕ್ಕಮ್ಮನನ್ನು ಒಟ್ಟಿಗೇ ಇರಲು ಬಿಟ್ಟುಹೋದವಳು ವಾಪಸ್ಸು ಬಂದಾಗ ಅವಳಿಗೆ ಅನಿಸುವುದೆಂದರೆ ಚಿಕ್ಕಮ್ಮ 'ಬಳಲಿದ ವೇಶ್ಯೆಯಂತೆ' ಕಂಡಳು ಎಂದು. ಈ ಎರಡೇ ಪದಗಳು ಚಿಕ್ಕಮ್ಮ-ಚಿಕ್ಕಪ್ಪರ ಲೈಂಗಿಕ ಸಂಬಂಧವನ್ನು ಸೂಚ್ಯವಾಗಿ ವಿವರಿಸುತ್ತವೆ.

'ಅಮ್ಮಚ್ಚಿಯ ನೆನಪು' ಕತೆಯಲ್ಲಿ ಅಮ್ಮಚ್ಚಿಯ ಮೇಲೆ ವೆಂಕಪ್ಪಯ್ಯ ಮಾಡುವ ದೈಹಿಕ ಹಿಂಸೆ ಲೈಂಗಿಕ ಬಲಾತ್ಕಾರದ ಸ್ವರೂಪದ್ದೇ ಆಗಿದೆ ಮಾತ್ರವಲ್ಲ ಅಮ್ಮಚ್ಚಿ ಅವನನ್ನು ಮದುವೆಯಾಗುವುದಕ್ಕೆ ಕಾರಣವೂ ಆಗುತ್ತದೆ. 'ಚಂದಲೆ' ಕತೆಯಲ್ಲಿ ಹದಿಹರೆಯದ ಜೀನ 'ಆಂಟಿ' ನನಗೆ ಸೂಳೆಯಾಗಬೇಕು ಎನ್ನುವ ಆಸೆ' ಎಂದು ಹೇಳಿಕೊಳ್ಳುತ್ತಾಳೆ. ಕತೆಯ ನಿರೂಪಕಿಯಾದ ರಮಿಯ ಮೇಲೆ ಈ ಮಾತು ಎಂಥ ಪರಿಣಾಮವನ್ನು ಬೀರುತ್ತದೆಯೆಂದರೆ ಅವಳು ತನ್ನ ಮಗ ಹಾಗೂ ಗಂಡನನ್ನು ಜೀನಳ 'ಮುಕ್ತ' ಲೈಂಗಿಕತೆಯಿಂದ ರಕ್ಷಿಸಲು ಹೆಣಗತೊಡಗುತ್ತಾಳೆ. ಕತೆಯಲ್ಲಿ ಬರುವ ಚಂದಲೆಯ ಉಪಕತೆಯಿಂದ ಸ್ಪಷ್ಟವಾಗುವುದೆಂದರೆ ಅವಳ ಲೈಂಗಿಕತೆಯಲ್ಲಿ ಯಾವ ಮುಕ್ತತೆಯೂ ಇಲ್ಲ. ಅದು ಸಂಪ್ರದಾಯಸ್ಥ ಸಮಾಜದಲ್ಲಿ ಒಪ್ಪಿಕೊಳ್ಳಲಾಗುವ ವೇಶ್ಯಾವೃತ್ತಿಗೆ ಅಂದರೆ ಮತ್ತೆ ಪುರುಷ ಪ್ರಾಧಾನ್ಯಕ್ಕೆ ಹೆಂಗಸಿನ ಲೈಂಗಿಕತೆಯನ್ನು ಒಪ್ಪಿಸುವುದಕ್ಕೆ ಒಂದು ಸುಲಭ ಸಾಧನವಾಗುತ್ತದೆ. ಇಂಥ ಅನೇಕ ಕತೆಗಳಲ್ಲಿ ವೈದೇಹಿ ಪುರುಷ ಪ್ರಾಧಾನ್ಯತೆಯ ಒಡಲಲ್ಲೇ ಇರುವ ಲೈಂಗಿಕತೆಯ ಬಗೆಗಿನ ವಿರೋಧಾಭಾಸಗಳನ್ನು ನಿರಚನಗೊಳಿಸುತ್ತಾರೆ. ಈಗಾಗಲೇ ಹೇಳಿದ ಹಾಗೆ ಈ ವಿರೋಧಾಭಾಸವು ಪುರುಷ ಪ್ರಾಧಾನ್ಯತೆಯಲ್ಲಿ ದೊಡ್ಡ ಬಿರುಕೊಂದನ್ನು ಉಂಟು ಮಾಡುತ್ತದೆ ಹಾಗೂ ಈ ಬದುಕಿನೊಳಗೆ ಪ್ರತಿಭಟನೆಗೆ ಒಂದು ಇಂಬು ದೊರೆಯುತ್ತದೆ. ಆದ್ದರಿಂದಲೇ ಈ ವಿರೋಧಾಭಾಸವನ್ನು ನೈತಿಕತೆ, ಸಾಮಾಜಿಕ ಕಟ್ಟಳೆಗಳ ಮುಸುಕಿನಲ್ಲಿ ಬಚ್ಚಿಡುವ ಗೋಸುಂಬೆತನವನ್ನು ಹೀಗಳೆಯುವುದು ಹೆಂಗಸರ ಪ್ರತಿಭಟನೆಯ ವಿಧಾನವಾಗುತ್ತದೆ.

ವೈದೇಹಿಯವರ ಮಹತ್ವಪೂರ್ಣ ಕತೆಗಳು ಒಂದು ಪ್ರಾದೇಶಿಕ ಸಮಾಜದ ಬಗ್ಗೆ ಇವೆ. ಈ ಅಂಶದ ಬಗ್ಗೆ ಇರುವ ಸಂದಿಗ್ಧಗಳನ್ನು ಚರ್ಚಿಸುವ ಮೊದಲು ಇನ್ನೊಂದು ಅಂಶವನ್ನು ಪ್ರಸ್ತಾಪಿಸುವುದು ಸೂಕ್ತ. ವೈದೇಹಿಯವರ ವಿಸ್ತಾರವಾದ ಬರವಣಿಗೆಯಲ್ಲಿ ಈ ಸಮಾಜದ ಆಚೆಗಿರುವ ನೆಲೆಗಳ (locations) ಬಗ್ಗೆ ಕತೆಗಳಿಲ್ಲವೆಂದಲ್ಲ. ಆಧುನಿಕ ಮಹಿಳೆಯರ ಬಗ್ಗೆ ಕತೆಗಳಿಲ್ಲವೆಂದಲ್ಲ. ಆದರೆ ಅವುಗಳು ಬಹುಪಾಲು ತೆಳುವಾಗಿವೆ. ಸಂಕೀರ್ಣತೆಗೆ ಎರವಾಗಿವೆ. ಸಾಮಾನ್ಯವಾಗಿ ಖಚಿತವಾದ ಉದ್ದೇಶವನ್ನು ನಿರಾಯಾಸವಾಗಿ ಪೂರೈಸಿ ಮುಗಿಯುವಂಥ ಕತೆಗಳಾಗಿವೆ. ವೈದೇಹಿಯವರ ಸೃಜನಶೀಲತೆಯ ಶಕ್ತಿಸ್ರೋತಗಳಾದ ಶ್ರಾವಣ ಪ್ರತಿಭೆ, ದ್ವಂದ್ವಾತ್ಮಕವಾದ ಅನುಭವ ಶೋಧನೆಗಳು ಈ

ಕತೆಗಳಲ್ಲಿ ಕ್ವಚಿತ್ತಾಗಿ ಮಾತ್ರ ಕಂಡುಬರುತ್ತವೆ. ಹಲವಾರು ದಶಕಗಳ ಹಿಂದೆ ಶಿವರಾಮ ಕಾರಂತರ ಕಾದಂಬರಿ ಪ್ರಪಂಚದ ಶಕ್ತಿ ದೌರ್ಬಲ್ಯದ ಬಗ್ಗೆ ನಡೆದ ಚರ್ಚೆಗಳನ್ನು ಇಲ್ಲಿ ನೆನಪು ಮಾಡಿಕೊಳ್ಳುತ್ತಿದ್ದೇನೆ. ಕಾರಂತರು, ಆಧುನಿಕರು; ಅವರ ನಿಲುವುಗಳು ಆಧುನಿಕ, ಉದಾರವಾದಿ rationalist ನಿಲುವುಗಳು. ಆದರೆ, ಅವರ ಅತ್ಯುತ್ತಮ ಕತೆಗಾರಿಕೆ ಈ ನಿಲುವುಗಳಿಗೆ ಸಂಬಂಧವೇ ಇಲ್ಲದ ಸಂಪ್ರದಾಯಸ್ಥ, ಸಮಾಜದ ಹಳೆತಲೆಮಾರಿನ ವ್ಯಕ್ತಿಗಳ ಬಗ್ಗೆ, ವಿಶೇಷವಾಗಿ ಹೆಂಗಸರ ಬಗ್ಗೆ ಇದೆ. ಅಲ್ಲದೆ ಕಾರಂತರು ಈ ಆಥೆಂಟಿಕ್ (ಅನಂತಮೂರ್ತಿಯವರ ಪದ) ಪ್ರಾದೇಶಿಕ ಪರಿಸರದ ಆಚೆಗೆ ಬಂದು ಬರೆದಾಗ ಬರಹವು ದುರ್ಬಲವಾಗುತ್ತದೆ. ಆದ್ದರಿಂದಲೇ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಮೊದಲ ತಲೆಮಾರಿನ ರಾಮ ಐತಾಳರ ಜಗತ್ತಿನಷ್ಟು ಮೂರನೇ ತಲೆಮಾರಿನ ರಾಮನ ಜಗತ್ತು ಮೂರ್ತವಾಗಿಲ್ಲ. ಇದು ಆಗ ನಡೆದ ಚರ್ಚೆಯ ಸಂಗ್ರಹ. ಇದಕ್ಕೆ ಇನ್ನೊಂದು ಮಾತನ್ನು ಜೋಡಿಸುವುದಾದರೆ ಕಾರಂತರು ಸಂಪ್ರದಾಯಸ್ಥ ಸಮಾಜದ ಗಟ್ಟಿಯಾದ ಕಥನದೊಳಗೇ ತಮ್ಮ ಆಧುನಿಕ ನಿಲುವುಗಳನ್ನು ಅಂದರೆ (ಘೋಷಿತ ನಿಲುವುಗಳನ್ನಲ್ಲ, ತಮ್ಮ ತಿಳುವಳಿಕೆಯನ್ನು) ಬೆಸೆಯಲು ಸಾಧ್ಯವಾದಾಗ ಶ್ರೇಷ್ಠ ಕೃತಿಗಳನ್ನು ರಚಿಸಿದರು (ಉದಾಹರಣೆಗೆ 'ಮೈಮನಗಳ ಸುಳಿಯಲ್ಲಿ'). ಗಮನಿಸಬೇಕಾದ ಅಂಶವೆಂದರೆ ಸಂಪ್ರದಾಯಸ್ಥ ಸಮಾಜದ ಬಗ್ಗೆ ಬರೆಯುವಾಗ ಕಾರಂತರ ಗಮನವೂ ಈ ಸಮಾಜವು ಹತ್ತಿಕ್ಕಿಡುವ ಲೈಂಗಿಕತೆಯ ಬಗ್ಗೆಯೆ ಇತ್ತು. ಇದು 'ಸರಸಮ್ಮನ ಸಮಾಧಿ', 'ಮೂಕಜ್ಜಿಯ ಕನಸುಗಳು' ಇಂಥ ಕೃತಿಗಳಲ್ಲಿ ಪ್ರಧಾನವಾಗಿ ಕಾಣುತ್ತದೆ. ವೈದೇಹಿ ಹಲವಾರು ರೀತಿಗಳಲ್ಲಿ ಈ ಕಾರಂತ ಪರಂಪರೆಯ ಜೊತೆಗೆ negotiate ಮಾಡಿಕೊಂಡು ಬರೆಯುತ್ತಾರೆ (ಅಪ್ಪಟ ಕತೆಗಾರಿಕೆಯಲ್ಲಿ ವೈದೇಹಿ, ಕಾರಂತರನ್ನು ಮೀರುತ್ತಾರೆ ಎನ್ನುವುದು ನನ್ನ ನಂಬಿಕೆ). ಇಲ್ಲಿ 'ಕಾರಂತ ಪರಂಪರೆ' ಎನ್ನುವ ಪದವನ್ನು ಹಿಂಜರಿಕೆಯಿಂದಲೇ ಬಳಸುತ್ತಿದ್ದೇನೆ. ಏಕೆಂದರೆ ವಿಮರ್ಶೆಯಲ್ಲಿ ಪ್ರತಿಭಾವಂತ ಬರಹಗಾರ್ತಿಯನ್ನು ಶ್ರೇಷ್ಠ ಬರಹಗಾರನೊಬ್ಬನ ಜೊತೆ ಹೋಲಿಸುವುದು ಅನೇಕ ಬಾರಿ ಪುರುಷ ಬರಹದ ಪಾರಮ್ಯವನ್ನು ಪುನರ್‌ಸ್ಥಾಪಿಸುವ ಕೆಲಸವಾಗಿಬಿಡುತ್ತದೆ. ಕಾರಂತರ ಪ್ರಸ್ತಾಪ ಮಾಡಿದ್ದು ಪ್ರಾದೇಶಿಕತೆಯ ಬಗ್ಗೆ ಒಂದು ಮುಖ್ಯ ಪ್ರಶ್ನೆಯನ್ನು ಎತ್ತುವುದಕ್ಕಾಗಿ.

ಈ ತಾತ್ವಿಕ ಪ್ರಶ್ನೆ ಇರುವುದು ಪ್ರಾದೇಶಿಕತೆ ಮತ್ತು ಚರಿತ್ರೆಯ ಚಲನಶೀಲತೆಯ ಬಗ್ಗೆ. ಆಥೆಂಟಿಕ್ ಆಗಿ ಕಾಣುವ ಪ್ರಾದೇಶಿಕ ಸಂಪ್ರದಾಯಸ್ಥ ಸಮಾಜವು ಒಂದು ಸ್ಥಗಿತ ಚಿತ್ರಣವಾಗಿ ಬಿಡುತ್ತದೆಯೇ? ಅಥವಾ ಅದು ಒಂದು ನಿರ್ದಿಷ್ಟ ಕಾಲಮಾನದಲ್ಲಿ ಒಂದು ಸಮಾಜವು ಹೊಂದಿದ್ದ ಸ್ಥಿತಿಗತಿಗಳನ್ನು ನಿರಂತರವೆಂದು ತೋರಿಸುವ ಪ್ರಯತ್ನವಾಗಿ ಬಿಡುತ್ತದೆಯೇ? ಪ್ರಾದೇಶಿಕವೆಂದು ಕರೆಯಬಹುದಾದ ಯಾವುದೂಕೂಡ ಪ್ರಾದೇಶಿಕತೆಯನ್ನು ಮೀರಿದ (trans regional ಎನ್ನುವ ಅರ್ಥದಲ್ಲಿ) ಚರಿತ್ರೆಯಿಂದ ಅಬಾಧಿತವಾಗಿ ಉಳಿಯುವುದಿಲ್ಲ. ಚರಿತ್ರೆಯ ಚಲನಶೀಲತೆಯು ತರುವ ಬದಲಾವಣೆಗಳು

ತಟಸ್ಥವೂ, ಸ್ಥಗಿತವಾಗಿಯೂ ತೋರುವ ಸಂಪ್ರದಾಯಸ್ಥ ಸಮಾಜವನ್ನು ಪ್ರವೇಶ ಮಾಡುತ್ತಲೇ ಇರುತ್ತವೆ. ಸಾಮಾನ್ಯವಾಗಿ ಈ ಬದಲಾವಣೆಗಳು 'ಹುಸಿ ಆಧುನಿಕತೆಯ' ರೂಪದಲ್ಲಿ ನಕಾರಾತ್ಮಕವಾಗಿ ಈ ಸಮಾಜಕ್ಕೆ ಕಾಣುತ್ತವೆ. ಅಲ್ಲದೆ ಇವುಗಳು ತಮ್ಮ ಪರಿಣಾಮದಲ್ಲಿ ಆ ಸಮಾಜದಲ್ಲಿ ಬಿರುಕು ಹಾಗೂ ವಿಘಟನೆಗಳನ್ನು ತರುತ್ತವೆಯೆನ್ನುವ ಭೀತಿಗೆ ಕಾರಣವಾಗುತ್ತದೆ. ಒಂದು ದೃಷ್ಟಿಯಲ್ಲಿ ಆಧುನಿಕ ಭಾರತೀಯ ಸಾಹಿತ್ಯವು ಈ ಬಗೆಯ vernacular modernity ಯ ಕಥನವೇ ಆಗಿದೆ. ಹಾಗೂ ಇದರಲ್ಲಿ ಆಧುನಿಕ ಕನ್ನಡ ಸಾಹಿತ್ಯವು ಸಶಕ್ತವಾಗಿ, ಸಂಕೀರ್ಣವಾಗಿ ಭಾಗವಹಿಸಿದೆ. ಕಾರಂತ, ಕುವೆಂಪು, ಮಾಸ್ತಿ, ಅನಂತಮೂರ್ತಿ ಇವರೆಲ್ಲರೂ ಭಾರತೀಯ ಚರಿತ್ರೆಯ ಈ ಪ್ರಮುಖ ವಾಗ್ವಾದದಲ್ಲಿ ಭಾಗವಹಿಸಿ ತಮ್ಮ ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾರೆ. ಆದರೆ ಇತರ ವಿಷಯಗಳಲ್ಲಿಯಂತೆ ಈ vernacular modernityಯ ಚರ್ಚೆಯಲ್ಲಿ ಮಹಿಳೆಯರ ದೃಷ್ಟಿಕೋನವು ಅಂಚಿಗೆ ಸೇರಿಸಲ್ಪಟ್ಟಿದೆ. ಆಧುನಿಕತೆಯನ್ನು ಬಹುಪಾಲು ಪುರುಷ ಸಾಹಸವಾಗಿಯೇ ನೋಡಲಾಗಿದೆ. ವಾಸ್ತವವೆಂದರೆ ತಾರಾಬಾಯಿ ಶಿಂಧೆ, ಪಂಡಿತಾ ರಮಾಬಾಯಿ ಅವರಿಂದ ಪ್ರಾರಂಭವಾಗಿ ಈವರೆಗೂ ಆಧುನಿಕತೆಯ ಬಿಕ್ಕಟ್ಟುಗಳನ್ನು ಸಮಗ್ರವಾಗಿ ಎದುರುಹಾಕಿಕೊಂಡಿದ್ದು ಭಾರತೀಯ ಮಹಿಳೆಯರೆ. ಭಾರತೀಯ ಪುನರುಜ್ಜೀವನದ ಶ್ರೇಷ್ಠ ಬರಹಗಾರರಾದ ರವೀಂದ್ರನಾಥ ಟಾಗೋರ್ ಅವರು ಕೂಡ ಆಧುನಿಕತೆಯು ಮಹಿಳೆಯ ಲೈಂಗಿಕ ಸ್ವಾತಂತ್ರ್ಯದ ಪ್ರಶ್ನೆಯೂ ಆಗುತ್ತದೆಯೆಂದು ಹೊಳೆದಾಗ ಅದರ ಬಗ್ಗೆ ವಿರೋಧಾಭಾಸದ ನಿಲುವನ್ನೇ ತಾಳಿದರು. Home and the World ಕಾದಂಬರಿಯ ಸುತ್ತ ನಡೆದ ಚರ್ಚೆಗಳಲ್ಲಿ ಇದನ್ನು ನೋಡಬಹುದು ಇರಲಿ. ಮುಖ್ಯ ಪ್ರಶ್ನೆಯಿರುವುದು, ಸಂಪ್ರದಾಯಸ್ಥ ಸ್ಥಳೀಯ ಸಮಾಜದಲ್ಲಿನ ಪುರುಷ ಪ್ರಾಧಾನ್ಯತೆಯ ಅಸಾಧಾರಣ ಕಥನವನ್ನು ನೀಡುವ ವೈದೇಹಿ ಬದಲಾವಣೆ, ಆಧುನಿಕತೆಗಳನ್ನು ಗ್ರಹಿಸಲು ಹೊರಟಾಗ ಸೃಜನಶೀಲ ಬಿಕ್ಕಟ್ಟುಗಳನ್ನು ಎದುರಿಸುತ್ತಾರೆಯೆ? ಇದು ಭಾರತೀಯ ಸ್ತ್ರೀವಾದಿ ಬರಹಕ್ಕೆ ಸಂಬಂಧಿಸಿದ ಮುಖ್ಯ ಪ್ರಶ್ನೆಯಾಗಿದ್ದರಿಂದ ಸ್ವಲ್ಪ ವಿಶದವಾಗಿ ಇದನ್ನು ಚರ್ಚಿಸಬಯಸುತ್ತೇನೆ.

ಬದಲಾವಣೆಯನ್ನು ಮುನ್ನೆಲೆಯಾಗಿಟ್ಟುಕೊಂಡ 'ಗುಲಾಬಿ ಟಾಕೀಸ್ ಮತ್ತು ಅಲೆಗಳು' ವೈದೇಹಿ ಬರಹದಲ್ಲಿಯೇ ವಿಶಿಷ್ಟವಾಗಿದೆ. ನನಗೆ ನೆನಪಿದ್ದ ಮಟ್ಟಿಗೆ ಒಂದು ಕತೆಯ ಘಟನೆಗಳು ನಡೆಯುವ ಕಾಲಮಾನವನ್ನು ಖಚಿತವಾಗಿ ಅವರು ಪ್ರಸ್ತಾಪಿಸುವುದು ಈ ಕತೆಯಲ್ಲಿಯೇ. ಅದೂ ಇಸ್ವಿಯನ್ನು ನಮೂದಿಸುವ ಮೂಲಕವಲ್ಲ. ಆದರೆ ಊರಿನ ಟಾಕೀಸ್‌ನಲ್ಲಿ 'ಮೂಕಿ' ಚಿತ್ರಗಳಿಂದ 'ಟಾಕಿ' ಚಿತ್ರಗಳು ಬರತೊಡಗಿದವು ಎನ್ನುವ ಪ್ರಸ್ತಾಪವಿದೆ. ಟಾಕಿ ಚಿತ್ರಗಳು ಕರ್ನಾಟಕದ ಸಣ್ಣ ಊರುಗಳನ್ನು ಪ್ರವೇಶಿಸಿದ್ದು ಸರಿ ಸುಮಾರು 1940ರ ಹೊತ್ತಿಗೆ (ಇಂಥ ವಿವರಗಳು ಲಭ್ಯವಿಲ್ಲದಿದ್ದಾಗ ವೈದೇಹಿ ಕತೆಗಳ ಕಾಲಮಾನದ ನಿರ್ಧಾರಕ್ಕಾಗಿ ವಾರೆ ಬೈತಲೆ ತೆಗೆಯುವುದು ಯಾವಾಗ ಹೊಸ 'ಫೇಶನ್' ಆಗಿತ್ತು. ಕುಪ್ಪಸಗಳಿಗೆ ಹಿಂದೆ ಗುಬ್ಬಿಗಳನ್ನು ಹೊಲಿಯುವುದು ಶುರುವಾಗಿದ್ದು ಯಾವಾಗ, ಎಮ್‌ಡನ್

ಬೋಟ್ (ಮಹಾಯುದ್ಧದ ಕಾಲದಲ್ಲಿ ಮದ್ರಾಸಿನವರೆಗೆ ಬಂದಿದ್ದ Emden ಹಡಗು) ಆಡುಮಾತಿನಲ್ಲಿ ಬಳಕೆಯಾದದ್ದು ಯಾವಾಗ-ಇಂಥ ಸಾಂಸ್ಕೃತಿಕ ವಿವರಗಳನ್ನು ನೆಚ್ಚಿಕೊಳ್ಳಬೇಕಾಗುತ್ತದೆ). ಅಲ್ಲದೆ ಕಾಲದ ಬಗೆಗಿನ ಈ ವಿವರವು ನಿರುದ್ದಿಶ್ಯವಾಗಿ ಬಂದಿದ್ದಲ್ಲ. ಇಡೀ ಕತೆಯೇ ಪ್ರಜ್ಞಾಪೂರ್ವಕವಾಗಿ ಕಾಲ ಬದಲಾಗಿದ್ದರ ಬಗ್ಗೆ ಮತ್ತು ಈ ಬದಲಾವಣೆಗೆ ಗುಲಾಬಿ ಟಾಕೀಸ್ ಹುಟ್ಟಿಸುವ ಸಣ್ಣ ಅಲೆಗಳೂ ಬೆಂಬಲ ನೀಡಿದ್ದರ ಬಗ್ಗೆ ಇದೆ.

'ಸಂಜೆ ಹೊತ್ತು ಗಂಡಸರು ವಾಕಿಂಗ್ ಹೋಗಿ ಕುಳಿತುಕೊಳ್ಳುವ ಜಾಗೆಯಾಗಿತ್ತು ಅದು. ಆ ಜಾಗೆಯಲ್ಲಿ ಗಂಡಸರು ಮುಗಿದು ಹೋದ ಯುದ್ಧದ ಕುರಿತು ಮಾತನಾಡುತ್ತಿದ್ದರು'.

'ಇನ್ನಿನ್ನು ಬರುವ ಸಿನಿಮಾಗಳಲ್ಲಿ ಮಾತು ಸಂಗೀತ ಇತ್ಯಾದಿಗಳಿವೆ ಎಂಬ ಸುದ್ದಿ ಆಗಲೇ ಊರನ್ನು ತಲುಪಿತ್ತು' ಇಂತಹ ಸ್ಥಿತಿಯಲ್ಲಿ ಊರಿನ ಸ್ತ್ರೀಲೋಕ ಪುರುಷ ಲೋಕಗಳು ಭಿನ್ನವಾಗಿದ್ದು ಸ್ತ್ರೀಲೋಕ ಮನೆಯ ಹೊಸ್ತಿಲಿನ ಆಚೆಗೆ ವಿಸ್ತರಿಸಿರುವುದಿಲ್ಲ. ಗುಲಾಬಿ ಟಾಕೀಸ್ ಕ್ರಮೇಣವಾಗಿ 'ಹೆಂಗಳೆಯರು ಸ್ವಂತ ಕಾಲುಗಳಿಂದ ಹೆಜ್ಜೆ ಇಡಲು' ಆರಂಭಿಸುವುದಕ್ಕೆ ಕಾರಣವಾಗುತ್ತದೆ. ಕತೆಯ ಕೊನೆಗೆ ಸೀಮಿತವಾದ ರೀತಿಯಲ್ಲಿಯೇ ಆದರೂ ಅವರು ತಮ್ಮ ಸ್ವಂತದ ನಿರ್ಧಾರಗಳನ್ನು ಮಾಡಲು ತೊಡಗುತ್ತಾರೆ. ವೈದೇಹಿಯವರ ಶ್ರೇಷ್ಠ ಕತೆಗಳಲ್ಲಿಯಂತೆ ಗುಲಾಬಿ ಟಾಕೀಸ್ ತರುವ 'ಆಧುನಿಕತೆ'ಗೆ ಇನ್ನೊಂದು ಮುಖವೂ ಇದೆ. ಟಾಕೀಸಿನ ಸ್ಥಾಪನೆಯಾಗುವುದೇ ಊರಿನಿಂದ ಮುಂಬಯಿಗೆ ಹೋದ ಗುಲಾಬಿ ಸಂಪಾದಿಸಿದ ಹಣದಿಂದ. ಅಂದರೆ ಊರಿನ ಸ್ಥಗಿತ ಸಮಾಜಕ್ಕೆ ಚಾಲನೆ ಸಿಕ್ಕುವುದು ದೂರದಲ್ಲಿರುವ ಮಹಾನಗರದ ವ್ಯವಹಾರಗಳಿಂದ. ಊರಿನ ಮೇಲೆ ಟಾಕೀಸಿನಿಂದಾಗುವ ಪರಿಣಾಮಗಳೂ ಇಬ್ಬಗೆಯವು. ಒಂದು ಕಡೆಗೆ ಹೆಂಗಸರು ಹೊಸ್ತಿಲು ದಾಟುವುದಕ್ಕೆ ಅನುವು ಮಾಡಿಕೊಟ್ಟರೆ ಅದು ಇನ್ನೊಂದೆಡೆಗೆ ನೀತಿಯನ್ನು ಮುರಿದು ಹಣಗಳಿಸುವ ಮಾರ್ಗಗಳನ್ನು ತೋರಿಸುತ್ತದೆ. ಲಿಲ್ಲಿಬಾಯಿಗೆ ಕೂಡ ತನಗಿಂತ ಅಸಮರ್ಥರಾಗಿರುವವರು ಹೊರಗೆ ಹೋಗಿ ಹಣ ಮಾಡಿರುವಾಗ ತಾನೇಕೆ ಮಾಡಬಾರದು ಎನ್ನುವ ಛಲ ಹುಟ್ಟಿಕೊಳ್ಳುತ್ತದೆ. ಲಿಲ್ಲಿಬಾಯಿಯ ಆರ್ಥಿಕ ಸ್ಥಿತಿಯಲ್ಲಿ ಆಗುವ ಪ್ರಗತಿಯನ್ನು ಕತೆಯು ನೀತಿಪರವಾದ ದೃಷ್ಟಿಯಿಂದೇನು ನೋಡುವುದಿಲ್ಲ. ಅವಳಿಗೂ ಪರಾವಲಂಬನೆ, ಚಾಕರಿಗಳಿಂದ ಮುಕ್ತವಾಗುವ ಅವಕಾಶ ದೊರೆತದ್ದನ್ನು ಅದು ದಾಖಲಿಸುತ್ತದೆ. ಲಿಲ್ಲಿಬಾಯಿ ಮ್ಯಾನೇಜರ್‌ನಿಂದಾಗಿ ಎಲ್ಲರೂ ಟಿಕೆಟ್ ಕೊಂಡೇ ಒಳಗೆ ಹೋಗಬೇಕೆಂದಾಗ ತೀವ್ರ ಅವಮಾನ ಅನುಭವಿಸುವ ಶ್ರೀಮಂತ ಮನೆಯ ಹೆಂಗಸರು ಲಿಲ್ಲಿಯ ಒಳವ್ಯವಹಾರಕ್ಕೆ ಹಿಂದೆ ಒಪ್ಪಿಕೊಂಡಿದ್ದೇ ತಪ್ಪು ಎಂದು ಪಶ್ಚಾತ್ತಾಪ ಪಡುತ್ತಾರೆ. ಆದರೆ ಕತೆಯ ಕೊನೆಗೆ 'ಸತ್ಯಂಭಟ್ಟ'ರಾದರೆ ಉಳಿಗಾಲವಿಲ್ಲವೆಂದು ತಮ್ಮ ನೀತಿ ಕಟ್ಟಳೆಗಳನ್ನು ಸಡಿಲಿಸಿಕೊಳ್ಳುತ್ತಾರೆ. ಹೀಗಾಗಿ ಬದಲಾವಣೆ ಎಲ್ಲಿಯೋ ಅನಿವಾರ್ಯವೇನೋ. ಅದು ಮೌಲ್ಯನಿರಪೇಕ್ಷವಾಗಿದ್ದರೂ ಕೂಡ ಎನ್ನುವ ಭಾವನೆ ಬರುತ್ತದೆ. ಆಧುನಿಕ ಕನ್ನಡ

ಕಥನ ಸಾಹಿತ್ಯವು ಆಧುನಿಕತೆಯನ್ನು ಕೇವಲ ಅನೈತಿಕತೆಯ ಹರಿಕಾರವೆಂದು ನೋಡುವ ಧೋರಣೆಗಿಂತ ಇದು ಭಿನ್ನವಾಗಿದೆ. ಅಲ್ಲದೆ ಒಂದು ಅಲೆ ಶುರುವಾದರೆ ಅದು ದಡ ಮುಟ್ಟಲೇಬೇಕಲ್ಲವೆನ್ನುವ ಕತೆಯ ಚರಮ ವಾಕ್ಯವೂ ಆಧುನಿಕತೆಯ ಬಗ್ಗೆ ಭಿನ್ನವಾದ ನೋಟವನ್ನೇ ವ್ಯಕ್ತಪಡಿಸುತ್ತದೆ.

'ಮನೆಯವರೆಗಿನ ಹಾದಿ' ಕತೆಯಲ್ಲಿ ಟಾಕೀಸಿನ ಬದಲಾಗಿ ಮನೆಯನ್ನು ಊರಿಗೆ ಜೋಡಿಸುವ ರಸ್ತೆ ಬದಲಾವಣೆಗಳನ್ನು ತರುತ್ತದೆ. ರಸ್ತೆ ಮಾಡಿಸುವುದಕ್ಕೆ ಮುಖ್ಯ ಪ್ರೇರಣೆಯೆಂದರೆ ರಸ್ತೆ ಇಲ್ಲದ ಮನೆಗೆ ಗಂಡುಕೊಡಲು ಒಪ್ಪುವುದಿಲ್ಲವೆನ್ನುವುದು. ಆದರೆ ಒಮ್ಮೆ ರಸ್ತೆ ನಿರ್ಮಾಣವಾದ ಮೇಲೆ ಸೂಕ್ಷ್ಮವಾಗಿ ಎಲ್ಲವೂ ಬದಲಾಗತೊಡಗುತ್ತದೆ. ನಿರೂಪಕಿಯ ಕಣ್ಣಿನಿಂದ ಈ ಸೂಕ್ಷ್ಮ ವಿವರಗಳನ್ನು ಚಿತ್ರಿಸಲಾಗಿದೆ. ಈಗ ಮನೆಯಿಂದ ಹಾಲು ಪಟ್ಟಣದಲ್ಲಿ ಮಾರಬಹುದಾಗಿದೆ. ಅದರಿಂದ ಮೊದಲ ಬಾರಿ ಮನೆಯ ಹೆಂಗಸಿಗೆ ಒಂದಿಷ್ಟು ಆರ್ಥಿಕ ಸ್ವಾತಂತ್ರ್ಯವಿದೆ. ಆಸ್ಪತ್ರೆ ಆರೈಕೆ ಇವೆಲ್ಲ ಸಾಧ್ಯವಾಗಿದೆ. ಆದರೆ ಮನೆಯ ಮಗ ರಾಮಣ್ಣನಿಗೆ ಮದ್ಯದ ವ್ಯಸನವನ್ನು, ಅದಕ್ಕಾಗಿ ಇದ್ದ ಅಡಿಕೆಯನ್ನೆಲ್ಲ ಮಾರಿ ದುಡ್ಡು ಗಳಿಸುವ ಲಾಲಸೆಯನ್ನೂ ಬೆಳೆಸಿದೆ. ನೆರೆಹೊರೆಯವರು, ಮನೆಯವರು ಸೇರಿ ಟಿ.ವಿ. ನೋಡುವುದು ಅಭ್ಯಾಸವಾಗಿದೆ. ಕತೆ ಅಷ್ಟೇನೂ ಸಂಕೀರ್ಣವಾಗಿರದಿದ್ದರೂ ಇಲ್ಲಿ ವೈದೇಹಿ ಮತ್ತೆ ಬದಲಾವಣೆಯ ಇಬ್ಬಗೆಯ ಪರಿಣಾಮಗಳನ್ನು ಗುರುತಿಸುತ್ತಾರೆ. ಗತಿಸಿಹೋದ ಕಾಲವನ್ನು ಅವರು ಹಂಬಲದಿಂದ ನೋಡಲಾರರು. ಏಕೆಂದರೆ ಅದು ಪಿತೃಪ್ರಾಧಾನ್ಯದ, ಹೆಂಗಸರ ಅಸಹಾಯಕತೆಯ ಕಾಲವಾಗಿತ್ತು. ಆದರೆ ಆಗಿರುವ ಬದಲಾವಣೆಗಳು ಸ್ವಲ್ಪ ಸ್ವಾತಂತ್ರ್ಯದ ಆಸೆ ತೋರಿಸಿ ಹೆಂಗಸರನ್ನು ಮತ್ತೆ ದಾಸ್ಯಕ್ಕೆ ತಳ್ಳಬಹುದೇ ಎನ್ನುವ ಸಂಶಯವೂ ಅವರಲ್ಲಿದೆ.

ಹೀಗೆ ಸ್ಥಿತ ಸಮಾಜವೊಂದರಲ್ಲಿ ಬದಲಾವಣೆಗೆ ಸಣ್ಣ ಅಲೆಗಳನ್ನು ಅರ್ಥಪೂರ್ಣವಾಗಿ ವೈದೇಹಿ ಗುರುತಿಸುತ್ತಾರೆ. ಆದರೆ ಕಳೆದ ಮೂರು ದಶಕಗಳಿಂದ ಬರೆಯುತ್ತಿರುವ ಅವರು ಭಾರತೀಯ ಸಮಾಜದಲ್ಲಾದ ಪಲ್ಲಟಗಳ ಜೊತೆಗೆ ಬದುಕಿದ್ದಾರೆ. ಹೆಂಗಸರ ಶೋಷಣೆ, ಅವರ ಮೇಲಿನ ಕ್ರೌರ್ಯ ಹೆಚ್ಚೂ ಕಡಿಮೆ ಸ್ಥಾಯೀ ಆಗಿಯೇ ಉಳಿದಿದ್ದರೂ ಸ್ತ್ರೀಲೋಕದಲ್ಲಿ ದೊಡ್ಡ ಪಲ್ಲಟಗಳೇ ಆಗಿವೆ. ಕೊನೇಪಕ್ಷ ಸಮಾಜದ ಒಂದು ವರ್ಗದ ಸ್ತ್ರೀ ಸಂವೇದನೆಯು ಈ ಪಲ್ಲಟಗಳಿಂದಾಗಿ ಅಪಾರ ಸ್ಥಿತ್ಯಂತರಗಳನ್ನು ಹೊಂದಿದೆ. 80ರ ದಶಕದಿಂದಾಚೆಗೆ ಸ್ತ್ರೀಬರಹವು ಅಚ್ಚರಿ ಹುಟ್ಟಿಸುವಷ್ಟು ಹೊಸದಾದ ಅನುಭವ ಲೋಕಗಳನ್ನು ಅನ್ವೇಷಿಸಿದೆ. ಅಷ್ಟು ಮಾತ್ರವಲ್ಲ ಈ ಬರಹ, ಚಿಂತನೆಗಳಿಂದಾಗಿ ಪ್ರಧಾನ ಧಾರೆಯೆಂದು ಹಿಂದೆ ಕರೆಯಲಾಗುತ್ತಿದ್ದ ಸಾಹಿತ್ಯದ ಬಗೆಗಿನ ತಿಳುವಳಿಕೆಯೇ ಬದಲಾಗಿದೆ. ವೈದೇಹಿ ಆಯ್ಕೆ ಮಾಡಿಕೊಂಡ ಸೀಮಿತ ಅನುಭವಲೋಕದ (ಪ್ರಾದೇಶಿಕ, ಸಂಪ್ರದಾಯಸ್ಥ ಸಮಾಜದಿಂದ ಪಡೆದ ಅನುಭವಲೋಕ) ಅವರ ಸೂಕ್ಷ್ಮ ವಿಶ್ಲೇಷಣೆಯು

ಬದಲಾದ ಇಂದಿನ ಸನ್ನಿವೇಶಕ್ಕೂ ಸಂವಾದಿಯಾಗಿದೆಯೆ? ಸ್ತ್ರೀ ಚಿಂತನೆ ಇಂದು ಎದುರಿಸುತ್ತಿರುವ ಜಿಕ್ಕಟ್ಟುಗಳಿಗೆ ಸಂವಾದಿಯಾಗಿದೆಯೆ? ಇದನ್ನು ಉತ್ತರಿಸುವುದು ಸುಲಭವಲ್ಲ. ಅವರು ಕನ್ನಡದ ಶ್ರೇಷ್ಠ ಕತೆಗಾರ್ತಿ ಎನ್ನುವುದರಲ್ಲಿ ಸಂಶಯವೇ ಇಲ್ಲ. ಕನ್ನಡ ಬರಹಕ್ಕೆ ಅವರು ಸೇರಿಸಿದ ಸೂಕ್ಷ್ಮ ಆಯಾಮವು ಕನ್ನಡ ಕಥನವನ್ನು ಎಷ್ಟು ಶ್ರೀಮಂತಗೊಳಿಸಿದೆ ಎನ್ನುವುದನ್ನು ವಿಮರ್ಶೆಯು ಇನ್ನೂ ಸಮಗ್ರವಾಗಿ ಅರ್ಥಮಾಡಿಕೊಂಡಿಲ್ಲ. ಆದರೆ ಒಟ್ಟು ಭಾರತೀಯ ಸ್ತ್ರೀಬರಹವು ಕಳೆದ ಕೆಲವು ದಶಕಗಳಲ್ಲಿ ಸಾಧಿಸಿದ ಸಮಗ್ರತೆಯನ್ನು–ಅಂದರೆ ಖಾಸಗಿ, ವೈಯಕ್ತಿಕ, ಸಾಮುದಾಯಿಕ, ರಾಜಕೀಯವೆಂದು ಜಿಡಿಸಿ ಹೇಳಲಾಗದ ಸಮಗ್ರತೆಯನ್ನು ಅವರ ಕತೆಗಾರಿಕೆ ಇನ್ನೂ ಸಾಧಿಸಿಲ್ಲವೆ ಎನ್ನುವುದು ನನಗೆ ಪ್ರಶ್ನೆಯಾಗಿಯೇ ಉಳಿದಿದೆ. ಆದರೆ ಅದನ್ನು ಸಮರ್ಪಕವಾಗಿ ಉತ್ತರಿಸುವಷ್ಟು ಸ್ತ್ರೀ ಬರಹದ ನನ್ನ ಓದು ಸಮಗ್ರವಾಗಿಲ್ಲ.



# ವೈದೇಹಿ ಕಥನ

✦ ಟಿ ಪಿ ಅಶೋಕ ('ವೈದೇಹಿ ಕಥನ'ದ ಉದ್ಧೃತ ಭಾಗ)

ವೈದೇಹಿ ಬಂಡಾಯ ಚಳುಚಳಿಯಲ್ಲಾಗಲೀ, ಸ್ತ್ರೀ ವಿಮೋಚನಾ ಚಳುವಳಿಯಲ್ಲಾಗಲೀ ನೇರವಾಗಿ ತಮ್ಮನ್ನು ಗುರುತಿಸಿಕೊಂಡವರಲ್ಲ. ಒಂದು ದೃಷ್ಟಿಯಿಂದ ವೈದೇಹಿ ತಮ್ಮ ಹತ್ತಿರದ ಸಮಕಾಲೀನರಾದ ವೀಣಾ ಶಾಂತೇಶ್ವರ, ಗೀತಾ ನಾಗಭೂಷಣ, ನೇಮಿಚಂದ್ರ ಇವರಿಗಿಂತ ದೂರದ ಕೊಡಗಿನ ಗೌರಮ್ಮ, ತ್ರಿವೇಣಿಯವರಿಗೇ ಹೆಚ್ಚು ಹತ್ತಿರದವರಾಗಿ ಕಾಣುತ್ತಾರೆ. ವ್ಯಂಗ್ಯ, ಸಿಟ್ಟು, ಸಿನಿಕತೆ, ಪ್ರತಿಭಟನೆಗಿಂತ ಹೆಚ್ಚಾಗಿ ಉತ್ಕಟ ಭಾವಶೀಲತೆಯೇ ವೈದೇಹಿ ಸ್ಪಂದನದ ಮುಖ್ಯ ಗುಣ ಎನಿಸುತ್ತದೆ. ಹಾಗೆಂದು ಸುಲಭವಾಗಿ ದ್ರವೀಕರಿಸುವಷ್ಟು ದುರ್ಬಲ ಮನಸ್ಸಲ್ಲ ಈ ಲೇಖಕಿಯದು. ವೈದೇಹಿ ಕತೆಗಳಲ್ಲಿ ಆರ್ದ್ರತೆ ಇದೆ ಎಂದರೆ ಅದು ಅಳುಬುರುಕತನಕ್ಕೆ ಸಂಬಂಧಪಟ್ಟದ್ದೂ ಅಲ್ಲ ಅಥವಾ ಕಣ್ಣೀರಿನಲ್ಲಿ ದರ್ಶನವನ್ನು ಮಸುಕುಗೊಳಿಸುವಂಥದ್ದೂ ಅಲ್ಲ. ವೈದೇಹಿ ಭಾವನಿರಪೇಕ್ಷತೆಯಿಂದ ಜೀವನವನ್ನು ನೋಡುವುದಿಲ್ಲ. ಭಾವನೆಗಳನ್ನು ಕಲ್ಲಾಗಿಸಿಕೊಂಡು ಪ್ರಯೋಗಶಾಲೆಯಲ್ಲಿ ಶವಪರೀಕ್ಷೆ ನಡೆಸುವಂತೆ ತಮ್ಮ ಪಾತ್ರಗಳ ಅಂತರಂಗವನ್ನು ಅವು ಶೋಧಿಸುವುದಿಲ್ಲ. ಕೆಲವೊಮ್ಮೆ ಭಾವಪಕ್ಷಪಾತ ಎನಿಸುವಷ್ಟು ತೀವ್ರವಾಗಿ ಅವರು ಸನ್ನಿವೇಶಗಳಿಗೆ ಮಿಡಿಯುತ್ತಾರೆ. ಆದರೆ ಈ ಭಾವಪಕ್ಷಪಾತವಾದರೂ ಮನುಷ್ಯನನ್ನು ಸುಲಭವಾಗಿ ವ್ಯಾಖ್ಯಾನಿಸಬಾರದು, ಅವನನ್ನು ಎಲ್ಲಾ ಮುಖಗಳಿಂದ ಅರ್ಥಮಾಡಿ ಕೊಳ್ಳಬೇಕು ಎಂಬ ಮಾನವೀಯ ಪ್ರಜ್ಞೆಯಿಂದ ಹುಟ್ಟಿದ್ದು. ಹಾಗಾಗಿ ವೈದೇಹಿ ಎಂದೂ ಮನುಷ್ಯರ ಪರ. ವ್ಯವಸ್ಥೆಯ ಪರ ಅಲ್ಲ. ಮದುವೆ, ಕುಟುಂಬಗಳಂಥ ವ್ಯವಸ್ಥೆಗಳನ್ನು ವೈದೇಹಿ ತುಂಬಾ ಸೂಕ್ಷ್ಮವಾಗಿ ಪರಿಶೀಲಿಸುತ್ತಾರೆ. ವೈದೇಹಿ ಮೂಲಭೂತವಾಗಿ ಕತೆಗಾರ್ತಿ. ಆಕರ್ಷಕವಾಗಿ, ಲವಲವಿಕೆಯಿಂದ, ಎದುರು ಕೂತು ಮಾತನಾಡುವಷ್ಟು ಸಲೀಸಾಗಿ ಕತೆ ಹೇಳುತ್ತಾರೆ. ಆದರೆ ವೈದೇಹಿ ಎಷ್ಟು ತೀವ್ರವಾಗಿ, ಭಾವಪೂರ್ಣವಾಗಿ ಕತೆ ಹೇಳುತ್ತಾರೆಂದರೆ ಅವು ಪರ್ಯಾಯವಾಗಿ ಜೀವನ ವಿನ್ಯಾಸವೊಂದನ್ನೇ ನಮ್ಮ ಮುಂದೆ ಕಟ್ಟಿಕೊಡುತ್ತವೆ.

ವೈದೇಹಿ ಎಷ್ಟು ಸೂಕ್ಷ್ಮವಾಗಿ, ಮೃದುವಾಗಿ ಬರೆಯುತ್ತಾರೆಂದರೆ ಅವರ ಕತೆಗಳನ್ನು ತಾತ್ಪರ್ಯರೂಪದಲ್ಲಿ ಹೇಳುವುದು ಸಾಧ್ಯವಿಲ್ಲ. ಅಷ್ಟೇ ಅಲ್ಲ, ವೈಚಾರಿಕ ಚರ್ಚೆಯ ಆರ್ಭಟದಲ್ಲಿ ಈ ಕೋಮಲ ಪುಷ್ಪಗಳು ಸೊರಗಿ ಹೋಗುತ್ತವೇನೋ ಎಂದು ಅನೇಕ ಬಾರಿ ಅನ್ನಿಸುತ್ತದೆ. ಆದರೆ ಈ ಮೃದುತ್ವ, ಕೋಮಲತೆಗಳು ಕತೆಗಳ ಹೊರಮೈಗೆ ಮಾತ್ರ ಸಂಬಂಧಿಸಿದ್ದು ಎಂಬುದನ್ನು ಮರೆಯದಿರೋಣ. ಅದು ಲೇಖಕಿಯ ಅಭಿವ್ಯಕ್ತಿಯ ಕ್ರಮಕ್ಕೆ ಸಂಬಂಧಪಟ್ಟ ವಿಷಯ. ಮೇಲುನೋಟಕ್ಕೆ ಕಾಣುವುದರೊಳಗಣ ವಿಶ್ವವನ್ನು ಅನಾವರಣಗೊಳಿಸುವುದು ವೈದೇಹಿ ಕತೆಗಳ ಮುಖ್ಯ ಗುಣ. ಆದರೆ ವೈದೇಹಿ ಹೀಗೆ ಮಾಡುವಾಗ ಓದುಗರನ್ನು ಬೆಚ್ಚಿಸುವ, ತಬ್ಬಿಬ್ಬುಗೊಳಿಸುವ, ಶಾಕ್‌ಗೊಳಿಸುವ ಪ್ರಜ್ಞಾಪೂರ್ವಕ ಉದ್ದೇಶವನ್ನು ಇಟ್ಟುಕೊಂಡ ಹಾಗೆ ಕಾಣುವುದಿಲ್ಲ. ಆದರೆ ಅವರು ಚಿತ್ರಿಸುವ ಸನ್ನಿವೇಶಗಳು, ಬಗೆಯುವ ಅಂತರಂಗಗಳು ಎಷ್ಟು ಅಧಿಕೃತವಾಗಿರುತ್ತವೆಂದರೆ ಹೆಣ್ಣನ್ನು ಕುರಿತು ಕೇವಲ ಸಾಂಪ್ರದಾಯಿಕವಾಗಿ ಯೋಚಿಸುವ ಮನಸ್ಸುಗಳಿಗೆ ಸಹಜವಾಗಿಯೇ ದಿಗ್ಭ್ರಾಂತಿಯಾಗುತ್ತದೆ; 'ಒಳ್ಳೆಯವಳೆಂದು', 'ಸಭ್ಯಳೆಂದು', 'ತಗ್ಗಿ ಬಗ್ಗಿ ನಡೆಯುವವಳೆಂದು', 'ಗುರುಹಿರಿಯರಲ್ಲಿ ಭಯಭಕ್ತಿ ಇಟ್ಟುಕೊಳ್ಳುವಳೆಂದು', 'ಕರುಣಾಮೂರ್ತಿ', 'ಸಹನಶೀಲೆ' ಎಂದುಕೊಂಡಿದ್ದ ಈ ಹೆಂಗಸರ ಮನಸ್ಸಿನಲ್ಲಿ ಇವೆಲ್ಲಾ ತುಂಬಿದೆಯಾ ಎಂಬ ಸಿಟ್ಟು, ವ್ಯಂಗ್ಯ, ವಿಷಾದ, ಆಶ್ಚರ್ಯ ಮೂಡುತ್ತವೆ. ವೈದೇಹಿ ಕತೆಗಳನ್ನು ಓದಿ ಒಂದಲ್ಲ ಒಂದು ರೀತಿ ಡಿಸ್ಟರ್ಬ್ ಆಗದಿರಲು ಸಾಧ್ಯವೇ ಇಲ್ಲ.



# ಹರಿವ ನೀರಿನ ಹರಹು ತಿರುವು
# ವೈದೇಹಿ ಬರಹಗಾರಿಕೆ–ಒಂದು ಟಿಪ್ಪಣಿ

+ ಬಿ ಎನ್ ಸುಮಿತ್ರಾಬಾಯಿ

ನಮ್ಮೆಲ್ಲರ ಒಡನೆಯೇ ಇದ್ದೂ ಯಾರಂತೆಯೂ ಆಗಲೊಲ್ಲದ, ತಾನೇ ತಾನಾಗಿ ಇದ್ದುಕೊಂಡು ಬರಹದ ತಾನವನ್ನು ಹಾಡುತ್ತಾ ಬಂದವರು ವೈದೇಹಿ. ಕಳೆದ 1970 ರ ದಶಕದ ಕೊನೆಯಲ್ಲಿ ತಮ್ಮ ಅನೇಕ ಸಮಕಾಲೀನ ಲೇಖಕಿಯರ ಹಾಗೆ ವೈದೇಹಿಯೂ ಸಣ್ಣಕತೆಯ ಅಂಗಳದಲ್ಲಿ ಗುಲಾಬಿ ಪಾದವೂರಿ ನಡೆಯ ತೊಡಗಿದರು. ಅದು ಹಲವು ಸಾಹಿತ್ಯಪಂಥಗಳ ಸಂಘರ್ಷದ ಸಂದರ್ಭ. ತನ್ನ ಅದುವರೆಗಿನ ಪ್ರಖರತೆಯನ್ನು ನವ್ಯಪಂಥವು ಕಳೆದುಕೊಂಡಿದ್ದು ಒಂದೆಡೆ; ಮತ್ತೊಂದೆಡೆ ಬಂಡಾಯ, ದಲಿತ, ಮಹಿಳಾ ಚಳವಳಿಗಳಿಂದ ಪ್ರೇರಿತವಾದ ಸಾಹಿತ್ಯಾಭಿವ್ಯಕ್ತಿಯ ಹೊಸಬಗೆಗಳ ಹುಡುಕಾಟ. ಈ ಹೊಸ ಪಂಥೀಯ ಸಾಹಿತ್ಯಗಳು 1980ರ ದಶಕದಲ್ಲಿ ಬೀರಿದ್ದ ಪ್ರಭಾವಕ್ಕೆ ಎಷ್ಟೋ ನವ್ಯರೂ ಮಣಿದಿದ್ದರು. ಈ ಪಂಥಗಳ ಹೊಸ ಬರಹಗಾರ ಯುವಜನರಿಗೆ ಬರಹಗಾರಿಕೆಗೆ ಒಂದು ನಿರ್ದಿಷ್ಟ ಗುರಿಯಿತ್ತು. ಸಾಹಿತ್ಯದ ಮೂಲಕ ಸ್ವಂತಿಕೆ, ಸ್ವಾತಂತ್ರ್ಯ, ಅಸ್ಮಿತೆ, ಅಸ್ತಿತ್ವಗಳನ್ನು ಸಂಸ್ಕೃತಿಯಲ್ಲಿ ಸ್ಥಾಪಿಸುವ ಉತ್ಕಟ ಹಂಬಲ ಅವರಲ್ಲಿತ್ತು.

ವೈದೇಹಿಗೆ ಕಥನಕಲೆಯ ಆರಂಭದಲ್ಲೇ ಹಲವರು ನವ್ಯ ದಿಗ್ಗಜರಿಂದ ಸೂಕ್ಷ್ಮಗ್ರಹಿಕೆ ಮತ್ತು ಕಲಾವಂತಿಗೆಗಾಗಿ ಮೆಚ್ಚುಗೆ ದೊರೆತಿದ್ದಿತು. ಇನ್ನು ಕೆಲವರು ಇವರೊಳಗಿನ ಅಪ್ಪಟ ದೇಸಿ ಸಂಸ್ಕೃತಿಯ ಲಕ್ಷಣಗಳಿಗೆ ನೀರೆರೆದು ಪೋಷಿಸುತ್ತ ಬಂದುದಿತ್ತು. ಹಾಗಾಗಿ ಮೊದಲಲ್ಲೇ ಮುಖ್ಯವಾಹಿನಿಯು ಅವರನ್ನು ಸ್ವೀಕರಿಸಲು ಸಜ್ಜಾದಂತಹ ಸ್ಥಿತಿಯಲ್ಲಿತ್ತು. ಆ ರೀತಿಯ ಆತ್ಮವಿಶ್ವಾಸದ ಜಾಗದಲ್ಲಿ ಆ ಕಾಲದ ಬಹುಪಾಲು ಮಹಿಳೆಯರು ಇನ್ನೂ ಪ್ರವೇಶಿಸಿರಲಿಲ್ಲ. ಅವರು ತಮ್ಮ ಇರುವಿಕೆಯನ್ನು ಗಟ್ಟಿಯಾಗಿ ಕೂಗಿ ಹೇಳತೊಡಗಿದ್ದರು. ಅವರೆದುರಲ್ಲಿ ವೈದೇಹಿ ತಾವು 'ಸ್ತ್ರೀವಾದಿ ಲೇಖಕಿ' ಅಲ್ಲವೆಂದು ಘೋಷಿಸಿಕೊಂಡದ್ದು ಎಲ್ಲರಿಗೂ ಈಗ ತಿಳಿದಿರುವ ಸಂಗತಿ.

ತಮ್ಮ ಸುತ್ತಲಿನ ಬರಹಗಾರರು (ಸ್ತ್ರೀಯರಿರಲಿ, ಪುರುಷರಿರಲಿ) ನಡೆಸುತ್ತಿದ್ದಂಥ ಸೈದ್ಧಾಂತಿಕ ವಾಗ್ವಾದಗಳ ವಿದ್ಯಮಾನಗಳ ಅರಿವು ವೈದೇಹಿಗೆ ಇತ್ತು. ಆದರೆ ಆ ಯಾವುದೇ

ವಾಗ್ವಾದಗಳಲ್ಲಿ ಭಾಗವಹಿಸದೆ ತಮ್ಮಷ್ಟಕ್ಕೆ ತಾವು ಬರೆಯುತ್ತಾ ಹೋದದ್ದೇ ಅವರ ದಾರಿಯಾಯಿತು. ಚಳವಳಿಗಳು ಬರಹಗಾರಿಕೆಗೆ ಒಳಗಿನಿಂದ ಬಲವನ್ನು ಒದಗಿಸುತ್ತಿದ್ದುದರ ಬಗೆಗೆ ಅವರು ಕಣ್ಣು ಮುಚ್ಚಿ ಕುಳಿತಿದ್ದರು ಎಂದೇನೂ ಅಲ್ಲ. ವೈದೇಹಿ ತಮ್ಮ ಸಂವೇದನಾಶೀಲ ಸ್ಪರ್ಶಕ ಕೊಂಡಿಗಳಿಂದ ಸುತ್ತಲಿನ ಎಲ್ಲ ಬೆಳವಣಿಗೆಗಳ ಸಾರವನ್ನು ಹೀರಿಕೊಳ್ಳಬಲ್ಲವರು. ಉದಾಹರಣೆಗೆ ಹೇಳುವುದಾದರೆ, ಸ್ತ್ರೀವಾದಿ ವಿಮರ್ಶಕರು ಮಹಿಳಾ ಅಭಿವ್ಯಕ್ತಿಯ ವಿಶಿಷ್ಟ ಲಕ್ಷಣಗಳನ್ನು ಗುರುತಿಸಲು ಸಿದ್ಧಪಡಿಸಿಕೊಳ್ಳುತ್ತಿದ್ದ ಸೈದ್ಧಾಂತಿಕ ಹತ್ಯಾರುಗಳನ್ನು ಬ್ಲಾಟಿಂಗ್ ಪೇಪರ್ ಹೀರಿಕೊಳ್ಳುವ ಹಾಗೆ ವೈದೇಹಿಯವರು ಸಾರತಃ ತಮ್ಮ ಕತೆಗಳಲ್ಲಿ, ಕವನಗಳಲ್ಲಿ ತಂದಿರುವ ಪವಾಡಕ್ಕೆ ಏನೆನ್ನಬಹುದು? ಬಹಿರಂಗದಲ್ಲಿ ಸ್ತ್ರೀವಾದಿತನವನ್ನು ನಿರಾಕರಿಸಿದರೂ ಅಂತರಂಗದಲ್ಲಿ ಆ ಸ್ತ್ರೀವಾದಿತನದ ಅಮ್ಮ, ಅಜ್ಜಿಯರನ್ನು ಸೃಷ್ಟಿಸಬಲ್ಲ ವೈದೇಹಿಯವರ ಇಂಥ ಪ್ರತಿಭೆಗೆ ನಾನು ಇಡುವ ಹೆಸರು 'ವೈದೇಹಿತನ'.

* * *

ಸ್ತ್ರೀಕೇಂದ್ರಿತತೆ ವೈದೇಹಿಯವರ ಮೊದಲ ಒಲವು. ಕೊನೆಯದೂ ಅದೇ. ಈ ಅಂಶವನ್ನು ಹೊರಗಿನಿಂದ ವಿಮರ್ಶಕರೋ ಇತರರೋ ಗುರುತಿಸುವುದು ಹಾಗಿರಲಿ, ಸ್ವತಃ ವೈದೇಹಿಯೇ ಒಬ್ಬ ಲೇಖಕಿಯಾಗಿ ದೃಢವಾದ ನೆಲೆ ತಲುಪಿದ ಬಳಿಕ ಒಂದು ಸಂವಾದದಲ್ಲಿ ಹೀಗೆ ಹೇಳಿರುತ್ತಾರೆ:

'... ನಾನು ಬದುಕಿದ ಬದುಕಿನಲ್ಲಿ ನನಗೆ ಮುಖಾಮುಖಿಯಾದವರು ಮಹಿಳೆಯರೇ. ಸ್ತ್ರೀಲೋಕ, ಜೀವಗಳೇ ನನಗೆ ದಕ್ಕಿದ ಲೋಕ. ನಾವು ಚಾವಡಿಗೆ ಸಹ ಹೋಗುತ್ತಿರಲಿಲ್ಲ. ಹೆಂಗಸರ ಬದುಕು, ದುಃಖ, ನೋವು, ಅಳು ಇವುಗಳ ಒಳಗೇ ಇದ್ದದ್ದು, ನಾವು ಎಲ್ಲಿರುತ್ತೇವೋ ಆ ಲೋಕವನ್ನೇ ಕುರಿತು ಬರೆಯುವುದು ಸಹಜ . . . . ನಾನು ನನಗೆ ದಕ್ಕಿದ ಲೋಕವನ್ನು ಬರೆದುಕೊಂಡು ಹೊರಟೆ. . .'

ಆದರೆ ಕಳೆದ ಒಂದು ಶತಮಾನದ ಬಹುಪಾಲು ಮಹಿಳಾ ಸಾಹಿತ್ಯ ಸೃಷ್ಟಿಯಾಗಿರುವುದೇ ಸ್ತ್ರೀಲೋಕದ ಅನುಭವಗಳ ಸುತ್ತ. ತಿರುಮಲಾಂಬಾ, ಕಲ್ಯಾಣಮ್ಮ, ಗೌರಮ್ಮ, ಗಿರಿಬಾಲೆ, ಶ್ಯಾಮಲಾದೇವಿ, ಜಾನಕಮ್ಮ, ತ್ರಿವೇಣಿ, ಎಂ.ಕೆ.ಇಂದಿರಾ, ಅನುಪಮಾ, ಸಾವಿತ್ರಮ್ಮ ಮುಂತಾಗಿ ಹಿಂದಿನ ಎಲ್ಲ ಲೇಖಕಿಯರಿಗೂ ಸ್ತ್ರೀಯರ ಸಮಸ್ಯೆಗಳೇ ವಸ್ತುವಾಗಿರುವುದು. ಹಾಗಿರುವಾಗ ವೈದೇಹಿಯ ಈ ಆಯ್ಕೆಯಲ್ಲಿ ಹೆಚ್ಚುಗಾರಿಕೆ ಏನಿದೆ? ಎಂಬ ಪ್ರಶ್ನೆ ಯಾರಿಗಾದರೂ ಹುಟ್ಟಬಹುದು. ಇವರ ಇಂಥ ಆಯ್ಕೆಯಲ್ಲಿ ಎರಡು ಸ್ತ್ರೀವಾದಿ ರಾಜಕೀಯದ ಕ್ರಿಯೆಗಳು ನನ್ನಂಥವರಿಗೆ ಕಾಣಿಸುತ್ತವೆ:

ಮೊದಲನೆಯದು, ಅದುವರೆಗಿನ ನವ್ಯವಿಮರ್ಶೆ ಸ್ತ್ರೀ ಬರಹಗಾರಿಕೆಯನ್ನು ಸೀರೆ ಒಡವೆಗಳ ಅಡುಗೆ ಮನೆಯ ಸಾಹಿತ್ಯವೆಂದು ಹೀನಾಯವಾಗಿ ನೋಡುತ್ತಾ, ಇವರದ್ದೆಲ್ಲ

'ಜನಪ್ರಿಯ' ಸಾಹಿತ್ಯವೆಂದು. ಅವನ್ನು ಗಂಭೀರವಾಗಿ ಪರಿಗಣಿಸದ ಧೋರಣೆಯೊಂದನ್ನು ತೋರುತ್ತಿತ್ತು. ಅಂತಹ ಹೊತ್ತಿನಲ್ಲಿ 'ಅಡುಗೆ ಕೋಣೆ' ಎಂಬ ಹೆಂಗಸರ ಅನುಭವ ಸಾಮ್ರಾಜ್ಯವನ್ನು ಗಂಡಸರ 'ಚಾವಡಿ'ಯಷ್ಟೇ ಉಜ್ವಲವಾಗಿ ಬೆಳಕಿಗೆ ತರುವ ನಿರಂತರ ಕಾಯಕಕ್ಕೆ ವೈದೇಹಿ ಕೈಹಾಕಿದ್ದರು. ತ್ರಿವೇಣಿ, ಎಂ.ಕೆ ಇಂದಿರಾರಂಥವರನ್ನು ಓದುತ್ತಿದ್ದುದರಿಂದ ತಾನೂ ಬರೆಯಬಹುದು ಎಂಬ ಆತ್ಮವಿಶ್ವಾಸ ತನಗೆ ಬಂದಿತು ಎಂದು ಆ ಲೇಖಕಿಯರ ಜೊತೆ ತನ್ನನ್ನು ಜೋಡಿಸಿಕೊಳ್ಳಲು ಹಿಂದೆಗೆಯಲಿಲ್ಲ. ಇದು ಎರಡನೆಯ ಸ್ತ್ರೀವಾದಿ ರಾಜಕೀಯ ಕ್ರಿಯೆ. ಏಕೆಂದರೆ ಅಲಕ್ಷಿತ, ಮರೆತು ಹೋದ ಮಹಿಳಾ ಬರಹಗಾರರ ಮರುಶೋಧನೆ, ಸ್ತ್ರೀ ಸಾಹಿತ್ಯ ಪರಂಪರೆಯ ಕಟ್ಟೋಣದ ಕಾರ್ಯದ ಒಂದು ಮುಖ್ಯ ಸಂಗತಿಯೇ ಆ ಪರಂಪರೆಯ ಜೊತೆಗೆ ತನ್ನನ್ನು ಗುರುತಿಸಿಕೊಳ್ಳುವುದು.

ಹಿಂದಿನ ಲೇಖಕಿಯರಿಗೆ ಬಹುಶಃ ಅರಿವಿಗೆ ಬರಲು ಸಾಧ್ಯವೇ ಇಲ್ಲದಿದ್ದ ಸ್ತ್ರೀವಾದಿ ರಾಜಕಾರಣವು ವೈದೇಹಿ ಕಾಲಕ್ಕೆ ಬಲವಾಗಿ ಗಾಳಿಯಾಡುತ್ತಿದ್ದು, ಹಿಂದೆ ಹೇಳಿದ 'ವೈದೇಹಿತನ' ದಲ್ಲಿ ಅವರು ಆ ಗಾಳಿಯ ಗಂಧವನ್ನು ಹಿಡಿದಿದ್ದಾರೆ ಎಂದು ನನಗೆ ಅನಿಸುತ್ತದೆ.

ತಮ್ಮ ಹಿಂದಿನ ಆ ಎಲ್ಲ ಹಿರಿಯ ಮಹಿಳೆಯರು ಹಣೆಗೆ ಸೇಸೆಯನಿಟ್ಟು ಉಡಿತುಂಬಿಸಿಕೊಟ್ಟ ಅಭಿವ್ಯಕ್ತಿಯ ಸಿದ್ಧಿಗಳ ಕಾಣಿಕೆಯನ್ನು ಶ್ರದ್ಧೆಯಿಂದ ಕಣ್ಣಿಗೊತ್ತಿ ತಲೆಗೇರಿಸಿಕೊಂಡರೂ ವೈದೇಹಿ ಅವರಾರನ್ನು ಹಿಂಬಾಲಿಸಲಿಲ್ಲ, ಅನುಕರಿಸಲಿಲ್ಲ. ಬದಲಾಗಿ ತಮ್ಮ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳನ್ನು ಹುಡುಕಿಕೊಳ್ಳಲು ಅಗತ್ಯವಾಗಿದ್ದ ಚೈತನ್ಯವನ್ನು ಆ ಪರಂಪರೆಯಿಂದ  ಅವರು ಪಡೆದುಕೊಂಡಿದ್ದಾರೆ ಎನ್ನಬಹುದು. ತಾನು ಹುಟ್ಟಿಬಂದ ಪರಂಪರೆಗೆ ಮುಖಾಮುಖಿ ಆಗುವುದಕ್ಕೆ ವೀಣಾ, ಸಾರಾ, ಗೀತಾ ನಾಗಭೂಷಣರಂಥ ಇವರ ಸಮಕಾಲೀನ ಲೇಖಕಿಯರು ಸಂಘರ್ಷ, ಬಂಡಾಯ, ಪ್ರತಿರೋಧದ ಮಾರ್ಗಗಳನ್ನು ಆಯ್ಕೆ ಮಾಡಿಕೊಂಡರು. ಆದರೆ ವೈದೇಹಿ ಅದೇ ಪರಂಪರೆಯೊಂದಿಗೆ ಅದರ ಸಾರಸತ್ವ ಕಾಪಾಡಿಕೊಳ್ಳುತ್ತಾ ಬೆಳೆಯುವ ಅನುಸಂಧಾನದ ದಾರಿಯನ್ನು ಆಯ್ದುಕೊಂಡರೆನಿಸುತ್ತದೆ.

* * *

ಸ್ತ್ರೀಯರ ಅನುಭವಗಳೇ ಇವರಿಗೆ ತಮ್ಮ ಬರಹಕ್ಕೆ ಮುಖ್ಯ ಆಧಾರ. ಅಂದಮೇಲೆ ಆ ಅನುಭವಗಳು ಸೃಷ್ಟಿಗೊಳ್ಳುವ ಕುಟುಂಬಗಳೂ ಅದರ ಉಪಕರಣಗಳಾದ ಮದುವೆ, ದಾಂಪತ್ಯ, ಸಂತಾನಗಳ ಸಂಸ್ಥೆಗಳಲ್ಲಿ ಮಹಿಳೆಯರು ಕಂಡುಕೊಂಡಿರುವ ಬದುಕಿನ ರೀತಿಗಳು, ಹಾಡು–ಪಾಡುಗಳೇ ಬರಹಕ್ಕೆ ವಿಷಯವಾಗುವುದು ಸಹಜ. ಈ ಒಂದೊಂದು ಸಂಸ್ಥೆಯೂ ಗಂಡಾಳ್ತನದ  ದಟ್ಟವಾದ ಬಲದ ಅಡಿಯಲ್ಲಿ ಹೆಂಗಸರು ಬೇಯಿಸಿಹಾಕಿದ್ದನ್ನು ಗಡದ್ದಾಗಿ, ಪೊಗದಸ್ತಾಗಿ ಉಂಡು ಗೊರಕೆ ಹೊಡೆಯುತ್ತಿರುವ ಸಂಸ್ಥೆಗಳು. ಇವುಗಳ

ಒಳಗೆ ನಿಜವಾಗಿ ಒಂದಿಷ್ಟು ಜೀವಗಳು ಅತ್ತಿತ್ತ ಚಲಿಸುತ್ತಾ ಸಡಗರಿಸುತ್ತವೆಯಾದರೆ ಅವು ಸ್ತ್ರೀ ಜೀವಗಳೇ. ಪ್ರಕೃತಿ ಸಿದ್ಧವಾದ ಪುರುಷ-ಸ್ತ್ರೀ ನಿಯಮದ ಈ ಲೋಕದ ಒಳಹೊರಗುಗಳನ್ನು ಹಿಂದಿನ ಲೇಖಕಿಯರೂ, ಇವರ ಸಮಕಾಲೀನರೂ ಸಾಕಷ್ಟು ಚಿಂತನೆ ಮಾಡಿದ್ದಾರೆ. ಆ ಲೋಕದ ಕತ್ತಲ ಪದರಗಳ ಮೇಲೆ ಟಾರ್ಚ್ ಬೆಳಕು ಚೆಲ್ಲಿದ್ದಾರೆ.

ವೈದೇಹಿ ಕೂಡ ಇಂತಹ 'ಅನಾವರಣ'ಕ್ಕೇ ಕೈಹಾಕಿದ್ದರೂ ಅವರ ಸಮಕಾಲದ ಹಲವು ಲೇಖಕಿಯರ ಹಾಗೆ ಕಲಿತ ಹೆಣ್ಣಿನ ಪ್ರಜ್ಞೆಯ ನೆಲೆಯಿಂದ ಸ್ತ್ರೀಲೋಕವನ್ನು ಪರಿಭಾವಿಸುವ ಅಥವಾ ಹೊರನಿಂತು ವಿಮರ್ಶಿಸುವ 'ಸಾಮಾಜಿಕ' ದೃಷ್ಟಿಕೋನ ಇವರದಾಗಲಿಲ್ಲ. ಬದಲಾಗಿ ಯಾವ ಸ್ತ್ರೀಯರನ್ನು ಕುರಿತು ಇವರ ಬರಹಗಳು ಹೇಳುತ್ತವೋ ಆ ಸ್ತ್ರೀಯರದೇ ಬುದ್ಧಿ, ಭಾವ, ಕ್ರಿಯೆಗಳ ಮುಖಾಂತರವೇ ಅವರ ಬದುಕಿನ ಒಳಮಗ್ಗುಲುಗಳು ತೆರೆದುಕೊಳ್ಳುವ ಹಾಗೆ ವೈದೇಹಿಯವರ ರಚನೆಗಳಿರುತ್ತವೆ. ಸ್ತ್ರೀಯರು ಬವಣೆ, ಬೇನೆ, ಬೇಗುದಿಗಳನ್ನೇ ಬದುಕಿ, ಬಾಳಿ ಎಷ್ಟು ಗಟ್ಟಿಯಾಗಿ ಕಾಣುತ್ತಾರೆಂದರೆ ಅವರನ್ನು ಆಳುತ್ತಿರುವ  ಅಥವಾ ಆಳುತ್ತೇವೆಂದು ಭ್ರಮಿಸಿರುವ ಗಂಡಸರ ಲೋಕವೇ ಅಭದ್ರತೆ, ಅಳುಕು ಅಪಕ್ವತೆಗಳ ದುರ್ಬಲ ಲೋಕವಾಗಿ ಮಾರ್ಪಾಡಾಗಿಬಿಡುತ್ತದೆ.

ವೈದೇಹಿ ಸಾಕಷ್ಟು ಕಥಾಸಂಕಲನಗಳಲ್ಲಿ ವಿವಿಧ ಸ್ತರದ ಮಹಿಳೆಯರ, ವಿವಿಧ ಕಾಲಘಟ್ಟಗಳಲ್ಲಿ ಎದುರಾಗುವ ಸಮಸ್ಯೆಗಳ ಜಿಜ್ಞಾಸೆ ನಡೆಸಿದ್ದಾರೆ. ಆದರೂ ಅವರ ಮೂಲ ಆಸ್ಥೆ ಆಧುನಿಕ ಕಾಲದ ಸ್ತ್ರೀಯರ ಸಮಸ್ಯಾ ಬಾಹುಳ್ಯದ ಕಡೆಗಿಂತ ಹಳೆಯ ಸಂಪ್ರದಾಯಸ್ಥ ಗ್ರಾಮೀಣ ನೆಲೆಗಳ ಹೆಣ್ಣುಗಳ ಜೀವನದ ಬಗೆಗಳನ್ನು ಶೋಧಿಸುವುದರಲ್ಲಿ ಹೆಚ್ಚು ಯಶಸ್ವಿಯಾಗಿ ಪ್ರಕಟವಾಗಿದ್ದು ಕಂಡುಬರುತ್ತದೆ. ಈ ಮಾತಿಗೆ ಅವರ ಕಥಾ ಸಾಹಿತ್ಯದ್ದೇ ಎರಡು ಮಾದರಿಗಳಿಂದ ನಿದರ್ಶನ ನೀಡಬಹುದು.

'ಮದುವೆ' ಎಂಬ ಸಂಸ್ಥೆಯ ಹಳೆಯ ಕಾಲದ, ಹೊಸ ಕಾಲದ ಲಕ್ಷಣಗಳನ್ನು ಅವುಗಳಲ್ಲಿನ ಮಹಿಳೆಯರ ಸ್ಥಿತಿಗಳನ್ನು, ಒಳತೋಟಗಳ, ತಳಮಳಗಳ, ಆತಂಕಗಳ ಮೂಲಕ ಚರ್ಚೆಗೆ ತಂದಿರುವ ಅನೇಕ ಕತೆಗಳನ್ನು ಇವರಲ್ಲಿ ಕಾಣುತ್ತೇವೆ. ವಯಸ್ಸಿಗೆ ಬಂದ ಹುಡುಗಿಯರ ಮನಸ್ಸುಗಳು ಭಾವೀ ಜೀವನ ಕುರಿತು, ಬಾಳಿಗೆ ಸಂಗಾತಿಯಾಗಿ ಬರಬಹುದಾದ ಗಂಡನ್ನು ಕುರಿತು ಕಟ್ಟುವ ಬಗೆಬಗೆಯ ಕನಸುಗಳು, ನಿರೀಕ್ಷೆಗಳ ಲೋಕವು ಬದುಕಿನ ವಾಸ್ತವದ ಎದುರಲ್ಲಿ ಕರಗಿಹೋಗುವ ಬಗೆಗಳ ಸೂಕ್ಷ್ಮ ಚಿತ್ರಣಗಳಲ್ಲಿ 'ಚಿಪ್ಪು'ವಿನ ಯಶಿ, 'ಜೀಳು- ಬೇರು'ವಿನ ಇಂದಿ, 'ಅಂತರಂಗದ ಪುಟಗಳು'  ಕಥೆಯ ಅಚಲ, 'ಸೌಗಂಧಿಯ ಸ್ವಗತಗಳು' ಕಥೆಯ ನಾಯಕಿ ಮುಂತಾಗಿ ಹಲವರು ಈ ಚರ್ಚೆಯ ಸದಸ್ಯ ಪಾತ್ರಗಳಾಗಬಹುದು.

ಈ ಎಲ್ಲಾ ಕತೆಗಳಲ್ಲಿ ತಂದೆ, ತಾಯಿ, ಹಿರಿಯರು ತಮ್ಮ ಅಧಿಕಾರಯುಕ್ತ ರಕ್ಷಕಬಾಹುಗಳಿಂದ ಬಾಚಿ ರಕ್ಷಿಸುತ್ತಲೇ ತಮ್ಮ ಹೆಣ್ಣುಮಕ್ಕಳ ವ್ಯಕ್ತಿ ಸ್ವಾತಂತ್ರ್ಯದ ಉಸಿರುಗಟ್ಟಿಸಿ ಬಿಡುವ ವಿಡಂಬನೆಯಿದೆ. ಇಂಥ ಅಸಹಾಯಕತೆಗೆ ಬಲಿಬೀಳಲು ಒಪ್ಪದೆ ತಿರುಗಿ ಬೀಳುವ ಒಬ್ಬಳೇ ವ್ಯಕ್ತಿ 'ಅಂತರಂಗದ ಪುಟಗಳು' ಕತೆಯ ಅಚಲ. ಕಳೆದ ಎಂಬತ್ತರ ದಶಕದಲ್ಲಿ ನಮ್ಮ ಕಾಲಕ್ಕೆ ನಿಕಟವಾಗಿ ಕಂಡಿದ್ದ ಪಾತ್ರವೂ ಇದೇ. ಇವಳು 'ಪ್ರೇಮ' ಎಂಬುದು ಒಂದು ಅಮೂಲ್ಯ, ಅನನ್ಯ, ಆಪ್ತ ಅನುಭವ ಎಂದು ನಂಬಿದ್ದಾಳೆ. ತನ್ನೊಳಗಿನ ಹೆಣ್ತನವನ್ನು ಮೀಟಿ ಎಚ್ಚಿಸಬಲ್ಲಂಥವನೊಬ್ಬ ಸಂಗಾತಿ ಯಾಗಬೇಕೆಂದು ಕನಸಿಸುತ್ತಾಳೆ. ಆ ನಂಬಿಕೆಯಿಂದಲೇ ತನ್ನ ಕೈ ಹಿಡಿಯಬಂದವರಲ್ಲಿ ಲೋಪದೋಷ ಹುಡುಕಿ ಎಲ್ಲರನ್ನೂ ತಿರಸ್ಕರಿಸುತ್ತಾ ಹೋಗುತ್ತಾಳೆ. ಅವಳ ಓರಗೆಯ ಹುಡುಗಿಯರು ಒಬ್ಬೊಬ್ಬರಾಗಿ passing show ರೀತಿ 'ಮದುವೆ' ಮಡುವಿಗೆ ಧುಮುಕಿದ್ದನ್ನೂ ಅವರು ಈಜುವುದನ್ನು, ಈಜು ಬರದೆ ಚಡಪಡಿಸುವುದನ್ನೂ, ಹೇಗೋ ಬೇರೆ ಆಧಾರ ಹಿಡಿದು ಬದುಕುವುದನ್ನು ಸಾಕ್ಷಿಪ್ರಜ್ಞೆಯಂತೆ ನೋಡುತ್ತಾ ನೋಡುತ್ತಾ ಆ ಕಾಯುವ ದಾರಿಯಲ್ಲಿ ಒಂಟಿ ಪಯಣಿಗಳಾಗಿ ಉಳಿಯುತ್ತಾಳೆ. ಅಚಲಳ ಈ ಮಾನಸಿಕ ಲೋಕದ ಚಿತ್ರಣವೇ 'ಅಂತರಂಗದ ಪುಟಗಳು' ಎಂಬ ಕತೆಯ ಶೀರ್ಷಿಕೆಯನ್ನು ಸಮರ್ಥಿಸುತ್ತದೆ.

ವೈದೇಹಿ ಎಲ್ಲೂ, ಎಂದೂ ಒಬ್ಬಳೇ ವ್ಯಕ್ತಿಯಲ್ಲಿ ಆಧುನಿಕ ಪ್ರಜ್ಞೆಯನ್ನು ಹರಳುಗಟ್ಟಿಸಿ ಚಿತ್ರಿಸಿದ್ದು ಇಲ್ಲ. ಆದರೆ ಅಚಲ ಸ್ವಲ್ಪ ಅಪವಾದ ಎನ್ನಬಹುದು. ಇವಳ ವೈಚಾರಿಕ ತೀಕ್ಷ್ಣತೆ, ಎಂಥದಕ್ಕೂ ತಲೆಬಾಗದ ದಿಟ್ಟತನಗಳಿಂದಾಗಿ ಪಿತೃಸತ್ತೆಯ ನಿರೀಕ್ಷಿತ ಸ್ತ್ರೀ ಮಾದರಿಗೆ ಅಪವಾದದ ಹಾಗೆ ಇವಳು ತೋರುತ್ತಾಳೆ. ಆದರೆ ಆ ಸತ್ತೆಯು ಇವಳಿಗೆ ಕೊಡುವುದು ಒಂಟಿತನ, ಪರಕೀಯತೆಯ ಬಳುವಳಿಗಳನ್ನು. ಈ ರೀತಿಯಲ್ಲಿ ಜೀವನ ವ್ಯವಸ್ಥೆಯಿಂದ ತನ್ನನ್ನು ಪರಕೀಯವಾಗಿಸಿಕೊಂಡು ನೋಡಿಕೊಳ್ಳುವ ಆಧುನಿಕತೆಯ ಮುಖ್ಯ ಲಕ್ಷಣವು ಇವಳಲ್ಲಿದೆ. ಆದರೆ ಅದನ್ನು ಬೆಳೆಸಲು ವೈದೇಹಿಗೆ ಸಾಧ್ಯವಿಲ್ಲವಾದಂತೆ ಕಾಣುತ್ತದೆ. ತನ್ನ ಓರಗೆಯ ಮಂಜು ಮದುವೆಯಾದರೂ, ಮದುವೆಯ ಆಚೆಗೂ ಲೈಂಗಿಕ ಸಂಬಂಧವೊಂದರಲ್ಲಿ ಸುಖಿಸುತ್ತಾಳೆ ಎಂಬ ಕೇಳಿಕೆಯ ಮಾತೊಂದು ಅಚಲಳ ಮನದ ಬಯಕೆಗಳನ್ನು ಬಡಿದೆಬ್ಬಿಸುತ್ತದೆ. ಪ್ರೇಮವೆನ್ನುವ ರಮ್ಯ ಕಲ್ಪನೆಯು ಕಾಮದ ಮೇಲಿನ ಮುಸುಕಷ್ಟೇ ಎಂಬ ಅರಿವು ಅವಳಲ್ಲಿ ಈ ಕತೆಯಲ್ಲಿ ಹೊಮ್ಮುವುದಿಲ್ಲ. ಬದಲಾಗಿ ಆ ಮಂಜು ಕೂಡಿದವನನ್ನೇ ತಾನೂ ಕೂಡಲು ಬಯಸುತ್ತಿರುವ ಅನಿಸಿಕೆಯೇ ಅವಳಿಗೆ ದಿಗ್ಭ್ರಮೆ ಬರಿಸುತ್ತದೆ. ಅಲ್ಲಿಗೆ ಕತೆ ಮುಗಿಯುತ್ತದೆ. ವೈದೇಹಿ ತಮ್ಮ ಅನೇಕ ಕತೆಗಳನ್ನು ಹೇಗೆ ದಿಗ್ಭ್ರಮೆ, ಭ್ರಮೆ, ಕನಸು, ಹಳವಂಡದ ತಂತ್ರದಿಂದ ಮುಗಿಸಿಬಿಡುತ್ತಾರಲ್ಲ! ಏಕೆ? ವಿಚಾರ ಮಾಡಬೇಕು.

ಇದನ್ನು ಒಂದು ಆರ್ಕಿಟೈಪ್ ರೀತಿ ವೈದೇಹಿಯವರ ಕತೆಗಳಿಗೆ ಅನ್ವಯಿಸಬಹುದು. ತುಂಬ ಸಂದಿಗ್ಧವೂ, ಸಂಕೀರ್ಣವೂ ಆದ ಪ್ರಶ್ನೆಗಳನ್ನು ಅವರ ಕತೆಗಳು ಎತ್ತುತ್ತವೆ. ಆದರೆ ಆ ಪ್ರಶ್ನೆಗಳನ್ನೇ ಕತೆಗಳ ಕೇಂದ್ರಕ್ಕೆ ತಂದು ಅವುಗಳನ್ನೇ ಜಿಜ್ಞಾಸೆ ಮಾಡುವ ಕ್ರಮ ಅವರದಲ್ಲ. ಉದಾಹರಣೆಗೆ 'ಗೂಡಿನೊಳಗೊಂದು ಹಕ್ಕಿ', 'ಅಪರಿಚಿತ'ದಂಥ ಕತೆಗಳೂ ವಿವಾಹದ ಹೊರಗಿನ ಲೈಂಗಿಕತೆಯ ಬಗೆಗಿನ ಕುತೂಹಲದ ಹೊಳಹನ್ನು ಸೂಚಿಸಿದರೂ ಅಂಥ ಸಂಬಂಧದ್ದೇ ವಿಶ್ಲೇಷಣೆಯು ಇವರಿಗೆ ಮುಖ್ಯವಾಗಿ ಕಂಡಿಲ್ಲ. ಅದೇ ರೀತಿ 'ಒಂದು ಅಪರಾಧದ ತನಿಖೆ'ಯಲ್ಲಿ ಕುಸುಮ ತನ್ನ ಗಂಡನನ್ನು ಬಿಟ್ಟುಬಂದು ತವರು ಸೇರಿದ್ದೇ ಒಂದು ಅಪರಾಧವೆಂಬಂತೆ ನಡೆದುಕೊಂಡ ಕೆಲಸಗಿತ್ತಿ ಬಾಚ್ಚಿಯ ಕತೆಯೇ ಢಾಳಾಗಿ ವಿಜೃಂಭಿಸುವುದನ್ನು ಗಮನಿಸಬಹುದು. ಇಂಥ ಕಥೆಗಾರಿಕೆಯ ದೃಷ್ಟಿಯೇ ವೈದೇಹಿಯವರನ್ನು ತಮ್ಮ ಸಮಕಾಲೀನರಿಂದ ಭಿನ್ನವಾಗಿಸುತ್ತದೆ. ಈ ಹೊತ್ತಿನ ಹೆಣ್ಣಿನ ಸಮಸ್ಯೆಯು ಎದುರಿಗಿದ್ದೂ ಅದು ಗೌಣವಾಗುತ್ತದೆ. ಭೂತಕಾಲದ ಸ್ಮೃತಿಯಿಂದ ಎದ್ದು ಬರುವ ಅನುಭವವೇ ಕೇಂದ್ರತ್ವವನ್ನು ಸಾಧಿಸುತ್ತವೆ. ಗತಕಾಲದ ಅನುಭವಗಳು ಮೇಲುಗೈಯಾಗಿ ತೋರುವುದನ್ನು ಲೇಖಕಿಯೇ ಆಯ್ಕೆ ಮಾಡಿಕೊಂಡ ದಾರಿಯೆಂದು ಹೇಳೋಣವೇ?

ಈ ಮಾತಿಗೆ ವೈದೇಹಿಯವರ ತುಂಬ ಯಶಸ್ವೀ ಕಥಾ ಸಮೂಹವು ನಮಗೆ ಸಾಕ್ಷಿಯೊದಗಿಸಬಲ್ಲದು. 'ಅಕ್ಕು' ಎಂಬ ಮುಗ್ಧ, ಮನೋವಿಕಾರದ ಬಡಪಾಯಿ ಹೆಣ್ಣಿನ ಕತೆಯಿರಲಿ, ವಾಣಿಮಾಯಿಯ ವಿಚಿತ್ರ ಪ್ರತೀಕಾರದ ಕಥನವಿರಲಿ, 'ಅಲ್ಲಲ್ಲಿಯ ಲೋಕದವರು' ಅಥವಾ 'ಅವಲಂಬಿತರು'ಗಳ ದುಡಿಮೆಗಾರ ಹೆಣ್ಣುಗಳ ಕತೆಗಳೇ ಆಗಲಿ, ಅಲ್ಲೆಲ್ಲ 'ಪಿತೃಸತ್ತೆಯು', ಗಂಡಾಳ್ತನದ ಕರಿನೆರಳು ಮಾತ್ರವಲ್ಲದೆ ಜೀವನವೇ ತಂದೊಡ್ಡುವ ಕಷ್ಟಗಳ ಸರಮಾಲೆಗೂ ಜಗ್ಗದ ಹೆಣ್ಣು ಚೇತನಗಳನ್ನು ಲೇಖಕಿ ಚಿತ್ರಿಸುತ್ತಾರೆ. ಇಂಥ ಬಹುಪಾಲು ಕತೆಗಳು ಬಾಲ್ಯದ ನೆನಪಿನ ಕಣಜದಿಂದ ಹೊಮ್ಮಿ ಬಂದಂಥವು ಅಥವಾ ಬೇರೊಬ್ಬರು ನೆನೆದು ಹೇಳಿದಂಥ ಅನುಭವ ಸ್ಮೃತಿಗಳು. ಇಂಥ ವಸ್ತುಗಳನ್ನು, ಇಂದಿನವರ ಈ ಕಾಲದ ಬದುಕಿನ ಸಂತ್ರಾಸಗಳಿಗಿಂತ ಹೆಚ್ಚಿನ ಗಾಢತೆಯಲ್ಲಿ, ಬದುಕಿನ ಸಮಗ್ರತೆಯಲ್ಲಿ ಹಿಡಿಯಲು ವೈದೇಹಿಗೆ ಸಾಧ್ಯವಾಗಿರುತ್ತದೆ. ಇವೆಲ್ಲವೂ ನೆನಪಿನ ಗಣಿಯಿಂದ ಹೊರತಂದಂಥವು. ಹಾಗಾಗಿ ನಿರೂಪಕಿಯು ಇವುಗಳಿಗೆ ಕಣ್ ಸಾಕ್ಷಿಯಾಗಿಯೋ, ಎದುರು ಬಂದು ಕಂಡು ಹೋಗುವ ನೆಂಟರಂತೆಯೋ ನಿರ್ಲಿಪ್ತತೆ, ವಸ್ತುನಿಷ್ಠತೆ ಸಾಧಿಸುವುದು ಸಾಧ್ಯವಾಗುತ್ತದೆ. ಹಾಗಿಲ್ಲದೆ ನಮ್ಮದೇ ಕಾಲದ ಸಂದಿಗ್ಧತೆಗಳನ್ನು ಒಳನಿಂತು ನಿರ್ವಹಿಸಲು ಹೊರಟಲ್ಲಿ ಯಾವುದೇ ಬರಹಗಾರರಿಗೂ ಆ ನಿರ್ವಹಣೆಯು ತುಂಬ ಜವಾಬ್ದಾರಿಗಳನ್ನೂ, ಎಚ್ಚರವನ್ನೂ ಅಪೇಕ್ಷಿಸುತ್ತದೆ ಅಲ್ಲವೆ? ಅಂತಹ ಎಚ್ಚರ, ಹೊಣೆಗಾರಿಕೆ ಹಲವೊಮ್ಮೆ ಲೇಖಕಿಯರಿಗೆ ಬರಹಕ್ಕೇ ತೊಡಕಾಗಿ ಕಾಣಬಹುದಲ್ಲವೆ? ಬರಹಗಾರಿಕೆಗೆ ತೊಡಕು

ಒಡ್ಡಿಕೊಳ್ಳದೆ, ನಿರಂತರವಾಗಿ ಕಥನವನ್ನು ಉಳಿಸಿ ಕೊಂಡಿರುವುದನ್ನು 'ವೈದೇಹಿತನ'ದ ಮತ್ತೊಂದು ವಿಶೇಷತೆ ಎನ್ನಬಹುದು.

ಒಟ್ಟಾರೆಯಾಗಿ ಕಳೆದ ನಾಲ್ಕೂವರೆ ದಶಕಗಳಿಂದ ವೈದೇಹಿ ರಚಿಸುತ್ತಾ ಬಂದಿರುವ ಸಾಹಿತ್ಯ ಹರಿವ ನೀರಿನ ಹಾಗೆ. ಅದರ ಹರವು ತಿರುವುಗಳನ್ನು ಫೋಟೋ ಕ್ಲಿಕ್ಕಿಸಿದ ಹಾಗೆ ಹಿಡಿದು ಬಿಡುವುದು ಕಷ್ಟ, ಹಾಗೂ ಅಸಮಂಜಸ. ವೈದೇಹಿ ಬರಹಗಾರಿಕೆಯಿಂದ ಒಟ್ಟಾಗಿ ಗ್ರಹಿಸಬಹುದಾದ ಜೀವನದರ್ಶನ ಎಂತಹದು? ಎಂದು ಕೇಳಿದರೆ ನನಗೆ ಹೀಗೆ ತೋರುತ್ತದೆ: ಅವರು ತಮ್ಮ ಹಿಂದಿನ ಮತ್ತು ಸಮಕಾಲೀನ ಮಹಿಳಾ ಬರಹಗಳಲ್ಲಿ ಕಂಡಿರದಷ್ಟು ದಟ್ಟವಾಗಿ ಸ್ತ್ರೀ ಸಂಸ್ಕೃತಿಯ ಅನಾವರಣದ ಕಾಯಕಕ್ಕೆ ತೊಡಗಿಕೊಂಡವರು. ಅವರು ಕಂಡರಿಸಿರುವ ಸ್ತ್ರೀಯರು ಹಿಂಸೆ, ದೌರ್ಜನ್ಯ, ದಬ್ಬಾಳಿಕೆ, ಅನ್ಯಾಯಗಳನ್ನೆಲ್ಲ ಎದುರಿಸಿದರೂ ಹೇಗಾದರೂ ಬದುಕಿನಲ್ಲಿ ಈಸಿಯೇ ತೀರುವ ಗಟ್ಟಿಗಿತ್ತಿಯರು. ಅವರಾರೂ ದುರ್ಬಲರಲ್ಲ, ಬಲಿಪಶುಗಳಲ್ಲ; ತಮ್ಮನ್ನು ಹೊಂಡಕ್ಕೆ ದೂಡಿದವರನ್ನು ತಾವೂ ಕಾಲೆಳೆದು ರೊಚ್ಚಿನಿಂದ ತಳ್ಳಿ ಸಂತೋಷಿಸುವ ಜಾಯಮಾನ ಅವರದಲ್ಲ. ಮತ್ತೊಂದು ನಿಟ್ಟಿನಲ್ಲಿ ಗಂಡಸರು ಬಡಪಾಯಿಗಳು, ದುರ್ಬಲರು, ದುರಹಂಕಾರಿಗಳಾಗಿ ತಾವೇ ಬಲಿಷ್ಠರೆನ್ನುವ ಭ್ರಮಾಧೀನರು ಎಂಬುದನ್ನು ಕೊಂಚ ಮರುಕ, ಕೊಂಚ ತಮಾಷೆಗಳಿಂದ ವೈದೇಹಿ ಸೂಚಿಸುವುದನ್ನು ಕಾಣಬಹುದು.

ಆಧುನಿಕತೆಯ ಗೊಡವೆಗೆ ಹೋಗದ, ಹಳ್ಳಿಯ ಕೌಟುಂಬಿಕ ಊಳಿಗಮಾನ್ಯದ ಗಂಡಾಳ್ತನ, ಹೆಣ್ಣಿನ ಜೀಳ್ತನಗಳ ಮುಖಾಂತರ ವೈದೇಹಿ ಕಥಿಸುವ 'ಅವಳ ಅನುಭವ' ಎಂಬುದು ಒಂದು ಕಾಲಾತೀತವಾದ ಬೇರಾವುದೋ ಲೋಕದ ಗವಿಯನ್ನು ಹೊಕ್ಕ Alice ಗೆ ಎದುರಾದ ಹಾಗೆ ಅದ್ಭುತ ಸಂಗತಿಗಳ ಆಕರವಾಗುತ್ತದೆ. ಅಲ್ಲಿ ಸ್ವತಃ ಲೇಖಕಿಯೂ ವಿಸ್ಮಯ ಹಾಗೂ ತಲ್ಲೀನತೆಗಳಿಂದ ದಾಖಲಿಸುವುದು ಕಾಣುತ್ತದೆ. ಆಧುನಿಕತೆಯ ದುರ್ಭರ ಹಾಗೂ ಬರ್ಬರ ವಾಸ್ತವಗಳಿಂದ ಪಾರಾಗಲು ಈ ಗ್ರಾಮೀಣ ಸ್ತ್ರೀಲೋಕ ಒಂದು ಪಲಾಯನದ ತಾಣವಾಗಿಬಿಡುತ್ತದೆಯೇ ಎಂಬ ಪ್ರಶ್ನೆ ನನ್ನನ್ನು ಮತ್ತೆ ಮತ್ತೆ ಕಾಡಿಸುತ್ತದೆ.



# ವೈದೇಹಿಯವರ ಎರಡು ಕತೆಗಳು

✦ ಕೆ. ಸತ್ಯನಾರಾಯಣ

ವೈದೇಹಿಯವರ ಈಚಿನ ಕಥಾ ಸಂಕಲನ 'ಕತೆ ಕತೆ ಕಾರಣ' (ಅಕ್ಷರ ಪ್ರಕಾಶನ –2016)ದ ತುಂಬಾ 'ಹೇಳುವ' ಕತೆಗಳು. ಕತೆಗಳ ಶೀರ್ಷಿಕೆಗಳನ್ನೇ ಗಮನಿಸಿ; – ಹೇಳಿದ ಕತೆ, ಹೋಯ್ತಂತೆ, ಪುರಾಣ, ಇತಿಹಾಸ, ಆಖ್ಯಾನ, ಪ್ರತ್ಯಾಜ್ಞಾನ– ಇತ್ಯಾದಿ. ಈ ಸ್ವರೂಪದ ಕತೆಗಾರಿಕೆಯಲ್ಲಿ ಕತೆಯಷ್ಟೇ ಮುಖ್ಯವಾದದ್ದು ಯಾರು ಯಾರಿಗೆ ಯಾವಾಗ ಒಂದು ಕತೆಯನ್ನು ಹೇಳಿದರು. ಈ ಕತೆಯನ್ನು ಈಗ ಹೇಳಿರುವವರಲ್ಲದೆ ಬೇರೆ ಯಾರಾದರೂ ಹೇಳಿದ್ದರೆ ಕತೆ ಬೇರೆಯಾಗುತ್ತಿತ್ತೆ, ಕತೆಯ ಧ್ವನಿ ಬೇರೆಯಾಗುತ್ತಿತ್ತೆ? ಹಾಗೆಯೇ ಕತೆಯನ್ನು ಕೇಳಿಸಿಕೊಳ್ಳುವವರು, ದಾಟಿಸುವವರು ಬೇರೆಯಾಗಿದ್ದರೆ?–ಇಂತಹ ಪ್ರಶ್ನೆಗಳೆಲ್ಲ ಮುನ್ನೆಲೆಗೆ ಬರುತ್ತವೆ. ತಕ್ಷಣವೇ ನೆನಪಿಗೆ ಬರುವುದು ಮಾಸ್ತಿಯವರ 'ಗೌತಮಿ ಹೇಳಿದ ಕತೆ'. ಆ ಕತೆಯ ವಿನ್ಯಾಸವೇ ನಮಗೆ ಕೆಲವು ಪ್ರಶ್ನೆಗಳನ್ನು ಕೇಳಿಕೊಳ್ಳುವಂತೆ ಪ್ರೇರೇಪಿಸುತ್ತದೆ. ಮಾಲಿನಿಯಲ್ಲದೆ ಬೇರೆ ಯಾರಾದರೂ ಈ ಕತೆ ಹೇಳಿದ್ದರೆ, ಕತೆ ಬೇರೆಯಾಗುತ್ತಿತ್ತೆ? ಕೇಳಿಸಿಕೊಳ್ಳುವವರು ಪ್ರಿಯಂವದೆ, ಅನಸೂಯೆಯರಲ್ಲದಿದ್ದರೆ? ಇದೆಲ್ಲಕ್ಕಿಂತ ಮುಖ್ಯವಾಗಿ ಸ್ವತಃ ಮಾಲಿನಿಯೇ ತನ್ನದೇ ಕತೆಯನ್ನು ಇನ್ನೊಬ್ಬರ ಕತೆಯೆಂದು ಹೇಳುತ್ತಿರುವಳಲ್ಲ!

'ಧರ್ಮಸೂಕ್ಷ್ಮ ಪುರಾಣ' ಮತ್ತು 'ವ್ಯಕ್ತಿ ಪುರಾಣ' ಎಂಬ ಎರಡು ಕತೆಗಳನ್ನು ವಿಶ್ಲೇಷಿಸುವ ಮೂಲಕ ಮೇಲಿನ ಪ್ರಶ್ನೆಗಳಿಗೆ ವೈದೇಹಿಯವರ ಕಥನ ಕ್ರಮ ಸೂಚಿಸುವ ಉತ್ತರಗಳನ್ನು ಗಮನಿಸಲು ಈ ಟಿಪ್ಪಣಿಗಳು. ಎರಡು ಕತೆಗಳಲ್ಲೂ ಮಾತುಕತೆಯ ಧಾಟಿಯಿದೆ. ಮಾತು ಕತೆಯನ್ನು ನಡೆಸುತ್ತದೆ. ಒಂದು ಕತೆ ಮದುವೆ ಮನೆಯ ಗಜಿಬಿಜಿಯಲ್ಲಿ ಹೇಳಲ್ಪಟ್ಟರೆ, ಇನ್ನೊಂದು ಕತೆ ಯಾರದೋ ಮದುವೆಗೆ ಬಂದವನನ್ನು ಉಳಿಸಿಕೊಂಡು ಮನೆಗೆ ಕರೆದು ಕೂರಿಸಿಕೊಂಡು ಹೇಳುವುದಾಗಿದೆ. ಮದುವೆಗಳು ಸಮುದಾಯದ, ಊರೊಟ್ಟಿನ, ಸಮ್ಮಿಲನವಾಗಿದ್ದಾಗ ದಕ್ಕುತ್ತಿದ್ದ ಕಥಾ ಸಂವಹನ/ಸಂದರ್ಭಗಳು ಇವು ಎಂಬುದನ್ನು ಕೂಡ ಗಮನಿಸಬೇಕು. ಒಂದು ಕಾಲದಲ್ಲಿ ಜನ ಮದುವೆಗಳಿಗೆ 'ಹೋಗಿ' 'ಇದ್ದು' 'ನೋಡಿ' ಬರುತ್ತಿದ್ದರು. ಈಗ ಕೇವಲ 'ಹೋಗು'ತ್ತಾರೆ.

'ಧರ್ಮ ಸೂಕ್ಷ್ಮ ಪುರಾಣದ ಕತೆ' ಭ್ರಷ್ಟಾಚಾರದ ಕತೆ. ಭ್ರಷ್ಟಾಚಾರವನ್ನು ಹೊರ ಜಗತ್ತಿನ ವಿದ್ಯಮಾನವಾಗಿ, ಇನ್ನೊಬ್ಬರ ಬದುಕಿನ ವಿವರವಾಗಿ ನೋಡದೆ, ನಮ್ಮೊಳಗೇ ಇರುವ ಒಂದು ಸಾಧ್ಯತೆಯಾಗಿ ಕತೆ ನೋಡುತ್ತದೆ. ಅಂದರೆ ನಮ್ಮೊಳಗೇ ಇರುವ ಕಾಮನೆಗೆ ನಾವೇ ಸೋಲುವ ಕತೆ. ಅಸಹಾಯಕರಾಗಿ ಸೋಲುವ ಕತೆ. ಸೋತ ಮೇಲೆ ನಾಚಿಕೆ, ಹಿಂಸೆ ಪಟ್ಟುಕೊಳ್ಳುವ ಕತೆ. ಈ ನಾಚಿಕೆ, ಹಿಂಸೆಯ ನಡುವೆಯೂ ಹಣದ ಪ್ರಲೋಭನೆಗೆ ಸೋತಿದ್ದರಿಂದ ಬರುವ ಅನುಕೂಲಗಳನ್ನು ಕುತೂಹಲದಿಂದ ಅನುಭವಿಸುವ, ಸುಖ ಪಡುವ ಕತೆಯೂ ಹೌದು.

ಕತೆಯಲ್ಲಿ ವಿಶೇಷವಿಲ್ಲ. ವಿಶೇಷವಿರುವುದು ಅದು ಭ್ರಷ್ಟತೆ ಹುಟ್ಟುವ ಒಂದು ಸೂಕ್ಷ್ಮವಾದ, ಆಪ್ತವಾದ ನೆಲೆಯನ್ನು ಅನಾಯಾಸವಾಗಿ ಗ್ರಹಿಸುವುದರಲ್ಲಿ ಮತ್ತು ಈ ನೆಲೆಗೂ ಕತೆಗಾರಿಕೆಗೂ ಇರುವ ಸಂಬಂಧವನ್ನು ಸೂಚಿಸುವಲ್ಲಿ. ನರಹರಿ-ಸುಮಂಗಲಾ ಸಂತೃಪ್ತ ಕೃಷಿ ಜೀವನ ನಡೆಸುತ್ತಿರುವವರು. ಅನುರೂಪ ದಂಪತಿಗಳು -ಸ್ವಭಾವದಲ್ಲಿ, ಒಡನಾಟದಲ್ಲಿ. ಆದರೂ ಪ್ರಲೋಭನೆ ಎದುರಾದಾಗ ನರಹರಿ ಏಕೆ ಅದನ್ನು ಹೆಂಡತಿಯ ಬಳಿ ಹೇಳಲಿಲ್ಲ, ಚರ್ಚಿಸಲಿಲ್ಲ? ತಾನೇಕೆ ಹಾಗೆ ಮಾಡಲಿಲ್ಲ ಎನ್ನುವ ಪ್ರಶ್ನೆಗೆ ಉತ್ತರವನ್ನೂ, ಕಾರಣಗಳನ್ನೂ, ಅವನ ಅನುಭವವನ್ನೂ ಕತೆ ಮಾಡಿ ಇನ್ನೊಬ್ಬರಿಗೆ ಹೇಳುವಾಗ ಅದನ್ನು ನರಹರಿಯೇ ಗಮನಿಸುತ್ತಾನೆ, ತೋಡಿಕೊಳ್ಳುತ್ತಾನೆ, ತಪ್ಪೊಪ್ಪಿಗೆಯ ಧಾಟಿಯಲ್ಲಿ. ಪ್ರಲೋಭನೆಗೆ ಒಳಗಾದ ಮೇಲೆ, ನಂತರ ಅದರಿಂದ ಸಿಗುವ ಅನುಕೂಲಗಳನ್ನು ಅನುಭವಿಸುವಾಗ ಮೂಡುವ ತಳಮಳ, ಹೆದರಿಕೆಗಳನ್ನು ಈ ತಪ್ಪೊಪ್ಪಿಗೆಯಲ್ಲಿ ಸೇರಿಸುತ್ತಾನೆ. ಇದೆಲ್ಲವನ್ನೂ ಆಪ್ತ ಸಂಬಂಧವಾದ ಹೆಂಡತಿಯ ಹತ್ತಿರ ಹೇಳಿಕೊಳ್ಳದೆ ಇರುವುದರಿಂದ ಸಂಬಂಧದಲ್ಲಿ ಕರಿಮೋಡದ ರಾಶಿಯೂ ಕಾಣಿಸಿಕೊಂಡಿದೆ. ಇಬ್ಬರೂ ಸಂಕಟದಲ್ಲಿದ್ದಾರೆ. ಇದನ್ನೆಲ್ಲ ಕೇಳಿಸಿಕೊಳ್ಳುವ ರತ್ನಕ್ಕ ಕೊನೆಗಾದರೂ ಹೇಳುವುದು ಇಷ್ಟೇ-'ಅವಳಿಗೆ (ನಿನ್ನ ಹೆಂಡತಿಗೆ) ಎಲ್ಲ ಹೇಳು, ಹೇಳಿಕೊಂಡುಬಿಡು'. ಸಾಮಾನ್ಯವಾಗಿ 'ಹೇಳುವ' ಸಾಂಪ್ರದಾಯಿಕ ಕತೆಗಳಲ್ಲಿ ಕತೆಯನ್ನು ಕೇಳಿಸಿಕೊಳ್ಳುವವರಿಗೆ, ಪಾರಾಯಣ ಮಾಡುವವರಿಗೆ 'ಫಲ' 'ಪುಣ್ಯ' ದೊರಕಿದರೆ ಇಲ್ಲಿ ಕತೆ ಹೇಳುವವನಿಗೇ ಅವೆರಡೂ ಸಿಗುತ್ತವೆ. ಒಂದು ಆಪ್ತ ಅನುಭವವನ್ನು, ಗುಟ್ಟನ್ನು ನಮಗೆ ಆಪ್ತರಾದವರಿಂದ ಮುಚ್ಚಿಡುವುದರಿಂದಲೇ ಮನಸ್ಸಿನ/ ಹಣದ ಭ್ರಷ್ಟತೆ ಹುಟ್ಟಬಹುದೆ? ಮಸಲಾ, ನರಹರಿ ಹೆಂಡತಿಯ ಜೊತೆ ತನಗೆ ಒದಗಿದ ಪ್ರಲೋಭನೆಯನ್ನು ಚರ್ಚಿಸಿಯೇ ಬಿಟ್ಟಿದ್ದರೆ, ಭ್ರಷ್ಟತೆಯೂ ಇರುತ್ತಿರಲಿಲ್ಲ, ಕತೆಯೂ ಇರುತ್ತಿರಲಿಲ್ಲ. ಮನುಷ್ಯ ಸಂಬಂಧಗಳಲ್ಲಿ ಸಂವಹನದ ಕೊರತೆಯಿದ್ದಾಗ, ಭದ್ರತೆಯ ಅಭಾವವಿದ್ದಾಗ ದುರ್ಬಲವಾದ ಮನಸ್ಸು ಪ್ರಲೋಭನೆಗೆ ಒಳಗಾಗುತ್ತದೆಯೆ ಎಂಬ ಪ್ರಶ್ನೆ, ಕತೆಯ ಓದಿನಿಂದ (ಕೇಳಿಸಿಕೊಳ್ಳುವಿಕೆಯಿಂದ) ಮೂಡುತ್ತದೆ. 'ಹೇಳುವ' ಕತೆಗಾರಿಕೆಯಲ್ಲಿ ಒಂದು ಬುಡಮೇಲು ಮಾಡುವ ಗುಣ-ಸ್ವಭಾವ (subversive) ಅಂತರ್ಗತವಾಗಿರುತ್ತದೆ. ಹೇಳುತ್ತಿರುವ ಕತೆಯನ್ನೇ, ಅನುಭವವನ್ನೇ ಬೇರೊಂದು ನೆಲೆಗೆ

ಪಲ್ಲಟಗೊಳಿಸುವ ರೀತಿಯಲ್ಲಿ. ಕತೆಯನ್ನು ಯಾರು ಯಾರಿಗೆ ಯಾವಾಗ ಹೇಳಿದರು ಎನ್ನುವುದರ ಮೇಲೆ ಮಾತ್ರ ಈ ಗುಣ – ಸ್ವಭಾವ ನಿರ್ಧಾರವಾಗುವುದಿಲ್ಲ. ಕೆಲವರಿಗೆ ಹೇಳಲೇಬೇಕಾದ ಕತೆಗಳನ್ನು ಅವರಿಂದ ಮುಚ್ಚಿಟ್ಟಾಗಲೂ, ಹೇಳಲು ಹಿಂಜರಿದಾಗಲೂ, ಹೇಳಬೇಕಾದ ಸಂದರ್ಭದಲ್ಲಿ ಹೇಳದೆ ಮತ್ತೆ ಯಾವಾಗಲಾದರೂ, ಯಾರಿಗಾದರೂ ಹೇಳಲು ಹೊರಟಾಗಲೂ ಕತೆಗೆ ಬೇರೆಯೇ 'ಕಥಾ ಸಂದರ್ಭ' ಪ್ರಾಪ್ತವಾಗುತ್ತದೆ. ಕಥನದ ನೆಲೆಗಳನ್ನು ಪಲ್ಲಟಗೊಳಿಸುತ್ತದೆ. ಭಾರತೀಯ ಕಥಾ ಮೀಮಾಂಸೆಯಲ್ಲಿ ಕಥಾ ಸಂದರ್ಭವೂ ಕತೆಯಷ್ಟೇ ಮುಖ್ಯವಾದದ್ದು. ಒಮ್ಮೊಮ್ಮೆಯಂತೂ ಕಥಾ ಸಂದರ್ಭವೇ ಕತೆಯೂ ಆಗಿರುತ್ತದೆ, ಕತೆಯನ್ನು ಮೀರಿಸುತ್ತಿರುತ್ತದೆ. ಎಲ್ಲರಿಗೂ ನೆನಪಾಗುವ ಒಂದು ಕ್ಲಾಸಿಕ್ ಕಥಾ ಸಂದರ್ಭವೆಂದರೆ, ಕುಂತಿ ಕರ್ಣನಿಗೆ ಅವನ ಜನ್ಮದ ಗುಟ್ಟನ್ನು ಹೇಳುವ ಕಥಾ ಸಂದರ್ಭ.

'ವ್ಯಕ್ತಿ ಪುರಾಣ' ಕತೆಯಲ್ಲಿ ಈ ಪ್ರಶ್ನೆಗಳನ್ನು ಬೇರೊಂದು ರೀತಿಯಲ್ಲಿ ನಿರ್ವಹಿಸಲಾಗಿದೆ. ಅಡ್ಡಾದಿಡ್ಡಿಯಾಗಿ ಬದುಕಿದವರಿಗೆ ಬೇರೊಂದು ರೀತಿಯಲ್ಲಿ ಬದುಕುವ, ಬದಲಾಗುವ, ಒಳ್ಳೆಯ ದಿನಗಳನ್ನು ಕಾಣುವ ಹಕ್ಕಿಲ್ಲವೇ? ಹಾಗಾದಾಗ ಅದನ್ನು ರಕ್ತ ಸಂಬಂಧಿಗಳು ಮತ್ತು ವಿಶಾಲ ಸಮಾಜವೇ ಒಪ್ಪುವುದಿಲ್ಲ. ಬದಲಾವಣೆ, ಬೆಳವಣಿಗೆ ತನಗೆ ಒಪ್ಪಿಗೆಯಿಲ್ಲ ಎನ್ನುವುದನ್ನು ಸೂಚಿಸಲು ಅಡ್ಡಾದಿಡ್ಡಿಯಾಗಿ ಬದುಕುತ್ತಿದ್ದವರ ಹಿಂದಿನ ದಿನದ ಕತೆ–ಚರಿತ್ರೆಯನ್ನೇ ತಿರುಚಿ ತನಗೆ ಬೇಕಾದ ರೀತಿಯಲ್ಲಿ ಹೇಳುತ್ತಾ ವಿಕೃತ ಸುಖವನ್ನು ಕತೆಯ ಹೊರಗಿನವರು ಅನುಭವಿಸುತ್ತಾರೆ. ಈಗ ಮಹದೇವ ಶಾಸ್ತ್ರಿಯಾಗಿರುವ ಮಾದೇವ ಅಡ್ಡಾದಿಡ್ಡಿಯಾಗಿ ಬದುಕಲು ಕಾರಣವಾದದ್ದು ಅವನ ಬಡತನದ ಜೊತೆಗೆ ಜಾತಿ, ಸಮಾಜವು ಅವನ ಮೇಲೆ, ಅವನಂತವರ ಮೇಲೆ ಹೇರಿದ ಒಂದು ಸಂಪ್ರದಾಯ, ಆಚರಣೆ. ಆದರೂ ಅದನ್ನೆಲ್ಲ ತಿರಸ್ಕರಿಸಿ ಅವನೂ, ಅವನ ಕುಟುಂಬವೂ ಮುಂದೆ ಬಂದದ್ದು ಸ್ವಯಂ ಇಚ್ಛೆಯಿಂದ, ವೈಯಕ್ತಿಕ, ಕೌಟುಂಬಿಕ ಕ್ರಿಯಾಶೀಲತೆಯಿಂದ. ವ್ಯಂಗ್ಯವೆಂದರೆ, ಇದನ್ನು ಒಪ್ಪದೆ ನಿರಾಕರಿಸುತ್ತಿರುವ ಆಗಿಹೋದ ಕತೆಯನ್ನು ತಿರುಚುತ್ತಿರುವ ರಾಮಚಂದ್ರನಲ್ಲೇ ಇನ್ನೂ ಒಂದು ರೀತಿಯ ಅಡ್ಡಾದಿಡ್ಡಿತನ ಇನ್ನೂ ಉಳಿದುಕೊಂಡಿದೆ. ಒಂದು 'ಕಲ್ಯಾಣ'ದ ಸಂದರ್ಭದಲ್ಲಿ ರಾಮಚಂದ್ರ ಮಾತ್ರ ಈ ಕತೆಯನ್ನು ಹೇಳುವುದಿಲ್ಲ. ಅಷ್ಟೇ ಆಗಿದ್ದರೆ, ಬ್ರಾಹ್ಮಣರ ಬಗ್ಗೆ ಅನುಕಂಪವನ್ನು ಪ್ರಚೋದಿಸುವ ಒಂದು ಸೀಮಿತ ಪುರಾಣವಾಗಿಬಿಡುತ್ತಿತ್ತು ಈ ಕತೆ. ಮಾದೇವ – ಮಹದೇವ ಶಾಸ್ತ್ರಿಯಾಗಿ ಬೆಳೆದ, ಪರಿವರ್ತನೆಯಾದ ಕತೆಯನ್ನು ಸಾಕಷ್ಟು ಔದಾರ್ಯದಿಂದ, ತಿಳುವಳಿಕೆಯಿಂದ ನೋಡಬಲ್ಲ ನೀಲಕಂಠ ಜೋಯಿಸ ಕೂಡ ಇದೇ ಕತೆಯನ್ನು ವಸ್ತುನಿಷ್ಠವಾಗಿಯೂ, ಮಾಗಿದ ದೃಷ್ಟಿಕೋನದಲ್ಲಿಯೂ ಹೇಳುತ್ತಾನೆ. ಒಂದೇ ಕತೆಯನ್ನು, ಚರಿತ್ರೆಯನ್ನು ಒಬ್ಬಾತ ಮನುಷ್ಯನನ್ನು ನಿರಾಕರಿಸಲು, ತಿರಸ್ಕರಿಸಲು ಹೇಳಿದರೆ ಅದೇ ಕತೆಯನ್ನು, ಚರಿತ್ರೆಯನ್ನು ಇನ್ನೊಬ್ಬ, ಮನುಷ್ಯನನ್ನು ಒಪ್ಪಿಕೊಳ್ಳಲು, ಅರ್ಥಮಾಡಿಕೊಳ್ಳಲು

ಹೇಳುತ್ತಾನೆ. 'ಹೇಳುವ' ಕತೆಗಳಲ್ಲಿ, 'ಕಟ್ಟುವ' ಕತೆಗಳಲ್ಲಿರುವಂತೆ ಸಂಕೀರ್ಣ ಪದರಗಳಿರುವುದಿಲ್ಲ ಎಂಬ ಒಂದು ಅಭಿಪ್ರಾಯವನ್ನು ಇಂತಹ ವಿನ್ಯಾಸ ಪ್ರಶ್ನಿಸುತ್ತದೆ.

ವಿದ್ಯಾಭ್ಯಾಸ ಪಡೆದು, ಆಧುನಿಕ ವೃತ್ತಿ, ನಗರವಾಸಗಳ ಮೂಲಕ ಹೊಸ ಬದುಕನ್ನು ಕಟ್ಟಿಕೊಳ್ಳುವ ಹಿಂದುಳಿದವರು, ದಲಿತರ ಹಿಂದಿನ ಸ್ಥಿತಿ ಮತ್ತು ಹೊಸ ಸಾಧ್ಯತೆ-ಸಫಲತೆಗಳ ಬಗ್ಗೆ ಮೇಲುವರ್ಗದ ಜನ ಅಸಹನೆಯಿಂದ, ಚಾರಿತ್ರಿಕ ಪ್ರಜ್ಞೆಯ ಅಭಾವದಿಂದ ಹೇಳುವ ರೀತಿಯ ತಿರುಚಿದ ಕತೆಗಳನ್ನೇ ಇಲ್ಲಿ ರಾಮಚಂದ್ರ ಮಾದೇವನ ಬದುಕಿನ ಬಗ್ಗೆ ಹೇಳುತ್ತಾನೆ. ಇದು ಮನುಷ್ಯ ಸ್ವಭಾವವೆನ್ನುವುದು ನಿಜವಾದರೂ, ನಮ್ಮ ನಮ್ಮ ಕತೆಯನ್ನು ನಾವು ಮಾತ್ರವೇ ಹೇಳುವ ಹಕ್ಕನ್ನು ಹೊಂದಿದ್ದೇವೆ ಎಂದು ದಮನಿತ ಜನವರ್ಗಗಳು ತಮ್ಮ ಕಥನ ಆಕಾಂಕ್ಷೆಯನ್ನು ಬಿರುಸಿನಿಂದ ಪ್ರತಿಪಾದಿಸುವುದಕ್ಕೆ ಇರುವ ಕಾರಣವನ್ನು ನಾವು ಸಹಾನುಭೂತಿಯಿಂದ ಅರ್ಥಮಾಡಿಕೊಳ್ಳಬೇಕೆಂದು ಕತೆ ತನ್ನ ವಸ್ತುವಿಗಿಂತ ಹೆಚ್ಚಾಗಿ ಕತೆಗಾರಿಕೆಯ ರೀತಿಯಿಂದ ಪ್ರತಿಪಾದಿಸುತ್ತದೆ.

ಇಲ್ಲಿ ಮಾದೇವ ಆಲಿಯಾಸ್ ಮಹದೇವ ಶಾಸ್ತ್ರಿಯೇ ತನ್ನ ಕತೆಯನ್ನು ನಿರ್ಮಮವಾಗಿ ಹೇಳಿದ್ದರೆ ಏನಾಗುತ್ತಿತ್ತು ಎಂಬ ಪ್ರಶ್ನೆಯನ್ನು ನಾನೇ ನಮ್ಮ ಕುಟುಂಬದ ಸಂದರ್ಭದಲ್ಲೂ ಮತ್ತು ಈಚೆಗೆ ಒಂದು ಕತೆ ಬರೆಯುವಾಗಲೂ ಎದುರಿಸಬೇಕಾಗಿದ್ದರಿಂದ ಈ ಕತೆ ನನ್ನನ್ನು ಹೆಚ್ಚು ಕಾಡಿತು. ('ಚರಿತ್ರೆಯನ್ನು ಯಾರು ಯಾವಾಗ' ನಿಜವಾದ ಸೋದರಮಾವ ಅಥವಾ ಕಥಾ ಸಂಕಲನ-2018).

ನಮ್ಮ ಪೈಕಿಯ ಒಂದು ಕುಟುಂಬ ಬಹಳ ವರ್ಷಗಳ ಕಾಲ ಅಡ್ಡಾದಿಡ್ಡಿಯಾಗಿ ಬದುಕಿ ಮಕ್ಕಳ ತಲೆಮಾರಿನಲ್ಲಿ ಎಲ್ಲ ರೀತಿಯ ಏಳಿಗೆಯನ್ನು ಕಂಡು ಪ್ರವರ್ಧಮಾನಕ್ಕೆ, ಪ್ರಭಾವೀವಲಯಕ್ಕೆ ಬಂತು. ಹೊಸ ಸ್ಥಿತಿಯಲ್ಲಿ ನಮಗೆಲ್ಲ ಆ ಕುಟುಂಬದೊಡನೆ ಒಡನಾಟ-ಸಖ್ಯ ಅಗತ್ಯವಾಗಿತ್ತು. ನಮ್ಮ ಒಳ ಮನಸ್ಸು ಮಾತ್ರ ಅದನ್ನು ಒಪ್ಪಲು ತಯಾರಿರಲಿಲ್ಲ. ನಾವು ನಾವೇ ಸೇರಿದಾಗ, ಆ ಕುಟುಂಬದ ಹಿಂದಿನ ದಿನಗಳನ್ನು ಗೇಲಿ ಮಾಡಿ ಕತೆ ತಿರುಚಿ ವಿಕೃತ ಸಂತೋಷವನ್ನು ಅನುಭವಿಸುತ್ತಿದ್ದೆವು. ಇದರಿಂದ ನಮಗೆ ಬಿಡುಗಡೆಯೇ ಇಲ್ಲವೇ ಎಂದು ನಾವೆಲ್ಲ ಚಿಂತಿಸುತ್ತಿದ್ದಾಗ, ಆ ಕುಟುಂಬದ ಒಬ್ಬ ಮಧ್ಯವಯಸ್ಕ ಹೆಂಗಸೇ ಒಂದು ಶುಭ ಸಮಾರಂಭದ ಕೊನೆಯಲ್ಲಿ ಇದ್ದಕ್ಕಿದ್ದಂತೆ ಎದ್ದು ನಿಂತು ತಮ್ಮ ಕುಟುಂಬದ ಹಿಂದಿನ ಚರಿತ್ರೆ ಅಡ್ಡಾದಿಡ್ಡಿಯಾಗಿರುವುದು ತಮಗೆಲ್ಲ ಗೊತ್ತಿದೆಯೆಂದೂ, ತಾವೇನೂ ಅದನ್ನು ನಿರಾಕರಿಸುತ್ತಿಲ್ಲವೆಂದೂ ಸಲೀಸಾಗಿ ಹೇಳಿ ನಮಗೆಲ್ಲ ಒಂದು ರೀತಿಯ ನಿರಾಳ ತಂದುಕೊಟ್ಟರು.

ವೈದೇಹಿಯವರ ಕತೆಯ ಮಾದೇವ ಕಮ್ ಮಹದೇವಶಾಸ್ತ್ರಿ ತನ್ನ ಬದಲಾವಣೆಯ ಕತೆಯನ್ನೇನೂ ಹೇಳುವುದಿಲ್ಲ. ಮಾದೇವ, ಪವಿತ್ರ ಕಾಶಿಯಿಂದ, ಅಡ್ಡಾದಿಡ್ಡಿ ಚರಿತ್ರೆಯಿಂದ ಮಲಿನವಾಗಿರುವ ಹಿಂದಿನ ಊರಿಗೆ ಬಂದು ಮಗಳ ಮದುವೆ ಮಾಡುವ ಮೂಲಕ

ಕತೆಯನ್ನು perform ಮಾಡುತ್ತಾನೆ. ಹಾಗೆ ಮಾಡುವ ಮೂಲಕ ಇನ್ನೊಬ್ಬರಿಗೆ ತನ್ನ ಕತೆಯನ್ನು ಹೇಳಲು, ಕಾಣಲು ಒಂದು ವೇದಿಕೆಯನ್ನು ನಿರ್ಮಿಸಿಕೊಡುತ್ತಾನೆ.

ರಾಮಚಂದ್ರ ಮತ್ತು ನೀಲಕಂಠ ಇಬ್ಬರೂ ಹೇಳುವ ಒಂದೇ ಕತೆ ಅಥವಾ ಪುರಾಣವನ್ನು 'ಕೇಳಿಸಿ'ಕೊಳ್ಳುವವರು ಸಹನಶೀಲರಾದ ದಂಪತಿಗಳು. 'ಧರ್ಮಸೂಕ್ಷ್ಮ ಪುರಾಣ'ದಲ್ಲಿ ಕೂಡ ಕತೆ ಕೇಳಿಸಿಕೊಳ್ಳುವವಳು ಕೂಡ ಗೃಹಸ್ಥ ಜೀವನದಲ್ಲಿ ಮಾಗಿದಾಕೆ. ಹೇಳುವ ಕತೆಯನ್ನು ಕೇಳಿಸಿಕೊಳ್ಳುವ ಅನುರೂಪರಾದ ಕೇಳುಗರು ಇಂತಹ ಕತೆಗಳಲ್ಲಿ ಒಂದು ರೀತಿ ಇರಲೇಬೇಕಾದ 'priori' ಇದ್ದ ಹಾಗೆ. ಇಂತಹ ಕೇಳುಗರನ್ನು ಹುಡುಕಿಕೊಳ್ಳುವುದು ಕೂಡ ಕತೆಗಾರಿಕೆಯ ಒಂದು ಮುಖ್ಯ ಭಾಗ.

ಒಂದು ಪಠ್ಯವಾಗಿ ಕತೆ, ನಿರೂಪಣೆ ಯಾವಾಗಲೂ ಅಪೂರ್ಣವಾಗಿರುತ್ತದೆ. ಓದುಗ ಸಂವೇದನಾಶೀಲನಾಗಿ ತನ್ನ ಓದಿನಿಂದ ಪಠ್ಯಕ್ಕೆ ಒಂದು ಪೂರ್ಣ ರೂಪವನ್ನು ಕೊಡುತ್ತಾನೆ ಎಂಬುದು ಆಧುನಿಕ ಮೀಮಾಂಸೆ. ಕತೆಯ ಹೇಳುವಿಕೆ, ಕೇಳುವಿಕೆ, ಕಥಾ ಸಂದರ್ಭಗಳ ನಿರ್ಮಾಣ–ನಿರಾಕರಣದಲ್ಲಿ ತೊಡಗುವುದರ ಮೂಲಕವೂ ಕತೆ 'ಹೇಳುವ' ಸಾಂಪ್ರದಾಯಿಕ ಶೈಲಿಯ ಕತೆಗಳು ಕೂಡ ಕತೆಗಳ ಕಾರಣವನ್ನು ಮಾತ್ರವಲ್ಲ ರಾಜಕಾರಣವನ್ನು ಕೂಡ ಗುರುತಿಸುತ್ತವೆ ಎಂಬುದನ್ನು ವೈದೇಹಿಯವರ ಕತೆಗಾರಿಕೆ ಸಾದರಪಡಿಸುತ್ತದೆ – ಹಾಗೆಂದು ಹೇಳದೆ.



# ವೈದೇಹಿ ಕಥಾನಕದಲ್ಲಿ ಅಸ್ಮಿತೆಯ ಹುಡುಕಾಟ

✦ ಎಂ.ಎಸ್. ವೇದಾ

ವೈದೇಹಿಯವರು ತಮ್ಮ ಸಾಹಿತ್ಯದ ಮೂಲಕ ಮಹಿಳೆಯ ಅನನ್ಯತೆ, ಅಸ್ಮಿತೆಗಾಗಿ ನಡೆಸುವ ಹುಡುಕಾಟ ಭಿನ್ನವಾದುದಾಗಿದೆ. ಅವರ ಪ್ರಕಾರ ಮಹಿಳೆಯ ಅಸ್ಮಿತೆ ಅವಳು ಮಹಿಳೆಯಾಗಿರುವುದರಲ್ಲಿಯೇ ಇದೆ. ಅವಳೊಂದಿಗೆಯೇ ಇದೆ. ಅದಕ್ಕಾಗಿ ಅವಳ ಹೊರಗೆ ಹುಡುಕಾಟ ನಡೆಸಬೇಕಾಗಿಲ್ಲ. ಮಹಿಳೆಯಲ್ಲಿ ಇರುವ ಅಸ್ಮಿತೆಯನ್ನು ಗುರುತಿಸುವ ಕಾರ್ಯವಷ್ಟೇ ಆಗಬೇಕಾಗಿದೆ. ಸೈದ್ಧಾಂತಿಕವಾಗಿ, ತಾತ್ವಿಕವಾಗಿ ವೈದೇಹಿಯವರು ತಾಳುವ ನಿಲುವು ಇದು.

ವೈದೇಹಿ ತಮ್ಮ ಹಿರಿಯ ತಲೆಮಾರಿನ ಹಾಗೂ ಸಮಕಾಲೀನ ಪರಿಸರದಲ್ಲಿನ ಸ್ತ್ರೀಲೋಕದ ಬದುಕು, ಬವಣೆಗಳು, ಅದರ ಮೇಲೆ ಪಿತೃಸಂಸ್ಕೃತಿ ಮಾಡುತ್ತಿರುವ ಹಸ್ತಕ್ಷೇಪ, ಸವಾರಿ, ಲಿಂಗತಾರತಮ್ಯ, ರಾಜಕಾರಣಗಳನ್ನು ನೋಡಿಕೊಂಡೇ, ಅನುಭವಿಸಿಕೊಂಡೆ ಬೆಳೆದವರು. ಮಹಿಳಾ ಬದುಕಿನ ಚಿತ್ರಣಕ್ಕೆ ಅವರಿಗೆ ವಿಶೇಷ ತಯಾರಿಯೇನೂ ಬೇಕಿಲ್ಲ ಅನ್ನಿಸುವ ಹಾಗೆ ಸರಳ, ಸಹಜ 'ನೈಜತೆ' ಮತ್ತು ಅಧಿಕೃತತೆಗಳಿಂದ ಕೂಡಿರುವ ಚಿತ್ರಣಗಳು ಅವರ ಸಾಹಿತ್ಯದಲ್ಲಿ ಇವೆ. ಮಹಿಳಾ ಲೋಕದ ತಮ್ಮೆಲ್ಲ ಅನುಭವ ಪರಿಕರಗಳೊಂದಿಗೆ, ತಾವೂ ಓರ್ವ ಮಹಿಳೆಯಾಗಿ ಬದುಕಿನ ಅರ್ಥವನ್ನು ಗ್ರಹಿಸುವ, ಅರ್ಥೈಸುವ ಕಾರ್ಯವನ್ನು ಅವರು ನಿರ್ವಹಿಸುತ್ತಾರೆ. ಅವುಗಳ ಒಳಗಿನಿಂದಲೇ ಬದುಕಿನ ಕಾಣ್ಕೆಯನ್ನು ಪಡಿಮೂಡಿಸುತ್ತಾರೆ.

ಮಹಿಳೆಯ ಅಸ್ಮಿತೆಯನ್ನು ಗುರುತಿಸುವ, ಸ್ಥಾಪಿಸುವ ಮೊದಲ ಹಂತದಲ್ಲಿ ವೈದೇಹಿ ಸ್ತ್ರೀಲೋಕದ, ಸ್ತ್ರೀತ್ವದ ಹೆಮ್ಮೆ, ಅಭಿಮಾನ, ಆತ್ಮಪ್ರತ್ಯಯಗಳನ್ನು ಎತ್ತಿ ಹಿಡಿಯುತ್ತಾರೆ. 'ಮಲ್ಲಿನಾಥನ ಧ್ಯಾನ' ಕೃತಿಯಲ್ಲಿ ಬರುವ 'ನಮ್ಮ ಲೋಕದ ಗೀತೆ' ಅವರ ಈ ಕುರಿತಾದ ಒಟ್ಟು ಮನೋಧರ್ಮದ ಪ್ರಣಾಳಿಕೆಯಂತೆ ಕಂಡುಬರುತ್ತದೆ. ಆ ಬರಹ ಆರಂಭವಾಗುವುದೇ ಹೀಗೆ: 'ಪುರುಷರ ಬಗ್ಗೆ ಯೋಚಿಸುವಾಗ ಎಷ್ಟೋ ಸಲ ಮರುಕವುಂಟಾಗುತ್ತದೆ. ಬದುಕಿನ ಎಷ್ಟೋ ದಿವ್ಯ ಅನುಭವಗಳ ಮೃದುಸ್ಪರ್ಶದಿಂದ ಇವರೆಲ್ಲ ವಂಚಿತರಾಗಿದ್ದಾರೆಂದು.

ಅಂತಹ ಅನುಭವಗಳನ್ನು ತಮ್ಮ ಯಾವ ಪೌರುಷದಿಂದಲೂ ಕೂಡ ಎಂದಿಗೂ ಗಳಿಸಿಕೊಳ್ಳಲಾರರಲ್ಲ.'

ಯಾವಾಗಲೂ ಮಹಿಳೆಗಿಂತ ಪುರುಷನೇ ಎಲ್ಲ ವಿಧದಲ್ಲಿಯೂ ಶ್ರೇಷ್ಠ, ಎತ್ತರ, ಮಹಿಳೆಯೆಂದೂ ಪುರುಷನಿಗೆ ಸಮಾನಳಾಗಲು ಸಾಧ್ಯವೇ ಇಲ್ಲ ಎನ್ನುವ ಪಿತೃಸಂಸ್ಕೃತಿಯ ಅನೂಚಾನವಾದ ಮೌಲ್ಯವೊಂದನ್ನು ಈ ಮಾತುಗಳು ಸದ್ದಿಲ್ಲದೆ ಛಿದ್ರಮಾಡುತ್ತವೆ. ಪುರುಷ ಏನೇ ಮಾಡಿದರೂ, ಮಹಿಳೆಯ ದಿವ್ಯಾನುಭವಗಳನ್ನು ಪಡೆಯಲಾಗದ ಸ್ಥಿತಿ ಇದೆ. ಪುರುಷ ಪಡೆದುಕೊಳ್ಳಲು ಸಾಧ್ಯವೇ ಇಲ್ಲದ ಎಷ್ಟೋ ಸತ್ಯಗಳು, ಅನುಭವಗಳು ಈ ಲೋಕದಲ್ಲಿವೆ. ಅದರಲ್ಲಿ ಅತ್ಯಂತ ಪ್ರಮುಖವಾದದ್ದು ತಾಯ್ತನದ ದಿವ್ಯಾನುಭವ. 'ಜನ್ಮಗಳು ಇರುವುದು ಹೌದಾದರೆ ಎಲ್ಲ ಜನ್ಮಗಳಲ್ಲಿಯೂ ನಾನು ಹೆಣ್ಣೇ ಆಗಬೇಕು' ಎಂದು ವೈದೇಹಿ ಪ್ರಾರ್ಥಿಸುತ್ತಾರೆ. ಸ್ತ್ರೀಯ ಅನನ್ಯತೆಯನ್ನು ಎತ್ತಿ ಹಿಡಿಯುವ ವೈದೇಹಿಯವರ ರೀತಿ ಇದು. ಹೆಣ್ಣಾಗಿರುವುದೇ ಕರ್ಮ, ಅಪರಾಧ, ಶಿಕ್ಷೆ ಎಂಬಿತ್ಯಾದಿ ನಿಲುವುಗಳೇ ತುಂಬಿರುವ ಸಮಾಜದಲ್ಲಿ ಹೆಣ್ಣಾಗಿರುವುದಕ್ಕೆ ಗರ್ವ ಪಡುವ ಮನೋಧರ್ಮ ಇಲ್ಲಿ ತೆರೆದುಕೊಂಡಿದೆ. ಇಲ್ಲಿನದು ಆರ್ದ್ರ ಗರ್ವ.

'ಶ್ರೇಷ್ಠ', 'ಎತ್ತರ', 'ಆಳುವವ', 'ಯಜಮಾನ' ಎಂಬಿತ್ಯಾದಿ ಹಣೆಪಟ್ಟಿಗಳನ್ನು ಶತಶತಮಾನಗಳಿಂದ ಅಂಟಿಸಿಕೊಂಡೇ ಬಂದಿರುವ ಪುರುಷಲೋಕವನ್ನು ಅದರ ಎಲ್ಲ ಪರಿಮಿತಿಗಳೊಡನೆ ವೈದೇಹಿಯವರು ಇಲ್ಲಿ ತೆರೆದಿಡುತ್ತಾರೆ. ಆ ಬರಹ ಮುಕ್ತಾಯಗೊಳ್ಳುವುದು ಹೀಗೆ: 'ಪುರುಷರಿಗೆ ನಾವು ಎಂದಿಗೂ ಸಮರಲ್ಲ, ಅದಕ್ಕಿಂತ ಮುಖ್ಯವಾಗಿ ನಮ್ಮ ಸಮಕ್ಕೆ ಪುರುಷರು ಎಂದೂ ಬಂದು ನಿಲ್ಲಲಾರರು. ಎಲ್ಲಿ ಸಮಾನ ಅವಕಾಶಗಳನ್ನು ಪಡೆಯಲಾರೆವೋ ಅಲ್ಲಿ ಹೋರಾಡಿಯಾದರೂ ಸಮಾನ ಅವಕಾಶಗಳಿಸಿಕೊಂಡೇವು. ಆದರೆ ತಂತಾನೇ ಲಭ್ಯವಾಗುವ ನಮ್ಮದೇ ಆದ ಅನುಭವಗಳನ್ನು ಗುರುತಿಸುತ್ತಾ ಗೌರವಿಸುವುದನ್ನು ಬಿಟ್ಟು ಧಿಕ್ಕರಿಸುವುದರಲ್ಲಿ, ಹೀಯಾಳಿಸುವುದರಲ್ಲಿ ಏನು ಬಂತು? ನಾವೇಕೆ ಪುರುಷ ದನಿಯಲ್ಲಿ ಮಾತಾಡಬೇಕು? ನಾವು ನಮ್ಮ ಕಂಠದಲ್ಲಿ ಹಾಡೋಣ. ಅದು ಜೋರಾಗವಿರಲಿ, ಪ್ರೇಮರಾಗವಿರಲಿ, ಇನ್ಯಾವ ಬಗೆಯ ರಾಗ ವಿರಾಗಗಳೇ ಇರಲಿ ನಮ್ಮದೆ ದನಿ ಅಲ್ಲಿರಲಿ'.

ವೈದೇಹಿಯವರ ಗಟ್ಟಿ ನಿಲುವು ಇದು. ಸ್ತ್ರೀಯಾಗಿರುವುದನ್ನೇ ನಿರಾಕರಿಸುವಂತೆ ಮಾಡಿರುವ ಸಮಾಜದ ಮುಂದೆ ಸ್ತ್ರೀತ್ವದ ಅಂಶಗಳನ್ನು ಎತ್ತಿ ಹಿಡಿದು ಸಮಾಜದೆದುರು ತಮ್ಮ ಸ್ವಂತಿಕೆಯನ್ನು ಅನನ್ಯತೆಯನ್ನು ಸ್ಥಾಪಿಸಬೇಕಾದ ತುರ್ತು ಕೆಲಸದ ಬಗೆಗೆ ವೈದೇಹಿ ಗಮನ ಸೆಳೆಯುತ್ತಾರೆ. ಆ ಕೆಲಸ ಆಗಬೇಕಾದರೆ ಮೊದಲಿಗೆ ಸ್ತ್ರೀ, ಸ್ತ್ರೀಯಾಗಿರುವುದರ ಕುರಿತಂತೆ ಅಭಿಮಾನ, ಹೆಮ್ಮೆ, ಗರ್ವ ತಾಳಬೇಕು. ಗಂಡು–ಹೆಣ್ಣುಗಳ ನಡುವೆ ಅಸಮಾನತೆ

ಇದೆ ಎಂದಾದರೆ ಅದು ಇಬ್ಬರಿಗೂ ಅನ್ವಯಿಸುವಂಥದ್ದೇ ಆಗಿದೆ. ಅದನ್ನು ಅರ್ಥಮಾಡಿಕೊಳ್ಳುವುದೇ 'ಸ್ವಂತಿಕೆ'ಯ ಪ್ರಥಮ ಹಂತವಾಗಿದೆ.

ವೈದೇಹಿಯವರ ಮೇಲಿನ ಮಾತುಗಳು ಹೇಗೆ ಅವರ ಇಡೀ ಸಾಹಿತ್ಯದ ಪ್ರಣಾಳಿಕೆಯಂತೆಯೇ ಪ್ರವರ್ತಿಸಿವೆ ಎಂಬುದು ಅವರ ಸಾಹಿತ್ಯದ ಅಧ್ಯಯನ ಮಾಡುವಾಗ ಅನುಭವಕ್ಕೆ ಬರುತ್ತದೆ. 'ನಮ್ಮ ಸಮಕ್ಕೆ ಪುರುಷರು ಎಂದೂ ಬಂದು ನಿಲ್ಲಲಾರರು' ಎಂಬ ಹೊಸಬಗೆಯ ಆತ್ಮಪ್ರತ್ಯಯದಲ್ಲಿ, ತಮ್ಮ ಅನುಭವಗಳು ನಿಕೃಷ್ಟವಾಗಬೇಕಿಲ್ಲ ಎಂಬ ವಿವೇಕದಲ್ಲಿ, ಮಹಿಳೆಯನ್ನು ಸಾಪೇಕ್ಷವಾಗಿಟ್ಟುಕೊಂಡೇ ಮಹಿಳೆಯರ ಅಸ್ಮಿತೆಯನ್ನು ಗುರುತಿಸಿಕೊಳ್ಳುತ್ತಾರೆ. ಹಾಗಾಗಿ ಅವರ ಸಾಹಿತ್ಯ ಯಾವ ರೀತಿಯಿಂದ ನೋಡಿದರೂ ಸ್ತ್ರೀ, ಸ್ತ್ರೀಲೋಕ, ಸ್ತ್ರೀಮನಸ್ಸು, ಸ್ತ್ರೀಸಂಕಥನಗಳಿಂದಲೇ ತುಂಬಿರುವುದು ಅನುಭವಕ್ಕೆ ಬರುತ್ತದೆ.

ಭೂತ, ಅಕ್ಕು, ಅಂತರಂಗದ ಪುಟಗಳು, ಶಕುಂತಲೆಯೊಂದಿಗೆ ಕಳೆದ ಅಪರಾಹ್ನ, ಆರತಿತಟ್ಟೆ, ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು, ಸೌಗಂಧಿಯ ಸ್ವಗತಗಳು, ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗೆ, ಒಂದು ಕಳ್ಳ ವೃತ್ತಾಂತ, ಹಕ್ಕಿಲ್ಲದವರು, ಅಲ್ಲಲ್ಲಿನ ಲೋಕದವರು, ವಾಣಿಮಾಯಿ, ಅಳಿವು ಉಳಿವುಗಳ ನಡುವೆ, ಮರೆಯಾದವರು, ಬರೀ ಒಂದು ಪೆಟ್ಟಿಗೆ, ದಾಳಿ, ಅಮ್ಮಚ್ಚಿಯೆಂಬ ನೆನಪು, ಕ್ರೌಂಚಪಕ್ಷಿಗಳು, ಈ ಮುಂತಾದ ಕಥೆಗಳಲ್ಲಿ ಬರುವ ಮಹಿಳೆಯರನ್ನೇ ನಾವಿಲ್ಲಿ ಗಮನಿಸಬಹುದು. ಈ ಕಥೆಗಳಲ್ಲಿ ಬರುವ ಬಹುತೇಕ ಮಹಿಳೆಯರು ಶ್ರಮಜೀವಿಗಳು. ಮನೆಗೆಲಸ, ಹೊರಗಿನ ಕೆಲಸಗಳಲ್ಲಿ ಮೈಮುರಿದು ದುಡಿಯುವವರು. ದೊಡ್ಡ ದೊಡ್ಡ ಆಸೆಗಳು, ಬಯಕೆಗಳು, ಈಡೇರಿಕೆಗಳು, ಸಾಧನೆ, ಸಿದ್ಧಿ– ಇತ್ಯಾದಿಗಳಾವುದರ ಅರಿವೂ ಅವರತ್ತ ಸುಳಿದಿಲ್ಲ. ತಮ್ಮ ಬದುಕಿನಲ್ಲಿ ಎದುರಾಗುವ ತಲ್ಲಣದ ಸ್ಥಿತಿಗಳನ್ನು, ಬದುಕನ್ನು ತತ್ತರಕ್ಕೊಳಪಡಿಸುವ ಬಿರುಗಾಳಿಯನ್ನು ತಮಗೆ ತಿಳಿದಂತೆ ಮೀರುವಲ್ಲಿ, ತಡೆಯುವಲ್ಲಿ, ಇರುವ ಒಂದು ಬದುಕನ್ನು ಏನಾದರೂ ಮಾಡಿ ಕೈಜಾರದಂತೆ ಹಿಡಿದಿಟ್ಟುಕೊಳ್ಳುವುದರಲ್ಲಿ ಅವರೆಲ್ಲರ ವ್ಯಕ್ತಿತ್ವದ ಅನನ್ಯತೆ ತೆರೆದುಕೊಳ್ಳುತ್ತಾ ಹೋಗುತ್ತದೆ.

'ಭೂತ'ದಲ್ಲಿ ಬರುವ ಪಾರ್ವತಿ, ಮೊದಲೇ ಮದುವೆಯಾಗಿರುವ ಗಂಡಸಿನೊಂದಿಗೆ ಮದುವೆಯಾಗಿ, ಎರಡು ಮಕ್ಕಳಾಗಿ, ಅವನೊಂದಿಗಿನ ಬದುಕು ದುಸ್ತರವಾದಾಗ ಮಕ್ಕಳೊಂದಿಗೆ ಮತ್ತೆ ತವರಿಗೆ ಮರಳಿದವಳು. ಆದರೆ ಅವಳ ದುಡಿಮೆಯೇ ಅವಳ ಅನನ್ಯತೆಯನ್ನು ಕಾದಿರಿಸಿದೆ. ಹಾಗಾಗಿ ಅವಳ ವ್ಯಕ್ತಿತ್ವದಲ್ಲಿ ದುಡಿಯುವ ಗಂಡೋರ್ವನನ್ನು ಕಾಣುತ್ತಾರೆ, ಅವಳ ಸುತ್ತಲ ಜನ. 'ದುಡಿಯುವ ಗಂಡುತನ' ಗಂಡಿನಲ್ಲಿಲ್ಲದ ದುರಂತದಲ್ಲಿ ಅವಳು ಆ ಸ್ಥಾನಕ್ಕಿಳಿದಿದ್ದಾಳೆ. ಪಾರ್ವತಿಯಲ್ಲಿ ನೋವಿದೆ. ಆದರೆ ಅದನ್ನವಳು ನುಂಗಿದ್ದಾಳೆಯೇ ವಿನಾ ನೋವು ತನ್ನನ್ನು ನುಂಗಲು ಬಿಟ್ಟಿಲ್ಲ. ಅಸಾಧಾರಣ ಅದ್ಭುತ

ಶಕ್ತಿಯ ಆಕೆ 'ಭೂತ'ವಾಗಿ ಕಂಡು ಬರುತ್ತಾಳೆ. 'ಭೂತ' ಇಲ್ಲಿ ಇತ್ಯಾತ್ಮಕ ರೂಪಕವಾಗುತ್ತದೆ. ಅವಳು ಬದುಕಿನ ನೋವುಗಳನ್ನು ಪರಿಶ್ರಮದ ಮೂಲಕ ಮೀರುವ ಕಾರ್ಯ ನಿರ್ವಹಿಸುತ್ತಾಳೆ.

ಅಕ್ಕುವಿನ ಪಾತ್ರದ ಅನನ್ಯತೆ 'ಪೊಟ್ಟು, ಪಿರ್ಕಿ' ಎಂಬ ಹೋಲಿಕೆಯಲ್ಲಿ ತೆರೆದುಕೊಳ್ಳುತ್ತದೆ. ಕಥೆ ಕಟ್ಟಿಕೊಡುತ್ತಿರುವ, ಅಕ್ಕು ಇರುವ ಲೋಕಕ್ಕೆ ಅವಳು ಹುಚ್ಚಿ! ಆದರೆ ಅದರಾಚೆಗಿನ ಓದುಗ ಲೋಕಕ್ಕೆ ಅಕ್ಕುವಿನ ವ್ಯಕ್ತಿತ್ವದಲ್ಲಿರುವ ಅಂತಃಸ್ಸತ್ವ ಮನಮುಟ್ಟುವಂಥದ್ದಾಗಿ ಕಂಡುಬರುತ್ತದೆ. ಅಕ್ಕು ತನಗೆ ಮೋಸ ಮಾಡಿದ, ಸುಖ ನೀಡದ ವಿವಾಹ ವ್ಯವಸ್ಥೆ ಮತ್ತು ಗಂಡನನ್ನು ಇಡಿಯಾಗಿ ನಿರಾಕರಿಸುತ್ತಿದ್ದಾಳೆ. ಗಂಡನೊಬ್ಬ ಇಲ್ಲ ಅಂದಾಗ ಹೆಣ್ಣು ಅನುಭವಿಸಬಹುದಾದ ಸ್ವಾತಂತ್ರ್ಯ, ಸ್ವಚ್ಛಂದತೆಗಳ ಮೂರ್ತರೂಪವಾಗಿರುವಂತೆ ಕಂಡು ಬರುತ್ತಾಳೆ. ಅವಳಿಗೂ ಹೇರಳ ನೋವಿದೆ. ಆದರವಳು ತನ್ನ ಸ್ವಾತಂತ್ರ್ಯ, ಸ್ವಚ್ಛಂದತೆಗಳ ಮೂಲಕ ಅದನ್ನು 'ಮೀರು'ತ್ತಿದ್ದಾಳೆ. ಅಪನಂಬಿಕೆಯ ಗೂಡಾದ ವಿವಾಹ, ಗಂಡ–ಇತ್ಯಾದಿಗಳನ್ನೊಳಗೊಂಡ ವ್ಯವಸ್ಥೆಯನ್ನು ನಿರಾಕರಿಸುವಂತೆಯೇ ಇಲ್ಲದ ವಿವಾಹೇತರ ಸಂಬಂಧಗಳನ್ನು ಆಕೆ ತನ್ನ ಮೇಲೆ ಆವಾಹಿಸಿಕೊಳ್ಳುತ್ತಾಳೆ. ಬೇರೆ ಗಂಡು, ಹೆಣ್ಣುಗಳ ನಡುವಣ ಸಂಬಂಧವನ್ನು ಯಾವ ಎಗ್ಗಿಲ್ಲದೆ ಎತ್ತಿ ಆಡುತ್ತಾಳೆ. ಓರ್ವ ಮಹಿಳೆಗೆ ಸಮಾಜ ಲೈಂಗಿಕತೆ ಕುರಿತಂತೆ ಯಾವ ನಿರ್ಬಂಧ, ನಿಷೇಧಗಳನ್ನು ಹೇರಿದೆಯೋ ಅವೆಲ್ಲವನ್ನೂ ಆಕೆ ಮೀರುತ್ತಾ ಹೋಗುತ್ತಾಳೆ. ಆ 'ಮೀರು'ವಿಕೆಯನ್ನು ಸಮಾಜ 'ಹುಚ್ಚಿ'ಂದು ಕರೆದು ಕೈತೊಳೆದುಕೊಳ್ಳುತ್ತದೆ. ಅಕ್ಕುವಿನ ವ್ಯಕ್ತಿತ್ವದ ಅನನ್ಯತೆ ಮರಳಿ ಬಂದ ಗಂಡನನ್ನು ನಿರಾಕರಿಸುವುದರಲ್ಲಿ ಸ್ಪಷ್ಟವಾಗಿ ತೆರೆದುಕೊಳ್ಳುತ್ತದೆ.

ಗಂಡು–ಹೆಣ್ಣುಗಳ ಸಂಬಂಧಕ್ಕೆ ಸಮಾಜದ ಒಪ್ಪಿತದ ಮುದ್ರೆ ನೀಡುವ 'ವಿವಾಹ' ಮಹಿಳೆಯ ಬದುಕಿನಲ್ಲಿ ಬಹುದೊಡ್ಡ ಸಂಗತಿಯೆಂದು ಬಿಂಬಿತವಾಗಿದೆ. ಹೆಣ್ಣನ್ನು ನೋಡುವ, ಸ್ವೀಕರಿಸುವ, ನಿರಾಕರಿಸುವ, ಆಯ್ಕೆ ಮಾಡುವ ಇತ್ಯಾದಿ ಅಧಿಕಾರವೆಲ್ಲಾ ಗಂಡಿನದಾಗಿದೆ. ಆದರೆ ಹೆಣ್ಣಿಗೆ ಮಾತ್ರ ಆ ಯಾವ ಬಗೆಯ ಅಧಿಕಾರಗಳೂ ಸಿಗದಂತಹ ಸಾಮಾಜಿಕ ಸನ್ನಿವೇಶ ನಮ್ಮದು. ಇಂತಹ ಸಂದರ್ಭದಲ್ಲಿ ಅಚಲಳಂತಹ ಹೆಣ್ಣು ಆಯ್ಕೆಯ ಸ್ವಾತಂತ್ರ್ಯವನ್ನು ತನ್ನದಾಗಿಸಿಕೊಳ್ಳಬೇಕೆಂಬ ತಹತಹಿಕೆ ವ್ಯಕ್ತ ಮಾಡುತ್ತಾಳೆ. ತನ್ನ ಗಂಡನಾಗುವಾತ ಹೇಗಿರಬೇಕೆಂಬ ಕನಸು ಕಾಣುತ್ತಾಳೆ. ಅವಳ ಮೂಲಕ ವಿವಾಹ, ಗಂಡ, ಹೆಂಡತಿ ಇತ್ಯಾದಿ ವಿಷಯಗಳೆಲ್ಲದರ ಒಳಸುಳಿಗಳು ದಾಖಲಾಗುತ್ತವೆ. ಅಚಲಳ ಮೀರುವಿಕೆಯ ಪ್ರಯತ್ನ ತೆರೆದುಕೊಳ್ಳುವ ರೀತಿ ಇದು.

ಸಂಗಾತಿಯನ್ನು ಕುರಿತಂತಹ ಹೆಣ್ಣಿನ ಭಾವಸಂಚಲನಗಳ ಮತ್ತೊಂದು ರೂಪ, ಅಚಲಳ ಆಲೋಚನೆಗಳ ಮುಂದುವರಿದ ಭಾಗವಾಗಿ 'ಆತ' ಕಥೆಯ ಸುಮನಳ ಮೂಲಕ ತೆರೆಮುಕೊಳ್ಳುತ್ತದೆ. ಮದುವೆಯಾಗಿರುವ ಹೆಣ್ಣಿನ ಕಣ್ಣ ಮುಂದೆ ಗಂಡನನ್ನು

ಬಿಟ್ಟು, ಆಕೆಯ ಬದುಕಲ್ಲಿ ಹಾದು ಹೋಗಿರುವ ಇನ್ನಿತರ ಗಂಡುಗಳ ಮೆರವಣಿಗೆಯೇ ನಡೆಯುತ್ತದೆ. ಹೆಣ್ಣಿನ ಅಂತರಂಗದ ನಿಗೂಢ ಎನಿಸಿರುವ ಭಾವನೆಗಳನ್ನು ಸಹಜವಾಗಿ ಹೊರಹಾಕುವ ಈ ಪಾತ್ರಗಳ ಗಟ್ಟಿತನ ಹೊಸರೂಪಿನದು. ವಿವಾಹವಾಗದೆ ಹಾಗೆಯೇ ಉಳಿದು ಗಂಡು, ಹೆಣ್ಣಿನ ಸಂಬಂಧ ಸಾಧ್ಯವಾಗದ ಸೌಗಂಧಿಯ ಆ ಕಡೆಗಿನ ತುಡಿತ ಹೆಣ್ಣಿನ ಮತ್ತೊಂದು ಸತ್ಯವನ್ನು ತೆರೆದಿಡುವಂಥದ್ದು. ಲೈಂಗಿಕತೆಯ ಬಗೆಗೆ ಮಹಿಳೆ ಏನನ್ನೂ ಹೇಳುವಂತಿಲ್ಲದ ನಿಷೇಧಗಳ ನಡುವೆ ರಕ್ತಮಾಂಸಗಳುಳ್ಳ ಹೆಣ್ಣಿನ ಲೈಂಗಿಕ ಬಯಕೆಗಳನ್ನು ಸ್ವಗತದ ಮೂಲಕವಾದರೂ ಈ ಪಾತ್ರ ತೆರೆದಿಡುತ್ತದೆ. ಗಂಡಿನ ಪೌರುಷತ್ವವನ್ನೇ ವೈಭವೀಕರಿಸುವ ಸಮಾಜದಲ್ಲಿ ಮಹಿಳೆಯ 'ಸ್ತ್ರೀತ್ವ' ಅಪರಾಧವಲ್ಲ ಎಂಬ ನಿಲುವು ತಾಳುತ್ತದೆ. ಕಾಮ ಗಂಡಿನ ಕಾರುಬಾರು ಮಾತ್ರವಲ್ಲ, ಸ್ತ್ರೀಗೂ ಲೈಂಗಿಕತೆಯ ಅವಶ್ಯಕತೆ ಇದೆ. ಲೈಂಗಿಕಾನುಭವವನ್ನು ವಿವಾಹದ ಒಳಗಿನ ಸಂಬಂಧದಲ್ಲಿ ಪಡೆದುಕೊಳ್ಳಲಾಗದ ಸೌಗಂಧಿ, ಆ ಅನುಭವವನ್ನು, 'ಅತ್ಯಾಚಾರ'ದ ಮೂಲಕವಾದರೂ ಬಯಸುವುದು ಅವಳ ತಲ್ಲಣದ ತುರೀಯಾವಸ್ಥೆಯನ್ನು ಪ್ರತಿಬಿಂಬಿಸುತ್ತದೆ. ಮಡಿವಂತ ಮನಸುಗಳಿಗೆ ಶಾಕ್ ನೀಡುವಂಥ 'ಮೀರುವಿಕೆ' ಇಲ್ಲಿನದು.

ಪಾರ್ವತಿ, ಅಕ್ಕು, ಅಚಲ, ಸುಮನ, ಸೌಗಂಧಿ- ಈ ಮುಂತಾದ ಪಾತ್ರಗಳ ಮೂಲಕ ವೈದೇಹಿ ಸಂಬಂಧದ ಸಂಕೀರ್ಣತೆಯನ್ನು ಚರ್ಚೆಗೊಳಪಡಿಸುತ್ತಾರೆ. ಪಾರ್ವತಿ, ಅಕ್ಕುರಂಥವರು ವಿವಾಹ ವ್ಯವಸ್ಥೆಯೊಳಗೆ ಕಂಡುಕೊಂಡ ಸತ್ಯಗಳು ಒಂದಾದರೆ, ವಿವಾಹದ ಹೊರಗೆ ನಿಂತು ಅಚಲ, ಸುಮನ, ಸೌಗಂಧಿಯಂಥವರು ಕಾಣುವ ಸತ್ಯಗಳು ಮತ್ತೊಂದು ರೀತಿಯವು. ತಮ್ಮ ತಮ್ಮ ನೆಲೆಗಳಲ್ಲಿ ಬದುಕನ್ನು ಗ್ರಹಿಸಿ, ಅದಕ್ಕೆ ಉತ್ತರ ಕಾಣಬಯಸುವ ಕ್ರಿಯೆಯಲ್ಲಿ ಇವರ ವ್ಯಕ್ತಿತ್ವದ ಅನನ್ಯತೆಗಳು ಗೋಚರವಾಗುತ್ತವೆ. ಇಲ್ಲಿ ಯಾವ ವಿಷಯಗಳೂ ಸರಳ, ಸಹಜವಾಗಿಲ್ಲ. ಸಂಕೀರ್ಣತೆಗಳಿಂದಲೇ ತುಂಬಿಕೊಂಡಿವೆ. ಇಂಥ ಕಡೆ ಹೆಣ್ಣುಗಳು ಎದುರಿಸುವ ಸಂದಿಗ್ಧತೆ, ಅದನ್ನು 'ಮೀರುವ ಪರಿ' ಇಲ್ಲಿ ಮುಖ್ಯವಾಗುತ್ತದೆ.

ಮಹಿಳೆಯರ ಅಸ್ಮಿತೆಯ ಹುಡುಕಾಟದ ಮತ್ತೊಂದು ರೂಪವನ್ನು 'ಶಕುಂತಲೆ'ಯಲ್ಲಿ ನೋಡುತ್ತೇವೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿನ ಗಂಡು-ಹೆಣ್ಣು ಸಂಬಂಧಗಳ ನಡುವಿನ ವಿವಿಧ ಆಯಾಮಗಳು ಪುರಾಣ ಪ್ರಪಂಚದಲ್ಲಿಯೂ ಢಾಳಾಗಿ, ತೀಕ್ಷ್ಣವಾಗಿ ಕಂಡುಬರುತ್ತವೆ. ಅಪನಂಬಿಕೆ, ಅಪ್ರಾಮಾಣಿಕತೆ, ದ್ರೋಹದ ಸಂಬಂಧವೊಂದು ಶಕುಂತಲೆ, ದುಷ್ಯಂತರ ಪ್ರಸಂಗದಲ್ಲಿ ತೆರೆದುಕೊಂಡಿದೆ. ಇಲ್ಲಿನ ಶಕುಂತಲೆ 'ಪ್ರೀತಿ'ಯ ಮೂಲಕವೇ ತನ್ನ ಸ್ವಂತಿಕೆ ಸಾಧಿಸುತ್ತಾಳೆ. ಅದಕ್ಕೆ ಹಲವು ಪರಿಮಿತಿಗಳಿವೆ ಎಂಬುದನ್ನು ಒಪ್ಪಿಕೊಂಡೂ ಅವಳು ಪ್ರೀತಿಸುವ ಗುಣಕ್ಕೆ ಎರವಾಗುವುದಿಲ್ಲ. ಪ್ರೀತಿಸುವ ಗುಣವನ್ನು ಬಿಟ್ಟುಕೊಡುವುದಿಲ್ಲ. ಅದು ಸಾಮಾನ್ಯವಾಗಿ ಮಹಿಳೆಯರ ಬಹುದೊಡ್ಡ ಅನನ್ಯತೆಯೇ! ಪುರಾಣದ ನಾಯಕಿಯರಿಂದ ಹಿಡಿದು ಸಮಕಾಲೀನ ಮಹಿಳೆಯರ ತನಕವೂ ಅದನ್ನು ನೋಡುತ್ತೇವೆ.

ಹಾಗಾಗಿ ಶಕುಂತಲೆ ದುಷ್ಯಂತನನ್ನು ಸಂಪೂರ್ಣವಾಗಿ ನಿರಾಕರಿಸುವುದಿಲ್ಲ. 'ಪರಸ್ಪರ ಅನಿವಾರ್ಯವಾಗುವ ತನಕ ಕಾಯುವ' ಮನಸ್ಥಿತಿ ವ್ಯಕ್ತಪಡಿಸುತ್ತಾಳೆ.

ಶಕುಂತಲೆಗಿಂತ ಮೀನಾಕ್ಷತ್ತೆ, ಲಿಲ್ಲಿಬಾಯಿ, ಬಜ್ಜಮ್ಮನಂತಹ ಮಹಿಳೆಯರ ಅನನ್ಯತೆ ಹೆಚ್ಚು ಸತ್ವಯುತವಾಗಿ, ಮಣ್ಣಿನಿಂದಲೇ ಹೊರಬಂದಂಥ ವಾಸನೆಯನ್ನು ಹೊಂದಿದ್ದಾಗಿ ಕಂಡುಬರುತ್ತದೆ. ಬದುಕಿನ ಮೇಲಿನ ಪ್ರೀತಿಗಾಗಿ ಇವರೆಲ್ಲ 'ರಾಜಿ' ಮಾಡಿಕೊಳ್ಳುತ್ತಾರೆ. ಆದರೆ ಆ 'ರಾಜಿ' ಒಳಗೇ ಕಳೆದುಹೋಗುವುದಿಲ್ಲ. ದ್ವಂದಕ್ಕೆ ಒಳಗಾಗುವುದಿಲ್ಲ.

'ಆರತಿ ತಟ್ಟೆ'ಯ ಮೀನಾಕ್ಷತ್ತೆ ಪಿತೃಸಂಸ್ಕೃತಿ ಕೊಡಮಾಡಿದ ಎಲ್ಲ ರಾಜಕಾರಣ, ನೋವುಗಳ ಒಳಗಿರುವವಳು. ಹೆಣ್ಣಿಗೆ ಸ್ವಂತ ಬುದ್ಧಿ ಸಲ್ಲದೆಂಬ ನಿಲುವು, ಗಂಡನಿಗೆ ಎದುರಾಡದ ವಿಧೇಯತೆ, ಪಾಪಪಾಕ. ಇವೆಲ್ಲದರ ನಡುವೆ ಗಂಡ, ಗುಲಾಬಿ ಎಂಬ ಹೆಂಗಸಿನೊಡನೆ ತನ್ನ ಮನೆಯಲ್ಲಿಯೇ ಮಲಗುವುದನ್ನೂ ಆಕೆ ಭರಿಸಬೇಕು. ಇಂತಹ ಕ್ರೌರ್ಯಕ್ಕೆ ಅವಳು ಹಾಕುವ ಸಣ್ಣ ಪೆಟ್ಟಿನಲ್ಲಿಯೇ ಮೀನಾಕ್ಷತ್ತೆಯ ಅನನ್ಯತೆ ಕಾಣಸಿಗುತ್ತದೆ. ಗಂಡನೊಂದಿಗೆ ಮಲಗಲು ಹೋಗುತ್ತಿರುವ ಹೆಣ್ಣಿಗೆ ಹಾಲು ಕೊಟ್ಟು ಕಳುಹಿಸುವ ವಿಧೇಯತೆಯೊಂದಿಗೇ ಹಾಸಿಗೆಗೆ ಇರುವೆ ಮುತ್ತುವಂತೆ ಮಾಡಿ ಅದನ್ನು 'ಮೀರುವ' ಕ್ರಿಯೆಯನ್ನೂ ಆಕೆ ಏಕಕಾಲಕ್ಕೆ ಸಾಧಿಸುತ್ತಾಳೆ.

ಗುಲಾಬಿ ಟಾಕೀಸಿನ ಲಿಲ್ಲಿಬಾಯಿಯ ಪಾತ್ರದ ಸಾಧ್ಯತೆಗಳು ಹಲವು ರೀತಿಯದು. ಹಾಗೆ ನೋಡಿದರೆ ಗುಲಾಬಿ ಟಾಕೀಸಿನ ಪ್ರಭಾವ ಆ ಊರಿನ ಸ್ತ್ರೀಲೋಕವನ್ನು ಪ್ರವೇಶಿಸಲು, ಆ ಮೂಲಕ ಸ್ಥಿತ್ಯಂತರಕ್ಕೆ ಕಾರಣವಾಗಲು ಈಕೆಯೇ ಕಾರಣಳಾಗಿದ್ದಾಳೆ. ಟಾಕೀಸಿನ ಮೂಲಕ, ಸಣ್ಣಪುಟ್ಟ ಭ್ರಷ್ಟತೆ ಮೂಲಕ, ಅವಳ ಬದುಕಿನಲ್ಲಿ ದೊಡ್ಡ ಆಸೆಗಳೇ ಎನ್ನಬಹುದಾದ ಸಣ್ಣ ಪುಟ್ಟ ಬೇಕುಬೇಡಗಳನ್ನು ಯಾವುದೇ ದ್ವಂದ್ವವಿಲ್ಲದೆ ಈಡೇರಿಸಿಕೊಳ್ಳುವ ಲಿಲ್ಲಿಬಾಯಿ ಮ್ಯಾನೇಜರನೆದುರು ಸೋಲುವುದಿಲ್ಲ.

'ಒಂದು ಕಳ್ಳ ವೃತ್ತಾಂತ'ದ ಬಜ್ಜಮ್ಮನ ವ್ಯಕ್ತಿತ್ವ ಮತ್ತೊಂದು ರೀತಿಯಲ್ಲಿ ಅನನ್ಯವಾಗುತ್ತದೆ. ಅದವಳಿಗೆ ಸಿಗುವುದು ಅವಳ 'ತತ್ವಾರ'ದ ಬದುಕಿನ ಮೂಲಕ. ಹೊಟ್ಟೆ ತುಂಬಿಸಿಕೊಳ್ಳಬೇಕಾದ ತಹತಹಿಕೆ, ತಲ್ಲಣಗಳ ಎದಿರು ಅವಳು ಸೋಲುವುದಿಲ್ಲ. ತಿನ್ನುವ ವಸ್ತುಗಳನ್ನು ಬಚ್ಚಿಟ್ಟು ತರುವ ಬಜ್ಜಮ್ಮನ ಕೆಲಸವನ್ನು 'ಕಳ್ಳತನ' ಎಂದು ಹೆಸರಿಟ್ಟು ಕರೆಯಲಾಗುವುದೇ ಇಲ್ಲ. ಏಕೆಂದರೆ ಅವಳ ಕೆಲಸದಲ್ಲಿ ಅವಳಿಗಾವ ಪ್ರಶ್ನೆಗಳು, ದ್ವಂದ್ವಗಳು ಇಲ್ಲ. ಸಾಮಾಜಿಕ ಅಸಮಾನತೆಯ ವಿಕೃತರೂಪವನ್ನು ಮದುವೆ ಮನೆಯಲ್ಲಿ ಕಂಡಾದ ಮೇಲಂತೂ ಬಜ್ಜಮ್ಮನ ವ್ಯಕ್ತಿತ್ವ ಓದುಗರಿಂದಲೂ ಯಾವ ಪ್ರಶ್ನೆಗೂ ಒಳಗಾಗುವುದಿಲ್ಲ.

'ಹಕ್ಕಿಲ್ಲದವರು' ಮತ್ತು 'ಅಲ್ಲಲ್ಲಿನ ಲೋಕದವರು' ಕಥೆಗಳಲ್ಲಿ ಬರುವ ಮಹಿಳೆಯರ ಅನನ್ಯತೆಯ ಹುಡುಕಾಟಗಳು ಮತ್ತೊಂದು ಸ್ವರೂಪದಲ್ಲಿ ತೆರೆದುಕೊಳ್ಳುತ್ತವೆ. 'ಹಕ್ಕಿಲ್ಲದವರು'

ಕಥೆಯಲ್ಲಿ ಬರುವ ಸಿರಿಯ ವ್ಯಕ್ತಿತ್ವದಲ್ಲಿ ಅವಳ ಹಳಹಳಿಕೆ, ವಿಷಾದ, ದುಃಖ–ಸಂತೋಷ, ಪ್ರೀತಿ, ಕೋಪ–ಇತ್ಯಾದಿಗಳೆಲ್ಲ ತುಂಬಿ ತುಳುಕುತ್ತವೆ. ಆದರೆ ಯಾವುದೂ ಸ್ಥಾಯಿಯಲ್ಲ. ತನ್ನ ಬದುಕಿಗಿಂತ ಭಿನ್ನವಾದ ಬದುಕು ತನಗೆ ಮುಖಾಮುಖಿಯಾದ ಅನಂತರವೂ ಸಿರಿ, ಸಿರಿಯಾಗಿಯೇ ಉಳಿದುಕೊಳ್ಳುವುದರಲ್ಲಿಯೇ ಅವಳ ಅಸ್ಮಿತೆ ಇದೆ. ಅವಳ ಪರಿಶ್ರಮ, ದುಡಿತಗಳು ಅವಳನ್ನು ಅನನ್ಯವಾಗಿರಿಸಿವೆ. ಗಂಡಂದಿರ ದುಡಿಮೆಯಲ್ಲಿ ಮರೆಯುವ ಹೆಣ್ಣುಮಕ್ಕಳಿಗಿಂತ ಸ್ವತಃ ದುಡಿದು ಬದುಕು ಮಾಡುತ್ತಿರುವ, ಸಿರಿ ಮುಖ್ಯವಾಗುತ್ತಾಳೆ. ಈ ಕಥೆಯಲ್ಲಿ ಬರುವ ದೊಡ್ಡಮ್ಮನ ವ್ಯಕ್ತಿತ್ವವೂ ಅನನ್ಯತೆಯನ್ನು ಬಿಟ್ಟುಕೊಡುವುದಿಲ್ಲ. ಆಧುನಿಕತೆ, ಶ್ರೀಮಂತಿಕತೆ, ನಾಗರಿಕತೆ–ಹೀಗೆ ಏನೆಲ್ಲಾ ತಮ್ಮೊಂದಿಗೆ ಇಟ್ಟುಕೊಂಡು ಬಂದ ಹೊರಗಿನವರು ಇವರೆದುರು ಬರೇ ಬೂಸುಗಳಾಗಿಬಿಡುವ ವ್ಯಂಗ್ಯವನ್ನು ಗಮನಿಸಬೇಕು.

'ಅಲ್ಲಲ್ಲಿನ ಲೋಕದವರು' ಕಥೆಯಲ್ಲಿ ಬರುವ ಮಂಜಿ 'ಗಂಡಸ್ರನ್ ನನ್ನೆದ್ರ್ ನೀವಾಳ್ಸಿ' ಎನ್ನುತ್ತಲೇ ಶೂದ್ರತ್ವದಿಂದ ಬ್ರಾಹ್ಮಣತ್ವದ ಕಡೆಗೆ ಚಲಿಸಬಯಸುವವಳು. ಬ್ರಾಹ್ಮಣ ಹೆಂಗಸು ಮಾಂಕಾಳಿ, ಮಂಜಿಯ ವ್ಯಕ್ತಿತ್ವ, ಬದುಕುಗಳಿಂದ ಪ್ರಭಾವಿತಳಾಗಿ ಬ್ರಾಹ್ಮಣತನದಿಂದ ಶೂದ್ರತ್ವದೆಡೆಗೆ ಸರಿಯ ಬಯಸಿದವಳು. ಮಹಿಳೆಯ ಬವಣೆಯ ಬದುಕು ಎಲ್ಲ ವರ್ಗಗಳಲ್ಲಿಯೂ ಒಂದೇ ಆಗಿರುವಾಗಲೂ ಮೇಲ್ವರ್ಗದಲ್ಲಿರುವ ಮಾಂಕಾಳಿಗಿಂತ, ಕೆಳವರ್ಗದಲ್ಲಿರುವ ಮಂಜಿಯ ಬದುಕಿನ ಸಾಧ್ಯತೆಗಳು ಹೆಚ್ಚಾಗಿವೆ. ಆ ಹಿನ್ನೆಲೆಯಲ್ಲಿಯೇ ಮಾಂಕಾಳಿ, ಶೂದ್ರತನದೆಡೆಗೆ ಚಲಿಸುವ ಮನಸ್ಥಿತಿಯವಳಾಗುತ್ತಾಳೆ. ಇವರಿಬ್ಬರ ವ್ಯಕ್ತಿತ್ವದ ಮತ್ತೊಂದು ಮುಖ್ಯ ಅಂಶವೆಂದರೆ ಪರಸ್ಪರ ಒಬ್ಬರಿಗೊಬ್ಬರು ಆಗುವ ರೀತಿಯದು.

ವಾಣಿಮಾಯಿ, ಅಮ್ಮಚ್ಚಿ, ರಾಜಮ್ಮರ ಬದುಕುಗಳು ನೇರವಾಗಿ ಗಂಡಸರ ದೌರ್ಜನ್ಯಕ್ಕೆ, ಕ್ರೌರ್ಯಕ್ಕೆ ಒಳಗಾದುವು. ಆ ದೌರ್ಜನ್ಯ, ಕ್ರೌರ್ಯಗಳನ್ನು ಅವರು ತಮ್ಮ ತಮ್ಮ ಬದುಕುಗಳಲ್ಲಿ ತಮ್ಮದೇ ರೀತಿಯಲ್ಲಿ 'ಮೀರುವ' ಕ್ರಿಯೆಯಲ್ಲಿ ತೊಡಗಿಕೊಳ್ಳುತ್ತಾರೆ. ಅದೇ ನೆಲೆಯಲ್ಲಿ ಅವರುಗಳ ವ್ಯಕ್ತಿತ್ವದ ಅನನ್ಯತೆ ಗುರುತಾಗುತ್ತದೆ. ವಾಣಿಮಾಯಿ ತನ್ನ ಕಾಲದ ಹೆಣ್ಣಿನ ಮೇಲಿನ ನಿಷೇಧವೊಂದನ್ನು ಮೀರುವ ಸಂದರ್ಭದಲ್ಲಿ ಗಂಡಸೋರ್ವನಿಂದ ತನ್ನ ಪಾದಕ್ಕೆ ಬೆಂಕಿ ಹಚ್ಚಿಸಿಕೊಂಡು ಬದುಕಿಡೀ ಚಪ್ಪಲಿಯೇ ಮಟ್ಟಲಾಗದ ಸೋಲಿನ ನೋವನ್ನು ಬದುಕಿಡೀ ಅನುಭವಿಸಿದ್ದಾಳೆ. ಆ ನೋವು, ಆ ಆಕ್ರೋಶಕ್ಕೆ ಪ್ರತಿಯಾಗಿ ಅವನಿಗೆ ಏನನ್ನಾದರೂ ಮಾಡಲೇಬೇಕೆಂಬ ರೋಷ. ಹಠ ಎಷ್ಟಿದೆಯೆಂದರೆ ಬದುಕಿನ ಕೊನೆಯ ಹಂತದಲ್ಲಿ ಅದೇ ಕಾಲಿನಿಂದ ಆ ಗಂಡಸಿಗೆ ಝಾಡಿಸಿ ಒದೆಯುವಷ್ಟು. ಗಂಡಿನ ಕ್ರೌರ್ಯ, ದೌರ್ಜನ್ಯದ ವಿರುದ್ಧದ ಪ್ರತಿಭಟನೆ, ಪ್ರತೀಕಾರ, ಪ್ರತಿಕ್ರಿಯೆಗಳು ಹೀಗೂ ಇರಬಹುದೆಂದು ತೋರುವ ವಾಣಿಮಾಯಿಯ ವ್ಯಕ್ತಿತ್ವ ವಿಶಿಷ್ಟವಾದದ್ದು.

ಅಮ್ಮಜ್ಜಿಯ ಅದಮ್ಯ ವ್ಯಕ್ತಿತ್ವದ ಉತ್ಸಾಹ, ಉಲ್ಲಾಸಗಳನ್ನು ಪ್ರಶ್ನಿಸುವಂತಹ, ಮುರುಟಿಸುವಂತಹ ಗಂಡಸು ನೇರವಾಗಿ ಅವಳ ಮೇಲೆ ಹೋರಾಟಕ್ಕಿಳಿದು ಗೆಲ್ಲಲಾಗದ ಸ್ಥಿತಿಯಲ್ಲಿ 'ಅತ್ಯಾಚಾರ' ದಂತಹ ಹೇಯಕೃತ್ಯದ ಮೂಲಕ ಅವಳ ಮೇಲೆ ಅಧಿಕಾರ ಸ್ಥಾಪಿಸಲು ಹೋಗುತ್ತಾನೆ. ಮದುವೆಯಾಗಿ ಹೋದರೂ ಸ್ವಲ್ಪ ದಿನಗಳಲ್ಲಿಯೇ ಗಂಡ ಸತ್ತ ಸುದ್ದಿಯೊಂದಿಗೆ ಮರಳಿ ಬಂದು ಸಹಜ ಬದುಕನ್ನು ಸಾಗಿಸುತ್ತಾಳೆ. ಗಂಡಸಿನ ಕ್ರೌರ್ಯಕ್ಕೆ ತಾನು ಬಲಿಯಾದರೂ, ಬದುಕನ್ನು ಕಳೆದುಕೊಳ್ಳದೆ ಅವನ ಬದುಕೇ ಕಳೆದುಹೋಗುವಂತೆ ಮಾಡಿ ಮರಳಿ ಉತ್ಸಾಹದೊಂದಿಗೆ ಬದುಕಲು ಬರುವ ಅಮ್ಮಜ್ಜಿಯ ಧೈರ್ಯ, ದಿಟ್ಟತನ, ತಲೆಬಾಗದ ಗುಣ, ಜೀವನಪ್ರೀತಿಗಳು ಗಮನಾರ್ಹ ಸಂಗತಿಗಳಾಗುತ್ತವೆ.

ಅತ್ಯಾಚಾರಕ್ಕೆ ಒಳಗಾಗಿಯೂ ಅತ್ಯಾಚಾರಿಯೊಡನೆಯೇ ದಾಂಪತ್ಯ ಮಾಡಬೇಕಾದ ದುರಂತ ಬದುಕು ರಾಜಮ್ಮನದು. ಆ ಕಿರಿಕಿರಿ, ನೋವು ಸಂಘರ್ಷ ಇವೆಲ್ಲದರ ಜೊತೆಗಿನ ದಾಂಪತ್ಯ ಅವಳದು. ಆದರೆ ಅವಳು ಬದುಕು ನಿರಾಕರಿಸಿಲ್ಲ. ಅವಳ ಅಸಹನೆ, ಆಕ್ರೋಶ, ನಿರಾಕರಣೆಯ ಭಾವಗಳೆಲ್ಲ ಘನೀಕೃತವಾದ ರೀತಿಯಲ್ಲಿ ಇಳಿವಯಸ್ಸಿನ ರಾಜಮ್ಮನಲ್ಲಿ ಕಾಣಿಸಿಕೊಳ್ಳುತ್ತದೆ. ಹಾರ್ಮನಿಯನ್ನು ಅಟ್ಟಕ್ಕಾಗಲಿ, ಜೀದಿಗಾಗಲಿ ಎಸೆಯಲು ಅವಳು ಹೇಳುವುದರಲ್ಲಿಯೇ ಗಂಡನನ್ನು ಅವಳು ಕಂಡ ಬಗೆ ತೆರೆದುಕೊಳ್ಳುತ್ತದೆ. ಆದರೆ ಅದು ಅವಳ ದೀರ್ಘ ದಾಂಪತ್ಯದ ಒಳಗೇ ಇರುವ ನಿಗೂಢ ವಿಷಯ. ಮನಸ್ಸನ್ನು ಮುಟ್ಟಲಾರದ ಮಿತಿ, ನಿಷೇಧ, ನಿರ್ಬಂಧಗಳು, ಕ್ರೌರ್ಯ, ದೌರ್ಜನ್ಯಗಳಾಗಿದೆಯೆಂಬ ಸತ್ಯ ಇಲ್ಲಿ ತೆರೆದುಕೊಳ್ಳುತ್ತದೆ.

ಇಂಥದ್ದೇ ದಾಂಪತ್ಯದ ಒಳಗಿನ ಒಂದು ನಿಗೂಢ ಚಿಕ್ಕಮ್ಮನ ಬದುಕಿನದು. ಅತಿಕಾಮಿ ಗಂಡನನ್ನು ನಿವಾರಿಸುವುದಕ್ಕೆ ಚಿಕ್ಕಮ್ಮ ಕಂಡುಕೊಳ್ಳುವ ಸಣ್ಣ ಪ್ರಯತ್ನವೂ ಅವಳ ಬದುಕಿನ ಸಂದರ್ಭದ ದೊಡ್ಡ ನಡೆಯಾಗಿಯೇ ಪರಿಗಣಿತವಾಗುತ್ತದೆ.

ಗಂಡ-ಅವನು ಅತಿಕಾಮಿ, ಅತ್ಯಾಚಾರಿ, ಕಚ್ಚೆಹರುಕ, ಲಂಪಟ, ಬೇಜವಾಬ್ದಾರ- ಹೀಗೆ ಏನೆಲ್ಲಾ ಆಗಿರಲಿ; ಪಿತೃಸಂಸ್ಕೃತಿ, ಹೆಂಡತಿ ಅವನೊಂದಿಗೆಯೇ ಚಕಾರವೆತ್ತದೆ ಬದುಕು ಸಾಗಿಸಬೇಕಾದ ಒತ್ತಾಯವನ್ನು ಹೇರಿದೆ. ಅಂತಹ ಒತ್ತಾಯಗಳ ನಡುವೆಯೂ ಆ ಸಮಾಜದೊಳಗೇ ಬದುಕುತ್ತಿರುವ ಇಂಥ ಹೆಣ್ಣುಮಕ್ಕಳು ಅವುಗಳ ನಡುವೆ ತಾವು ಕಳೆದುಹೋಗದೆ, ಯಾವುದೇ ರೀತಿಯಲ್ಲಾದರೂ 'ತಮ್ಮತನ' ಕಾಯ್ದುಕೊಂಡು ತಾವಾಗಿಯೇ ಉಳಿದುಕೊಳ್ಳುವುದರಲ್ಲಿ ಇಲ್ಲಿನ ಮಹಿಳೆಯರ ಅನನ್ಯತೆ ಇಡಿಯಾಗಿ ತೆರೆದುಕೊಳ್ಳುತ್ತದೆ. ಹಾಗೆ ಮಾಡುವಾಗಿನ ಅವರ ತಂತ್ರಗಳು, ಪ್ರತಿತಂತ್ರಗಳು, ಸಂಚು, ಹುನ್ನಾರ, ಚಾಣಾಕ್ಷತನ, ಬುದ್ಧಿವಂತಿಕೆ- ಇತ್ಯಾದಿಗಳಿಗೆಲ್ಲಾ ಜಗತ್ತಿನ ಸಂದರ್ಭದಲ್ಲಿ 'ಯಕಶ್ಚಿತ್' ಆದ ಸ್ಥಾನವಿರಬಹುದು, ಆದರೆ ಅವರವರ ಬದುಕಿನ ಸಂದರ್ಭದಲ್ಲಿ ಅವುಗಳೆಲ್ಲಾ 'ಮಹಾನ್' ಆಗಿಯೇ ಪ್ರವರ್ತಿಸುತ್ತವೆ.

ಧಾರ್ಮಿಕ ನಿಷೇಧ ಮೀರುವ ಸಾಮಾನ್ಯ ಗೃಹಿಣಿ, ನಟನೆಯ ಸೃಜನಶೀಲ ಕ್ರಿಯೆಯಲ್ಲಿ ಬದುಕುವ ದುರಂತಗಳನ್ನು ಹತ್ತಿಕ್ಕಲೆತ್ನಿಸುವ ರತ್ನ, ಗಂಡನ ಪಲಾಯನವಾದದ ಅನಂತರವೂ ಅಪರಿಚಿತ ಜಾಗದಲ್ಲಿಯೇ ತನ್ನ ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿಕೊಳ್ಳುವ ಲಕ್ಷ್ಮಮ್ಮ, ಕಾರಣವಿಲ್ಲದ ಕಂಡಕ್ಟರನ ಆಕ್ರೋಶದ ವಿರುದ್ಧ 'ನಗು'ವಿನ ದಾಳಿ ನಡೆಸುವ ಮಹಿಳೆ–ಇವರೆಲ್ಲಾ ತಮ್ಮ ತಮ್ಮ ನೆಲೆಗಳಲ್ಲಿ ಅನನ್ಯವಾಗಿಯೇ ಕಾಣಿಸಿಕೊಳ್ಳುತ್ತಾರೆ. ಪಿತೃಸಂಸ್ಕೃತಿಯ ಎಲ್ಲ ಹೇರಿಕೆ, ಒತ್ತಡ, ಒತ್ತಾಯಗಳು ಈ ಮಹಿಳಾ ಲೋಕವನ್ನು ದಿಕ್ಕುಗೆಡಿಸುತ್ತವೆ. ದುಃಖ–ನೋವುಗಳ ನೆಲೆಯಾಗಿಸಿವೆ. ಹಾದಿಗೆ ಮುಳ್ಳುಗಳನ್ನು ನೆಟ್ಟಿವೆ. ಆದರೆ ಇಲ್ಲಿನ ಬಹುತೇಕ ಮಹಿಳೆಯರು ಎಂತಹ ಸಂದರ್ಭಗಳಲ್ಲಿಯೂ ಅಸಹಾಯಕರಾಗುವುದಿಲ್ಲ. ಬದುಕನ್ನು ನಿರಾಕರಿಸುವುದಿಲ್ಲ. ತಮ್ಮ ತಮ್ಮ ನೆಲೆಗಳಲ್ಲಿ ಅವೆಲ್ಲವನ್ನೂ ತಮಗೆ ತಿಳಿದಂತೆ ಪರಿಹರಿಸಿಕೊಳ್ಳಲು ಅವುಗಳ ನಡುವೆಯೇ ಬದುಕು ಕಟ್ಟಿಕೊಳ್ಳಲು ತಮ್ಮೆಲ್ಲ ದಿಟ್ಟತನ, ಗಟ್ಟಿತನಗಳನ್ನು ಧೀಶಕ್ತಿಯಾಗಿ ಬಳಸಿಕೊಳ್ಳುತ್ತಾರೆ. ಇಲ್ಲಿ ಕಂಡು ಬರುವ ಯಾವೊಬ್ಬ ಮಹಿಳೆಯೂ ಬದುಕನ್ನು ಕೊನೆಮಾಡಿಕೊಳ್ಳುವ ಒಂದು ಸಣ್ಣ ಯೋಚನೆಯ ಸುಳಿವನ್ನೂ ನೀಡದೆ ಬದುಕುವುದು ಈ ಮಹಿಳೆಯರ ಬದುಕಿನ ದೊಡ್ಡ ಅಸ್ಮಿತೆಯಾಗಿ, ಪುರುಷಪ್ರಧಾನ ಸಮಾಜದ 'ಮೀರುವಿಕೆ'ಯಾಗಿ ಪರಿಗಣನೆಗೆ ಒಳಗಾಗುತ್ತದೆ. ವೈದೇಹಿಯವರು ಓರ್ವ ಲೇಖಕಿಯಾಗಿ ಸಾಧಿಸುವ ಬಹುದೊಡ್ಡ ಗೆಲುವೂ ಸಹ ಇದೇ ಎಂದು ಪರಿಗಣನೆಗೆ ಒಳಗಾಗುತ್ತದೆ.

ಇಲ್ಲಿ 'ಅಸ್ಮಿತೆ' ಕಳೆದುಕೊಳ್ಳದೆ, ಗುರುತಿಸಿಕೊಂಡು ಸ್ಥಾಪಿಸುವಲ್ಲಿ ಯಶಸ್ವಿಯೇ ಆಗುತ್ತಾಳೆ. ಭೂಮಿ ಮತ್ತು ಸೂರ್ಯರ ಸಂಬಂಧದಲ್ಲಿ ಗುರುತಾಗುವ ಹೆಣ್ಣು–ಗಂಡುಗಳ ಸಂಬಂಧವನ್ನು ಪಲ್ಲಟಗೊಳಿಸುವ ವೈದೇಹಿ ಮಹಿಳೆಯನ್ನು ಭೂಮಿ ಮೇಲೆ ಉರಿಯುವ ಸೂರ್ಯಳನ್ನಾಗಿ ಪ್ರತಿಷ್ಠಾಪಿಸುತ್ತಾರೆ.

ಕಾವ್ಯವೆಂಬುದನ್ನು 'ಇಹದ ಹಾಡ'ನ್ನಾಗಿಯೇ ಪರಿಭಾವಿಸುವ ವೈದೇಹಿಯವರು ಹಾಡಿನ ಮೂಲಕವೇ ಅನನ್ಯತೆಯನ್ನು ಸಾಧಿಸುವ ಪ್ರಯತ್ನದಲ್ಲಿ ಇಡಿಯಾಗಿ ತೊಡಗಿಸಿಕೊಂಡಿದ್ದಾರೆ. 'ಅವಳ' ಪದ್ಯವನ್ನು ಎಲ್ಲರಿಗೂ ಮುಟ್ಟಲಾರದ ಸ್ಥಿತಿಯಿದೆ. ಯಾಕೆಂದರೆ ಅವರ ಸ್ಪರ್ಶಕ್ಕೂ ಒಂದು ಪೂರ್ವತಯಾರಿ ಬೇಕಿದೆ. ಹಾಗೆ ಹೇಳುವಾಗ ವೈದೇಹಿ ಈ ತನಕ ಮಹಿಳಾ ಬರಹಗಳನ್ನು ಪೂರ್ವಗ್ರಹಗಳಿಂದಲೇ ನೋಡುತ್ತಾ ಬಂದ ನೋಟವನ್ನು ಪ್ರಶ್ನಿಸುತ್ತಾರೆ. ಪರಿಮಿತಿ ಅವಳ ಕಾವ್ಯದ್ದಲ್ಲ. ಅದನ್ನು ನೋಡುವ ನೋಟದ್ದು, ಪೂರ್ವಗ್ರಹಿಕೆಗಳದ್ದು, ಮಾನದಂಡದ್ದು.

ಇಲ್ಲಿ ಬರುವ ಮಹಿಳೆ ತನ್ನೆಲ್ಲಾ ವಾಸನೆಗಳ ಮೂಲಕವೇ ಸತ್ಯವಾಗುತ್ತಾಳೆ. ಒಳಗೊಂದು ಮಾದರಿ, ಹೊರಗೊಂದು ಮಾದರಿಯವಳಲ್ಲ ಈಕೆ. ಕಥೆಗಳಲ್ಲಿ ಅಲ್ಲಲ್ಲಿ ಸೂಚ್ಯವಾಗಿ, ಸಾಂಕೇತಿಕ ನೆಲೆಯಲ್ಲಿ ಕಂಡುಬರುವ 'ಗಾಹಸ್ಥ್ಯ ವೇಶ್ಯಾ ಅಭಿಸಾರ ವಾಸನೆಗಳ' ಸತ್ಯ

ಇಲ್ಲಿಯೂ ಪ್ರಸ್ತಾಪಗೊಳ್ಳುತ್ತದೆ. ಮಹಿಳೆ ಬಳಸುವ ಒಂದು ಚೀಲವೇ ಅವಳ 'ಅಸ್ಮಿತೆ'ಯ ದೊಡ್ಡ ರೂಪಕವಾಗಿ ತೆರೆದುಕೊಂಡು ಬಿಡುತ್ತದೆ.

ವೈದೇಹಿ 'ಕಾವ್ಯ'ದಲ್ಲಿ ಕಂಡುಬರುವ ಕಾವ್ಯ ನಾಯಕಿಯರಿಗೂ ಬದುಕೇ ಮುಖ್ಯ. ಆ ಬದುಕಿಗೆ ಬೆನ್ನು ಹಾಕದೆ ಅದಕ್ಕೆ ನ್ಯಾಯ ಸಲ್ಲಿಸುವುದೆ ಅವರ ಮುಖ್ಯ 'ಸ್ವಂತಿಕೆ' ಯಾಗಿದೆ. ಅದನ್ನು ಬಿಟ್ಟು ತೆರಳಲು ಅವರು ಸಿದ್ಧರಿಲ್ಲ. 'ಹೋಗುವುದೆಲ್ಲಿಗೆ?' ಎಂಬ ಪ್ರಶ್ನೆ ಅವರದು. ಇರುವ ಕಡೆ, ಕೆಟ್ಟಿರುವುದನ್ನು, ಹಾಳಾಗಿರುವುದನ್ನು ಸರಿಪಡಿಸಿಕೊಳ್ಳುತ್ತಾ ಬದುಕುವುದೇ ಅವರ ಬದ್ಧತೆಯಾಗಿದೆ. ಹಾಗಾಗಿ ಇಹದ ಬದುಕಿಗೆ ಬೆನ್ನು ಹಾಕಿದ ಅಕ್ಕಮಹಾದೇವಿಯೂ ಈ ಮಹಿಳೆಯರಿಗೆ ಮಾದರಿಯಾಗುವುದಿಲ್ಲ. ಉರಿಯುವುದಾದರೂ ಅರೆಯುವುದಾದರೂ 'ಇಹ'ದಲ್ಲೆ ಬದುಕುತ್ತಾ, ಪರದ ಕರೆ ತಾಳಿಕೊಳ್ಳುವ ಸಮತೋಲನ ಅವರದಾಗಿದೆ.



# 'ಕ್ರೌಂಚ ಪಕ್ಷಿಗಳು' ಕತೆಯಲ್ಲಿ ಸಂಭಾಷಣೆಗಳ ನಿರೂಪಣೆ

✦ ಡಾ. ಬಿ.ವಿ. ರಾಮ್ ಪ್ರಸಾದ್

ಸಾಹಿತ್ಯದ ಭಾಷಾಶಾಸ್ತ್ರೀಯ ಅಧ್ಯಯನ ಇಪ್ಪತ್ತನೇ ಶತಮಾನದ ಆರಂಭದಲ್ಲಿ ವಾಕ್ಯಗಳ ವ್ಯಾಕರಣವನ್ನು ಆಧಾರವಾಗಿಟ್ಟುಕೊಂಡು ಸಾಹಿತ್ಯ ಕೃತಿಯ ರಚನೆಯ ಬಗ್ಗೆ ಗಮನ ಹರಿಸಿತ್ತು. ನಂತರದ ಭಾಷಾಶಾಸ್ತ್ರೀಯ ಬೆಳವಣಿಗೆಗಳ ಬೆನ್ನಲ್ಲಿ ವಾಕ್ಯಗಳ ವ್ಯಾಕರಣವನ್ನು ಮೀರಿದ ವಿನ್ಯಾಸಗಳನ್ನು ಸಾಹಿತ್ಯದಲ್ಲಿ ಕಾಣುವ ಪ್ರಯತ್ನಗಳು ನಡೆದವು. ಉದಾ- ಲಬೋವ್‌ನ ಮೌಖಿಕ ಕಥನಗಳ ಸಮಾಜಶಾಸ್ತ್ರೀಯ ಅಧ್ಯಯನ, ಭಾಷಾ ಪ್ರಯೋಗ ಸಂಗ್ರಹದ ಹಿನ್ನೆಲೆಯಲ್ಲಿ ಸಾಹಿತ್ಯದ ಅಧ್ಯಯನ, ವ್ಯಾವಹಾರಿಕ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಸಾಹಿತ್ಯದ ಅಧ್ಯಯನ, ಸಂವಾದ ವಿಶ್ಲೇಷಣೆಯ ಹಿನ್ನೆಲೆಯಲ್ಲಿ ಸಾಹಿತ್ಯದ ಅಧ್ಯಯನ ಇತ್ಯಾದಿ. ಕಥನ ಸಾಹಿತ್ಯದಲ್ಲಿ ಸಂಭಾಷಣೆಗಳನ್ನು ವ್ಯಕ್ತಪಡಿಸುವಲ್ಲಿ ಲೇಖಕರಿಗೆ ಇರುವ ಆಯ್ಕೆಗಳಾವುದು, ಮತ್ತು ಅವುಗಳನ್ನು ಲೇಖಕರು ಹೇಗೆ ಬಳಸಿಕೊಳ್ಳುತ್ತಾರೆ ಅನ್ನುವುದರ ಅಧ್ಯಯನ ಈ ರೀತಿ ವಾಕ್ಯಗಳ ವ್ಯಾಕರಣವನ್ನು ಮೀರಿದ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಸಾಹಿತ್ಯದ ಅಧ್ಯಯನಕ್ಕೆ ಒಂದು ಉದಾಹರಣೆ. ಈ ಪ್ರಬಂಧ ವೈದೇಹಿಯವರ ಕ್ರೌಂಚಪಕ್ಷಿಗಳು ಕತೆ ಆಶ್ವಾರ್ಣಭಟ್ಟರು ಅನ್ನುವ ಪಾತ್ರದ ಸಂಭಾಷಣೆಗಳನ್ನು ವ್ಯಕ್ತಪಡಿಸುವುದಕ್ಕೆ ಯಾವ ಯಾವ ರೀತಿಯ ಆಯ್ಕೆಗಳನ್ನು ಮಾಡಿಕೊಳ್ಳುತ್ತದೆ ಎಂದು ತೋರಿಸುವ ಪ್ರಯತ್ನವನ್ನು ಮಾಡುತ್ತದೆ.

ಇಲ್ಲಿ ಕೆಲವು ಅಂಶಗಳನ್ನು ಗಮನದಲ್ಲಿರಿಸಿಕೊಳ್ಳಬೇಕು. ಮೊದಲನೆಯದು ಲೇಖಕ ತನ್ನ ಕೃತಿಯಲ್ಲಿ ಬಳಸುವ ಭಾಷೆಗೆ ಸಂಬಂಧಪಟ್ಟಂತೆ ಮಾಡುವ ಪ್ರತಿ ಆಯ್ಕೆಯೂ ಪ್ರಜ್ಞಾಪೂರ್ವಕವಾಗಿರಲೇಬೇಕು ಅಂದುಕೊಳ್ಳುವ ಅಗತ್ಯವಿಲ್ಲ. ಹಾಗೆಯೇ ಪ್ರತಿ ಆಯ್ಕೆಯೂ ಒಂದು ನಿರ್ದಿಷ್ಟ ಪರಿಣಾಮವನ್ನು ಬೀರಬೇಕು ಹಾಗೂ ಆ ಆಯ್ಕೆಯ ಬದಲು ಇನ್ನೊಂದು ಆಯ್ಕೆಯನ್ನು ಮಾಡಿದ್ದರೆ ಕೃತಿ ಒಟ್ಟಾರೆಯಾಗಿ ಬೇರೆಯದೇ ಆಗುತ್ತಿತ್ತು ಎಂದೂ ನಿರೀಕ್ಷಿಸಬೇಕಾಗಿಲ್ಲ. ಈ ಬಿಡಿ ಬಿಡಿ ಆಯ್ಕೆಗಳು ಒಟ್ಟಾರೆಯಾಗಿ - ಪ್ರಜ್ಞಾಪೂರ್ವಕವಾಗಿ ಅಥವಾ ಹಾಗಿಲ್ಲದೇ- ಒಂದು ವಿನ್ಯಾಸಕ್ಕೊಳಪಡುತ್ತವೆಯೇ ಅನ್ನುವುದನ್ನು ನೋಡುವುದು ಮುಖ್ಯ. ಈ ರೀತಿ ಭಾಷೆಯ ಬಳಕೆಯಲ್ಲಿ ಮಾಡುವ

ಆಯ್ಕೆಗಳು ಒಂದು ಸಾಹಿತ್ಯ ಕೃತಿಯಲ್ಲಿ ವಿನ್ಯಾಸಕೊಳಪಡುವುದನ್ನು ತೋರಿಸಲು ಸಾಧ್ಯವಾದರೆ ಭಾಷಾಶಾಸ್ತ್ರ ಹಾಗೂ ಸಾಹಿತ್ಯ ಎರಡಕ್ಕೂ ಲಾಭವಾಗುತ್ತದೆ. ಆದರೆ ಒಟ್ಟಾರೆ ವಿನ್ಯಾಸದ ಬಗೆಗೆ ಅನುಮಾನಗಳಿದ್ದರೂ ಬಿಡಿ ಬಿಡಿಯಾಗಿ ಸಾಹಿತ್ಯದಲ್ಲಿ - ಉದಾ- ಒಂದು ಸಣ್ಣ ಕತೆಯಲ್ಲಿ ಸಂಭಾಷಣೆಗಳನ್ನು ವ್ಯಕ್ತಪಡಿಸಿರುವ ರೀತಿಯಲ್ಲಿ- ವೈಶಿಷ್ಟಗಳೇನು ಎಂದು ಹೇಳಿದರೂ ಅದು ತೀರ ವ್ಯರ್ಥವಾದ ಕೆಲಸವೇನಲ್ಲ. ಈ ಪ್ರಬಂಧದಲ್ಲಿ ಮಾಡಿರುವ ಪ್ರಯತ್ನ ಸೀಮಿತವಾದುದು. ಒಂದು ಪಾತ್ರದ ಸಂಭಾಷಣೆಗಳನ್ನು ಕ್ರೌಂಚಪಕ್ಷಿಗಳು ಎನ್ನುವ ಕತೆ ಯಾವ ಯಾವ ರೀತಿಯಲ್ಲಿ ವ್ಯಕ್ತಪಡಿಸುತ್ತದೆ ಎನ್ನುವುದಕ್ಕೆ ಉದಾಹರಣೆಗಳನ್ನು ನೀಡುವ ಸೀಮಿತ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ.

ಕ್ರೌಂಚಪಕ್ಷಿಗಳು ದೇಶವಿಭಜನೆ ಸಂದರ್ಭದ ಬಗ್ಗೆ ಇರುವ ಕತೆ. ಈ ಕತೆ ಉರ್ದುವಿನಲ್ಲಿ ಪ್ರಸಿದ್ಧವಾಗಿರುವ ಲಾಜ್ವಂತಿ ಎನ್ನುವ ಕತೆಗೆ ಹೋಲುತ್ತದೆ. ಎರಡೂ ಕತೆಗಳು ದೇಶವಿಭಜನೆ ಸಂದರ್ಭದಲ್ಲಿ ಅಪಹರಣಕ್ಕೊಳಗಾದ ಮಹಿಳೆಯ ಬಗ್ಗೆ ಇವೆ. ಆದರೆ ಕ್ರೌಂಚಪಕ್ಷಿಗಳು ಕತೆಯ ವೈಶಿಷ್ಟವಿರುವುದು ವಿಭಜನೆಯ ಸಂದರ್ಭದ ಕತೆಗೆ ಆಧುನಿಕ ಕಾಲದ ಒಂದು ಚೌಕಟ್ಟನ್ನು ಕೂರಿಸಿರುವುದು. ಅಣ್ಣಾರ್ಣ ಭಟ್ಟರ ಹೆಂಡತಿ ಲಕ್ಷಮ್ಮನವರು ದೇಶವಿಭಜನೆಯ ಸಂದರ್ಭದಲ್ಲಿ ಅಪಹರಣಕ್ಕೊಳಗಾಗುವುದು ಮತ್ತು ನಂತರ ಅಣ್ಣಾರ್ಣ ಭಟ್ಟರು ನಿರಾಶ್ರಿತರ ಶಿಬಿರದಲ್ಲಿ ಸಿಕ್ಕುವ ತಮ್ಮ ಪತ್ನಿಯನ್ನು ಗುರುತಿಸಲು ತಿರಸ್ಕರಿಸುವುದು ಒಳ ಕತೆ. ಈ ಕತೆಯನ್ನು ಲಕ್ಷಮ್ಮ ಮತ್ತು ಅಣ್ಣಾರ್ಣ ಭಟ್ಟರು ಬೇರೆ ಬೇರೆ ರೀತಿಯಲ್ಲಿ ನಮ್ಮ ಮುಂದಿಡುತ್ತಾರೆ. ಇವೆಲ್ಲವನ್ನೂ ನಮ್ಮ ಮುಂದೆ ಹೇಳುವುದು ಅರುಂಧತಿ ಎನ್ನುವ ಸಂಶೋಧಕಿ. ಆದರೆ ಕತೆ ಇರುವುದು ಪ್ರಥಮ ಪುರುಷ ನಿರೂಪಣೆಯಲ್ಲಿ. ಈ ಪ್ರಥಮ ಪುರುಷ ನಿರೂಪಣೆಯಲ್ಲೇ ಕತೆ ಬೇರೇ ಬೇರೇ ಪಾತ್ರಗಳ ದೃಷ್ಟಿಕೋನಗಳ ಮೂಲಕ ಘಟನೆಗಳನ್ನು ನಮ್ಮ ಮುಂದಿಡುತ್ತದೆ. ಒಂದು ಘಟನೆಯ ಬಗ್ಗೆ ವಿಭಿನ್ನ ದೃಷ್ಟಿಕೋನಗಳನ್ನು ಹಾಗೂ ವಿಭಿನ್ನ ನೆಲೆಯ ವ್ಯಾಖ್ಯಾನಗಳನ್ನು ಕ್ರೌಂಚಪಕ್ಷಿಗಳು ಕತೆ ಮಾಡುವ ಬಗೆ ಬಹಳ ವೈಶಿಷ್ಟ್ಯಪೂರ್ಣವಾಗಿದೆ.

ಒಬ್ಬರು ಹೇಳುವುದನ್ನು ಇನೊಬ್ಬರು ಹೇಳುವಾಗ ಎರಡು ಆಯ್ಕೆಗಳಿವೆ:

ಪ್ರತ್ಯಕ್ಷ ಭಾಷೆ: 'ನನಗೆ ಮದುವೆಯಾಗಲು ಇಷ್ಟವಿಲ್ಲ' ರವಿ ಹೇಳಿದನು.

ಪರೋಕ್ಷ ಭಾಷೆ: ಅವನಿಗೆ ಮದುವೆಯಾಗಲು ಇಷ್ಟವಿಲ್ಲ ಎಂದು ರವಿ ಹೇಳಿದನು.

ಇದಲ್ಲದೇ ಬೇರೆ ಆಯ್ಕೆಗಳೂ ಇವೆ. ಉದಾಹರಣೆಗೆ ಈ ಕೆಳಗಿನ ವಾಕ್ಯವನ್ನು ನೋಡಿ:

ತನಗೆ/ನನಗೆ ಮದುವೆಯಾಗಲು ಇಷ್ಟವಿಲ್ಲ. ರವಿ ಹೇಳಿದ.

ಸದ್ಯಕ್ಕೆ ಮೂರನೇ ಶೈಲಿಯನ್ನು ಮುಕ್ತ ಭಾಷೆ ಎಂದು ಕರೆಯೋಣ. ಪ್ರತ್ಯಕ್ಷ

ಭಾಷೆಯಲ್ಲಿ ಒಬ್ಬ (ರವಿ) ಹೇಳಿರುವುದನ್ನು ಇದ್ದ ಹಾಗೆಯೇ ಏನು ಬದಲಾವಣೆಯಿಲ್ಲದೇ ಹಾಗೂ ಉದ್ಧರಣ ಚಿಹ್ನೆಗಳನ್ನು ಬಳಸಿ ಹೇಳಲಾಗಿದೆ. ಪರೋಕ್ಷ ಭಾಷೆಯಲ್ಲಿ ರವಿ ಹೇಳಿದ್ದನ್ನು ಅದನ್ನು ವರದಿ ಮಾಡುತ್ತಿರುವವನ ದೃಷ್ಟಿಕೋನಕ್ಕೆ ತಕ್ಕ ಹಾಗೆ ಬದಲಾವಣೆಗಳನ್ನು ಮಾಡಿಕೊಂಡು ಹೇಳಲಾಗಿದೆ ಹಾಗೂ ಇಲ್ಲಿ ಉದ್ಧರಣ ಚಿಹ್ನೆಗಳ ಬಳಕೆಯಿಲ್ಲ. ಪರೋಕ್ಷ ಭಾಷೆಯಲ್ಲಿ ವರದಿ ಮಾಡುವವನ ಇರುವಿಕೆ ಹೆಚ್ಚು ಕಾಣುತ್ತದೆ. ಇದಕ್ಕೆ ಉದಾಹರಣೆಯಾಗಿ ಈ ಕೆಳಗಿನ ಕಲ್ಪಿತ ವಾಕ್ಯವನ್ನು ನೋಡಬಹುದು:

'ಇಲ್ಲಿ ಯಾವುದೇ ಸ್ಥಳವಿಲ್ಲ' ಎಂದು ರವಿ ಹೇಳಿದನು.

ಇದನ್ನು ವರದಿ ಮಾಡುವಾಗ ಎರಡು ಸಾಧ್ಯತೆಗಳಿವೆ:

1. ಇಲ್ಲಿ ಯಾವುದೇ ಸ್ಥಳವಿಲ್ಲ ಎಂದು ರವಿ ಹೇಳಿದನು.
2. ಅಲ್ಲಿ ಯಾವುದೇ ಸ್ಥಳವಿಲ್ಲ ಎಂದು ರವಿ ಹೇಳಿದನು.

ಇಲ್ಲಿ ಗಮನಿಸಬೇಕಾದಿದ್ದು ಸ್ಥಳಸೂಚಕ ಪದಗಳಲ್ಲಿ ಆಗಿರುವ ಬದಲಾವಣೆ. ಪ್ರತ್ಯಕ್ಷ ವಾಕ್ಯದಲ್ಲಿ ಇಲ್ಲಿ ಅನ್ನುವುದು ರವಿಯ ದೃಷ್ಟಿಕೋನದಿಂದ್ದರೆ, ಪರೋಕ್ಷ ವಾಕ್ಯಗಳಲ್ಲಿ 'ಇಲ್ಲಿ, ಅಲ್ಲಿ' ಅನ್ನುವ ಪದಗಳು ವರದಿ ಮಾಡುವವನ ದೃಷ್ಟಿಕೋನವನ್ನು ಮುನ್ನೆಲೆಗೆ ತರುತ್ತವೆ. ಹೀಗಾಗಿ ಪರೋಕ್ಷ ವಾಕ್ಯಗಳ ಬಳಕೆ ಕಥನ ಸಾಹಿತ್ಯದಲ್ಲಿ ನಿರೂಪಕನ ಇರುವಿಕೆಯನ್ನು ಬಲಪಡಿಸುತ್ತವೆ ಮತ್ತು ಪ್ರತ್ಯಕ್ಷ ವಾಕ್ಯಗಳ ಬಳಕೆ ನಿರೂಪಕನ ಇರುವಿಕೆಯನ್ನು ಕಡಿಮೆ ಮಾಡುತ್ತವೆ. ಆದರೆ ಮೇಲೆ ಉದಾಹರಿಸಿದ – ತನಗೆ/ನನಗೆ ಮದುವೆಯಾಗಲು ಇಷ್ಟವಿಲ್ಲ, ರವಿ ಹೇಳಿದ– ಅನ್ನುವ ವಾಕ್ಯ ವಿಶಿಷ್ಟವಾಗಿದೆ. ಇದು ಪರೋಕ್ಷ ವಾಕ್ಯದಂತೆ ಇದ್ದರೂ ರವಿಯೇ ತನ್ನ ವಿಚಾರವನ್ನು ಹೇಳಿದ ಹಾಗಿದೆ. ತನಗೆ/ ನನಗೆ ಅನ್ನುವುದು ಅವನಿಗೆ ಅನ್ನುವುದಕ್ಕೆ ಹೋಲಿಸಿದರೆ ರವಿಯ ದೃಷ್ಟಿಕೋನಕ್ಕೆ ಹತ್ತಿರವಾಗಿದೆ. ಇಲ್ಲಿ ವರದಿಗಾರ ಇದ್ದರೂ ಇಲ್ಲದಂತೆ. ಈ ರೀತಿ ಪ್ರತ್ಯಕ್ಷ ಭಾಷೆಯ ಕೆಲವು ಲಕ್ಷಣಗಳನ್ನು ಒಳಗೊಂಡೂ ಪರೋಕ್ಷ ಭಾಷೆಯಾಗಿರುವ ಬಳಕೆಗಳನ್ನು 'ಮುಕ್ತ ಪರೋಕ್ಷ' ಭಾಷೆ ಎಂದು ಕರೆಯೋಣ. ಮುಕ್ತ ಪ್ರತ್ಯಕ್ಷ ಭಾಷೆಗೂ ಮುಕ್ತ ಪರೋಕ್ಷ ಭಾಷೆಗೂ ವ್ಯತ್ಯಾಸಗಳನ್ನು ತೋರಿಸಬಹುದಾದರೂ ನಮ್ಮ ಪ್ರಬಂಧದ ಉದ್ದೇಶಗಳಿಗೆ ಆ ವ್ಯತ್ಯಾಸಗಳನ್ನು ಕಡೆಗಣಿಸಬಹುದು.

ಈಗ ವೈದೇಹಿಯವರ ಕ್ರೌಂಚಪಕ್ಷಿಗಳು ಕತೆಯಲ್ಲಿ ಮಾತುಗಳನ್ನು ಹೇಗೆ ವ್ಯಕ್ತಪಡಿಸಲಾಗಿದೆ ಅನ್ನುವುದನ್ನು ನೋಡೋಣ. ಮೊದಲೇ ಹೇಳಿದಂತೆ ಈ ಕತೆ ಇರುವುದು ಪ್ರಥಮ ಪುರುಷ ನಿರೂಪಣೆಯಲ್ಲಿ. 'ಅರುಂಧತಿ, ಹೆಚ್ಚಿನ ಓದು ಸಂಶೋಧನೆ ಅಂತ ದೆಹಲಿಯಲ್ಲಿಯೇ ಇದ್ದವಳು, ಊರಿಗೆ ಬಂದಿದ್ದಳು...' ಎಂದು ಕತೆ ಪ್ರಾರಂಭವಾಗುತ್ತದೆ. ಈ ಪ್ರಥಮ ಪುರುಷ ನಿರೂಪಣೆ ಮೊದಲು ಅರುಂಧತಿಯ

ಮಾತುಗಳನ್ನು ಹೇಗೆ ವ್ಯಕ್ತಪಡಿಸುತ್ತದೆ ಅನ್ನುವುದನ್ನು ನೋಡೋಣ. ಕತೆಯ ಮೊದಲಿಗೇ ಆರುಂಧತಿಯ ಮಾತುಗಳನ್ನು– 'ಏನೋ ಒಂದು ವಿಶೇಷ ಹೇಳಲಿಕ್ಕಿದೆ. ಬನ್ನಿ ಎಲ್ಲರೂ. ಒಟ್ಟಿಗೆ ಕುಳಿತು ಕೇಳಬೇಕು. ತಪ್ಪಿಸಬೇಡಿ ಖಂಡಿತ'– ಅಂತ ಪ್ರತಿಯೊಬ್ಬರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಕರೆದಳು(658)– ಎಂದು ಪ್ರತ್ಯಕ್ಷ ಭಾಷೆಯಲ್ಲಿ ಹೇಳಲಾಗಿದೆ. ನಂತರ ನೇರ ಪ್ರತ್ಯಕ್ಷ ಭಾಷೆಯಲ್ಲಿ,

**'ಮಧ್ಯೆ ಯಾರೂ ಮಾತಾಡಬಾರದು, ಹ್ಞ?'(658)**

ಎಂದು ಆರುಂಧತಿಯ ಮಾತುಗಳನ್ನು ನೀಡಲಾಗಿದೆ. ನಂತರದ ಕತೆಯನ್ನು ಆರುಂಧತಿಯೇ ನಿರೂಪಕಿಯಾಗಿ ಇತರರಿಗೂ ನಮಗೂ ಹೇಳುತ್ತಾರೆ. ಈ ಆರುಂಧತಿಯ ಕತೆಯಲ್ಲಿ ಬರುವ ಎರಡು ಮುಖ್ಯ ಪಾತ್ರಗಳು ಅಶ್ನಾರ್ಣ ಭಟ್ಟರು ಮತ್ತು ಲಕ್ಷ್ಮಮ್ಮ. ಆದರೆ ಅಶ್ನಾರ್ಣ ಭಟ್ಟರು ಬೇರೆ ಬೇರೆ ಸಂದರ್ಭದಲ್ಲಿ ಆಡಿದ ಮಾತುಗಳನ್ನು ಕತೆ ನಮ್ಮ ಮುಂದಿಡುತ್ತದೆ. ಈ ಮಾತುಗಳನ್ನು ನಮ್ಮ ಮುಂದಿಡುವುದರಲ್ಲಿ ಕತೆ ಸಾಕಷ್ಟು ಸಂಕೀರ್ಣವಾದ ಆಯ್ಕೆಗಳನ್ನು ಮಾಡಿಕೊಳ್ಳುತ್ತದೆ.

ಅಶ್ನಾರ್ಣ ಭಟ್ಟರ ಬಗ್ಗೆ ಬರುವ ಕತೆ ಆರುಂಧತಿ ಹೇಳುವ ಹಾಗೆ ಮೇಲು ನೋಟಕ್ಕೆ ಕಾಣುತ್ತದೆ. ಆದರೆ ಆ ಕತೆಯಲ್ಲಿ ಬರುವ ಕೆಲವು ವಾಕ್ಯಗಳನ್ನು ನೋಡಿದರೆ ಅಶ್ನಾರ್ಣ ಭಟ್ಟರ ಕತೆಯನ್ನು ನಿರೂಪಿಸುವ ದೃಷ್ಟಿಕೋನ ಬಹಳ ಸಂಕೀರ್ಣವಾದುದು ಎಂದು ಗೊತ್ತಾಗುತ್ತದೆ. ಈ ಕೆಳಗಿನ ವಾಕ್ಯಗಳನ್ನು ನೋಡಿ:

**"ಬಹಳ ಹಿಂದೆ ಯಾರೋ ಒಬ್ಬರು, ಹೆಸರು ಮರೆತುಹೋಗಿದೆ ಈಗ, ಬ್ರಹ್ಮಚಾರಿ ಅಂತ ಅಷ್ಟು ನೆನಪಿದೆ, ಉತ್ತರ ಭಾರತದ ಕಡೆ ಸಂಚಾರ ಹೊರಟಾಗ ಊರುಬದಿಯ ಅಡುಗೆ ಮಾಡುವವರೇ ಬೇಕು ಅಂತ ವಿಚಾರಿಸುತ್ತಿದ್ದರಂತೆ. ಅಶ್ನಾರ್ಣ ಭಟ್ಟರ ತಂದೆ ಸಣ್ಣಪ್ಪ ಭಟ್ಟರು ಮಗನನ್ನು ಆತನ ಜೊತೆ ಕಳಿಸಿಕೊಟ್ಟರಂತೆ. ಉತ್ತರ ಭಾರತ ಅಂದರೇನು ಆಗ, ಫಾರಿನ್ನೇ. ಕಳಿಸುವಾಗ ತಾಯಿ ಕಾತ್ಯಾಯಿನಿಯಮ್ಮ ಮೂರ್ಛೆ ಹೋಗುವಷ್ಟು ಅತ್ತರಂತೆ.**

**ಇದ್ದಾರೆ ಈಗಲೂ, ಶತಾಯುಷಿ. ಹೋಗಿ ಕೇಳಿ ಬೇಕಾದರೆ." (661)**

ಇಲ್ಲಿ ಬರುವ ಅಂತೆ ಅನ್ನುವ ಪದದ ಪುನರಾವರ್ತನೆಯನ್ನು ಗಮನಿಸಿ. ಇದು ಒಟ್ಟಾರೆಯಾಗಿ ಎಲ್ಲರಿಗೂ ಗೊತ್ತಿರುವ ಕತೆ, ಯಾರೊಬ್ಬರಿಗೂ ನಿರ್ದಿಷ್ಟವಾಗಿ ತಿಳಿದಿರುವುದಲ್ಲ ಎಂಬಂತೆ ಇದೆ. ಹಾಗೆಯೇ 'ಇದ್ದಾರೆ ಈಗಲೂ, ಶತಾಯುಷಿ. ಹೋಗಿ ಕೇಳಿ ಬೇಕಾದರೆ' ಎಂದು ಆರುಂಧತಿ ಹೇಳುವುದು ಸಾಧ್ಯವಿಲ್ಲ. ಯಾಕೆಂದರೆ ಆರುಂಧತಿ ಈಗ ತಾನೆ ಊರಿಗೆ ಬಂದವಳು. ಹಾಗೆಯೇ

'ಹಾಗೆ ಮದುವೆಯಾಗಿ ಹೋದವರು ಮರಳಿ ಬಂದದ್ದು ಮಾತ್ರ, ಒಬ್ಬರೇ.

**ಸ್ವಾತಂತ್ರ್ಯ ಸಿಕ್ಕಿ ಎರಡು ವರ್ಷ ಕಳೆದ ಮೇಲೆ.' (661)**

ಈ ಮಾತುಗಳನ್ನು ಸಾಕಷ್ಟು ದೊಡ್ಡವರೇ– ಆರುಂಧತಿಗಿಂತ ಸಾಕಷ್ಟು ದೊಡ್ಡವರೇ ಹೇಳಲು ಸಾಧ್ಯ. ಆದರೆ ಈ ಕೆಳಗಿನ ಮಾತುಗಳನ್ನು ಗಮನಿಸಿ:

**'ನಮಗವರು ಕೇವಲ ಅಡುಗೆ ಭಟ್ಟರೆ? ಛೆಛೆ, ಅಜ್ಜನಂತಿದ್ದರಲ್ಲ.' (662)**

ಈ ಮಾತುಗಳನ್ನು ಆರುಂಧತಿಯ ಸಮಕಾಲೀನರು ಹೇಳಬಹುದು. ಅಂದರೆ ಅಸ್ನಾರ್ಣ ಭಟ್ಟರ ಕತೆಯನ್ನು ಒಂದು ನಿರ್ದಿಷ್ಟ ದೃಷ್ಟಿಕೋನದಿಂದ ಹೇಳಲಾಗಿಲ್ಲ. ಅವರ ಕತೆ ಒಟ್ಟಾರೆಯಾಗಿ ಇಡೀ ಊರಿನ ಜನರ ನೆನಪಿನೊಳಗಿಂದ ಬಂದ ಹಾಗಿದೆ. ಹಾಗಾಗಿ ಭಟ್ಟರ ಕತೆಯನ್ನು ಮತ್ತು ಭಟ್ಟರು ಹೇಳುವುದನ್ನು ನಮ್ಮ ಮುಂದಿಡುವುದು ಒಬ್ಬ ನಿರೂಪಕ ಅಲ್ಲ.

ಈಗ ಈ ರೀತಿಯ ನಿರೂಪಣೆ ಭಟ್ಟರ ಮಾತುಗಳನ್ನು ಹೇಗೆ ನಮ್ಮ ಮುಂದಿಡುತ್ತದೆ ಎಂದು ನೋಡೋಣ.

**ಇಷ್ಟು ದಿನ ತನಗೆ ಪರದೇಶಿ ಯೋಗವಲ್ಲವೆ? ಇಲ್ಲವಾದರೆ ಊರು ಬಿಟ್ಟು ಅಷ್ಟು ದೂರ ಸಂಸಾರ ಹೂಡುವ ಅಗತ್ಯ ಇತ್ತೆ ತನಗೆ? ಈಗ ಸತ್ಯನಾಶವಾಗಿ ವಾಪಾಸು ಬಂದ ಹಾಗಾಯಿತಲ್ಲ ಅಂತ ಒಂದು ಕೊರಗುತ್ತಿದ್ದರು ಅಪ್ಪಿಷ್ಟಲ್ಲ... (661)**

ಈ ಮಾತುಗಳು ಪರೋಕ್ಷ ಭಾಷೆಯಲ್ಲಿ ಇದ್ದರೂ, ನಿರೂಪಕ ಇಲ್ಲಿ ಅಷ್ಟು ಎದ್ದು ಕಾಣುತ್ತಿಲ್ಲ ಅನ್ನುವುದನ್ನು ಗಮನಿಸಿ. ಹಾಗೆಯೇ 'ಅವರಿಗೆ' ಅನ್ನುವ ಬದಲು 'ತನಗೆ' ಎಂಬ ಪದದ ಬಳಕೆಯನ್ನೂ ಗಮನಿಸಿ. ಈ ಕೆಳಗಿನ ವಾಕ್ಯಗಳಲ್ಲಿ ನಿರೂಪಕ ಪ್ರಾರಂಭದಲ್ಲಿ ಕಾಣುತ್ತಿದ್ದು (ತಾನೇ ವಹಿಸಿಕೊಂಡಿದ್ದರು) ನಂತರ 'ನಗುವರು' ಅನ್ನುವ ಪದದವರೆಗೆ ಭಟ್ಟರೇ ಹೇಳಿದ ಹಾಗೆ ಇದೆ. ಹಾಗಾಗಿ ಈ ಕೆಳಗಿನ ವಾಕ್ಯಗಳು ಮುಕ್ತ ಪರೋಕ್ಷ ಭಾಷೆಯಲ್ಲಿ ಇವೆ ಅನ್ನಬಹುದು.

**ತಂದೆಯೂ ತೀರಿಕೊಂಡು ಅವರ ಖಾಯಂ ಮನೆಗಳ ವಿಶೇಷಗಟ್ಟಲೆ ಊಟದ ಜವಾಬ್ದಾರಿಯನ್ನೆಲ್ಲ ತಾನೇ ವಹಿಸಿಕೊಂಡಿದ್ದರು. ಕಾಶಿಯಲ್ಲಿ ಏನಾದರೂ ಬಿಟ್ಟುಬರಬೇಕಲ್ಲವೆ, ತಾನು ಪೌರೋಹಿತ್ಯವನ್ನು ಬಿಟ್ಟು ಬಂದೆ. ಇಷ್ಟಕ್ಕೂ ಪೌರೋಹಿತ್ಯವೇನು ಕಷ್ಟದ್ದಲ್ಲ, ಎರಡು ಗಣೇಶಾಯ ನಮಃ, ಶಿವಾಯ ನಮಃ, ಪ್ರದ್ಯುಮ್ನಾಯ ನಮಃ ಅಂತ ಜೋರಾಗಿ ಹೇಳಲು ಬಂದರೆ ಬೇಕಾದಷ್ಟಾಯಿತು. ಮತ್ತೆಲ್ಲ ಬಾಯೊಳಗೇ ಮಣಮಣ. ತಾನು ಸುಧಾರಿಸಿದೆನಲ್ಲ ಆ ಕೆಲಸವನ್ನೂ–ನಗುವರು. (661)**

ಇಲ್ಲಿ ಕೊನೆಯಲ್ಲಿ 'ನಗುವರು' ಅನ್ನುವ ಪದ ಮತ್ತು 'ತಾನು' ಅನ್ನುವ ಪದ ಬಿಟ್ಟರೆ ಭಟ್ಟರೇ ನಿರೂಪಣೆ ಮಾಡಿರುವಂತಿದೆ.

ಈ ಕೆಳಗಿನ ಸಂಭಾಷಣೆಯನ್ನು ಗಮನಿಸೋಣ:

**– ಭಟ್ಟರೇ, ನೀವು ಅಶ್ನಾರ್ಣ ಭಟ್ಟರು ಹೇಗೆ?**

'ಅದು ಮಗೂ, ಲಕ್ಷ್ಮೀನಾರಾಯಣ ಅಂತ ನನ್ನ ಅಪ್ಪಯ್ಯ ಅಷ್ಟು ಚಂದದ ಹೆಸರಿಟ್ಟರೂ ಯಾರೋ ನಾಲಗೆ ಹೊಡಕದವರು ಅಪ್ನಾರ್ಣ ಮಾಡಿದರು. ಅದೇ ಬಿದ್ದು ಹೋಯ್ತು'

ಭಟ್ಟರೆ, ನಿಮಗೆ ಸಮೋಸ ಗೊತ್ತುಂಟ?

'ಹೋ, ಸಮೋಸಾ ಅಷ್ಟೇ ಅಲ್ಲ, ಮೋಸಾ ಸಾ ಗೊತ್ತು ...'

ಹಾಗಾದರೆ ಕಟ್ಲೆಟ್?

'ಅದಕ್ಕೇನು, ಕಟ್ಟಿದರೆ ಸರಿ ಬಿಟ್ಟರೆ ಸರಿ. ನೀನು ತಿನ್ನಬೇಕಾ? ಇವತ್ತು ಸಾಯಂಕಾಲವೇ ಮಾಡುವ. ಈಗ ಇಕ, ಇದೊಂದು ಕೆಲಸ ಮುಗಿಯಲಿ'.

ಭಟ್ಟರೆ, ಸೀತೆಯನ್ನು ರಾಮ ಯಾಕೆ ಕಾಡಿಗೆ ಕಳಿಸಿದ?

'ಅದೂ... ಯಾಕೆಂತ ಹೇಳುವುದಪ್ಪಾ... ಕ್ರೌಂಚಪಕ್ಷಿ ಸತ್ತ ಮೇಲೆ ಎಲ್ಲ ಅಷ್ಟೇ ಮಗೂ'

ತಪ್ಪಲ್ಲವೆ ಅದು?

'ತಪ್ಪೆಂದರೆ ತಪ್ಪು ಸರಿಯೆಂದರೆ ಸರಿ'.

ಹಾಗಲ್ಲ. ತಪ್ಪೋ ಸರಿಯೋ ಎರಡರಲ್ಲೊಂದು ಹೇಳಿ.

'ಶ್ರೀ ಹರೀ ನಾರಾ...ಯಣ ಗೋವಿಂದಾ... ನಾನು ತಪ್ಪು ಅಂದೆ ಅಂತಿಟ್ಟುಕೋ. ಶ್ರೀರಾಮಚಂದ್ರ ಸೀತಾಮಾತೆಯನ್ನು ವಾಪಾಸು ಕರೆಯುತ್ತಾನೋ, ಅವಳು ಬರುತ್ತಾಳೋ?'

ನೀವು ಸರಿ ಅಂದ ಹಾಗೆ ಇದು. ಹ್ಞೂ! ಯಂತ ಭಟ್ಟರೆ! (662)

ಇಲ್ಲಿ ಪ್ರಶ್ನೆಗಳು ಮುಕ್ತ ಪರೋಕ್ಷ ಭಾಷೆಯಲ್ಲಿ ಇವೆ. ಇಲ್ಲಿ ಪ್ರಶ್ನೆಗಳನ್ನು ಯಾರು ಕೇಳುತ್ತಿದಾರೆ ಅನ್ನುವುದನ್ನೂ ಹೇಳಲಾಗಿಲ್ಲ. ಇಡೀ ಒಂದು ಊರೇ ಭಟ್ಟರಿಗೆ ಪ್ರಶ್ನೆ ಕೇಳಿದ ಹಾಗೆ ಇದೆ. ಆದರೆ ಭಟ್ಟರ ಉತ್ತರಗಳು ಪ್ರತ್ಯಕ್ಷ ಭಾಷೆಯಲ್ಲಿ ಇವೆ. ಪ್ರಶ್ನೆ ಕೇಳುತ್ತಿರುವವರು ಒಬ್ಬ ವ್ಯಕ್ತಿಯಲ್ಲ, ಒಂದು ಸಮೂಹವೇ ಭಟ್ಟರಿಗೆ ಪ್ರಶ್ನೆ ಕೇಳುತ್ತಿದೆ. ಭಟ್ಟರು ಇಡೀ ಸಮೂಹಕ್ಕೆ ಉತ್ತರ ಕೊಡುತ್ತಿದ್ದಾರೆ. ಹಾಗೆಯೇ ಈ ಪ್ರಶ್ನೆ ಉತ್ತರಗಳ ಸರವಾಲೆಯಲ್ಲಿ ನಿರೂಪಕ ಮಾಯವಾಗಿದ್ದಾನೆಂಬುದನ್ನು ಗಮನಿಸಿ. ಆದರೆ ಗಾಂಧೀಜಿಯವರ ಬಗ್ಗೆ ಭಟ್ಟರು ಮಾತನಾಡುವಾಗ ಅದನ್ನು ಪ್ರತ್ಯಕ್ಷ ಭಾಷೆಯಲ್ಲಿ ನೀಡುವುದಲ್ಲದೇ ನಿರೂಪಕನ ವಿವರಣೆಗಳೂ ಸೇರಿಕೊಂಡಿವೆ.

'ಗಾಂಧೀಜಿಯವರ ಭಾಷಣ ಇದೆ ಕಿವಿಯಾರೆ ಕೇಳಿದ್ದೆ ಗೊತ್ತೆ ಮಕ್ಕಳೆ? ಎಂತಹ ಮನುಷ್ಯ ಏನು ಕತೆ! ನೋಡಲಿಕ್ಕೆ ಮಾತ್ರ ನಮ್ಮ ಹಾಗೇ. ನಮ್ಮ ಹಾಗೇ. ನಮ್ಮ ಹಾಗೇ ಉಡುಗೆ ತೊಡುಗೆ ನಡಿಗೆ ಎಲ್ಲ. ಕೋಲು ತೆಗೆದು ಆ ಕೈಗೆ ಒಂದು ಸೌಟು ಕೊಟ್ಟು ಚಿತ್ರ ಬಿಡಿಸಿ ನೋಡಿ ಬೇಕಾದರೆ. ಅಡುಗೆಭಟ್ಟರೇ, ಥೇಟ! ಅಲ್ಲ, ಒಂದು ಲೆಕ್ಕದಲ್ಲಿ ಗಾಂಧೀಜಿ ನಮ್ಮ ದೇಶದ ದೊಡ್ಡ ಅಡುಗೆಭಟ್ಟ. ಯಾಕೆ ಕೇಳಿ' ಎನ್ನುತ್ತ ಗಾಂಧೀಜಿ ಅವರು ಅಡುಗೆ ಊಟ ಉಪಾಹಾರ ಪಥ್ಯದ ಕುರಿತು ಆಡಿದ ಮಾತುಗಳೆಂದು ಉದ್ಧರಿಸಿ 'ಪ್ಲೇಟು ಈಚೆ ಬೀಳುವುದು ಆಚೆ ಬಿತ್ತು, ವಾಗಾಗಿ

ಅವರು ಕೇವಲ ಅಷ್ಟಕ್ಕೇ ನಿಲ್ಲದೆ ಮಹಾತ್ಮರಾದರು'- ಸಾರಿನಪುಡಿಗೆ ಹುರಿಯುತ್ತ, ತರಕಾರಿ ಹೆಚ್ಚುತ್ತ, ಅಕ್ಕಿ ತೊಳೆಯುತ್ತ ಪಾಕ ಕುದಿಸುತ್ತ ಮಹಾತ್ಮನನ್ನು ತನಗೆ ಕಂಡ ಪಾತ್ರೆಯಲ್ಲಿ ಹಾಕಿ ಮಗುಚುವರು. (662)

ಇಲ್ಲಿ 'ಎನ್ನುತ್ತ ಗಾಂಧೀಜಿ ಅವರು ಅಡುಗೆ ಊಟ ಉಪಾಹಾರ ಪಥ್ಯದ ಕುರಿತು ಆಡಿದ ಮಾತುಗಳೆಂದು ಉದ್ಧರಿಸಿ' ಮತ್ತು 'ಸಾರಿನಪುಡಿಗೆ ಹುರಿಯುತ್ತ, ತರಕಾರಿ ಹೆಚ್ಚುತ್ತ, ಅಕ್ಕಿ ತೊಳೆಯುತ್ತ ಪಾಕ ಕುದಿಸುತ್ತ ಮಹಾತ್ಮನನ್ನು ತನಗೆ ಕಂಡ ಪಾತ್ರೆಯಲ್ಲಿ ಹಾಕಿ ಮಗುಚುವರು' ಎನ್ನುವಾಗ ನಿರೂಪಕನ ಇರುವಿಕೆ ಕಾಣುತ್ತದೆ.

ಮತ್ತೆ ನಂತರ ಭಟ್ಟರು ತಮ್ಮ ಹಿಂದಿನ ಜೀವನದ ಬಗ್ಗೆ ಮಾತನಾಡಲಾರಂಭಿಸುತ್ತಾರೆ.

– ವಿಭಜನೆಯ ಗಲಭೆ ದೊಂಬಿಗಳನ್ನು ಮೊಹಲ್ಲಾದಲ್ಲಿ ತಾನು ಪ್ರತ್ಯಕ್ಷ ಕಂಡು ಅನುಭವಿಸಿದವನಲ್ಲವೆ. ಇಲ್ಲವಾದರೆ ತನಗೂ ಅವು ಉಳಿದೆಲ್ಲ ಸುದ್ದಿ ಸಮಾಚಾರಗಳಂತೆ ಪೇಪರಿನಲ್ಲಿ ಕೇಳುವ ಕಾಣುವ ಎಲ್ಲಿಯೋ ನಡೆದ ಗಲಾಟೆ ಮಾತ್ರವಾಗಿಯೇ ಉಳಿಯುತ್ತಿತ್ತೇನೋ. ಎಷ್ಟು ಬೆಚ್ಚಗೆ ಇದ್ದೆ ತಾನು. ಪೌರೋಹಿತ್ಯ ಅಡುಗೆ ಹೋಟೆಲು ಅಂತ ಹೆಂಡತಿಯೊಂದಿಗೆ ಒಪ್ಪವಾಗಿ ಸಂಸಾರ ಮಾಡಿಕೊಂಡು. ಇವತ್ತಿನ ದಿನ ಮರ್ಯಾದೆಯಲ್ಲಿ ಕಳೆಯಿತು, ದೇವರೇ, ನಾಳಿನ ದಿನವೂ ನಿನ್ನದೇ ಹೊಣೆ ಎಂದು ದೇವರ ಪಟಕ್ಕೆ ಎರಡು ಹೂಗು ಏರಿಸುತ್ತ. ಎಲ್ಲರೂ ಸ್ನೇಹಿತರೇ, ಎಲ್ಲರೂ ಭಟ್‌ಜೀ ಏಕ್‌ಚಾಯ್, ಭಟ್‌ಜೀ ಏಕ್ ದೋಸಾ, ಪೂರೀ, ರೋಟೀ, ಸಬ್ಜೀ, ಬಾಜೀ, ಭಟ್‌ಜೀ ಎನ್ನುತ್ತ ಪಟ್ಟಾಂಗ ಹೊಡೆದು ತಿಂದು ಕುಡಿದು ಹೋಗುವವರೇ... ಅತ್ತ ಇತ್ತ ಹರಡುತ್ತಿದ್ದ ಗಲಭೆಗಳ ಸಮಾಚಾರವನ್ನಂತೂ ಎಷ್ಟು ಸಲ ಚರ್ಚೆಮಾಡುತ್ತಿದ್ದೆವೋ. ಗಿರಾಕಿಗಳಿಗಂತೂ ಮಾತಾಡಲು ಅದು ಬಿಟ್ಟು ಬೇರೆ ಇಲ್ಲ. ಆದರೆ ಜ್ವಾಲೆ ತಮ್ಮ ಮೊಹಲ್ಲಾದಲ್ಲಿಯೂ ಹಬ್ಬಿ ಅಷ್ಟು ಶೀಘ್ರ ಸ್ವಾಹಾ ಮಾಡಿಬಿಡಬಹುದು ಅಂತ ಹನಿ ಸಂದೇಹ ಕೂಡಾ ಇರಲಿಲ್ಲವಲ್ಲ... ಯಾ ಅಲ್ಲಾಹ್... ನಾರಾಯಣಾ... (ನಮ್ಮನ್ನು ನಗಿಸಲೋ ತಾನು ಉತ್ತರ ದೇಶವಲ್ಲಿದ್ದು ಬಂದವ ಎಂಬ ಝಾಪು ತೋರಿಸಲೋ ವಾತಾವರಣವ ಬಿಗಿ ಸಡಿಲಿಸಿ ಉಸಿರು ತೆಗೆದುಕೊಳ್ಳಲೋ ಅಥವಾ ಸತ್ಯವಾಗಿಯೋ ಅಂತೂ ಭಟ್ಟರು ಆಗಾಗ ಈ ರೀತಿ ಉದ್ಗರಿಸುತ್ತಿದ್ದರು.) ಅಷ್ಟರವರೆಗೂ ಇವ ಹಿಂದೂ ಇವ ಮುಸ್ಲಿಮ ಇವ ಬೇರೆಯವ ಇವ ನಮ್ಮವ, ಈ ಬಡ ಬ್ರಾಹ್ಮಣ ದಕ್ಷಿಣ ದೇಶದವ– ಅಂತೇನೂ ಇರಲೇ ಇಲ್ಲವಲ್ಲ. ಅಷ್ಟು ಒಳ್ಳೇದರಲ್ಲಿ ಇರುವ ಹೊತ್ತಿಗೆ ಸಂದೇಹ ಹೇಗಾದರೂ ಬಂದೀತು? (663–664)

ಇಲ್ಲಿ ಕಂಸದಲ್ಲಿ ನಿರೂಪಕ ಇಣುಕಿದರೂ ಉಳಿದಂತೆ ಭಟ್ಟರೇ ಸಂಪೂರ್ಣವಾಗಿ ಮಾತನಾಡಿದಂತಿದೆ. ಈ ಕೆಳಗಿನ ವಾಕ್ಯಗಳನ್ನು ನೋಡಿದರೆ:

ಅನ್ನಪೂರ್ಣಮ್ಮನೇನು ತಡವರಿಸುವರೇ? 'ಹೋ. ಬರಲಿ ಬರಲಿ. ಅದೇನೋ ಹೇಳುತ್ತಾರಲ್ಲ, ಏನದು, ವೆಲ್ಲ್... ಕಮ್. (ಗಂಟಲಲ್ಲೇ ನಗೆ) ನಂಗೇನು? ಲಾಭ ನಿನ್ನ ಅಕ್ಷಾರ್ಣಿ ಭಟ್ಟರಿಗೇ. ಎರಡೆರಡು ಹೆಂಡಿರಾದರಲ್ಲ, ಸುಲ...ಭವಲ್ಲಿ.'

**ಆದರೆ ಭಟ್ಟರಿಗೆ ನಗೆ ಬರದ ಹೊತ್ತದು. ಅದೇ ಮೊಹಲ್ಲಾದ ಸ್ವಲ್ಪ ಹೆಂಗಸರು ಹಾಗೆ ಮಾಯವಾದರೆ! ಯಾರು ಯಾರನ್ನು ಯಾಕೆ ಯಾವ ಕೋಮಿನವರು... ಕೇಳುವ ಹಾಗೆಯೇ ಇಲ್ಲ. ಎಂದ ಮೇಲೆ ದುಃಖ ತನಗೊಬ್ಬನಿಗೇ ಅಲ್ಲ, ತನ್ನೊಡನೆ ಎಷ್ಟು ಮಂದಿ! ಎಂಥಾ ಸ್ಥಿತಿ ಎಂದರೆ ಗಾಂಧಿ ಇಲ್ಲ ನೆಹರೂ ಇಲ್ಲ, ಯಾ...ರಿಲ್ಲ, ಅಂಥಾ ಸ್ಥಿತಿ. (666)**

ಇಲ್ಲಿ ಅನ್ನಪೂರ್ಣಮ್ಮನವರ ಮಾತುಗಳನ್ನು ಪ್ರತ್ಯಕ್ಷ ಭಾಷೆಯಲ್ಲಿ ನೀಡಿದ್ದರೆ, ಭಟ್ಟರು ಹೇಳುವುದನ್ನು ಪರೋಕ್ಷ ಭಾಷೆಯಲ್ಲಿ ನೀಡಲಾಗಿದೆ. 'ಅದೇ ಮೋಹಲ್ಲಾದ' ಅನ್ನುವಲ್ಲಿಂದ ಪ್ರಾರಂಭವಾಗುವ ಭಟ್ಟರ ಮಾತುಗಳನ್ನು ಯಾವ ನಿರೂಪಕನೂ ವರದಿ ಮಾಡುವುದಿಲ್ಲ. ಭಟ್ಟರು ಇದನ್ನು ನೇರವಾಗಿ ನಮಗೇ ಹೇಳುತ್ತಿದ್ದಾರೆ. ಅಥವಾ ತಮಗೇ ತಾವೇ ಹೇಳಿಕೊಳ್ಳುತ್ತಿದ್ದಾರೆ.

ಒಟ್ಟಾರೆಯಾಗಿ ಈ ಕತೆಯಲ್ಲಿ ಅನ್ನಾರ್ಣ ಭಟ್ಟರ ಮಾತುಗಳನ್ನು ಪ್ರಥಮ ಪುರುಷ ನಿರೂಪಕ ಪ್ರತ್ಯಕ್ಷ ಭಾಷೆಯಲ್ಲಿ ಮತ್ತು ಮುಕ್ತ ಪರೋಕ್ಷ ಭಾಷೆಯಲ್ಲಿ ವ್ಯಕ್ತಪಡಿಸಿದ್ದಾನೆ. ಭಟ್ಟರು ಸಾರ್ವಜನಿಕ ವಿಷಯಗಳ ಬಗ್ಗೆ ಮಾತಾಡುವಾಗ (ಗಾಂಧೀಜಿಯ ಬಗ್ಗೆ ಮತ್ತು ರಾಮ, ಸೀತೆಯರ ಬಗ್ಗೆ) ಪ್ರತ್ಯಕ್ಷ ಭಾಷೆಯ ಬಳಕೆಯಾಗುತ್ತದೆ. ಆದರೆ ಭಟ್ಟರು ತಮ್ಮ ಅನುಭವಗಳ ಮಾತನಾಡುವಾಗ ಪರೋಕ್ಷ ಭಾಷೆಯ ಹಾಗೆ ಪ್ರಾರಂಭವಾದರೂ ನಂತರ ಭಟ್ಟರದೇ ಸ್ವಗತವಾಗಿ ಅದು ಮುಕ್ತ ಪರೋಕ್ಷ ಭಾಷೆಯಲ್ಲಿ ಹೇಳಲ್ಪಟ್ಟಿದೆ. ಮುಕ್ತ ಪರೋಕ್ಷ ಭಾಷೆಯ ಬಳಕೆ ನಿರೂಪಕನಿದ್ದೂ ನೇರವಾಗಿ ಭಟ್ಟರ ಮಾತುಗಳನ್ನು ನಮ್ಮ ಮುಂದಿಡುತ್ತದೆ. ಇದು ಭಟ್ಟರು ನೇರವಾಗಿ ನಮ್ಮೊಡನೆ ಮಾತನಾಡಿದ ಹಾಗೆ ಇದ್ದಂತೆಯೇ ಭಟ್ಟರು ತಮ್ಮೊಳಗೆ ತಾವೇ ಮಾತನಾಡಿದ ಭಾವನೆಯನ್ನೂ ನೀಡುತ್ತದೆ.

**(ಈ ಲೇಖನದಲ್ಲಿ ಬಳಸಿರುವ ಕ್ರೌಂಚಪಕ್ಷಿಗಳು ಕತೆಯ ಭಾಗಗಳನ್ನು ಅಲೆಗಳಲ್ಲಿ ಅಂತರಂಗ, ವೈದೇಹಿ ಕತೆಗಳು 1979-2004, ಅಕ್ಷರ ಪ್ರಕಾಶನ, ಹೆಗ್ಗೋಡು, 2006 ರಿಂದ ತೆಗೆದುಕೊಳ್ಳಲಾಗಿದೆ.)**



# ಅನನ್ಯ ಸಾಹಿತಿ ವೈದೇಹಿ

✦ ಭಾಗೀರಥಿ ಹೆಗಡೆ

ವೈದೇಹಿ! ಕನ್ನಡ ಸಾಹಿತ್ಯಾಸಕ್ತರಿಗೆ ಮಾತ್ರವಲ್ಲದೆ ಇಡೀ ದೇಶದ ಸಾಂಸ್ಕೃತಿಕ ಲೋಕಕ್ಕೇ ಒಂದು ಹೆಸರು. ಕನ್ನಡದ ಮಹಿಳಾ ಸಾಹಿತಿಗಳಲ್ಲಂತೂ ಅಗ್ರ ಸ್ಥಾನದಲ್ಲಿರುವವರು. ತಮ್ಮ ಅನನ್ಯ ಕತೆಗಾರಿಕೆಯಿಂದ ಇಡೀ ದೇಶದ ಗಮನ ಸೆಳೆದವರು. ಪ್ರೀತಿ–ಪ್ರೇಮ, ಸೀರೆ–ಒಡವೆಯ ಸುತ್ತಲೇ ಗಿರಕಿ ಹೊಡೆಯುತ್ತಿದ್ದ ಮಹಿಳಾ ಸಾಹಿತ್ಯವನ್ನು ಬದುಕಿನ ಸಂಕೀರ್ಣ ಅನುಭವಕ್ಕೆ ತೆರೆದು ನಿಲ್ಲಿಸಿದವರು. ತಮ್ಮದೇ ಆದ ಅತ್ಯಂತಿಕ ಸೃಜನ ಮಾದರಿಯನ್ನು ಕಟ್ಟಿಕೊಂಡವರು. ನಾನವರನ್ನು ಮೊಟ್ಟ ಮೊದಲಿಗೆ ಕಂಡಿದ್ದು ಬೆಂಗಳೂರಿನ ಒಂದು ಲೇಖಕಿಯರ ಸಮ್ಮೇಳನದಲ್ಲಿ(1988). ಸಣ್ಣ ಆಳ್ತನದ. ಪ್ರಖರ ನೋಟದ. ವಿಶಿಷ್ಟ ಪ್ರಭಾವ ಬೀರುವಂತಿದ್ದ ವ್ಯಕ್ತಿತ್ವದ ಅವರು ಆಗಲೇ ಕನ್ನಡ ಸಾರಸ್ವತ ಲೋಕದಲ್ಲಿ ಸಾಕಷ್ಟು ಹೆಸರುವಾಸಿಯಾಗಿದ್ದರು. ಅವರ ಬೇರೆ ಬೇರೆ ಕತೆಗಳು ನನ್ನಲ್ಲಿ ಅವರ ಬಗ್ಗೆ ವಿಶೇಷ ಅಭಿಮಾನವನ್ನು ಮೂಡಿಸಿದ್ದವು. ಹಾಗೇ ಅವರೊಂದಿಗಿನ ಚೂರುಪಾರು ಮಾತುಕತೆಯ ಮೂಲಕ ಅಲ್ಲೇ ಮುಖಪರಿಚಯವಾಗಿತ್ತು. ನಂತರ ಆಗೀಗ ಅಪರೂಪಕ್ಕೆ ನಮ್ಮಲ್ಲಿ ಪತ್ರ ವಿನಿಮಯ ನಡೆಯುತ್ತಿತ್ತು.

ಮುಂದೆ ಡಾ. ಶಿವರಾಮ ಕಾರಂತರು ಪರಿಸರ ಸಮಿತಿಯ ವತಿಯಿಂದ, ನಮ್ಮ ಕೆನರಾ ಕ್ಷೇತ್ರದಿಂದ, ಪಾರ್ಲಿಮೆಂಟಿಗೆ ಅಭ್ಯರ್ಥಿಯಾಗಿ ನಿಂತಾಗ ಅವರ ಪರವಾಗಿ ಚುನಾವಣಾ ಪ್ರಚಾರ ನಡೆಸಲು ವೈದೇಹಿಯವರು ಒಮ್ಮೆ ಶಿರಸಿಗೆ ಬಂದಿದ್ದರು. (ಬಹುಶ: 1990) ಆಗ ನಮ್ಮಲ್ಲೇ ಉಳಿದಿದ್ದರು. ನಮ್ಮ ಆದರ್ಶ ವನಿತಾ ಸಮಾಜದ ಬೆಳ್ಳಿಹಬ್ಬದ ಉದ್ಘಾಟನೆಗೂ ಅವರನ್ನು ಕರೆಸಿದ್ದೆವು. (2001ರಲ್ಲಿ) ಆನಂತರ ಶಿರಸಿಯ ಸಾಂತ್ವನ ವೇದಿಕೆಯ ದಶಮಾನೋತ್ಸವ ಸಮಾರಂಭಕ್ಕೆ, ಇನ್ನೊಮ್ಮೆ ಜಿ.ಎಚ್.ಶ್ರೀ.ಪ್ರಶಸ್ತಿ ಕಾರ್ಯಕ್ರಮಕ್ಕೆ ಹೀಗೆ ಅವರು ಶಿರಸಿಗೆ ಬಂದಾಗ ಮತ್ತು ಬೇರೆ ಬೇರೆ ಊರಿನ ಸಾಹಿತ್ಯಕ ಸಂದರ್ಭಗಳಲ್ಲಿ ಅವರನ್ನು ಭೆಟ್ಟಿಯಾದದ್ದಿದೆ. ಇಷ್ಟರ ಮಟ್ಟಿಗೆ ನಾವು ಪರಿಚಯಸ್ಥರು. ಆದರೆ ನನ್ನ ಮಿತಿಯೇನೆಂದರೆ ಯಾರೊಂದಿಗೇ ಆದರೂ ವಿಶೇಷ ಸಂಪರ್ಕವಿರಿಸಿಕೊಳ್ಳಲು ನನಗೆ ಸಾಧ್ಯವಾಗುವದಿಲ್ಲ. ಏನಾದರೂ ಕಾರಣವಿದ್ದರೆ ಮಾತ್ರ ಫೋನು ಮಾಡುವದು, ಇಲ್ಲೆಂದರೆ

ಇಲ್ಲ. ಆದರೆ ವೈದೇಹಿಯವರ ಬಗ್ಗೆ ಯಾವಾಗಲೂ ಒಂದು ವಿಶಿಷ್ಟ ಪ್ರೀತ್ಯಾದರ ನನ್ನಲ್ಲಿ ತುಂಬಿಕೊಂಡೇ ಇರುತ್ತದೆ. ಇದೀಗ ಅವರಿಗೆ ಗೌರವ ಗ್ರಂಥವನ್ನರ್ಪಿಸುತ್ತಿರುವ ವಿಷಯ ತಿಳಿದು ಅತ್ಯಂತ ಸಂತೋಷವೆನಿಸುತ್ತಿದೆ. ಈ ಸಂದರ್ಭದಲ್ಲಿ ನಾನವರನ್ನು ಪ್ರೀತಿಯಿಂದ ಅಭಿನಂದಿಸುತ್ತ, ಅವರಿಗೆ ಇನ್ನಷ್ಟು ಯಶಸ್ಸೂ, ಆಯುರಾರೋಗ್ಯಗಳೂ ದೊರೆಯಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತಿದ್ದೇನೆ.

ಇನ್ನು ಸಂಪಾದಕರ ಪ್ರಶ್ನೆಗಳ ಹಿನ್ನೆಲೆಯಲ್ಲಿ ವೈದೇಹಿಯವರ ಬರಹಗಳ ಕುರಿತು ಬರೆಯುವ ಮೊದಲು ಒಂದು ವಿಷಯ ಸ್ಪಷ್ಟಗೊಳಿಸುತ್ತಿದ್ದೇನೆ. ಏನೆಂದರೆ ನಾನು ನನ್ನ ಸಾಧ್ಯತೆಗೆ ಅನುಗುಣವಾಗಿ ಕತೆ–ಕವಿತೆ ಬರೆಯುವವಳೇ ಹೊರತೂ ವಿಮರ್ಶಕಿಯಲ್ಲ. ವಿಮರ್ಶೆಯ ಪರಿಭಾಷೆಯನ್ನು ಓದಿಕೊಂಡವಳೂ ಅಲ್ಲ. ಇಲ್ಲಿ ನಾನೊಬ್ಬ ಓದುಗಳಾಗಿ ಮಾತ್ರ ನನ್ನ ಅನಿಸಿಕೆಯನ್ನು ಬರೆಯುತ್ತಿದ್ದೇನೆ. ವೈದೇಹಿಯವರ ಕಥಾನಕವನ್ನು ನಾನು ಗ್ರಹಿಸಿದಂತೆ ಹೇಳುವದಾದರೆ ಅವರ ಬರವಣಿಗೆಯ ಶೈಲಿ ತುಂಬ ಸೂಕ್ಷ್ಮ ಸ್ವರೂಪದ್ದು. ಹತ್ತು ವಾಕ್ಯಗಳ ಕತೆಯನ್ನು ಅವರು ಒಂದು ವಾಕ್ಯದಲ್ಲಿ ಹೇಳುತ್ತಾರೆ. ಎಷ್ಟೋ ಸಂದರ್ಭಗಳಲ್ಲಿ ಕ್ರಿಯಾಪದ ಮೊಟಕುಗೊಳಿಸಿ ಮಾತಿನ ನಡುವಿನ ಮೌನಕ್ಕೆ ಒತ್ತು ಕೊಟ್ಟು ಅರ್ಥಸಾಧ್ಯತೆಯನ್ನು ವಿಸ್ತರಿಸುತ್ತಾರೆ. ಸದ್ಯ ವರ್ತಮಾನದಲ್ಲಿ ನಡೆಯುತ್ತಿರುವ ಘಟನೆಗಳು, ಅಲ್ಲಲ್ಲಿ ಒಂದೊಂದೇ ತೀಕ್ಷ್ಣ ಮಾತುಗಳು, ಚೂರು ಪಾರೇ ವ್ಯಕ್ತಿಗಳ ಮನೋವ್ಯಾಪಾರಗಳು, ಹೀಗೆ ಮುಟ್ಟಿಯೂ ಮುಟ್ಟದಂತೆ, ಹೇಳಿಯೂ ಹೇಳದಂತೆ ಹೇಳುವದು ಇವರ ಶೈಲಿ. ಆ ಕತೆ ಯಾರೊ ಹೇಳಿದ–ಕೇಳಿದ ಕತೆಯಾಗಿರದೆ ಓದುಗರ ಖಾಸಾ ಅನುಭವವೇ ಆಗುತ್ತ, ಈ ಬದುಕಿನ ಕಷ್ಟ ನಷ್ಟಗಳನ್ನು, ನೋವು ನಲಿವುಗಳನ್ನು, ಅಪರಿಹಾರ್ಯ ದಾರುಣತೆಯನ್ನೂ, ಹೆಣ್ಣು ಗಂಡು ಭೇದವಿಲ್ಲದೆ ಎಲ್ಲರೊಳಗಿರುವ ಕ್ಷುದ್ರತೆಯನ್ನೂ ನಮ್ಮೆದೆಗೆ ಮುಟ್ಟಿಸುತ್ತ ಹೋಗುವದು ಇವರ ಕಥಾನಕದ ಹಿರಿಮೆ. ಯಾವುದನ್ನೂ ವಾಚ್ಯವಾಗಿಸದೆ ಸೂಚ್ಯವಾಗಿ, ಓದುಗರೇ ಅರ್ಥೈಸಿಕೊಳ್ಳುವಂತೆ, ಓದುಗರನ್ನು ದಿನವೆಲ್ಲ ಕಾಡುವಂತೆ ಬರೆಯುವದು ಇವರ ವೈಶಿಷ್ಟ್ಯ. ಹೀಗಾಗಿ ಇವರ ಕತೆಗಳನ್ನು ಕವಿತೆಯಂತೆ ಎರಡು ಮೂರು ಬಾರಿ ಓದಿದಾಗ ಮಾತ್ರ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೆ ಇವರ ಸೃಜನಶೀಲ ತಹತಹಿಕೆ ಯಾವ ರೀತಿಯದೆಂದರೆ ಯಾವುದೊ ಒಂದು ಕತೆಯನ್ನು ಇವರು ಹದಿನೈದು ಬಾರಿ ತಿದ್ದಿ ಬರೆದರಂತೆ. (ಕಂಪ್ಯೂಟರ ಇಲ್ಲದ ಕಾಲದಲ್ಲಿ) ಇದು ಅವರ ಸಾಹಿತ್ಯಕ ಬದ್ಧತೆಯನ್ನು ಮತ್ತು ತಾಳ್ಮೆಯನ್ನು ತೋರಿಸುತ್ತದೆ. ಹೆಣ್ಣು ಜೀವದ ಸಂಕಟವನ್ನೇ ಹೆಚ್ಚಾಗಿ ಇವರು ಬರೆಯುವದಾದರೂ ಅದಕ್ಕೆ ಕಾರಣವಾಗಿ ಪುರುಷರನ್ನು ಮಾತ್ರ ದೂಷಿಸದೆ ಸಮಸ್ಯೆ ಸವಾಲುಗಳನ್ನು ಇಡಿಯಾಗಿ ನೋಡುವ ಅಂತಃಕರಣ ಇವುಗಳಲ್ಲಿರುವದರಿಂದಲೇ ವೈದೇಹಿಯವರ ಸಾಹಿತ್ಯ ಇಷ್ಟೊಂದು ಮಹತ್ವ ಪಡೆದುಕೊಂಡಿದೆ.

ಕನ್ನಡ ಕಥನ ಪರಂಪರೆಯಲ್ಲಿ ವೈದೇಹಿಯವರ ಮಹತ್ವವನ್ನು ಹೇಳುವ ಹೊತ್ತಿನಲ್ಲಿ ಮಾಸ್ತಿಯವರಿಂದ ಪ್ರಾರಂಭಗೊಂಡ ಹೊಸಗನ್ನಡ ಕಥಾಸಾಹಿತ್ಯವನ್ನು ಗಮನಿಸಬೇಕು. ಕಾದಂಬರಿಯೂ ಸೇರಿದಂತೆ ಪರಿಗಣಿಸುವದಾದರೆ ಪ್ರಮುಖ ಹೆಸರುಗಳ ಪಟ್ಟಿಯೇ ಪುಟಗಟ್ಟಲೆ ಆಗುವದರಿಂದ ಸಮಕಾಲೀನ ಕತೆಗಾರರನ್ನು ಮಾತ್ರ ಇಲ್ಲಿ ಚರ್ಚಿಸಬಹುದೆಂದು ಭಾವಿಸುತ್ತೇನೆ. ಕಾರಂತರು, ಕೊಡಗಿನ ಗೌರಮ್ಮ, ಅನಂತಮೂರ್ತಿ, ಲಂಕೇಶ, ತೇಜಸ್ವಿ, ಶಾಂತಿನಾಥ ದೇಸಾಯಿ, ತೇಜಸ್ವಿ, ಚಿತ್ತಾಲ, ತ್ರಿವೇಣಿ, ಎಂ.ಕೆ.ಇಂದಿರ, ಅನುಪಮಾ ನಿರಂಜನ, ಮುಂತಾದ ಪೂರ್ವ ಸೂರಿಗಳನ್ನು ನೆನೆಯುತ್ತಲೇ ವರ್ತಮಾನದಲ್ಲಿ ದೃಷ್ಟಿ ಹಾಯಿಸಬೇಕು. ಆದರೆ ಇವರೆಲ್ಲರಿಗಿಂತ ವಿಭಿನ್ನವಾಗಿಯೇ ವೈದೇಹಿಯವರ ಬರಹಗಳನ್ನು ನೋಡಬೇಕಾಗುತ್ತದೆ. ಯಾಕೆಂದರೆ ಮಹಿಳಾ ಅನನ್ಯತೆಯನ್ನು ಬಿಂಬಿಸುವಲ್ಲಿ ಇವರೆಲ್ಲರಿಗಿಂತ ವೈದೇಹಿಯವರು ಬೇರೆಯದೇ ಸ್ಥಾನದಲ್ಲಿ ನಿಲ್ಲುತ್ತಾರೆ. ಮಾತ್ರವಲ್ಲದೆ ತಮ್ಮದೇ ಆದ ವಿಶಿಷ್ಟ ಕಲಾತ್ಮಕ ಕತೆಗಾರಿಕೆಯಿಂದಾಗಿ ಗಮನ ಸೆಳೆಯುತ್ತಾರೆ. ನವ್ಯದ ಕಾಲದಲ್ಲೇ ಬರೆಯತೊಡಗಿದ್ದರೂ ಆ ಕುರಿತು ತಲೆ ಕೆಡಿಸಿಕೊಳ್ಳದೆ ತಮ್ಮದೇ ಆದ ದಾರಿಯಲ್ಲಿ ಸಾಗಿ ಬಂದವರು ವೈದೇಹಿ. ಸಮಕಾಲೀನರಾದ ವೀಣಾ ಶಾಂತೇಶ್ವರ, ಸಾರಾ ಅಬೂಬಕ್ಕರ, ಗೀತಾ ನಾಗಭೂಷಣ, ಮಿತ್ರಾ ವೆಂಕಟ್ರಾಜ ಮುಂತಾದವರಿಗಿಂತ ವಿಭಿನ್ನ ಸೂಕ್ಷ್ಮತೆಯೊಂದಿಗೆ ಬರೆಯುವವರು. ಚಿತ್ತಾಲರು ಮತ್ತು ದೇವನೂರು ಮಹಾದೇವ ಅವರ ಕಥನಕ್ರಮದಂತೆ ವೈದೇಹಿಯವರದ್ದೂ ಸಾಂದ್ರೀಕೃತ ಶೈಲಿ. ಚಿತ್ತಾಲರ ಬಹುತೇಕ ಕಥನಗಳಲ್ಲಿ ಸಾವು ಮತ್ತು ಭಯಗಳೇ ಪ್ರಮುಖ ಸ್ಥಾನ ಪಡೆದಿದ್ದರೆ ವೈದೇಹಿಯವರ ಕತೆಗಳು ಬದುಕಿನ ಸುಖ ದು:ಖಗಳ ಸಂಕೀರ್ಣತೆಯನ್ನು ಸಮರ್ಥವಾಗಿ ಚಿತ್ರಿಸುತ್ತವೆ. ಚಿತ್ತಾಲರ ಬರಹದಲ್ಲಿ ಮನುಷ್ಯನ ಅನಾಥ ಪ್ರಜ್ಞೆ ಹಾಸುಹೊಕ್ಕಾಗಿದ್ದರೆ ವೈದೇಹಿಯವರ ಪಾತ್ರಗಳಲ್ಲಿ ಎಂಥದೇ ದುರ್ಭರ ಸನ್ನಿವೇಶವನ್ನೂ ಧೈರ್ಯದಿಂದ ಎದುರಿಸುವ ಮನೋಬಲವಿದೆ. ಒಟ್ಟಿನಲ್ಲಿ ಇಬ್ಬರೂ ಮನುಷ್ಯರೊಳಗಿನ ಕೇಡನ್ನು ಆಳವಾಗಿ ಮತ್ತು ವ್ಯಂಗ್ಯವಾಗಿ ಕಂಡರಿಸುತ್ತಾರೆ. ಇವರ ಮುಂದಿನ ಪೀಳಿಗೆಯವರಾದ ಜಯಂತ ಕಾಯ್ಕಿಣಿ, ವಿವೇಕ ಶಾನಭಾಗ, ಸುನಂದಾ ಕಡಮೆ, ವಸುಧೇಂದ್ರ, ವಸ್ತಾರೆ ಮುಂತಾದವರು ಕೂಡ ಕನ್ನಡದ ಶ್ರೇಷ್ಠ ಕಥನ ವಾಹಿನಿಯನ್ನು ಮುಂದುವರಿಸುತ್ತಿರುವದು ಹೆಮ್ಮೆಯ ಸಂಗತಿ. ಒಟ್ಟಿನಲ್ಲಿ ಕನ್ನಡ ಕಥನ ಪರಂಪರೆಯಲ್ಲಿ ವೈದೇಹಿ ತಮ್ಮದೇ ಆದ ವಿಶಿಷ್ಟ ಸ್ಥಾನ ಪಡೆದಿದ್ದಾರೆ.

ನಾನು ವೈದೇಹಿಯವರ ಹಲವಾರು ಕತೆಗಳನ್ನು ಓದಿದ್ದೇನಾದರೂ ಅವುಗಳಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ನನ್ನನ್ನು ಕಾಡುತ್ತಿರುವದು ಅವರ 'ಹಕ್ಕಿಲ್ಲದವರು' ಕತೆ. ಯಾಕೆಂದರೆ ಇಲ್ಲಿ ಸಿರಿ ಅನ್ನುವವಳ ಅತ್ಯಂತ ದುರ್ಭರವಾದ ಸದ್ಯ ವಾಸ್ತವದ ಎದುರಿಗೆ ಪದ್ದು ಮಾವ ಮತ್ತು ಅವನ ಕುಟುಂಬದ ಶ್ರೀಮಂತಿಕೆಯ ಪ್ರದರ್ಶನ ಅತ್ಯಂತ ಕುರೂಪವಾಗಿ ಎದ್ದು ಕಾಣುತ್ತ ಈ ಜಗತ್ತನ್ನು ಯಾವತ್ತಿನಿಂದ ಕಾಡುತ್ತಿರುವ ಬಡವ ಬಲ್ಲಿದ ಭೇದಭಾವದ

ಕಗ್ಗಂಟನ್ನು ಆತ್ಯಂತಿಕವಾಗಿ ಚಿತ್ರಿಸಲಾಗಿದೆ. ಜೊತೆಗೆ ಜಮೀನು ಮನೆಯ ಸಾಂಪ್ರದಾಯಿಕ ಹಕ್ಕುದಾರನಾದ ಅವಳಣ್ಣ ಪೇಟೆಯಲ್ಲಿ ಬೇರೆ ಉದ್ಯೋಗದಲ್ಲಿರುತ್ತ ತೋಟದ ಉತ್ಪನ್ನ ತನಗಂತೂ ಬೇಡ, ನೀನೇ ನೋಡಿಕೊ ಎಂದು ಅವಳ ಕುಟುಂಬವನ್ನು ಮನೆಯಲ್ಲಿ ಕರೆ ತಂದು ಸ್ಥಾಪಿಸಿದವನು ತೆಂಗು ಕಂಗುಗಳೆಲ್ಲ ಊರ್ಜಿತಕ್ಕೆ ಬಂದ ಮೇಲೆ ಈಗ ತೋಟ ತನಗೇ ಬೇಕು ಅನ್ನುತ್ತಿದ್ದಾನೆ. ತೋಟದೊಂದಿಗೆ ಅನಿವಾರ್ಯವಾಗಿ ಬಂದ ಕಣ್ಣು ಕಾಣದ ತಾಯಿ, ಹುಚ್ಚಿ ತಂಗಿಯರ ಆರೈಕೆಯೊಂದಿಗೆ, ದನಕರು, ಆಳು ಕಾಳುಗಳೊಂದಿಗೆ, ಪಡಪೋಶಿ ಗಂಡ ಓಡಿ ಹೋಗಿದ್ದರಿಂದ ಇಬ್ಬರು ಮಕ್ಕಳ ಅತಂತ್ರ ಭವಿಷ್ಯದ ಚಿಂತೆಯೊಂದಿಗೆ ಏಗುತ್ತಿದ್ದ ಸಿರಿಯ ಮನೆಗೆ 'ದೊಡಕ'ನನ್ನು ನೋಡಲು ಏಕಾಏಕಿ ವಕ್ಕರಿಸಿ ಊಟ ಮಾಡಿಯೇ ಹೋಗುತ್ತೇವೆಂದ ನಾಲ್ಕು ಕಾರು ಜನರ ದಿಬ್ಬಣವನ್ನು ಆ ಬಡಪಾಯಿ ಸಿರಿ ಹೇಗೆ ಉಪಚರಿಸಬೇಕು? ತನ್ನ ಬದುಕಿನ ಅಸಹಾಯಕತೆ, ತಂಗಿ ರಾಧೆಯ ಹುಚ್ಚನ್ನು ಹಗಲೂ ರಾತ್ರಿ ನಿಭಾಯಿಸಬೇಕಾದ ದಾರುಣ ಸಂದರ್ಭ, ಮೈ ಮುರಿ ದುಡಿತ, ಮೇಲಿಂದ ಕುರುಡಿ ತಾಯಿಯ ಕುಟುಕು ಮಾತುಗಳು! ಒಲೆಯ ಮೇಲಿನ ಅನ್ನದಂತೆ ಅವಳೂ ಕೊತ ಕೊತ ಕುದಿಯುತ್ತ, ಆ ಕುದಿಯ ಒಂದೊಂದೇ ಅಗುಳನ್ನು ಮಾತಾಗಿಸಿ ಬಂದವರ ಮೇಲೆ ಒಗೆಯುತ್ತ ಅಂತೂ ಊಟಕ್ಕೆ ಬಡಿಸಿದ್ದು ಕತೆಯ ಸಾರಾಂಶ. ಆದರೆ ಕತೆ ತನ್ನ ಆತ್ಯಂತಿಕ ಆಶಯವನ್ನು ಮುಟ್ಟುವದು ಕತೆಯ ಕೊನೆಯಲ್ಲಿ ಮಧುರಾ ಆವಾಗಿನಿಂದ ಕಿರಿ ಕಿರಿ ಮಾಡುತ್ತಿದ್ದ ತನ್ನ ಮಗನಿಗೆ ರಾಧೆಯನ್ನು ತೋರಿಸಿ 'ಕಾಣು ಗುಮ್ಮ! ಬುಳ್ಳಿರೆ(ಅತ್ತರೆ) ಗುಮ್ಮ ಬರತ್, ನಿನ್ನ ಕೊಂಡೋತು. ಯೇ ಗುಮ್ಮ, ಬಾಯ...ಇಲ್ಲಿ ಬಾ...ಈ ಹುಡುಗನ್ನ ಕೊಂಡು ಹೋವು...' ಎಂಬಲ್ಲಿ. ಬಾಲ್ಯದಲ್ಲಿ ಒಟ್ಟಿಗೆ ಆಟವಾಡಿ ಬೆಳೆದವರೂ ಕೂಡ ದುಃಖಾರ್ತರನ್ನು ಹೇಗೆ ಮೆಟ್ಟಿ ತುಳಿಯುತ್ತಾರೆಂಬುದನ್ನು ವೈದೇಹಿ ಇಲ್ಲಿ ಅತ್ಯಂತ ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. ಜೊತೆಗೆ ನಮ್ಮ ಸಮಾಜದಲ್ಲಿ ವಿದ್ಯೆ, ಉದ್ಯೋಗ, ಮತ್ತು ಜಾಗತೀಕರಣದ ಭರಾಟೆಯಿಂದಾಗಿ ಉದ್ಭವಿಸಿದ ಹಲವಾರು ಸಮಸ್ಯೆ ಸವಾಲುಗಳನ್ನೂ, ಗ್ರಾಮಭಾರತದ ಅವನತಿಯನ್ನೂ, ತನ್ಮೂಲಕ ಇಡೀ ದೇಶದ ಅನ್ನದ ಸಮಸ್ಯೆ ಜಟಿಲವಾಗುತ್ತಿರುವದನ್ನೂ, ಜೊತೆಗೆ ಹೆಣ್ಣು ಮಕ್ಕಳ ಆಸ್ತಿ ಹಕ್ಕಿನ ಪ್ರಶ್ನೆಯನ್ನೂ ಇಲ್ಲಿ ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಒಟ್ಟಿನಲ್ಲಿ ನಾನೋದಿದ ಕತೆಗಳಲ್ಲೇ ಇದು ಅತ್ಯಂತ ಹ್ರದಯ ವಿದ್ರಾವಕ ಕತೆ.

ಹೀಗೆ ನನ್ನ ಮಿತಿಯಲ್ಲಿ ನಾನು ವೈದೇಹಿಯವರ ಕುರಿತು ಚರ್ಚಿಸಿದ್ದೇನೆ. ಅವರಿಗೂ, ಅವರ ಕುಟುಂಬಕ್ಕೂ ಈ ಲೋಕದ ಸಕಲ ಸನ್ಮಂಗಳಗಳೂ ದೊರೆಯಲೆಂದು ಹೃದಯಪೂರ್ವಕ ಹಾರೈಸುತ್ತಿದ್ದೇನೆ.



# ವೈದೇಹಿಯೆಂಬ ಕಥನ ಪ್ರತಿಭೆ

✦ ಡಾ. ಯು ಮಹೇಶ್ವರಿ

ಕಾಸರಗೋಡಿನವಳಾದ ನಾನು ಗಡಿಯಾಚೆಗೆ ನಡೆಯುವ ಸಭೆ ಸಮ್ಮೇಳನಗಳಲ್ಲಿ ಹಾಗೆ ಹೆಜ್ಜೆಯಿರಿಸುವ ಹೊತ್ತಿಗಾಗಲೇ ವೈದೇಹಿಯವರು ಪ್ರಸಿದ್ಧರಾಗಿದ್ದರು. ಅವರ ಕತೆಗಳನ್ನು ಓದಿ ಅಭಿಮಾನದ ಕಣ್ಣರಳಿಸಿ ದೂರದಿಂದ ನೋಡುತ್ತಿದ್ದ ನನ್ನನ್ನು ಅವರ ಸಮೀಪ ತಂದದ್ದು ಮಂಗಳೂರು ಕೇಂದ್ರವಾಗಿ ಕಾರ್ಯಾಚರಿಸುತ್ತಿರುವ ಲೇಖಕಿಯರ ಮತ್ತು ವಾಚಕಿಯರ 'ಕರಾವಳಿ' ಸಂಘಟನೆ. ಹಾಗೆ ಪರಿಚಯವಾದ ಅವರು ಆಗೀಗ ಆಡುತ್ತಿದ್ದ ಮೆಚ್ಚು ಮಾತುಗಳನ್ನು ಸಲಹಾಸುಡಿಗಳನ್ನು ಈಗಲೂ ಬೆಚ್ಚಗೆ ಕಾಪಿಟ್ಟುಕೊಂಡಿದ್ದೇನೆ. ಕತೆಗಳ ಮೂಲಕ ಅವರು ತೆರೆದಿಟ್ಟ ನನ್ನ ಅಮ್ಮಂದಿರೋ ಅತ್ತೆಯಂದಿರೋ ಅಕ್ಕಂದಿರೋ ಅನಿಸುವಂತಹ ಆಪ್ತವಾದ ಆ ಮಹಿಳಾಲೋಕ, ಅಂಕಣ ಬರಹಗಳಲ್ಲಿ ಹಾಗೂ ಕವಿತೆಗಳಲ್ಲಿ ಕೇಳಿಸಿದ ಆ ಮಹಿಳಾಧ್ವನಿ, ಅದರ ಹಾವಭಾವ ಕಾಕುಗಳೊಂದಿಗೆ ನನ್ನ ಮನಸೂರೆಗೊಂಡದ್ದು ಸುಳ್ಳಲ್ಲ. ಅವರ ಸರಳ ಉಡುಪುತೊಡುಪು, ವೇದಿಕೆಯಲ್ಲಿ ನಿಂತರೆ 'ಒಡಲನೂಲಿನಿಂದ' ಎಂಬಂತೆ ಹೊಮ್ಮುವ ಮಾತುಗಳು, ಆ ತಲೆಬಲೆತದ ಭಂಗಿ, 'ಭಾಷಣ'ವೆಂಬ ಅಪ್ಪಣೆಕೊಡಿಸುವ ಧಾಟಿ ಇರದೆ ಅಕ್ಕನಾಗಿ, ಕೆಲವೊಮ್ಮೆ ತರಾಟೆಗೆ ತೆಗೆದುಕೊಳ್ಳುವ ಅಥವಾ ಪ್ರೀತಿಯಿಂದ ತಿಳಿಹೇಳುವ ಆ ರೀತಿ ಇವುಗಳನ್ನೆಲ್ಲ ನಾನು ವಿಶೇಷವಾಗಿ ಗಮನಿಸುತ್ತಿದ್ದೆ.

ಒಮ್ಮೆ ಕಾಸರಗೋಡಿನಲ್ಲಿ ಯಕ್ಷಗಾನ ದಿಗ್ಗಜ ದಿ.ಶೇಣಿ ಗೋಪಾಲಕೃಷ್ಣ ಭಟ್ ಅವರ ಮನೆಯಲ್ಲಿ ಒಂದು ಸಾಹಿತ್ಯ ಅಭಿಯಾನ ಕಾರ್ಯಕ್ರಮವಿತ್ತು. ಅದನ್ನು ಆಯೋಜಿಸಿದವರು ಯಾರೆಂದು ನನಗೆ ನೆನಪಾಗುತ್ತಿಲ್ಲ. ಬೊಳುವಾರು ಮಹಮ್ಮದ್ ಕುಞ್ಞಿ, ನಾ.ದಾಮೋದರ ಶೆಟ್ಟಿ, ಮನೋಹರ ಪ್ರಸಾದ್ ಮುಂತಾದವರೆಲ್ಲ ಇದ್ದರು. ಅದರಲ್ಲಿ ನಾನು ನನ್ನದೊಂದು ಕವಿತೆ(ಹೂವಾಡಗಿತ್ತಿ ನೀಲಮ್ಮ) ಓದಿ ಮುಗಿಸಿದ ಬಳಿಕ ಬೊಳುವಾರರು ಮನೋಹರ ಪ್ರಸಾದ ಅವರ ಕಿವಿಯಲ್ಲಿ ಉಸುರಿದ 'ಇವರು ವೈದೇಹಿಯಂತಿದ್ದಾರಲ್ಲ' ಎಂಬ ಮಾತನ್ನು ಮನೋಹರಪ್ರಸಾದ್ ಅವರು ಗಟ್ಟಿಯಾಗಿ ಹೇಳಿದರು. ಆಗ ಉಳಿದವರು 'ಅವರ ತಂಗಿ' ಎನ್ನೋಣ ಎಂದರು. ಬಳಿಕ ಮಂಗಳೂರಿನ

ಸಾಹಿತ್ಯ ಸಮ್ಮೇಳನದಲ್ಲೂ ನಾನು ವೈದೇಹಿ ಎಂದು ಭಾವಿಸಿ ಗುಲ್ಬರ್ಗಾದ ಒಬ್ಬ ಲೇಖಕಿ ನನ್ನೊಡನೆ ಮಾತಿಗೆ ಶುರುಹಚ್ಚಿದ್ದರು. ಮೂಡುಬಿದಿರೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಹೋಟೆಲಿನ ಕೊಠಡಿಯಲ್ಲಿ ನಾನು ವೈದೇಹಿಯವರೊಂದಿಗೆ ರಾತ್ರಿ ತುಂಬಹೊತ್ತು ಸುಖದುಃಖ ಮಾತನಾಡುತ್ತ ಕಳೆದುದು ಒಂದು ಸ್ಮರಣೀಯ ನೆನಪು. ಕಾಲೇಜು-ಮನೆ ಎಂದು ಓಡಾಡುತ್ತಿದ್ದ ಹಳ್ಳಿಯವಳಾದ ನನಗೆ ಆ ಹೋಟೆಲಿನ ಆಧುನಿಕ ಸೌಕರ್ಯ ಹೊಸಬಗೆಯದಾಗಿದ್ದು ಒಂದು ಬಗೆಯ ಪರಕೀಯ ಭಾವವನ್ನು ಮೂಡಿಸಿತ್ತು. ಆದರೆ ವೈದೇಹಿಯವರು ನನ್ನನ್ನು ಮಾತಿಗೆಳೆದ ರೀತಿ, ಅಲ್ಲಿ ತೆರೆದುಕೊಂಡ ನಮ್ಮಿಬ್ಬರ ಬಾಲ್ಯ, ಅಕ್ಕಂದಿರ ಅಮ್ಮಂದಿರ ಹಾಡು-ಪಾಡುಗಳು ಆ ಪರಕೀಯ ಭಾವವನ್ನು ಮರೆಯಾಗಿಸಿದ್ದವು. ಮತ್ತೊಂದು ಬಾರಿ ಉಡುಪಿಯಲ್ಲಿ ನಡೆದ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಿದ ನಾನು ಅವರ ಆತ್ಮೀಯ ಆಹ್ವಾನಕ್ಕೆ ಓಗೊಟ್ಟು ಮಣಿಪಾಲದ 'ಇರುವಂತಿಗೆ'ಗೆ ಅಡಿಯಿಟ್ಟಿದ್ದೆ. ಅದೂ ಇದೂ ಮಾತನಾಡುತ್ತ ಕಾಸರಗೋಡಿನ ಕನ್ನಡದ ಒಡಲಸಂಕಟಕ್ಕೆ ಬಂದಾಗ ನಾನು ನನ್ನ ಅಮ್ಮ ಹೇಳುತ್ತಿದ್ದ 'ಹೋಗು ಎನ್ನದೆ ಹೊಗೆಯನಿಕ್ಕಿದರು' ಎಂಬ ಗಾದೆ ಮಾತನ್ನು ಉಲ್ಲೇಖಿಸಿ ನಮ್ಮ ಪರಿಸ್ಥಿತಿ ಕಡ್ಡಾಯ ಮಲಯಾಳ ಹೇರಿಕೆಯ ಹೊಗೆಯಿಂದ ಉಸಿರು ಕಟ್ಟುವಂತಾಗಿದೆ -ಎಂದೆ. ಅದೆಷ್ಟೋ ಶತಮಾನಗಳಿಂದ ದ.ಕ.ಜಿಲ್ಲೆಯ ಸೆರಗಾಗಿದ್ದು ಸಮಾನ ಭಾಷೆ ಸಂಸ್ಕೃತಿಗಳನ್ನು ಉಸಿರಾಡುತ್ತಿದ್ದ ಕಾಸರಗೋಡಿನ ಬಗ್ಗೆ ತುಂಬು ಮಮತೆಯಿರಿಸಿಕೊಂಡ ಅವರು ತಡಮಾಡದೆ ಆದಷ್ಟು ಮಾಹಿತಿಯನ್ನು ಸಂಗ್ರಹಿಸಿ ಆ ಗಾದೆಮಾತನ್ನೇ ಶೀರ್ಷಿಕೆಯಾಗಿರಿಸಿ ಕಾಸರಗೋಡಿನ ಸಮಸ್ಯೆಯ ಕುರಿತು ಪ್ರಜಾವಾಣಿಯಲ್ಲಿ ಒಂದು ಲೇಖನವನ್ನು ಬರೆದರು. ಆ ಬರಹ ಶುಷ್ಕ ವರದಿಯಾಗದೆ ಮಾಹಿತಿಯನ್ನೊಳಗೊಂಡು ಅಂತಃಕರಣದಿಂದ ಮನಸ್ಸನ್ನು ಮಿಡಿಯುವ ಹಾಗಿತ್ತು.

'ನನಗೆ ಕಾವ್ಯ ಗೊತ್ತಿಲ್ಲ ತಿಳಿಸಾರು ಗೊತ್ತು' ಎಂದು ಹೇಳುತ್ತ ಅಡುಗೆಮನೆಯ ರೂಪಕಗಳನ್ನು ಬಳಸಿ ತಿಳಿಸಾರನ್ನು ಸಮರ್ಥಿಸಿಕೊಳ್ಳುತ್ತ 'ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ ಹೇಳಿ' ಎಂದು ಪುರುಷಾಧಿಷ್ಠಿತ ವಿಮರ್ಶಕ ವಲಯವನ್ನು ಅಥವಾ ಅಕಾಡೆಮಿಕ್ ವಿಮರ್ಶಕರನ್ನು ಉದ್ದೇಶಿಸಿ ಸವಾಲು ಹಾಕುವುದು ವೈದೇಹಿಯವರದೇ ರೀತಿ. ನಾನು ಕುತೂಹಲದಿಂದ ಅವರ ಇತರ ಕವನಗಳನ್ನು ನೋಡಿದಾಗ ಅಚ್ಚರಿಯೆನಿಸಿತು. ಈ ಕವಯತ್ರಿ ಕಾವ್ಯಕ್ಕೆ ಪರ್ಯಾಯವಾಗಿ ಹಾಡು, ಪದ, ಗೀತೆ – ಇಂತಹ ಶಬ್ದಗಳನ್ನು ಬಳಸುತ್ತಾರೆ. ಉದಾಹರಣೆಗೆ ಸ್ವಯಂವರಗೀತೆ, ಸಂಸಾರಿಪದ, ಮಾಡುಹೊದೆಸುವ ಹಾಡು, ಶಿವನ ಮೀಸುವ ಹಾಡು–ಈ ಮುಂತಾದ ಶೀರ್ಷಿಕೆಗಳನ್ನು ಗಮನಿಸಿ. ಇದು ಜನಪದೀಯ ಪರಂಪರೆಯಲ್ಲಿ ವೈದೇಹಿ ಸ್ತ್ರೀ ಕಾವ್ಯಮೀಮಾಂಸೆಯನ್ನು ಕಟ್ಟುವ ಪರಿ. 'ಹಾಡುವುದೆಂದರೆ' ಎಂಬ ಶೀರ್ಷಿಕೆಯ ರಚನೆಯಲ್ಲಿ ಕೂಡ ಈ ಅಂಶ ಸ್ಪಷ್ಟವಾಗುತ್ತದೆ. 'ಹಾಡು ಹೇಳಲು ಏಕೆ ಶಬ್ದಾಲಂಕಾರ? ಹಾಡುವುದೆ ಪಕ್ಕಿ ರಾಗ ಪ್ರಸ್ತಾರದನುಸಾರ?' ಎಂಬ ಪ್ರಶ್ನೆಯೊಂದಿಗೆ ಆರಂಭವಾಗುವ ಕವಿತೆ ಮುಂದುವರಿದು 'ಭಾವಕೋಶವ ಒಡೆದು ಸ್ವರ ಹೊಮ್ಮಿದಾಗ

ಅದುವೆ ಹಾಡಾಗುವುದು ತನ್ನ ತನ್ನಂತೆ' ಎಂದು ಹೇಳುತ್ತ ನಮ್ಮ ಹಿರಿಯರ ಪಾಲಿಗೆ ದುಡಿಮೆಯ/ಕಾಯಕಶ್ರದ್ಧೆಯ ಅವಿಭಾಜ್ಯ ಅಂಗವಾಗಿ ಹಾಡುಹೊಮ್ಮಿದ ಸೋದಾಹರಣ ನಿರೂಪಣೆ ಇದೆ. 'ಹಾಡುಕಟ್ಟುವ ಬದಲು ಭತ್ತ ಕುಟ್ಟಿದರು/ಹಾಂ ಹ್ಞೂ ಹೈ ನಡುವೆ ವಿಜೃಂಭಿಸಿದರು. ಹಾಡಾಯಿತದುವೇ ಹೊದಲಿಸಂತೆ' ಎಂಬ ಉಪಮೆಯನ್ನು ಕೊಡುತ್ತಾರೆ. ಇಲ್ಲಿ ಉಲ್ಲೇಖಿಸಿದ ಕಾಯಕಗಳು ಪಾರಂಪರಿಕವಾಗಿ ಮಹಿಳೆಯರು ನಿರ್ವಹಿಸುವವುಗಳಾಗಿರುವುದರಿಂದ 'ನಮ್ಮ ಹಿರಿಯರು' ಎಂಬಲ್ಲಿ ನಿರ್ದಿಷ್ಟವಾಗಿ ಪೂರ್ವಿಕ ಸ್ತ್ರೀಕುಲವನ್ನೇ ಉದ್ದೇಶಿಸಿದ್ದಾರೆನ್ನುವುದು ಸ್ಪಷ್ಟ ಅಂತೆಯೇ ಇದಕ್ಕೆ ಪೂರಕವಾಗಿ ಮುಂದಿನ ಭಾಗದಲ್ಲಿ 'ಹಾಡಿಗಲ್ಲಿದೆ ಕೊರತೆ ನಮಗೆ ನಾರಿಯರಿಗೆ ಎನ್ನುತ್ತ ಹಾಡು ಮತ್ತು ನಾರಿಯರ ಸಮೀಕರಣ ನಡೆದಿದೆ. ಕವಯತ್ರಿ ಉದ್ದಕ್ಕೂ ಉದಾಹರಿಸುವುದು ನಮ್ಮ ಜನಪದ ಗೀತೆಗಳು ಸೃಷ್ಟಿಯಾದ ಸಂದರ್ಭಗಳನ್ನೇ. 'ಕಟ್ಟಲಾಗದು ಹಾಡನೆಂದಿಗೂ' ಎನ್ನುವ ಅವರು 'ಹೊಮ್ಮುವುದು' ಮತ್ತು 'ಕಟ್ಟುವುದು' ಇವುಗಳನ್ನು ಪ್ರತ್ಯೇಕಿಸಿ ಕಾವ್ಯರಚನೆಯ ಪ್ರಜ್ಞಾಪೂರ್ವಕ ವಿಧಿಯನ್ನು ಅಲ್ಲಗಳೆಯುತ್ತಾರೆ.

ಕಥನ ಪ್ರತಿಭೆಯಾಗಿ ವೈದೇಹಿಯವರನ್ನು ಗುರುತಿಸುವಾಗ ನನಗೆ ಜೇನ್ ಆಸ್ಟಿನ್ ನೆನಪಾಗುತ್ತಾಳೆ. ಆ ಭೌಗೋಳಿಕ ವಿವರಗಳು, ಆ ಆವರಣ, ಪಾತ್ರಗಳು -ಅವು ತನ್ನ ಕಣ್ಣೆದುರೇ ಕಂಡವು ಎಂಬಂತೆ ಮುಟ್ಟಿ ಮಾತನಾಡಿಸುವ ರೀತಿ ಅದು. 'ಇದು ತನ್ನ ಪರಿಧಿ' ಎನ್ನುವ ನಿಖರತೆ ಇದೆ ಅಲ್ಲಿ. 'ಜಾತ್ರೆ' ಎಂಬ ಶೀರ್ಷಿಕೆಯ ಸಂಕಲನವನ್ನೇ ನೋಡಿ. ಹೆಣ್ಣಿನ ಬದುಕಿನಲ್ಲಿ ಎದುರಾಗುವ ವಿಧಿನಿಷೇಧಗಳನ್ನು, ಕಟ್ಟಳೆ ರಿವಾಜುಗಳನ್ನು ಪ್ರಶ್ನಿಸುವ ಮನಸ್ಸು ಅಲ್ಲಿ ಇರುವಂತೆಯೇ ಅಂತಹ ಸ್ತ್ರೀ ಬದುಕಿನಲ್ಲೂ ಹೊಮ್ಮುವ ಸೌಂದರ್ಯ, ಆನಂದಗಳ ಬಗ್ಗೆ ಸ್ಪಂದಿಸುವ ಸೂಕ್ಷ್ಮತೆಯೂ ಇದೆ. ಕುಂದಗನ್ನಡದ ಸೊಗಡು ಜೀವಾಳವಾಗಿರುವ ಈ ಕೃತಿಯದು ಒಂದರ್ಥದಲ್ಲಿ ಸೀಮಿತ ಪ್ರಪಂಚ, ಸೀಮಿತ ಆವರಣ. ಆದರೆ ಆ ಸೀಮಿತ ಪ್ರಪಂಚವನ್ನು ಲೇಖಕಿ ಬಹಳ ಏಕಾಗ್ರತೆಯಿಂದ, ಪ್ರೀತಿಯಿಂದ ಅದರ ಪದರ ಪದರಗಳನ್ನು ಸ್ಪರ್ಶಿಸುತ್ತ, ಸ್ಪಂದಿಸುತ್ತ ಅನನ್ಯತೆಯನ್ನು ಮೆರೆದಿದ್ದಾರೆ ಅಂತೆಯೇ ಅದೊಂದು ಸ್ತ್ರೀಯಾತ್ಮಕತೆಯ ಸಮರ್ಥ ಅಭಿವ್ಯಕ್ತಿಯೂ ಆಗಿದೆ.

ಹಾಗೆ ನೋಡಿದರೆ ವೈದೇಹಿಯವರದು ಮೂಲತ: ಕಥನ ಪ್ರತಿಭೆ. ಅವರ ಬಹುಪಾಲು ಕವಿತೆಗಳಲ್ಲಿ ಕಥನ ತಂತ್ರವನ್ನು ಅನುಸರಿಸಿದ್ದಾರೆ. ಕಥನ, ಆ ಕಥನದೊಳಗೆ ನಾಟಕೀಯ ಅಂಶಗಳು, ಕೆಲವೊಮ್ಮೆ ರೆಟರಿಕಲ್ ಧಾಟಿಯ ಸಂಬೋಧನೆ (ಬೆಪ್ಪು ಕಾಪುರುಷರೇ, ಕಾವ್ಯದ ಕುರಿತು ದೊಡ್ಡಕೆ ತಿಳಿದವರೇ ಈ ಮಾದರಿಯವು)-ಇವೆಲ್ಲ ಅವರಿಗೆ ಇಷ್ಟವಾದವುಗಳು. ಬಿಂದು ಬಿಂದಿಗೆಯಲ್ಲಿನ ಮಟ್ಟಮಟ್ಟ ರಚನೆಗಳು ಸಮೇತ ಕಥನವನ್ನು ಒಳಗೊಂಡಿರುವುದನ್ನು ನೋಡಬಹುದು. ಘಟನೆಗಳ ಸರಣಿ, ಅವುಗಳನ್ನು ಸೂಚಿಸುವ

ಕ್ರಿಯಾಪದಗಳ ಸರಣಿ, ಅವು ಒಂದಕ್ಕೊಂದು ಸಹಭಾವಗಳನ್ನೂ ವಿರುದ್ಧಭಾವಗಳನ್ನೂ ಹೊಂದಿದ್ದು ವಿಶಿಷ್ಟ ಪರಿಣಾಮವನ್ನು ಬೀರುವುದು ಅವರದೇ ಶೈಲಿ.

ವೈದೇಹಿ ಕವಿತೆಗಳ ಭಾವಯಾನವೆಂದರೆ ಅದು ಅಬ್ಬರ ಆಕ್ರೋಶಗಳಿಲ್ಲದ ಶಬ್ದವಿಲಾಸ, ಅರ್ಥವಿಲಾಸ. ಅಲ್ಲಿ ಬೆರಗು ಬೆಡಗುಗಳಿರಬಹುದು; ಲೋಕೋಕ್ತಿ ಸೂಕ್ತಿಗಳಿರಬಹುದು; ತುಂಟನಗೆ ಛೇಡಿಸುವಿಕೆಗಳಿರಬಹುದು; ಏಕಾಂತದ ಮೆಲ್ಲುಲಿಗಳಿರಬಹುದು; ಜೀವನಾನುಭವದ ಸಾಂದ್ರ ಹೊಳಹುಗಳಿರಬಹುದು; ದೇಸೀ ಒರಿತನದ ಗಾಂಭೀರ್ಯವೂ ಕೂಡ. ಇವೆಲ್ಲವುಗಳ ಮೊತ್ತವೇ ವೈದೇಹಿ. ಕನ್ನಡ ಮಹಿಳಾಕಾವ್ಯದ ಪರಂಪರೆಯಲ್ಲಿ ವೈದೇಹಿಯವರ ಬೆನ್ನಿಗೆ ಬಿದ್ದ ತಂಗಿಯಂದಿರಾಗಿ ಲಲಿತಾ ಸಿದ್ಧಬಸವಯ್ಯ, ಸವಿತಾ ನಾಗಭೂಷಣ ಮುಂತಾದವರು ಇದ್ದಾರೆ. ಇವರ ಕವಿತೆಗಳ ದೇಸೀ ತತ್ವ ಕನ್ನಡ ಕಾವ್ಯವಾಹಿನಿಗೆ ನೀಡುತ್ತಿರುವ ಘಮ ಗಮನಾರ್ಹವಾದುದು.

ಮುಗಿಸುವ ಮುನ್ನ ಅವರ ಕ್ರೌಂಚಪಕ್ಷಿಗಳು ಸಂಗ್ರಹದ 'ನಟಿ' ಎಂಬ ಕತೆಯನ್ನು ಕುರಿತು ಬರೆಯಲೇಬೇಕಾಗಿದೆ. ಈ ಕತೆಯನ್ನು ಯಾರೂ ಅಷ್ಟೊಂದು ವಿಶೇಷವಾಗಿ ಗಮನಿಸಿದಂತೆ ಕಾಣಲಿಲ್ಲ. ಇದರ ಮುಖ್ಯ ಪಾತ್ರ ಪಾರ್ಸಿನ ರತ್ನನದು(ಪಾರ್ಸು= Farce ಎಂಬ ನುಡಿಯ ಅಪಭ್ರಂಶವಿರಬೇಕು. ಅಂದರೆ ಮಾತು, ಅಭಿನಯದ ಮೂಲಕ ಜೀವಂತ ವ್ಯಕ್ತಿಗಳನ್ನು, ಆಗಿಹೋದವರನ್ನು ಅನುಕರಿಸುವುದು.) ರತ್ನ ಅಭಿನಯ ಪ್ರವೀಣೆ. ಮದುವೆ, ಪೂಜೆ ಇಂತಹ ಸಮಾರಂಭಗಳಲ್ಲಿ ಹೆಂಗಸರು ಸೇರಿರುವಲ್ಲಿ ಪಾರ್ಸಿನ ಮೂಲಕ ಖುಷಿಯನ್ನು ಕೊಡುವವಳು. ಹಾಗೆಂದು ಅದು ಅವಳ ಹೊಟ್ಟೆಪಾಡಿನ ವೃತ್ತಿಯೇನಲ್ಲ. ಅದಕ್ಕೆ ಯಾವ ತಾಲೀಮೂ ಇಲ್ಲ. ಭಕ್ಷೀಸೂ ಇಲ್ಲ. ಈ ಕತೆಯಲ್ಲಿ ಒಂದು ಮದುವೆ ಸಮಾರಂಭದ ಬಳಿಕ ಸತ್ಯನಾರಾಯಣ ಪೂಜೆ ನಡೆಯುವ ಮನೆಯೊಂದರಲ್ಲಿ ಹೆಂಗಸರೆಲ್ಲ ನಡುಮನೆಯಲ್ಲಿ ಜಮಾಯಿಸಿರುವ ಸಂದರ್ಭವನ್ನು ಕತೆ ಫೋಕಸ್ ಮಾಡುತ್ತದೆ. ಅಲ್ಲಿಗೆ ಪಾರ್ಸಿನ ರತ್ನನ ಪ್ರವೇಶವಾದಾಗ ಒಂದು ಸಂಚಲನ ಉಂಟಾಗುತ್ತದೆ. ಪಾರ್ಸು ಮಾಡುವಂತೆ ಆಕೆಗೆ ಒತ್ತಾಯ. ಅವಳ ತೊಡಗುವಿಕೆ, ಕೋಟೆ ಅಜ್ಜಿ, ರುಕ್ಮಿಣಿ ಚಿಕ್ಕಿ– ಮುಂತಾದ ವ್ಯಕ್ತಿಗಳ ಅನುಕರಣೆಯೊಂದಿಗೆ ಅಲ್ಲಿದ್ದವರಿಗೆಲ್ಲ ಮೊಗೆಮೊಗೆದು ನಗೆಯನ್ನು ಕೊಡುತ್ತಿದ್ದ ರತ್ನನ ಒಡಲ ಅಳುವೊ? ಹಾಗಾಗಿಯೇ ಪಾರ್ಸು ಹೊರಳಿಕೊಂಡು ಅವಳ ಸ್ವಂತ ಬದುಕಿಗೇ ಬಂದು ಮುಟ್ಟಿತು.

ಪದ್ದಕ್ಕನ ಗಂಡ ಪದ್ದಕ್ಕನನ್ನು ಬಯ್ಯುತ್ತಿದ್ದ ಪರಿ, ಅವಳು ಅಂಜಿಕೊಂಡೇ ಬದುಕುಮಾಡಿ ಒಂದು ದಿನ ಅಂತಹ ಗಂಡ ಸತ್ತಾಗಲೂ ಆಕೆ ಅತ್ತದ್ದು ಹೇಗೆಂಬ ಅಭಿನಯ ಮಾಡುತ್ತಿದ್ದವಳಿಗೆ ಗಂಡನೊಡನೆ ಸಾಗಿದ ತನ್ನದೇ ಬದುಕಿನ ತುಣುಕನ್ನು ಅಭಿನಯಿಸುವ ಗಳಿಗೆ ಸೃಷ್ಟಿಯಾಯಿತು. ಪ್ರೇಕ್ಷಕಿಯರ ಪ್ರಶ್ನೆಗಳು ಹಾಗಿದ್ದುವು. ಅದು ನಾಟಕ ಮತ್ತು ನಿಜ ಬೆರೆತ ಗಳಿಗೆ. ಅದನ್ನು ನಟಿಸುವವಳು ಸ್ವತಃ ಅನುಭವಿಸಿದವಳೇ.

ಹಾಗಾಗಿ ಅಭಿನಯಿಸುವ ಆಕೆಗೆ ಕೆಥಾರ್ಸಿಸ್ ಆಗಲಿಲ್ಲ. ಕೆಥಾರ್ಸಿಸ್ ಆಗುವುದು ರತ್ನನ ದುರಂತಕ್ಕೆ ಸಾಕ್ಷಿಯಾಗುವ ಪ್ರಜ್ಞಾವಂತ ಓದುಗರಿಗೆ. ಕತೆಯ ಭಾವ, ಅದರ ಹೆಣಿಗೆ, ವ್ಯಂಗ್ಯದ ಆಳ– ಒಂದೊಂದೂ ಮನಮುಟ್ಟುವಂತಹದು. ಹೊರಗೆ ಸತ್ಯನಾರಾಯಣ ಪೂಜಾವಿಧಿಗಳು ಪುರೋಹಿತರ ನೇತೃತ್ವದಲ್ಲಿ ಹೊಸತಾಗಿ ಮದುವೆಯಾದ ಜೋಡಿ ಸಾಕ್ಷಿಯಾಗಿದ್ದುಕೊಂಡು ನಡೆಯುತ್ತಿದ್ದರೆ ಕೋಣೆಯೊಳಗೆ ಹೆಂಗುಸರೆಂದರೆ ಹೆಂಗುಸರೇ ಪ್ರೇಕ್ಷಕಿಯರಾಗಿರುವ ಗುಂಪಿಗೆ ಹೆಣ್ಣೊಬ್ಬಳು ತನ್ನ ಒಡಲ ಸಂಕಟವನ್ನು ಒಳಗಿಟ್ಟುಕೊಂಡು ಖುಷಿಯನ್ನು ಹಂಚುತ್ತಿದ್ದಾಳೆ. ಹೀಗೆ ಸಮಾನಾಂತರ ಸನ್ನಿವೇಶಗಳನ್ನು ಕತೆಯಲ್ಲಿ ಕೊಡುವ ಮೂಲಕವೂ ಒಂದು ಐರನಿಯನ್ನು ತರುವುದು ವೈದೇಹಿಯವರ ವೈಶಿಷ್ಟ್ಯವೆನ್ನಬಹುದು. ರತ್ನನ ಒಡಲಸಂಕಟ ಜಿರಿಯುವ ದುರಂತ ಕತೆಯ ಕ್ಲೈಮಾಕ್ಸ್ ಆಗಿದ್ದು ಈ ಕತೆ ಹಲವು ಬಗೆಯ ಓದಿಗೆ ದಕ್ಕುವಂತದ್ದು ಮಾತ್ರವಲ್ಲ ಕನ್ನಡದ ಅತ್ಯುತ್ತಮ ಕತೆಗಳಲ್ಲಿ ಒಂದು ಎಂದರೆ ಖಂಡಿತವಾಗಿ ಅತಿಶಯೋಕ್ತಿ ಅಲ್ಲ.



# ನನ್ನ 'ಪಾರ್ಸು'

✦ ಲಲಿತಾ ಸಿದ್ದಬಸವಯ್ಯ

ನನಗೊಂದು ಆಸೆಯಿದೆ. ವೈದೇಹಿಯವರ ಮುಂದೆ ಅವರ 'ರತ್ನಳ' ರೀತಿಯಲ್ಲಿ ಪಾರ್ಸು ಮಾಡಬೇಕು. ಯಾರ ಪಾರ್ಸು? ಮೊದಲಿಗೆ ಕಣ್ಣು ಡಾಕ್ಟ್ರ ಆಸ್ಪತ್ರೆಯಲ್ಲಿ ಔಷ್ಧಿ ಹಾಕಿಸಿಕೊಂಡು ಕಣ್ಣುಮುಚ್ಚಿದರೂ ಬಾಯಿ ಮುಚ್ಚಲಾಪದೆ ಕತೆಗೆ ಕತೆ ಪೋಣಿಸಿ ಆಸ್ಪತ್ರೆಯನ್ನೆ ಕಥಾಗಾರ ಮಾಡಿದ ಸರಸೋತತ್ತೆಯ ಪಾರ್ಸು. ಎರಡು, ತನ್ನ ಅಂದಿಗರೇ ಆದರೂ ಯಾರನ್ನೂ ಅಡಿತೋರಿಸದೇ ಬಿಡದ ಸ್ವತಃ ಪಾರ್ಸಿನ ರತ್ನಕ್ಕಳ ಪಾರ್ಸು. ಮೂರನೆಯದು ಬಾಬುಲಿಯ ತಾಯಿಯ ಪಾರ್ಸು!

ನನಗೆ ಗೊತ್ತು, ನಾನು ರತ್ನಕ್ಕನಷ್ಟು ಚೆಂದಾಗಿ ಪಾರ್ಸು ಮಾಡಲಾರೆ. ಆದರೆ ನನಗೆ ಇನ್ನೊಂದೂ ಗೊತ್ತು. ವೈದೇಹಿಯವರು ಬಾಯಲ್ಲಿ ಹೇಳದಿದ್ದರೂ ನನ್ನ ಈ ಮೂರೂ ಪಾರ್ಸುಗಳನ್ನು ಬಹಳ ಮೆಚ್ಚಿಕೊಳ್ಳುವರು. ಅದು ಹೇಗೆ? ಹೇಗೆಂದರೆ ವೈದೇಹಿಯವರ ಕಥಾಲೋಕ ಮುಕ್ಕಾಲು ಮೂರು ವೀಸೆ ಈ ಮೂರು ಪಾರ್ಸುಗಳ ಹಂದರದ ಮೇಲೆಯೇ ಹಬ್ಬಿರುವಂಥದ್ದು. ಅವರು ರತ್ನಳ ಹಾಗೆಯೇ, ತಮ್ಮ ಎಲ್ಲಾ ಪಾತ್ರಗಳನ್ನೂ ಒಂದು ಪೋರ್ಸಿನಲ್ಲಿ ಒಳಗೊಳಗೇ ಪಾರ್ಸು ಮಾಡುತ್ತ ಹೊರಗೆ ರಚಿಸತಕ್ಕಂಥವರು. ಅವರ 'ಜೀವ ಜೀವನದಲ್ಲಿ ಕುಳಿತಿರುವುದೇ' ಈ ಕಥಾಪಾರ್ಸುಗಳಿಂದ. ಹಾಗೆಯೇ ಅವರ ಕಥೆಯ ಸರಸೋತತ್ತೆ ಮತ್ತು ಕಥೆ ಹೇಳುವ ವೈದೇಹಿಯಕ್ಕ ಇಬ್ಬರೂ ಬೇರೇಬೇರೆಯಲ್ಲವೇ ಅಲ್ಲ. ಥೇಟು ಸರಸೋತತ್ತೆಯ ಹಾಗೇ ವೈದೇಹಿಯವರಿಗೆ ಕಣ್ಣು ಮುಚ್ಚಿಕೊಂಡರೆ 'ಅವರ ಪ್ರಪಂಚ'ದಲ್ಲಿ ನಡೆದ ಅಷ್ಟೂ ಘಟನೆಗಳು ಚಿತ್ರವತ್ತಾಗಿ ದೃಶ್ಯದೃಶ್ಯಗಳಾಗಿ ವಿಂಗಡಿಸಿಕೊಳ್ಳುತ್ತ ಹೋಗುತ್ತವೆ. ಅದೂ ಎಷ್ಟು ಸ್ಪೀಡಿನಲ್ಲೆಂದರೆ ಯಾರ ಕಥೆಯನ್ನೋ ಎತ್ತಿಕೊಂಡು ಮುಗಿಸುವಷ್ಟರಲ್ಲಿ ಅದು ಶುಭಂ ಹೇಳಿಸಿಕೊಳ್ಳುವುದಕ್ಕೂ ಮೊದಲೇ ಇನ್ನೊಂದು ಕಥೆಯೆಳೆ ಅದೇ ಸೂಜಿಯೊಳಕ್ಕೆ ಹೊಗುತ್ತದೆ. ಮೊದಲದನ್ನು ಅವಸರವಸರ ಮುಗಿಸಿ ಈ ಹೊಸ ಸೂತ್ರ ಹಿಡಿದು ಅದನ್ನು ಸುರಿದು ಮುಗಿವಷ್ಟರಲ್ಲೆ ಇನ್ನೊಂದರ ಅವತಾರ ಅಲ್ಲಿಯೇ ಹುಟ್ಟಿ ಸಿದ್ಧ! ಕಥೆಗೆ ಕಥೆಯೇ ಕಾರಣ. ಕಥೆಗೆ ಒಂದು

ಸ್ಥಳ ನಿರ್ಮಿಸಿಕೊಳ್ಳುವ ಕೃತಕ ದರ್ದು ಅವರಿಗಿಲ್ಲವೆ ಇಲ್ಲ. ಅವೆಲ್ಲ ಅವರ ಪ್ರಪಂಚದಲ್ಲೆ ಅವರ ಮಾತಲ್ಲೆ ನಡೆಯುವುದು.

ಅದಾವುದವರ ಪ್ರಪಂಚ? ವೈದೇಹೀ ಪ್ರಪಂಚ? ಅದಾವುದವರ ಮಾತು? ವೈದೇಹೀ ಮಾತು? ಅದು ಭರತಖಂಡೇ ಜಂಬೂದ್ವೀಪೇ ದಕ್ಷಿಣಾಯನೇ ಕರ್ನಾಟಕೇ ಕರಾವಳೀ ಕುಂದಾಪುರ ನಾಮಾಂಕಿತ ಪೇಟೆ!! ಭಾಷೆ, ಅಲ್ಲಿನ ಅವರ ಮನೆಗಳಿಗಷ್ಟೇ ವಿಶಿಷ್ಟವಾದ ಕುಂದಾಪ್ರ ಕನ್ನಡ, ತಿಳ್ಕಣೀ. ಅದನಾಡುವ ಸಮಸ್ತವೂ ಅವರ ಕಥಾಲೋಕದೊಳಗೆ ಪಾತ್ರ ಗಿಟ್ಟಿಸಿಯೇ ಸೈ, ಕೊನೆಗೆ ಅಲ್ಲಿನ ಸೂರ್ಯ ಚಂದ್ರಾದಿಗಳೂ ಕುಂದಾಪ್ರ ಕನ್ನಡವಾಡೇ ಸೈ!! ಅದು ಅಂಥಾ 'ಗಟ್ಟಿಜನ' ಕಾಣಿ! ಇಡೀ ಲೋಕದ ಮೇಲೆಷ್ಟು ಬಗೆಬಗೆ ಜನಪದವಿಹುದೋ ಅದಷ್ಟನ್ನೂ ತಮ್ಮ ಕುಂದಾಪ್ರದಲ್ಲೆ ಕಂಡು ಕುಂದಾಪ್ರ ಕನ್ನಡದಲ್ಲೆ ಆಡಿ ಮುಗಿಸಿಬಿಡುತ್ತದೆ. ಹಾಗಾಗಿಯೇ ಅವರ ಕಥೆಗಳು ಒಂದರೊಳಗೊಂದು ಹೊಕ್ಕುಹೊರಡುವ ತುಂಡರಿಸಿದ ಮಹಾ ಕಾದಂಬರಿಯ ಬೇರೆ ಬೇರೆ ಅಧ್ಯಾಯಗಳು ಎನಿಸುತ್ತವೆ. ಅಥವಾ ನೂರಂಕದ ಮಹಾನಾಟಕ ಒಂದರ ಬಿಡಿಬಿಡಿ ದೃಶ್ಯಗಳೆನಿಸುತ್ತವೆ. ಈ ಪ್ರಪಂಚ ಬಿಟ್ಟು ಹೊರಬಂದರೆ ಅವರು ಮೂಗುಬಾಯಿಯದುಮಿ ಹಿಡಿದ ಜೀವವೇ ಸೈ.

ಇದು ಕಥೆಗಾರ್ತಿಯ ಶಕ್ತಿಯೂ ಮಿತಿಯೂ ಹೌದೆನ್ನುತ್ತ ಮಾಮೂಲಿನ ಟಿಪ್ಪಣಿವಾಕ್ಯವೊಂದನ್ನು ಉದುರಿಸಲಾರೆ ನಾನು. ನನಗದು ಆತ್ಮವಿಶ್ವಾಸ, ಕಥೆಗಾರ್ತಿಯ ಅಗಾಧ ಆತ್ಮವಿಶ್ವಾಸ ಎನಿಸಿದೆ. ನನ್ನ ಕುಂದಾಪ್ರ ಜಗತ್ತಿನೊಳಗೇ, ಅದೇ ಕನ್ನಡದೊಳಗೇ ನಾನು ಜಗತ್ತನ್ನು ನಿಮಗೆ ತೆರೆದು ತೋರಿಸಬಲ್ಲೆ ಎನ್ನುವ 'ಜಂಭ' ಅದು. ಎಣಿಸಿದ ಕಜ್ಜಾಯದ ಹಾಗೆ ದೇವರು ಹತ್ತು ಬಗೆ ಕಾಣಿಸಿಕೊಂಡು ಸುಸ್ತಾಗಿ ಪಾರ್ಸು ನಿಲ್ಲಿಸಿಬಿಟ್ಟ. ಆದರೆ ನೋಡಬನ್ನಿ, ನಾನು ನರಮನುಷರ ಅದೆಷ್ಟು ಬಗೆಬಗೆಯ ಪಾರ್ಸುಗಳನ್ನು ನಿಮಗೆ ತೋರಿಸಬಲ್ಲೆ. ಅದೆಷ್ಟು ಮೇಲಕ್ಕೇರಬಲ್ಲರೋ ಅಷ್ಟೇ ಕೆಳಕ್ಕಿಳಿಯಬಲ್ಲ ಈ ಮನಸುಗಳು ತಮ್ಮನ್ನು ಸೃಷ್ಟಿಸಿದ ದೇವರನ್ನೇ ಮರುಸೃಷ್ಟಿಸಿ ಅವನೀಗ ಕಕ್ಕಾವಿಕ್ಕಿ ನಿಲ್ಲುವ ಹಾಗೆ ಮಾಡಿದ್ದಾವೆ. ಹೀಗೆ ಕೂಗಿ ಕರೆದು ಓದುಗರನ್ನು ಕಥೆಯೆಂಬ ಟೆಂಟಿನೊಳಗೆ ಕೂರಿಸಿ ಬಣ್ಣದ ಬಯಾಸ್ಕೋಪು ತೋರಿಸುತ್ತಾರೆ ವೈದೇಹಿ. ಮತ್ತು ನೀವೆಲ್ಲೆ ಹೋದರೂ ಈ ಮಜಕೂರಿನ ಜನವೇ ತಾನೇ ನಿಮಗೆ ಕಾಣಸಿಗುವುದು! ದೇಶವೋ, ಕಾಲವೋ, ಭಾಷೆಯೋ, ಧರ್ಮವೋ, ಜಾತಿಯೋ, ವರ್ಗವೋ, ಲಿಂಗವೋ ಮತ್ತೊಂದೋ ಬೇರೆಯಾಗಬಹುದೇ ವಿನಾಯ್ತಿ ಮನಸ್ಸು ಇವೇ ಎಲ್ಲಿಯೂ.

ಹಾಗೇ ಅವರು ಕುಂದಾಪ್ರ ಮತ್ತು ಅಲ್ಲಿನ ಕನ್ನಡಗಳೆರಡನ್ನೂ ಮೂಲೆಗೊತ್ತಿ ಇಸ್ತ್ರಿಹಾಕಿದ ಕನ್ನಡ ಭಾಷೆಯೊಂದನ್ನು ಪ್ರಯೋಗಿಸುತ್ತ, ಬಯಲೂರಿನಲ್ಲಿ ತಮ್ಮ ಕುಂದಾಪ್ರದಿಂದೆತ್ತಿ ತಂದ ಪಾತ್ರಗಳನ್ನು ಕುಂಡದಲ್ಲಿ ಬೆಳೆಸುತ್ತ ಕಥೆ ಹೇಳಿದ್ದಿದೆ. ಅಂಥವು

ಸಾವಿರದ ಒಂಭೈನೂರಾ ಎಂಭತ್ತಾರರವರೆಗೆ ಬೇಕಾದಷ್ಟು ಬಂದಿವೆ. ಅವು ಕಳಪೆಯೂ ಅಲ್ಲ. ಆದರೆ ಅವುಗಳಲ್ಲಿ ಪಾರ್ಸಿನ ರತ್ನಕ್ಕನೂ ಇಲ್ಲ, ಕಥೆಗೆ ಕಥೆ ಕಾರಣದ ಸರಸೋತತ್ತೆಯೂ ಇಲ್ಲ. ಒಟ್ಟಾರೆ ಅಲ್ಲಿ ವೈದೇಹಿಯೇ ಆಬ್ಸೆಂಟ್. ಸಮಾಜ ಶಾಸ್ತ್ರಗ್ನೆಯ ಟಿಪ್ಪಣಿಯಿಂದ ನಿಜ ವೈದೇಹಿ ಎದ್ದುಬಂದರು ನೋಡಿ. ಅದೆಂಥ ವೈದೇಹಿಯದು ಅಬ್ಬಬ್ಬಾ! ಮುಂದವರನ್ನು ತರುಬುವವರೇ ಇಲ್ಲ.

ಮೇಲ್ಗಡೆ ನಾನು ವೈದೇಹಿಯವರ ಮುಂದೆ ಮೂರು ಪಾರ್ಸು ಮಾಡಬೇಕೆಂದಿದ್ದೇನೆ ಎಂದು ಹೇಳಿದ್ದೆನಲ್ಲವೇ. ಅದರಲ್ಲಿ ಎರಡು ಆದುವು. ಉಳಿದದ್ದು ಮತ್ತು ಮೂರನೆಯದು ಬಾಬುಲಿಯ ತಾಯಿ. ಶಾಲೆಯ ಬಾಬುಲಿಯೆ ಬೇರೆ ಹಾಲಿನ ಬಾಬುಲಿಯೆ ಬೇರೆಯಾಗಿ ಅಷ್ಟು ಚಿಕ್ಕಪ್ರಾಯದಲ್ಲಿ, ನಿಜಜೀವನದಲ್ಲಿ ಸೈತ ಪ್ರತಿದಿನವೂ ಎರಡೆರಡು ಪಾರ್ಸು ಮಾಡಬೇಕಾಗಿ ಬಂದ ಬಾಬುಲಿಯೆಂಬ ಆ ಸ್ಕೂಲು ಹುಡುಗಿಯ ಅಸಹಾಯಕ ಸ್ಥಿತಿಗೂ ಹೆಚ್ಚಾಗಿ ನನ್ನ ಮುಂದೆ ಆ ಬಾಬುಲಿಯ ತಾಯಿಯ ಇನ್ನಷ್ಟು ಅಸಹಾಯಕ ಮುಖ ನಿಂತುಬಿಡುತ್ತದೆ. ಬಾಬುಲಿಗಾದರೋ ಮುಖ ಬದಲಿಸಿಕೊಳ್ಳುವ ಬಗೆ ಗೊತ್ತಿಲ್ಲ. ಆದರೆ ಅವಳ ತಾಯಿಗೆ ತಮ್ಮ ಕುಟುಂಬಕ್ಕೆ ಇರುವ ಹೀನಾಯ ಮುಖವನ್ನೆ ಇನ್ನಷ್ಟು ಚೆಂದ ತೋರಿಸುವ ಬಗೆಯೂ ಬರುತ್ತದೆ ಮತ್ತು ಹಾಗೆ ಕುಟುಂಬದ ಮುಖ ಕೊಂಚ ಮೇಲ್ಕೆತ್ತಿ ಚೆಂದ ತೋರಿಸಲೇಬೇಕಾದ ಗರ್ಜು ಅವರಿಗೆ ವೇದ್ಯವಾಗಿದೆ. ಆದರೆ ಅವರ ಆ 'ಮೇಕಪ್ಪು' ನಡೆಯುವುದು ಮಾತ್ರ ಬಾಬುಲಿಯ ಗೆಳತಿಯೆಂಬ ಇನ್ನೊಂದು ಚಿಕ್ಕ ಹುಡುಗಿಯ ಬಳಿ ಅಷ್ಟೇ. ಆ ಊರಿನ ಇತರರ ಮುಂದೆ ಊರಿಗೊಗ್ಗದ ಜನವಾದ ಅವರ ಮನೆ, ಅವರ ಪ್ರಾಮಾಣಿಕ ದುಡಿಮೆ, ತುತ್ತಿನ ಜೊತೆಗೇ ಮರ್ಯಾದೆಯುಳಿಸಿಕೊಳ್ಳಲು ಆ ತಾಯಿ ಪುಟ್ಟ ಮಗಳನ್ನು ಕಟ್ಟಿಕೊಂಡು ಹೋರಾಡುವ ವರಸೆ ಎಲ್ಲವೂ ನಗೆಪಾಟಲು. ಇಂಥ ಸೂಕ್ಷ್ಮದ ಈ ಪಾರ್ಸು ಯಾರಾದರು ಮಾಡಿಯಾರೇ, ಸ್ವತಃ ವೈದೇಹಿಯವರನ್ನು ಬಿಟ್ಟು? ರತ್ನಕ್ಕನೂ ಸೋತಾಳು.

ಇಂಥಹ ಬಾಬುಲಿಯ ತಾಯಿಯಂಥಹ ಪಾತ್ರಗಳ ಘನತೆಯನ್ನು ವೈದೇಹಿ ಎಂದೂ ಎತ್ತಿ ಹಿಡಿಯುತ್ತಾರೆ. ಅವರ ಈ ಮನೋಧರ್ಮವೇ ಸದಾ ನನಗೆ ವಂದನೀಯ. ಒಲ್ಲದ ಗಂಡನನ್ನು ಬಿಟ್ಟುಹೋದ ಹೆಂಡತಿಯನ್ನು ಮತ್ತೆ ಬಳಿಗೆ ಕರೆದುಕೊಂಡ ಗಂಡನ ಪಾತ್ರವನ್ನು ಅತ್ಯುದಾತ್ತ ಪಾತ್ರವೆಂದು ನಾವು ಒಪ್ಪಿದ್ದೇವೆ. ಕನ್ನಡದ ಕಥೆಗಳಲ್ಲಿ ಇಂಥಾ ಉದಾತ್ತ ಮಹಿಮ ಪತಿಯ ಪಾತ್ರಾವಳೀ ಆಗಾಗ್ಗೆ ಕಾಣಿಸಿಕೊಳ್ಳುತ್ತವೆ. ಆದರೆ ಆ ಗಂಡಿಗೆ ಇದು ಬಿಟ್ಟರೆ ಇಂಥಹ ಪದಾರ್ಥ ಇನ್ನೆಂದೂ ಸಿಗಲಾರದ್ದಕ್ಕೇ ಅದು ಅದನ್ನೇ ಬರಮಾಡಿಕೊಂಡಿತೆಂಬ ಸತ್ಯ ಮಾತ್ರ ನಮಗೆ ಸದಾ ಅಪಥ್ಯ. ಇಂಥಲ್ಲೆ ಸದ್ದಿಲ್ಲದೆ ವೈದೇಹಿ ಗೆಲ್ಲುವುದು. ಆ ಬಿಟ್ಟು ಹೋದ ಹೆಂಡತಿಗೆ ಗಂಡ ಮತ್ತೆ ತನ್ನನ್ನು ಸೇರಿಸಿಕೊಳ್ಳುವುದು ಮಹಾನ್ ವಿಷಯವೇ ಆಗಿರಬೇಕೆಂದೇನಿಲ್ಲ. ಅವಳಿಗೆ ಗೊತ್ತು, ಈಗ ಬಿಟ್ಟರೆ ನನ್ನಂಥದು

ಗಂಡನಿಗೆ ದೊರೆಯಲಾರದು ಮತ್ತು ಹಾಗೆ ಅದು ತನಗೆಂದೂ ಈಡುಜೋಡಾಗದಿದ್ದುದಕೇ ತಾನದನ್ನು ಬಿಟ್ಟು ಹೋದ್ದು ಎಂಬುದು. ಇದೀಗ ಅದೇ ಕರ್ಮವೇ ಮತ್ತೆ ಕರ್ಣನ ಪೋಸಿನಲ್ಲಿ ಬಂದು ಸುತ್ತಿಕೊಂಡದ್ದಕ್ಕೆ ಅವಳಿಗೆ ಜಿಗುಪ್ಸೆಯೇ ಅಮರಿಕೊಳ್ಳಬಹುದು. ಇದು ಸೂಕ್ಷ್ಮದಲ್ಲಿ ಸೂಕ್ಷ್ಮ. ಮತ್ತೆ ಗಂಡ ಸೇರಿಸಿಕೊಂಡರೆ ಅವನ ಕಾಲ್ತೊಳೆದು ಸೇವಿಸಿಕೊಂಡಿರಬೇಕೆಂಬುದನ್ನೆ ನಾವು ನಿರೀಕ್ಷಿಸುವುದು. ಅಂಥ ನಿರೀಕ್ಷೆಗಳನ್ನು ಫಟ್ಟನೆ ಮುರಿಯುತ್ತಾರೆ ವೈದೇಹಿ. ಸೂಕ್ಷ್ಮವನ್ನು ಮಾತ್ರ ಓದುಗರ ಮುಂದಿಡದೆ ಅವರು ಮುಂದಕ್ಕೇ ಹೋಗರು. ಅಕ್ಕು, ಮಾಂಕಾಳಿಯಮ್ಮ, ಶಾಂತಕ್ಕ, ಸೌಗಂಧಿ, ಶುಭಾಂಟಿ .... ಇವರೆಲ್ಲರೂ ಅಷ್ಟೇ ಬಗೆಬಗೆಯ ಹೆಣ್ಣು ಸೂಕ್ಷ್ಮಗಳ ಪ್ರತಿನಿಧಿಗಳು, ನಿರೀಕ್ಷೆ ಮುರಿದೂ ಕಥಾನಾಯಕಿಯಾದವರು. ಹೀಗೆ ಸದ್ದಿಲ್ಲದೆ ಮುರಿಯುವ ತಾವಿನಲ್ಲಿ ವೈದೇಹಿ ಅವರಿಗವರೇ ಸಮ.

ವೈದೇಹಿಯವರ ಸಾಹಿತ್ಯದ ಕುರಿತು ಬಂದ ಬರವಣಿಗೆಯೇ ಮಹಾನ್ ಸಂಪುಟವಾಗಬಹುದೋ ಏನೋ. ಆ ಒಟ್ಟಲಿಗೆ ನನ್ನದೂ ನಾಲ್ಕು ಸಾಲು. ಆದರೆ ನಾನು ಬರೆದಿರುವ ಈ ಸಂದರ್ಭದ ಬಗ್ಗೆ ನನಗೆ ತುಸು ಬಿಂಕ ಬಿಗುಮಾನವಿದೆ. ಅವರಿಗೆ ಎಪ್ಪತ್ತೈದರ ಸನ್ಮಾನದ ಅವಸರದಲ್ಲಿ ಬರುವ ಗ್ರಂಥದಲ್ಲಿ ಈ ಸಾಲುಗಳು ಸೇರುವುದು ನನಗೆ ಗರಿ. ಅವರಿಗೆ ಇನ್ನಷ್ಟು ಉತ್ಸಾಹ ಹುರುಪು ಇರಲಿ. ಈ ಖಾಲಿಯಾಗದ ಕಥೆಯ ಸರಸೋತತ್ತೆ ಕಥೆ ಹೇಳುತ್ತ, ಕಥೆ ಕಾಣುತ್ತ ಸದಾ ನಮ್ಮೊಂದಿಗಿರಲಿ.



# ಆರ್ದ್ರ ಬರಹಗಳ ಮೊತ್ತವೇ ವೈದೇಹಿ

✦ ಸುನಂದಾ ಕಡಮೆ

ನಾನು ಈವರೆಗೆ ಓದಿದ ಭಾರತೀಯ ಕಥೆಗಾರರ ಸಾವಿರಾರು ಕತೆಗಳಲ್ಲಿ ವೈದೇಹಿ ಅವರ ಕತೆಗಳು ವಿಭಿನ್ನವಾಗಿ ನನ್ನನ್ನು ಸೆಳೆದಿವೆ. ಅದಕ್ಕೆ ಕಾರಣಗಳನ್ನು ನನ್ನ ಅರಿವಿನ ಮಿತಿಯಲ್ಲಿ ಪಟ್ಟಿ ಮಾಡಬೇಕೆಂದರೆ, ಇವರ ಕಥಾನಕವು ಸ್ತ್ರೀಯರ ಸಮಸ್ಯೆಗಳನ್ನು ಎಲ್ಲ ಕೋನಗಳಿಂದಲೂ ಪರಿಚಯಿಸುವ ಮತ್ತು ಒರೆಗೆ ಹಚ್ಚುವ ಬಹುಸೂಕ್ಷ್ಮ ಆವರಣವನ್ನು ಹೊಂದಿರುವಂಥದ್ದು. ಅವರು ಹೆಣ್ಣಿನ ಬದುಕಿನ ಕುರಿತಾಗಿ ತಾಳುವ ಸ್ಪಷ್ಟ ನಿಲುವು, ದೃಢತೆ ಮತ್ತು ವಿವಿಧ ಸ್ತರದ ಜನರ ಸಂವೇದನೆಗಳು ಹಾಗೂ ರಾಜಕೀಯ ಪ್ರಜ್ಞೆಗಳು ಮೇಳೈಸಿ ಮೆಲುದನಿಯ ಪಿಸುಮಾತೆನಿಸಿದರೂ ಅವು ಅಷ್ಟೇ ಹರಿತವೂ ಆಗಿರುತ್ತವೆ. ಅಂತರಮುಖಿ ಅನುಭವಗಳ ಅಭಿವ್ಯಕ್ತಿಯಲ್ಲಿ ಅವರು ಬಳಸುವ ಸಂಯಮದ ಭಾಷೆಗೆ ಲವಲವಿಕೆ ಅತ್ಯಂತ  ಸಹಜವಾಗಿ ಒಲಿದಿರುತ್ತದೆ. ಅವರ ನಿರೂಪಣೆಗೆ ಯಾವಾಗಲೂ ಒಂದು ಬಗೆಯ ವಿನೋದಪೂರ್ಣ ಚಲನೆ ಇರುತ್ತದೆ.

ವೈದೇಹಿಯವರ ಕಥೆಗಳಲ್ಲಿರುವ ಸಾಮಾನ್ಯ ಸಂಗತಿಗಳೆಂದರೆ, ಸಂಕಷ್ಟಗಳ ಒಳಗೇ ನಿಂತು ಲೋಕವನ್ನು ಅವಲೋಕಿಸುವ ವಿಶಿಷ್ಟ ದೃಷ್ಟಿ ಮತ್ತು ಕುಟುಂಬದೊಳಗಿರುವ ಸಣ್ಣ ಸಣ್ಣ ಸಂಗತಿಗಳೆಲ್ಲ ಅಬ್ಬರದ ಘೋಷಣೆಗಳಿಗೆ ವ್ಯತಿರಿಕ್ತವಾಗಿ ಅಂತರಂಗಕ್ಕೆ ಹತ್ತಿರವಾಗುವಂಥವು. ಆರ್ದ್ರವೂ ಆಪ್ತವೂ ಮತ್ತು ಅನನ್ಯವೂ ಆದ ಅವರ ಪಾತ್ರಗಳ ಮನಸ್ಥಿತಿಗಳು ಅವರಂತೆಯೇ ಮರಳಿನೊಳಗಿಂದ ಹರಿವ ನದಿಪಾತ್ರದ ಝರಿಗಳಂತೆ, ಒಳಗೇ ಹರಿವ ಅಂತರ್ಜಲದಂತೆ ಪರಿಣಾಮಕಾರಿಯಾಗಿರುತ್ತದೆ.

ಇಂದಿನ ಹೊಸ ಬರಹಗಾರರ ಅಧ್ಯಯನಕ್ಕೆ ಪುಷ್ಟಿ ನೀಡುವಂತಿರುವ ವೈದೇಹಿ ಕತೆಗಳು, ಭಾರತೀಯ ಕುಟುಂಬ ಮೌಲ್ಯಗಳ ಒತ್ತಡವನ್ನು ಸಾದರಪಡಿಸುತ್ತಲೇ ಸಾಂಸ್ಕೃತಿಕ ಅನುಸಂಧಾನದೊಂದಿಗೆ ಸಂಘರ್ಷಕ್ಕಿಳಿಯುತ್ತವೆ. ವೈದೇಹಿಯವರು ತಾವು ಬರವಣಿಗೆ ಆರಂಭಿಸಿದ ಕಾಲಘಟ್ಟದಲ್ಲೇ ಹೆಣ್ಣಿನ ಅಂದಂದಿನ ವಾಸ್ತವದ ತಲ್ಲಣಗಳಿಗೆ ಹೊಸ ಭಾಷೆ ದೊರಕಿಸಿಕೊಟ್ಟವರು ಮತ್ತು ಒಟ್ಟೊಟ್ಟಿಗೇ ಧ್ವನಿಪೂರ್ಣತೆಯನ್ನೂ ಸಾಧಿಸಿದವರು..

ತಮ್ಮೊಳಗಿನ ಜೀವಸೆಲೆ ಬತ್ತಗೊಡದಂತೆ ಜೀವಪರ ಕಾಳಜಿಗಳನ್ನು ಕಾಪಿಟ್ಟುಕೊಂಡುದಲ್ಲದೇ ತಮ್ಮೊಳಗಿನ ಪ್ರಾಮಾಣಿಕ ತುಡಿತವನ್ನು ಹೊರಗೆಡಹಲು ವೈದೇಹಿ ಅಕ್ಷರ ಮಾಧ್ಯಮವನ್ನು ಆಯ್ಕೆ ಮಾಡಿಕೊಂಡಿದ್ದಾರೆ ಅನಿಸುತ್ತದೆ. ಮದುವೆ, ಕುಟುಂಬ ವ್ಯವಸ್ಥೆ, ಲೈಂಗಿಕತೆ ಇಂಥ ವಿಷಯಗಳನ್ನು ಅವರು ಬೆಣ್ಣೆಯೊಳಗಿನ ಕೂದಲು ತೆಗೆದಂತೆ ಸೂಕ್ಷ್ಮವೂ ತೀಕ್ಷ್ಣವೂ ಆಗಿ ಬರೆಯಬಲ್ಲರು. ಸ್ತ್ರೀಯರ ಬದುಕಿನ ಅನೇಕ ಬಹುಮುಖ್ಯ ಪ್ರಶ್ನೆಗಳನ್ನು ವೈದೇಹಿ ಎತ್ತುತ್ತಾರೆ.

ಓದಿದ ಕೆಲ ಸಮಯದಲ್ಲಿಯೇ ಕೆಲವರ ಕತೆಗಳು ಮರೆತುಹೋಗುತ್ತವೆ. ಆದರೆ ವೈದೇಹಿ ಅವರ ಬಹುತೇಕ ಕತೆಗಳು ಸಹೃದಯರ ಸ್ಮೃತಿಯಲ್ಲಿ ನಿರಂತರ ಅನುರಣನಗೊಳಿಸುತ್ತ ಉಳಿದುಬಿಡುತ್ತವೆ. ಹಾಗಾಗಿ ಅವರ ಇಷ್ಟವಾದ ಕತೆಯೊಂದರ ಕುರಿತು ಹೇಳಿ ಅಂದಾಗ ನಾನು ಒಮ್ಮೆಲೇ ದಿಗಿಲುಗೊಂಡೆ. ಅವರ ಸಾಲುಸಾಲು ಕತೆಗಳು ನನ್ನನ್ನು ಕಾಡಿವೆ, ಮತ್ತೆ ಮತ್ತೆ ಓದಿಸಿಕೊಂಡಿವೆ ಮತ್ತು ಯೋಚನೆಗೆ ಹಚ್ಚಿವೆ. ಕಥನ ಕೌಶಲ, ಲೋಕ ಗ್ರಹಿಕೆ, ಮತ್ತು ಬರವಣಿಗೆಗೆ ಬೇಕಾದ ಮೂಲ ಜೀವ ದ್ರವ್ಯ ಹೀಗೆ ಒಂದು ತರಹದಲ್ಲಿ ಸಂಕೀರ್ಣ ಬರವಣಿಗೆ ಇವರ ಕತೆಗಳ ವಿಸ್ತಾರದಲ್ಲಿದೆ.

ವೈದೇಹಿ ಬರಹಗಳ ಕೇಂದ್ರ, ಕುಟುಂಬ ಮತ್ತು ಅದರೊಳಗೆ ಸಿಲುಕಿಕೊಂಡಿರುವ ಹೆಣ್ಣು ಮತ್ತು ಅವಳು ತೀಕ್ಷ್ಣವಾಗಿ ಅನುಭವಿಸುವ ಸವಾಲುಗಳು. ವೈದೇಹಿಯವರ ಭೌತಿಕ ನಿಲುವು ನೆನಪಾದ ಕೂಡಲೇ ಏನೋ ಒಂದು ರೀತಿಯ ಆಪ್ತ ಭಾವ. ಅವರ ನೋಟ, ಭಾವುಕತೆ, ಅಂತಃಕರಣ, ಕಾಳಜಿ ಇವೆಲ್ಲ ಹೊರಗಿನ ಅಭಿವ್ಯಕ್ತಿಯಷ್ಟೇ ಅಲ್ಲ ಅವು ಒಳಗಿನ ಬೆಳಕು ಕೂಡ ಎಂದು ನಮ್ಮ ಅರಿವಿಗೆ ಬರುವುದು ಅವರ ಬರಹಗಳನ್ನು ಓದುವುದರ ಮೂಲಕ. ಮನುಷ್ಯ ಲೋಕವನ್ನು ಅನನ್ಯವಾಗಿ ತೆರೆದಿಡುವ ರೀತಿಯ ವಿಶಾಲ ದಟ್ಟ ಬರಹಗಳು ಅವರವು. ಎಲ್ಲ ಸಮಸ್ಯೆಗಳ ಮೂಲವೂ ಅಮಾನವೀಯತೆಯ ನೆಲೆಯಲ್ಲೇ ಸೃಷ್ಟಿಗೊಂಡಿದ್ದು, ಮಾನವೀಯತೆಯ ಬೆಳಕಿನಲ್ಲೇ ಅವುಗಳಿಗೆ ಪರಿಹಾರ ಒದಗಿಸುವ ನಿಟ್ಟಿನಲ್ಲಿ ವೈದೇಹಿಯವರ ಕತೆಯ ಬಿಂಬಗಳು ಉಸಿರಾಡುತ್ತವೆ.

ಅವರ 'ಅಮ್ಮಚ್ಚಿಯೆಂಬ ನೆನಪು' ನನ್ನನ್ನು ಬಿಟ್ಟೂ ಬಿಡದೇ ಕಾಡುವಂಥದು. ಇಲ್ಲಿ 'ಕೆಲವರನ್ನು ನೆನೆವಾಗ ಮನಸ್ಸು ದಣಿಯುತ್ತದೆ' ಎಂಬ ಒಂದು ಮಾತು ಬರುತ್ತದೆ. ನಮ್ಮ ಸ್ತ್ರೀಸಂಕುಲದ ಸಂಕಟಗಳಿಗೆ ಇದಕ್ಕಿಂತ ಬೇರೆ ಪದಗಳು ಸಿಗಲಾರವು ಅನಿಸಿಬಿಡುತ್ತದೆ. ಅದೇ ವಾರೆ ಬೈತಲೆ ತೆಗೆದು ಎರಡು ಜಡೆ ಕಟ್ಟಿಕೊಂಡ ಅಮ್ಮಚ್ಚಿಯ ಜೈವಿಕ ನಿಲುವು ಕೂಡ ಮಹಿಳೆಯರ ಅಸ್ಮಿತೆಯನ್ನು ಧ್ಯಾನಿಸುವಂತಿದೆ.

ಇಲ್ಲಿಯ ನಿರೂಪಣೆಯ ಸಹಜ ಸರಳ ಭಾವ ವೈಯಕ್ತಿಕವಾಗಿ ನನಗೆ ತುಂಬಾ ಇಷ್ಟವಾಗುತ್ತದೆ. ಅವಳಾಡುವ ಬೀಸು ಮಾತಿನ ಪೋರ್ಸು, ಓದುಗರು ತಳಮಳಿಸುವಂತೆ

ಮಾಡುವಂಥದು. ವೆಂಕಪ್ಪಯ್ಯನಿಗೆ ಅವಳ ವಾರೆ ಜೈತಲೆಯನ್ನು ಸುಲಭವಾಗಿ ವಿಮರ್ಶಿಸುವ ಹಕ್ಕನ್ನು ಯಾವ ಸಮಾಜ ಎಂಥ ವ್ಯವಸ್ಥೆ ಅವನಿಗೆ ಕೊಟ್ಟದೆ? ಅಮ್ಮಚ್ಚಿಯ ಇಡಿಯಾದ ವ್ಯಕ್ತಿತ್ವದಲ್ಲಿ ಒಂದು ರೀತಿಯ ಧೈರ್ಯ, ಛಲ, ಗೆಲುಮೆ, ತಾನು ಹೆಣ್ಣು ಎಂಬ ಹೆಮ್ಮೆ ಹೆಚ್ಚಿಸುವ ಗುಣಗಳಿದ್ದದ್ದು ಕಾಣಿಸುತ್ತದೆ.

'ಸಕ್ಕರೆ ಅವಳ ಗೆರಸಿ ಮುಖ ಅರಳಿದ ಕಮಲದ ಹಾಗೆ' ಅಂತ ಬರೆಯುತ್ತಾರೆ ವೈದೇಹಿ. ಅವಳನ್ನು ಹಿಡಿತದಲ್ಲಿಡಲು ಸದಾ ಯತ್ನಿಸುವ ವೆಂಕಪ್ಪಯ್ಯ ಪ್ರಭುತ್ವದ ಅಧಿಪತಿಯಂತೆ ಆಗಾಗ ಸಾಂಕೇತಿಕವಾಗಿ ಪ್ರವೇಶ ಪಡೆಯುತ್ತಾನೆ. ಸಂಭಾಷಣೆಯಲ್ಲಿರುವ ಪ್ರಾದೇಶಿಕ ಭಾಷೆಯ ಬನಿ ಅವರ ಎಲ್ಲ ಕತೆಗಳಿಗಿಂತಲೂ ಇಲ್ಲಿ ಅತ್ಯಂತ ಬಿಗುವಾಗಿ, ಕಠಿಣವಾಗಿ ಕಟ್ಟಿಕೊಂಡಿದೆ. ಮಡಲು ಹೆಣೆಯುವದನ್ನು ಲೇಖಕಿಗೆ ಕಲಿಸುವ ಅಮ್ಮಚ್ಚಿ ಆ ಮೂಲಕ ಬದುಕುವ ಕಲೆಯನ್ನೂ ಕಲಿಸುತ್ತ ನಡೆಯುತ್ತಾಳೆ.

'ಯಾವುದೂ ಬರ್ತಿಲ್ಲೆ ಅಂತೇಳಿ ಇಪ್ಪುಗಾಗ' ಎಂಬ ಅಮ್ಮಚ್ಚಿಯ ಮಾತು ಹೆಣ್ಣಿನ ಸತ್ವವನ್ನು ಸಾಣೆ ಹಿಡಿಯುವಂತೆ ಬಿಂಬಿಸುವ ಮಾತಾದರೂ ಅದು ಕೂಡ ಹೆಣ್ಣೊಬ್ಬಳು ಘನವಾಗಿ ಬದುಕು ಕಟ್ಟಿಕೊಳ್ಳುವ ರೀತಿಯೇ ಆಗಿದೆ. ನಮ್ಮ ಮದುವೆ ಚಪ್ಪರಕ್ಕೂ ನಾವೇ ಹೆಣೆದ ಮಡಲು ಹಾಕಬಹುದೆಂಬ ಅವಳ ಕಣ್ಣಂಚಿನ ಹೊಳಪು, ಮುಂದೆ ಅದೇ ವೆಂಕಪ್ಪಯ್ಯನನ್ನು ಮದುವೆಯಾಗುವ ಪ್ರಸಂಗದಲ್ಲಿ ಮುರುಟಿ ಹೋಗುವುದು ಹೆಣ್ಣಿನ ಸೀಮಿತ ನಾಗರಿಕ ವಿಸ್ತಾರವನ್ನು ತೆರೆದು ತೋರುತ್ತದೆ.

ಶಾಂಭಟ್ಟರ ಮಗ ಪಟ್ಟಣದಲ್ಲಿ ಓದಿದ ಸೇಸ ಇವಳೊಂದಿಗೆ ಯಾವ ಹಮ್ಮು ಬಿಮ್ಮುಗಳಿಲ್ಲದೇ ಮಾತನಾಡಿ ತುಂಬುವ ಕಿಂಚಿತ್ ಕನಸುಗಳು ಎಲ್ಲ ಭಾವ ಭಿತ್ತಿಗಳನ್ನೂ ಮೀರಿ ಸಂಚಲನ ಮೂಡಿಸುವಂಥದ್ದು. ಅವಳು ತೊಡುವ ಬಟ್ಟೆಯಿಂದ ಹಿಡಿದು ತಲೆಗೂದಲು ಬಾಚಿಕೊಳ್ಳುವ ಶೈಲಿ ಮತ್ತು ಅವಳ ನಡೆ ನುಡಿಯವರೆಗೆ ತಾನೇ ನಿರ್ದೇಶಿಸುವ ವೆಂಕಪ್ಪಯ್ಯ ಪುರುಷ ಪ್ರಧಾನ ಸಮಾಜದ ಕೈಗನ್ನಡಿಯಂತೆ ಸ್ಪಷ್ಟ ತೋರುತ್ತಾನೆ.

ಮದುವೆಗಿಂತ ಮೊದಲೇ ತನ್ನನ್ನಾಳುತ್ತಿದ್ದ ವೆಂಕಪ್ಪಯ್ಯನನ್ನೇ ವರಿಸುವ ಅದಾವ ಸಂದಿಗ್ಧತೆ ಅಮ್ಮಚ್ಚಿಯ ಹೆಗಲೇರಿತು ಎಂಬುದೆಲ್ಲ ಬೂದಿ ಮುಚ್ಚಿದ ಕೆಂಡದಂತೆ ಬುಸುಗುಡುತ್ತಲೇ ಹೆಣ್ಣಿನ ಎಲ್ಲ ಅಸಹಾಯಕತೆ, ನಿರುಪಾಯಗಳನ್ನು ಪ್ರತಿನಿಧಿಸುವಂಥ ಪ್ರಾಂಜಲ ಬರವಣಿಗೆಯ ಲಯ ಈ ಕತೆಗೆ ಒಲಿದಿದೆ. ತಿರುಪತಿಯಿಂದ ಹಿಂತಿರುಗಿ ಬಂದ ಅಮ್ಮಚ್ಚಿ, ಶಾಂಭಟ್ಟರ ಮಗ ಸೇಸನ ಸಂಗತಿ ತಿಳಿದೊಡನೆಯೇ ನಗೆಯೆಂಬುದನ್ನೇ ಕಳಕೊಂಡು ಶಿಲೆಕಲ್ಲಿನಂತೆ ಪರಿವರ್ತನೆಯಾಗುವ ಸಂದರ್ಭವು ಸಾಂಸ್ಕೃತಿಕ ಸನ್ನಿವೇಶಗಳ ಒಂದು ಚೋದ್ಯ.

ಇಡಿಯಾಗಿ ಈ ಕತೆ, ಭಾರತೀಯ ಸಂದರ್ಭದ ಹೆಣ್ಣೊಬ್ಬಳ ಒಳ ಶೋಷಣೆಯನ್ನು ಒರತೆಯಂತೆ ಬಗೆದುಕೊಂಡು ಹೊರಬರುತ್ತಲೇ ಓದುಗರ ಮನಸ್ಸನ್ನು ಹಿಂಜಿ ಬಿಡುವಷ್ಟು ಶಕ್ತಿಶಾಲಿಯಾಗಿದೆ. ಅಮ್ಮಚ್ಚಿಯ ಅನಿವಾರ್ಯ ಪ್ರತಿಭಟನೆ ಕೂಡ ಅಷ್ಟೇ ಸಂದಿಗ್ಧ ಪರಿಸ್ಥಿತಿಯಲ್ಲಿ ಹೊರಚಾಚುವಂಥದ್ದು. ಇಲ್ಲಿಯ ಅಮ್ಮಚ್ಚಿ ಹೆಣ್ಣು ಕುಲಕ್ಕೆ ಇಡಿಯಾಗಿ ಒಬ್ಬ ಪ್ರತಿಭಟನಾತ್ಮಕ ಧ್ವನಿ ಎನಿಸಿದ್ದರಿಂದಲೋ ಏನೋ ವೈದೇಹಿಯವರ ಈ ಕತೆ ನನಗೆ ತುಂಬ ಇಷ್ಟವಾಗಿದೆ. ಒಟ್ಟಾರೆಯಾಗಿ ಆರ್ದ್ರ ಬರಹಗಳ ಒಟ್ಟೂ ಮೊತ್ತವೇ ವೈದೇಹಿ. ಅವರ ಸಹಸ್ರ ಸಹಸ್ರ ಅಕ್ಷರಗಳಿಗೆ ತುಂಬು ಮಮತೆಯ ಅಭಿವಂದನೆ.



# ಅಲ್ಲಲ್ಲಿನ ಲೋಕದ ಎಲ್ಲರನು 'ಕಾಣಿಸುವ' ವೈದೇಹಿ

✦ ಸುಮಂಗಲಾ

ನನ್ನನ್ನು ತುಂಬ ಬೆರಗುಗೊಳಿಸುವುದು ವೈದೇಹಿಯವರ ಕಥಾನಕದ ಹರವು, ಆಳ, ಅಗಲ ಮತ್ತು ಎತ್ತರ. ಅವರು ಸ್ತ್ರೀಯರ ಪ್ರಪಂಚವನ್ನು ಕಟ್ಟಿಕೊಡುತ್ತಾರೆ, ಒಂದು ಪ್ರದೇಶದ ಬದುಕಿನ ವಿವರಗಳನ್ನು, ಜೀವನಕ್ರಮವನ್ನು ತೆರೆದಿಡುತ್ತಾರೆ ಇತ್ಯಾದಿ ಹೇಳಿಕೆಗಳೆಲ್ಲ ಅವರ ಕಥಾನಕದ ಹರವಿನ ಮುಂದೆ ಬಾಲಿಶ ಹಾಗೂ ಸೀಮಿತ ಹೇಳಿಕೆಗಳು ಎನ್ನಿಸುತ್ತದೆ. ಅವರ ಕಥೆಗಳು ಸ್ತ್ರೀಯರ ಪ್ರಪಂಚವನ್ನು ಕಟ್ಟಿಕೊಡುತ್ತಲೇ ಸುತ್ತಲಿನ ಒಟ್ಟೂ ಮನುಷ್ಯರ ಕಥಾನಕವಾಗಿ ನಮ್ಮೊಳಗೆ ಬೆಳೆಯುತ್ತದೆ. ಒಂದು ಪ್ರದೇಶದ್ದು, ಒಂದು ಕಾಲಘಟ್ಟದ್ದು ಎನ್ನಿಸುತ್ತಲೇ, ಅದನ್ನು ಮೀರಿ ಎಲ್ಲ ದೇಶಕಾಲಕ್ಕೆ ಸಲ್ಲಬಹುದಾದ ಒಳದನಿಯನ್ನು ಕೇಳಿಸಿಕೊಳ್ಳಿ ಎಂದು ಅವರ ಕಥೆಗಳು ನಮ್ಮ ಅಂತರಂಗದ ಕಿವಿ ತಟ್ಟುತ್ತವೆ. ಮತ್ತೆ ಆ ಕಥಾನಕದಲ್ಲಿ ಮಿಂದೇಳುವ ಪಾತ್ರಗಳ ಹರವಾದರೂ ಸಾಮಾನ್ಯದ್ದೇ? ಅಲ್ಲಿ ಎಲ್ಲ ವಯೋಮಾನದ ಹೆಣ್ಣುಮಕ್ಕಳು, ಅವರೊಂದಿಗೆ ಒಡನಾಡುವ ಎಲ್ಲ ವಯೋಮಾನದ ಪುರುಷರು ಇದ್ದಾರೆ. ಗ್ರಾಮೀಣ ಮಹಿಳೆಯರಿಂದ ಹಿಡಿದು ನಗರಗಳ ಆಧುನಿಕ ಮಹಿಳೆಯರ ಒಳಕುದಿಯ ಹಲವು ಬಿಂದುಗಳು ಅಲ್ಲಿವೆ. ಉಸಿರು ಕಟ್ಟುವ ಬದುಕಿನಿಂದ ಆಚೆ ಬಂದು ಹೊಸಗಾಳಿ ಅರಸುವ ಯುವತಿಯರ ಹಾಗೆಯೇ ಒಳಗಿದ್ದುಕೊಂಡೇ ಗಟ್ಟಿಯಾಗುತ್ತ, ತಮ್ಮದೇ ರೀತಿಯಲ್ಲಿ ಎದುರಿಸುವ, ಮಾರುತ್ತರಿಸುವ ಎದೆಗಾರಿಕೆಯನ್ನು ತೋರುವ ಹೆಣ್ಣುಮಕ್ಕಳಿದ್ದಾರೆ. ಅಕ್ಕು, ಅಮ್ಮಚ್ಚಿ, ವಾಣಿಮಾಯಿ ಇವರೆಲ್ಲ ಹೇರಿದ ಚೌಕಟ್ಟಿನೊಳಗೇ ಪ್ರತಿಭಟನೆಯನ್ನು ದಾಖಲಿಸುವ ಪಾತ್ರಗಳು. ಬದುಕಿನ ಸವಾಲುಗಳನ್ನು ಅವರದೇ ರೀತಿಯಲ್ಲಿ ಎದುರಿಸಿ, ಕುಸಿಯದೇ ಗಟ್ಟಿಯಾಗಿ ನಿಲ್ಲುವವರು.

ಇಲ್ಲಿ ಕಪ್ಪು-ಬಿಳುಪು ಎಂದು ವರ್ಗೀಕೃತಗೊಂಡ ಯಾವುದೇ ಪಾತ್ರಗಳು ಅಥವಾ ಚಿತ್ರಗಳಿಲ್ಲ. ಕಪ್ಪು-ಬಿಳುಪಿನ ನಡುವಣ ವಿವಿಧ ಛಾಯೆಗಳೊಂದಿಗೆ ಒಡಮೂಡಿದ ಪಾತ್ರಗಳಿವು. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಶೋಷಣೆಯನ್ನು ಸೂಕ್ಷ್ಮವಾಗಿ ನಿರೂಪಿಸುವಷ್ಟೆ ಕಸುಬುದಾರಿಕೆ ಹೆಣ್ಣೇ ಹೆಣ್ಣನ್ನು ಶೋಷಿಸುವ ಚಿತ್ರಣದಲ್ಲಿಯೂ ವ್ಯಕ್ತವಾಗುತ್ತದೆ. ಪಿತೃಪ್ರಧಾನ ವ್ಯವಸ್ಥೆಯ ಸ್ಥಾಪಿತ ಮೌಲ್ಯಗಳನ್ನು ಮುಂದುವರೆಸುವಲ್ಲಿ

ಮೇಲ್ವರ್ಗದ ಪುರುಷರ ಜೊತೆಗೇ ನಿಲ್ಲುವ ಮೇಲ್ವರ್ಗದ ಮಹಿಳೆಯರು ಸ್ವತಃ ಶೋಷಣೆಗೆ ಒಳಗಾಗುತ್ತಲೇ, ಸಾಮಾಜಿಕ ಸ್ತರದಲ್ಲಿ ತಮಗಿಂತ ಕೆಳಗಿರುವವರನ್ನು ತುಳಿಯುವ ಚಿತ್ರಣಗಳನ್ನು ವೈದೇಹಿಯವರು ಅಷ್ಟೇ ಸೂಕ್ಷ್ಮವಾಗಿ ಕಟ್ಟಿಕೊಡುತ್ತಾರೆ.

ಭಾಷೆಯನ್ನು ಎಷ್ಟು ಕಾವ್ಯಾತ್ಮಕವಾಗಿ ಕಥೆಯಲ್ಲಿ ಬಳಸಿಕೊಳ್ಳಬಹುದು ಎಂಬುದಕ್ಕೆ ವೈದೇಹಿಯವರ ಕಥೆಗಳು ಎದ್ದುಕಾಣುವ ಉದಾಹರಣೆ. ಕುಂದಾಪುರದ ಭಾಷೆಯ ಲಯವನ್ನು ಅವರು ಹಿಡಿದಿಟ್ಟ ರೀತಿ ಅನನ್ಯ. ವೈದೇಹಿಯವರ ಯಾವ ಕಥೆ ತುಂಬ ಇಷ್ಟ ಎಂದು ಬೊಟ್ಟು ಮಾಡುವಷ್ಟು ಕಷ್ಟದ ವಿಷಯ ಬೇರೊಂದಿಲ್ಲ! ಹಾಗೆ ತುಂಬ ಇಷ್ಟವಾದ ಕಥೆಗಳ ಪಟ್ಟಿ ಬೆಳೆಯುತ್ತಲೇ ಸಾಗುತ್ತದೆ. ಒಂದು ಅಪರಾಧ ತನಿಖೆ, ಮರಗಿಡಬಳ್ಳಿ, ಭೂತ, ಅಕ್ಕು, ಬಸ್ಸಿನೊಳಗೊಂದು ಪ್ರಜಾಪ್ರಭುತ್ವ, ಅಂತರಂಗದ ಪುಟಗಳು, ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು, ಒಗಟು, ಅಮ್ಮಚ್ಚಿಯೆಂಬ ನೆನಪು, ಅವಲಂಬಿತರು, ಮನೆಯ ವರೆಗಿನ ಹಾದಿ, ಬರೀ ಒಂದು ಪೆಟ್ಟಿಗೆ, ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು, ವಾಣಿಮಾಯಿ, ಅಂತರಾಳದ ಬದುಕು, ಹಕ್ಕಿಲ್ಲದವರು, ನಟಿ, ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ, ಕ್ರೌಂಚಪಕ್ಷಿಗಳು...ಹೀಗೆ ಪಟ್ಟಿ ಬೆಳೆಯುತ್ತದೆ.

ಬಡತನದ ಬೇಗೆಯಲ್ಲಿ ಬೇಯುತ್ತಲೇ ಒಳಗಿನ ತಂಪನ್ನು ಉಳಿಸಿಕೊಳ್ಳಲು ಯತ್ನಿಸುವ ಹೆಣ್ಣುಮಕ್ಕಳು, ಅವರು ಹಾಗೆ ಯತ್ನಿಸಿದಷ್ಟೂ ಇನ್ನಷ್ಟು ಅಗೋಚರ ಕಟ್ಟುಪಾಡುಗಳನ್ನು ವಿಧಿಸುವ ಸ್ಥಿತಿವಂತರು ಹಲವು ಕಥೆಗಳಲ್ಲಿ ಮೈತಳೆದಿದ್ದಾರೆ.

'ಬಡವರಾದ ಮೇಲೆ ಇಷ್ಟಾಗಾಗ' ಎನ್ನುವ ಭೂತ ಕತೆಯ ಪಾರ್ವತಿ ಮತ್ತು 'ಈ ಸೌದಾಮಿನಿ ಕಲಿಯುವುದರಲ್ಲಿಯೂ ಹೆಡ್ಡಿ, ಅವಳಿಗೆ ಯಾವುದರಲ್ಲಿಯೂ ಕಡಿಮೆಯಿಲ್ಲದ ಗಂಡ! ತನಗೇಕೆ ಯಾವುದೂ ಇಲ್ಲ' ಎಂದು ಪ್ರಶ್ನಿಸಿಕೊಳ್ಳುವ ಕಮಲಾವತಿ ಇಬ್ಬರೂ ಬಡತನದ ಕಾರಣದಿಂದಲೇ ಒಳ್ಳೆಯ ಗಂಡ, ಆ ಮೂಲಕ ದಕ್ಕುವ ನೆಮ್ಮದಿಯ ಕೌಟುಂಬಿಕ ಬದುಕನ್ನು ಪಡೆಯಲು ಹಕ್ಕಿಲ್ಲದವರು ಎಂಬಂತೆ ಸಮಾಜದ ಅವಮಾನಕ್ಕೆ ತುತ್ತಾಗುವ ಹತ್ತು ಹಲವು ಹೆಣ್ಣುಮಕ್ಕಳ ಪ್ರತಿರೂಪವಾಗಿದ್ದಾರೆ.

ವೈದೇಹಿಯವರು ತೆರೆದಿಡುವ ಲೋಕದಲ್ಲಿ 'ಯಾವ ಕ್ಷಣಗಳೂ ಸ್ವಂತವಲ್ಲ, ಎಲ್ಲ ಬಾಡಿಗೆಯವೇ. ಕೊಡುವ ಬಾಡಿಗೆಯಾದರೂ ಎಷ್ಟು! ತಾನೇ ದಿವಾಳಿಯಾಗುವಷ್ಟು' ಎನ್ನುವ 'ಗೂಡಿನೊಳಗೆ ಒಂದು ಹಕ್ಕಿ' ಕಥೆಯ ಕಾಲೇಜು ಕಲಿತ ಮಾಲತಿ ಇದ್ದಾಳೆ. ತಾನು ತುಂಬ ಇಷ್ಟ ಪಟ್ಟಿದ್ದ ಪೆಟ್ಟಿಗೆಯನ್ನು ಕೊನೆಗೂ ಮನೆಗೆ ತಂದ ಮೇಲೆ, ಯಾಕೆ ತಂದಿರಿ ಎಂದು ಪ್ರಶ್ನಿಸಿದವರಿಗೆ, 'ಅಯ್ಯೋ.. ಹಂಗರ್ ನಾನ್ ಒಂದ್ಪೆಟ್ಟಿಗಿ ಆಸೆ ಪಟ್ರೂ ಯಾರ್ಕ್ ಯೇನ್ ಯತ್ತ ಅಂತೆಲ್ಲ ಪ್ರಪಂಚಕ್ಕಿಡೀ ಸಾರ್ಕಾ? ಅದೇನ್ ಹಂಗರೆ ಅಷ್ಟ್ ಆಸೆ ಪಡುಕೂ ನಾನ್ ಹೇಳ್ಕಾ ಕೇಣ್ಕಾ.. ಡಂಗ್ರ ಹೊಡಿಕಾ' ಎಂದು ಒಳದನಿಯಲ್ಲಿ ಉದ್ದ ಕೂಗುವ ದೊಡಮ ಇದ್ದಾರೆ.

'ಪಾಪದವರಿದ್ದರೆ ಮನೇಲೆ ಕೂಡಿಸ್ತ ಜಾತಿ. ಹೆಂಗಸಾಗಿದ್ದಕ್ಕೆ ಅಡ್ಗೊಳಗೇ (ಅಡಿಗೆಮನೆ) ಕುಳ್ಕಣಗಾ? ಹಂಗಂತ ಎಲ್ಲಿ ಬರ್ಕಂತು' ಎಂದು ಜಾತ್ರೆಗೆ ಹೋಗುವ 'ಯಾತ್ರೆ' ಕತೆಯ ಸ್ಪಷ್ಟ ನಿಲುವಿನ ಕಲಿತಿರದ ಅತ್ತೆಯಂತೆಯೇ ಬೇಲಿ ಹರಿದುಕೊಂಡು ಹೊರಬರಬೇಕು ತಾನು ಎಂದುಕೊಳ್ಳುತ್ತಿರುವಾಗಲೂ ಮತ್ತೆ 'ತುದಿಯಲ್ಲಿ ಮುಟ್ಟಲಾರೆ, ಬುಡದಲ್ಲಿ ಇರಲಾರೆ, ನಡುವಿನಲ್ಲಿ ನಿಲ್ಲಲಾರೆ' ಎಂದು ಗೊಂದಲದಲ್ಲಿ ಬೀಳುವ 'ಚಿಪ್ಪು' ಕಥೆಯ ಕಾಲೇಜು ಕಲಿತ ಯಶೋದಳಿದ್ದಾಳೆ.

'ಅವಲಂಬಿತರು' ಕಥೆಯಲ್ಲಿ ಮಗುವನ್ನು ನೋಡಿಕೊಳ್ಳುವ ಪುಟ್ಟ ಹುಡುಗಿ ಅಹಲ್ಯೆ ತಾನು ಮಲಗುವಲ್ಲಿ ಫ್ಯಾನಿಲ್ಲ, ಅಲ್ಲಿರುವುದು ಸುಸಿ ಎಂದಾಗ ನಿರೂಪಕಿ ಹೇಳುತ್ತಾಳೆ, 'ಹೌದೌದು. ನಿಂಗೆ ಫ್ಯಾನು ಬೇರೆ ಹಾಕುತ್ತಾರೆ ಮತ್ತೆ. ಅಲ್ಲ ಹೆಣ್ಣೆ, ನೀನೇನೆಂತ ತಿಳಿದೆ? ಅದೆಲ್ಲ ಪುಗಸಟ್ಟೆ ಬರುತ್ತದೆ ಎಂತಲ?' ತಟ್ಟನೆ ಅಹಲ್ಯೆ ಹೇಳುತ್ತಾಳೆ 'ಪುಗಸಟ್ಟೆ ಬರುವುದು ಯಾವುದಿಲ್ಲ. ಹಾಗೆ ನೋಡಿದರೆ ಮನುಷ್ಯನೇ' ಎನ್ನುತ್ತಾಳೆ. ಮಗು ನೋಡಿಕೊಳ್ಳಲು ಮತ್ತು ಮನೆಗೆಲಸಕ್ಕೆಂದು ಹಳ್ಳಿಯಿಂದ ಚಿಕ್ಕ ಹುಡುಗಿಯರನ್ನು ತಂದಿಟ್ಟುಕೊಂಡು, ಸರಿಯಾಗಿ ಸಂಬಳವನ್ನು ಕೊಡದೆ ಒಳಗೊಳಗೇ ಶೋಷಿಸುವ ನಗರದಲ್ಲಿ ನೌಕರಿಗೆ ಹೋಗುವ ನಾಗರಿಕ(!) ದಂಪತಿಗಳ ಚಿತ್ರಣವನ್ನು ಈ ಒಂದು ಮಾತು ಎಷ್ಟು ಸಶಕ್ತವಾಗಿ ಪ್ರತಿಬಿಂಬಿಸುತ್ತದೆ. ಪುಡಿಗಾಸಿಗೆ ದಿನವಿಡೀ ಗೇಯುವ ಮನುಷ್ಯ ಮಾತ್ರವೇ ಬಲಾಢ್ಯರಿಗೆ ಪುಗಸಟ್ಟೆಯಾಗಿ ಸಿಗುವುದು ಎಂಬ ಕಟು ವಾಸ್ತವವನ್ನು ತೆರೆದಿಡಲು ಅಹಲ್ಯೆಯ ಈ ಒಂದು ಮಾತು ಸಾಕು.

'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕಥೆಯಲ್ಲಿ ಆಕೆ ಕೆಲಸ ಮಾಡುವ ಮನೆಯಾತನ ತಂಗಿ, ಒಮ್ಮೆ ಪುಟ್ಟಮ್ಮತ್ತೆಗೆ ಕೇಳುತ್ತಾಳೆ, 'ಪುಟ್ಟಮ್ಮ, ನನ್ನದೇ ಸರಿಯಾಣೆ ನೀನು, ನಿಂಗೂ ಹಸಿವು, ಬಾಯಾರಿಕೆ ಆಗದಿದ್ದೀತೆ?'. ಪುಟ್ಟಮ್ಮತ್ತೆ ಹೇಳುತ್ತಾಳೆ 'ಹಸಿವು ಬಾಯಾರಿಕೆ ಆಗದವರು ಯಾರಿಲ್ಲ. ಆದರೆ ಅದೆಲ್ಲ ಇರುವುದು ಇಗಾ ಇಲ್ಲಿ, ಈ ಎದೆಯಲ್ಲಿ, ಇದನ್ನೊಂದು ಕಲ್ಲು ಮಾಡಿಕೊಂಡರೆ ಎಲ್ಲ ಪಸೆ ಒಣಗಿ, ಬೇಗ ಚಿರುಟಿ ಹೋದೀತು'. ಇದು ಪುಟ್ಟಮ್ಮತ್ತೆಯ ಮಾತ್ರವಲ್ಲ, ಅಂದಿನ ಕಾಲಘಟ್ಟದಲ್ಲಿ ಎದೆ ಕಲ್ಲಾಗಿಸಿಕೊಳ್ಳುತ್ತ ನಡೆದ ಎಲ್ಲ ಬಾಲ ವಿಧವೆಯರ ಬದುಕಿನ ಕಟು ವಾಸ್ತವವೂ ಹೌದು. ಪುಟ್ಟಮ್ಮತ್ತೆಯಂತಹ ನೊಂದ ಜೀವಗಳ ಎದೆಗೆ ಉಪ್ಪುನೀರು ಸವರುವುದಕ್ಕೆ ಮುಂದಾಗುವ ರಂಗಪ್ಪಯ್ಯನ ಹೆಂಡತಿಯಂತವರೇ ಹೆಚ್ಚಿನವರು ಎನ್ನುವುದನ್ನು ವೈದೇಹಿಯವರು ಸೂಕ್ಷ್ಮವಾಗಿ ಎತ್ತಿತೋರಿಸುತ್ತಾರೆ.

ಹಲವು ಸ್ತರದಲ್ಲಿ ಬಿಚ್ಚಿಕೊಳ್ಳುತ್ತ ಸಾಗುವ 'ಅಲ್ಲಲ್ಲಿನ ಲೋಕದವರು' ಕಥೆ ನನ್ನನ್ನು ಕಾಡಿದೆ. ಈ ಕಥೆಯಲ್ಲಿ ಮೇಲ್ವರ್ಗದ ಯಜಮಾನತಿ, ಕೆಳವರ್ಗದ ಮಂಜಿ, ಗೌರಿಯ ನಡುವಣ ಸಂಬಂಧ. ಒಂದೇ ಜಾತಿಯವರಾದರೂ ಮನೆಯೊಡತಿ–ಅಡುಗೆ ಪಡಿಚಾಕರಿ

ಹೆಂಗಸಿನ ನಡುವಣ ಸಂಬಂಧ, ಗಂಡ-ಹೆಂಡತಿಯ ಸಂಬಂಧ, ಗಂಡು-ಹೆಣ್ಣಿನ ಸಂಬಂಧ, ಹೀಗೆ ಬೇರೆ ಬೇರೆ ಸ್ತರದಲ್ಲಿ ಸಾಗುವ ಈ ಕಥೆ ಭಾಷೆಯ ಧ್ವನಿಶಕ್ತಿಯನ್ನು ಸಮರ್ಥವಾಗಿ ಬಳಸಿಕೊಳ್ಳುವ ಕಾರಣದಿಂದಲೂ ಗಮನ ಸೆಳೆಯುತ್ತದೆ.

ಮೇಲ್ವರ್ಗದ ಲಕ್ಷ್ಮೀದೇವಮ್ಮ, ಮನೆಹೊರಗಿನ ಕೆಲಸಕ್ಕೆ ಬರುವ ಮಂಜಿ ಇಬ್ಬರ ನಡುವೆ ಯಜಮಾನತಿ-ಕೆಲಸದಾಳಿನ ಒಂದು ಸ್ಥಾಪಿತ ಲೆಕ್ಕಾಚಾರದ ಸಂಬಂಧದ ನಡುವೆ ಆಗೀಗ ಮಾನವೀಯತೆಯ ಎಳೆ ತೂಗುತ್ತದೆ. 'ಮಂಜಿ, ಯಾವ್ದೋ ಜನ್ಮದ್ ಒಡಹುಟ್ಟಿದವ್ಳ್ ನೀನ್' ಎಂದು ಆಗೀಗ ಲಕ್ಷ್ಮೀದೇವಮ್ಮ ಭಾವಪರವಶತೆಯಿಂದ ಹೇಳುವುದೇನೋ ನಿಜ. ಹಾಗಂತ ಆಕೆ ಎಲ್ಲಾದರೂ ತುಸು ಏರಿಕೊಂಡಂತೆ ಕಂಡಳೇ? ತಕ್ಷಣವೇ ಆಕೆ ಶೂದ್ರಜಾತಿಗೆ ಸೇರಿದವಳಾಗಿ, ಅವಳ ಸೊಕ್ಕು ಎದ್ದು ಕಂಡು, ಲಕ್ಷ್ಮೀದೇವಮ್ಮ ಮೆಟ್ಟಿಲೇರಿ ಮೇಲೆ ನಿಂತು, ಅವಳ ಸೊಕ್ಕನ್ನು ಮೆಟ್ಟಿ ನಿಲ್ಲುತ್ತಾರೆ. ಇದೇ ಮಂಜಿ, ಇನ್ನೊಬ್ಬಳು ಕೆಲಸದಾಕೆ ಗೌರಿಯೊಡನೆ ಸೇರಿ ಹಾವು ಎಂದು ಸುಳ್ಳು ಹೇಳಿ ಗುಂಡಕ್ಕನನ್ನು ಹೆದರಿಸಿ, ನಗುವ ಸಂದರ್ಭದಲ್ಲಿ 'ಯಾರ್ಯಾರ್ ಎಲ್ಲೆಲ್ಲ್ ಇರ್ಕೊ ಅಲ್ಲಲ್ಲೇ ಇರ್ಕ್ ಅಂಬ್ದ್ ಸುಳ್ಳ?' ಎನ್ನುತ್ತಾರೆ. ಮಂಜಿಯಾದರೇನು, ಗುಂಡಕ್ಕನನ್ನು ಹಿಲುಗಾರಿಕೆ ಮಾಡುವಷ್ಟು ಮುಂದುವರೆಯುವುದೇ ಎಂದುಕೊಳ್ಳುತ್ತಾರೆ. ಯಾವುದೋ ಕ್ಷಣದಲ್ಲಿ ಕೆಲಸದಾಕೆ ಎಂಬುದನ್ನು ಮರೆತು ಮಂಜಿಯನ್ನು ಅಭಿಮಾನದಿಂದ 'ಮಂಜಿ ಒಬ್ಳ್ ಬಂದ್ಳ್ ಅಂದ್ರೆ ಗಂಡುಬಲ ಬಂದ್ಹಾಂಗೆ' ಎಂದರೂ ಲಕ್ಷ್ಮೀದೇವಮ್ಮನಿಗೆ ತಾನು ಹೆಚ್ಚು ಸಲಿಗೆ ಕೊಡಬಾರದು ಎಂಬ ಎಚ್ಚರವೂ ಇದೆ. ಮತ್ತೆ ಈ ಮಂಜಿಯಾದರೂ ಸಾಮಾನ್ಯ ಹೆಣ್ಣಲ್ಲ, ಹೆಜ್ಜೆಗೊಮ್ಮೆ 'ಗಂಡ್ಸ್ರನ್ ಸನ್ನೆದ್ರು ನಿವಾಳ್ಸಿ' ಎನ್ನುವ ಮಂಜಿ ಕಲ್ಲುಕಟ್ಟಲಿಕ್ಕೂ ಸೈ, ತಾಪೆ ಹಿಡಿದು ಸಿಮೆಂಟು-ಗಾರೆಗೂ ಸೈ. ಲಕ್ಷ್ಮೀದೇವಮ್ಮನ ಮನೆಯ ಎಮ್ಮೆಯೊಂದು ಕರುಹಾಕಿ ಸ್ವಲ್ಪಹೊತ್ತಿಗೆ 'ಹೊಟ್ಟೆಗೆಂಡೆ' ಹೊರಗೆ ಬಂದು, ಲಕ್ಷ್ಮೀದೇವಮ್ಮ, ಗೌರಿ ಇಬ್ಬರೂ ಕಂಗಾಲಾಗಿ ನಿಂತಾಗ ಹೇಳಿ ಕಳಿಸಿದಂತೆ ಅತ್ತ ಬಂದ ಮಂಜಿ ಸೀದಾ ಕೈಹಾಕಿ ಗೆಂಡೆಯನ್ನು ಒಳಹಾಕಿದವಳು. ಗಂಡಸರಿಗೆ ಸರಿಸಮಾನವಾಗಿ ಕೆಲಸ ಮಾಡುವ ಛಾತಿಯ ಮಂಜಿಗೆ ಆಕೆ ಹೆಣ್ಣು ಎಂಬುದನ್ನು ಅವಳದೇ ಸ್ತರದಲ್ಲಿದ್ದು ಕೆಲಸ ಮಾಡುವ ಗೌರಿ ನೆನಪಿಸುತ್ತಾಳೆ 'ಗಂಡ್ಸ್ ಅಸ್ಲಕ್ಕಿತ್ತಲೆ, ಕೈಳ್ಗೆ ಮ್ಯಾಲೆ ಇಪ್ಪುದನ್ ಯಂತ ಮಾಡ್ತಿ' ಎಂದು ವಾರೆ ನಗುವಾಕೆ ಗೌರಿಯೇ. ಕಡೆಗೂ ಆಕೆ ಹೆಣ್ಣೇ ಎಂದು ಮಂಜಿಗೆ ಕುಕ್ಕಿ ನೆನಪು ಮಾಡಿಕೊಡುವ ಇರಾದೆಯೇ? ಹಾಗೆ ನೆನಪು ಮಾಡಿ ಅಮ್ಮನ ಮಾತಿನಿಂದಾಕೆ ಸ್ವಲ್ಪ ಉಬ್ಬಿದ್ದರೆ ಇಳಿಸಿಕೊಡುವ ಎಂದೇ? ಅಥವಾ ತನ್ನನ್ನು ಹೆಣ್ಣು ಎಂದು ಒಂದೇ ಮಾತಿನಲ್ಲಿ ಅಮ್ಮ ಬುರನಾಸು ಮಾಡಿಬಿಟ್ಟರಲ್ಲ, ಹೆಣ್ಣು ಅಂತಾದ ಮೇಲೆ ಹೆಣ್ಣೇ, ಏನೂ ಉಪಾಯವಿಲ್ಲ ಅಂತವೇ? ಇಷ್ಟಕ್ಕೆಲ್ಲ ಗಂಡು ಬಲ ಬೇಕೆ? ಹೆಣ್ಣಿನಿಂದಾಗದೇನು ಎಂಬರ್ಥವೇ? ಮಾತಿನಡಿಯಲ್ಲಿ ಏನುಂಟೆಂದು ಮನುಷ್ಯ ಕಂಡುಕೊಂಡ ದಿನ ಬ್ರಹ್ಮ ಈ ಆಟ ಸಾಕೆಂದು ಪುನಃ ಎಲೆ ಕಲೆಸಿಯಾನು' ಎಂದು ನಿರೂಪಕಿ ಹೇಳುತ್ತಾರೆ.

ಮಂಜಿ ಎಷ್ಟೇ ಆಪ್ತಳಾದರೂ, ತಾನು ಬ್ರಾಹ್ಮಣಿಕೆಯಲ್ಲಿ ಯಾವುದರಲ್ಲಿ ಕಡಿಮೆಯಿದ್ದೇನೆ ಎಂದು ಅವಳು ಕಾರ್ತೀಕ ಮಾಸದ ಸೋಮವಾರದ ಶಾಸ್ತ್ರವೆಂದು ಅಮ್ಮನಿಗೆ ಅಕ್ಕಿ ತಂದು ಕೊಟ್ಟು, ಅನ್ನ ಮಾಡಿಸಿಕೊಂಡು, ಮಡಿಯಲ್ಲೇ ಉಂಡರೂ, ಏನೇ ಮಾಡಿದರೂ, ಅರೆಕ್ಷಣ 'ತಪ್ಪಿ ಶೂದ್ರ ಜಾತಿಯಲ್ಲಿ ಹುಟ್ಟಿರಬೇಕು' ಎಂದು ಅಮ್ಮನಿಂದ ಹೇಳಿಸಿಕೊಂಡರೂ, ಜಾತಿ, ಅಂತಸ್ತಿನ ಗೆರೆ ದಾಟದ ಒಂದು ಎಚ್ಚರ ಲಕ್ಷ್ಮೀದೇವಮ್ಮನಲ್ಲಿ ಸದಾ ಜಾಗೃತವಾಗಿರುತ್ತದೆ.

ಹಾಗೆಂದು ಮಂಜಿ ಕೂಡ ಕಡಿಮೆ ತೂಕದವಳಲ್ಲ. ಮೊದಲ ಬಾರಿ ಬಡ ಮಾಂಕಾಳಮ್ಮ ಲಕ್ಷ್ಮೀದೇವಮ್ಮನ ಮನೆಗೆ ಒಳಗಿನ ಕೆಲಸ ಮಾಡಿಕೊಡಲು ಕೇಳಲು ಬಂದಾಗ, 'ಈ ಬದಿಯಿಂದ ಬನಿ. ಎದುರು ಬಾಗಿಲಾಗ್ ಬೇಡ' ಎನ್ನುತ್ತ ಹಿತ್ತಲ ಕಡೆಯಿಂದ ಕಳಿಸುತ್ತಾಳೆ. ಅಮ್ಮನ ಮನೆಯ ಎದುರು ಬಾಗಿಲಿನಲ್ಲಿ ಹೊಗ್ಗುವಷ್ಟು ದೊಡ್ಡಜನವೇ ಇದು ಎಂಬಂಥ ಭಾವ ಅವಳೊಳಗೆ ಇತ್ತೆ? ಏನೂ ಕೆಲಸ ಮಾಡದೇ, ಕಾಡುಹರಟೆ, ಯಾರದೋ ಮನೆಯ ಊಟ, ತಿಂಡಿಯಲ್ಲಿ ಕಾಲ ಕಳೆಯುವ ಬಳುವಟಿ ನಾರಾಯಣ ಎಂಬ ಬಡ ಬ್ರಾಹ್ಮಣನ ಹೆಂಡತಿಯಾದ ಮಾಂಕಾಳಿ ನಿಧಾನವಾಗಿ ನಾರಾಯಣಸಂಥವನ ಹೆಂಡತಿಯಾಗಿ ತನ್ನ ಸ್ಥಾನಮಾನ ಊರಿನವರ ಕಣ್ಣಿನಲ್ಲಿ ಏನೆಂಬುದನ್ನು ಅರ್ಥಮಾಡಿಕೊಳ್ಳುತ್ತಾಳೆ. ಅಂದಂದಿನ ಸಂದರ್ಭಕ್ಕೆ ಮನಸ್ಸಿಗೆ ಅನವಶ್ಯವೆಂದು ಕಂಡ ಅಭಿಮಾನಗಳನ್ನೆಲ್ಲ ಮರೆತು ದಿನದೂಡಲು ಕಲಿಯುತ್ತಾಳೆ.

ಕೆಳವರ್ಗದ ಮಹಿಳೆಯರಿಗಿಂತ ಮೇಲ್ಜಾತಿಯ ಮಹಿಳೆಯರಿಗೆ ಸಂಕೋಲೆಗಳು ಹೆಚ್ಚು. ಕೆಳವರ್ಗದ ಮಹಿಳೆಯರು ಬದುಕನ್ನು ಹೆಚ್ಚು ದೃಢತೆಯಿಂದ, ಧೈರ್ಯದಿಂದ ಎದುರಿಸುವುದನ್ನು ಕಥೆಯು ಇನ್ನೊಂದು ಸ್ತರದಲ್ಲಿ ಚಿತ್ರಿಸುತ್ತದೆ.

ಮಂಜಿಯನ್ನು ನೋಡಿದ ಮಾಂಕಾಳಿ ತನ್ನೊಳಗೆ ಕೇಳಿಕೊಳ್ಳುತ್ತಾಳೆ, 'ಸ್ವತಃ ಗಂಡಿನೊಡನೆ ಕೂಡಿಯೂ, ಕೂಡಿ ಬದುಕದೆ ಸ್ವತಂತ್ರವಾಗಿ ಗಂಡುಭಾರದ ಹೆಜ್ಜೆಗಳನ್ನಿಡುವ ಮಂಜಿಯೋ! ತನಗೆ ಗಂಡನಿದ್ದೂ, ಹೆಜ್ಜೆಯಲ್ಲಿ ಭಾರವಿಲ್ಲವೇಕೆ?' ಯೋಚಿಸುವ ಮಾಂಕಾಳಿಯಮ್ಮನಿಗೆ ಇದ್ದಕ್ಕಿದ್ದಂತೆ ತಾನು ಶೂದ್ರಜಾತಿಯಲ್ಲಿದ್ದರೂ ಹೆಚ್ಚು ಖುಷಿಯಲ್ಲಿರುತ್ತಿದ್ದೆ. ಗಂಡನ್ನ ಅತ್ತ ದೂಡಿಹಾಕಿ, ಬೀಸಿಂದ ಬದುಕುತ್ತಿದ್ದೆ ಎನ್ನಿಸುತ್ತದೆ. ಆ ಹೊತ್ತಿಗೆಲ್ಲ ಅವಳಿಗೆ ಬಾಲವಿಧವೆ ಗುಂಡಕ್ಕ ಹೇಳುವ ಮಾತು ಸತ್ಯವೆನ್ನಿಸುತ್ತದೆ. 'ಮಗ ಮಾಂಕಾಳಿ, ಬ್ರಾಂಬ್ರ ಜಾತಿ ಮಾ ಕೆಟ್ಟದ್. ಬದುಕುಗ್ ಬಿಡದ ಜಾತಿ ಅದ್. ಸೆರಗು ಬಿಗ್ದು ಕೆಲಸಮಾಡ್ತೀಯ... ಹಾಂಗೆ ಎಲ್ಲಿವರಿಗೆ ಇರ್ತೀಯೋ ಅಲ್ಲಿವರೆಗೆ ಗೆದ್ದೆ... ನೆನಪಿಟ್ಕೋ'. ಬಿರಾಮಣಿತಿಯಾಗಲು ಎಷ್ಟೆಲ್ಲ ಶಾಸ್ತ್ರ ಮಾಡುತ್ತಿದ್ದೇನೆ ಎಂದು ಬೀಗುವ ಮಂಜಿಗೂ ಗುಂಡಕ್ಕ ಇದೇ ಮಾತು ಹೇಳುತ್ತಾರೆ, 'ಮಂಜಿ ಗುಲಗುಂಜಿ, ನಿಂಗೆ ಬ್ರಾಂಬ್ರ ಜಾತಿಯಂತಕ್ಕಾ? ಒಂದು ಮೀನಾ, ಕೋಳಿಯಾ, ಮಾಂಸವಾ? ಬರೀ ಚಪ್ಪೆ ಜಾತಿ.

ಹೌದನಾ. ಈಗ ನೀನ್ಯಂತಂತೆಲ್ಲ ಆದೆ! ಬ್ರಾಂಬ್ರ ಜಾತಿಯೊಳ್ಗ್ ಹುಟ್ಕಂಡಿದ್ರೆ ನಿನ್ನ ಬದುಕೂಕೆ ಬಿಡ್ತಿದ್ರಾ? ಉಸಿರಿದ್ದ ಹಾಂಗೇ ಸಾಯ್ಸತಿದ್ರೋ' ಎನ್ನುತ್ತಾರೆ. ಬಾಲವಿಧವೆಯಾಗಿ ಗುಂಡಕ್ಕ ಅನುಭವಿಸಿದ ಕಟುಸಂಕಟದ ಕ್ಷಣಗಳು ಈ ಮಾತುಗಳಿಗೆ ಮೆತ್ತಿಕೊಂಡಿವೆ. ಗಂಡಸತ್ತ ಹೆಂಗಸನ್ನು ಬ್ರಾಹ್ಮಣ ಸಮಾಜ ಶತಮಾನಗಳಿಂದ ತುಳಿದುಕೊಂಡು ಬಂದ ವಾಸ್ತವತೆಗೆ ಕನ್ನಡಿ ಗುಂಡಕ್ಕನ ಈ ಮಾತುಗಳು.

ಲಕ್ಷ್ಮೀದೇವಮ್ಮನ ಮನೆ ಒಳಗಿನ ಕೆಲಸಗಳಿಗೆ ಸಹಾಯ ಮಾಡಲು ಅಡುಗೆಮನೆ ಸೇರುವ ಮಾಂಕಾಳಮ್ಮನ ಕುರಿತು ಲಕ್ಷ್ಮೀದೇವಮ್ಮನ ಮಗ ರಾಮದೇವರಿಗೆ ನಿಧಾನವಾಗಿ ವಿಶೇಷ ಅನುಕಂಪದ ಭಾವ ಹುಟ್ಟುತ್ತದೆ. ತನ್ನಮ್ಮನ ಹೊರತು ಯಾರಿಂದಲೂ ಒಂದು ಲೋಟ ನೀರೂ ಕೇಳಿ ಇಸಿದುಕೊಳ್ಳದವನು ಮಾಂಕಾಳಿ ನೀರು, ಮಜ್ಜಿಗೆಯನ್ನೋ ಕೊಟ್ಟರೆ ಕುಡಿಯುತ್ತಾನೆ, ಕ್ರಾಪಿಗೆ ಎಣ್ಣೆ ಕೇಳಿ ಪಡೆಯುತ್ತಾನೆ. ಇಷ್ಟಾಗಿ ಆತ ನೇರವಾಗಿ ಮಾತನಾಡುತ್ತಾನೆಯೇ, ಇಲ್ಲ. ಮಾಂಕಾಳಿಯಮ್ಮ ಇದ್ದಾಗ ಅಡುಗೆಮನೆಯ ಹೊಸಿಲು ದಾಟಿ ಒಳಬರುತ್ತಾನೆಯೇ, ಅದೂ ಇಲ್ಲ.

ಹೀಗೆ ಅಡುಗೆಮನೆಯ ಹೊಸಿಲು ದಾಟಿ ಒಳಬಾರದ ರಾಮದೇವರು ಮಾಂಕಾಳಿ ಏನು ಕೆಲಸ ಮಾಡಬಹುದು, ಏನು ಮಾಡಬಾರದು ಎಂಬುದನ್ನು ನಿಯಂತ್ರಿಸುವ ಅಧಿಕಾರವನ್ನು ಪ್ರಕಟಿಸುತ್ತಾನೆ. ಮೇಲ್ವರ್ಗದ ಪುರುಷನೊಬ್ಬ ತನ್ನದೇ ಜಾತಿಯ, ಆದರೆ ಬಡ ಹೆಣ್ಣುಮಗಳೊಬ್ಬಳು ಏನು ಕೆಲಸ ಮಾಡಬಹುದು, ಏನು ಮಾಡಬಾರದು ಎಂಬುದನ್ನು ವ್ಯಾಖ್ಯಾನಿಸುವ, ಹೇರುವ ಅಧಿಕಾರವನ್ನು ಹ್ಯಾಗೆ ಚಲಾಯಿಸುತ್ತಾರೆ ಎಂಬುದನ್ನು ಈ ಕಥೆ ಬಹಳ ಶಕ್ತವಾಗಿ ಕಟ್ಟಿಕೊಟ್ಟಿದೆ. ಇಡೀ ಕಥೆಯಲ್ಲಿ ರಾಮದೇವರಿಗೆ ಮಾಂಕಾಳಿಯಮ್ಮನ ಕುರಿತು ಅನುಕಂಪದ ಹೊರತಾಗಿ ಬೇರೇನೋ ಭಾವನೆ ಇದೆಯೇ, ಅಭಿಮಾನವಿದೆಯೇ, ಅದು ಸ್ಪಷ್ಟವಿಲ್ಲ. ಆ ಊರಿಗೆ ಹೊಸದಾಗಿ ಬಂದ ಬ್ಯಾಂಕಿಗೆ ಕಸ ಹೊಡೆಯುವವರು ಬೇಕಂತೆ, ಗಂಡನಿಗೋ ಅಥವಾ ಮಗ ರಾಮದೇವರಿಗೋ ಹೇಳಿ, ತನಗೆ ಆ ಕೆಲಸ ಸಿಗುವಂತೆ ಮಾಡಿಕೊಡಿ ಎಂದು ಮಾಂಕಾಳಿ ಲಕ್ಷ್ಮೀದೇವಮ್ಮನಿಗೆ ಕೇಳಿಕೊಳ್ಳುತ್ತಾಳೆ. ಲಕ್ಷ್ಮೀದೇವಮ್ಮ ಮಗನನ್ನು ಕರೆದು ಹೇಳುತ್ತಾರೆ. 'ಯಂತ? ಬ್ಯಾಂಕ್ ಕಸಗುಡಿಸು ಕೆಲ್ಸವ? ಮತ್ತೆಂತ ಅಲ್ದ? ಮರ್ಯಾದಸ್ತ್ರ ಮನೆ ಹೆಂಗಸ್ರ ಮಾಡು ಕೆಲ್ಸ ಅಲ್ಲ ಅದ್. ಅದ್ಕೆಲ್ಲ ಶೂದ್ರೇ ಸಮ, ನಿಂಗೊತ್ತಿಲ್ಲೆ' ಎನ್ನುತ್ತಾನೆ ರಾಮದೇವರು. ಮಾಂಕಾಳಿಗೆ ತನ್ನ 'ಮರ್ಯಾದೆ' ನೆನೆದು ಅತ್ತ ಅಳುವೂ, ಇತ್ತ ನಗೆಯೂ.

ಕಸ ಹೊಡೆಯುವ ಕೆಲಸಗಳೆಲ್ಲ ಶೂದ್ರರಿಗೆ, ತಮ್ಮ ಜಾತಿಯವರು ಮರ್ಯಾದಸ್ತರು, ಕಸ ಹೊಡೆಯುವುದು ಮರ್ಯಾದಸ್ತರ ಮನೆ ಹೆಂಗಸರು ಮಾಡುವ ಕೆಲಸವಲ್ಲ ಎಂಬ ಮೇಲ್ವರ್ಗದ ಪುರುಷರ ಪ್ರತಿನಿಧಿಯಾಗಿರುವ ರಾಮದೇವರ ಚಿತ್ರಣವನ್ನು ನಾಲ್ಕಾರು ವಾಕ್ಯಗಳಲ್ಲೇ ವೈದೇಹಿಯವರು ಇಲ್ಲಿ ಚಿತ್ರಿಸಿರುವುದು ವಿಶಿಷ್ಟವಾಗಿದೆ.

ಕತೆಯ ಕೊನೆ ಕೂಡ ವರ್ಗ, ಲಿಂಗ ಸಂಘರ್ಷದ ಚಿತ್ರಣವೊಂದನ್ನು ಸೂಕ್ಷ್ಮವಾಗಿ ಚಿತ್ರಿಸುತ್ತದೆ. ಮಂಜಿ ಕೊನೆಗೂ ಮಗಳಿಗೆ ನೋಡಲು ಥೇಟ್ 'ಬಿರಾಮಣರ ಹಾಂಗೇ' ಇರುವ ಗಂಡನ್ನು ಹುಡುಕಿ ಮದುವೆ ಮಾಡುತ್ತಾಳೆ. ಕಾಫಿಕ್ಲಬ್ ಇಟ್ಟಿದ್ದ ಹುಡುಗನಾತ. ಮಂಜಿಯ ಮಗನಾಗಲೇ ಘಟ್ಟದ ಮೇಲೆ ಹೋಗಿ 'ಉಡುಪಿ ಬ್ರಾಹ್ಮಣರ ಚಾ ಕಾಫಿ ಕ್ಲಬ್' ಇಟ್ಟು ದುಡ್ಡು ಮಾಡುತ್ತಿದ್ದ. ಹೀಗೆ ಮಂಜಿ ತನ್ನ ಜನರ ನಡುವೆಯೇ ಒಂದು ಬಗೆಯ ಬ್ರಾಹ್ಮಣ ಶ್ರೇಷ್ಠತೆಯನ್ನು ಪಡೆದಳು. ಮಂಜಿಯ ಅಳಿಯನ ಹೋಟೆಲು ವಹಿವಾಟು ಹೆಚ್ಚಿದಂತೆ, ಮಂಜಿಯ ಮಗಳಿಗೆ ಕೆಲಸದ ಹೊರೆ ಹೆಚ್ಚಾಗಿ, 'ಬೈಯಾಗುವ ಹೊತ್ತಿಗೆ ಸರಿಯಾಗಿ ಮಂಡೆ ಕೀಸಿಕೊಳ್ಳಲು ಅವಳಿಗೆ ಪುರಸೊತ್ತಿಲ್ಲ' ಎಂದು ಅಲವತ್ತುಕೊಳ್ಳುವ ಮಂಜಿಗೆ ಅಳಿಯ 'ಯಾರಾದರೂ ಬಿರಾಮಣರ ಹೆಂಗ್ಸು ಸಿಕ್ಕ್‌ತ್ರಾ' ಕಾಣೆ ಎನ್ನುತ್ತಾನೆ. ಮಾಂಕಾಳಿಯಮ್ಮನನ್ನು ಕೇಳಿದರೆ ಹೇಗೆ ಎಂದು ಆಲೋಚಿಸಿ, ಮಂಜಿ ಲಕ್ಷ್ಮಿದೇವಮ್ಮನ ಮುಂದೆ ತನ್ನ ಯೋಚನೆ ಇಡುತ್ತಾಳೆ. 'ಏನೋಪ್ಪ ಶೂದ್ರರ ಹೋಟೆಲಿಗೆ ಉದ್ದು ಅರೆಯುಕೆ ಹೋಪುದಂದ್ರೆ' ಅಮ್ಮ ಅನುಮಾನಿಸಿದಾಗ 'ಅದ್ಯಾಕ್ ಹಾಂಗಂತ್ರಿಯೇ ಅಮ್ಮ? ಒಳಗೆ ಇಪ್ಪವ್ರೆಲ್ಲ ನಿಮ್ಮ ಜನವೇ' ಎನ್ನುತ್ತಾಳೆ ಮಂಜಿ. ಕೊನೆಗೆ ಮಂಜಿ ಮಾಂಕಾಳಿಯನ್ನೇ ಕೇಳುತ್ತಾಳೆ. ಗಂಡನೊಂದಿಗೆ ಕೇಳಿ ನಾಳೆ ಹೇಳಿ ಎನ್ನುತ್ತಾಳೆ. ಮಾಂಕಾಳಿ ತುಸು ಹೊತ್ತು ಸುಮ್ಮನೇ ನಿಲ್ಲುತ್ತಾಳೆ, ಮತ್ತೆ ಹೇಳುತ್ತಾಳೆ, 'ಮಂಜಿ, ಅಯ್ಯನ್ ಹತ್ರ ಕೇಂಬುದು ಯಂತ ಉಳೀತ್? ಉಳಿದಿತ್ತಾ ಏನಾರೂ? ಅಯ್ಯನತ್ರ ಬಿಟ್, ಯಾವ ನರಮನಷರ ಹತ್ರ ಕೇಂಬ್ದೂ ಯಂತದೂ ಉಳಿಲಿಲ್ಲೆ. ನಾ ಬತ್ತೆ ಅಂದ್ಮೇಲೆ ಬತ್ನೇ' ಎಂದು ತನ್ನ ಗಟ್ಟಿ ನಿರ್ಧಾರ ಹೇಳುತ್ತಾಳೆ. ಈ ಸುದ್ದಿ ಕೇಳಿದ ಗಂಡ ನಾರಾಯಣ ಖುಷಿಯಾಗಿ, ಎದುರು ಸಿಕ್ಕವರ ಬಳಿಯೆಲ್ಲ, 'ಇನ್ನ್ ನಮ್ಗೆ ಮಸಾಲೆದೋಸಿ, ಪೋಡಿ, ವಡಿ ತಿಂಬುಕೆ ಯಾರ ಹಂಗಿಲ್ಯೇ...' ಎನ್ನುತ್ತ ತಿರುಗುತ್ತಾನೆ.

ರಾಮದೇವರು?

ಮಾಂಕಾಳಿಯಮ್ಮ ಅಡುಗೆಮನೆಯಲ್ಲಿದ್ದಾಗ ಎಂದೂ ಹೊಸಿಲು ದಾಟದ ಆತ ಸೀದಾ ಅಡುಗೆಕೋಣೆಯೊಳಗೆ ಬರುತ್ತಾನೆ. ಅಲ್ಲೇ ತರಕಾರಿ ಹೆಚ್ಚುತ್ತಿದ್ದ ಮಾಂಕಾಳಿಯತ್ತ ತಿರುಗದೆ, 'ಅಮ್ಮ, ನಿಂಗೂ ಬುದ್ದಿ ಇಲ್ಯ? ಮಂಜಿ ಅಳಿಯನ್ ಹೋಟ್ಲಿಗೆ ಅರೆಯುಕೆ ಹೋಪಷ್ಟ್ ಆಯ್ತಾ ಇವ್ಳಿಗೆ? ಕಡಿಮೆಯಾದ್ರೆ ನಾವಿಲ್ಯ ಇಲ್ಲಿ? ಏನಾದ್ರೂ ವ್ಯವಸ್ಥೆ ಮಾಡತ್ತಿಲ್ಯ? ಥತ್... ಇದ್ನಂಗ್ ಸಮಕಾಂತಿಲ್ಲೆ' ಎನ್ನುತ್ತಾನೆ. ಸ್ವರ ಉರಿಯುತ್ತಿತ್ತು. ಯಾವುದರಿಂದ?

ಕಥೆ ಇಲ್ಲಿಗೆ ಮುಗಿಯುತ್ತದೆ.

'ಅಯ್ಯನತ್ರ ಬಿಟ್, ಯಾವ ನರ ಮನಷರ ಹತ್ರ ಕೇಂಬ್ದೂ ಯಂತದೂ ಉಳಿಲಿಲ್ಲೆ.' ಎಂದು ಮಾಂಕಾಳಿ ಹೇಳುವ ಧೈರ್ಯ ಪ್ರಕಟಿಸಿದ್ದರೂ, ರಾಮದೇವರು 'ಇದ್ನಂಗ್

ಸಮಕಾಂತಿಲ್ಲೆ' ಎಂದು ಅವಳತ್ತ ತಿರುಗದೆಯೇ ಹೇಳಿದಾಗ ಏನು ಅಂದುಕೊಂಡಳು ಮನಸ್ಸಿನಲ್ಲಿ ಎನ್ನುವುದು ಕಥೆಯಲ್ಲಿ ಪ್ರಕಟವಿಲ್ಲ. ಅದು ಓದುಗರ ಊಹೆಗೆ ಬಿಟ್ಟ ವಿಚಾರ.

ಇಡೀ ಕಥೆಯಲ್ಲಿ ಮಾಂಕಾಳಿಯಮ್ಮ- ರಾಮದೇವರ ನಡುವಣ ಮೌನ ಸಂಬಂಧ ಒಗಟಾಗಿಯೇ ಉಳಿಯುತ್ತದೆ. ಅವಳು ಬ್ಯಾಂಕಿನ ಕಸ ಹೊಡೆಯುವುದೋ, ಹೋಟೆಲ್ಗೆ ಹಿಟ್ಟು ರುಬ್ಬಲೋ ಹೋಗುವಂತಹ ಕೆಲಸ ಮಾಡತಕ್ಕದಲ್ಲ, ಅವೆಲ್ಲ ತಮ್ಮ ಜಾತಿಯ ಹೆಂಗಸರ ಮರ್ಯಾದೆಗೆ ಕುಂದು ಬರುವಂತಹ ಕೆಲಸಗಳು. ಆದರೆ ತಮ್ಮ ಮನೆಯಲ್ಲಿ ಅಡುಗೆ ಕೆಲಸಗಳಿಗೆ ಪಡಿಚಾಕರಿ ಕೆಲಸ ಮಾಡಬಹುದು ಎಂಬಂತಹ ಮೇಲ್ವರ್ಗದ ಪುರುಷನ ಪ್ರತಿನಿಧಿಯಾಗಿ ರಾಮದೇವರು ಧ್ವನಿಸುತ್ತಿದ್ದಾನೆಯೇ? ಅದು ದುಡಿಯಲಾರದ ಗಂಡನೊಂದಿಗೆ ಒದ್ದಾಡುವ, ಬದುಕಿನ ಬಂಡಿ ದೂಡಲು ಅಡುಗೆ ಕೆಲಸ ಮಾಡುವ, ಸ್ವಭಾವತಃ ಒಳ್ಳೆಯವಳಾದ ಮಾಂಕಾಳಿಯ ಬಗ್ಗೆ ಇರುವ ಅವನಿಗೆ ಅಭಿಮಾನವೇ? ಅಮ್ಮನ ಹೊರತು ಯಾರಿಂದಲೂ ಒಂದು ಲೋಟ ನೀರು ಇಸಿದುಕೊಳ್ಳದ ಆತ ಮಾಂಕಾಳಿಯಮ್ಮನ ಬಳಿ ನೀರು, ಮಜ್ಜಿಗೆ ಇಸಿದುಕೊಂಡು ಕುಡಿಯುವಷ್ಟು ಆತ್ಮೀಯತೆ ತೋರುತ್ತಾನೆ. ಇಷ್ಟರ ಹೊರತಾಗಿ ಆತನಿಗೆ ಮಾಂಕಾಳಿಯ ಕುರಿತು ಇರುವ ಭಾವನೆಗಳೆಲ್ಲೂ ವಾಚ್ಯವಾಗಿ ಪ್ರಕಟವಾಗಿಲ್ಲ. ಚೊಚ್ಚಲ ಬಾಣಂತಿಯಾಗಿ, ಅಮ್ಮನ ಮನೆಯ ಕೆಲಸಕ್ಕೆ ಹೋಗದೇ ಮನೆಯಲ್ಲಿರುವ ಮಾಂಕಾಳಿಯ ಕಣ್ಣೆದುರು ಲಕ್ಷ್ಮೀದೇವಮ್ಮನ ಅಡುಗೆಮನೆಯ ಹೊಸ್ತಿಲು ಸುಳಿಯುತ್ತಿತ್ತು. ರಾಮದೇವರು ಹೊಸಿಲು ದಾಟಿ ಬಂದಂತೆ, ಅಲ್ಲಿಂದ ಹೋಗಬೇಕೆಂದುಕೊಂಡರೂ ಸಾಧ್ಯವಾಗದೇ ಅಲ್ಲೇ ನಿಂತಂತೆ ಹೀಗೆ ಚಿತ್ರಗಳು. ಅವಳು ಮಲಗಿದಲ್ಲೇ ಚಿಂತಿಸುತ್ತಾಳೆ... ತನ್ನ ಹಸಿವನ್ನಲ್ಲ, ಗಂಡ ನಾರಾಯಣನ ಬಳುವಟಿ ಬುದ್ಧಿಯನ್ನಲ್ಲ, ಸೂರು ಸೋರನ್ನಲ್ಲ, ನಾಡದ್ದನ್ನಲ್ಲ. ಅವಳು ಯೋಚಿಸುವುದು 'ಅಡುಗೆಮನೆ ಹೊಸಿಲನ್ನು ಎಂದೂ ದಾಟದ ರಾಮದೇವರನ್ನು ಕುರಿತು. ಅವನಿಗೆ ಹೆಣ್ಣು ನೋಡಲು ಅವರೆಲ್ಲ ಹೋಗಿದ್ದಾರೆಂದು ತಿಳಿದು ತಳಮಳಿಸುತ್ತಾಳೆ.

ಇಡೀ ಕಥೆಯಲ್ಲಿ ಕಾಡುವ ಇನ್ನೊಂದು ಚಿತ್ರವೂ ಇದೆ. ಜಾತಿ ತರತಮದ ಕ್ರೂರ ವ್ಯವಸ್ಥೆಯ ಇನ್ನೊಂದು ಮಗ್ಗುಲು ಅದು. ಊರಲ್ಲಿ ಯಾರು ಸತ್ತರೂ, ಶಾಂತಿ ಪುಷ್ಟಿ ಮಾಡಿಸಿದರೂ ದಾನ ಹಿಡಿಯಲು ಊರಲ್ಲಿರುವ ಗಟ್ಟಿಜನ ಎಂದರೆ ಮಾಂಕಾಳಿಯ ಗಂಡ ನಾರಾಯಣ. ಹಾಗೆ ವಯಸ್ಸಾದ ಗುಂಡಕ್ಕ ಸತ್ತಾಗ, ಲಕ್ಷ್ಮೀದೇವಮ್ಮ ನಾರಾಯಣನಿಗೆ ದಾನ ಹಿಡಿಯಲು ಬೇಕು, ಆ ಸಮಯಕ್ಕೆ ಎಲ್ಲೂ ಹೋಗಬೇಡ ಎನ್ನುತ್ತಾರೆ. ಅದನ್ನು ಕೇಳಿಸಿಕೊಂಡ ಬಸಿರಿ ಮಾಂಕಾಳಿಗೆ ತಳಮಳವಾಗುತ್ತದೆ. ತನಗೆ ಒಳ್ಳೆಯದಾಗಲಿ ಎಂದು ತಾಯತ ಮಾಡಿಸಿಕೊಟ್ಟ ಅಮ್ಮನೇ ಈಗ ಹೀಗೆ ಬೇಡದ ದಾನವನ್ನೆಲ್ಲ ಹಿಡಿಯುವಂತೆ ಗಂಡನಿಗೆ ಹೇಳುತ್ತಾರಲ್ಲ ಎಂದು ಸಂಕಟಪಡುತ್ತಾಳೆ. ಆದರೆ ಲಕ್ಷ್ಮೀದೇವಮ್ಮನಿಗೆ

ಎದುರಾಡುವುದು ಹೇಗೆ. ಸರಿ, ಗಂಡನನ್ನೇ ಕೂರಿಸಿಕೊಂಡು ಹೇಳುತ್ತಾಳೆ. ಅದಾವ ಸ್ಫೂರ್ತಿಯಿಂದಲೋ ನಾರಾಯಣ ಕೇಳುತ್ತಾನೆ, 'ಹಂಗರೆ ನೀನ್ ಆ ಕೊರಾತಿಗೆ ಎಣ್ಣೆ ಸುಳ್ದ್ ದಾನ ಕೊಡ್ತಿಯಲೆ. ಅನ್ನ ಬಡ್ಸಿ ಕೊಡ್ತಿಯಲೆ! ಅದೆಲ್ಲ ಅಡ್ಡಿಲ್ಯಾ? ಪಾಪದವು! ಅದ್ಕೂ ಇದ್ಕೂ ವಜಾವಟ್ ಆಯ್ತ್ ಬಿಡ್' ಜಾತಿ ವ್ಯವಸ್ಥೆಯಲ್ಲಿ ತೀರಾ ಕೆಳಗಿನ ಮೆಟ್ಟಿಲಿನಲ್ಲಿರುವ ಕೊರಗರಿಗೆ ಪಂಚಮದಾನ ಎಂದು ಕೊಡುವ ರೂಢಿ ಅದು. ಏನಾದರೂ ಹುಷಾರಿಲ್ಲದಿದ್ದಾಗ, ಕೊರಗರಿಗೆ ಅಡುಗೆ ಬಡಿಸಿ, ಅದರಲ್ಲಿ ಹುಷಾರಿಲ್ಲದಿದ್ದವರ ಕೂದಲು, ಉಗುರು ಇಟ್ಟು ದಾನ ಕೊಡುವುದು. ನಾರಾಯಣನ ಪ್ರಕಾರ ತಾವು ಹಾಗೆ ಕೊರಗರಿಗೆ ದಾನ ಕೊಡುವುದಕ್ಕೆ ಮತ್ತು ತಾನು ಈಗ ಸತ್ತವರ ಕ್ರಿಯಾಕರ್ಮಾದಿ ಸಮಯದಲ್ಲಿ ತೆಗೆದುಕೊಳ್ಳುವ ದಾನಕ್ಕೆ ವ್ಯತ್ಯಾಸವೇನಿಲ್ಲ. ಆದರೆ ತನ್ನ ಗಂಡ ಬೇಡದ ದಾನವನ್ನು ಹಿಡಿಯಬಾರದು, ಅದರಿಂದ ತಮಗೆ ಒಳ್ಳೆಯದಲ್ಲ ಎಂದು ಯೋಚಿಸುವ ಮಾಂಕಾಳಿಗೆ ತಾನು ಕೊರಾತಿಗೆ ಕೊಡುವ ದಾನ 'ಅದು ಎಂದಿನಿಂದ ನಡೆದುಬಂದ ಲೋಕ ರೀತಿಯಲ್ಲವೇ? ಅವಳಿಗೂ, ತಮಗೂ ಹೋಲಿಸುವುದು ಸಮವೇ' ಎನ್ನಿಸುತ್ತದೆ. ಬಡತನದ ಕಾರಣದಿಂದ ಅವಮಾನದ ಪ್ರಸಂಗಗಳನ್ನು ಎದುರಿಸುವ ಮಾಂಕಾಳಿ ಕೂಡ ಕೊರಾತಿಗೆ ತಾನು ಕೊಡುವ ದಾನ ಅವರಿಗೆ ಮಾಡುವ ಅವಮಾನ ಎಂದು ಯೋಚಿಸುವುದಿಲ್ಲ. ಹಾಗೆಂದು ನಾರಾಯಣ ಪೂರ್ತಿ ಅರಿವಿನಿಂದ ಈ ಮಾತು ಹೇಳಿದ ಎಂದೇನಿಲ್ಲ. ಆತನಿಗೆ ತಾನು ದಾನ ಹಿಡಿಯುವುದನ್ನು ಸಮರ್ಥಿಸಿಕೊಳ್ಳಲು ಇದೊಂದು ಅಂಶವಾಗುತ್ತದೆ ಅಷ್ಟೆ.

ಮಾಂಕಾಳಿ ಹಡೆಯುವಾಗ ಹತ್ತಿರವಿದ್ದು ಸಹಾಯ ಮಾಡಿದ ಮಂಜಿ ಲಕ್ಷ್ಮೀದೇವಮ್ಮ ಕಳಿಸಿದ ಕಾಫಿಯನ್ನು ಬಗ್ಗಿಸಿಕೊಟ್ಟು ಹೇಳುತ್ತಾಳೆ, 'ಮಡಿ ಎಲ್ಲ ಎದ್ದ್ ಗಟ್ಟಿಯಾದ್ಮೇಲೆ, ಈಗ ಕುಡಿನಿಯೇ. ನಾಯಾರ್ಹತ್ರೂ ಹೇಳತ್ತಿಲ್ಲೆ' ಎಂದು ಮಾಂಕಾಳಿಗೆ ಕಾಫಿ ಕುಡಿಸುತ್ತಾಳೆ. ಮೈತುಂಬ ಹೊದೆಸಿ, 'ಅಬ್ಬಿ ಮಗ ಸಾವ್ಕಾಶ ಮಕ್ಕಣಿ' ಎಂದು ಹೋಗುತ್ತಾಳೆ. ಮಾನವೀಯ ಮಿಡಿತವೊಂದು ಆಗೀಗ ಎಲ್ಲ ಪಾತ್ರಗಳೆದೆಯಲ್ಲಿಯೂ ತುಡಿಯುತ್ತದೆ. ಅಷ್ಟೇ ಬೇಗನೆ ತಮ್ಮ ತಮ್ಮ ಸ್ಥಾನದ ಎಚ್ಚರವೂ ಅವರನ್ನು ಕಾಯುತ್ತಿರುತ್ತದೆ.

ಮಂಜಿಯ ಮಗ ಘಟ್ಟದ ಮೇಲೆ ಮತ್ತು ಅಳಿಯ ಇದ್ದೂರಿನಲ್ಲಿಯೇ ಹೋಟೆಲು ಇಟ್ಟು, ಗಟ್ಟಿಕುಳವಾಗಿದ್ದನ್ನು ಮಂಜಿ ಅಭಿಮಾನದಿಂದ ಹೇಳಿಕೊಳ್ಳುತ್ತಲೇ ಇರುತ್ತಾಳೆ. ಹೀಗೆ ಮಂಜಿಯ ಎದುರು ನಿಂತರೆ ಮಾಂಕಾಳಿಯಮ್ಮನಿಗೂ ತನ್ನ 'ಊಂಚಿನ' ನೆನಪಾಗದು. ಹಾಗೆಂತ ಮಂಜಿಯನ್ನು ತನ್ನ ಅಡುಗೆಕೋಣೆ, ದೇವರಕೋಣೆಗೆ ಹೊಗ್ಗಿಸುವ ಪ್ರಸಂಗ ಬಂದರೆ? ಕಥಾ ನಿರೂಪಕಿ ಹೇಳುತ್ತಾರೆ, 'ಬಹುಶಃ ಆಗ ನೆನಪಾದೀತು. ಜಾತಿಯೆಂಬುದು ಕೇವಲ ಹೊಸಿಲು ಗೆರೆಯಷ್ಟೇ? ಅಷ್ಟು ಮಾತ್ರವೇ?' ವೈದೇಹಿಯವರ ಕಥಾನಕದಲ್ಲಿ ಭಾಷೆಗಿರುವ ಕಾವ್ಯ ಧ್ವನಿಶಕ್ತಿಯೇ ಇದು. ಒಂದು ಮಾತು, ಒಂದು ವಾಕ್ಯ

ಹತ್ತಾರು ಅರ್ಥವನ್ನು ಹೊಮ್ಮಿಸುತ್ತದೆ. ಹೀಗೆ ಇಲ್ಲಿ ಎಲ್ಲ ಪಾತ್ರಗಳೂ ಅಲ್ಲಲ್ಲಿನ ಲೋಕದವರಾಗಿ, ಅವರವರದ್ದೇ ಲೋಕವನ್ನು ಕಟ್ಟಿಕೊಂಡಿದ್ದಾರೆ. ಅವರವರ ಲೋಕದಲ್ಲಿದ್ದುಕೊಂಡು, ಇನ್ನೊಂದು ಲೋಕದವರನ್ನು ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ತುಳಿಯಲು, ಮಣಿಸಲು ಯತ್ನಿಸುತ್ತಿರುತ್ತಾರೆ. ಅವರ ನಡುವೆ ಅಪ್ಪಟ ಮಾನವೀಯ ಸಂವೇದನೆಯ ಕ್ಷಣಗಳೂ ಇವೆ. ಆದರೆ ಆ ಕ್ಷಣಗಳನ್ನು ದಾಟುತ್ತಿದ್ದಂತೆ ವರ್ಗ, ಜಾತಿ, ಲಿಂಗ ಪ್ರಜ್ಞೆಗಳು ಜಾಗೃತವಾಗುತ್ತವೆ. ಹಲವು ಸ್ತರಗಳಲ್ಲಿ ತೆರೆಯುತ್ತ ಹೋಗುವ ಕಥೆ ರೋಚಕ ತಿರುವಿನ ಅಗತ್ಯವೇ ಇಲ್ಲದೆ, ಕಟುವಾಸ್ತವದ ಹಲವು ಮಗ್ಗಲುಗಳನ್ನು ಕಾಣಿಸುತ್ತದೆ ಮತ್ತು ಕಾಡುತ್ತದೆ.



‘ಪಶ್ಚಿಮದ ಸ್ತ್ರೀವಾದದಲ್ಲಿ ಹೆಣ್ಣಿನ ಮಾತಿಗೆ ಕಾವ್ಯದ ಗುಣವನ್ನೂ, ಅವೈಚಾರಿಕವಾಗಿ, ಮುಕ್ತಾಂತ ಸಹಿತವಾಗಿ ಉಳಿಯುವ ಸಾಮರ್ಥ್ಯವನ್ನೂ ನೀಡಲಾಗಿದೆ. ಅಂದರೆ ದಮನಕಾರಿಯಾದ ಮಾನವನಿರ್ಮಿತ ಸಮಾಜದಲ್ಲಿ ವ್ಯವಸ್ಥೆ ಮುಖ್ಯ, ವೈಚಾರಿಕತೆ ಮುಖ್ಯ, ಶಿಸ್ತು ಮುಖ್ಯ. ಇವು ಇಲ್ಲದಿದ್ದಲ್ಲಿ ಶಿಕ್ಷೆಗೆ ಗುರಿಯಾಗಬೇಕಾಗುತ್ತದೆ. ಅಕ್ಕುವಿನಲ್ಲಿ ಅಕ್ಕು ಆಡುವ ಮಾತುಗಳು ಅವೈಚಾರಿಕವಾದವು. ಇಂಥ ಮಾತುಗಳೇ ಕಾವ್ಯಾತ್ಮಕ ಸಾಧ್ಯತೆಗಳನ್ನು ತೋರಿಸಿಕೊಡುತ್ತವೆ. ಅಷ್ಟೇ ಅಲ್ಲದೆ, ಅಕ್ಕುವಿನ ‘ಕಾಲ’ ಮತ್ತು ‘ದೇಶ’ದ ಪ್ರಜ್ಞೆ ಪಿತೃಪ್ರಧಾನ ವ್ಯವಸ್ಥೆಯ ಕಾಲದೇಶಗಳ ಪ್ರಜ್ಞೆಗೆ ಸವಾಲೆಸೆಯುತ್ತದೆ. ಕ್ರಿಸ್ಟೇವಾ ಇದನ್ನು ‘ಸ್ತ್ರೀಯ ಸಮಯ’ ಎಂದು ಕರೆಯುತ್ತಾಳೆ. ಮುಂದುವರೆದು ಹೇಳುವುದಾದರೆ, ಅಕ್ಕುವಿನ ಹುಚ್ಚನ್ನು ಅಕ್ಷರಶಃ ಗಣನೆಗೆ ತೆಗೆದುಕೊಂಡು ಅರ್ಥೈಸಿದರೆ ಆ ಸಮಾಜದ ಅಮಾನವೀಯ ಮುಖ ಗೋಚರಿಸುತ್ತದೆ. ಸಾಂಕೇತಿಕವಾಗಿ ಅರ್ಥೈಸಹೊರಟರೆ ಅದು ವ್ಯವಸ್ಥೆಯ ವಿರುದ್ಧ ದಂಗೆಯಾಗಿ ಕಾಣುತ್ತದೆ. ಕತೆ ವಾಚ್ಯಾರ್ಥದಲ್ಲಿ ಹುಚ್ಚನ್ನು ಅಸ್ವಸ್ಥ ಸಮಾಜದ ಶಾಪವಾಗಿ ತೋರಿಸಿ, ಸಂಕೇತಾರ್ಥದಲ್ಲಿ ಅದನ್ನು ದಂಗೆಯಾಗಿ ತೋರಿಸುತ್ತದೆ. ಇದೊಂದು ಅತ್ಯದ್ಭುತ ಸಾಧನೆಯೆಂದೇ ನನಗೆ ಕಾಣಿಸುತ್ತದೆ.’

- **ಮನು ಚಕ್ರವರ್ತಿ**

# ಕುದಿ ಮರೆವ ನಗೆ ಮತ್ತು ಕುದಿ ಮರೆಯ ನಗೆ
## (ವೈದೇಹಿಯವರ 'ಹೂವ ಕಟ್ಟುವ ಕಾಯಕ')

✦ ಹೆಚ್ ಎಸ್ ರಾಘವೇಂದ್ರರಾವ್

ನುಡಿಯಲ್ಲಿ ಮೂಡಿಬರುವ ಪ್ರತಿಯೊಂದು ಲೋಕಕ್ಕೂ ಅದರದೇ ಆದ ವಿಶಿಷ್ಟ ಚಹರೆಗಳಿರುತ್ತವೆ. ಏಕೆಂದರೆ, ಬರವಣಿಗೆ ಎನ್ನುವುದು ಇಂದ್ರಿಯಗಳ ಗ್ರಹಿಕೆಗಳಿಗೆ ಕೊಟ್ಟ ಭಾಷಿಕ ಮೈಕಟ್ಟು ಮಾತ್ರವಲ್ಲ. ಕಲಾವಿದರು ಒಡಮೂಡಿಸುವ ಲೋಕಗಳ ಹಿಂದೆ ಅವರಿಗೇ ಮೀಸಲಾದ ಸಂವೇದನೆ ಇರುತ್ತದೆ. ಹಾಗಾಗಿ ಇರುವುದು, ಕಾಣುವುದು ಮತ್ತು ಕಟ್ಟುವುದರ ನಡುವೆ ಸಂಕೀರ್ಣವಾದ ಸಂಬಂಧಗಳಿರುತ್ತವೆ. ಆದ್ದರಿಂದಲೇ ಪ್ರತಿಯೊಬ್ಬ ಜಾಣೆಯಾದ ನುಡಿಕಲಾವಿದೆಯೂ ಸಮುದಾಯಗಳ ತಿಳಿವಳಿಕೆಗೆ ಹೊಸತನ್ನು ಸೇರಿಸುತ್ತಾಳೆ. ಕನ್ನಡದ ಬಹು ದೊಡ್ಡ ಲೇಖಕಿಯಾದ ವೈದೇಹಿಯವರು ಇಂತಹ ಕಲಾವಿದೆ. ಅವರದೇ ಸೀಮೆಯಿಂದ ಬಂದ ಶಿವರಾಮ ಕಾರಂತರಂತೆ, ಸ್ವಂತ ಅನುಭವಗಳ ಸೀಮೆಯನ್ನು ದಾಟದೆಯೂ ಎಲ್ಲ ಬಗೆಯ ಓದುಗರಿಗೂ ಮುಖ್ಯವಾಗುವ ಶಕ್ತಿಯನ್ನು ಈಕೆಯ ಬರವಣಿಗೆಯು ಮೊದಲಿನಿಂದಲೂ ಪಡೆದಿದೆ. ಇವರ ಒಟ್ಟು ಬರವಣಿಗೆಯ ವರ್ಣಪಟಲದಲ್ಲಿ ಹಲವು ಬಣ್ಣಗಳಿವೆ. ಅವುಗಳಲ್ಲಿ ಪ್ರತಿಯೊಂದೂ ತಮ್ಮದೇ ಲೋಕವೊಂದನ್ನು ಪ್ರತಿನಿಧಿಸುತ್ತವೆ. ಕಥೆ, ಕವಿತೆ, ಕಾದಂಬರಿ, ಪ್ರಬಂಧ, ಮಕ್ಕಳ ಬರಹ, ಅನ್ಯರ ಜೀವನಕಥನ, ಮಕ್ಕಳಿಗಾಗಿ ಬರೆದ ನಾಟಕಗಳು ಹೀಗೆ ಪ್ರತಿಯೊಂದು ಪ್ರಕಾರವೂ ವೈದೇಹಿಯವರ ಕಲಾವಿದ ವ್ಯಕ್ತಿತ್ವದ ವಿವಿಧ/ವಿಭಿನ್ನ ನೆಲೆಗಳಿಗೆ ಪ್ರವೇಶವನ್ನು ನೀಡುತ್ತವೆ. (ಇದೆಲ್ಲದರಲ್ಲಿಯೂ ಮೂಡಿಬರದೆ ನಿಗೂಢವಾಗಿಯೇ ಉಳಿದಿರುವ ನೆಲೆಗಳೂ ಅವರಲ್ಲಿ ಇರುತ್ತವೆ. ಉತ್ಸಾಹ–ಉಲ್ಲಾಸಗಳ ಅಂಥದೊಂದು ನೆಲೆಯನ್ನು ಹೆಸರಿಸಬಹುದು.) ಇಂಥ ಬಹುಮುಖಿಯಾದ ಅಭಿವ್ಯಕ್ತಿಯು, ಅವರ ಸೃಜನಶೀಲ ಮನಸ್ಸಿನ ಅಗತ್ಯವೇ ವಿನಾ ಚಪಲಕ್ಕೆ ಮಾಡಿದ ಪ್ರಯೋಗಗಳಲ್ಲ. ಒಬ್ಬ ಲೇಖಕನು ಬೇರೆ ಬೇರೆ ಪ್ರಕಾರಗಳಲ್ಲಿ ಏನು ಮಾಡಲು ಬಯಸುತ್ತಾನೆ ಮತ್ತು ಅವರಲ್ಲಿ ಹೇಗೆ, ಎಷ್ಟು ಮತ್ತು ಯಾಕೆ ಯಶಸ್ವಿಯಾಗುತ್ತಾನೆ ಎನ್ನುವುದು ನನ್ನ ಕುತೂಹಲವನ್ನು ಸದಾ ಕಾಡಿರುವ ಸಂಗತಿ. ಹಾಗೆ ನೋಡಿದರೆ, ಸಾಹಿತ್ಯ ಪ್ರಕಾರಗಳು ಸಾಹಿತಿಗಳಿಗೆ ಮನೆಯೂ ಹೌದು, ಸೆರೆಮನೆಯೂ ಹೌದು. ಲೇಖಕರು ಹಲವು ಮನೆಗಳಲ್ಲಿ ಚಲಿಸುವುದರ ಮೂಲಕ, ಅನೇಕ ಮಿತಿಗಳನ್ನು ದಾಟುತ್ತಾರೆ.

ವೈದೇಹಿಯವರ ಈ ಕವನ ಸಂಕಲನವನ್ನು ಕುರಿತು ಬರೆಯುವ ಸಂದರ್ಭದಲ್ಲಿ ನಾನು ಇಂತಹುದೊಂದು ಹುಡುಕಾಟದಲ್ಲಿ ತೊಡಗಿದ್ದೇನೆ.

ವೈದೇಹಿಯವರ ಕಥೆಗಳ ಲೋಕವು ವಿಷಾದ ಮತ್ತು ಅಸಹಾಯಕ ಕೋಪಗಳಿಂದ ತುಂಬಿರುವ ವಾಸ್ತವ. ಅಲ್ಲಿನ ಸ್ತ್ರೀಪಾತ್ರಗಳು ಮಾರ್ದವಕ್ಕೆ ಪುರಸೊತ್ತಿಲ್ಲದಷ್ಟು ತೀವ್ರವಾದ ಹೋರಾಟದಲ್ಲಿ ತೊಡಗಿರುತ್ತಾರೆ. ಅಲ್ಲಿನ ಭಾಷಿಕ ನೆಲೆಗಳೂ ಕೂಡ ಸಿಡಿಮದ್ದಿನ ಗುಡಾಣದಂತೆ ಇರುವ ಅಡಗಿರುವ ಅನುಭವಲೋಕವನ್ನು ತೋರಿಸಿಕೊಡುತ್ತವೆ. ಆದರೆ, ಈ ಲೇಖಿಕಿ ಸಿಡುಕುಮೂತಿಯ ಸ್ತ್ರೀವಾದಿಯಲ್ಲ. (ಅಂತಹವರ ಸಂಗಡ ನನಗೆ ಯಾವ ಜಗಳವೂ ಇಲ್ಲ. ಅದೂ ಅಲ್ಲದೆ, ಹಾಗೆ ಕಾಣುವವರೂ ಕೂಡ ನಿಜದಲ್ಲಿ ಹಾಗೆ ಇರುವುದಿಲ್ಲ.) ಇವರಿಗೆ ಜೀವನದ ಸುಖ, ಉಲ್ಲಾಸ, ಸಂಭ್ರಮ, ಸ್ತ್ರೀ–ಪುರುಷ ಸಂಬಂಧಗಳ ಪಾಸಿಟಿವ್ ಆದ ನೆಲೆಗಳು ಎಲ್ಲವೂ ಗೊತ್ತು, ಬೇಕು. ಆದರೆ, ಅವುಗಳಿಗೆ ಕತೆಗಳಲ್ಲಿ ಎಡೆ ಮಾಡಿಕೊಟ್ಟು ಆ ಲೋಕದ ತೀವ್ರತೆಯನ್ನು ಕುಗ್ಗಿಸುವ ಅಪೇಕ್ಷೆಯು ವೈದೇಹಿಯವರಿಗೆ ಇಲ್ಲ. ಅದೂ ಅಲ್ಲದೆ ಸಣ್ಣಕತೆಯಂತಹ ಬಿಗಿಕಟ್ಟಿನ ಪ್ರಕಾರದಲ್ಲಿ ಆ ಬಗೆಯ ಬಹುಮುಖತೆಯು ಸಾಧ್ಯವೂ ಇಲ್ಲ. ಉದಾಹರಣೆಗೆ, ರಾಘವೇಂದ್ರ ಖಾಸನೀಸರ 'ತಬ್ಬಲಿಗಳು' ಕತೆಯಲ್ಲಿ ಒಂದೇ ಒಂದು ಜೋಕು ಅಥವಾ ಸಂತಸದ ಕ್ಷಣ ಇದ್ದರೆ, ಅದರ ತೀವ್ರತೆಯು ಪುಡಿಪುಡಿಯಾಗುತ್ತಿತ್ತು. ವೈದೇಹಿಯವರ 'ಅಕ್ಕು' ಮತ್ತು ಅಂತಹುದೇ ಹಲವು ಕತೆಗಳು ಇದೇ ಕೆಟಗರಿಗೆ ಸೇರುತ್ತವೆ. ಲೋಕದ, ಪ್ರಕೃತಿಯ ಚೆಲುವಿನ ಬಗ್ಗೆ ಉಸಿರಾಡುವುದು ಕೂಡ ಅಲ್ಲಿ ಸಾಧ್ಯವಿಲ್ಲ.

ಆದ್ದರಿಂದಲೇ ವೈದೇಹಿಯವರು ತಮ್ಮ ಕವಿತೆಗಳಲ್ಲಿ ಇಂತಹುದೊಂದು 'ಅನುಕ್ತ' ಲೋಕವನ್ನು ಹಂಚಿಕೊಳ್ಳಲು ಆಸಕ್ತರಾಗಿದ್ದಾರೆ. ಅದರ ಜೊತೆಗೆ ಸಹಜವಾದ ನಾದದ ಲಯಗಳ ಜಗತ್ತಿನಲ್ಲಿ ದೊರೆಯುವ ಬಿಡುಗಡೆಯ, ಉಲ್ಲಾಸದ ಸ್ಥಿತಿ ಕೂಡ ಅವರಿಗೆ ಬೇಕೆನಿಸಿದೆ. ವೈದೇಹಿಯವರು ಹೆಣ್ಣುಮಕ್ಕಳ ಪಾಡುಗಳನ್ನು ನೋಡುತ್ತಾ ಅವರದೇ ಹಾಡುಗಳನ್ನು ಕೇಳುತ್ತಾ ಬೆಳೆದವರು. ಅವೆರಡರ ನಡುವಿನ ಪರಸ್ಪರ ಸಂಬಂಧಗಳನ್ನು ಕಂಡುಕೊಳ್ಳಲು ಬಯಸಿದವರು. ಹಾಡನ್ನೂ ಭಾರವಾಗಿಸುವ ಪಾಡು ಮತ್ತು ಪಾಡನ್ನು ಹಗುರವಾಗಿಸುವ ಹಾಡುಗಳ ನಡುವಿನ ಸಂಬಂಧ ಅನುಪಮವಾದುದು. ಗಮನಿಸಲೇಬೇಕಾದ ಮಾತೆಂದರೆ, ಇವರು ದಿಟವಾದ ಕವಿ ಕೂಡ ಎನ್ನುವುದು. ಇವರಿಗೆ ಕವಿತ ಬರೆಯುವುದು ಕತೆಗಾರ್ತಿಯ ಬಿಡುವಿನ ಹವ್ಯಾಸವಲ್ಲ. ಬದಲಾಗಿ ಅದು ಹೊಸ ಸಾಧ್ಯತೆಗಳ ಹುಡುಕಾಟ. ಈ ಕವಿತೆಯ ಲಕ್ಷಣಗಳ ಹುಡುಕಾಟವು, ಕಾವ್ಯದ ಪ್ರಧಾನ ಧಾರೆಯೆಂದು ಕರೆಯಲಾದ ಬರವಣಿಗೆಯಿಂದ ನಮ್ಮನ್ನು ಒಂದಿಷ್ಟು ದೂರ ಕರೆದೊಯ್ಯುತ್ತದೆ. ಅವರದು ಸ್ತ್ರೀವಿಶಿಷ್ಟವಾದ ಕವಿತೆಯ ಒಂದು ನಿರ್ದಿಷ್ಟ ಬಗೆಯೆಂದೂ ನನಗೆ ತೋರುತ್ತದೆ. 'ಬಿಂದು ಬಿಂದಿಗೆ'ಯಿಂದ ಮೊದಲಾಗಿ 'ಹೂವ ಕಟ್ಟುವ ಕಾಯಕ'ದವರೆಗೆ ಅವರು ನಡೆದ ಹಾದಿಯು ಅವರ ಒಟ್ಟು ಬರವಣಿಗೆಯ ದಾರಿಗೆ ಹಿಡಿದ ಕನ್ನಡಿಯೂ

ಹೌದು. ಅದು ನೊಂದು ಮಾಗುವ ಹಾದಿ. ವೈಯಕ್ತಿಕವಾದ, ಕೌಟುಂಬಿಕವಾದ ನೋವುಗಳಿಂದ ಸಾಮಾಜಿಕವಾದ ನೋವುಗಳ ಕಡೆಗೆ ಮಾಡಿದ ಪಯಣವೆಂದೂ ಅದನ್ನು ನೋಡಬಹುದು. ಆದರೆ ಸಾಮಾಜಿಕವಿರಲಿ, ವೈಯಕ್ತಿಕವಿರಲಿ ವೈದೇಹಿಯವರದು ಮೂರ್ತವಾದ ಅನುಭವಗಳ/ಭಾವನೆಗಳ ಮಾರ್ಗ. ಅವರು ನೋವನ್ನು ಪ್ರಾತಿನಿಧಿಕವೆಂದು ಕರೆದು ಅದರ ಹೊರಗೆರೆಗಳನ್ನು ಹಾಗೂ ಒಳ ಸೂಕ್ಷ್ಮಗಳನ್ನು ಅಳಿಸಿಬಿಡುವ ಪ್ರವೃತ್ತಿಯವರಲ್ಲ.

ಹೆಣ್ಣಿನ ಅಸ್ತಿತ್ವ ಮತ್ತು ಸ್ವರೂಪಗಳನ್ನು ಕುರಿತ ಎರಡು ಸಿದ್ಧಾಂತಗಳ ನಡುವೆ, ಬಹಳ ಆರೋಗ್ಯಕರವಾದ ಸಂಯೋಜನೆಯನ್ನು ಮಾಡಿರುವುದು ವೈದೇಹಿಯವರ ಕವಿತೆಯ ಬಹು ಮುಖ್ಯ ಲಕ್ಷಣ. 'ಹೆಣ್ಣು' ಎನ್ನುವುದು ಪುರುಷಪ್ರಧಾನವಾದ ಸಮಾಜದ ರಚನೆಯೇ ಹೊರತು ಅವಳಿಗೆ ದೇಹವಿಶಿಷ್ಟವಾದ ಗುಣಗಳೇನೂ ಇಲ್ಲವೆನ್ನುವ ನಿಲುವು ಒಂದು. ಅವಳಿಗೆ 'ಸಹಜ'ವಾದ ಹಲವು ಗುಣಗಳಿವೆ ಮತ್ತು ಅವುಗಳ ಪರಿಣಾಮವಾಗಿ ಅವಳು ಗಂಡಿಗೆ ಸಮಾನ ಮಾತ್ರವಲ್ಲ ಅವನಿಗಿಂತ ಉತ್ತಮಳೇ ಆಗುತ್ತಾಳೆ ಎನ್ನುವುದು ಎರಡನೆಯ ನಿಲುವು. ಮೊದಲನೆಯದು ವಿಷಾದ, ಕೋಪ, ಪ್ರತಿಭಟನೆ ಮತ್ತು ಹೋರಾಟಗಳಿಗೆ ಎಡ ಮಾಡಿಕೊಟ್ಟರೆ ಎರಡನೆಯದು, ಆತ್ಮವಿಶ್ವಾಸ, ಆನಂದ ಮತ್ತು ಕ್ಷಮಾಗುಣಗಳಿಗೆ ಹುಟ್ಟು ಕೊಡಬಹುದು. ನನಗೆ ತೋರುವಂತೆ ಇವೆರಡೂ ಗುಣಗಳ ಸಂಯೋಜನೆಯು ವಾಸ್ತವವೂ ಹೌದು, ಅವಶ್ಯಕವೂ ಹೌದು. ವೈದೇಹಿಯವರ ಬರವಣಿಗೆಯಲ್ಲಿ, ಅದರಲ್ಲೂ ಕವಿತೆಗಳಲ್ಲಿ ಈ ಗುಣವು ಸ್ಪಷ್ಟವಾಗಿದೆ. ಈ ಕವಿಗೆ ಇವೆರಡೂ ಏಕಕಾಲದಲ್ಲಿ ನಿಜ. ಉದಾಹರಣೆಗೆ 'ಮಗು ನುಂಗಿದೆ ಎಂಬ ಗೀತೆ' ಎನ್ನುವ ತಲೆಬರಹದ ಸಂಕೀರ್ಣ ಕವನವನ್ನು ಗಮನಿಸಬಹುದು: ತನ್ನದೇ ಮಗುವು ತನ್ನ ಹಗಲು, ಇರುಳು, ಕ್ಷಣ–ಆಯುಷ್ಯ, ಗಂಡ, ತನ್ನತನ, ಸೃಜನಶೀಲತೆ ಎಲ್ಲವನ್ನೂ ನುಂಗಿಬಿಡುವ ವಾಸ್ತವವನ್ನು ಕವಿ ವಿವರಿಸುತ್ತಾರೆ. ಆದರೆ ಅವರು ಅದನ್ನು 'ದೂರು ದೂರು ದೂರು ಹೇಳಿದೆ' ಎನ್ನುತ್ತಾರೆ. ಆದರೆ ಅಷ್ಟಕ್ಕೆ ಸುಮ್ಮನಾಗುವ ಸೀಮಿತ ಅರ್ಥದ ಸ್ತ್ರೀವಾದಿಯಾಗದೆ, 'ನಕ್ಕವರಿಗೆ ದೂರುಗಳ ದೂರದರ್ಥ ತಿಳಿಯಲೆ ಇಲ್ಲ. ಚಿಂತಾಮಣಿ ಗುಟ್ಟನ್ನು ನಾನು ಬಿಟ್ಟುಕೊಡಲೂ ಇಲ್ಲ' ಎಂದು ಹೇಳುತ್ತಾರೆ. ಮಗುವಿನ ಲಾಲನೆಯಲ್ಲಿ ಹೊಳೆದ ಕವಿತೆಯನ್ನು ಹೀಗೆ ನಿವೇದಿಸಿಕೊಳ್ಳುತ್ತಾರೆ. ಉಪ್ಪು ಮೆಣಸು ಸಾಸಿವೆ ಬೆಂಕಿಗೆ ಹಾಕಿ ಪೊರಕೆಯನ್ನು ಬೀಸಿ ಮಗುವಿಗೆ ದೃಷ್ಟಿತೆಗೆದಾಗ:

'ಛಟ್ಟಛಟಾ ಛಟ್ಟಛಟಾ ಹಾಡಿತು ಉಪ್ಪು
ಚಿಟಚಿಟೀ ಚಿಟೀ ಚಿಟಿಕೆ ಹಾಕಿ ಸಾಸುವೆ
ಕೆಮ್ಮು ನಟ್ಟುವಾಂಗಕ್ಕೆ ಕುಣಿಯಿತು ಮೆಣಸು
ಬಳ್ಳಿ ಉಯ್ಯಾಲೆಯಲ್ಲಿ ಹಿಂದೆ ಮುಂದೆ ತೂಗಿ ತೂಗಿ
ಕಿಲಕಿಲಕಿಲ ಕಿಲಕಿಲಕಿಲ ನಕ್ಕಿತೂ ಮಗು
ಅಕ್ಷರಕ್ಕೆ ಮಿಕ್ಕಿದಾ ಲೋಕವೊಂದು ಕರೆದು

ಪಿಸುಗುಟ್ಟಿತು, ಏನದು, ಉಹ್ಞು ಹೇಳುವುದಿಲ್ಲ
ಹ್ಞ! ತ್ರಾಣಿಕ ವಿಶೇಷವದು,
ಚೆಲ್ಲಾಡುವುದಿಲ್ಲ' (ಪುಟ 54)

ಈ ಕವಿತೆಯಲ್ಲಿ ಮೊದಲ ಮತ್ತು ಎರಡನೆಯ ಭಾಗಗಳು ಒಂದಕ್ಕೊಂದು ಕುಮ್ಮಕ್ಕು ಕೊಡುತ್ತವೆಯೇ ಹೊರತು ಅವು ವಿರೋಧೀ ನೆಲೆಗಳಲ್ಲ. ಹೆಣ್ಣಿಗೆ 'ತ್ರಾಣಿಕ ವಿಶೇಷ' ಸಿಕ್ಕಿರುವುದೇ ಮಗು ನುಂಗುವ ಅಗ್ನಿಕುಂಡವನ್ನು ಹಾದುಬಂದಿರುವುದರಿಂದ. ಎಂದಿನಂತೆ ಇಲ್ಲಿಯೂ ಪಾಡು ಹಾಡಾಗಿದೆ. ಅಷ್ಟೆ. ಇದರ ಇನ್ನೊಂದು ಮುಖ ಬರೆಯದೆ ಬೆಳೆದವರ ಬದುಕಿಗೂ ಇರುವ ಸಾರ್ಥಕತೆಯನ್ನು ಕಂಡುಕೊಳ್ಳುವುದರಲ್ಲಿದೆ. 'ಯುಗಳ ಗೀತೆ' ಎಂಬ ಕವಿತೆಯು ಇದನ್ನು ಅಪರೂಪದ ತಿಳಿವಳಿಕೆಯಲ್ಲಿ ಹೇಳುತ್ತದೆ. ಅದರಲ್ಲಿ 'ಗಂಡು' ಕೂಡ ಸಖಿಯಾಗುತ್ತಾನೆ. (ನನಗೆ ಇವರು ಲಂಕೇಶರನ್ನು ಹೆಣ್ಣು ಎಂದು ಕರೆದಿದ್ದು ನೆನಪಿಗೆ ಬರುತ್ತಿದೆ) ಹೆಣ್ಣಿನಿಂದ ಪಾಠ ಕಲಿಯುತ್ತಾನೆ:

–ನೀನು ಎಷ್ಟೋ ಬರೆದೆ, ಬರೆಯುತ್ತ ಬೆಳೆದೆ
ನಾನೂ ಎಷ್ಟೋ ಬೆಳೆದೆ ಬರೆಯದೆ!

– ಬರೆವ ಬೆಳೆಯುವ ನಡುವೆ ಸಂಬಂಧವೇನು?
ಬರೆವ ಬೆಳೆಯುವ ನಡುವೆ ನಾನು ನೀನೇನು?

–ಓದೇ ಓದಿದೆ ಕೇಳಿದೆ ನೀನು ಚರ್ಚಿಸಿದೆ
ಶ್ರುತಿ ಸ್ಮೃತಿಯ ಸರ್ವ ವಕ್ತಾರನಾದೆ
ನಿನಗೆ ನೀನೇ ಶ್ರೇಷ್ಠ ಭ್ರಮೆಯಾದೆಯಲ್ಲೋ

.............................................
–ಸಿದ್ಧ ಅರ್ಥವ ಬಿಡಿಸಿ ಒಡೆವ ಪುಲಕದಿ ನಾ
ನನ್ನತನ ಕಳೆಯದೇ ನೀನಾಗಬೇಕೆಲೋ (ಪುಟ 49)

ಈ ಮಾತುಗಳು, ಸ್ತ್ರೀವಾದೀ ಕಾವ್ಯಮೀಮಾಂಸೆಯ ವಿಶಿಷ್ಟ ನೆಲೆಗಳನ್ನು ಖಂಡಿತವಾಗಿಯೂ ಒಳಗೊಂಡಿವೆ. ಇಂತಹುದೇ ಆಶಯಗಳನ್ನು 'ಶಿಕ್ಷೆ', (ಪುಟ 86) ಇದರ ಜೊತೆಗೇ ಗಂಡಾಗಿಯೂ ಗಂಡಿನೊಳಗಿರುವ ಹೆಣ್ಣನ್ನು ಗುರುತಿಸುವ 'ನಮ್ಮಣ್ಣನೆಂಬಾತ' ಎಂಬ ಕವಿತೆಯ ಸಾಲುಗಳನ್ನು ಗಮನಿಸಿ;

ಪುರುಷಪಾರಮ್ಯದ ಅಸಲು ಮಾದರಿ ಈತ
ಹೆಂಗರುಳಿಗಿಂತಲೂ ತಾಯಿಕರುಳು– ವಿಚಿತ್ರ
ಬರಿದೆ ಹೇಳುವುದಲ್ಲ, ಚಿನ್ನಗುಣದವ ನಮ್ಮ ಶಂಕರಣ್ಣ
ಜೋರೆಂದು ಕಾಣುವ ಪಾಪದಣ್ಣ (ಪುಟ 20)

ಇಂಥ ತಿಳಿವಳಿಕೆ ಬಂದಾಗ, ದ್ವೇಷ-ಅಸಹನೆಗಳ ಜಾಗದಲ್ಲಿ ಪ್ರೀತಿ ಮೂಡುತ್ತದೆ, ಉಳಿಯುತ್ತದೆ. ಅನ್ಯಾಯ ಅಸಮಾನತೆಗಳು ಮಾಯವಾಗಿಬಿಡುವುದಿಲ್ಲ. ಆದರೆ, ಮನಸ್ಸು ಆರ್ದ್ರವಾಗುತ್ತದೆ. ಕವಿತೆಯು ಸಹಜವಾಗುತ್ತದೆ.

ಈ ನೆಲೆಯಲ್ಲಿ ಗಂಡು ಮತ್ತು ಹೆಣ್ಣು ಎಂಬ ಎರಡೂ ನೆಲೆಗಳನ್ನು ಒಳಗೊಳ್ಳುವ ಮತ್ತು ಹಾಗೆ ಒಳಗೊಂಡು ನುಡಿಯುವ ಹಲವು ಕವಿತೆಗಳನ್ನು ಈ ಸಂಕಲನದಲ್ಲಿ ನೋಡಬಹುದು. ಆಗ ಕವಿತೆಯು ಉಭಯಭೇದವನ್ನುಳಿದು ಮನುಷ್ಯಚೇತನದ ಮಾತಾಗುತ್ತದೆ. ಸಮುದಾಯಗಳಿಗೆ ಮತ್ತು ವ್ಯಕ್ತಿಗೆ ನಿರ್ದಿಷ್ಟವಾದ ಅನುಭವಲೋಕಕ್ಕೆ ನಿಷ್ಠವಾಗುವುದೆಂದರೆ, ಸಾರ್ವಕಾಲಿಕ ಮತ್ತು ಸಾರ್ವತ್ರಿಕದ ಬಾಗಿಲುಗಳನ್ನು ಮುಚ್ಚಿದಂತೆ ಅಲ್ಲ. ನಿಜವಾದ ಸಾಹಿತ್ಯ ಹಾಗೆ ಮಾತ್ರ ಇರಲು ಸಾಧ್ಯ. ವೈದೇಹಿಯವರಿಗೆ ಅದು ಸಾಧ್ಯವಾಗಿದೆಯೆಂದೇ ಅವರು ಕನ್ನಡದ ಪ್ರಮುಖ ಬರಹಗಾರರಲ್ಲಿ ಒಬ್ಬರು.

ಇದೇ ಅಸ್ತಿತ್ವದ ಇನ್ನೊಂದು ನೆಲೆಯು 'ಗೋಪೀ ಕೀರ್ತನ'ದಂತಹ ಕವಿತೆಯಲ್ಲಿ ಮೈತೆರೆದುಕೊಳ್ಳುತ್ತದೆ. ಇದು ಗೋಪಿಯರು ಮಾಡುವ ಕೃಷ್ಣನ ಕೀರ್ತನದಂತೆ ಕಂಡರೂ ವಾಸ್ತವದಲ್ಲಿ ಇವು ಗೋಪಿಯರದೇ ಕೀರ್ತನವೂ ಹೌದು. ಕೆಳಗಿನ ಸಾಲುಗಳನ್ನು ಗಮನಿಸಿ:

'ಬದುಕು ಬಂಡಿಯ ನಡಿಗೆ
ಸಾಗಿದೆ,
ಚಳಿಗೆ ಸೆಕೆಗೆ ಸುರಿವ ಸೂಜಿಮಳೆಗೆ
ನೀನಿಲ್ಲದೆ,

ನೀನೇ ಇಲ್ಲದೆ
ಹೊರಲೋಕ ನೋಡಿಂತು, ಹೇಗಿದೆ!
ಒಳಲೋಕ ನೋಡದಿರು

ನಂದಿದೆ.' (ಪುಟ 90-91)

ಹೀಗೆ ನಂದಿರುವ ಲೋಕಗಳು ಗೋಪಿಯರದು ಮಾತ್ರವಲ್ಲ, ಗೃಹಿಣಿಯರದೂ ಇರಬಹುದೆಂಬ ಸೂಚನೆಯು ಇವರ ಹಲವು ಕತೆ-ಕವನಗಳಲ್ಲಿ ಈಗಾಗಲೇ ನಮಗೆ ಸಿಕ್ಕಿದೆ.

ವೈದೇಹಿಯವರ ಎಲ್ಲ ಕವಿತೆಗಳೂ ಕಥೆ ಮತ್ತು ಕಥನಗಳಿಗೆ ವಿದಾಯ ಹೇಳಿ ಭಾವಗೀತೆ ಅಥವಾ ನವ್ಯಕವಿತೆಗಳಲ್ಲಿ ತೊಡಗಿಕೊಳ್ಳುವುದಿಲ್ಲ. ಕಥೆ ಹೇಳದಿದ್ದರೂ, 'ಹೇಳಿಕೊಳ್ಳುವ ಧಾಟಿ' ಯನ್ನು ಅವರು ಬಿಟ್ಟುಕೊಡುವುದಿಲ್ಲ. ಉದಾಹರಣೆಗೆ ಈ ಸಂಕಲನದ 'ತುಂಗೆಯನು ನೆನೆದು'(ಪುಟ 33) ಎಂಬ ಬಹಳ ಒಳ್ಳೆಯ ಕವಿತೆಯನ್ನು ಗಮನಿಸಬಹುದು. ಇದು ನಿಜಕ್ಕೂ ಕತೆಯನ್ನು(ಆತ್ಮಕತೆಯನ್ನು? ಎಲ್ಲ ಹೆಣ್ಣುಗಳ ಕತೆಯನ್ನು?)

ತನ್ನೊಳಗೆ ಹುದುಗಿಸಿಕೊಂಡ ಕವಿತೆ. ಕಡಲ ನಗರಿಯಿಂದ ನದಿಯ ಊರಿಗೆ ಬಂದ ತಂಗಿ ತುಂಗೆಯೊಡನೆ ಹಂಚಿಕೊಳ್ಳುವ ಲೋಕ. ಇವರ ಯಾವುದೇ ಕಥೆಯ ತಲ್ಲಣಗಳಿಗಿಂತ ಕಡಿಮೆಯಲ್ಲ. 'ಬಂದು ಬಿಡು ತಂಗಿ ನನ್ನ ಮನೆಗೆ..' ಎಂದು ತುಂಗೆ ಕರೆದಾಗ, ಆತ್ಮಹತ್ಯೆಯ ನಿಲುವನ್ನು ತಳೆಯುವ, ಹೋಗುವ, ಹಿಂದಿರುಗುವ ಬಗೆಯನ್ನು ಹೇಳುವ ಸಾಲುಗಳು ಮೈನಡುಗಿಸುತ್ತವೆ:

'....ಮುನ್ನವೇ ಮನಗಂಡ ಯಾವ ಬನ್ನದ ಭಯವೋ
ಏನು ಗಡಿ-ಗಡು-ಗಂಡ ದುಗುಡ ತತ್ತರ ಅಥವ
ಭಾಗೀರತೀ ಹಾರ ಉತ್ತರ ಭಾಗವೋ
ಮಣ್ಣುಬಣ್ಣದ ಮಣ್ಣುಸೀರೆಯುಟ್ಟದ್ದು
ಯಾವ ಸೂಚನೆಯೊ ಯೋಚನೆಯೊ
ಕೇಳಿದವರಾರು?

..........................

ಏನೊ ಹೇಳಲು ಹೊರಟು ಬಿಗಿದು ದನಿತಂತು
ಬಂದಂತೆ ಮರಳಿದಳು ಆಡದೊಂದೂ ಮಾತು.'

ಇಂಥ ಶಬ್ದಚಿತ್ರಗಳು ಕಥೆಗೆ ಸಹಜವಾದ ವಿವರಗಳ ಲೋಕದಿಂದ ದೂರ ಉಳಿದೂ ಕಥೆಯನ್ನೇ ಹೇಳುತ್ತಿರುತ್ತವೆ. ಇಂಥ ಕಥನಕ್ಕೆ ಪ್ರಾದೇಶಿಕತೆ ಮತ್ತು ಆಡುಮಾತುಗಳ ಹಂಗು ಅಷ್ಟಾಗಿ ಇಲ್ಲ. ಕನ್ನಡದ ಕವಯತ್ರಿಯರಲ್ಲಿ ಹೀಗೆ ಹೇಳಿಕೊಂಡ ಕಥನಗಳ ಮಹಾಪೂರವೇ ಇದೆ. ಇವು ಆವರಣ ಮತ್ತು ಅನಾವರಣಗಳ ಸಂಯೋಜನೆ ಮಾಡುವ ಬಗೆಯು ಅಸಾಧಾರಣವಾದುದು.

'ಹೂವ ಕಟ್ಟುವ ಕಾಯಕ'ದ ಕವಿತೆಗಳು ಹೆಣ್ಣಿಗೆ ಸಂಬಂಧಿಸಿದ ಕನ್ಸರ್ನ್‌ಗಳ ಆಚೆಗೆ ಮತ್ತೆ ಮತ್ತೆ ಧ್ಯಾನಿಸುವ ಎರಡು ವಸ್ತುಗಳು 'ಸಾವು' ಮತ್ತು 'ಕವಿತೆ'. ಈಚಿನ ದಿನಗಳಲ್ಲಿ ಸಾವು ಅವರ ಮನಸ್ಸನ್ನು ಆಳದಲ್ಲಿ ಕಲಕಿದೆ. ತಾನು ಸಾಯುವ ಭಯದಿಂದ ಅಲ್ಲ. ಆತ್ಮೀಯರನ್ನು ಕಳೆದುಕೊಳ್ಳುವ ಅನಿವಾರ್ಯವನ್ನು ಮ್ಯಾನೇಜ್ ಮಾಡುವ ತಲ್ಲಣಗಳಿಂದ. ಹಾಗೆಯೇ ಸಾವು ಎಂಬ ಸಂಗತಿಯ ನಿಗೂಢತೆಯೂ ಅವರನ್ನು ಕಾಡಿದೆ. ಈ ನಿಟ್ಟಿನಲ್ಲಿ, 'ಅಮ್ಮನ ಪದ್ಯಗಳು', ಮತ್ತು 'ಬುದ್ಧನ ಕಿವಿ ಎಷ್ಟು ಉದ್ದ!' ಎಂಬ 'ಕವಿತೆಗೊಂಚಲು'ಗಳು ಗಂಭೀರ ಓದನ್ನು ಬಯಸುತ್ತವೆ. ಇವೆಲ್ಲವೂ ಸಂಕಲನದ ಕೊನೆಕೊನೆಯಲ್ಲಿರುವುದು ಆಕಸ್ಮಿಕವಲ್ಲ. ಮುಖ್ಯ ಸಂಗತಿಯೆಂದರೆ, ಕವಿ ಸಾವನ್ನು ಗ್ರಹಿಸಿಯೂ ಬದುಕನ್ನು ಕಾಣುವ ಕಾಪಾಡಿಕೊಳ್ಳುವ ಬಗೆಯನ್ನೇ ಧ್ಯಾನಿಸುತ್ತವೆ. ಸುಮ್ಮನೆ ಎರಡು ತುಣುಕುಗಳನ್ನು ತೋರಿಸುತ್ತಿದ್ದೇನೆ:

'ಒಂದು ವಾಕ್ಯವಿತ್ತು
ಸತ್ಯವಾಯಿತು

ಕಂಠದಲ್ಲಿ ಇಳಿಯದೆ
ಮೂವತ್ತೆರಡೆರಡು ಬಾರಿ
ಜಗಿದು ನುಂಗಿ ನೀರುಕುಡಿದೆ
ಓ ಭವವೇ ಜೀರ್ಣವಾಗು
ಓ ಜೀವವೇ ಭದ್ರವಾಗು'     (ಪುಟ 113)

'ಇಲ್ಲವೆಂದುಕೋ ಈ ಕತ್ತಲು
ಎಲ್ಲಿ ಇರುತ್ತಿತ್ತು ದೀಪ?
ಎಲ್ಲ ಕಳೆ-ಪಡೆ ಎಲ್ಲ
ಕಳೆಯುತ-ಬಾ-ಬದುಕು'     (ಪುಟ 109)

ಸಹಜವಾಗಿಯೇ ಈ ಕವಿತೆಗಳು ಮತ್ತೊಬ್ಬ ಹಿರಿಯ ಕವಿ ಎಚ್.ಎಸ್. ವೆಂಕಟೇಶಮೂರ್ತಿಯವರ 'ಉತ್ತರಾಯಣ' ಮತ್ತು 'ವೈದೇಹಿ'ಗಳನ್ನು ನೆನಪಿಗೆ ತರುತ್ತವೆ. ಈ ಕವಿತೆಗಳು ಕಿರುಗಾತ್ರದವಾಗಿವೆ. ಆದ್ದರಿಂದಲೇ ಅವು ಭಾವತೀವ್ರತೆ ಮತ್ತು ಭಾವುಕತೆಗಳನ್ನು ಮೀರಲು ಅಥವಾ ಒಂದು ಹದದಲ್ಲಿ ಹಿಡಿಯಲು ಯಶಸ್ವಿಯಾಗಿವೆ. ಇವು 'ಜೆನ್' ಕವಿತೆಗಳನ್ನು ಹೋಲಿದರೆ ಎಚ್.ಎಸ್.ವಿ.ಯವರ ಕವಿತೆಗಳು 'ಎಲಿಜಿ'ಯಾಗಿಯೂ ಅದರ ಮಿತಿಗಳನ್ನು ದಾಟಲು ಯತ್ನಿಸುತ್ತವೆ.

ಕವಿತೆಯನ್ನು ಕಟ್ಟುವ ಕೆಲಸದ ಬಗೆಗಿನ, ಪುರುಷರಿಂದ ದತ್ತವಾದ ನಿಯಮಗಳನ್ನು ಮೀರುವ ಮತ್ತು ಆದರೆ, ನಿರ್ವಾತದಲ್ಲಿ ಚಲಿಸದೆ, ಕ್ರಮೇಣ ಸ್ತ್ರೀವಾದೀ ಕಾವ್ಯಮೀಮಾಂಸೆಯನ್ನು ರೂಪಿಸುವ ಚಲನೆಯನ್ನು ಇವರ ಕವಿತೆಗಳಲ್ಲಿ ಗುರುತಿಸಬಹುದು. ಉದಾಹರಣೆಗೆ, 'ಪಾರಿಜಾತ' ಸಂಕಲನದ 'ಹಾಡುವುದೆಂದರೆ' ಕವಿತೆಯಲ್ಲಿ,

'ಹಾಡು ಹೇಳಲು ಯಾಕೆ ಶಬ್ದಾಲಂಕಾರ
ಹಾಡುವುದೆ ಹಕ್ಕಿ ರಾಗಪ್ರಸ್ತಾರದನುಸಾರ?
ಭಾವಕೋಶವ ಒಡೆದು ಸ್ವರ ಹೊಮ್ಮಿದಾಗ
ಅದುವೆ ಹಾಡಾಗುವುದು ತನ್ನತನ್ನಂತೆ'     (ಪಾರಿಜಾತ, ಪುಟ 41)

ಆದರೆ, ಕಲಾಕೃತಿಯ ರಚನೆಯಲ್ಲಿ ಇಂತಹ ಮಾತು ಉಡಾಫೆಯಾಗುತ್ತದೆ ಎನ್ನುವುದು ಅವರಿಗೆ ಬಹುಬೇಗ ಗೊತ್ತಾಯಿತು. ಬೇಕಾಗಿರುವುದು ಪುರುಷನಿರ್ಮಿತ ಕಾವ್ಯಮೀಮಾಂಸೆಯ ನಿರಾಕರಣೆಯೇ ವಿನಾ ಸಾರಾಸಗಟಾಗಿ ಕಾವ್ಯಮೀಮಾಂಸೆಯದ್ದಲ್ಲ. ಅವರು ಹೇಳುವ 'ಹಾಡು' ಕೂಡ ತನ್ನದೇ ಆದ 'ಸಹಜ ಪ್ರಾಸ'ವನ್ನು ಹೊಂದಿರುತ್ತದೆ. ಇಷ್ಟಕ್ಕೂ ವೈದೇಹಿಯವರು ಹಾಡುಗಳನ್ನು ಬರೆಯಲಿಕ್ಕೆ ಈ ಸಂಕಲನದವರೆಗೆ ಕಾದರು. 'ಹೂವ ಕಟ್ಟುವ ಕಾಯಕ' ಎಂಬ ಪದ್ಯದಲ್ಲಿಯೇ ಅವರು ಹೀಗೆ ಹೇಳುತ್ತಾರೆ:

'ಹಗ್ಗ ಹಂಗಿಲ್ಲದೆಯೆ ಹೆಣೆವ ಕ್ರಮವಿದೆ ಎಷ್ಟು
ದಾರದಾಧಾರದಲೆ ಪೋಣಿಸುವವೆಷ್ಟು?

..........................................

ಕಲಿಯೋಣ ಎಲ್ಲರೂ ಹೂವ ಕಟ್ಟುವುದನು
ಕಟ್ಟುವ ಬಗೆಬಗೆಯ ಕಲೆ ಕಲಿಯೋಣ ಬಾ
ಕಟ್ಟಿ ಮನದೇವರಿಗೆ ಸಲಿಸೋಣ ಬಾ' (ಪುಟ 1.2)

ಇಲ್ಲಿ ಬಳಸಿರುವ 'ಮನದೇವರು' ಎಂಬ ಪದವನ್ನು ಗಮನಿಸಬೇಕು. ಇಂಥ ಹುಡುಕಾಟಗಳ ಮೂಲಕವೇ ಕವಿತೆಯ ನಿಜವಾದ ನೆಲೆಗಳು ಹೊಳೆಯುತ್ತವೆ. ಅದು ಅನನ್ಯವೂ ಹೌದು, ಸಾರ್ವತ್ರಿಕವೂ ಹೌದು.

ಇವರು ನಡೆಸುವ ಭಾಷೆ-ಭಾವಗಳ ಹುಡುಕಾಟ ಕೂಡ ಹಾಗೆಯೇ. ಅದು ಬಿಡಿಸಿಕೊಳ್ಳುವ ಮತ್ತು ಕಂಡುಕೊಳ್ಳುವ ಪ್ರಕ್ರಿಯೆ. ದಕ್ಷಿಣ ಕನ್ನಡದ ಕನ್ನಡವಾದರೂ ಅಷ್ಟೆ. ಹೆಣ್ಣು ಕನ್ನಡವಾದರೂ. 'ನೀನೂ ಸಾ', 'ನಳಿ', ತ್ರಿವಿಕ್ರಮಿ', 'ಕಾಳಿದಾಸಿ' ಮುಂತಾದ ಪದಗಳನ್ನು ಟಂಕಿಸುವುದರ ಹಿಂದೆಯೂ ಒಂದು ಉದ್ದೇಶವಿದೆ. ಈ ನಿಟ್ಟಿನಲ್ಲಿ 'ಚುಕ್ಕಿ ಪದ್ಯ', 'ಮಾತು-ಮೌನ' ಮುಂತಾದ ಕವಿತೆಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಅವರಿಗೆ, ಭಾಷೆಯು, ಅನುಭವದ ಅಗಮ್ಯತೆಯನ್ನು ಹಿಡಿಯಲಾರದೆ ತೊಳಲುವ ಉಪಕರಣವೆಂದೇ ತೋರುತ್ತದೆ. ಕೊನೆಗೂ ಅವರ ಕವಿತೆಗಳು ನಿಜವಾಗುವುದು ನಿಜಕ್ಕೂ ಸಂವೇದನಶೀಲವಾದ ಮನಸ್ಸುಗಳಲ್ಲಿ ಮಾತ್ರ. ಎಲ್ಲರ ಕವಿತೆಗಳಂತೆ. ಕಟುಕ, ವೈದ್ಯ ಮತ್ತು ನ್ಯಾಯಮೂರ್ತಿ ಎಂಬ ಮೂರು ಪಾತ್ರಗಳನ್ನು ಒಬ್ಬರೇ ವಹಿಸುವ ಪರಿಸರದಲ್ಲಿ ಚಲನೆಯನ್ನು, ಆರ್ದ್ರತೆಯನ್ನು ತರುವುದು ಕಡು ಕಷ್ಟ.

ಈಗಾಗಲೇ ಉದ್ದವಾಗಿರುವ ಬರವಣಿಗೆಯನ್ನು ಒಂದು ಪ್ರಶ್ನೆಯಿಂದ ಮುಗಿಸಬೇಕೆಂದು ನನಗೆ ತೋರುತ್ತಿದೆ. ಇದು ಕವಿಗೆ ಕೇಳುವ ಪ್ರಶ್ನೆಯಲ್ಲ. ಬದಲಾಗಿ ನಾವು ಓದುಗರು ಕೇಳಿಕೊಳ್ಳಬೇಕಾದ ಪ್ರಶ್ನೆ. ವೈದೇಹಿಯವರ 'ಪಾರಿಜಾತ' ಸಂಕಲನದ ಮಾತು-ಮೌನ ಕವಿತೆಯಲ್ಲಿ ಒಬ್ಬ ಹುಡುಗಿ ಬರುತ್ತಾಳೆ. ಅವಳಿಗೆ 'ಅಮ್ಮ' ಪ್ರತ್ಯಕ್ಷಳಾಗುತ್ತಾಳೆ. ಇವಳು ಕೇಳುತ್ತಾಳೆ:

ಅಮ್ಮ ಕತ್ತಲು
ಕಿಟಕಿ ತೆರೆಯೆ
ತೆರೆದೇ ಇದೆಯಲ್ಲ
ಅಮ್ಮ ಕತ್ತಲು
ಕಣ್ಣು ತೆರೆಯೆ
ತೆರೆದೇ ಇದೆಯಲ್ಲ

......ಅಮ್ಮ ನನ್ನನ್ನೂ ಕಾಳಿದಾಸಿ
ಯಾಕೆ ಮಾಡಿಲ್ಲ?
ಮಗಳ ಮಾತನು ಕೇಳಿ
ಗಹಗಹಿಸಿದಳು ಕಾಳಿ
ಯಾಕೋ? ಯಾರು ಬಲ್ಲ? (ಪುಟ 40)

ಇದೇ ಹುಡುಗಿ ಹನ್ನೆರಡು ವರ್ಷಗಳ ನಂತರ 'ಹೂವ ಕಟ್ಟುವ ಕಾಯಕ'ದಲ್ಲಿ ಕಾಣಿಸಿಕೊಳ್ಳುತ್ತಾಳೆ. ಈಗ ಅವಳು ಹಳೆಯ ಹುಡುಗಿ. ಇವಳಿಗೂ ಕಾಳಿ ಪ್ರತ್ಯಕ್ಷಳಾಗುತ್ತಾಳೆ. ಆದರೆ ಈಗ ಸಂಭಾಷಣೆಯ ಸ್ವರೂಪವು ಈಗ ಬದಲಾಗಿದೆ. ಮನೆಯ ಕೆಲಸಗಳ ದಾಂಧಲೆಯಲ್ಲಿ ಕವಿತೆಗಳನ್ನು ಕಳೆದುಕೊಂಡ ಹುಡುಗಿಗೆ ಒಮ್ಮೆ:

ಒಂದು ದಿನ ಕೇಳಿಲ್ಲಿ
ಗೂಡಿಂದ ಮಾಂಕಾಳಿ
ಎದ್ದು ಹೊರಬಂದು ತಾನು ಪ್ರಸನ್ನೆ ಎಂದು
ನಿನಗೇನು ವರ ಬೇಕು ಬೇಡಿಕೋ ಎನಲು
ನಿಮಿಷ ಮಾತ್ರದಿ ಅನಿಮಿಷೆಯ ಕೇಳಿದೆ ನಾನು
ಮಾಡುವೆಯ ನನ್ನನೂ ಕಾಳಿದಾಸಿ?
ರಾತ್ರಿ ಕಳೆಯುವುದರೊಳಗೆ ಕಾವ್ಯಭಾಷಿ?

ನಕ್ಕಳಾ ತಾಯಿ, ನಕ್ಕಳಾ ತಾಯಿ
ವರವ ಬಯಸಿದ ಹಳೆಯ ಹುಡುಗಿ ತಲೆ ನೇವರಿಸಿ
ನಕ್ಕಳಾ ಮಾಂಕಾಳಿ ಜಿಕ್ಕಿಬಿಕ್ಕಿ (ಪುಟ 47)

ಗಹಗಹಿಸಿ ನಗುವ ಮಾಂಕಾಳಿಗೂ ಜಿಕ್ಕಿಬಿಕ್ಕಿ ನಗುವ ಮಾಂಕಾಳಿಗೂ ಇರುವ ಅಂತರ ಯಾವುದು, ಅದು ಏಕೆ ಬಂತು ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಂಡಾಗ ವೈದೇಹಿಯವರ ಕಥೆ-ಕವಿತೆಗಳ ಆಳದಲ್ಲಿ ಅಂದಿಗೂ ಇಂದಿಗೂ ಅಡಗಿ ಕುಳಿತಿರುವ ವಿಷಾದವು ಮನದಟ್ಟಾಗುತ್ತದೆ. ಏಕೆಂದರೆ, ಸಾಹಿತಿಯಾಗಿ ಪಡೆಯುವ ಯಶಸ್ಸು ಬೇರೆಯವರ ಅಥವಾ ಸ್ವತಃ ತನ್ನ ನೋವನ್ನು ಒಂದಿನಿತೂ ಕಡಿಮೆ ಮಾಡುವುದಿಲ್ಲ. ಈ ತಿಳಿವಳಿಕೆಯು ಈ ಲೇಖಕಿಯ ವೇದನೆ, ಸಂವೇದನೆ ಮತ್ತು ಬರವಣಿಗೆಯನ್ನು ಕಾಪಾಡಿಕೊಂಡಿದೆ.



## ವೈದೇಹಿ – ದೀಪದೊಳಗಿನ ದೀಪ

✦ ಸ ಉಷಾ

ವೈದೇಹಿ ಕನ್ನಡದ ಹೆಮ್ಮೆ, ಭಾರತ ಮಟ್ಟದಲ್ಲಿ ತಮ್ಮ ಹೆಜ್ಜೆಗುರುತು ಮೂಡಿಸಿದವರು, ವಿದೇಶಗಳಲ್ಲಿ ಸಹ ಅವರ ಕವಿತೆ ನಿನದಿಸಿದೆ.

ವೈದೇಹಿ ಕವಿತೆಯ ರೂಪದಲ್ಲಷ್ಟೇ ಕವಿತೆ ಬರೆದಿಲ್ಲ, ಅವರ ಕಥೆಗಳು ಸಹ ಗದ್ಯದಲ್ಲಿರುವ ಕಥನಕಾವ್ಯವೇ ಆಗಿವೆ.

ವೈದೇಹಿ ಬಹುಭಾಷಿಣಿ. ಶಿಷ್ಟಕನ್ನಡ, ಕುಂದಕನ್ನಡ, ಹಾಣೆ ಮಂಗಳೂರು ಕನ್ನಡ, ಒಮ್ಮೊಮ್ಮೆ ತುಳು ಎಲ್ಲವೂ ಅವರಿಗೆ ಒಲಿದು ಹೆಣ್ಣು ಜೀವದ ಬಾಯನ್ನು ಒತ್ತಿ ಹಿಡಿದ ಕೈಸರಿಸಿ ನೋವಿನ ಅಥವಾ ನಲಿವಿನ ಹಾಡನ್ನು ಹಾಡಿಸಿವೆ.

ವೈದೇಹಿ ಕಾವ್ಯದ ಹೆದ್ದಾರಿಯಲ್ಲಿ ಹಲವು ಜೀವಂತ ಪ್ರತಿಮೆಗಳಿವೆ. ಅಡಿಗೆ ಮನೆಯ ಹುಡುಗಿ, ಬೆರಣಿತಟ್ಟುವ ಹುಡುಗಿ ಮತ್ತು ಚಂದ್ರಾಮ ದೇವರು, ಶಿವನ ಮೀಸುವ ಹಾಡಿನ ಆರ್ದ್ರಗರ್ವದ ಹುಡುಗಿ ನಮ್ಮ ಗೌರಿ ಇವು ಅಂಥ ಜೀವಂತ ಪ್ರತಿಮೆಗಳು. ಇವೆಲ್ಲವೂ ವಿಶಿಷ್ಟ ವೈದೇಹೀ ಸ್ಪರ್ಶದ ಕವಿತೆಗಳು.

'ಆಹ ನೀಲಿಜ್ವಾಲೆ! ತಣಿದು ಘಮದ ವಿಭೂತಿ
ಇದು ಯಾವ ಭ್ರಾಂತಿ?
ಕಣ್ಣುಜ್ಜಿ ಕೇಳಿದಳು ಉಂಟೇ ಇಂಥ ಚಂದ್ರಾಮ ಪ್ರೀತಿ
ಎಲ್ಲಾದರೂ?'

('ಬೆರಣಿ ತಟ್ಟುವ ಹುಡುಗಿ ಮತ್ತು ಚಂದ್ರಾಮ ದೇವರು', ಬಿಂದುಬಿಂದಿಗೆ, ಪು.31)

ಇದು ಕವಿತೆಯೆಂದರೆ ಕವಿತೆ. ಕಾಯಕಷ್ಟದ ಬಾಲೆಯ ತಾತ್ವಿಕತೆಯೆಂದರೆ ತಾತ್ವಿಕತೆ. ಫ್ಯಾಂಟಸಿ ಎಂದರೆ ಅದೂ ಹೌದು.

'ಹೂವ ಕಟ್ಟುವ ಕಾಯಕ' ಎಂಬ ಸಂಕಲನ ಪಾರಿಜಾತ ಮತ್ತು ಬಿಂದು ಬಿಂದಿಗೆಗಳ ನಂತರ 2011 ರಲ್ಲಿ ಪ್ರಕಟವಾಗಿದೆ. ಇದರಲ್ಲಿ ಮಗಳಾಗಿ – ತಾಯಿಯೂ ಆಗಿ ಕವಯಿತ್ರಿ

ಬದುಕನ್ನು ಪರಿಭಾವಿಸಿದ್ದಾರೆ. ಮಗಳನ್ನು ಗಂಡನ ಮನೆಗೆ ಕಳಿಸಿಕೊಟ್ಟು ತಟ್ಟೆ ಎತ್ತಿಟ್ಟು ಕಣ್ಣುತೊಳೆದ ತಾಯಿ– ತಾಯಿಯನ್ನು ಕಳಕೊಂಡ ದಿನ ಬಾಯಿ ಕಳಕೊಂಡ– ತುಂಟತನ ಕಳಕೊಂಡ ಮಗಳು, ಎಣ್ಣೆ ಇದ್ದರೂ ತಣ್ಣಗೆ ಉರಿಯುವ ದೀಪ, ಎಲ್ಲಿ ಇರುವೆಯೋ ಅದೇ ಬೋಧಿ ಎಂದು ತಿಳಿದ ಜ್ಞಾನಿ ಎಲ್ಲರೂ ಈ ಕವಿತೆಯಲ್ಲಿದ್ದಾರೆ. ಜೊತೆಗೆ ಒಂದು ಕ್ಷಣದಲ್ಲಿ ಅರ್ಥ ಸ್ಫೋಟವಾಗಿ ಸಣ್ಣ ಮುಗುಳುನಗೆಯನ್ನೋ, ವಿಷಾದದ ನಿಟ್ಟುಸಿರನ್ನೋ ತರುವ ಅದೆಷ್ಟೋ ಬಿಡಿ ಪದ್ಯಗಳು ಇದರಲ್ಲಿವೆ.

ಈಗ ಶ್ರೀಮತಿ ವೈದೇಹಿಯವರು ಇನ್ನೊಂದು ಹೊಸ ಕವನ ಸಂಕಲನಕ್ಕೆ ಸಿದ್ಧತೆ ನಡೆಸಿದ್ದಾರೆ. ಅವರು ನನಗೆ ಪ್ರೀತಿಯಿಂದ ಓದಲು ಕಳಿಸಿಕೊಟ್ಟ ಈ ಹೊಸ ಸಂಕಲನದ ಕವಿತೆಗಳನ್ನು ಕುರಿತ ನನ್ನ ಅನಿಸಿಕೆಗಳನ್ನು ಅವರ ಅನುಮತಿಯಿಂದ ಈ ಪುಸ್ತಕದ ಓದುಗರೊಡನೆ ಹಂಚಿಕೊಳ್ಳಬಯಸುತ್ತೇನೆ.

ಇಂದು ಯಾವ ಕಲಾವಿದರಲ್ಲೂ ತಮ್ಮ ಕಲೆಯನ್ನು ವಿಜೃಂಭಿಸುವ ಸಂಭ್ರಮಿಸುವ ಸ್ಥಿತಿ ಉಳಿದಿಲ್ಲ. ಕಲೆ ತನಗಾಗಿ ರೂಪಿಸಿಕೊಂಡ ಅಳತೆಗೋಲುಗಳು ಅರ್ಥಹೀನವಾಗಿವೆ. ಸಮಕಾಲೀನ ವಿಷಯಗಳಿಗೆ ಸ್ಪಂದಿಸುವ ಕಲಾವಿದ ಸುತ್ತು ಬಳಸಿನ, ಉಪಮೆ–ರೂಪಕಗಳ, ಪ್ರತಿಮೆ ಸಂಕೇತಗಳ, ಕಾವ್ಯಭಾಷೆಯ ವಿಜೃಂಭಣೆಯ ದಾರಿಯನ್ನು ತೊರೆದು ನೇರದಾರಿಯನ್ನು ಹಿಡಿಯಬೇಕಾಗುತ್ತದೆ. ಇಲ್ಲಿನ ಕೆಲವು ಕವಿತೆಗಳಲ್ಲಿ ವೈದೇಹಿಯವರು ಆ ದಾರಿ ಹಿಡಿದಿದ್ದಾರೆ. ಇದರಲ್ಲಿ ಸುಮಾರು ಅರವತ್ತಾರು ಕವಿತೆಗಳಿವೆ.

'ಪೂಜೆ ತಕ್ಷಣ ನಿಲ್ಲಿಸಿ, ಮಗು ಸತ್ತಿದೆ' ಎಂಬ ಅವರ ಮಾತು ಕಲೆಯ ಪೂಜೆಗೂ ಅನ್ವಯಿಸುತ್ತದೆ. ಇಲ್ಲಿನ ಬಹುತೇಕ ಕವಿತೆಗಳು ಬದಲಾಗಿರುವ ಸಾಮಾಜಿಕ ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ – ಹಿಂಸೆಯ ರಕ್ಕಸ ಕುಣಿತ, ಮನೆಬಿಟ್ಟು ಹೋಗಿರುವ ಮಗಳು ಮನೆಗೆ ಬರುವ ಹೊತ್ತನ್ನು ಕಾಯುವ ಪೋಷಕರ ಮನಃಸ್ಥಿತಿ, ಹಿಂಸೆಗೆ ಗುರಿಯಾದರೂ ಕೂಗಲಾರದ ದಮನಿತ ಸ್ಥಿತಿಗಳನ್ನು ಕುರಿತು ಹಾಡಿವೆ.

'ಅಮ್ಮಚ್ಚಿ ಹಾಡು' ಎಂಬ ಕವಿತೆಯೊಂದಿದೆ–ಇದರಲ್ಲಿ ಇದರ ಸಂಪೂರ್ಣ ಸಾರ 'ಸ್ವಂತಕೆಂತಿಲ್ಲೆ', 'ಸೈಸುಕಾತ್ತಿಲ್ಲ' ಎಂಬ ಎರಡು ಮಾತುಗಳಲ್ಲಿದೆ. ಜಗದ ಅನ್ಯಾಯಗಳನ್ನು ಕಂಡು ಕವಿಮನ ಕತಕತ ಕುದಿಯುವಾಗ ಅಂತರಂಗದ ಭಾಷೆಗೆ ಕವಿತೆ ಮರಳಿಬಿಡುತ್ತದೆ.

'ಹೊಗೆ' ಎಂಬ ದೀರ್ಘಪದ್ಯವೊಂದಿದೆ. ಈ ಪದ್ಯ ಮೊದಲು ಬ್ಲೇಕ್ ಕವಿಯ 'Chimney Sweeper' ಪದ್ಯದ ನೆನಪು ತಂದರೂ ಹೊಗೆ ಕೊಳವೆ ಕಿಟ್ಟಗಳನ್ನು ಇಂದಿನ ಯುಗಕ್ಕೆ ತಂದುಬಿಡುತ್ತದೆ.

ಕವಿತೆಯ ಆರಂಭದಲ್ಲಿ ಹೊಗೆ ಕಟ್ಟಿಕೊಂಡ ಕೊಳವೆಯನ್ನು ತಿವಿದು ಹೊಗೆ ಹೋಗುವಂತೆ ಮಾಡುವ ದಂಪತಿಗಳಿದ್ದಾರೆ. ಕೊನೆಗೆ ಹೊಗೆರಹಿತ ಒಲೆಗಳಿವೆ. ಆದರೂ ಬದುಕು ಹೊಗೆ ತುಂಬಿಕೊಂಡೇ ಇದೆ.

'ಈಗಿಲ್ಲ ಅಂಥ ಒಲೆ, ಬೆಂಕಿ ಇದೆ ಹೊಗೆ ಇಲ್ಲ
ಉರುವಲಿನ ಸ್ವರೂಪ ಸೌದೆಯೇ ಅಂತಿಲ್ಲ
ಹಿರಿಯರೆಲ್ಲರು ತಂದದ್ದು ಮುಗಿಸಿ ತೆರಳಿ
ಸ್ವಿಚ್ ಆನ್ ಸ್ವಿಚ್ ಆಫ್‌ಗಳ ವ್ಯಕ್ತಮಧ್ಯೆಯಲಿ
ಅನ್ನ ರಾಗೀಮುದ್ದೆ ಸಾರು, ಸ್ನಾನಕೆ ನೀರು
ಹೊಗೆರಹಿತ ಒಲೆ ಸರಿಯೆ. ನಾಲ್ದೆಸೆಯೂ ಹೊಗೆ ಹೇಗೆ?'
(ಹೊಗೆ–ಹೆಸರಿಡದ ಸಂಕಲನ)

ಕೊನೆಗೆ ಹೊಗೆ –ಹಗೆ ವಾಸನೆಗಳನ್ನು–ವಿಶ್ವದ ತಲ್ಲಣಗಳನ್ನು ಕವಿತೆ ಸ್ಪರ್ಶಿಸುತ್ತದೆ.

ಮೆಲ್ಲನೆ ಕವಿತೆ ತನ್ನದೇ ಸಹನೆಯ, ಪ್ರೀತಿಯ ಕಾದು ನೋಡುವ ದಾರಿಗೆ ಬರುತ್ತದೆ.

'ಸೂರ್ಯದೇವನ ಗಾಡಿ ಓಡಿಯಾಯಿತು ದೂರ
ಇನ್ನು ನಾಳೆಯವರೆಗು ಕತ್ತಲ ಹಾಯಬೇಕು
ಕತ್ತಲಲಿ ಮಾಣಿಕ್ಯ ಕಂಡ ಕ್ಷಣಗಳ ಮೆಲ್ಲ
ಕವನದಲಿ ಸಾಲಾಗಿ ಜೋಡಿಸಿಡಬೇಕು
ದೀಪದೊಳಗಿನ ದೀಪ ಆಗಬೇಕು'

('ಪಯಣದ ಹಾಡು' – ಹೆಸರಿಡದ ಸಂಕಲನ)

ತನ್ನ ಮಿತಿಗಳ ಅರಿವಿರುವ ಕಲಾವಿದನ ಕಲೆ ಇಲ್ಲಿ ಆಕ್ರೋಶದಲ್ಲಿ ಸೊಕ್ಕುವುದಿಲ್ಲ. ವಿನಯದಲ್ಲಿ ತನ್ನ ಗಾಡಿ ತಾನು ಎಳೆಯುತ್ತದೆ.

'ನೈವೇದ್ಯ ಸಿಹಿಕಣದ ತೇರು ಎಳೆಯುತ್ತಾ
ಸಾಲಿರುವೆ ಮೆರವಣಿಗೆ ಸಾಗುತ್ತಿದೆ'

('ದೇಗುಲದಲ್ಲಿ' – ಹೆಸರಿಡದ ಸಂಕಲನ)

ಈ ಸಂಕಲನಕ್ಕೆ ಹೆಸರೇನಿಟ್ಟಿದ್ದಾರೋ ನನಗೆ ತಿಳಿಯದು. ನಾನಂತೂ ಇದನ್ನು ಪ್ರೀತಿಯಿಂದ 'ದೀಪದೊಳಗಿನ ದೀಪ' ಎಂದು ಕರೆಯುತ್ತೇನೆ. ವೈದೇಹಿಯವರಿಗೆ ಎಪ್ಪತ್ತೈದಾಗುತ್ತಿದೆ ಅಂತ ಜಗತ್ತು ಹೇಳುತ್ತಿದೆ. ನಾನದನ್ನು ಒಪ್ಪುವುದಿಲ್ಲ. ಎಪ್ಪತ್ತೈದಾಗುತ್ತಿರುವುದು ಜಾನಕಿಯವರಿಗೆ. ವೈದೇಹಿ – ಪುಟ್ಟ ಹುಡುಗಿ, ತಾಯಿಯನ್ನು ಕಳಕೊಂಡ ಮಗಳು, ಮಗಳನ್ನು ಗಂಡನ ಮನೆಗೆ ಕಳಿಸಿಕೊಟ್ಟ ತಾಯಿ, ಅಕ್ಕನಿಗೆ ಸಂಸಾರಿ ಪದ ಹೇಳುವ ತಂಗಿ – ಅವರು ಜಾನಕಿಯೊಳಗಿನ ವೈದೇಹಿ. 'ದೀಪದೊಳಗಿನ ದೀಪ'

ತುಂಬ ತುಂಬ ಪ್ರೀತಿ...



# ಮೆಲುದನಿಯ ಕಾವ್ಯಾಸ್ಫೋಟ

✦ ಹೆಚ್ ಎಸ್ ವೆಂಕಟೇಶಮೂರ್ತಿ

ವೈದೇಹಿ ನನಗೆ ಬಹು ಪ್ರಿಯರಾದ ವ್ಯಕ್ತಿ ಮತ್ತು ಲೇಖಕಿ. ಅವರು ಬರೆವದ್ದನ್ನು ಕಥೆಯಾಗಲಿ, ಕವಿತೆಯಾಗಲಿ ನಾನು ಕಣ್ಣಲ್ಲಿ ಕಣ್ಣಿಟ್ಟು ಓದುತ್ತೇನೆ. ಅವರು ಸಭೆಯ ಲೋಕಾಂತದಲ್ಲೋ, ಖಾಸಗಿಯ ಏಕಾಂತದಲ್ಲೋ ಮಾತಾಡುವಾಗ ನಾನು ಮೈಯೆಲ್ಲ ಕಿವಿಯಾಗಿ ಆಲಿಸುತ್ತೇನೆ. ನಿಧಾನ ನೆಲದಲ್ಲಿಂಗುವ ನೀರಂತೆ, ಪುಣುಪುಣು ಓಡುವ ಟೂವಕ್ಕಿ ನಡೆಯಂತೆ ಅವರ ಮಾತು. ಮಾತಾಡುವಾಗ ಅವರ ಭಾವಭಂಗಿ ನೋಡುವಂತಿರುತ್ತದೆ. ಅದು ಸಾಹಿತ್ಯ ಭಾಷೆಯ ಭಾಷಣವಾಗುವುದಿಲ್ಲ. ಮನೆಮಾತಿನ ಆರ್ದ್ರ ಮುಖಾಮುಖಿಯಾಗಿರುತ್ತದೆ. ಹೆಣ್ಣಿನ ನೋವು ನಲಿವು ಬಿಗುಮಾನ ಗರ್ವ ಹೂವಿನ ದಳ ಒಡೆಯುವಂತೆ ಒಡೆದುಕೊಳ್ಳುತ್ತದೆ. ಒಂದು ಮಾತು ಹಿಡಿಯ ಬೇಕೆನ್ನುವಷ್ಟರಲ್ಲಿ ಇನ್ನೊಂದು ಮಾತಿಗೆ ಮಾತು ಸರಾಗ ಜಿಗಿದಿರುತ್ತದೆ. ಹೂವಿನ ಮೇಲೆ ಎರಗುವ ಚಿಟ್ಟೆಯಂತೆ ಒಮ್ಮೆ...ತುಂಬಿಯಂತೆ ಒಮ್ಮೆ.

ಪ್ರತಿಭಾ ಸವಿತಾ ಕಮಲಾ ಲಲಿತಾ ಅವರಂತೆ ವೈದೇಹಿಯೂ ನನಗೆ ಬಹು ಪ್ರಿಯರಾದ ಲೇಖಕಿ. ಕತೆಗಾರ್ತಿಯೆಂದು ವಿಖ್ಯಾತರಿದ್ದರೂ ಹೃದಯಕ್ಕೆ ಬೆಚ್ಚಗೆ ತಾಗುವಂತೆ ಬರೆಯುವ ಧ್ವನಿಸೂಕ್ಷ್ಮ ಕವಿ. ವೈದೇಹಿಯವರ ಗದ್ಯ ನನಗೆ ತುಂಬ ಪ್ರಿಯ. ಅವರ ಕವಿತೆಗಳನ್ನು ಅವರ ಕಥೆಗಳನ್ನು ನೆನೆಸಿಕೊಳ್ಳುತ್ತಾ ಓದಬೇಕು. ಎರಡೂ ಕಡೆ ನುಡಿಯುವ ಮನಸ್ಸು ಒಂದೇ. ಅವರ ಕವಿತೆಗಳು 'ನಾನು ಕವಿತೆಯಲ್ಲಪ್ಪಾ' ಎಂದು ಕೈ ಆಡಿಸುತ್ತಲೇ ಆ ಆಂಗಿಕದಲ್ಲೇ ಅನಾಯಾಸ ಕವಿತೆಯಾಗಿ ಬಿಡುತ್ತವೆ. ಅಂಥ ಕೆಲವು ಕವಿತೆಗಳನ್ನು ಈಗ ನೆನಪು ಮಾಡಿಕೊಳ್ಳುತ್ತೇನೆ.

'ತಿಳಿದವರೇ ಹೇಳಿ' ಎಂಬ ವೈದೇಹಿಯವರ ಕವಿತೆಯೊಂದಿದೆ. ತಿಳಿದವರು ಎಂದರೆ ಕಾವ್ಯದ ಬಗ್ಗೆ ತಿಳಿದವರು! ನನಗೆ ಕಾವ್ಯ ಗೊತ್ತಿಲ್ಲ; ತಿಳಿಸಾರು ಗೊತ್ತು ಎಂದೇ ಕವಿತೆ ಪ್ರಾರಂಭವಾಗುತ್ತದೆ. ಮುಂದೆ ಆರ್ದ್ರಗರ್ವದಲ್ಲಿ (ಇದು ಅವರದ್ದೇ ಮಾತು) ತಿಳಿಸಾರಿನ ರಸತತ್ವವನ್ನು ವಿವರಿಸುತ್ತ ಹೋಗುತ್ತದೆ. ಆ ವಿವರಣೆಗೆ ಕವಿ ಬಳಸುವ ಭಾಷೆ ಮೇಲ್ನೋಟಕ್ಕೆ

ಕಾಣುವಷ್ಟು ಸಾದಾಸೀದವಲ್ಲ. ತಿಳಿಸಾರು ಅಂದರೆ ಏನೆಂದುಕೊಂಡಿರಿ ಎಂಬ ಪ್ರಶ್ನೆಯಲ್ಲಿ ಅಭಿಮಾನ ಕೆನೆಗಟ್ಟಿದೆ. ನಿಮಗೆ ಅದು ಗೊತ್ತಿಲ್ಲ ಮಾರಾಯರೆ ಎಂಬ ವ್ಯಂಗ್ಯ ಮತ್ತು ವಿಷಾದವೂ ಹೆಪ್ಪುಗಟ್ಟಿದೆ. ಹಾಲು ಮೊಸರಾಗಲಿಕ್ಕೆ ಎಷ್ಟು ಹನಿ ಹುಳಿ ಬೇಕೆಂಬ ಅಂತರ್ತತ್ವ ಅವರಿಗೆ ಗೊತ್ತು. ಸುಮ್ಮನೆ ಕೇಳಬೇಡಿ...ಸ್ವಲ್ಪ ಚಿಂತಿಸಿ ಎಂದು ಒತ್ತಾಯ ಮಾಡಲೇ ತತ್ವ ಎಂಬ ಮಾತು ಮತ್ತೆ ಮತ್ತೆ ಎಟಕಾಯಿಸುತ್ತದೆ.

ಸಾರು ಸಿದ್ಧವಾಗಿ ಬೂದಿಮುಚ್ಚಿದ ಕೆಂಡದೊಲೆಯ ಮೇಲೆ ಕಾಯುತ್ತದೆ! ಕಿಡಿಮಿಂಚು ವಗ್ಗರಣೆಯ ಗಮ್ಮತ್ತಿನ ಅಡುಗೆಯನ್ನು ಬಡಿಸುವವರ ಝಣತ್ಕಾರದ ನಡಿಗೆಯವರ ಒಡ್ಡೋಲಗದಲ್ಲಿ ತೆಳ್ಳನೆಯ ತಿಳಿಸಾರು ಬೆಳಗಿನಿಂದ ಹಾಗೆಯೇ ಇದೆ! ಆದರೆ ಆ ಸಾರು ರಾತ್ರಿಯಾದರೂ ಹಳಸುವಂಥದ್ದಲ್ಲ. ಅಂಥ ಕಿರುಗಂಪ ತಿಳಿಸಾರಿನ ಸಾರತತ್ವ ನನಗೆ ಗೊತ್ತು! ನನಗೆ ಕಾವ್ಯ ಗೊತ್ತಿಲ್ಲ ಎನ್ನುತ್ತಾರೆ ಕವಿ!

ಕಾವ್ಯದ ಬಗ್ಗೆ ದೊಡ್ಡಕ್ಕೆ ತಿಳಿದವರನ್ನು ಕವಿತೆ ಚುಚ್ಚುವಂತಿದೆ. ಗೊತ್ತೇ ತಿಳಿಸಾರು ನಿಮಗೆ ಎನ್ನುವ ಪ್ರಶ್ನೆಯು ನಿಮಗೆ ಗೊತ್ತಿಲ್ಲ ಎಂಬುದನ್ನು ಮರೆಮಾತಿನಲ್ಲಿ ಹೇಳುತ್ತಾ ಇದೆ! ಕ್ಷಮಿಸಿ...ಗೊತ್ತಿಲ್ಲ ಕಾವ್ಯ ನನಗೆ ಎಂದು ಕವಿತೆ ಮುಗಿಯುತ್ತದೆ. ಮುಗ್ಧತೆ ಸರಳತೆ ಮತ್ತು ಆತ್ಮದ ಘಮ ಕಾವ್ಯದ ಮೂರು ಮೂಲಸತ್ವಗಳು. ಕೆಎಸ್‌ನ ಹೇಳುವಂತೆ ಸರಳವಾಗಿರುವುದು ನೀವೆಂದುಕೊಂಡಷ್ಟು ಸರಳವಲ್ಲ ಎನ್ನುತ್ತದೆ ವೈದೇಹಿಯ ಕಾವ್ಯ ಮೀಮಾಂಸೆಯೂ! ದೇಸಿಯಲ್ಲೇ ಹೊಕ್ಕು ದೇಸಿಯಲ್ಲೇ ಫಲಿಸುವ ವೈದೇಹಿಯ ಮಲ್ಲಿಗೆಯ ಹಂಬಿನಂತ ದೇಸೀಸತ್ವದ ಕವಿತೆಗಳು ಸ್ವಾದ ಮತ್ತು ಆಸ್ವಾದ ಎರಡಕ್ಕೂ ಲಾಯಕ್ಕಾದವು.

ನನಗೆ ಮರೆಯಲಿಕ್ಕೇ ಆಗದೆ ಮತ್ತೆ ಮತ್ತೆ ಕಾಡುವ ಕವಿತೆ, ವೈದೇಹಿ ಬರೆದ, ವೈದೇಹಿ ಮಾತ್ರ ಬರೆಯಬಹುದಾದ ಶಿವನ ಮೀಸುವ ಹಾಡು. ಗೌರಿ ಶಿವನನ್ನು ಕರೆದೊಯ್ಯುವುದು, ಹಾಡುತ್ತಲೇ ಅವನ ಅಭಿಷೇಕ (ಅಭ್ಯಂಗ ಅಭಿಷೇಕ ಆಗಿರುವ ಸೂಕ್ಷ್ಮವನ್ನು ಗಮನಿಸಿ. ಅಭಿಷೇಕ ಅಭ್ಯಂಗವೂ ಹೌದು; ಆರಾಧನೆಯೂ ಹೌದು. ಆದರೆ ಆ ಆರಾಧನೆಯು ನಡೆಯುವುದು ಮೀಯಿಸುವ ಹೆಣ್ಣಿನ ಆತ್ಮಾರ್ಥಕ್ಕಲ್ಲ. ಶಿವನ ಶುಭ್ರ ಸ್ನಾನಕ್ಕೆ! ಮರೆಮಾತಿನಲ್ಲಿ ಅವನ ಶುದ್ಧೀಕರಣಕ್ಕೆ! ಎಣ್ಣೆಯೊತ್ತಿ ಎನ್ನುವುದು ಪ್ರೀತಿಯೊತ್ತಿ ಎಂದು ನುಡಿಪರಿವರ್ತನೆಗೊಂಡಿದೆ. ಮೂಜಗದಲೋಡಾಡಿ ಎಂತು ದಣಿದವೊ ಪಾದ ಎಂಬ ನೆಪದಲ್ಲಿ ಗೌರಿ ಶಿವನ ಪಾದ ಒತ್ತುತ್ತಿದ್ದಾಳೆ. ಅಲ್ಲಿ ಪ್ರೀತಿಯೊಂದಿಗೆ ಕರುಣೆಯೂ ಇದೆ. ಆದರೆ ಯಾರ ಮನೆಯ ಬೀದಿಯ ಧೂಳು ಅವನ ಪಾದಕ್ಕೆ ಹತ್ತಿದೆ ಎಂದು ಪರೀಕ್ಷಿಸುವ ಸಂದೇಹ, ನೋವು ಮತ್ತು ಅನುಮಾನಶೋಧದ ಪತ್ತೆದಾರಿಕೆಯೂ ಇದೆ! ಮುಗಿಯಿತೇ ಬೇಟೆ ಎಂದು ಕಿರಾತಾರ್ಜುನನಿಗೆ ಚುಚ್ಚುವ ಪ್ರಶ್ನೆ ಕೇಳುವ ಧಾರ್ಷ್ಟ್ಯವೂ ಇದೆ. ಪ್ರೀತಿ, ಕರುಣೆ, ಅನುಮಾನ, ವ್ಯಂಗ್ಯ, ದುಃಖ, ಕಿನಿಸು–ಅದೆಷ್ಟು ಭಾವಸಮ್ಮರ್ದ ಗೌರಿಯ ಒಳಮನಸ್ಸಲ್ಲಿ. ತಾಯಿ ಮಗುವಿಗೆ ಮಾಡುವಂತೆ

ಅಭ್ಯಂಗದ ಕೊನೆಯ ಅಂಗವಾಗಿ ಬೇರೆಬೇರೆ ತೀರ್ಥಗಳ ಹೆಸರು ಹೇಳಿ ಆಶೀರ್ವಾದ ಮಾಡುವ ವಾತ್ಸಲ್ಯವೂ ಗೌರಿಯಲ್ಲಿದೆ. ಅದಕ್ಕೇ ಪದ್ಯ ಶಿವನ ಮೀಸುವ 'ಹಾಡು'.

ತಲೆಯ ಮೇಲೆ ಸದಾ ತಣ್ಣೀರು ಸುರಿದುಕೊಳ್ಳುವ ಶಿವನಿಗೆ ಗೌರಿ ಬಿಸಿನೀರಿನ ಸ್ನಾನ ಮಾಡಿಸುತ್ತಿದ್ದಾಳೆ. ನೀರೊಲೆಯಲ್ಲಿ ಕಾಯಿಸಿ ಸಿದ್ಧಪಡಿಸಿದ ಬಿಸಿನೀರಲ್ಲ! ನೀರೊಳಗೆ ಗೌರಿಯ ಕಂಬನಿ ಬಿಂದು ಬಿದ್ದು ನೀರು ಬಿಸಿಯಾಗಿದೆ! ಆ ಬಿಸಿಗೆ ಶಿವನೇ ಆಯ್! ಎಂದು ಬೆದರುತ್ತಾನೆ. ಕುಮಾರವ್ಯಾಸನಲ್ಲಿ ಕೃಷ್ಣ ಹೇಳುತ್ತಾನೆ. ಏನು ಬೇಕಾದರೂ ಸಹಿಸಿಯೇನು; ಹೆಣ್ಣಿನ ಕಣ್ಣೀರನ್ನು ಮಾತ್ರ ನಾನು ಸಹಿಸಲಾರೆ! ಆರ್ದ್ರಗರ್ವದ ಹುಡುಗಿ ಗೌರಿ ಎಂದು ಕವಿ ಹೇಳುವಾಗ ಎದೆಯ ಒಂದು ಮೂಲನರವನ್ನು ಯಾರೋ ಒಮ್ಮೆ ಜಗ್ಗಿ ಬಿಟ್ಟಂತೆ ಆಗುತ್ತದೆ.

ನೋಡಬಾರದು ಚೀಲದೊಳಗನು ಎಂಬ ಇನ್ನೊಂದು ಮನ ಕಲಕುವ ಪದ್ಯವಿದೆ. ವ್ಯಾನಿಟಿ ಬ್ಯಾಗ್ ಅಭಿಮಾನದ ಚೀಲ. ಆ ವ್ಯಾನಿಟಿ ಬ್ಯಾಗಲ್ಲಿ ಕೈಹಾಕಿ ನೋಡುವುದು ಎಂದಿಗೂ ಉಚಿತವಲ್ಲ ಪುರುಷರೇ ಎಂಬ ಎಚ್ಚರ ಹೇಳುವ ಧ್ವನಿಯಲ್ಲೇ ಕವಿತೆ ಪ್ರಾರಂಭವಾಗುತ್ತದೆ. ಪುರುಷರೇ ಎಂಬ ಪ್ರಯೋಗ ಹೇಳಿಕೆಯನ್ನು ಸಾರ್ವತ್ರಿಕಗೊಳಿಸುವ ಅಸ್ಮಿತೆಯ ಅಭಿವ್ಯಕ್ತಿಯಾಗಿದೆ. ಅಣ್ಣ ತಮ್ಮ ಗಂಡ ಮಗ ಇತ್ಯಾದಿ ಉಪಾಧಿಗಳ ತೊಡವು ಇಲ್ಲದ ಖಾಲಿ ಪುರುಷ! ಅವನನ್ನು ಮೂಲ ಪುರುಷ ಎಂದು ಬೇಕಾದರೂ ಕರೆಯಬಹುದು. ಪುರುಷ ಅಹಂಕಾರದ ವಿಕೃತಿಯಾಗುವುದು ಈ ಅಂತಃಕರಣದ ಬಂಧಗಳನ್ನು ಕಳಚಿ ಕೇವಲ ಪುರುಷನಾಗಿ ನಿಂತಾಗಲೇ. ಪುರುಷ ಎಂಬ ಶಬ್ದಕ್ಕೆ ಅನೇಕ ಪೂರ್ವಭವಗಳ ವಾಸನೆಯಿದೆ. ಪುರುಷ, ಪುರುಷೋತ್ತಮ, ಪರಮ ಪುರುಷ, ಸಾಕ್ಷಾತ್ ವಿಷ್ಣು ಇತ್ಯಾದಿ ಇತ್ಯಾದಿ. ಇಲ್ಲಿ ಪುರುಷೋತ್ತಮನ ರೂಪರೇಖೆ ಎಂಬ ಕಾವ್ಯಪ್ರಯೋಗವೂ ಮುಚ್ಚಿಟ್ಟುಕೊಂಡಿದೆ. ಅವೆಲ್ಲ ಅರ್ಥಪರಂಪರೆಯನ್ನು ವೈದೇಹಿಯವರ ಈ ಪದ್ಯ ಎದುರುಹಾಕಿಕೊಂಡು ಮೆಲ್ದನಿಯಲ್ಲೇ ಆಸ್ಫೋಟಿಸುತ್ತಿದೆ. ಒಂದು ಮತ್ತೊಂದಕ್ಕೆ ಅರ್ಥಾರ್ಥವಿಲ್ಲದೆ ಇಲ್ಲವೇ ಹಲವು ಜೊತೆಗಳು...ಹಾಗೆ ಅನೇಕ ಬಿಡಿಬಿಡಿಗಳು ವ್ಯಾನಿಟಿ ಬ್ಯಾಗಲ್ಲಿ ಒಟ್ಟಾಗಿಯೇ ಇವೆ. ನನಗೀಗ ಯಾಕೋ ಚಿಂತಾಮಣಿಯಲ್ಲಿ ಕಂಡ ಮುಖ ಎಂಬ ಅದ್ಭುತ ಕವಿತೆ ನೆನಪಾಗುತ್ತಿದೆ. ಅಲ್ಲಿ ಹುಡುಕಾಟ ಪುರುಷನದ್ದು! ಆ ಹುಡುಕಾಟ ಸ್ತ್ರೀಗಾಗಿ ಎನ್ನುವುದು ಆ ಕವಿತೆಯ ಮಹತ್ವವನ್ನು ಸೂಚಿಸುತ್ತದೆ. ಸ್ತ್ರೀ ಪುರುಷನನ್ನು ಎದುರುಹಾಕಿಕೊಳ್ಳದೆ ವಿಧಿಯೇ ಇಲ್ಲ. ಅನುಚರಣೆಯಲ್ಲ. ಸಹಚರಣೆಯೂ ಅಲ್ಲ. ಅವೆರಡನ್ನು ಮಿಕ್ಕು ಮೀರಿದ ಮುಖಾಮುಖಿ; ದೇಹಾದೇಹಿ; ಮನಸಾಮನಸು. ಅದು ಸಂಗಮವಲ್ಲ ಸಂಯೋಗದ ಆಯೋಗ. ಸಂಗಮ ಸರ್ವಾರ್ಪಣೆಯ ಅನುಸಂಧಾನ; ಸಂಯೋಗ ಬೆರೆತೂ ಬೆರೆಯದೆ ಅಸ್ಮಿತೆ ಉಳಿಸಿಕೊಳ್ಳುವ ಘನವಾದ ಆಧುನಿಕ ತತ್ವ.



# ‘ಮಗಳಿಗೆ’ –ಒಂದು ಕವನದ ಸುತ್ತಮುತ್ತ

✦ ಟಿ ಪಿ ಅಶೋಕ

ಹೊತ್ತು, ಹೆತ್ತು, ಹಲವಾರು ವರ್ಷ ಬೆಳೆಸಿ, ಕೊನೆಗೆ ಮದುವೆ ಮಾಡಿ ಮಗಳನ್ನು ಗಂಡನ ಮನೆಗೆ ಕಳುಹಿಸಿಕೊಡಬೇಕಾದ ಸಂದರ್ಭದಲ್ಲಿ ತಂದೆ ತಾಯಿಯರು ಅನುಭವಿಸುವ ತೊಳಲಾಟಗಳ ಚಿತ್ರಣವು ಭಾರತೀಯ ಸಾಹಿತ್ಯ, ರಂಗಭೂಮಿ ಮತ್ತು ಚಲನಚಿತ್ರಗಳಲ್ಲಿ ಮತ್ತೆ ಮತ್ತೆ ಕಂಡುಬರುತ್ತದೆ. ಇಂದು ಇಂತಹ ಚಿತ್ರಣಗಳು ಕ್ಲೀಶೆಯಾಗಿ ಚರ್ವಿತಚರ್ವಣವಾಗಿ ಓದುಗರಲ್ಲಿ ಪ್ರೇಕ್ಷಕರಲ್ಲಿ ಯಾವ ಭಾವವನ್ನೂ ಉದ್ದೀಪಿಸದೆ ಹತ್ತರಲ್ಲಿ ಹನ್ನೊಂದು ಎಂಬ ವಿವರವಾಗಿ ಒಮ್ಮೆ ಕಾಣಿಸಿಕೊಂಡು ಮಾಯವಾಗುತ್ತಿದ್ದರೂ ಕೆಲವು ಭಾವಸಂದರ್ಭಗಳು ನಮ್ಮ ಮನಸ್ಸಿನಲ್ಲಿ ಅಳಿಯದೆ ನೆನಪಾಗಿ ಉಳಿದಿರುವುದೂ ಉಂಟು. ಕಾಳಿದಾಸನ ‘ಶಾಕುಂತಲಾ’ ನಾಟಕದ ಪರಿಚಯವಿದ್ದವರು ಕಣ್ವನು ಶಕುಂತಲೆಯನ್ನು ಆಶ್ರಮದಿಂದ ಬೀಳ್ಕೊಡುವ ದೃಶ್ಯವನ್ನು ಹೇಗೆ ಮರೆತಾರು? ತಾಪಸಿಯಾದ ಕಣ್ವನ ಪಾಡೇ ಅಂತಿದ್ದರೆ ಹುಲುಮಾನವನ ಪಾಡೇನು? ಆಧುನಿಕ ಕಾವ್ಯದ ಬೇರೆ ಬೇರೆ ಘಟ್ಟಗಳಲ್ಲೂ ಈ ಭಾವಸಂದರ್ಭವು ಬೇರೆ ಬೇರೆ ಮಾತುಗಳಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಲೇ ಇದೆ. ತತ್‌ಕ್ಷಣ ನೆನಪಾಗುವುದೆಂದರೆ ವಿ.ಸೀ.ಅವರ ‘ಮನೆ ತುಂಬಿಸುವ ಹಾಡು’ ತಮ್ಮ ಮನೆಯ ಅಂಗಳದಲ್ಲಿ ಬೆಳೆದೊಂದು ‘ಹೂವನ್ನು’ ಮತ್ತೊಂದು ಮನೆಗೆ ಕಳಿಸುವಾಗ ತಂದೆತಾಯಿಯರು ಅನುಭವಿಸುವ ಉಮ್ಮಳವನ್ನು ವಿ.ಸೀ. ಬಣ್ಣಿಸುವ ಪರಿಯನ್ನು ಓದಿಯೇ ತಿಳಿಯಬೇಕು. ಕನ್ನಡದ ತುಂಬ ಜನಪ್ರಿಯ ಪದ್ಯಗಳಲ್ಲಿ ಇದೂ ಒಂದು. ಈಚಿನ ಪದ್ಯಗಳಲ್ಲಿ ಮನಸ್ಸನ್ನು ಮುಟ್ಟುವ ಮೂರು ರಚನೆಗಳೆಂದರೆ ಸ.ಉಷಾ ಅವರ ‘ದಿಬ್ಬಣ ಕಳಿಸಿದ ಮೇಲೆ’, ಚಂದ್ರಶೇಖರ ಕಂಬಾರ ಅವರ ‘ಹೊಸ ಬಾಳಿಗೆ ಹೊರಟ ಮಗಳಿಗೆ’ ಮತ್ತು ವೈದೇಹಿ ಅವರ ‘ಮಗಳಿಗೆ’. ಈ ಕವಿತೆಗಳಲ್ಲಿ ಮಗಳನ್ನು ಬೀಳ್ಕೊಡುವ ದುಃಖ, ಸಂಕಟಗಳ ಜೊತೆ ಆತ್ಮವಿಮರ್ಶೆಯೂ ಇದೆ. ಒಂದು ತೀವ್ರವಾದ ಭಾವನಾತ್ಮಕ ಗಳಿಗೆಯಲ್ಲಿ ತಂದೆತಾಯಯರು ತಮ್ಮ ಬದುಕನ್ನು ಒಮ್ಮೆ ಹಿಂದಿರುಗಿ ನೋಡಿಕೊಳ್ಳುತ್ತಾರೆ. ಜೀವನಮೌಲ್ಯಗಳನ್ನು ಕುರಿತು ಧ್ಯಾನಿಸುತ್ತಾರೆ. ಮಗಳಿಗೆ ಹೇಳುವ ಬುದ್ಧಿವಾದಗಳು ಪರೋಕ್ಷವಾಗಿ ಸ್ವತಃ ತಮಗೂ ಹೇಳಿಕೊಂಡಂತಿರುತ್ತವೆ.

ವೈದೇಹಿ ಪದ್ಯದ ಒಂದು ವಿಶೇಷವೆಂದರೆ ಮಗಳನ್ನು ಮದುವೆ ಮಾಡಿ ಕಳಿಸಿಕೊಡುವುದು ಒಂದು 'ಸಹಜ'ವಾದ ಕಾರ್ಯ ಎಂಬ ತಿಳುವಳಿಕೆ. ಇದನ್ನು ಬೇರೆ ಮಾತುಗಳಿಗೆ ಅನುವಾದಿಸಿಕೊಂಡರೆ ಮದುವೆ ಮಾಡಿಕೊಟ್ಟ ಮೇಲೆ ಮಗಳನ್ನು ಗಂಡನ ಮನೆಗೆ ಕಳಿಸಿಕೊಡುವುದು ತಂದೆತಾಯಿಯರಿಗೆ 'ಅನಿವಾರ್ಯ' ಎಂಬ ಧ್ವನಿಯೂ ಹೊರಡುತ್ತದೆ. ಒಂದು ಸಂಸ್ಕೃತಿಯಲ್ಲಿ, ಜೀವನಕ್ರಮದಲ್ಲಿ ಇದು 'ಸಹಜ', 'ಅನಿವಾರ್ಯ'. ಮುಂದೆ ಕವಿ ಏನೇ ತೋಡಿಕೊಂಡರೂ ಅದರ ಹಿಂದೆ ಈ ಅರಿವು ಇದ್ದೇ ಇರುತ್ತದೆ. ಕಂಬಾರರ ಪದ್ಯದಲ್ಲಿ ಒತ್ತು ತಂದೆತಾಯಿಯರ ಮೇಲಿದೆ ಉಷಾ ಅವರ ಕವಿತೆಯಲ್ಲಿ ಒತ್ತು ಮಗಳ ಮೇಲೆ. ಕಂಬಾರರ ಪದ್ಯ ತುಸು ಬೌದ್ಧಿಕ. ಉಷಾ ಅವರ ಪದ್ಯ ತುಸು ಬಾವುಕ. ವೈದೇಹಿ ಪದ್ಯದಲ್ಲಿ ಎರಡೂ ಹದವಾಗಿ ಬೆರೆತಂತಿದೆ. ಈ ಮಾತು ಮೂರೂ ಪದ್ಯಗಳ ಸ್ವರೂಪ ವ್ಯತ್ಯಾಸದ ಸೂಚನೆಯಲ್ಲ. ಯಾರಿಗೆ ಯಾವ ಪದ್ಯ ಹೆಚ್ಚು ಹಿಡಿಸೀತು ಎಂಬ ಚರ್ಚೆ ಸದ್ಯ ಅನಾವಶ್ಯಕ. ಮೂರೂ ಪದ್ಯಗಳನ್ನು ಒಟ್ಟಿಗೇ ಓದಿಕೊಳ್ಳಿ ಎಂದಷ್ಟೇ ಓದುಗರಿಗೆ ಸಲಹೆ ಕೊಡಬಹುದು. ವೈದೇಹಿ ಪದ್ಯವು 'ಅಂದು ಮಗಳೆ ನೀನು ಹೊರಟು ನಿಂತೆ/ಕಳಿಸಿಕೊಟ್ಟೆವು ನಾವು ಸಹಜವೆಂಬಂತೆ' ಎಂದು ಪ್ರಾರಂಭವಾಗುತ್ತದೆ. ಅಂದರೆ ಮಗಳನ್ನು ಬೀಳ್ಕೊಟ್ಟ ಎಷ್ಟೋ ದಿನಗಳ ನಂತರ ಕಷ್ಟಸಾಧ್ಯವಾಗಿಸಿಕೊಂಡ ನಿರ್ಲಿಪ್ತತೆ ಇದು. ಆದರೆ ನೆನಪು ಹಿಂದೆ ಹರಿಯುತ್ತಿದ್ದಂತೆ ಭಾವವೂ ಉಕ್ಕಲಾರಂಬಿಸುತ್ತದೆ. ಮೊದಲ ಎರಡು ಸಾಲು ಮುಗಿಯುತ್ತಿದ್ದಂತೆ ಎರಡನೆಯ ಸ್ಟಾಂಜಾದಲ್ಲೇ ನೆನಪೆಂಬುದು ಆತ್ಮವಿಮರ್ಶೆಯಾಗಿ ರೂಪಾಂತರಗೊಂಡು ಒತ್ತರಿಸಿಕೊಂಡು ಬಂದುಬಿಡುತ್ತದೆ: 'ಕಲ್ಲು ಮುಳ್ಳು ಹಾದಿಬೀದಿಯಲಿ ನಡೆಸಿ/ಕರೆದು ತಂದೆವು ಅಂತು ಇಲ್ಲಿವರೆಗೆ/ ಕಲ್ಲು ಒತ್ತಿತೆ ಮುಳ್ಳು ಕಂತಿತೆ ಮಗೂ/ಕೇಳಲಿಲ್ಲದ ಕೊರಗು ಈಗ ನಮಗೆ'. ಮತ್ತೆ ಐದನೆಯ ಸ್ಟಾಂಜಾದಲ್ಲಿ 'ಕಳಿಸಿಕೊಟ್ಟೆವು ಎಷ್ಟು ಸಹಜ ಎಂಬಂತೆ!' ಎಂಬ ಸಾಲು ಪುನರಾವರ್ತನೆಯಾಗುತ್ತದೆ. ಆದರೆ ಇದು ಯಾಂತ್ರಿಕವಾದ ಪುನರಾವರ್ತನೆಯಲ್ಲ. ಅದಕ್ಕೊಂದು ಆಶ್ಚರ್ಯಸೂಚಕ ಚಿನ್ಹೆ ಈಗ ಲಗತ್ತಾಗಿದೆ. ಕೈಕೈ ಜೊತೆಯಾಗಿ ನಡೆದದ್ದು, ನಕ್ಕಿದ್ದು, ಜಗಳವಾಡಿದ್ದು ಚರ್ಚೆ ಮಾಡಿದ್ದು ಮುಂತಾದ ನೆನಪುಗಳ ನಂತರ ಈ ಸಾಲು ಮತ್ತೆ ಬಂದಿದೆ. ಅಂದರೆ ಇದು ಸಹಜ, ಅನಿವಾರ್ಯ ಎಂದು ತನ್ನನ್ನು ಎಷ್ಟೇ ತಾತ್ವಿಕವಾಗಿ ನಂಬಿಸಿಕೊಳ್ಳಲು ಯತ್ನಿಸುತ್ತಿದ್ದರೂ ಆ ಅರಿವನ್ನು ಉಲ್ಲಂಘಿಸಿ ಉಕ್ಕುತ್ತಿರುವ ಭಾವಗಳು ಈ ಅರಿವಿಗಿಂತ ಹೆಚ್ಚು ನಿಜ ಎಂದು ಎನ್ನಿಸಲಾರಂಭಿಸುತ್ತವೆ. ಈ ಸಾಲಿನ ನಂತರ ಬರುವ ಮೂರು ಸಾಲುಗಳಲ್ಲಿ ಇದು ಸ್ಪಷ್ಟವಾಗುತ್ತದೆ: 'ಕಟ್ಟಿಹಾಕಿದ ಹಾಡು ಬಿಚ್ಚಿಕೊಂಡಿತು ಹೇಗೋ/ಯಾವ ಬಿಡುಗಡೆಯಿದು ಎದೆಯ ಬಗೆದು/ತಟ್ಟಿ ಸಂತೈಸುತ್ತ ತಾನು ಅಳುತಿಹುದು!' ನೆನಪಿನ ಸುರುಳಿ ಒಮ್ಮೆ ಬಿಚ್ಚಿದ ಮೇಲೆ ಅದಕ್ಕೆ ಅಡೆತಡೆಯಿಲ್ಲ. ಮಗಳೊಂದಿಗೆ ಕಳೆದ ದಿನಗಳ ಹಲವು ವೈವಿಧ್ಯಮಯ ವಿವರಗಳಲ್ಲಿ ನಿರೂಪಕಿ ಆ ಕ್ಷಣಗಳನ್ನು ಮತ್ತೆ ಬದುಕುತ್ತಾಳೆ. ಈಗ ಮಗಳು ತನ್ನ ಮನೆಯಲ್ಲಿ, ಜೊತೆಯಲ್ಲಿ

ಇಲ್ಲ. ಹಾಗೆಂದು ನಿರೂಪಕಿಯು ಬದುಕಿನ ಸ್ವರೂಪವೇ ನಿರ್ಣಾಯಕವಾಗಿ ಬದಲಾಗಿಬಿಟ್ಟಿದೆಯೇನು? ಗಟ್ಟಿ ಮನಸ್ಸು ಮಾಡಿಕೊಂಡು ನಿರೂಪಕಿ ತತ್ವೀಕರಿಸುತ್ತಾಳೆ. 'ನೀನಿಲ್ಲದಿದ್ದರೂ ಕೋಳಿ ಕೂಗುವುದು/ನೀನಿಲ್ಲದೆಯೂ ಓಡಾಟ ತಿಂಡಿ ಊಟ/ಮಾತುಕತೆ ಕುಶಾಲು ಇದೆ ಎಲ್ಲೂ ಹೋಗಿಲ್ಲ'. ಸ್ಟಾಂಜಾ ಇನ್ನೂ ಕೊನೆಯಾಗಿಲ್ಲ. ನಾಲ್ಕನೆಯ ಸಾಲಿನಲ್ಲೇ ಭಾಷೆಗೆ ಸಿಗದ ಭಾವ ಆ ಅರಿವನ್ನೂ ಭೇದಿಸಿಕೊಂಡು ನುಗ್ಗಿ ಬರುತ್ತದೆ. 'ಆದರು ಏನಿದು, ಈ ಸಂಕಟ!' ನೆನಪುಗಳು ಸಾವಿರ ಸಾವಿರ. 'ಹೆಕ್ಕುವೆನು ನಾ ಬೇರೆ ವಿಧ ಶಬರಿ/ಎಲ್ಲ ಪೋಣಿಸಿ ಇಡುವೆ ಅಂಬರದಲಂಬಾರಿ/ ಏರಿ ಬರುತ್ತದೆಯಲ್ಲ ಮುದ್ದು ಮೊಮ್ಮಗು, ಅದರ/ ನಾಮಕರಣದಿ ಹಾರ ತೊಡಿಸುವೆ' ಎಂದು ನಿರೂಪಕಿ ನಿಶ್ಚಯಿಸುತ್ತಾಳೆ. ನೆನೆಯುವುದೆಂದರೆ ಕೇವಲ ಹಳಹಳಿಸುವುದಲ್ಲ ಎಂಬ ಧ್ವನಿ ಇಲ್ಲಿದೆ. ಎರಡನೆಯದಾಗಿ ಭೂತವನ್ನು ದಾಟಿ ವರ್ತಮಾನವನ್ನು ಹಾಯ್ದು ಭವಿಷ್ಯತ್ತನ್ನು ಕಾಣುವ ಹದವನ್ನು ಈಗ ಮುಟ್ಟಿದ್ದಾಳೆ. ಮಗಳು ಮದುವೆಯಾದ ತಕ್ಷಣ ತಾಯಿ–ಮಗಳ ಸಂಬಂಧ ಕೊನೆಗೊಳ್ಳುವುದಿಲ್ಲ. ಅವರು ಭೌತಿಕವಾಗಿ ದೂರವಾಗಬೇಕಾಗಿ ಬಂದರೂ ಮೊಮ್ಮಗುವಿನಲ್ಲಿ ಅವರು ಒಂದುಗೂಡುತ್ತಾರೆ.

ಕವಿತೆಯ ಕೊನೆಯ ಭಾಗಗಳಲ್ಲಿ ನಿರೂಪಕಿ ತನ್ನ ಮಗಳಿಗೆ ಹೇಳುವ ಬುದ್ಧಿವಾದವು ಸ್ವತಃ ಅವಳ ಬದುಕಿನ ಕಾಣ್ಕೆಯೇ ಆಗಿದೆ. ಅವಳ ಲೋಕಾನುಭವದ ಸಾರಸರ್ವಸ್ವವೇ ಸರಳವಾದ ಸೂತ್ರರೂಪದ ಮಾತುಗಳಲ್ಲಿ, ಮಗಳಿಗೆ ತಾಯಿ ನೀಡುವ ಉಪದೇಶವಾಗಿ ವ್ಯಕ್ತವಾಗುತ್ತದೆ. 'ಯಾರೋ ಚಿಕ್ಕಿದ ಸದ್ದು ಕತ್ತು ತಿರುಗಿಸಲಿ/ಬಿಸಿಲಗಾವಿನ ನೆನಪು ಮುಸಳಿಸದಿರಲಿ/ಮುತ್ತು ಮಾಣಿಕ್ಯಗಳ ಅರ್ಥ ಗೊತ್ತಿದೆ ತಾನೆ/ಸೊಲ್ಲು ಮರೆತರೂ ಇರಲಿ ರಾಗಸ್ಮರಣೆ/ಶ್ರುತಿಬದ್ಧ ಧೃತಿ ಸ್ಯೆರಣೆ'. ತನ್ನ 'ಬದುಕಿನ ಹೊಸಿಲು ಬರೆಯಲಿಕ್ಕೆ' ತನ್ನ ಮನೆಗೆ ಹೋಗುತ್ತಿರುವ ಮಗಳಿಗೆ ಎಲ್ಲ ಪುಣ್ಯ ಲಭಿಸಲಿ ಎಂದು ತಾಯಿ ಮನದುಂಬಿ ಹರಸುತ್ತಾಳೆ. ಆದರೂ ಸಂಸಾರವೆನ್ನುವುದು ನಿತ್ಯ ಜಂಜಾಟದ ಒಂದು ವ್ಯಾಪಾರ ಎಂದು ಅವಳಿಗೆ ತಿಳಿಯದೆ ಇಲ್ಲ. ಅವಳ ಹಾರೈಕೆಯೂ ವಾಸ್ತವದ ಹರ್ಷವನ್ನು ಬಿಟ್ಟು ಇಲ್ಲ. ಮುಂದೆ ಬರಬಹುದಾದ ಎಲ್ಲ ತಾಪತ್ರಯಗಳೂ, ಜಗಳ ಜಂಜಾಟಗಳೂ ಬದುಕನ್ನು ಹೆಚ್ಚು ಹೆಚ್ಚು ಪಕ್ವಗೊಳಿಸಲಿ ಎಂದಷ್ಟೇ ಅವಳು ಹಾರೈಸುವುದು: 'ಹೋಗು ಮಗಳೆ ಹೋಗು ನಿನ್ನ ಮನೆಗೆ/ ಗಂಡ ಹೆಂಡತಿ ಬಾಳಿ ಮೇಲುಕೀಳೆನ್ನದೆ/ ದ್ವಂದ್ವ ಗಾಯನದಲ್ಲಿ ಧ್ವನಿ ಏಕವಾಗಿ/ ಜಗಳಾಡಿದರೆ ಒಂದು ಘನ ಅರಿವಿಗೆ/ ಕಲ್ಲು ಮುಳ್ಳು ಜಾಸ್ತಿ ಅಡ್ಡವಿರದಿರಲಿ ದಾರಿ/ ಚಂದವಿರಲಿ ತಂಪು ಮರಗಳಿರಲಿ/ ಚಂದ ದಾರಿಯಲಿ ಪರಿಶುಭ್ರವಿರಲಿ ದೃಷ್ಟಿ/ ನಡೆವ ಕ್ರಮದಭ್ಯಾಸ ತಪ್ಪದಿರಲಿ.' ಮಗಳು ಗಂಡನ ಮನೆಗೆ ಹೋಗುವ ಸಮಯ ಬಂದಿದೆ ಎಂದರೆ ವೈಯಕ್ತಿಕವಾಗಿ ತನ್ನ ಬಾಳೂ ಒಂದು ಮಹತ್ವದ ಘಟ್ಟ ಮುಟ್ಟಿದೇ ಎಂದೆ ಅರ್ಥ ಎನ್ನುವ ಅರಿವು ಈ ತಾಯಿಗಿದೆ. ಮಗಳೆನ್ನುವುದು ತನ್ನ ಸಂಸಾರದ ಫಲ. ತಾನು 'ಹಣ್ಣೆಲೆ'ಯಾಗುತ್ತಿದ್ದೇನೆ. 'ಸಂಜೆ ಚಿತ್ರ'ವಾಗುತ್ತಿದ್ದೇನೆ ಎಂಬ ಅರಿವಿನಲ್ಲಿ

ವಿಷಾದವಿಲ್ಲ. ಬದಲಿಗೆ ಒಂದು ಸಾರ್ಥಕ್ಯದ, ಕೃತಕೃತ್ಯತೆಯ ಭಾವ ಇಡೀ ಕವನವನ್ನು ವ್ಯಾಪಿಸಿಕೊಂಡಿದೆ. ಕವಿತೆಯ ಕೊನೆಯಲ್ಲಿ, ನಿನ್ನೆ ನಾವಾಗಿ ಬೇರಾಗುವವರು/ ಒಳಿತು ಹಾರೈಸುತ್ತ ಹಿಂದೆ ಉಳಿಯುವೆವು' ಎಂದು ನಿರೂಪಕಿ ಹೇಳುತ್ತಾಳೆ. 'ಬೇರಾಗುವವರು' ಎಂಬ ಪದವನ್ನು 'ಬೇರೆಯಾಗುವವರು' ಎಂದೂ 'ಬೇರು ಆಗುವವರು' ಎಂದೂ ಒಟ್ಟಿಗೆ ಓದಿಕೊಳ್ಳಲು ಸಾಧ್ಯವಿದೆ. ತನ್ನ ಮತ್ತು ತನ್ನ ಮಗಳ ಸಂಬಂಧವೆಂದರೆ ಬೇರು-ಹಣ್ಣಿನ ಸಂಬಂಧವೇ. ಹಣ್ಣು ಕಳಚಿ ಬೇರೆಯಾಗುತ್ತಿದ್ದರೂ ಅದರಲ್ಲಿ ಹೊಸ ಸೃಷ್ಟಿಯ ಬೀಜವು ಅಡಗಿದೆ. ಮೊಮ್ಮಗುವಿನ ಪ್ರಸ್ತಾಪ ಈಗಾಗಲೇ ಕವಿತೆಯಲ್ಲಿ ಬಂದಿದೆ. ಹಾಗಾಗಿ ಬೇರಾಗುವುದೆಂದರೆ ನಿಜಕ್ಕೂ ರೂಪಾಂತರ ಹೊಂದುವುದೆಂದೇ ಅರ್ಥ. ತಮ್ಮ ಸಂಬಂಧ ಇಲ್ಲಿಗೆ ಮುಗಿಯುವುದಿಲ್ಲ, ಅದು ಬೇರೆ ರೂಪದಲ್ಲಿ ನಿರಂತರವಾಗಿ ಮುಂದುವರಿಯುತ್ತದೆ. ಈ ಅರಿವು ಮಗಳನ್ನು ಬೀಳ್ಕೊಡಬೇಕಾದ ಅನಿವಾರ್ಯತೆಯನ್ನು, ಅದು ಹುಟ್ಟಿಸುವ ಸಂಕಟವನ್ನು, ತಾಳಿಕೊಳ್ಳುವ ವಾಸ್ತವವನ್ನು ಎದುರಿಸುವ ಶಕ್ತಿಯನ್ನು ತಂದುಕೊಡುತ್ತದೆ.



# ಹದವರಿತ ಆರ್ದ್ರ ಮನದ 'ತಿಳಿ ಸಾರಿನ' ಮೀಮಾಂಸೆಯ ಕವಯಿತ್ರಿ

✦ ಸತ್ಯನಾರಾಯಣರಾವ್ ಅಣತಿ

ಭಾರತೀಯ ಕಾವ್ಯ ಮೀಮಾಂಸೆಯಲ್ಲಿ ರಸಪಾಕದ ಕಾವ್ಯಾನುಭವವನ್ನು ಸಹೃದಯ ಬಡಿಸಿದ ಅನೇಕ ವ್ಯಂಜನಗಳನ್ನು ಉಣ್ಣುತ್ತಾ ಸವಿಯುವ ರಸಿಕನ ರುಚಿ ಮಾನ್ಯತೆಯಾಗಿದೆ. ಬಹುದಾಪ್ಯೇಕಂ ಸಮಾರಾಧನಂ ಎಂಬ ಕಾಳಿದಾಸನ ಮಾತು ಇಂಥ ರುಚಿ ರಸಾಯನ ಅನುಭವವನ್ನು ಕುರಿತೇ ಆಗಿದೆ. ಅಲ್ಲದೆ ಹದಗೊಂಡ ಕುಶಲ ಸೃಜನಶೀಲತೆ ಆರ್ದ್ರಗೊಳಿಸುವ ಗುಣವನ್ನು ಹೊಂದಿರುತ್ತದೆ, ಹೊಂದಿರಬೇಕು. ಅಂಥಹ ರಸಾನುಭವವನ್ನು ಕೊಡುವುದು ಕಾವ್ಯದ ಉದ್ದೇಶ್ಯವೂ ಆಗಿರುತ್ತದೆ.

ಹೀಗೆ ಉಣಬಡಿಸಿದ ಕಾವ್ಯ ಓದುಗರ ಮನಸ್ಸನ್ನು ಆರ್ದ್ರಗೊಳಿಸಿ ಪ್ರಫುಲ್ಲ ವಾಗಿಯೂ ಸ್ವಸ್ಥವಾಗಿಯೂ ಇರುವಂತೆ ಪೊರೆಯಲು ಸಾಧ್ಯವಾಗುವುದು. ಇಂಥ ಸಾಹಿತ್ಯದ ಓದಿನಿಂದ ಸಹೃದಯರು ಲೋಕಕ್ಕೆ ಹಿತಕಾರಿಯಾಗುವುದು. ಇದನ್ನೇ ಅನಂತಮೂರ್ತಿಯವರು ಸಾಹಿತ್ಯಕ್ಕೆ ಕಷಾಯ ಗುಣವಿದೆ ಎಂದು ಹೇಳಿರುವುದು. ಅಂಥ ಸಾಹಿತಿಗಳ ಲೋಕಾನುಭವ ಬೇರೆ ಬೇರೆ ಕಾಲಘಟ್ಟಗಳ ರೀತಿ ರಿವಾಜನ್ನು ಅನುಸರಿಸಿ ಕಷಾಯವನ್ನು ಕುಡಿಸುತ್ತಾ ಬಂದಿದೆ. ಲೋಕೋಪಯೋಗಿಯಾಗಿ ಸಾಂಸ್ಕೃತಿಕ ಜವಾಬ್ದಾರಿಯನ್ನು ನಿರ್ವಹಿಸುತ್ತಾ ಬಂದಿದೆ.

ಕಳೆದ ಶತಮಾನದ ಕನ್ನಡ ಸಾಹಿತ್ಯ ವಿಭಿನ್ನ ಸಂವೇದನೆಯ ಸಂದರ್ಭಗಳಲ್ಲಿ ಅಂದಂದಿನ ಸಾಮಾಜಿಕ ತುರ್ತುಗಳಿಗೆ ಅನುಗುಣವಾಗಿ ಪ್ರಜ್ಞಾವಂತ ಲೇಖಕರು ಸಾಹಿತ್ಯ ಸೃಷ್ಟಿಸುತ್ತಾ ಬಂದಿದ್ದಾರೆ. ಕಾವ್ಯ ಕಾದಂಬರಿ ಸಣ್ಣಕಥೆ ನಾಟಕ ಇತ್ಯಾದಿ ಪ್ರಕಾರಗಳಲ್ಲಿ ಮಹಿಳಾ ಸಂವೇದನೆಯನ್ನು ಒಳಗೊಂಡಂತೆ ಕಷಾಯದ ಗುಣವಿಶೇಷವನ್ನು ಕಾಣಬಹುದು. ಇಂಥ ಗುಣವಿರುವ ವೈದೇಹಿಯವರು ಅವರ ಹುಟ್ಟೂರಾದ ಕುಂದಾಪುರ ಸೀಮೆಯ ಭಾಷಾ ಕಸುವಿನ ಬಂಧ, ನುಡಿಗಟ್ಟಿನ ಕುಶಲತೆಯಿಂದ ಕಾವ್ಯ ಕಟ್ಟುತ್ತಾರೆ. ಹಾಗಾಗಿ ಅವರು ಶ್ರೇಷ್ಠ ಕವಿಯಾಗಿದ್ದಾರೆ.

* * *

ವೈದೇಹಿಯವರ ಮನೋಧರ್ಮ ಕಟುವಾದ ಮಹಿಳಾವಾದಿಗಳಂತಲ್ಲ. ಉದಾರವಾದಿಯಾಗಿ ಕುಟುಂಬ- ಸಮಾಜದ ಹಿತೈಷಿಯಾಗಿ ಸಂಬಂಧಗಳನ್ನು ಬೆಸೆಯುವಂಥವರು. ಗೃಹಿಣಿಯಾಗಿ ಅಡಿಗೆಮನೆಯ ಪಾಕ ಕುಶಲತೆಯನ್ನು ಸಾಹಿತ್ಯ ಕೃಷಿಗೆ ಅನ್ವಯಿಸುವ ರೀತಿ ಅನನ್ಯವಾಗಿದೆ.

2

ವೈದೇಹಿಯವರು ಅಡುಗೆಮನೆಯ ಮೂಲಕವೇ – ಉತ್ತಮ ಗೃಹಿಣಿಯಾಗಿ ಸಂಸಾರ ನಿರ್ವಹಣೆಯ ಜವಾಬ್ದಾರಿಯಿಂದ ತಾಯಾಗಿ ಬಂಧುವಾಗಿ ಕುಟುಂಬದ – ಸಮಾಜದ ಹಿತೈಷಿಯಾಗಿ ಕಾವ್ಯ ರಸಪಾಕವನ್ನು ಉಣಬಡಿಸುತ್ತಾರೆ. ಅವರ ಕಾವ್ಯದಲ್ಲಿ ದ್ವೇಷವಿಲ್ಲ ಅಹಂಕಾರವಿಲ್ಲ ಸೇಡಿಲ್ಲ. ಪ್ರೀತಿ ಸಹನೆ ಸೌಹಾರ್ದ, ವಾತ್ಸಲ್ಯ, ಅಂತಃಕರಣ, ನಯ ವಿನಯದ ಭಾವ ಪರಿಪ್ರೇಕ್ಷ್ಯದಲ್ಲಿ ಅನನ್ಯತೆಯನ್ನು ಕಾಣಬಹುದು.

ವೈದೇಹಿಯವರ ಕಾವ್ಯ ಮೀಮಾಂಸೆ ತಿಳಿಸಾರಿನಲ್ಲಿದೆ:

**ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ**
**ಹೇಳಿ. ಗೊತ್ತೆ ತಿಳಿಸಾರು ನಿಮಗೆ?**
**ಕ್ಷಮಿಸಿ. ಗೊತ್ತಿಲ್ಲ ಕಾವ್ಯ ನನಗೆ**

ಎಂದು ಗೇಲಿ ಧಾಟಿಯ ಪ್ರಶ್ನೆಯಿಂದ ಆರಂಭವಾಗಿ

**ಅದಕ್ಕೂ ಬೇಕು ಒಳಗೊಂದು:**
**ಜಲತತ್ವ-ಗಂಧತತ್ವ-**
**ಕುದಿದು ಹದಗೊಂಡ ಸಾರತತ್ವ . . .**

ಕುದಿದು ಹದದಲ್ಲಿ ತಯಾರಿಸಿದ ಸಾರಿನ ರುಚಿಯನ್ನು

**ಕುದಿಕುದಿದು ಬತ್ತಿ**
**ರಾತ್ರಿಯಾದರೂ ಹಳಸದೆ!**

***

**ಇವೆಯಂತೆ ತರತರದ ಅರ್ಥ**
**ಅಡುಗೆ ಮನೆಗೆ- ತರತರದ ಪದಾರ್ಥಗಳಂತೆ –**

ತರತರದ ಪದಾರ್ಥದ ಹಾಡು ಹಾಡುವ ಹುಡುಗಿ

**ಕ್ರಿಪೂ. ಅಡುಗೆಮನೆಯ ಹುಡುಗಿ**
**ಪೂ ಪೂ ಊ**
**ದುತ್ತ ಹಾಡುವಳು**

ಹುಡುಗಿ ಅಡುವಾಗ ಹಕ್ಕಿ ಪಕ್ಕಿ ಮಕ್ಕಳಾಡುವ ಸದ್ದು, ಬಸ್ಸು ಕಾರು ಆಟೋ ವಿಮಾನ ಸದ್ದನ್ನೂ ಕೇಳಿ, ವಿಮಾನ ಎಂದು ಕೂಗಿಕೊಳ್ಳುತ್ತಾ ಹಾಡು ನೆಯ್ಯುತ್ತಾ ಇಪ್ಪತ್ತೊಂದನೆ ಶತಮಾನಕ್ಕೆ ಕರೆದೊಯ್ಯುವ ಹುಡುಗಿಯ ಚಿತ್ರಣದಲ್ಲಿ: ಕಾಲದಿಂದ ಕಾಲಕ್ಕೆ ಜಿಗಿಯುತ್ತಾ ಸಾವಯವ ಹದದಲ್ಲಿ 'ಹೂವ ಕಟ್ಟುವ ಕಾಯಕ' ದಂತೆ ಕಾವ್ಯ ಕಟ್ಟುವ ಕುಶಲ ಕರ್ಮಿ:

**ಅಬ್ಬಲಿಗೆ ಹಗುರಕ್ಕೆ ಸೇವಂತಿ ಜೊತೆ ಬೇಡ**
**ಭಾರಜಗ್ಗಿ ಮಾಲೆ ತೂಕ ತಪ್ಪುತ್ತೆ**
**ಆಚೆಗಿಡು ಅವುಗಳನು ಬೇರೆ ಕಟ್ಟು**
**ಹೂವಾದರೇನು, ಒಂದನೊಂದು ಮರೆಸದ ಹಾಗೆ**
**ಆಯಬೇಕು ನೋಡು ಮೊತ್ತ ಮೊದಲು**

ಆಯ್ದ ಪದಬಂಧ ಶೈಲಿಯ ಶೀಲವಂತಿಕೆಯ ವೈದೇಹಿಯವರು ಭಾಷೆಯ ಜೀವಾಳವಾದ ಶಬ್ದ ಮತ್ತು ಮೌನವನ್ನು ಬಳಸುವ ಹದ ಸಿದ್ಧಿಸಿದಾಗ ಕಾವ್ಯ ಮೈದಾಳುವುದು ಎಂಬ ಸಿದ್ಧಾಂತದವರು. ಭಾಷಾ ಹದವೇ ಅವರ ಕಾವ್ಯದ ಜೀವಾಳವಾಗಿ ಉಸಿರಾಟದ ಲಯಗಾರಿಕೆಯಲ್ಲಿ ಶಬ್ದಾಲಂಕಾರಗಳ ಆಡಂಬರವಿಲ್ಲದೆ ಕಾವ್ಯವನ್ನು ಕಟ್ಟುತ್ತಾರೆ:

**ಹಾಡು ಹೇಳಲು ಏಕೆ ಶಬ್ದಾಲಂಕಾರ।**
**ಹಾಡುವುದೆ ಹಕ್ಕಿ ರಾಗ ಪ್ರಸ್ತಾರದನುಸಾರ?।**

ಎಂದು ಪ್ರಶ್ನಿಸುತ್ತಾರೆ.

**ಭಾವಕೋಶವ ಒಡೆದು ಸ್ವರ ಹೊಮ್ಮಿದಾಗ।**
**ಅದುವೇ ಹಾಡಾಗುವುದು, ತನ್ನತನ್ನಂತೆ।**

ಇಷ್ಟು ಸಹಜವಾದ ಮಾತಿನಲ್ಲಿ ಪ್ರಕೃತಿ ಕಾವ್ಯ ಕಲಿಸಿದ ಪಾಠದಿಂದ

**ನಿತ್ಯವೂ ಹೊಸ ಹೂವು ನಿತ್ಯ ಹೊಸ ಕ್ಷಣದಂತೆ**
**ನಿತ್ಯವೂ ಹೊಸ ಪಾಠ ಪುಟ ತೆರೆಯುವಂತೆ**

ನಿತ್ಯಂ ಪೊಸತು ಅರ್ಣಂಬೋಲ್ ಅನ್ನುವಂತಿರುವ ಪ್ರಕೃತಿ ಸಹಜವಾದ ಹೊಸ ಹೊಸ ಕಾವ್ಯ ಕಟ್ಟುವ ವೈದೇಹಿಯವರ ಕವಿತೆಗಳನ್ನು ಓದಿ ಸವಿಯಬೇಕು.

* * *

ಅವರಿಗೆ ಯಾವತ್ತೂ ಕಾವ್ಯ ಒಂದು ವಿಸ್ಮಯ. ಹೆಣ್ಣಾಗಿ ಲೋಕಾನುಭವವನ್ನು ಪ್ರಕೃತಿಯೊಂದಿಗೆ ಅನುಸಂಧಾನದಲ್ಲಿ ಪ್ರತಿಮೆ ರೂಪಕಗಳ ಮೂಲಕ ಆತ್ಮೀಯ ಧಾಟಿಯಲ್ಲಿ ಉಣಬಡಿಸುತ್ತಾರೆ. ಈ ರೀತಿ ವಿಭಿನ್ನರಾಗಿ ತಮ್ಮ ಅನುಭವ ವಿಶೇಷತೆಯನ್ನು 'ಆಕೆ ಆತ ಭಾಷೆ'ಯಂಥ ಕವಿತೆಗಳಲ್ಲಿ ಸಾಧಿಸಿ ತೋರಿಸಿದ್ದಾರೆ: ಗಂಡ ಹೆಂಡತಿಯ ಸಂಭಾಷಣೆಯ ಮಾತುಗಳಲ್ಲಿ ಅರ್ಥಮಾಡಿಕೊಳ್ಳುವ ತೊಡಕಿನ ವಾಗರ್ಥ ಮೋಜು ಧ್ವನಿರಮ್ಯವಾಗುವ ಕೌಶಲ್ಯವನ್ನು ನೋಡಿ:

ಅವಳೆಂದದ್ದು – ಹಸಿವೆ ಮತ್ತು ಬಾಯಾರಿಕೆ
ಆತನೆಂದ – ಚೆನ್ನಾಗಿ ಉಣ್ಣು, ಕುಡಿ.
ಆಕೆ ಅತ್ತಳು ಆಗ
ಆತ ನಕ್ಕ! –
ಯಾಕಾಗಿ ಹೀಗೆಲ್ಲಾ ಉಪರಾಟೆ ಪದಾರ್ಥ? –
ಅಲ್ಲೇ ಎದ್ದದ್ದು ಆತ್ಮ
ಹತ್ಯೆಯ ಮಾತು
ಅವಳು ಕೇಳಿದಳು: ಹೇಳು, ಕೊನೆಗೂ
ಹೆಚ್ಚು ಹುಚ್ಚರು ಯಾರು ನಮ್ಮಿಬ್ಬರಲ್ಲಿ?
ಆತ: ಏನೆಂದೆ?
ಮೊದಲು ಸಾಯುವ ಆಸೆಯವರು?
ಅವಳು : ಸೆಕೆ. ಕಿಟಕಿ ತೆರೆಯಲೇ ನಡುವೆ
ಗಾಳಿಗೆ?
ಆತ: ಏನೆಂದೆ? ಹಸಿವೆ ಮತ್ತು ಬಾಯಾರಿಕೆ?

ಈ ರೀತಿಯ ಸಂಭಾಷಣೆಯ ಮೂಲಕ ಹದ ತಪ್ಪಿದ ವಿಷಮ ದಾಂಪತ್ಯದ ಚಿತ್ರಣವನ್ನು ಹಸಿವೆ ಮತ್ತು ಬಾಯಾರಿಕೆ ಮಾತಿನ ಧ್ವನ್ಯಾರ್ಥದಲ್ಲಿ ಶಬ್ದ ಮತ್ತು ಮೌನದ ಪದಗೊಂಡ ಸಿದ್ಧಿಯನ್ನು ತಮ್ಮ ಕಾವ್ಯದಲ್ಲಿ ಸಾಧಿಸಿ ತೋರಿಸಿದ್ದಾರೆ.

ಇಂಥ ಕವಯಿತ್ರಿಯ ಶಿವನ ಮೀಸುವ ಹಾಡು ಇಷ್ಟವಾಗುವುದು ಮೂರುಲೋಕ ತಿರುಗಿ ಮನೆಗೆ ಬಂದ ಪತಿ ಶಿವನನ್ನು ಸ್ವಲ್ಪವೂ ಮುನಿಸಿಲ್ಲದೆ ಶಿವೆ ಓಲೈಸುವ ಧಾಟಿಯಿಂದ. ಗಂಗೆ ಗೌರಿ ಮೊದಲಾದವರ ಒಡನಾಡಿ ಜ್ವರ ಹಿಡಿಸಿಕೊಂಡು ಬಂದವನಿಗೆ ಮದ್ದಿನೆಣ್ಣೆಯ ಪೂಸಿ, ಬಿದ್ದ ಕಂಗಳ ಒರಸಿ – ಕಿರಾತ ಕಡ್ಡಿಯ ಕಷಾಯ ಕುಡಿಸಿ ನಯ ವಿನಯದಿಂದ ಆರ್ದ್ರ ಗರ್ವದ ಹುಡುಗಿ ನಮ್ಮ ಗೌರಿ ಪ್ರೀತಿಯಿಂದ ಸ್ನಾನಮಾಡಿಸುತ್ತಾಳೆ. ಶಿವನ ಸಂಚಾರಿ ಗುಣದಿಂದ ಉಂಟಾಗುವ ಎಲ್ಲ ತವಕ ತಲ್ಲಣವನ್ನು ನುಂಗಿಕೊಂಡು ಹಿತವಾದ ಪ್ರೀತಿಯ ಸತಿ ಪತಿ ಭಾವದಲ್ಲಿ ಗಂಗೆಗೆ, ಗೌರಿಗೆ ಮಣಿಕರ್ಣಿಕೆಗೆ ಎನ್ನುತ್ತಾ ತಂಬಿಗೆ ನೀರೆರೆಯುವ ಚಿತ್ರ ಸುಂದರವೂ ಸಂಕೀರ್ಣವೂ ಆಗುತ್ತದೆ. ಪೌರಾಣಿಕ ನೆಲೆಯಿಂದ ಲೋಕದ ಸಾಂಸಾರಿಕ ಸಂದರ್ಭವಾಗಿಬಿಡುತ್ತದೆ. ನೋವನ್ನೆಲ್ಲಾ ನುಂಗಿ ಸಂಸಾರದ ಪ್ರೀತಿ ಅಂತಃಕರಣ ಸಾಮರಸ್ಯದ ನೆಲೆಯಲ್ಲಿ ಮಹಿಳಾ ಸಂವೇದನೆಯ ಹೊಸ ಭಾಷ್ಯವಾಗಿರುವ ವೈದೇಹಿಯವರ ಸ್ತ್ರೀತನ ಒಂದು ವಿಶಿಷ್ಟ ರೂಪಕ ಕಾವ್ಯವಾಗಿದೆ.



# ಸ್ತ್ರೀ ಸಂವೇದನೆಯ ಮೂಲಕ ಶೃಂಗಾರದ ಅಭಿವ್ಯಕ್ತಿ

✦ ಶ್ರೀನಿವಾಸ ಉಡುಪ

ಕಳೆದ ಶತಮಾನದ ಉತ್ತರಾರ್ಧದಲ್ಲಿ ಬರೆಯಲು ಪ್ರಾರಂಭಿಸಿ, ಬಹುಬೇಗ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮ ಅನನ್ಯತೆಯನ್ನು ಸ್ಥಾಪಿಸಿರುವ ವೈದೇಹಿ ಸಮೃದ್ಧಿಗಿಂತ ಸತ್ತ್ವದ ಕಡೆಗೇ ಹೆಚ್ಚು ಒಲಿದವರು. ಸಣ್ಣಕಥೆ, ಕವಿತೆ, ಕಾದಂಬರಿ, ಅನುವಾದ, ಮಕ್ಕಳ ನಾಟಕ–ಹೀಗೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ವೈದೇಹಿ ಮೌಲಿಕವಾದ ಕೃತಿಗಳನ್ನು ನೀಡಿದ್ದಾರೆ. ಅವರ ಪ್ರಮುಖ ಆಸಕ್ತಿ ಭಾರತೀಯ ನಾರಿಯ ಒಳಬದುಕು. ಅವರ ಕೃತಿಗಳಲ್ಲಿ ಹೆಣ್ಣು ಹೃದಯದ ಮಿಡಿತ ಸ್ಫುಟವಾಗಿ ಕೇಳುತ್ತದೆ. ಆದರೆ ಅವರ ಸ್ತ್ರೀಪರ ನಿಲುವುಗಳು ಚೀರುದನಿಯ ಘೋಷಣೆಗಳಾಗಿಲ್ಲ. '(ಅವರು) ಸ್ತ್ರೀಪರ ವಕಾಲತ್ತು ವಹಿಸುವುದಿಲ್ಲ. ಜೀವನವನ್ನು ಅದಿರುವಂತೆಯೇ ಪರಿಭಾವಿಸುತ್ತಾ, ಅಲ್ಲಿ ಹೆಣ್ಣು ಗಂಡುಗಳಿಗಿರುವ ಇಬ್ಬಗೆಯ ನೀತಿಯನ್ನು ತಮ್ಮ ಕಥೆಗಳಲ್ಲಿ ಕಲಾತ್ಮಕವಾಗಿ ಪ್ರತಿಬಿಂಬಿಸುತ್ತಾರೆ' ಎಂದು ವಿಮರ್ಶಕಿ ಎಲ್.ಸಿ. ಸುಮಿತ್ರಾರವರು ಹೇಳಿದ ಮಾತುಗಳನ್ನು ವೈದೇಹಿಯವರ ಕವಿತೆಗಳಿಗೂ ಅನ್ವಯಿಸಬಹುದು. ಸ್ತ್ರೀ ಜಗತ್ತಿನ ಅಂತರಂಗದ ಪಿಸುದನಿಗಳನ್ನು ತೀವ್ರವಾಗಿ, ಧ್ವನಿಪೂರ್ಣವಾಗಿ ಅಭಿವ್ಯಕ್ತಿಸುವ ವೈದೇಹಿ, ಮುಖ್ಯವಾಗಿ ನಾಲ್ಕು ಗೋಡೆಗಳ ನಡುವೆ ಜೀವನವಿಡೀ ಕಾಲ ಕಳೆಯಬೇಕಾಗಿ ಬಂದಿರುವ ಹೆಣ್ಣುಗಳ ಒಳಗುದಿಗಳನ್ನು ತಮ್ಮ ಕಥೆಗಳಲ್ಲಿ, ಕವಿತೆಗಳಲ್ಲಿ ಹಿಡಿದಿಟ್ಟಿದ್ದಾರೆ. 'ಹಾಡ ನೇಯುವಳು ಹುಡುಗಿ ಮುರಿಯುತ್ತ ಮೆಣಸಿನ ಚೊಟ್ಟು, ಆಕಾಶದ ಸದ್ದಿಗೆ ಕಿವಿಯ ತೆರೆದಿಟ್ಟು, ಕಳೆಯುವಳು ಆಯುಷ್ಯ ಬೊಟ್ಟು ಬೊಟ್ಟು'–ಹೀಗೆ ಬದುಕಿನ ಏಕತಾನತೆಯಿಂದ ಕೊರಡಾಗಿ, ಬದುಕಿನುದ್ದಕ್ಕೂ ಬಿಡುಗಡೆಗಾಗಿ ಹಂಬಲಿಸುವ 'ಅಡುಗೆಮನೆಯ ಹುಡುಗಿ'ಯರೂ, ಭೃಂಗವೃತ್ತಿಯ ಗಂಡಂದಿರನ್ನು ಹೇಗೋ ಸಹಿಸಿಕೊಂಡು, 'ಮಿಸುಕಾಡದೇ ಕುಳಿತು ತಲ್ಲಣವ ತಡೆಯುವ' ಆರ್ದ್ರಗರ್ವದ ಗೌರಿಯಂಥ ಮಹಿಳೆಯರೂ ಅವರ ಕವಿತೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಜೊತೆಗೆ 'ಎಷ್ಟು ಸಾವಿರ ನೆನಪು ಸುತ್ತ ಬಿದ್ದಿದೆ ಅರಳಿ, ಹೆಕ್ಕುತಿರುವೆನು ನಾ ಬೇರೆ ವಿಧ ಶಬರಿ; ಎಲ್ಲ ಪೋಣಿಸಿ ಇಡುವೆ, ಅಂಬರದಂಬಾರಿ ಏರಿ ಬರುತ್ತದೆಯಲ್ಲ ಮುದ್ದು ಮೊಮ್ಮಗು, ಅದರ ನಾಮಕರಣದಿ ಹಾರ ತೊಡಿಸುವೆ' ಎಂದು ಬದುಕಿನ

ಚಿರಂತನತೆಯನ್ನು ಧ್ಯಾನಿಸುವ ಸ್ನಿಗ್ಧ ವಾತ್ಸಲ್ಯಮಯೀ ಹೆಣ್ಣುಗಳೂ ಅವರಲ್ಲಿ ಎದುರಾಗುತ್ತಾರೆ.

'ಗೆಳತಿಯ ಗುಟ್ಟು' ಎಂಬುದು ವೈದೇಹಿಯವರ ವಿಶಿಷ್ಟ ಕವಿತೆಗಳಲ್ಲಿ ಒಂದು. ಹೆಣ್ಣೊಬ್ಬಳು ತನ್ನ ಆಪ್ತ ಗೆಳತಿಯೊಂದಿಗೆ ಹಂಚಿಕೊಂಡ ಸುಕುಮಾರ ಪ್ರಣಯಾನುಭವವೇ ಈ ಕವಿತೆಯ ವಸ್ತು. ಗೆಳತಿಯ 'ಗುಟ್ಟ'ನ್ನು ಕೇಳಿಸಿಕೊಂಡ ತರುಣಿ, ಅದನ್ನು ತನ್ನ ಅಜ್ಜಿಗೆ ವರದಿ ಮಾಡುವಂತಿರುವ ತಂತ್ರವನ್ನು ಬಳಸಿ, ಕವಿತೆಯನ್ನು ರಚಿಸಲಾಗಿದೆ. ಅಜ್ಜಿ-ಮೊಮ್ಮಗಳ ನಡುವಣ ಪೀಳಿಗೆಯ ವ್ಯತ್ಯಾಸದಿಂದಾಗಿ ಅವರಿಬ್ಬರ ಮನೋಧರ್ಮದಲ್ಲಿಯೂ ವ್ಯತ್ಯಾಸವಿರುವುದು ತೀರಾ ಸಹಜ. ಈ ಅಂತರವನ್ನು ಗಮನದಲ್ಲಿಟ್ಟುಕೊಂಡೇ ಮೊಮ್ಮಗಳು ತನ್ನ ಗೆಳತಿಯ ಅನುಭವವನ್ನು ಕುರಿತು, ಅದು ತನಗೆ ಸ್ವಲ್ಪವೂ ಇಷ್ಟವಾಗಿಲ್ಲವೆಂದು ಅಜ್ಜಿಯನ್ನು ನಂಬಿಸುವ ಧಾಟಿಯಲ್ಲಿ ಮಾತಾಡುತ್ತಾಳೆ. ಆದರೆ ಇದು ಸತ್ಯವಲ್ಲವೆಂಬ 'ಗುಟ್ಟು' ಕವಿತೆಯಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಉದ್ದಕ್ಕೂ 'ಅಜ್ಜೀ, ಅಜ್ಜೀ, ಎಂದು ಮುದ್ದುಗೆರೆಯುತ್ತಾ, ಅಜ್ಜಿಯ ಮನಸನ್ನು ಗೆಲ್ಲಲು ಪ್ರಯತ್ನಿಸುವ ಮೊಮ್ಮಗಳು, ಗೆಳತಿಯ ಪರವಾಗಿ, ಅರ್ಥಾತ್ ತನ್ನ ಪರವಾಗಿ ಅಜ್ಜಿಯ ಸಹಾನುಭೂತಿಯನ್ನು ಗಿಟ್ಟಿಸಿಕೊಳ್ಳುವ ಪ್ರಯತ್ನ ಸ್ವಾರಸ್ಯಕರವಾಗಿದೆ.

ಮೊಮ್ಮಗಳ ಗೆಳತಿ ವಿರಹವೇದನೆಗೆ ಒಳಗಾಗಿದ್ದಾಳೆ. ಇದು ಕವಿತೆಯ ಪ್ರಾರಂಭದ ಬಿಂದು, ಉತ್ಕಂಠೆಯಾದ ಗೆಳತಿ ತನ್ನ ಆಪ್ತ ಸ್ನೇಹಿತೆಯೊಂದಿಗೆ ತನ್ನ ಪಾಡನ್ನು ತೋಡಿಕೊಂಡಿದ್ದಾಳೆ. ಅದನ್ನು ಕುರಿತು ಅಜ್ಜಿಗೆ ಹೇಳುತ್ತಾ ಮೊಮ್ಮಗಳು–'ಆದರೂ ಪ್ರಿಯಕರನೆ ಇಲ್ಲದ ಬದುಕು ಬದುಕೇನು? ಎಂದಳಜ್ಜೀ ಆ ಕೆಟ್ಟ ಗೆಳತಿ; ಎನಬಹುದೆ ಹಾಗೆ ನನ್ನ ಗೆಳತಿ ?' ಎಂದು ಪ್ರಶ್ನಿಸುತ್ತಾಳೆ. ತನ್ನ ಗೆಳತಿಯ ನಿಲುವು ತನಗೆ ಏನೇನೂ ಇಷ್ಟವಾಗಿಲ್ಲವೆಂಬ 'ಮಡಿವಂತಿಕೆ'ಯನ್ನು ಪ್ರದರ್ಶಿಸುವ ಮೊಮ್ಮಗಳು, ಆ ಕಾರಣಕ್ಕಾಗಿಯೇ 'ಕೆಟ್ಟ ಗೆಳತಿ'ಯೆಂಬ ಮಾತನ್ನು ಬಳಸುತ್ತಾಳೆ.

ಆದರೆ ಮುಂದಿನ ಸಾಲುಗಳು ನಿಧಾನವಾಗಿ ಮೊಮ್ಮಗಳ ಬಣ್ಣವನ್ನು ಅನಾವರಣಗೊಳಿಸುತ್ತವೆ:

**ಹುಬ್ಬಿನಂಚಿನಲಿ ಬೆವರು ಮಣಿ ಸಾಲು**
**ಮಣಿ ಮಣಿಯ ಹೊಳಪಿನಲಿ**
**ಪೋಲಿ ವನಮಾಲಿ**
**ಮೋಡಿಗೆಡಹುವ ಕೊಳಲು ಕೊರಳು**

ಪ್ರಣಯ ಭಾವದಿಂದ ನಾಚಿ, ಬೆವರುತ್ತಿರುವ ಹೆಣ್ಣೊಬ್ಬಳ ಚಿತ್ರ ಈ ಸಾಲುಗಳಲ್ಲಿವೆ. ಭಾರತೀಯ ಸಂದರ್ಭದ ಚಿರ ಪ್ರಣಯಿಗಳಾದ ರಾಧಾಕೃಷ್ಣರ ನೆನಪನ್ನು ಈ ಸಾಲುಗಳು

ಗರ್ಭೀಕರಿಸಿಕೊಂಡಿವೆ. ಹೀಗೆ ನಾಚಿ ನೀರಾಗುವ ಹೆಣ್ಣು ಯಾರು? ಮೊಮ್ಮಗಳ 'ಕೆಟ್ಟ' ಗೆಳತಿಯೆ? ಅಥವಾ, ಸ್ವತಃ ಮೊಮ್ಮಗಳೇ? ಈ ಅಸ್ಪಷ್ಟತೆಯಿಂದಾಗಿ ಕವಿತೆಗೆ ಒಂದು ಬಗೆಯ 'ಗುಂಭತೆ' ಪ್ರಾಪ್ತವಾಗುತ್ತದೆ. ತನ್ನ ಗೆಳತಿಯ ಧೋರಣೆಯನ್ನು ತಾನು ಸರ್ವಥಾ ಒಪ್ಪುದಿಲ್ಲವೆಂಬ ಧಾಟಿಯಲ್ಲಿಯೇ, ಮೊಮ್ಮಗಳು 'ನಿನ್ನ ಮೊಮ್ಮಗಳು ನಾನು! ನಾನು ಸುಮ್ಮನಿರಲು ಸಾಧ್ಯವೆ? ನನ್ನ ಗೆಳತಿಗೆ ಛೀಮಾರಿ ಹಾಕಿದೆ. 'ನಿನ್ನ ಪ್ರಿಯಕರನೆನ್ನುವನು ಭಾರೀ ಘಟಿಂಗ. ಅವನನ್ನು ಒದ್ದೋಡಿಸು. ನಿನ್ನ ಮಾನಭಂಗಕ್ಕೆ ಅವಕಾಶ ಕೊಡಬೇಡ' ಎಂದು ಬೋಧಿಸಿದೆ' ಎನ್ನುತ್ತಾಳೆ. ಇಲ್ಲಿ 'ನಾನು ನಿನ್ನ ಮೊಮ್ಮಗಳು' ಎಂಬಲ್ಲಿನ convincing tone ಅನ್ನು ಗಮನಿಸಬೇಕು. ಮುಂದೆ 'ಅಜ್ಜಿ, ಕುಸಿಯದೇ ಕೇಳೀಗ' ಎಂದು ಅಜ್ಜಿಯನ್ನು ಮಾನಸಿಕವಾಗಿ 'ಸಿದ್ಧಪಡಿಸಿ'ದ ಮೊಮ್ಮಗಳು, ಗೆಳತಿ ಬಿಡಿಸಿ ಹೇಳಿದ ಗುಟ್ಟನ್ನು ರಟ್ಟು ಮಾಡುತ್ತಾಳೆ. ತನ್ನ ಗೆಳತಿ 'ಮನದ ಬಾಗಿಲು ತೆರೆದು ಕುಳಿತಿದ್ದಾಗ', ಆ ಪೋಲೀ ಹುಡುಗ ಹೇಳದೇ ಕೇಳದೇ ಒಳನುಗ್ಗಿ ಬಂದು, ಆಕೆಯ ಪ್ರತಿರೋಧವನ್ನು ಲೆಕ್ಕಿಸದೆ, ಆಕೆಗೆ ಕಣ್ಣು ಹೊಡೆದು, ಕೈಕದಪು ಹಿಡಿದು, ಅಗಳಿ ಹಾಕಿದನಂತೆ. ಗೆಳತಿಯ ಪ್ರಣಯಾನುಭವದ ಆನಂದ, ಮಿಲನದ ಸಂಭ್ರಮ, ತನ್ಮಯತೆಯ ತೀವ್ರತೆಯನ್ನು ಮೊಮ್ಮಗಳು ತನ್ನ ಸ್ವಂತ ಅನುಭವವೋ ಎನ್ನುವಂತೆ ಹೀಗೆ ವರ್ಣಿಸುತ್ತಾಳೆ:

**ಚಿತ್ತ ಭಿತ್ತಿಯಲ್ಲೆಲ್ಲ ಮುತ್ತಿನಂತಹ ಗೀಚು**
**ಗೀರಿದವ ಘಟ್ಟಿಂತ ಮಾಯವಂತೆ**
**ಮಾಯವಾದನೆ ಹಾಯ್ ಎಂದು ಒರಗಿದರೆ**
**ಗಾಯ ಮಾಯುವ ಮುಂಚೆ ಹಾಜರಂತೆ**

ಗೆಳತಿಯ 'ಚಿತ್ತಭಿತ್ತಿ' ಮಧುರಾತಿಮಧುರ ಭಾವನೆಗಳನ್ನು ಮೊಮ್ಮಗಳು ಪುನರನುಭವಿಸಿ, ಅಜ್ಜಿಗೆ ವರ್ಗಾಯಿಸುವಂತಿವೆ ಈ ಸಾಲುಗಳು. ಇದು ಗೆಳತಿಯ ಅನುಭವವವೋ, ಸ್ವತಃ ಮೊಮ್ಮಗಳದ್ದೋ? ಎಂದು ಗುಮಾನಿ ಹುಟ್ಟಿಸುವ ಧ್ವನಿಯೂ ಇಲ್ಲಿರುವುದನ್ನು ಗಮನಿಸಬೇಕು. ಈ 'ಚಿತ್ತಚೋರ'ನ ವರ್ತನೆಗೆ ರೇಗಿದರೆ ಆತ ಸಜ್ಜನನಂತೆ, ಅಮಾಯಕನಂತೆ ನಕ್ಕುಬಿಡುತ್ತಾನಂತೆ; ಅವನ ಮಾತೆಂದರೆ 'ಬಾಗಾಳು ಹೂ ಉದುರಿದಷ್ಟು' ನಾಜೂಕು, ಜೊತೆಗೆ ಅವನೊಬ್ಬ ಮಹಾರಸಿಕ! ಅವನಿಗೆ 'ಊರ ನಾರಿಯರೆಲ್ಲ ಹೆಂಡಿರಂತೆ'. ಮೇಲ್ನೋಟಕ್ಕೆ ಟೀಕೆಯಾಗಿ, ಅಸಮ್ಮತಿಯನ್ನು ವ್ಯಕ್ತಪಡಿಸುವಂತಿರುವ ಈ ಮಾತುಗಳ ಹಿಂದೆ ಮೆಚ್ಚುಗೆ, ಪ್ರಶಂಸೆಗಳಿರುವುದು ಸ್ಪಷ್ಟ. ನಿಂದಾಸ್ತುತಿಯ ರೂಪದಲ್ಲಿರುವ ಮಾತುಗಳಿವು.

ಈ ವರದಿಯ ಪರಿಣಾಮ ಮಡಿ ಮನೋಭಾವದ ಅಜ್ಜಿಯ ಮೇಲೆ ಹೇಗಿರಬಹುದು? ಆಕೆ ತೆರೆದ ಬಾಯಿ ತೆರೆದಂತೆ ಕುಳಿತು, ಆಶ್ಚರ್ಯಾಘಾತದಿಂದ ಮೊಮ್ಮಗಳ ವರದಿಯನ್ನು ಆಲಿಸುತ್ತಿದ್ದಾಳೆ. ಮೊಮ್ಮಗಳು ಅದನ್ನು ಗಮನಿಸಿ, 'ಕಳೆದ ಬಾಯಿಯ ಮುಚ್ಚುವೆಯ

ಮೆಲ್ಲಗೆ' ಎಂದು ಎಚ್ಚರಿಸುತ್ತಾಳೆ. ಯುಗ ಕಳೆದರೂ ಪ್ರಿಯಕರನ ಮುಖದರ್ಶನವಿಲ್ಲದ ಗೆಳತಿಯ ಪಾಡನ್ನು ಹೇಳುತ್ತಾ, ಮೊಮ್ಮಗಳು 'ಯಾಕೆ ಬಂದೆಯೋ ಎಂದು ಛೇಡಿಸಿದವಳೀಗ ಬರಲಿಲ್ಲ ಯಾಕೆಂದು ಕರಗುವುದು ಸಮವೇ?' ಎಂದು ಅಜ್ಜಿಯನ್ನು ಪ್ರಶ್ನಿಸುತ್ತಾಳೆ.

ಮೊಮ್ಮಗಳು ಎಷ್ಟೆಲ್ಲ ಪ್ರಯತ್ನಿಸಿದರೂ ಕವಿತೆಯ ಕೊನೆಯಲ್ಲಿ ಆಕೆಯ 'ಗುಟ್ಟು' ಸ್ಫೋಟವಾಗಿಬಿಡುತ್ತದೆ. ಗೆಳತಿಯದೆಂದು ಹೇಳಿದ 'ಗೀರು ಗಾಯದ ನೋವು' ನಿಜವಾಗಿಯೂ ತನ್ನದೇ ಎಂಬುದನ್ನು ಮೊಮ್ಮಗಳು ಬಚ್ಚಿಡಲು ಸಾಧ್ಯವಾಗುವುದೇ ಇಲ್ಲ. 'ಏನು ಮಾಡಲಿ ಹೇಳು ನಿನ್ನ ಮೊಮ್ಮಗಳು? ಮದ್ದುಂಟೆ ನಿನ್ನ ಬಳಿ? ತೇಯುವೆಯ ಅಜ್ಜೀ ಗಜ್ಜುಗದ ಹರಳು?' ಎಂಬ ಆರ್ತ ಪ್ರಶ್ನೆಗಳಲ್ಲಿ ಮೊಮ್ಮಗಳ ರಹಸ್ಯ ಬಯಲಾಗಿಡುತ್ತದೆ.

ಕನ್ನಡದಲ್ಲಿ ಪ್ರಣಯ, ಶೃಂಗಾರಗಳಿಗೆ ಸಂಬಂಧಿಸಿದಂತೆ ಸಾಕಷ್ಟು ಕವಿತೆಗಳು ಬಂದಿವೆ. ನಿಸ್ಸಂದೇಹವಾಗಿಯೂ ವೈದೇಹಿಯವರ ಪ್ರಸ್ತುತ ಕವಿತೆ 'ಗೆಳತಿಯ ಗುಟ್ಟು' ಈ ಗುಂಪಿನಲ್ಲಿ ಮೊದಲ ಪಂಕ್ತಿಯ ಮನ್ನಣೆ ಪಡೆಯುವಂತಿದೆ. ಇಲ್ಲಿ ಸ್ತ್ರೀ ಸಂವೇದನೆಯ ಮೂಲಕ ಪ್ರಣಯಾನುಭವದ ಸು- ಸೂಕ್ಷ್ಮ ಮಿಡಿತಗಳಿಗೆ ಶಾಬ್ದಿಕ ರೂಪ ಕೊಡುವುದರಲ್ಲಿ ಕವಯಿತ್ರಿ ಯಶಸ್ವಿಯಾಗಿದ್ದಾರೆ. 'ಒಂದು ಬಗೆಯ ವಿಲಕ್ಷಣ ಪರವಶತೆ ವೈದೇಹಿಯವರ ಕಾವ್ಯವನ್ನು ಆವರಿಸುವುದರಿಂದ ಅದಕ್ಕೆ ಬೆಳದಿಂಗಳ ಲೋಕದ ನಿಗೂಢತೆ ಪ್ರಾಪ್ತವಾಗುತ್ತದೆ'. ಇದು ಡಾ. ಎಚ್ ಎಸ್ ವಿ ಯವರ ಮಾತು. 'ಗೆಳತಿಯ ಗುಟ್ಟು' ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ.



# ‘ಆದಿತ್ಯ ಹೃದಯ ದೀಪ’ವಾಗಿ ಒಳ ಹೊಕ್ಕ ವೈದೇಹೀ ಕಾವ್ಯ

✦ ಜ್ಯೋತಿ ಗುರುಪ್ರಸಾದ್

ಹಾಗೆ ನೋಡಿದರೆ ವೈದೇಹಿಯವರ ಪರಿಚಯ ನನಗಾಗಿದ್ದು ಮೊದಲು ಅವರ ಕಾವ್ಯವನ್ನು ಓದಿಯಲ್ಲ! ‘ಲಂಕೇಶ್ ಪತ್ರಿಕೆ’ಯಲ್ಲಿ ಪಿ.ಲಂಕೇಶ್ ಅವರು ಒಮ್ಮೆ ಅವರ ಚಿತ್ರವನ್ನು (ವೈದೇಹಿಯವರ ಭಾವಚಿತ್ರವನ್ನು) ಮುಖಪುಟದಲ್ಲಿಯೇ ಪ್ರಕಟಿಸಿ ಕನ್ನಡದ ಒಬ್ಬ ಹೊಸ ಸೃಜನಶೀಲ ಲೇಖಕಿ ಎಂಬಂತೆ ತಮ್ಮ ಸಂಪಾದಕೀಯದಲ್ಲೂ ಬರೆದು ಅವರನ್ನು ಪರಿಚಯಿಸಿದ್ದರು. ಲಂಕೇಶ್ ಪತ್ರಿಕೆಯನ್ನು ಅಭಿಮಾನದಿಂದ ಓದುತ್ತಿದ್ದ ಆ ಕಾಲದಲ್ಲಿ ಸಹಜವಾಗಿ ಈ ಹೊಸ ಲೇಖಕಿಯ ಬಗೆಗೂ ಆದರ ಅಭಿಮಾನಗಳು ಮೂಡಿ ಅವರು ಬರೆಯುತ್ತಿದ್ದ ‘ಗೆಳತಿ’ ಕಾಲಂ ಅನ್ನು ಕಾದು ಓದುವಂಥ ಮೆಚ್ಚುಗೆ ಮೂಡಿಬಿಟ್ಟಿತ್ತು. ಒಂದೊಂದು ಅಂಕಣವೂ ಅದು ಪ್ರಬಂಧವೋ, ಕಥೆಯೋ– ಕಾವ್ಯವೋ ಎಂಬುದು ತಿಳಿಯದಂತೆ ಓದಿಸಿಕೊಂಡು ಹೋಗುತ್ತಿದ್ದವು. ಅವರು ಮಳೆಯ ಬಗ್ಗೆ ಬರೆದರೂ, ಸನಾತನವಾದ ಮಾವಿನಮರದ ಬಗ್ಗೆ ಬರೆದರೂ, ಮಲ್ಲಿನಾಥನ ಧ್ಯಾನವೆಂದು ಹಾಡಿನ ಬಗ್ಗೆ ಬರೆದರೂ ಅದರಲ್ಲಿ ಪ್ರಾಸ, ಲಯ, ಕಥೆ, ಚಿತ್ರಣ ಎಲ್ಲವೂ ಸೇರಿಕೊಂಡು ಎಲ್ಲೂ ಬೇಸರವಾಗದಂತೆ ಓದಿಸಿಕೊಳ್ಳುತ್ತ, ಬೇಕಾದರೆ ಮತ್ತೆ ಮತ್ತೆ ಓದುವಂಥ ಹೊಸತನ ಕೊಡುತ್ತಿತ್ತು. ಅದು ಯಾರನ್ನೂ ಕಾಪಿ ಮಾಡದೆ ತನ್ನ ಸ್ವಂತಿಕೆಯಲ್ಲೇ ಆವಿರ್ಭವಿಸಿಕೊಂಡ ಸೃಜನಶೀಲತೆ, ಯಾವ ಪ್ರತಿಮೆ–ರೂಪಕಗಳು ತನ್ನ ಮೇಲೆ ಪ್ರಭಾವ ಬೀರಿದರೂ ಅದನ್ನು ತನ್ನ ಮೂಸೆಯಲ್ಲಿ ಕರಗಿಸಿ ಒಂದು ಹೊಸ ರೂಪ ಕೊಟ್ಟು ಚೆಂದ ನೋಡುವ ಕಲೆ ವೈದೇಹಿಯವರಿಗೆ ಕರಗತವಾಗಿ ಸಿದ್ಧಿಸಿದೆ. ಅವರ ಹೃದಯ ಪಾಕದ ಅಡುಗೆಯನ್ನು ಓದುವಾಗಲೆಲ್ಲಾ ನನಗೆ ಈ ಭಾವ ಮೂಡಿದೆ.

1991 ರಲ್ಲಿ ನನ್ನ ಎರಡನೆಯ ಮಗ ಪೂರ್ಣನ ಜನನವಾಯಿತು, ಕಾರ್ಕಳದಲ್ಲಿ. ಆ ಬಾಣಂತಿ ಕಾಲದಲ್ಲಿ ಮಗುವಿಗೆ ಹಾಲು ಕೊಡುತ್ತ ಅಥವಾ ಮಗುವನ್ನು ಜೋಲಿಯಲ್ಲಿ ತೂಗುತ್ತ ಅಥವಾ ಮಗು ಏಳುವವರೆಗಿನ ಬಿಡುವಿನ ಕಾಲದಲ್ಲಿ ನಾನು ಓದುತ್ತಿದ್ದುದು ಅಥವಾ ನನ್ನ ಬಳಿ ಇರುತ್ತಿದ್ದ ಪುಸ್ತಕಗಳು, ಎರಡೇ! ಒಂದು ಡಾ.ಅನುಪಮಾ ನಿರಂಜನ ಅವರು ಬರೆದ ತಾಯಿ–ಮಗು ಪುಸ್ತಕ. ಇನ್ನೊಂದು ವೈದೇಹಿಯವರ ‘ಅಂತರಂಗದ

ಪುಟಗಳು' ಎಂಬ ಕಥೆ ಪುಸ್ತಕ. ಎರಡೂ ಪುಸ್ತಕಗಳು ನನ್ನೊಳಗಿನ ತಾಯ್ತನವನ್ನು ಗಟ್ಟಿಗೊಳಿಸಲು ನನ್ನ ಭಾವನೆಗಳನ್ನು ಸಾಂದ್ರಗೊಳಿಸಿರುವಂಥವು. ವೈದೇಹಿಯವರ ಕಥೆಗಳಲ್ಲಿ ಬರುವ 'ಸ್ತ್ರೀ ಪ್ರಜ್ಞೆ' ಕೂಡ ಕಾವ್ಯಕ್ಕಿಂತ ಹೊರತಾದುದಲ್ಲ ಎಂದು ನನಗನಿಸುತ್ತದೆ.

ಆನಂತರ ಉಡುಪಿಯ ಒಂದು ಕಾರ್ಯಕ್ರಮದಲ್ಲಿ ಅವರನ್ನು ಭೇಟಿಯಾಗುವ ಸಂದರ್ಭ ಬಂದು ಹೈಸ್ಕೂಲ್ ಮಕ್ಕಳಂತೆ ನನ್ನ ಮೆಚ್ಚುಗೆಯನ್ನು ಅವರಿಗೆ ತಿಳಿಸಿ ಅವರ ಮುಂದೆ ಆಟೋಗ್ರಾಫ್ ಹಿಡಿದು ಅವರ ಹಸ್ತಾಕ್ಷರದ ವಿಳಾಸ ಕೂಡ ಪಡೆದಿದ್ದೆ! ಅಗಲಿಂದಲೇ ಅವರ ಪರಿಚಯ–ಓದಿನ ವಿನಿಮಯ–ದೂರವಾಣಿ ಕರೆ– ಅಪರೂಪಕ್ಕೊಮ್ಮೊಮ್ಮೆ ಮನೆಗೆ ಹೋಗುವ ಆಪ್ತ ಭೇಟಿ ಇದೆಲ್ಲಾ ಆರಂಭವಾಗಿದ್ದು. ಒಮ್ಮೆ ಜಿ.ವಿ.ಕಾರಂತರ ಜೀವನ ಚರಿತ್ರೆ 'ಇಲ್ಲಿರಲಾರೆ– ಅಲ್ಲಿಗೆ ಹೋಗಲಾರೆ' ಸಿದ್ಧಮಾಡಬೇಕಾಗಿದ್ದ ಸಂದರ್ಭದಲ್ಲಿ ಕೆಲವು ದಿನಗಳು ಸತತವಾಗಿ ವೈದೇಹಿಯವರ ಮಣಿಪಾಲದ ಮನೆ 'ಇರುವಂತಿಗೆ'ಗೆ ಹೋಗಬೇಕಾಗಿ ಬಂತು. ನನಗೂ ಆತ್ಮೀಯ ಹಿರಿಯರಾಗಿದ್ದ ಜಿ.ವಿ.ಕಾರಂತರು ಮಾತಾಡಿದ್ದನ್ನು ರೆಕಾರ್ಡ್ ಮಾಡಿಕೊಂಡು ಮಾತ್ರ ವೈದೇಹಿಯವರು ಅದನ್ನು ಬರವಣಿಗೆಯ ರೂಪ ಕೊಡುವ ಸಾಹಸ ಮಾಡಿದ್ದು. ಆ ಮಾತಿನ ಕ್ಯಾಸೆಟ್‌ಗಳನ್ನು ಕೇಳಿಸಿಕೊಂಡು ಬರಹ ರೂಪಕ್ಕಿಳಿಸುವಲ್ಲಿ ನನಗೂ ಅಲ್ಪ ಸಹಾಯ ಮಾಡುವ ಅವಕಾಶ ಸಿಕ್ಕಿತ್ತು. ಎಲ್ಲದರಲ್ಲೂ ನಾನು ಹುಡುಕುತ್ತಿದ್ದುದು ಅಥವಾ ಕಾಣುತ್ತಿದ್ದುದು ಮಾತ್ರ ಕಾವ್ಯವನ್ನೇ! ಅವರು 'ತಿಳಿಸಾರು' ಬಡಿಸುವಾಗ ಅವರ 'ತಿಳಿಸಾರು ಗೊತ್ತೇ ನಿಮಗೆ?' ಎಂಬ ಕವಿತೆಯನ್ನು ಸವಿದು ಹೆಣ್ಣಿನ ಅಸ್ಮಿತೆಯ ಉಳಿವಿಗೆ ಇರುವ ಹಂಬಲವನ್ನು ಪ್ರತ್ಯಕ್ಷ ಅವರಲ್ಲಿ ಕಂಡು ತಲೆಬಾಗಿದ್ದೇನೆ. ಈ ಕವಿತೆ 1990 ರಲ್ಲಿ ಬಂದ 'ಬಿಂದು ಬಿಂದಿಗೆ' ಸಂಕಲನದಲ್ಲಿದೆ.

'ಲಂಕೇಶ್ ಪತ್ರಿಕೆ'ಯಲ್ಲಿ ಪಿ. ಲಂಕೇಶ್ ಬರೆಯುವ ಸಂಪಾದಕನ ಟಿಪ್ಪಣಿ (ಟೀಕೆ–ಟಿಪ್ಪಣಿ) ಪುಟದಲ್ಲಿ ಟಿಪ್ಪಣಿಯಾದ ನಂತರ ಉಳಿದ ಕೆಳಭಾಗದಲ್ಲಿ ವೈದೇಹಿಯವರ ಒಂದು ಕವಿತೆ ಪ್ರಕಟವಾಗಿತ್ತು. ಅದರ ಶೀರ್ಷಿಕೆ 'ಏನಾಗಬೇಕೀಗ?' ಓದಿದ ಕೂಡಲೇ ನಾನು ಇಷ್ಟಪಟ್ಟು ಓದುವ– ನೆನಪಿಟ್ಟುಕೊಳ್ಳುವ ಎಲ್ಲ ಕವಿತೆಗಳಂತೆ ಈ ಕವಿತೆಯೂ ಮತ್ತೆ ಮತ್ತೆ ಓದಿಸಿಕೊಂಡು ಆ ಪದ, ಆ ವಿನ್ಯಾಸ, ಆ ಗತ್ತು– ಗಾಂಭೀರ್ಯ, ಪ್ರಜ್ಞೆ ಎಲ್ಲಾ ನನ್ನ ಒಳಬಂದು ಆ ಕವಿತೆ ನನ್ನದೇ ಆಗಿ ಮನಃಪಟಲದಲ್ಲಿ ದಾಖಲಾಗಿಬಿಟ್ಟಿತು. ಈಗಲೂ ನನಗೆ ವೈದೇಹಿ ಎಂದ ಕೂಡಲೇ ಲಂಕೇಶ್ ಪತ್ರಿಕೆಯಲ್ಲಿ ಅಚ್ಚಾದ ಆ ಕವಿತೆಯ ಮುಖವೇ ಮೊದಲು ನೆನಪಾಗುವುದು!. ಈ ಕವಿತೆ ಅವರ 1990 ರಲ್ಲಿ ಬಂದ 'ಪಾರಿಜಾತ' ಎಂಬ ಕವನ ಸಂಕಲನದಲ್ಲಿ ಆಮೇಲೆ ಸೇರಿಕೊಂಡಿದೆ. ಈಗೆಲ್ಲೋ ನನ್ನ ಕೈಗೆ ಆ 'ಪಾರಿಜಾತ' ಸಂಕಲನ ಕೈಗೆ ಸಿಗುವಂತಿಲ್ಲ. ಪುಸ್ತಕಗಳ ರಾಶಿಯನ್ನು ಶಿಸ್ತಿಲ್ಲದೆ ಜೋಡಿಸಿಬಿಟ್ಟಿರುವುದರಿಂದ ಒಳಗೆಲ್ಲೋ ಸೇರಿಕೊಂಡು ಸದ್ಯಕ್ಕೆ ಸಿಗದೆ ಕಾಣೆಯಾಗಿಬಿಟ್ಟಿದೆ. ಆದರೆ ನನ್ನ ಮನದಲ್ಲಿ ದಾಖಲಾಗಿರುವ ಆ ಒಕ್ಕಣೆಯನ್ನು ನಾನು ಯಾವಾಗ ಕೇಳಿದರೂ ಹೇಳಬಲ್ಲೆ!

ಏನಾಗಬೇಕೀಗ?
ಕಿತ್ತುಕೊಳ್ಳಬೇಕೆ ರೆಕ್ಕೆ?
ಕಿತ್ತುಕೊಂಡೆ

ನುಡಿಯಬಾರದೆ ಬಾಯಿ?
ಹೊಲಿದುಕೊಂಡೆ

ನಡೆಯಬಾರದೇ ಮುಂದೆ?
ನಿಂತುಕೊಂಡೆ

ಸರಿಯಬೇಕೇ- ಸರಿ
ಸರಿದುಕೊಂಡೆ

ಎದೆ ದೀಪ ಆರಿಸುವ
ಮಾತೊಂದನು -ಕ್ಷಮಿಸಿ

ನಿತ್ಯದ ಮಂತ್ರಾಗ್ನಿಯದು
ಆದಿತ್ಯ ಜಪದ ಹೃದಯ
ಹೊತ್ತಿಸಲೂ ನಂದಿಸಲೂ
ಋಷಿಗಳಿಗೂ ಅಸಾಧ್ಯ

ಇಷ್ಟೇ ಕವಿತೆ. ಇದನ್ನು ಓದಿದ ಮೇಲೆ ಹೆಣ್ಣಿನ ಶೋಷಣೆಗೆ ಸಿಡಿಯುವ ನನ್ನ ಒಳಗಣ್ಣ ನೋಟ ಇನ್ನೂ ಶಾಂತವಾಗಿ ತೀಕ್ಷ್ಣವಾಯಿತು. 'ಆದಿತ್ಯ ಹೃದಯ ದೀಪ'ದ ರಂಗೋಲಿಯನ್ನು ನಾವು ಚಿಕ್ಕವರಿದ್ದಾಗ ಬಂಧು-ಬಳಗದ ಅಕ್ಕ- ತಂಗಿಯರೆಲ್ಲ ಸೇರಿ ಚುಕ್ಕಿಯಿಟ್ಟು ಕಷ್ಟಪಟ್ಟು ರಚಿಸುತ್ತಿದ್ದೆವು. ಕಾರಣ, ಆ ರಂಗೋಲಿ ದೇವರ ಹೃದಯವೇ. ಅದನ್ನು ಬಿಡಿಸಲು ಕಲಿತುಕೊಂಡರೆ ದೇವರ ಕೃಪೆಯಾಗುತ್ತದೆಂದು ಮನೆಯ ದೊಡ್ಡವರು ಹೇಳುತ್ತಿದ್ದರು. ಈ ಕವಿತೆ ಓದಿದ ತಕ್ಷಣ ನನಗೆ ಚುಕ್ಕಿಯಿಟ್ಟು ಆ ರಂಗೋಲಿಯನ್ನು ಬಿಡಿಸಿದ ಪರಿಶ್ರಮವೆಲ್ಲಾ ರೂಪಕವಾಗಿ ಎದೆಯೊಳಗೇ ಪ್ರತ್ಯಕ್ಷವಾಗಿ ಜೀವ ಸಂಚಾರವಾದ ಸ್ವಾತಂತ್ರ್ಯದ ಅನುಭವವಾಯ್ತು!

ವೈದೇಹಿಯವರದು ಕನ್ನಡ ಮಹಿಳಾ ಪರಂಪರೆಯಲ್ಲಿ 'ಸ್ತ್ರೀವಾದ'ದ ಪರಂಪರೆಯೇ ಇದೆ ಎಂದು ನನಗನಿಸುವುದು. ಈಗಲೂ ಅವರ ಮನೆಗೆ ಹೋದರೆ ನನಗೆ ಅವರ ವಾತ್ಸಲ್ಯದ ಆತಿಥ್ಯದ ಜೊತೆ ನನ್ನ ಕವಿತೆಗಳನ್ನು ಪ್ರೀತಿಯಿಂದ ಓದಿ ಸ್ಪಂದಿಸುವ ಅವರ ಭಾಷ್ಯವೂ ಲಭಿಸುವುದು.



'This rich repertoire of the complex worlds of women is also an amazing collection because of the range and diversity of women's writing it brings together in recent years. Take Temple Fair. drawing from her childhood in a small town in Karnataka, in a large family 'teeming with children, servants, guests, and relativs', Vaidehi captures the vitality of the world of childhood through a thick description of women and children in a household that is poised to experience the excitement of a temple fair.

From the opening sentence itself, the reader is catapulted into the child narrator's world. Vaidehi depicts almost frenetically, the pace of the 'metaphorical' as well as the real journey to the fair through a torrent of words, and through these words, the meaning of the fair in the lives of women. The women and children are inextricably linked through the pleasures of the outer world- the markets, the rituals, the people, all brought together into a single moment of being in a fair which is preceded by days of excitement, and followed by days of recall, especially as child narrator switches to an adult narrator bringing back her own children later on to experience the magic of the fair. As the novella comes to a close we are left with a palimpsest of moving images, rapidly changing characters and feelings that are montages in a film, and it is difficult therefore to hang on to a narrative thread apart from the very mood that the fair evokes-changing images of the child's world, even as she has moved into womanhood.'

- **Dr. Uma Chakravarthy** on Temple Fair

(Dr. Uma Chakravarthy is a leading scholar of feminist History and a film maker from Delhi.)

# ಮಲ್ಲಿನಾಥನ ಧ್ಯಾನ–ಗದ್ಯಂ ಹೃದ್ಯಂ

✦ ಮುರಳೀಧರ ಉಪಾಧ್ಯ ಹಿರಿಯಡಕ

ಲೇಖಕಿ ವೈದೇಹಿ ಅವರ ವೈವಿಧ್ಯಪೂರ್ಣ ಸಾಹಿತ್ಯಾಸಕ್ತಿ ಸಹೃದಯರನ್ನು ಬೆರಗುಗೊಳಿಸುತ್ತದೆ. ಸಣ್ಣಕತೆ, ಕಾದಂಬರಿ, ನಾಟಕ, ಮಕ್ಕಳ ಸಾಹಿತ್ಯ, ಕಾವ್ಯ, ಭಾಷಾಂತರಗಳಾದ ಮೇಲೆ ಅವರು ಮಲ್ಲಿನಾಥನ ಧ್ಯಾನ ಮಾಡುತ್ತಾ ಲಲಿತ ಪ್ರಬಂಧಗಳನ್ನು ಬರೆದಿದ್ದಾರೆ.

'ಲಂಕೇಶ್' ಪತ್ರಿಕೆ'ಯ ಅಂಕಣದಲ್ಲಿ ಪ್ರಕಟವಾಗಿದ್ದ ಅರುವತ್ತೆರಡು ಪ್ರಬಂಧಗಳು 'ಮಲ್ಲಿನಾಥನ ಧ್ಯಾನ'ದಲ್ಲಿವೆ. ಬಾಲ್ಯದ ನೆನಪುಗಳು, ಖಾಸಗಿ ಅನುಭವ, ವ್ಯಕ್ತಿ ಚಿತ್ರಗಳು ಹಾಗೂ ಸ್ತ್ರೀವಾದಿ ಚಿಂತನೆಗಳಿಂದ ಕೂಡಿರುವ 'ಮಲ್ಲಿನಾಥನ ಧ್ಯಾನ' ಒಂದು ಸಂಕೀರ್ಣ ಸಂಕಲನ.

'ಅಷ್ಟಮಿಯ ನೆನಪು', 'ಎಂದೂ ಅಳದ ಮಾಲತ್ತೆ', 'ಚಿಕ್ಕಿ', 'ನರಳಿದವರು', 'ಎಲ್ಲಿದ್ದೀಯ ಮಂದಾಕಿನಿ'– ಈ ಪ್ರಬಂಧಗಳಲ್ಲಿ ವೈದೇಹಿ ತನ್ನ ಬಾಲ್ಯಕಾಲ ಸಖಿಯರ ಕುರಿತು ಬರೆದಿದ್ದಾರೆ. ರಾಧು, ಚಿಕ್ಕಿ, ಮಾಲತ್ತೆ, ಮಂದಾಕಿನಿ ಇವರೆಲ್ಲ ವೈದೇಹಿ ಇವರ ಸಣ್ಣಕತೆಗಳಿಂದ ತಪ್ಪಿಸಿಕೊಂಡು ಬಂದ ಪಾತ್ರಗಳಂತಿದ್ದಾರೆ. 'ನಾವೆ ಯಾವುದು ಕಾವ್ಯ ಜಗಕೆ?' ಪ್ರಬಂಧದಲ್ಲಿ ಲೇಖಕಿಯ ಭಾವಕೋಶದಲ್ಲಿರುವ ಬಾಲ್ಯ ಯೌವನದ ಕಾವ್ಯಾನುಸಂಧಾನ ಅನಾವರಣಗೊಂಡಿದೆ.

'ನಮ್ಮ ಲೋಕದ ಗೀತೆ' ಪ್ರಬಂಧದಲ್ಲಿ ಲೇಖಕಿ ತನ್ನ ಚೊಚ್ಚಲ ಹೆರಿಗೆಯ ಕಟು–ಮಧುರ ಅನುಭವಗಳನ್ನು ಬರೆದಿದ್ದಾರೆ. ಇದು 'ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲ' ಎನ್ನುವಂಥ ಬರವಣಿಗೆ. ಅಂತರಂಗಕ್ಕೆ ಪಾತಾಳಗರಡಿ ಹಾಕಬಲ್ಲ ವೈದೇಹಿ ಅವರಿಗೆ ಮಾತ್ರ ಈ ರೀತಿಯ ಪ್ರಬಂಧಗಳನ್ನು ಬರೆಯುವುದು ಸಾಧ್ಯ.

'ಹುಡುಕುತ್ತ ಹೊರಟವರು', 'ಸೆಲ್ಯೂಕಸನ ಮಗಳು' ಪ್ರಬಂಧಗಳಲ್ಲಿ ಲೇಖಕಿಯ ಸ್ತ್ರೀವಾದಿ ಚಿಂತನೆ ಎಲೆಗಳ ಮರೆಯಲ್ಲಿರುವ ಕೆಂಡಸಂಪಿಗೆಯಂತಿದೆ. ದೇವರನ್ನು ಹುಡುಕುತ್ತ ಹೊರಟ ಕರ್ನಾಟಕದ ಅಕ್ಕಮಹಾದೇವಿ, ಮಹಾರಾಷ್ಟ್ರದ ಜನೀಬಾಯಿ ಅವರ ಬಗ್ಗೆ ವೈದೇಹಿ ಬರೆದಿದ್ದಾರೆ. 'ಸೆಲ್ಯೂಕಸನ ಮಗಳು' ಪ್ರಬಂಧದಲ್ಲಿ ಅವರು, 'ಹೆಣ್ಣುಮಕ್ಕಳು

ಎಷ್ಟು ಅಗ್ಗ! ಎಲ್ಲೆಂದರಲ್ಲಿ, ಯಾವತ್ತೂ ಇವತ್ತೂ ಬದುಕು ನಿರ್ಧಾರವಾಗುವ ಗಳಿಗೆಯವರೆಗೂ ಸತ್ತಂತಿರುವ ಅವರು ಒಮ್ಮೆ ಎಚ್ಚರವಾಗಿ ಜೀವ ತಳೆದು ನೋಡುವಾಗ ಅವರ ಸುತ್ತಣ ಪ್ರಪಂಚ ಅವರ ಪಾಲಿಗೆ ಸತ್ತು ಮುಗಿದಿರುತ್ತದೆ. ಮತ್ತವರು ಕಳೆಯುವ ದಿನಗಳ ಬಗೆ ಹೇಗೆ? ಬಹುಶಃ ತಮ್ಮ (ಕೇಳುವವರಿಲ್ಲದ) ತವರಿನ ವೈಭೋಗ ಕೊಚ್ಚಿಕೊಳ್ಳುತ್ತ, ಬೇಕೆಂದೇ ಬೀಗುತ್ತ, ತಮ್ಮ ಕೊರಗನ್ನು ತಮಗೂ ಕಾಣದ ಹಾಗೆ ಅಡಗಿಸಿಟ್ಟು ಅಥವಾ ಪಶುಗಳಂತೆ ಹೇಗೆಂದರೆ ಹಾಗೆಂದು ಒಪ್ಪಿಕೊಂಡು, ಇಲ್ಲವೆ ಅಸಹಾಯಕತೆಯಲ್ಲಿ ತಮ್ಮನ್ನು ಅದ್ದಿಕೊಂಡು, 'ದೇವರ' ಮೇಲೆ ಭಾರ ಹಾಕಿ, ಇಲ್ಲ ಕ್ರೌರ್ಯದ ಕವಚತೊಟ್ಟು, ಬಾಲ್ಯದ ಪರಿಸರವನ್ನು ಇನ್ನೆಂದೂ ಇಲ್ಲದಂತೆ ಕಸಕ್ಕನೆ ಕತ್ತರಿಸಿಕೊಂಡು ಜೀವಿಸಬೇಕಾದವರ ಬದುಕಿನ ಕೊರಗು ಯಾವ ಸ್ವರೂಪದ್ದು ಮತ್ತು ಅದು ಮುಂದಿನ ದಿನಗಳಲ್ಲಿ ಯಾವ ಯಾವ ರೀತಿಯ ಪರಿಣಾಮಗಳನ್ನು ಬೀರುವಂತಹದು ಎಂಬುದನ್ನು ಊಹಿಸಲು ಸಾಧ್ಯವೇ?' ಎಂದಿದ್ದಾರೆ.

'ಈ ಅಪೂರ್ವ ಮಹಿಳೆಗೆ ನಮನ'(ಕಮಲಾದೇವಿ ಚಟ್ಟೋಪಾಧ್ಯಾಯ), 'ಅಸಾಮಾನ್ಯ ಸಾಮಾನ್ಯ ಕೋ.ಲ.ಕಾರಂತ.', 'ಮೂಕಜ್ಜಿ ಎಂಬ ವಾಕ್ ಅಜ್ಜಿ', 'ಅನುಭವ ಸಿರಿಯ ವಿರಕ್ತ ಲೇಖಕಿ ಸರಸ್ವತಿಬಾಯಿ ರಾಜವಾಡೆ', 'ಸಹಜ ಲೇಖಕಿಯ ನೆನೆಯುತ್ತ', (ಎಂ.ಕೆ.ಇಂದಿರಾ)– ಇವುಗಳಲ್ಲಿ ಕೆಲವು ಆತ್ಮೀಯ ವ್ಯಕ್ತಿಚಿತ್ರಗಳಲ್ಲಿ, ಉಡುಪಿಯ ಸರಸ್ವತಿಬಾಯಿ ರಾಜವಾಡೆಯವರ ಕುರಿತು ವೈದೇಹಿ, 'ಇಡೀ ಇಂಡಿಯಾ ಹುಡುಕಿದರೂ ಅವರಂತಹ ವಿಶಿಷ್ಟ ಅನುಭವಗಳನ್ನು ಸೂರೆಗೊಂಡ ಲೇಖಕಿ ಸಿಗಲಿಕ್ಕಿಲ್ಲ' ಎಂದಿದ್ದಾರೆ. ರಾಜವಾಡೆಯವರ ಅಲಿಖಿತ ಆತ್ಮಕತೆಯಲ್ಲಿ ಉಡುಪಿಯ ಸಾಂಸ್ಕೃತಿಕ ಇತಿಹಾಸದ ನಿಗೂಢ ಪುಟಗಳಿದ್ದವು.

'ಸೆಲ್ಯೂಕಸನ ಮಗಳು', 'ಡಿಸೆಂಬರ್ 6' ಎಂಬ ಪ್ರಬಂಧಗಳನ್ನು ಬರೆದಿರುವ ವೈದೇಹಿ ರಾಜಕೀಯದಲ್ಲಿ ಅನಾಸಕ್ತರೇನೂ ಅಲ್ಲ.. ಮೆಲುದನಿಯಲ್ಲಿ ಬರೆವ ಈಕೆ ಸ್ತ್ರೀ ಪುರುಷ ರಾಜಕೀಯವನ್ನು ಅಲಕ್ಷಿಸುವುದಿಲ್ಲ.

ನವೋದಯದ ಭಾವಗೀತೆಗಳೊಂದಿಗೆ ಅರಳಿ, ವ್ಯಕ್ತಿಕೇಂದ್ರಿತ ನವ್ಯದ ಕಾಲದಲ್ಲಿ ಗುಪ್ತಗಾಮಿನಿಯಾಗಿದ್ದ ಲಲಿತ ಪ್ರಬಂಧ ಈಗ ಪುನರ್ಜನ್ಮ ಪಡೆಯುತ್ತಿದೆ.

ವೈದೇಹಿ ಅವರ 'ಮಲ್ಲಿನಾಥನ ಧ್ಯಾನ', ಲಲಿತ ಪ್ರಬಂಧದ ಪುನರಾಗಮನ ಕುರಿತು ಅಭಿಮಾನಪಡುವಂತೆ ಮಾಡುತ್ತದೆ. ಭಾವಗೀತೆಯ ಶಿಖರವೇರಲು ಹವಣಿಸುವ ಕೆಲವು ಒಳ್ಳೆಯ ಪ್ರಬಂಧಗಳು ಈ ಸಂಕಲನದಲ್ಲಿವೆ. ಪ್ರಬುದ್ಧ ಕತೆಗಾರ್ತಿಯೊಬ್ಬರ ಕಲಾತ್ಮಕ ಎಚ್ಚರ, ಸ್ತ್ರೀವಾದಿ ಲೇಖಕಿಯೊಬ್ಬರ ಧ್ಯಾನ, ಕವಯಿತ್ರಿಯೊಬ್ಬರ ಅಂತರಂಗದ ನಿರೀಕ್ಷಣೆಗಳು ಮುಪ್ಪುರಿಗೊಂಡಿರುವ 'ಮಲ್ಲಿನಾಥನ ಧ್ಯಾನ', 'ಗದ್ಯಂ ಹೃದ್ಯಂ' ಎಂದು ಮೆಚ್ಚುಗೆ ಗಳಿಸುವ ಸಂಕಲನ.



# ಬದಲಾಗುತ್ತಿರುವ ಸ್ತ್ರೀಸಂಕಥನದ ದಿಕ್ಸೂಚಿ

✦ ಡಾ. ಎಂ ಎಸ್ ಆಶಾದೇವಿ

ವೈದೇಹಿಯವರ ಬರವಣಿಗೆಯ ಹಲವು ಆಯಾಮಗಳನ್ನು ಕನ್ನಡ ಮತ್ತು ಭಾರತೀಯ ಭಿತ್ತಿಯಲ್ಲಿ ಈಗಾಗಲೇ ಗುರುತಿಸಲಾಗಿದೆ. ವೈದೇಹಿಯವರ ಕಥನ ಮತ್ತು ಕಾವ್ಯ ಮಹಿಳಾ ಸಂಕಥನಕ್ಕೆ ಕೊಟ್ಟ ಕೊಡುಗೆಯ ಜೊತೆಗೇ ಕನ್ನಡ ಸಾಹಿತ್ಯದಲ್ಲಿ ಅವರ ಸ್ಥಾನ ನಿರ್ದೇಶನ ಮಾಡುವ ಕೆಲಸವೂ ಆಗಿದೆ ಮತ್ತು ಆಗುತ್ತಿದೆ.

ವೈದೇಹಿಯವರ ಒಟ್ಟೂ ಬರವಣಿಗೆಯ ಮೂಲ ಶೋಧಗಳು ಯಾವುವು? ಕಾವ್ಯ ಮತ್ತು ಗದ್ಯದಲ್ಲಿ ಅವು ಭಿನ್ನವಾಗಿ ಒಡೆದುಕೊಂಡಿವೆಯೆ? ವೈದೇಹಿಯವರು 'ಹೊಸಹೆಣ್ಣ'ನ್ನು ಕಟ್ಟುತ್ತಿದ್ದಾರೆಯೆ ಅಥವಾ ಹೆಣ್ಣಿನಲ್ಲೇ ಇರುವ, ಸ್ವತಃ ಹೆಣ್ಣು, ಗಂಡು ಮತ್ತು ಒಟ್ಟಾರೆಯಾಗಿ ಮೌಲ್ಯವ್ಯವಸ್ಥೆ ಗುರುತಿಸಲು ಹಿಂಜರಿಯುವ ಮತ್ತು ನಿರಾಕರಿಸುವ ಶಕ್ತಿವಿಶೇಷಗಳ ಅನಾವರಣಕ್ಕಾಗಿ ವೈದೇಹಿಯವರು ಉಜ್ಜಿಗಿಸುತ್ತಿದ್ದಾರೆಯೆ?

ನನ್ನ ಹಿಂದಿನ ಹಲವು ಬರೆಹಗಳಲ್ಲಿ ಎರಡನೆಯದೇ ವೈದೇಹಿಯವರ ಮೂಲಕ್ಷೇತ್ರ ಎನ್ನುವುದನ್ನು ನಾನು ಚರ್ಚಿಸಿದ್ದೇನೆ. ಆ ಲೇಖನಗಳಲ್ಲಿ ಸೂಚಿಸಿದ್ದ ಒಂದು ಅಂಶವೆಂದರೆ, 'ಮಲ್ಲಿನಾಥನ ಧ್ಯಾನ' ವೈದೇಹಿಯವರ ಮುಖ್ಯಕೃತಿಗಳಲ್ಲಿ ಒಂದು ಮಾತ್ರವಲ್ಲ, ಕನ್ನಡದ ಬಹುಮುಖ್ಯ ಸಾಂಸ್ಕೃತಿಕ ಪಠ್ಯಗಳಲ್ಲಿ ಒಂದು ಎಂದು.

ಈ ಅಂಕಣ ಬರೆಹಗಳಲ್ಲಿ ವೈದೇಹಿಯವರು ತಮ್ಮ ವಿಚಾರಗಳನ್ನು ಹೆಚ್ಚು ತಾತ್ವಿಕರಿಸಲು, ತಮಗೆ ತಾವೇ ಹೆಚ್ಚು ಸ್ಪಷ್ಟಪಡಿಸಿಕೊಳ್ಳಲು ಹವಣಿಸುತ್ತಿದ್ದಾರೆ. ಹೆಣ್ಣಿನ ಆಲೋಚನೆ ಮತ್ತು ವ್ಯಕ್ತಿತ್ವದ ಅನನ್ಯತೆಯನ್ನು ವೈದೇಹಿ, ಅದು ಅವಳ 'ಗುರುತು' ಕೂಡ ಎನ್ನುವುದನ್ನು ಪ್ರಸ್ತುತಪಡಿಸುತ್ತಾ ಹೋಗುತ್ತಾರೆ. ಮಹತ್ವದ ಮಾತೆಂದರೆ, ಈ ಅಂಶ ಲೋಕಕ್ಕಿಂತ ಮೊದಲು ಹೆಣ್ಣಿಗೆ ಹೆಚ್ಚು ಸ್ಪಷ್ಟವಾಗಬೇಕಾದ ಜರೂರಿದೆ ಎನ್ನುವ ಅರಿವಿನಲ್ಲಿ ಬರೆಯುತ್ತಾರೆ. ಹೆಣ್ಣಿನ ಹೋರಾಟವು ನಿರ್ಣಾಯಕವಾಗಿ ಭಿನ್ನವಾಗುವುದು ಅವಳು ತನ್ನನ್ನು ತಾನು ಗ್ರಹಿಸುವ ಮತ್ತು ಪ್ರಸ್ತುತಪಡಿಸಿಕೊಳ್ಳುವ ಬಗೆಯಲ್ಲಿ. ಇದೇ ಅವಳು ಲೋಕವನ್ನು ಗ್ರಹಿಸುವ ಬಗೆಯನ್ನೂ ಲೋಕ ತನ್ನನ್ನು ನೋಡಬೇಕೆಂದು

ನಿರೀಕ್ಷಿಸುವುದನ್ನೂ ಹೇಳುತ್ತದೆ. ಇಲ್ಲಿಂದ ಹೊಸದಾರಿ ತಾನಾಗಿ ತೆರೆಯುತ್ತದೆ ಎನ್ನುವುದು ವೈದೇಹಿಯವರ ನಂಬಿಕೆಯಾಗಿದೆ. ಇದೊಂದು ರೂಪಾಂತರ ಪ್ರಕ್ರಿಯೆ. ಇದನ್ನು ಹೆಣ್ಣು ಎಷ್ಟೆಷ್ಟು ಸಾರ್ವಜನಿಕವಾಗಿ, ಮುಕ್ತವೇದಿಕೆಗಳಲ್ಲಿ ಮಾಡುತ್ತಾ ಹೋಗುತಾಳೋ ಅಷ್ಟಷ್ಟು ಲೋಕವನ್ನೂ ಇದರಲ್ಲಿ ಒಳಗೊಳ್ಳಲು ಸಾಧ್ಯವಾಗುತ್ತದೆ. ಅಂಕಣದಲ್ಲಿ ವೈದೇಹಿಯವರು ಇದನ್ನು ಮಾಡಿದ್ದಕ್ಕೆ ಮಹತ್ವ ಬರುವುದು ಈ ಕಾರಣಕ್ಕೆ. ಅಂಕಣಗಳು ಲೋಕದ ಜೊತೆ ನಾವು ನಡೆಸುವ ಮಾತುಕತೆಗಳೂ ಹೌದಷ್ಟೇ. ಅದರಲ್ಲೂ ಇದರಲ್ಲಿನ ಬಹುಪಾಲು ಬರವಣಿಗೆಗಳು ಸಾಂಸ್ಕೃತಿಕ ಪಲ್ಲಟವನ್ನು ಪತ್ರಿಕೋದ್ಯಮ ಮಾಡಬಲ್ಲದು ಎನ್ನುವುದನ್ನು ನಂಬಿದ್ದ ಲಂಕೇಶ್ ಪತ್ರಿಕೆಯಲ್ಲಿ ಪ್ರಕಟವಾದದ್ದು ಈಗ ಹಿಂದಿರುಗಿ ನೋಡಿದಾಗ ಐತಿಹಾಸಿಕ ಪ್ರಾಮುಖ್ಯದ್ದಾಗಿ ಕಾಣಿಸುತ್ತದೆ.

ಅಂಕಣ ಬರೆಹಗಳು ಲೋಕದೊಂದಿಗೆ ನಡೆಸುವ ನೇರ ಮಾತುಕತೆಯೂ ಹೌದು. ಅಂಕಣ ಬರೆಹಗಳು ಒಂದು ನಿರ್ದಿಷ್ಟ ತಾತ್ವಿಕ ಮತ್ತು ಲೋಕದೃಷ್ಟಿಯ ಹಿನ್ನೆಲೆಯಲ್ಲಿ ಬರೆಯುವಾಗಲಂತೂ ಅವುಗಳಿಗೆ ವಕಾಲತ್ತಿನ ಗುಣವೂ ಅಷ್ಟೇ ಸಹಜವಾಗಿ ಬಂದು ಬಿಡುತ್ತದೆ. ವೈದೇಹಿಯವರ ಈ ಬರೆಹಗಳಲ್ಲಿ ಮತ್ತೆ ಮತ್ತೆ ಹೆಣ್ಣನ್ನು ಕುರಿತ ಅಪವ್ಯಾಖ್ಯಾನಗಳನ್ನು ಸರಿದಾರಿಗೆ ತರುವ ಪ್ರಯತ್ನ ಕಾಣುತ್ತದೆ. ಅವಳನ್ನು ಎರಡನೆಯ ದರ್ಜೆಯ ಪ್ರಜೆಯಾಗಿ ನೋಡುವುದರ ವಿಪರ್ಯಾಸವನ್ನು ವಿಷಾದದಲ್ಲೂ ನಿಟ್ಟುಸಿರಿನಲ್ಲೂ ವೈದೇಹಿ ಕಾಣಿಸುತ್ತಾರೆ. ಆದರೆ ಈ ಯಾವ ಸಂದರ್ಭದಲ್ಲೂ ವೈದೇಹಿಯವರ ನೋಟ, ಮಾತು ಕಹಿಯಾಗುವುದಿಲ್ಲ, ಯುದ್ಧಕ್ಕಿಳಿಯುವುದಿಲ್ಲ. ಇನ್ನು ಮುಂದಾದರೂ ಇದು ಬದಲಾಗಲಿ ಎನ್ನುವ ಆಶಯವೇ ಉದ್ದಕ್ಕೂ ಅವರನ್ನು ನಡೆಸಿದೆ. ಆದರೆ ಇಂಥ ನಿಲುವು ಹುಂಬ ಆಶಾವಾದವಲ್ಲ, ಅದು ಹೆಣ್ಣಿನ ಅದಮ್ಯ ಜೀವನ ಪ್ರೀತಿಯ ಅನಾವರಣ. ಏನೆಲ್ಲವನ್ನು ಉಂಡೂ ಹೆಣ್ಣು ನಿರಾಶವಾದಿಯಾದದ್ದಿಲ್ಲ. ಏಕೆಂದರೆ ಅವಳ ಚೈತನ್ಯವೇ ಜೀವದಾಯಿ ಚೈತನ್ಯ. ಅದು ಎಲ್ಲ ಅರ್ಥದಲ್ಲೂ ಸೃಷ್ಟಿಶೀಲವೇ. ಆದ್ದರಿಂದಲೇ ನೂರು ಬಗೆಯ ನಿರ್ಬಂಧಗಳು, ಉಸಿರುಗಟ್ಟಿಸುವ ವಾಸ್ತವವನ್ನೂ ಹೆಣ್ಣು ತನ್ನ ಅಂತರಂಗದ, ಯಾರ ಅಂಕುಶಕ್ಕೂ ಒಳಗಾಗದ, ತನ್ನಷ್ಟಕ್ಕೆ ತಾನು ಸ್ವತಂತ್ರವಾಗಿರುವ ಲೋಕವೊಂದನ್ನು ಕಟ್ಟಿಕೊಳ್ಳುವ ಮೂಲಕವೇ ಗೆಲ್ಲುತ್ತಾಳೆ ಎನ್ನುವುದು ಇವರ ಅಖಂಡ ನಂಬಿಕೆ.

ಇಲ್ಲಿನ ಬರೆಹವೊಂದರಲ್ಲಿ ವೈದೇಹಿ ಹೆಣ್ಣು ಗಂಡಿಗೆ ಸಮನಲ್ಲ, ಅದಕ್ಕಿಂತ ಹೆಚ್ಚಾಗಿ ಗಂಡು ಎಂದಿಗೂ ಹೆಣ್ಣಿಗೆ ಸಮನಲ್ಲ ಎನ್ನುತ್ತಾರೆ. ಇದೇ ಈ ಪಠ್ಯದ ಮೂಲ ಭಿತ್ತಿ. ಗಂಡು ಹೆಣ್ಣೂ ಇಬ್ಬರೂ ಅನನ್ಯರು, ಭಿನ್ನ ಎನ್ನುತ್ತಾ, ಸಮಾನತೆಯ ಹೋರಾಟದ ಬಗೆಗಿನ ಅವರ ನಿಲುವನ್ನು ಸ್ಪಷ್ಟಪಡಿಸುತ್ತಾರೆ. ಹೋರಾಟ ನಡೆಯಬೇಕಾದ್ದು ಸಮಾನತೆಗಿಂತ ಹೆಚ್ಚಾಗಿ ಅವರವರ ಅನನ್ಯತೆಯನ್ನು ಒಪ್ಪಿಕೊಳ್ಳುವ ಮನಸ್ಥಿತಿಯ ನಿರ್ಮಾಣಕ್ಕೆ. ಇದನ್ನೇ ಗಾಂಧಿಯೂ ಹೇಳಿದ್ದು, They are separate but equal. ನಿಜವಾಗಿ ಇದು ಮಾತ್ರ

ಹೆಣ್ಣಿನ ಸ್ಥಿತಿಗತಿಗಳಲ್ಲಿಯೂ, ಮೌಲ್ಯವ್ಯವಸ್ಥೆಯಲ್ಲಿಯೂ ಬದಲಾವಣೆಯನ್ನು ತರಬಲ್ಲದ್ದು. ಈ ಸ್ಪಷ್ಟತೆಯ ಕಾರಣಕ್ಕಾಗಿಯೇ ಇಲ್ಲಿನ ಬರೆಹಗಳು ಮುಖ್ಯವಾಗುತ್ತವೆ.

ತಾಯ್ತನವನ್ನು ವೈಭವೀಕರಿಸುವ, ಪವಿತ್ರೀಕರಿಸುವ ಮಾದರಿಯೊಂದು ಯಾವಾಗಲೂ ಚಾಲ್ತಿಯಲ್ಲಿದ್ದೇ ಇರುತ್ತದೆ. ಅದನ್ನು ವೈದೇಹಿ ನಿರೂಪಿಸುವ ಕ್ರಮ ಇದಕ್ಕಿಂತ ಭಿನ್ನವಾಗಿದೆ. ಈ ಎರಡನ್ನೂ ಬಿಟ್ಟು ಅವರು ಸೃಷ್ಟಿಶೀಲತೆಯ ಮತ್ತು ಪ್ರಕೃತಿಯೊಂದಿಗೆ ಹೆಣ್ಣು ಹೊಂದಿರುವ ಅವಿನಾಭಾವದ ಸಂಬಂಧದ ಪ್ರಾತ್ಯಕ್ಷಿಕೆ ಎಂಬಂತೆ ಗ್ರಹಿಸುತ್ತಾರೆ. ತಾಯ್ತನವೆಂಬುದು ಕೊಡುವುದರಷ್ಟೇ ಪಡೆಯುವ ಕ್ರಿಯೆಯೂ ಹೌದು ಎನ್ನುತ್ತಾರೆ. ಆ ಸುಖದ ಎದುರಿಗೆ ಇಡೀ ಜಗತ್ತೇ ಗೌಣವಾಗಿಬಿಟ್ಟು, ಹೆಣ್ಣಿನ ವ್ಯಕ್ತಿತ್ವವು ತನ್ನಷ್ಟಕ್ಕೆ ತಾನೇ ಘನತೆಯನ್ನು ಪಡೆದುಬಿಡುವ ಪರಿ, ಲೋಕದ ಇತರ ತಕರಾರುಗಳು ಕ್ಷುಲ್ಲಕವೆನಿಸಿಬಿಡುತ್ತವೆ. ದುರ್ಬಲಳು ಎಂದು ಹೇಳಲಾಗುವ ಹೆಣ್ಣು ತಾಯ್ತನದ ಜವಾಬ್ದಾರಿಯಲ್ಲಿ, ಸುಖದಲ್ಲಿ ಸರ್ವಶಕ್ತಳಾಗಿಬಿಡುತ್ತಾಳೆ. ಈ ಶಕ್ತಿಯಿಲ್ಲದ ಕಾರಣಕ್ಕೇ ಗಂಡು ಹೆಣ್ಣಿನ ಮೇಲೆ ಅಧಿಕಾರ ಚಲಾಯಿಸಲು ಪ್ರಯತ್ನಿಸುತ್ತಾನೇನೋ ಎನ್ನುವ ಭಾವವೂ ಹಾದು ಹೋಗುತ್ತದೆ ಲೇಖಕಿಗೆ. ರೇಷ್ಮೆ ಸೀರೆಯಿಂದ ಹಿಡಿದು ಹೆಣ್ಣಿನ ದೌರ್ಬಲ್ಯಗಳು ಎಂದು ಗುರುತಿಸಲಾಗುವ ವಿವರಗಳನ್ನೆಲ್ಲ ವೈದೇಹಿ ಮರು ನಿರೂಪಣೆಗೆ ಒಳಗು ಮಾಡುತ್ತಾರೆ. ಆ ಮೂಲಕ ಅವುಗಳ ಸ್ವರೂಪವನ್ನೂ ಬದಲಾಯಿಸುತ್ತಾರೆ.

ತಮ್ಮ ಬರವಣಿಗೆಯ ಹರಹನ್ನು ವಿಸ್ತರಿಸಿಕೊಳ್ಳುವ ಪ್ರಯತ್ನಗಳೂ ಇಲ್ಲಿವೆ. ಬೆನಜೀರ್‌ಗೆ ಬರೆದ ಪತ್ರ ಹೆಣ್ಣಿನ ಬದಲಾಗಲೇಬೇಕಾದ ಪಾತ್ರವನ್ನು ನಿಭಾಯಿಸುತ್ತಿರುವ ಬೆನಜೀರ್ ಬಗ್ಗೆ ಅಭಿಮಾನಪೂರ್ವಕವಾದ ಮಾತುಗಳನ್ನು ಹೇಳುತ್ತಲೇ ರಾಜಕೀಯಕ್ಕೆ ಅಗತ್ಯವಾಗಿ ಬೇಕಾದ ಹೆಣ್ತನದ ಸ್ಪರ್ಶದ ಬಗೆಗೂ ಇದು ಚಿಂತಿಸುತ್ತದೆ. ಪ್ರಿಯ ನತಾಷ ಲೇಖನ ಕೂಡ ಇದೇ ಮಾದರಿಯದ್ದು.

ಈ ಎಲ್ಲ ಅಂಶಗಳಷ್ಟೇ ಮುಖ್ಯವಾದ ಇನ್ನೊಂದು ಆಯಾಮ ಈ ಕೃತಿಯಲ್ಲಿದೆ. ಅದು ವ್ಯಕ್ತಿ ತನ್ನ ಏಕಾಂತದ ಲೋಕವನ್ನು ಕಟ್ಟಿಕೊಳ್ಳಲು ನಿರಂತರವಾಗಿ ಹಂಬಲಿಸುವುದನ್ನು ಚಿತ್ರಿಸುವ ಪ್ರಯತ್ನ. ಲೋಕಾಂತದ ಮೊರೆತದೊಳಗೂ ವ್ಯಕ್ತಿ ಕೊನೆಗೂ ಏಕಾಂಗಿಯಾಗುವ, ತನಗೆ ತಾನೇ ಗೆಳೆಯನೂ ಗೆಳತಿಯೂ ಆಗುವ, ಆಗಬೇಕಾದ ಅನಿವಾರ್ಯತೆಯನ್ನು ಆರ್ದ್ರವಾಗಿ ಇಲ್ಲಿನ ಕೆಲವು ಬರೆಹಗಳು ಶೋಧಿಸುತ್ತವೆ. ಮನುಷ್ಯನ ಈ ಅವಸ್ಥೆಯನ್ನು ಎದುರಿಸಬೇಕಾದ್ದು ವಿಷಾದದಿಂದಲ್ಲ, ವ್ಯಗ್ರತೆಯಿಂದಲ್ಲ, ತಪ್ಪಿಸಿಕೊಳ್ಳಲಾಗದ ಅನಿವಾರ್ಯತೆಯಿಂದಲ್ಲ ಅದೂ ಬದುಕಿನ ಸಹಜ ಸ್ಥಿತಿ ಎನ್ನುವ ನೆಲೆಯಲ್ಲಿ. ಇದಕ್ಕಿಂತ ಮಿಗಿಲಾದ ನಿಲುವೆಂದರೆ, ಬದುಕನ್ನು ಎದುರಾಗುವ ಅವಕಾಶದಲ್ಲಿ ಇದು ಮುಖ್ಯವಾದದ್ದು. ತನ್ನನ್ನು ತಾನು ಪರಿಭಾವಿಸಲು ಇದೊಂದು ತಾಣ ಎನ್ನುವ ಅರಿವಿನಲ್ಲಿ ಇಲ್ಲಿನ ಬರೆಹಗಳು ಅರಳುತ್ತಾ ಹೋಗುತ್ತವೆ. ತಾನು ಹೆಣ್ಣಾಗಿರುವುದರ ಬಗ್ಗೆ, ತನ್ನ ಬದುಕು ಆ

ಕಾರಣಕ್ಕಾಗಿ ಭಿನ್ನವಾಗಿರುವುದರ ಬಗ್ಗೆ, ಅದು ಅನನ್ಯವಾಗಿರುವುದರ ಬಗ್ಗೆ ಯೋಚಿಸುತ್ತಲೇ ತಾನೊಬ್ಬ ಮನುಷ್ಯ ಜೀವಿಯಾಗಿ ಅದನ್ನು ಹೇಗೆ ಬದುಕುತ್ತಿದ್ದೇನೆ ಎನ್ನುವುದರ ಒಳಪಯಣಕ್ಕೂ ಇವು ಅನುವು ಮಾಡಿಕೊಡುತ್ತವೆ. ಇಲ್ಲಿನ ಬರೆಹಗಳ ಮರು ಓದು ವ್ಯಕ್ತಿ ಮತ್ತು ಸಮುದಾಯದ ನಡುವಿನ ಸೇತುವೆಯಾಗಿ, ಮಾತುಕತೆಯಾಗುತ್ತಾ ಹೊರಲೋಕವನ್ನು ಕಟ್ಟುತ್ತಲೇ ಅಂತರ್ಮುಖಿಯಾಗುತ್ತಾ ಒಳಲೋಕವನ್ನೂ ಒಳಗೊಳ್ಳಲು ಹವಣಿಸುತ್ತವೆ. ಹೆಣ್ಣಿನ ಹೋರಾಟದ ರಾಜಕೀಯ ಆಯಾಮವನ್ನು ಪ್ರತಿನಿಧಿಸುತ್ತಲೇ ಅಪ್ಪಟ ಸಾಹಿತ್ಯಕ ಬರವಣಿಗೆಗಳೂ ಆಗಿಬಿಡುತ್ತವೆ.

ವೈದೇಹಿಯವರ ತಾತ್ವಿಕ ಮೀಮಾಂಸೆಯೇ ಸಂಘರ್ಷಕ್ಕಿಂತ ಸಾಮರಸ್ಯದ ಕಡೆಗೆ ಕಣ್ಣು ನೆಟ್ಟದ್ದು. ಮುರಿದು ಕಟ್ಟುವುದು ಅವರ ದಾರಿಯಲ್ಲ. ಅನಂತ ತಾಳ್ಮೆ ಮತ್ತು ದೃಢತೆಯನ್ನು ಬೆಸೆಯುವಂಥದ್ದು. ತನ್ನತನದ ಸ್ವಂತಿಕೆಯನ್ನು ಪಡೆಯುವ, ಪಡೆಯಲು ಏನೆಲ್ಲ ಹೋರಾಟಗಳನ್ನು ಹಲ್ಲುಕಚ್ಚಿ, ನೋವು ನುಂಗುತ್ತಾ ಮಾಡುವ ಹೆಣ್ಣು ಇವರಲ್ಲಿ ಮತ್ತೆ ಮತ್ತೆ ಕಾಣುತ್ತಾಳೆ. ಆದರೆ ಅವಳು ಅದಕ್ಕಾಗಿ ಲೋಕದ ಜೊತೆ ತೊಡೆ ತಟ್ಟಿ ನಿಲ್ಲುವವಳಲ್ಲ, ಬೌದ್ಧಿಕವಾಗಿ ವಾಗ್ವಾದಕ್ಕಿಳಿಯುವವಳಲ್ಲ, ಮೌನ ಮತ್ತು ತಾಳ್ಮೆಯನ್ನೇ ಅಸ್ತ್ರವಾಗಿ ಮಾಡಿಕೊಂಡು, ತನ್ನ ಶಕ್ತಿಯನ್ನು ಮನೋದೃಢತೆಯಲ್ಲಿ ಸಂಚಯಿಸಿಕೊಳ್ಳುತ್ತಾ ಲೋಕಕ್ಕೆ ಸವಾಲು ಹಾಕುವವಳು. ಬೇಕಾಗಿ ಬೇಡವಾಗಿ ಲೋಕ ಇವಳ ಶಕ್ತಿಯನ್ನು, ಸಾಧ್ಯತೆಯನ್ನೂ 'ಕಾಣಿಸಲು' ಯಶಸ್ವಿಯಾಗುವ ಹೆಣ್ಣು ವೈದೇಹಿಯವರ ಆರ್ದ್ರಗರ್ವದ ಹೆಣ್ಣು. ಇಷ್ಟಾಗಿಯೂ ಲೋಕ ಕಂಡೂ ಕಾಣದಂತೆ ಇದ್ದರೆ, ಅಂಥ ಆತ್ಮವಂಚನೆಯನ್ನು ತುಟಿಯಂಚಿನ ನಗುವಿನಲ್ಲಿ ಎದುರಾಗುತ್ತಾಳೆ. ಆದರೆ ಮಲ್ಲಿನಾಥನ ಧ್ಯಾನದಲ್ಲಿ ಮಾತ್ರ ವೈದೇಹಿ ಇದರ ಬೌದ್ಧಿಕ ನೆಲೆಯನ್ನೂ ಪ್ರಧಾನವಾಗಿ ಕಟ್ಟಿಕೊಳ್ಳಲು ಯತ್ನಿಸುತ್ತಾರೆ. ಈ ದೃಷ್ಟಿಯಿಂದ ಈ ಕೃತಿ ತೆಂಗಿನಕಾಯಿಯ ಇನ್ನರ್ಧ ಭಾಗ. ಭಾವುಕತೆಯನ್ನು ಬೌದ್ಧಿಕತೆಯೊಂದಿಗೆ ಹೆಣೆದ ಇಲ್ಲಿನ ಬರೆಹಗಳು ಬದಲಾಗುತ್ತಿರುವ ಸ್ತ್ರೀಸಂಕಥನದ ದಿಕ್ಸೂಚಿಗಳಾಗಿವೆ.



# ಜಾತ್ರೆ: ಒಂದು ರೂಪಕಾತ್ಮಕ ಅಭಿವ್ಯಕ್ತಿ

✦ ಡಾ. ಯು ಮಹೇಶ್ವರಿ

ವೈದೇಹಿಯವರ ಈ ಕೃತಿ ಮೇಲುನೋಟಕ್ಕೆ ಸರಳ ನಿರಾಡಂಬರ. ಆದರೆ ಜಾತ್ರೆಯ ಸಂಭ್ರಮ ಸತ್ವಗಳನ್ನು ತನ್ನೊಡಲಲ್ಲಿ ತುಂಬಿಕೊಂಡು ನಮ್ಮ ನಿಮ್ಮ ಬಾಲ್ಯದ ನೆನಪುಗಳಿಗೆ ಲಗ್ಗೆಹಾಕುವ ಕೃತಿ ಬರೆಯಹೊರಟರೆ ಇನ್ನೂ ಸಂಕೀರ್ಣವಾದ ಅದರ ಮುಖ ಎದುರಾಗುತ್ತದೆ. ಅದನ್ನು ಕಥಾಸಂಕಲನ ಎನ್ನೋಣವೇ? ಲಲಿತ ಪ್ರಬಂಧ ಎನ್ನೋಣವೇ? ಇಲ್ಲಿನ ಬರಹಗಳನ್ನು ಬಿಡಿಬಿಡಿಯಾಗಿಯೂ ಒಟ್ಟಾಗಿಯೂ ಓದಬಹುದು. ಒಟ್ಟಾಗಿ ಓದಿದಾಗ ಗಟ್ಟಿಗೊಳ್ಳುವ ಅನುಭವ ಪ್ರಪಂಚ ಬೇರೆಯೇ. ಲೇಖಕಿ ಹೇಳುವಂತೆ 'ಜಾತ್ರೆ' ಕುರಿತು ಬರೆಯಲು ಹೋಗಿ ಅದು ಈ ಬಗೆಯಲ್ಲಿ ಸುರುಳಿ ಬಿಚ್ಚಿಕೊಂಡಿತು. ಪ್ರತಿಯೊಬ್ಬರ ಒಡಲಿನಲ್ಲಿಯೂ ನೆನಪು ನೇಸಲುಗಳ ಅಸಂಖ್ಯ ಟಿಸಿಲೊಡೆಯುತ್ತಾ ಹೋಗುವ ಸತ್ವವಲ್ಲವೆ ಜಾತ್ರೆಯೆಂದರೆ? ಬಹುಶಃ ಒಂದು ವಿಷಯದ 'ಕುರಿತು' ಬರೆಯುವುದೆಂದರೆ ಅದೊಂದು ಪ್ರಬಂಧವಾಗಬಹುದು. ಆದರೆ ಜಾತ್ರೆಯ ಸತ್ವ ಲೇಖಕಿಯ ಸತ್ವವನ್ನು ಈ ಬಗೆಯ ಬರಹವನ್ನು ಬರೆಯಿಸಿತೆನ್ನಬಹುದು. ಜಾತ್ರೆ ಎನ್ನಬಹುದಾದ ಶ್ರುತಿಯೊಂದು ಕೃತಿಯ ಕೊನೆಯ ಭಾಗದಲ್ಲಿ ಮಿಡಿದು ಲೇಖಕಿಯ ತಾದಾತ್ಮ್ಯವನ್ನು ಸಾರುತ್ತದೆ.

ಈ ಕೃತಿಯಲ್ಲಿ ವೈದೇಹಿಯವರು ಆಯ್ದುಕೊಂಡ ತಂತ್ರ ಅನನ್ಯವಾದುದು. ಜಾತ್ರೆಯ ನೆನಪು ಮತ್ತು ಅದನ್ನು ನಿರೂಪಿಸಿದ ವಿಧಾನ ಅಭಿನ್ನವಾಗಿ ಅಪೂರ್ವವಾದ ಒಂದು ಬಗೆಯನ್ನು ಇಲ್ಲಿ ಕಾಣಬಹುದು. ನಿರೂಪಕಿಯ ಅಂತರಂಗದಿಂದ ಓದುಗರ ಅಂತರಂಗಕ್ಕೆ ನೇರವಾಗಿ, ಯಾವುದೇ ಅಡೆತಡೆಗಳಿಲ್ಲದೆ, ದಾಟಿಸುವ ಪ್ರಜ್ಞಾಪ್ರವಾಹ ತಂತ್ರದ ಒಂದು ವಿಧ ಇದು. ಆದರೆ ಕೃತಿಯನ್ನು 'ಜಾತ್ರೆ' ಎಂದು ಕರೆದುದು ಯಾಕೆಂದು ಅರ್ಥವಾಗುವುದಿಲ್ಲ. ಕೃತಿಯಲ್ಲಿ ಹಾಸ್ಯವಿದೆ. ಆದರೆ ಅದು ವಿಡಂಬನೆಯಲ್ಲ. ವಿಡಂಬನೆಯಲ್ಲಿ ಲೇಖಕಿಗೆ ಮತ್ತು ವಿಡಂಬನೆಗೊಳಗಾಗುವ ವಸ್ತುವಿಗೆ ಒಂದು ದೂರವಿರುತ್ತದೆ. 'ಜಾತ್ರೆ' ಯಲ್ಲಿ ಬರುವ ಎಲ್ಲ ವಿವರಗಳಲ್ಲೂ ಅದಮ್ಯವಾದ ಜೀವನ ಪ್ರೀತಿಯಿದೆ. ಹಾಸ್ಯದ ಎಳೆ

ಮಿಂಚುವಾಗಲೂ ನಿರೂಪಕಿ ತಾನೂ ಅವರಲ್ಲೊಬ್ಬಳಾಗಿರುತ್ತಾಳೆ. ಭಿನ್ನವಾಗಿ ನಿಂತು ನೋಡುವುದಿಲ್ಲ.

ಸವಿತಾ ನಾಗಭೂಷಣರ 'ಸ್ತ್ರೀಲೋಕ' ಒಂದು ಅನನ್ಯ ಪ್ರಯೋಗವಾಗಿ ಗುರುತಿಸಲ್ಪಟ್ಟಿದೆ. ವೈದೇಹಿಯವರ 'ಜಾತ್ರೆ' ಕೂಡ ಸ್ತ್ರೀಸಂವೇದನೆಯ ಹೊಚ್ಚಹೊಸ ಪ್ರಯೋಗವಾಗಿ ಗಮನ ಸೆಳೆಯುತ್ತದೆ. ಹತ್ತು ಬಿಡಿಬರಹಗಳ ಈ ಸಂಕಲನದ ವಸ್ತು ಜಾತ್ರೆ, ಹಬ್ಬ, ದೀಪ, ಏನೇ ಇರಲಿ, ಇಲ್ಲಿಯ ಅನುಭವಗಳ ಹಿಂದೆ ಮಿಡಿಯುವುದು ಸ್ತ್ರೀಮನಸ್ಸು. ಇಲ್ಲಿಯ ಆಗುಹೋಗುಗಳ ಸಾಕ್ಷೀಪ್ರಜ್ಞೆ ಸ್ತ್ರೀಯದು. ಅದು ಎಳೆಯ ಬಾಲಕಿಯಾಗಿ ಮಂಜತ್ತೆಯ ನೇತೃತ್ವದಲ್ಲಿ ಇತರ ಬಾಲಕಿಯರೊಂದಿಗೆ ಜಾತ್ರೆಯ ಬಣ್ಣ ಬೆಡಗು ರೂಪ ರುಚಿ ಗಂಧಗಳನ್ನು ಸವಿಯಲು ಹಂಬಲಿಸುವುದರಲ್ಲಿ, ವಿವಿಧ ಕಲಾಪಗಳನ್ನು ಒಳಮನಸ್ಸಿಗೆ ತಂದುಕೊಳ್ಳುವುದರಲ್ಲಿ, ಅನೇಕ ಪ್ರಶ್ನೆಗಳು ಹುಟ್ಟುತ್ತ ಸಾಯುತ್ತ ಸ್ತ್ರೀ ಬದುಕಿನ ಇತಿಮಿತಿಗಳ ಪರಿಚಯದ ಒಳಪ್ರವೇಶದಲ್ಲಿ, ಆರ್ದ್ರವಾದ ಆಪ್ತಧ್ವನಿಯಾಗಿ ಕೇಳಿಸುತ್ತದೆ.

ಈ ಕೃತಿಯಲ್ಲಿ ಲೌಕಿಕಕ್ಕೆ ಜೀವನ ಪ್ರೀತಿಗೆ ಹೆಚ್ಚಿನ ಒತ್ತು. ದೇವರು ಅಲೌಕಿಕವಾದರೆ ಜಾತ್ರೆ ಲೌಕಿಕ ಅಥವಾ ಇಲ್ಲಿ ಹಾಗೆ ಬೇರ್ಪಡಿಸಿ ನೋಡುವುದೇ ಸಾಧ್ಯವಿಲ್ಲವೇನೋ? ರತ್ರಣ ನೋಡುವ ಏಕೈಕ ಗುರಿಯುಳ್ಳ ಮಂಜತ್ತೆಯದು, ಅಲೌಕಿಕ ಆಸೆಯಾದರೆ ಜಾತ್ರೆಯ ಸಂತೆಯಿಂದ ಏನೆಲ್ಲ ಕೊಂಡುಕೊಳ್ಳುವ ಮಕ್ಕಳ ಕನಸು ಲೌಕಿಕದ್ದು. ಹಾಗೆಂದು ಮಂಜತ್ತೆಯೂ ಅಲೌಕಿಕಳೇನಲ್ಲ. ತಾನು ಮುಡಿಯಲಾಗದಿದ್ದರೂ ಸೇವಂತಿಗೆ, ಸೋಣೆ ಹೂಗಳ ದಂಡೆಗಳನ್ನು ಕಟ್ಟಿ ಬಾಲೆಯರಿಗೆ ಮುಡಿಸುವುದರಲ್ಲಿ, ದಾರಿಯಲ್ಲಿ ಎದುರಾಗುವ ಅವರಿವರ ಸುಖದುಃಖಗಳನ್ನು ವಿಚಾರಿಸುವುದರಲ್ಲಿ, ರಥಾರೋಹಣದ ಬಳಿಕ ಚೆನ್ನಾಗಿ ಸವಿಯುತ್ತ ಊಟಮಾಡುವುದರಲ್ಲಿ? ಹೀಗೆ ಆಕೆ ಲೌಕಿಕಳೇ ನಿಜ.

ಜಾತ್ರೆ, ದೀಪೋತ್ಸವ, ಹಬ್ಬ ಇತ್ಯಾದಿ ಸಂದರ್ಭಗಳಲ್ಲಿ ಮನುಷ್ಯಲೋಕದ ವ್ಯವಹಾರಗಳಲ್ಲಿ ಹೊಮ್ಮುವ ಸೌಂದರ್ಯವೇ ನಿಮಿತ್ತವಾಗಿ ಲೇಖಕಿಯನ್ನು ತಾತ್ವಿಕ ಚಿಂತನೆಗೆ ಹಚ್ಚುತ್ತದೆ. 'ದೊಡ್ಡ ಹಣೆಬೊಟ್ಟಿನ, ತುರುಬುಕಟ್ಟಿ ಮೇಲೆ ಮಲ್ಲಿಗೆ ಮುಡಿದ ಅಮ್ಮ, ದೀಪೋತ್ಸವಕ್ಕೆ ತಾನೇ ಒಂದು ದೀಪವಾಗಿ ಹೊರಟ ಅಮ್ಮ' ಎಂಬ ವರ್ಣನೆ (ಪುಟ 75) 'ಹಬ್ಬದ ಗುಲ್ಲು ಹಿರಿದ ರಾತ್ರಿ ರಸ್ತೆಯ ಮೇಲೆ ಬೇಂಡುವಾದ್ಯಗಳ ಮಂದ್ರದೊಂದಿಗೆ ಬೆಳಕು ಬಿಟ್ಟುಕೊಳ್ಳುತ್ತ ನಿಶ್ಶಬ್ದವೊಂದು ದಾಟಿ ಹೋಗುತ್ತಿದೆಯೇ?' ಎಂಬ ಮಾತು (ಪುಟ 82) 'ಕಿವಿಗೆ ಬೆರಳು ಕುತ್ತಿಕೊಂಡರೂ ಭೇದಿಸಿ ಒಳಗಿಳಿಯುತ್ತದೆ. ಕೇಳುತ್ತ ಇದ್ದರೆ ಹೊಟ್ಟೆಯೊಳಗಿನ ನೋವೊಂದನ್ನು ಕರುಳಿನ ಹಗ್ಗಕ್ಕೆ ಬಿಗಿದು ಬಲವಂತವಾಗಿ ಹೊರಗೆ ಎಳೆದೆಳೆದು ಸುರುಳಿ ಹಾಕಿದಂತೆ ಆಗುತ್ತಿದೆಯಲ್ಲ ಯಾಕೆ?' ಎಂಬ ಪ್ರಶ್ನೆ, (ಪುಟ 74) ಹೀಗೆ ಹಲವು ಉದಾಹರಣೆಗಳು ಸಿಗುತ್ತವೆ.

ಒಂದರ್ಥದಲ್ಲಿ ಇಡೀ ಕೃತಿಯೇ ಸಾಂಕೇತಿಕವಾಗಿದೆ. ಪುಗ್ಗಗಿಂತ ಗಿಣಿ: ಗಿಣಿಯ ಬದಲು ಪುಗ್ಗೆ ಒಂದನ್ನು ಆಯ್ದುಕೊಂಡರೆ ಆರಿಸದ ಇನ್ನೊಂದರ ಬಗ್ಗೆ ಜಿಡದ ಆಸೆ, ವ್ಯಾಮೋಹ, ಜೀವನದಲ್ಲಿ ಎದುರಾಗುವ ದ್ವಂದ್ವದ ಸಮಸ್ಯೆಯನ್ನು ಸಂಕೇತಿಸುತ್ತದೆ. ಜಾತ್ರೆಯಲ್ಲಿ 'ಹಾವಿನ ದೇಹ ಹುಡುಗಿಯ ಮುಖ' ನೋಡಲು ಹೋಗುವ ಗಂಡಸರು. ಅದು ಅದಮ್ಯ ಆಕರ್ಷಣೆಯ ವಸ್ತುವಾಗಿರುವುದು. ಈ ಕುರಿತಾಗಿ ಕೃತಿಯಲ್ಲಿ ಬರುವ ಕೆಲವು ಮಾತುಗಳು ಗಮನಾರ್ಹವಾಗಿವೆ. 'ಹೆಣ್ಣು ಜನ್ಮ ತಾಳಿದ್ದೆ ಕಾಮಕ್ಕಾಗಿ ಅಲ್ಲ. ಆಮೇಲೆ ಮಾತ್ರ ಪುರುಷಸಮಾಜ ಹಾಗೆ ನಡೆಸಿಕೊಂಡಿತು.' ಎಂಬ ಭಾವವನ್ನು ಅವು ಧ್ವನಿಸುತ್ತದೆ. ('ಹುಟ್ಟಿದ್ದೇ ಹಾಂಗಂಬ್ರಲೇ' ಎಂದು ಅದಕ್ಕುತ್ತರವಾಗಿ 'ಅಲ್ಲ ಅಂದ್ನಲೆ ಅಣ್ಣಯ್ಯ' – ಎಂಬ ಮಾತು ಬರುತ್ತದೆ ಪು.12). ಆದರೆ ಈ ಸಾಂಕೇತಿಕ ಅರ್ಥ ತಿಳಿಯಲೇಬೇಕೆಂಬ ಬಲವಂತವೇನಿಲ್ಲ. ಅಲ್ಲದಿದ್ದರೂ ಓದಿಸಿಕೊಂಡು ಹೋಗುತ್ತದೆ.

ಒಂದರಿಂದ ಏಳನೇ ಅಧ್ಯಾಯದವರೆಗೆ ಬರುವ ವಿವರಗಳನ್ನು ನೀಡುತ್ತಾ ಹೋಗುವ ಸಾಕ್ಷೀಪ್ರಜ್ಞೆ ಬಾಲಕಿಯದು. 'ಅಂಕೆಯಿಲ್ಲದ ಮಂಕಿಗಳು' ಎಂಬ ಅಧ್ಯಾಯದಲ್ಲಿ ಹದಿಹರಯಕ್ಕೆ ತೆರೆದುಕೊಳ್ಳುವ ಹುಡುಗಿಯರ ಭ್ರಮೆಗಳು– ಆತಂಕಗಳು, ಸಣ್ಣ ಸಣ್ಣ ಸ್ವಾರ್ಥ – ಬಿಗುಮಾನಗಳು, ಮುಗ್ಧ ಸಂತೋಷ–ಸಂಭ್ರಮಗಳು ಇವೆಲ್ಲವನ್ನು ಒಟ್ಟಾಗಿಸುವ ಪರಸ್ಪರ ಗೆಳೆತನದ, ಸ್ನೇಹತಂತು ಹೀಗೆ ಎರಡನೇ ಹಂತದ ಸ್ತ್ರೀಲೋಕದ ಮಾನಸಪ್ರಪಂಚದ ಪುಟ್ಟಮಾದರಿಯನ್ನು ಜಾತ್ರೆಯ ಆವರಣದಲ್ಲಿ ನೀಡುವ ಪ್ರಯತ್ನವಿದೆ. ಮುಂದೆ, ಹುಡುಗಿಯಾಗಿದ್ದವಳು ಮದುವೆಯಾಗಿ ಮತ್ತದೆ ಅಮ್ಮನಾಗಿ, ಮುದುಕ ಮೇಮಿಯವನೆದುರು ತನ್ನ ಬಾಲ್ಯದ ನೆನಪುಗಳೊಂದಿಗೆ, ಅದೇ 'ಚಣ್ಣಮ್ಮ' ನಾಗಿ ನಿಂತವಳಿಗೆ 'ಜಾತ್ರೆಯಲ್ಲಿ ಇವನನ್ನು ಕಳೆದುಕೊಳ್ಳುವುದೇ? ಯಾಕೆ ಎಲ್ಲರೂ ಮುದುಕರಾಗುತ್ತಾರೆ ಯಾಕೆ ಎಲ್ಲರೂ ಸಾಯುತ್ತಾರೆ?' ಎಂಬೆಲ್ಲ ಪ್ರಶ್ನೆಗಳು ಕಾಡುವುದು: ಆ ಅಮ್ಮನ ಮಕ್ಕಳೇ ಜಾತ್ರೆ ಸುತ್ತುತ್ತ ದೊಡ್ಡವರಾಗಿ, ಮೊಮ್ಮಕ್ಕಳು ಬಂದು ಅವೆ ಜಾತ್ರೆಯ ಆನಂದವನ್ನು ಸವಿಯುವುದು– ಈ ಎಲ್ಲ ಬೆಳವಣಿಗೆಗಳು ಕೃತಿಯಲ್ಲಿ ಬಹಳ ಶೀಘ್ರವಾಗಿ ಜರುಗುತ್ತವೆ. ಜಾತ್ರೆ ಜಾತ್ರೆಯೇ ಆಗಿರುವುದು ಬಾಲ್ಯದಲ್ಲಿ ತಾನೇ? ಆದ್ದರಿಂದಲೇ ಈ ಕೃತಿಯಲ್ಲಿ ಬಾಲ್ಯಕಾಲದ ಜಾತ್ರೆಯ ನೆನಪುಗಳಿಗೆ ಅಗ್ರಸ್ಥಾನ.

ಜಡೆಗೆ ಹಾಕುತ್ತಿದ್ದ ಬಾಳೆನಾರಿನಿಂದ ರಬ್ಬರ್ ಬೇಂಡ್‌ವರೆಗಿನ ವಿಕಾಸವನ್ನು ನಿಮಿತ್ತ ಮಾಡಿಕೊಂಡು ವಾಣಿಜ್ಯೀಕರಣ, ಉಪಭೋಗ ಸಂಸ್ಕೃತಿ, ಬಹುರಾಷ್ಟ್ರೀಯ ಕಂಪೆನಿ, ಬಳಕೆದಾರರ ಶಕ್ತಿ– ಇತ್ಯಾದಿ ಚಿಂತನೆಗಳನ್ನೊಳಗೊಂಡ 'ಲೆಕ್ಚರ್ ಬೇಬಿಯಕ್ಕನ ಭಾಷಣ– ಕ್ರಾಂತಿಯ ಹನಿ' ಅದರಷ್ಟಕ್ಕೆ ಸೊಗಸಾಗಿದ್ದರೂ ಒಟ್ಟು ಬರಹದಿಂದ ಬೇರೆಯೇ ನಿಂತು ಲಲಿತಪ್ರಬಂಧ ಮಾದರಿಯಲ್ಲಿ. 'ಲೆಕ್ಚರ್ ಬೇಬಿಯಕ್ಕ ಮಾಡಿದ ಭಾಷಣ' ಎಂಬ ತಂತ್ರವನ್ನು ಅಳವಡಿಸಿದರೂ ಅದು ಬೇರೆಯಾಗಿಯೇ ನಿಲ್ಲುತ್ತದೆ ಎಂಬುದಂತೂ ಸತ್ಯ.

ಕೃತಿಯ ಉಪಸಂಹಾರದಲ್ಲಿ ಚರಿತ್ರೆಯಲ್ಲಿ ಮಾಗಿದ ಮನಸ್ಸು ಎಳೆಯರಿಗೆ ಕಿವಿಮಾತು ಹೇಳುವುದು ಮಾರ್ಮಿಕವಾಗಿದೆ. 'ಈಗಂತೂ ನಿತ್ಯ ಜಾತ್ರೆ, ಜಾಗ್ರತೆ, ಜಗಳ ಮಾಡಬೇಡಿ. ಯಾರ ಮುಂದೂ ಸ್ಪರ್ಧೆಗಿರ್ದಗೆ ಹೋಗಬೇಡಿ. ದುಡ್ಡುಗಿಡ್ಡು ಜಾಗ್ರತೆ. ಕಳೆದು ಹೋಗಬೇಡಿ?..' ಇತ್ಯಾದಿ. 'ಜಾತ್ರೆ' ಮತ್ತು 'ಜಾಗ್ರತೆ' ಅಭಿನ್ನ ಪದಗಳಾಗಿ ಕಳೆದುಹೋಗದಂತೆ ನೀಡುವ ಕಳಕಳಿಯ ಈ ಎಚ್ಚರ ಮುಖ್ಯ ಆಶಯವಾಗಿ ತಾತ್ವಿಕ ಉದ್ದೇಶವನ್ನು ಪೂರೈಸುತ್ತದೆ.

ಹೆಣ್ಣಿನ ಬದುಕಿನಲ್ಲಿ ಎದುರಾಗುವ ವಿಧಿನಿಷೇಧಗಳನ್ನು ಕಟ್ಟಳೆ ರಿವಾಜುಗಳನ್ನು ಪ್ರಶ್ನಿಸುವ ಮನಸ್ಸು ಇಲ್ಲಿ ಇರುವಂತೆಯೇ ಅಂತಹ ಸ್ತ್ರೀಬದುಕಿನಲ್ಲೂ ಹೊಮ್ಮುವ ಸೌಂದರ್ಯ, ಆನಂದಗಳ ಬಗ್ಗೆ ಸ್ಪಂದಿಸುವ ಸೂಕ್ಷ್ಮತೆಯೂ ಇದೆ. ಕೃತಿಯೊಳಗೆ ಅದಕ್ಕೆ ಅಲ್ಲಲ್ಲಿ ಉದಾಹರಣೆಗಳಿವೆ.. ಆದ್ದರಿಂದಲೇ ಕೃತಿಯನ್ನು ಒಟ್ಟಾರೆಯಾಗಿ ಸ್ತ್ರೀಯಾತ್ಮಕತೆಯ (Feminity) ಅಭಿವ್ಯಕ್ತಿಯೆನ್ನಬಹುದು. ಕುಂದಗನ್ನಡದ ಸೊಗಡು ಜೀವಾಳವಾದ ಈ ಕೃತಿಯದು ಒಂದರ್ಥದಲ್ಲಿ ಸೀಮಿತ ಪ್ರಪಂಚ, ಸೀಮಿತ ಆವರಣ. ಆದರೆ ಈ ಸೀಮಿತ ಪ್ರಪಂಚವನ್ನು ಲೇಖಕಿ ಬಹಳ ಏಕಾಗ್ರತೆಯಿಂದ, ಪ್ರೀತಿಯಿಂದ ಪದರ ಪದರಗಳನ್ನು ಸ್ಪರ್ಶಿಸುತ್ತ, ಸ್ಪಂದಿಸುತ್ತ ಅನನ್ಯತೆಯನ್ನು ಮೆರೆದಿದ್ದಾರೆ.



# ಕಿರಾತ ಕಡ್ಡಿಯ ಕಷಾಯ

+ ಜಯಂತ ಕಾಯ್ಕಿಣಿ

ಚೀನೀ ದೇಶದ ಚಿತ್ರಕಲೆಗಾರರ ಕೃತಿಗಳನ್ನು ನೋಡಿದರೆ ಒಂದು ಅಂಶ ನಿಚ್ಚಳವಾಗಿ ಕಾಣುತ್ತದೆ. ಅಲ್ಲಿಯ ಪ್ರತಿಯೊಬ್ಬ ಕಲಾವಿದನ ಕೃತಿಗಳಲ್ಲೂ ಬಿದಿರಿನ ನಾನಾ ಬಿಂಬಗಳು ಸಿಗುತ್ತವೆ. ಒಂದೇ ಬಿದಿರನ್ನು ಅವರು ನಾನಾ ಬೆಳಕಲ್ಲಿ ಕೋನದಲ್ಲಿ ಚಿತ್ರಿಸುತ್ತಾರೆ. ಯಾಕೆ ಬಿದಿರು ಅವರನ್ನು ಹೀಗೆ ಸ್ಫೂರ್ತಿದಾಯಕವಾಗಿ ಕಾಡುತ್ತದೆ ಎಂದು ನಾನೊಮ್ಮೆ ಒಬ್ಬ ಚೀನೀ ಲೇಖಕನನ್ನು ಕೇಳಿದಾಗ ಅವರೆಂದದ್ದು ಹೀಗಿತ್ತು.- 'ಎಂಥ ಹೆಮ್ಮರಗಳೂ ಬಿರುಗಾಳಿ ಬಂದಾಗ ಉರುಳುತ್ತವೆ. ಆದರೆ ಬಿದಿರು ಬೀಳುವುದಿಲ್ಲ. ಏಕೆಂದರೆ ಅದು ಏಕಾಂಗಿಯಾಗಿರುವುದಿಲ್ಲ. ಕುಟುಂಬದ ಮೆಳೆಯಲ್ಲಿರುತ್ತದೆ. ವ್ಯಕ್ತಿಗತವಾಗಿ ಸಪೂರವಾಗಿದ್ದರೂ ಎಲ್ಲವೂ ಒಟ್ಟಾಗಿ ಒಂದಕ್ಕೊಂದು ಆತುಕೊಂಡಿರುವುದರಿಂದ ಎಂಥ ಬಿರುಗಾಳಿಯನ್ನೂ ಎದುರಿಸಿ ನೇರವಾಗಿ ನಿಲ್ಲುವುದು ಅವಕ್ಕೆ ಸಾಧ್ಯ. ನಾವು ಚೀನಿಯರು ನಾನಾ ಬಗೆಯ ಭೌಗೋಲಿಕ, ಐತಿಹಾಸಿಕ, ರಾಜಕೀಯ ಬಿರುಗಾಳಿಗೆ ತುತ್ತಾದವರು. ಆದರೆ ಒಟ್ಟಿಗಿರುವುದರಿಂದಲೇ ಬಚಾವಾಗಿ ಬಂದಿದ್ದೇವೆ. ಬಿದಿರಿನ ಕೌಟುಂಬಿಕತೆಯೇ ನಮಗೊಂದು ಜೀವನತತ್ತ್ವ. ಹೀಗಾಗಿ ಬಿದಿರನ್ನು ಬಿಡಿಸುವುದು ನಮಗೊಂಥರ ಉಪಾಸನೆ ಇದ್ದಂತೆ.' ವೈದೇಹಿಯವರ ಕಥನಲೋಕದ ಬಗ್ಗೂ ನನಗೆ ಈ ರೂಪಕವೇ ಮನಸ್ಸಿಗೆ ಬರುತ್ತಿದೆ. ಅವರ ಅಂತಃಕರಣದ ಅಲೆಗಳಲ್ಲಿ ತೇಲುವ, ಮುಳುಗುವ, ಈಸುವ ಎಲ್ಲ ಒಂಟಿ ಬಿದಿರಿನಂಥ ಜೀವಿಗಳನ್ನು ಹಿಡಿದಿಟ್ಟಿರುವುದು ದಟ್ಟವಾದ ಅಷ್ಟೇ ದಿಟ್ಟವಾದ ಕೌಟುಂಬಿಕತೆಯ ಮೆಳೆ. ದೈನಿಕತೆಯ ಅಸ್ಪಷ್ಟ ಇಂಚಿನಲ್ಲೇ ಅವು ಚಿಗುರುವುದು ಬಿಸಿಲಿನ ಕಡೆಗೆ, ಮಾತಾಡುವುದು ಬೈ ಚಾನ್ಸ್ ಬಂದು ಕೂತ ಅನಾಮಿಕ ಪಕ್ಕಿಗಳ ಜೊತೆಗೆ. ಮೆಳೆಯಿಂದ ಬೇರ್ಪಡಿಸಲ್ಪಟ್ಟಾಗ ಅವು ಚಪ್ಪರದ ದಬ್ಬೆಯಾಗುತ್ತವೆ, ತಡಿಕೆಯಾಗುತ್ತವೆ, ಏಣಿಯಾಗುತ್ತವೆ. ಇವುಗಳ ಕಥನವೇ ವೈದೇಹಿ ನಡೆಸಿಕೊಂಡು ಬಂದ ಉಪಾಸನೆ.

ಕಥೆ, ನಾಟಕ, ಪ್ರಬಂಧ, ಕವಿತೆ, ಉಕ್ತಲೇಖ ಹೀಗೆ ಅವರು ಯಾವ ಪ್ರಕಾರದಲ್ಲಿ ಬರೆದರೂ ಅದಕ್ಕೆ ಧ್ವನಿ ಪ್ರಾಪ್ತವಾಗುವುದು ಕಥನದಿಂದಲೇ. ಹಲವು ವರ್ಷಗಳ ಹಿಂದೆ ಅವರು ಪ್ರಕಟಿಸಿದ್ದ 'ಜಾತ್ರೆ' ಎಂಬ ನೆನಪಿನ ಚಿತ್ರಗಳ ಪುಟ್ಟ ಪುಸ್ತಕ ನನಗೆ ತುಂಬಾ

ಮೆಚ್ಚು. ಏಕೆಂದರೆ ಇದು ಇಡೀ ವೈದೇಹಿ ಕಥನಾವರಣದ 'ಕಂಪನ ಕೇಂದ್ರ' (epicentre)ದಂತಿದೆ. ಎಲ್ಲ ಅಲೆಗಳ ಗಂಗೋತ್ರಿ ಇದು. ಅವರ ಬೇರೆ ಬೇರೆ ಕಥೆಗಳಲ್ಲಿ ಬರುವ ಎಲ್ಲ ಪಾತ್ರಗಳೂ ತಮ್ಮ ಸೂಕ್ಷ್ಮ ಚಹರೆಗಳೊಂದಿಗೆ ಇಲ್ಲಿ 'ಮಿಣುಕು'ತ್ತಾರೆ. ಹೆಸರು ಬದಲಾಗಿರಬಹುದು, ಮನೆಗಳು ಬದಲಾಗಿರಬಹುದು. ಹಿಂದೆ ನಾವು ಶಾಲೆಯಲ್ಲಿ ನಾಟಕ ಆಡುವಾಗ ಮೊದಲು 'ಪಾತ್ರ ಪರಿಚಯ' ಅಂತೊಂದು ನಮೂನೆ ಇತ್ತು. ಒಂದೊಂದಾಗಿ ಪಾತ್ರ ರಂಗಕ್ಕೆ ಬಂದು ಒಂದು ಡೈಲಾಗ್ ಅಂದು ಹೋಗುತ್ತಿದ್ದವು. ಹಾಗೆ ಸೀತೆ, ವೆಂಕ, ಕೊರಾತಿ, ಕಾವೇರಮ್ಮ, ಗಿರಿಜಕ್ಕ, ಚಂದು, ಕಮಲ, ನಾಗಿ, ಕೃಷ್ಣಿ, ರುಕ್ಕು, ಪಲ್ಲಕ್ಕಿ ಹೊತ್ತವರು, ಪ್ರಸಾದ ಕೊಟ್ಟವರು ಇವರೆಲ್ಲ 'ಇಲ್ ಕಾಣಿ' ಅಂತ ಬಾಯಿಬಿಟ್ಟು ಸಹ ಹೇಳದೆ, ಉತ್ಸವ ಮುಗಿದ ಮೇಲಿನ ಕುಂದೇಶ್ವರದ ಬಾಡಿದ ಹಣತೆಗಳಂತೆ ನೋಡಿ ಮರೆಯಾಗುತ್ತಾರೆ. ಮತ್ತೆ ಇವರನ್ನು ನಾವು ನೋಡುವುದು ಬೇರೆ ಕಥನದಲ್ಲಿ ಪುಟ್ಟಮ್ಮತ್ತೆಯಾಗಿ, ಅಮ್ಮಚ್ಚಿಯಾಗಿ, ಅಕ್ಕುವಾಗಿ, ಸೌಗಂಧಿಯಾಗಿ, ಲಿಲ್ಲೀಬಾಯಿಯಾಗಿ, ಶಕುಂತಲೆಯಾಗಿ... ನಮುನಮೂನಿ ಬೆಳಕಿನಲ್ಲಿ, ಸಂದರ್ಭಗಳಲ್ಲಿ. 'ಜೈತಲೆ'ಯಂಥ ರಸ್ತೆ ಸಹ ಶುರುವಾದದ್ದೇ ಇಲ್ಲಿ! ಇಲ್ಲಿ ಸುರುಳಿ ಸುತ್ತಿಟ್ಟ ಚಾಪೆಗಳೇ, ಮುಂದೆ ಗುಲಾಬಿ ಟಾಕೀಸಿನಲ್ಲಿ ರೀಲುಗಳಾಗಿ ಬಿಚ್ಚಿಕೊಳ್ಳುತ್ತವೆ. 'ಜಾತ್ರೆ' ವೈದೇಹಿ ಲೋಕದ ಒಂದು ಗ್ರೂಪ್ ಫೋಟೋ. ಕ್ಲೋಸ್ ಅಪ್‌ಗೆ ಹೋದರೆ ಅವು ಕಥೆಗಳೆಡೆಗೆ ಚಲಿಸುತ್ತವೆ.

ವೈದೇಹಿಯವರ ಕಥನಕಲೆಯಲ್ಲಿ ನನಗೆ ಇಷ್ಟವಾಗುವ ಅಂಶ ಅವರ ಸೂಕ್ಷ್ಮ 'ಮೈಮಿಂಗ್' ಅಥವ ಅಣಕ ಪ್ರತಿಭೆ. ಅಂದರೆ ಒಂದು ಪ್ರಸಂಗ ನಡೆದಾಗ ಅಲ್ಲಿರುವ ಇತರ ಪಾತ್ರಗಳನ್ನೂ ಅವರು ನಿರೂಪಣೆಯಲ್ಲಿ tonality ಮೂಲಕ ತರುತ್ತಾರೆ. ಒಬ್ಬನೇ ವ್ಯಕ್ತಿ ಅನೇಕ ವ್ಯಕ್ತಿಗಳ ಅಣಕವನ್ನು ಮಾಡುವಂತೆ ಒಂದು ವಿಶಿಷ್ಟವಾದ ಆವರಣ ಅಲ್ಲಿ ಸೃಷ್ಟಿ ಆಗುತ್ತದೆ. ಇದಕ್ಕೆ ಅವರು ಆಗಾಗ ಆ ಅನ್ಯದನಿಯನ್ನು ಕಂಸ (bracket)ದಲ್ಲಿ ಬಳಸುತ್ತಾರೆ. ಇದು ವಿಶೇಷ ಏಕೆಂದರೆ ಕಂಸದಲ್ಲಿರುವ ಮಾತು ನಡೆಯುತ್ತಿರುವ ಮಾತಿನ ಕಾಲೆಳೆಯುವಂತಿರುತ್ತದೆ: ಅಥವಾ ಅದಕ್ಕೆ ವ್ಯತಿರಿಕ್ತವಾದ ಧ್ವನಿಯನ್ನು ಹೊರಡಿಸುವಂತಿರುತ್ತದೆ. ಈ 'ಕಂಸ'ವನ್ನು ಕ್ವಚಿತ್ತಾಗಿ ಆದರೆ ಪರಿಣಾಮಕಾರಿಯಾಗಿ ಬಳಸುತ್ತಾರೆ. ಈ 'ಕಂಸ' ಮಾತು, ಒಮ್ಮೊಮ್ಮೆ ಅನ್ಯರ ದನಿಯಾದರೆ ಇನ್ನೊಮ್ಮೆ ಮಾತಾಡುತ್ತಿರುವ ವ್ಯಕ್ತಿಯ 'ಒಳದನಿ' ಅಥವ 'ದಮನಿತ ದನಿ'ಯೂ ಆಗಿರುತ್ತದೆ. ಒಮ್ಮೆ ಲೇಖಕಿಯ ದನಿಯೂ ಆಗುತ್ತದೆ. ಉದಾಹರಣೆಗೆ,

**ತನ್ನಿ, ಎಷ್ಟು ಬೇಕೋ ಅಷ್ಟು (ಅಷ್ಟೇ) ತನ್ನಿ.**

**ದೇವರು ಮೇಲೆ ಬಂತೆ? (ದೇವರಿಗೇಕೆ ಬಂತು ಹೋಯಿತು ಅನ್ನುತ್ತಾರೆ?)**

**ಬಿದ್ದು ಕೈಕಾಲು ಮುರಿದರೆ ಕಡೆಗೆ ಮದುವೆ ಮಾಡುವುದು ಬೇಡವೆ? (ಬೇಡ ಮಾಡಂತ ಹೇಳಿದವರು ಯಾರು?)**

ಹಿಂದೆ ಪಲ್ಲಕ್ಕಿಯಲ್ಲಿ ಸುಖವಾಗಿ ಒರಗಿದ ಪುಟ್ಟದೇವರು (ದೇವರೋ ಅದು ಗೊಂಬೆಯೋ?)

ವೆಲ್ ಕಮ್ (ಗಂಟಲಲ್ಲೇ ನಗೆ )

ಕಣ್ವಾಶ್ರಮದ ಹಾದಿಯನ್ನು ಸಂಪ್ರದಾಯದ ಕೈ ಅಳಿಸಿ ಹಾಕಿತ್ತು (ಅಳಿಸಿರದಿದ್ದರೂ ಆ ಹಾದಿಯನ್ನು ನಾ ಮತ್ತೆ ತುಳಿವಂಥವಳಲ್ಲ.)

ಪರಸ್ಪರ ಅನಿವಾರ್ಯವಾಗುವವರೆಗೆ (ಅದು ಎಂದಿಗೂ ಸಾಧ್ಯವಿಲ್ಲದ ಮಾತಾಗಿರಬಹುದು) ಕೂಡುವುದು ತಪ್ಪು ಎನಿಸಿತು.

ನೀನೇ ಅವಳಿಗೆ ಅಪ್ಪ ಅಮ್ಮ ಎಲ್ಲಾ. . . (ಅಪ್ಪಾ ಇದು ಅತಿಯಾಯಿತು.)

ಇದು ಖಂಡಿತ ನಾಟಕದ 'ನಾಟಕೀಯತೆ' ಅಲ್ಲ. ಆದರೆ ಒಂದು ಪ್ರಸಂಗದ ನಾಟಕೀಯತೆಯನ್ನು ಕಥನದಲ್ಲೇ ಮನಗಾಣುವ ಬಗೆ ಏಕೆಂದರೆ ನಾಟಕದಲ್ಲಿ 'ಪಾತ್ರ ನಿರ್ವಹಣೆ' ನಡೆಯುತ್ತದೆ. ಇಲ್ಲಿ ಅದು ತಾದಾತ್ಮ್ಯದ ಮೈಮಿಂಗ್ ಆಗುತ್ತದೆ. ಒಂದು ಕಥೆಯಲ್ಲಿ ಸಂಭಾಷಣೆ ಹೇಗಿರಬೇಕು ಎಷ್ಟಿರಬೇಕು ಎಂಬುದರ ಬಗ್ಗೆ ಕಥೆ ಬರೆಯುವಾಗ ಆಗಾಗ ತುಸು ಗೊಂದಲಗೊಳ್ಳುವ ನನಗೆ ಶಾಂತಿನಾಥ ದೇಸಾಯಿ ಅವರ ರೀತಿ ತುಂಬ ಆಪ್ತ. ಅವರ ಕಥೆ ಕಾದಂಬರಿಗಳಲ್ಲಿ ಸಂಭಾಷಣೆಗಳು ಅತ್ಯಂತ ಸಹಜವಾಗಿ ಪುಟಗಟ್ಟಲೆ ಬಂದು ಮಾಯವಾಗುತ್ತವೆ. ಇವನು ಹೇಳಿದನು ಅದಕ್ಕೆ ಅವನು ಹಾಗೆ ಹೇಳಿದನು– ಅಂತೆಲ್ಲಾ ಇರುವುದೇ ಇಲ್ಲ. ಆಭಾಸವಾಗದ ರೀತಿಯಲ್ಲಿ ಕೃತಿಯ ಸೌಷ್ಟವದಲ್ಲಿ ಮೂಡುವ ಸಂಭಾಷಣೆಗಳು ಅವು. ವೈದೇಹಿ ಅವರ ಕಥನದಲ್ಲಿ ಸಂಭಾಷಣೆ ಬರುವ ರೀತಿ ಕೂಡ ಸಹಜವಾಗಿದೆ. ಅವರ 'ಮಲ್ಲಿನಾಥನ ಧ್ಯಾನ'ದ ಪ್ರಬಂಧಗಳೂ ಕಥನದ ಸೌಷ್ಟವವನ್ನೇ ವಿಸ್ತರಿಸಿದಂಥವು. ಅಲ್ಲೂ ಸಂಭಾಷಣೆ, ಸ್ವಗತಗಳ ಆಪ್ತ ಜುಗಲಬಂದಿ ಉಂಟು. ಎದುರಿರುವ ವ್ಯಕ್ತಿಗಳನ್ನು ಚಿತ್ರವತ್ತಾಗಿ ಹುಬೇಹೂಬು ಕಟ್ಟಿಕೊಡುತ್ತಿರುವಾಗಲೇ ತಟಕ್ಕನೆ ಒಂದು ಪಾತ್ರದ ದನಿಯಾಗಿಬಿಡುವುದು! ಇವೆಲ್ಲ ಕಟ್ಟುವಂಥದಲ್ಲ, ಕಳಕಳಿಯ ತಾದಾತ್ಮ್ಯದಿಂದಲೇ ಆಗಿಬಿಡುವಂಥದು. ಕಿರಾತ ಕಡ್ಡಿಯ ಕಷಾಯದಂತೆ. 'ಹಾಡೆಂದರೇನು ಕಾಗದದ ಕುಸುಮವೆ?'



# ಜಾತ್ರೆ

✦ ವಸುಧೇಂದ್ರ

ಕಣ್ಣಿಗೆ ಕಟ್ಟುವಂತೆ ಗದ್ಯವನ್ನು ಬರೆಯುವುದು ಸುಲಭ. ಆದರೆ ಕಿವಿಗೆ ಕೇಳುವಂತೆ ಬರೆಯುವುದು ಕಷ್ಟ. ಪದ್ಯಕ್ಕೆ ಛಂದಸ್ಸಿನಿಂದ ದಕ್ಕುವ ಈ ಗುಣ, ಗದ್ಯಕ್ಕೆ ಅಷ್ಟು ಸುಲಭವಾಗಿ ಸಿಕ್ಕುವುದಿಲ್ಲ. ಅದಕ್ಕೆ ಒಂದು ನಿರ್ದಿಷ್ಟ ಲಯವನ್ನು ನಿರೂಪಣೆಯಲ್ಲಿ ನೀಡಬೇಕಾಗುತ್ತದೆ. ಪದದ ಆಯ್ಕೆ, ವಾಕ್ಯರಚನೆ, ಭಾವ ಪ್ರವಾಹ ಎಲ್ಲವನ್ನೂ ಕೈಹಿಡಿದು ನಡೆಸಬೇಕಾಗುತ್ತದೆ. ಭಾಷೆಯೆನ್ನುವುದು ಇಲ್ಲಿ ಕೇವಲ ಅರ್ಥದ ಆವರಣಕ್ಕೆ ಸಿಕ್ಕು ಜೀಳುವುದಿಲ್ಲ. ಅಂತಹ ಲಯದ ಬರವಣಿಗೆ ವೈದೇಹಿ ಅವರ 'ಜಾತ್ರೆ' ಸಂಕಲನದ ಲೇಖನಗಳಿಗೆ ದಕ್ಕಿದೆ. ಓದುಗನು ಆ ಲಯವನ್ನು ಗುರುತಿಸಿಕೊಂಡರೆ ಸಾಕು, ನಾದತರಂಗಗಳು ಕಿವಿಯಲ್ಲಿ ಝೇಂಕರಿಸಲು ತೊಡಗುತ್ತವೆ. ಆ ನಾದದ ಆವರಿಕೆ ಹೇಗಿರುತ್ತದೆಂದರೆ, ಅಪರಿಚಿತ ಕುಂದಗನ್ನಡವನ್ನು ಅವರು ಲೇಖನದುದ್ದಕ್ಕೂ ಬಳಸಿದರೂ ಅದು ನಮಗೆ ಸುಲಭವಾಗಿ ಅರ್ಥವಾಗುತ್ತಾ ಹೋಗುತ್ತದೆ. ಅದಕ್ಕಾಗಿ ಪುಸ್ತಕದ ಕೊನೆಯಲ್ಲಿ ಕೊಟ್ಟಿರುವ 'ಪದ-ಅರ್ಥ' ನೋಡುವ ಅವಶ್ಯಕತೆ ಇರುವುದಿಲ್ಲ. ಭಾವ ಸಿಕ್ಕ ಮೇಲೆ ಭಾಷೆಗೆ ಹೆಚ್ಚಿನ ಕೆಲಸವೇನೂ ಇರುವುದಿಲ್ಲ. 'ತಟ್ಟಿರಾಯ ಹಾಸ್ಗೆ ವಾಸ್ಲಿ ಹೀಸ್ಗೆ ವಾಸ್ಲಿ ಸುತ್ತ ತಿರುಗುತ್ತ ಹೆಜ್ಜೆ ಕುಣಿಯುತ್ತ ಹಿಂದಕ್ಕೆ ತೂಗಿ ಮುಂದಕ್ಕೆ ಬಾಗಿ ನಿಂತಲ್ಲೇ ಗಿರ್ರನೆ...' ಎನ್ನುವಾಗ ತಟ್ಟಿರಾಯನ ಹೆಜ್ಜೆ ಕುಣಿತದ ಸದ್ದು ನಮ್ಮ ಕಿವಿಯನ್ನು ಆವರಿಸುತ್ತದೆ. ಅವರ ಮೊದಲ ಪ್ರಬಂಧದ ಶೀರ್ಷಿಕೆಯಲ್ಲಿಯೇ ಗುರುತಿಸಿದಂತೆ ಈ ಪ್ರಬಂಧಗಳು ಜಾತ್ರೆಯ ಆನಂದ ಮತ್ತು ಮೋಹಕತೆಯನ್ನು ಮಾತ್ರ ಓದುಗನಿಗೆ ದಾಟಿಸುವುದಿಲ್ಲ; ಪರಿಮಳವನ್ನೂ ಆಸ್ವಾದಿಸುವಂತೆ ಮಾಡುತ್ತವೆ. ಪಂಚೇಂದ್ರಿಯಗಳಿಗೂ ಅನುಭವವಾಗುವಂತೆ ಗದ್ಯವನ್ನು ಕಟ್ಟಿ ಕೊಡುವುದು ಸಾಮಾನ್ಯರಿಗೆ ಸಾಧ್ಯವಾಗುವಂತಹದ್ದಲ್ಲ.

ಪುಟ್ಟಿ ಮಗುವಿನ ಸಾಕ್ಷಿಯಲ್ಲಿ ಈ ಕಥನಗಳನ್ನು ಕಟ್ಟಿಕೊಟ್ಟಿದ್ದರೂ ಲೇಖಕಿ ಇಲ್ಲಿ ಹಲವಾರು ವಿಶೇಷ ರೂಪಗಳನ್ನು ಧರಿಸುತ್ತಾರೆ. 'ಕೆಲಸದ ಚಂದುವಿನ ಗಂಡನನ್ನು, ಒಂದು ಸಲ ಜಾತ್ರೆಯಲ್ಲಿ ಒಂದು ತಟ್ಟಿರಾಯ ತಿಂದು ಹಾಕಿದ್ದು ಅಂತೇ!' ಎನ್ನುವಾಗ

ಅಪ್ಪಟ ಮಗುವಾಗುವ ಲೇಖಕಿ. 'ಕಣ್ಣು ಮುಚ್ಚಿದರೆ ಕಾಣುವ ದೇವರು ಕಣ್ಣೆದುರಿನ ಮೂರ್ತಿಯಂತೆ ಇರುವುದೇ ಇಲ್ಲ' ಎನ್ನುವಾಗ ಪ್ರಬುದ್ಧ ದಾರ್ಶನಿಕರಾಗುತ್ತಾರೆ. 'ಹೆಂಗಸರು ಒಂದು ಸಣ್ಣ ವಸ್ತುವನ್ನು ಬೇಡ ಎಂದರೆ ಸಾಕು, ದುಡ್ಡಿನ ಕಟ್ಟಿದ ಕಟ್ಟಡಗಳೇ ಉರುಳುತ್ತವೆ!' ಎನ್ನುವಾಗ ವಿಶಿಷ್ಟ ಅರ್ಥಶಾಸ್ತ್ರಜ್ಞೆಯಾಗುವ ಲೇಖಕಿ, 'ಓಡುತ್ತದೆ ಮತ್ತು ನಡೆಯುತ್ತದೆ ಎನ್ನುವುದರ ನಡುವಿನ ಶಬ್ದವುಂಟೋ?... ಎಲ್ಲುಂಟು?' ಎನ್ನುವಾಗ ಶುದ್ಧ ಕನ್ನಡದ ಕವಯತ್ರಿ ಆಗಿಬಿಡುತ್ತಾರೆ. ಬೇರೆ ಬೇರೆ ಅವತಾರಗಳನ್ನು ತಾಳುವ ಕಾರಣದಿಂದಲೇ ಇಲ್ಲಿಯ ನಿರೂಪಕಿಗೆ ಹೆಸರು ಮತ್ತು ವಯಸ್ಸಿನ ಬಂಧನವಿಲ್ಲ.

ಸಾಮಾನ್ಯವೆನ್ನಿಸುವ ವಾಕ್ಯಗಳು ವಿಶೇಷ ಅರ್ಥವನ್ನು ಹೊರಡಿಸುವಂತೆ ಮಾಡುವುದು ಈ ಬರವಣಿಗೆಯ ಘನತೆಯನ್ನು ಹೆಚ್ಚಿಸಿದೆ. ಜಾತ್ರೆಯಲ್ಲಿ ಪುಗ್ಗೆ ಮಾರುವಾತನ ಕುರಿತು ಆಡುವಾಗ 'ಮಗುವಿನಂತೆ ಆಡಿದರೂ ಆತ ಮಗುವಲ್ಲ' ಎನ್ನುವಾಗ ಮಾತು ತನ್ನ ನೇರ ಅರ್ಥವನ್ನು ಮೀರಿ ಹೊಸದನ್ನು ಹೊಳೆಯಿಸುತ್ತದೆ. 'ಗಿರಿಗಿಟಿ ಹಿಡಿದು ಓಡುವವರೆಲ್ಲ ಹುಡುಗರು. ನಿಂತು ನೋಡಿ ಕೈತಟ್ಟಿ ಕುಣಿಯುವವರೆಲ್ಲ ಹುಡುಗಿಯರು' ಎನ್ನುವ ಮಾತು ದೃಶ್ಯದ ವಿವರಣೆಯನ್ನು ಮೀರಿದ್ದು ಎನ್ನುವುದು ಓದುಗನಿಗೆ ಗ್ರಹಿಕೆಯಾಗುತ್ತದೆ. 'ನಾಳೆಯೆಂದರೆ ಏನಂತ ಮಾಡಿದಿರಿ. ನಿನ್ನೆಯೇ. ಆದರೆ ನಿನ್ನೆಯಲ್ಲ!' ಎನ್ನುವ ಮಾತು ಬಹುಸಹಜವಾಗಿ ಅಧ್ಯಾತ್ಮದ ಗಂಭೀರತೆಯನ್ನು ಓದುಗನಿಗೆ ಹುಚ್ಚಿನ ಬಿಗಿಯಿಲ್ಲದೆ ದಾಟಿಸಿ ಬಿಡುತ್ತದೆ.

ಇವರ ಬರವಣಿಗೆಯ ಉದ್ದಕ್ಕೂ ಸಂಭ್ರಮ, ಉತ್ಸಾಹ ಮತ್ತು ಸಂತೋಷಗಳು ಉಕ್ಕಿ ಹರಿಯುತ್ತವೆ. ಹಾಗಂತ ಇದು ಬದುಕಿನ ಸಿಹಿಯನ್ನು ಮಾತ್ರ ಮೊಗೆದು ಕೊಡುವ ರಮ್ಯಪ್ರಣಯ ಗೀತೆಯಲ್ಲ. ಪುಟ್ಟ ಹುಡುಗಿಯೊಬ್ಬಳು ಜಡೆಗೊಂದರಂತೆ ಹೂವಿನ ದಂಡೆ ಕಟ್ಟೋಣ ಎಂದು ಉದ್ಗರಿಸಿದಾಗ, ವಿಧವೆ ಮಂಜತ್ತೆ ತನ್ನ ಬೋಳು ಮಂಡೆಯನ್ನು ತೋರಿಸಿ 'ನನಗೆ ಜಡೆಯೇ ಇಲ್ಲವಲ್ಲ' ಎಂದು ನಗುವಾಗಲೂ ನೋವಿನ ಮುಳ್ಳು ನಮ್ಮ ಹೃದಯವನ್ನು ಚುಚ್ಚುತ್ತದೆ. ಇದೇ ಮಂಜತ್ತೆ ಜಾತ್ರೆಯಲ್ಲಿ ಕಪ್ಪು ಪಟ್ಟೆನೂಲನ್ನು ತೆಗೆದುಕೊಂಡ ಕಾರಣವನ್ನು ಮಕ್ಕಳು ಕೇಳಿದಾಗ 'ನಾನು ನಿಮ್ಮಂಗ್ ಚಡ್ಡಿಗಿಡ್ಡಿ ಹಾಕ್ಕಂತೆ ಅಂತೆಳಿ ಮಾಡ್ರಿಯ?' ಎಂದು ನಗುನಗುತ್ತಲೇ ಹೇಳಿದರೂ ಅದರ ಹಿಂದಿನ ವೇದನೆ ನಮಗೆ ತಟ್ಟದಿರದು.

ಬರೀ ಎಪ್ಪತ್ತು ಪುಟದ ಈ ಪುಟ್ಟ ಪುಸ್ತಕ ಹಳ್ಳಿಯೊಂದರ ಬದುಕಿನ ಬಹುತೇಕ ಬಣ್ಣಗಳ ಕೌದಿಯನ್ನು ಹೆಣೆದು ಕೊಡುತ್ತದೆ. ಜಾತಿ, ಲಿಂಗ, ಮೇಲು-ಕೀಳು, ಮೌಢ್ಯ, ಜಾಣತನ, ಬಡತನ, ರಾಜಕೀಯ ಆಯಾಮಗಳನ್ನೆಲ್ಲಾ ಸ್ಪರ್ಶಿಸುವ ಕ್ರಮ ಅನನ್ಯವಾದದ್ದು. ಪುಟ್ಟ ಹಳ್ಳಿಯೊಂದರ ಸಂಗತಿಯನ್ನು ನಿರೂಪಿಸುತ್ತಲೇ ಇಡೀ ಜಗತ್ತಿನ ಚಹರೆಯನ್ನು ಕಟ್ಟಿಕೊಡುವ ಸಾಂದ್ರತೆ ಈ ಬರವಣಿಗೆಗೆ ಸಿದ್ಧಿಸಿದೆ. ಬಳೆಗಾರ್ತಿ ಸೇಸಿ, ರಾಧಚಿಕ್ಕಿ,

ಲೆಕ್ಚರರ್ ಬೇಬಿಯಕ್ಕ, 'ರತ್ತಾಣ'ದ ಮಂಜತ್ತೆ? ಒಂದೇ ಎರಡೇ... ಹತ್ತಾರು ಜೀವಗಳು ತಮ್ಮ ಸ್ಥಿತಿ-ಗತಿಗಳ ಮೂಲಕ ಮನುಷ್ಯ ನಿರ್ಮಿತ ಎಲ್ಲ ಗಡಿಗಳನ್ನೂ ದಾಟಿ ಬದುಕಿನ ಆದಿಮ ಚಿತ್ರವನ್ನು ತೋರಿಸುತ್ತವೆ. ಎಲ್ಲಿಯೋ ಒಂದು ಘಟ್ಟದಲ್ಲಿ ಈ ಪ್ರಬಂಧಗಳು ಬಹು ಸೂಕ್ಷ್ಮ 'ಸಮಾಜಶಾಸ್ತ್ರಜ್ಞೆಯ ಟಿಪ್ಪಣಿಗಳು' ಆಗಿ ಗೋಚರಿಸುತ್ತವೆ.

ತನ್ನೂರಿನ ಬದುಕಿನ ಸಂಭ್ರಮವನ್ನು ಕಂಡು ಸಂತೋಷ ಪಟ್ಟರೂ ಈ ಬರವಣಿಗೆಗೆ ಆತ್ಮರತಿಯಿಲ್ಲ. 'ಉಡುಪಿ ಕಡೆಯ ಜಾತ್ರೆ ಉಡುಪಿಯವರಿಗೆ, ನಿಮ್ಮ ಕಡೆಯದು ನಿಮಗೆ' ಎನ್ನುವಾಗ ಬಹುತ್ವವನ್ನು ಗೌರವಿಸುವ ವಿನಯ ಕಾಣುತ್ತದೆ. ಎಲ್ಲಿಯೂ ಅಹಂಕಾರವಿಲ್ಲದೆ ಕಥನ ಪ್ರಸ್ತುತವಾಗುವುದರಿಂದ ಇದು ನಮ್ಮೆಲ್ಲರ ಕತೆಯೂ ಆಗುತ್ತದೆ. ಕೋಟೇಶ್ವರದ ಜಾತ್ರೆಯ ತಟ್ಟಿರಾಯನ ಕುಣಿತವನ್ನು ಕಂಡ ಹಾಗೆಯೇ ಹಂಪಿಯ ಪಂಪಾಪತಿಯ ನಂದಿಕೋಲಿನ ಕುಣಿತವನ್ನು ಕಂಡು ಸಂಭ್ರಮಿಸುವ ಗುಣ ಸಿದ್ಧಿಸಿಕೊಂಡ ಲೇಖಕರ ಯಾವ ಬರವಣಿಗೆಯನ್ನಾದರೂ ಓದುಗ ತನ್ನದಾಗಿಸಿಕೊಳ್ಳಬಹುದು. ಆ ಕಾರಣದಿಂದಲೇ ವೈದೇಹಿಯವರಿಗೆ ನಾಡಿನಾದ್ಯಂತ ಅಭಿಮಾನಿಗಳು ಇದ್ದಾರೆ. ಅವರು ಕೃತಿಗಳು ಇಂಗ್ಲೀಷ್‌ಗೆ ಸರಿಯಾಗಿ ಭಾಷಾಂತರವಾದರಂತೂ ಅಭಿಮಾನಿಗಳು ನಾಡಿನ ಗಡಿಯನ್ನೂ ದಾಟುವುದರಲ್ಲಿ ಯಾವ ಅನುಮಾನವೂ ಇಲ್ಲ. ಬೆಂಗಾಲಿಯ ಓದುಗನೊಬ್ಬ ತನ್ನ ಕೊಲ್ಕತ್ತಾದ ದುರ್ಗಾಪೂಜೆಯ ಸಂಭ್ರಮವನ್ನು ವೈದೇಹಿಯವರ ಉಡುಪಿಯ ಜಾತ್ರೆಯಲ್ಲಿ ಕಾಣುವುದಕ್ಕೆ ಯಾವ ಅಡ್ಡಿಯೂ ಇರುವುದಿಲ್ಲ.

ವೈದೇಹಿಯವರ ಭಾಷೆಗೆ ವಿಪರೀತ ಕುಸುರಿತನವಿದೆ. ನಡೆವ ದಾರಿಯನ್ನು ಲೇಖಕಿ ಶ್ರದ್ಧೆಯಿಂದ ಶೃಂಗಾರಗೊಳಿಸುತ್ತಾರೆ. ಬಹುತೇಕ ಇದನ್ನು ಹೊಯ್ಸಳದ ಶಿಲ್ಪಕಲೆಗೆ ಹೋಲಿಸಬಹುದು. ಶಿಲಾಬಾಲಿಕೆಯ ಆಭರಣ, ಬೆರಳು, ಹೆರಳು, ಉಗುರು, ಉಂಗುರ, ಕೂದಲು? ಎಲ್ಲವನ್ನೂ ಇಲ್ಲಿ ಕಲಾತ್ಮಕವಾಗಿ ರೂಪಿಸಬೇಕು. ಆದರೆ ಇಂತಹ ಕುಸುರಿಗೆ ಬಹುದೊಡ್ಡ ಗಾತ್ರ ಭಾರವಾಗುತ್ತದೆ. ಹೆಚ್ಚಿನ ಅಲಂಕಾರವಿಲ್ಲದ ಗೋಲಗುಂಬಜ್‌ಗೆ ಗಾತ್ರದಲ್ಲಿ ಹಿರಿದಾಗಿ ಪ್ರೇಕ್ಷಕನನ್ನು ಸೆಳೆಯುವ ಗುಣವಿರುತ್ತದೆ. ಆದರೆ ಇಲ್ಲಿಯ ಬರವಣಿಗೆಯು ಗಮ್ಯದ ಗಾತ್ರಕ್ಕಿಂತಲೂ ಸಾಗುವ ದಾರಿಯ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನೇ ನಂಬಿಕೊಳ್ಳುತ್ತದೆ. ಆದ್ದರಿಂದ ವೈದೇಹಿಯವರ ಬರವಣಿಗೆ ಯಾವತ್ತೂ ಗಾತ್ರದಿಂದ ದೈತ್ಯವಾಗುವುದಿಲ್ಲ. ಆದರೇನು? ಅಮೃತದ ಬಿಂದು ಒಂದು ಹನಿಗಿಂತಲೂ ಹೆಚ್ಚು ಬೇಕೆ?

❖

# ಜಾತ್ರೆಯೆಂಬ ರಾಟೆ

✦ ಎಚ್ ಆರ್ ಸುಜಾತ

ಜಾತ್ರೆಯೊಂದು ತಿರುಗುವ ರಾಟೆ. ಈ ಊರಿಂದ ಮುಂದಿನೂರಿಗೆ, ಈ ವರುಷದಿಂದ ಮುಂದಿನ ವರುಷಕ್ಕೆ ಬಂದು ಸೇರುವ ಜನಸಂತೆ, ಸದ್ದುಗದ್ದಲ, ಸಡಗರ ಕಾಯುವ ಮಕ್ಕಳ ಕಣ್ಣು, ಕರುಳಿನ ನಂಟು, ಅದನ್ನು ನಿಭಾಯಿಸುವ ಹಿರಿಯರ ಹೊಣೆಗಾರಿಕೆ, ಒಂದೇ.... ಎರಡೇ. ಮಕ್ಕಳಿಗೆ ಜಾತ್ರೆಯೆಂದರೆ ಗಾಳಿಯಲ್ಲಿ ಹಾರುವ ಉಸಿರುಬುರುಡೆ, ಹೊಸ ಹೊಸ ವೇಷ ತೊಟ್ಟ ಬಣ್ಣಬಣ್ಣದ ಆಟದ ಸಾಮಾನು, ಜಗದ ಚಲನೆಯಲ್ಲಿ ಮುಳುಗುವ ಏಳುವ ಆಧುನೀಕರಣ, ಹರಯಕ್ಕೆ ಸಿಕ್ಕ ರೆಕ್ಕೆ, ನಡುವಯಸ್ಸಿನವರಿಗೆ ಹೆಣಿಕೆಯ ಸಂಬಂಧಗಳು. ಜಾತ್ರೆ ತರುವ ಹೊರಗಿನ ನಾಜೂಕು ಸರಕು, ಸಂಬಂಧ, ತಿಳುವಳಿಕೆ, ಮನೆಯೊಡೆಯರಿಗೆ ದೇವರನ್ನು ತಣಿಸುವುದರ ಜೊತೆಗೆ ನೆಂಟರಿಷ್ಟರ ಉಪಚಾರ. ವಯಸ್ಸು ಮಾಗಿದವರಿಗೆ ತಮ್ಮವರೊಡನೆ ಕೂಡಿ ಎಳೆವ ತೇರಿನ ಸಂಭ್ರಮ. ಅದು ಜೀವನದ ತೇರು. ಕಳ್ಳು ಬಳ್ಳಿಯನ್ನೇ ಕಟ್ಟಿ ಹಿಡಿದೆಳೆದು ತಮ್ಮ ಮನಸ್ಸನ್ನು ಮುದಗೊಳಿಸಿ ಪ್ರಸಾದ ಉಣ್ಣುವ ಸಿರಿ.

ತೇರು ಹತ್ತಿ ರಥಾರೋಹಣದಲ್ಲಿ ಕುಳಿತ ಆ ದೇವ ವರುಷಕ್ಕೊಮ್ಮೆ ಗರ್ಭಗುಡಿಯಿಂದ ಹೊರಬಂದು ಸಣ್ಣ ಮೂರ್ತಿಯಾಗಿ ಎತ್ತರದಲ್ಲಿ ಕುಳಿತು ಮಕ್ಕಳಂತೆ ತನ್ನ ಊರಿನ ಪ್ರಜೆಗಳನ್ನು ಬಿಟ್ಟಕಣ್ಣಿನಿಂದ ನೋಡಿನೋಡಿ ನಲಿವಿನಿಂದ ಸುಸ್ತಾಗಿ ಕೊನೇ ದಿನ ರಥಾರೋಹಣ ಮುಗಿಸಿ, ಮಕ್ಕಳ ನಿದ್ದೆಗಣ್ಣಲ್ಲಿ ಕಾಲೆಳೆಯುತ್ತ ಹೋಗುವ ತಟ್ಟಿರಾಯನೊಂದಿಗೆ ದೇವರೆಂಬುದನ್ನು ಮರೆಯದಿರಿ, ಎಂದು ನಡುನಡುವೆ ಗಿರ್ರನೆ ತಿರುಗಿ, ಕಾಲೆಳೆಯುತ್ತ ಜಾತ್ರೆ ಸಂಭ್ರಮ ಮುಗಿಸಿ ಹಾಸಿಗೆ ಮೇಲೆ ಬಿದ್ದುಕೊಂಡ ಮಕ್ಕಳಂತೆ ಮಲಗಿ ಬಿಡುತ್ತಾನೆ.

ಜಾತ್ರೆ ದಿನಗಳ ಆ ಸಂಭ್ರಮದ ಚಿತ್ರ, ಅಬ್ಬ! ಗಾಳಿಗಿರುಗನೊಂದಿಗೆ ಓಡುವ ಸೊಟ್ಟ ಕಾಲಿನ ಹುಡುಗನ ಚಿತ್ರ ಮನದಲ್ಲಿ ಅಚ್ಚೊತ್ತಿದೆಯಲ್ಲ. ಆದರೂ ಪ್ರಶ್ನೆಯೊಂದಿದೆ. ಗಾಳಿಗಿರುಗನೆಂಬ ಆ ಮಿರಿಮಿರಿ ಮಿಂಚನ್ನು ಹಿಡಿದು ಓಡುವ ಹುಡುಗಿಯ ಚಿತ್ರವೆಂದೂ ದಾಖಲಾಗಿಲ್ಲ. ಹುಡುಗಿಯರದ್ದು ಕಣ್ಣು ತುಂಬಿಕೊಳ್ಳುವ ಭಾಗ್ಯ ಅಷ್ಟೇ. ಯಾಕೆ?

ಸಮಾಜಕ್ಕೆ ಇಂಥ ಅಂಕುಡೊಂಕು? ದಬ್ಬೆ ಕಟ್ಟಲು ಸಾಧ್ಯವೇ? ಆ ಹಾವಿನ ದೇಹದ ಹುಡುಗಿಯ ಮುಖ ನೋಡಿ ಬರುವ ಹುಡುಗರು ಶೂರರಂತೆ ಕಾಣುತ್ತಾರೆ. ಆದರೆ.... ಹೆಣ್ಣುಮುಖ ಈ ಬಂಧನದಿಂದ ಬಿಡಿಸಿ ಎಂದು ಕೇಳಿದಂತಾಗುತ್ತದಲ್ಲ! ಬಿಡಿಸುವುದು ಹೇಗೆ? ಹುಡುಗಿಯರನ್ನು ಅಳೆದು ನೋಡುವ ಪೋಲಿ ಪುಂಡರ ಕಣ್ಣುಗಳನ್ನು, ತೇರೆಳೆಯುವುದನ್ನು ತಿಳಿದು ಬರುವ ಆ ದೇವರ ಪಕ್ಕಿ ಕುಕ್ಕಿಬಿಡಬೇಕ್! ಆಗ ಸರಿ ಹೋಗುತ್ತೆ.

ಬಳೆ ಅಂಗಡಿಯಲ್ಲಿ ಸೇಸಿಯ ಪಟ್ಟದರಸಿಯ ಕಳೆ, ನಗೆಗೆ ಅಲಗುವ ಅವಳ ಮುತ್ತಿನ ಮೂಗುತಿ ಗೊಂಚಲು ಎಂಥ ಛಂದ. ಅವಳ ಗಂಡ ಬಳೆ ತೊಡಿಸುವ ಹೆಣ್ಣುಗಳ ಕೈಯನ್ನು ಗುಬ್ಬಿಯಷ್ಟು ಮೃದುವಾಗಿ ಹಿಡಿದು ಹೆಬ್ಬೆರಳಿನ ಗೆಣ್ಣು ಏರಿಸಿ ಬಳೆ ತೊಡಿಸುವ ಪ್ರೀತಿ ನೋಡಿರೇ ... ಅಷ್ಟ ದಿಕ್ಕನ್ನು ಚಿಂತಿಸಿ ಹೇಳುವ ಈ ಬೇಬಕ್ಕನ ಲೆಕ್ಚರ್ರು ಜಾತ್ರೆಯಲ್ಲಿ ....ಬೋರೋ ಬೋರು. ಜಾತ್ರೆ ಎಂಬುದು ಬದುಕಿನ ಗೋಲದಲ್ಲಿ ವರುಷ ವರುಷವೂ ಬದಲಾವಣೆಯ ಫ್ಯಾಶನ್ನಿನ ಒಂದೆಳೆಯನ್ನು ಹಿಡಿದು ಎಳೆದೇ ತರುತ್ತದಲ್ಲ ದೇವರೇ!! ಅನ್ನುತ್ತಾಳೆ.

ಎಣ್ಣೆ ಹಾಕಿ ಬಾಳೆನಾರಿನಲ್ಲಿ ತುದಿವರೆಗೂ ಜಡೆ ಹೆಣೆದು ಆಗಿನ ಹೊರಕೆಲಸ ಮಾಡುತ್ತಿದ್ದ ಅಕ್ಕು ಎಲ್ಲಿ? ಈಗಿನ ಫ್ಯಾಷನ್ ಕಂಡಿರಾ? ಬಣ್ಣಬಣ್ಣ ರಿಬ್ಬನ್ ಹೆಣೆದು ಚಿಟ್ಟೆಹೂ ಕಟ್ಟುವ ರಿಬ್ಬನ್ನಿಂದ ಹಿಡಿದು ಪ್ಲಾಸ್ಟಿಕ್ ನೈಲಾನ್ ರಬ್ಬರ್ ಬ್ಯಾಂಡಿನ ವಿಧವಿಧ ಗೊಂಡೆ ಹಾಗೂ ವಿಧವಿಧ ಹೂಮಾಲೆ ಮುಡಿವ ಶೋಕಿಯವರೆಗೂ ಸಾಗಿ ಮುಂದೆಯೂ ಬದಲಾಗುತ್ತಲೇ ಇದೆಯಲ್ಲ! ನಮ್ಮ ಹೆಣ್ಣುಮಕ್ಕಳ ಅಲಂಕಾರವೇ ಒಂದು ಕೈಗಾರಿಕಾ ವಿಸ್ತರಣೆಯನ್ನು ಪ್ರಭಾವಿಸುತ್ತಿದೆಯಲ್ಲವಾ? ನಮ್ಮ ಬೇಬಕ್ಕನ ಲೆಕ್ಚರ್ರು ನಿಜವೇ ಹೌದು.

ಕುಂಕುಮ ದಾಗಿನ ಹೂವು ಕಂಕುಮವಿಲ್ಲದೆಯೂ ಕಾಲ್ಗೆಜ್ಜೆಯ ಝಣಝಣದಂತೆ ಆ ಮಂಜತ್ತೆ ಬರುವ ಸೊಗಸೇ!

ಅವರ ಪ್ರೀತಿಯೇ.... ಜಾತ್ರೆಗೋಗರ ತಲಿ ಮ್ಯಾಲೇ ಗುಬ್ಬಿ ಕೂತಂತೆ ಅವರು ತೂರುವ ಹಗುರ ನಗೆಯ ಮಾತೇ! ಥೇಟ್! ಹೂವು ಎಂದು ಕೂಗುತ್ತ ಬರುವ ಹೆಣ್ಣು ಕುಲುಕುಲು ಮಾತಿನ ನಗೆಯಲ್ಲೇ ಹೂವನ್ನು ಎಣಿಕೆ ಮಾಡಿ ಹಾಕಿದಂತೆ... ಹೂಮಾಲೆ ಆಗುತ್ತವೆ. ಮಂಜತ್ತೆಯ ಮಾತುಗಳು ನೆನಪಿನ ಬಾಳೆನಾರಿನಲ್ಲಿ.

ಅವರ ಅಕ್ಕರೆ ಚಿನ್ನಕ್ಕೆ ಪುಟವಿಟ್ಟಷ್ಟು ಶುದ್ಧವಾಗಿದೆ. ಹೂ ನೇಯಲು ನಡುಮನೆಯಲ್ಲಿ ಹೆಬ್ಬೆರಳನ್ನು ಗೂಟ ಹೊಯ್ದು ಕುಂತ ಆ ಮಂಜತ್ತೆಯ ಕಾಲು ಕಿಸುರು ಬೆರಳು ಹೊರಗಿನ ಕೆಲಸದಾಳಿನ ಬೆರಳಂತೆ ಕೀತಿದೆಯಲ್ಲ ಬೆಳ್ಳಗೆ! ಅದಕ್ಕೆ ಮುಲಾಮು ಮಾಡಬೇಕು.

'ರತ್ರಿಣ ಎಂದರೇನು?' ಕೇಳುತ್ತಲೇ ಒಬ್ಬರನ್ನೊಬ್ಬರು ದೂರುತ್ತ ಬರುವ ಮಕ್ಕಳ ಹಿಂಡು ಅವರ ಸುತ್ತ ತೇರಿಗೆ ಓಡುತ್ತವೆ. ತೇರಿಗೆ ಮಂಜತ್ತೆ ಕೈ ಮುಗಿದೇಟಿಗೆ ತೇರು

ದೊಡ್ಡ ಹಡಗಂತೆ, ತುಂಬಿದ ಬಸುರಿಯಂತೆ, ಬೆಟ್ಟವೇ ಚಕ್ರ ಕಟ್ಟಿಕೊಂಡು ನಡೆದಂತೆ ವಸ್ತ್ರ ಬೀಸಿಕೊಂಡು ಚಲಿಸುತ್ತಿದೆಯಲ್ಲಪ್ಪ! ಏನು ಮಾಯೆ! ರತ್ರಣಕ್ಕೆ ಬರುವ ಹಕ್ಕಿ ಬಂದು ಹೋಗಿಯಾಗಿದೆಯಾ? ಆಗಲೇ.

ಛೇ... . ಬೀಸುಕಾಲು ನಡಿಗೆಯಲ್ಲಿ ಬಂದರೂ ಕಾಲು ನೋವು ಎನ್ನುವ ಹಾಗಿಲ್ಲ. ಗಟ್ಟಿ ಕೈ ಹಿಡಿದು ನಡೆಯಬೇಕು. ಬಿಟ್ಟರೆ ಗೊತ್ತಲ್ಲ, ಕೈ ಕಾಲು ತಿರುಚಿ ಭಿಕ್ಷೆಗೆ ಹಾಕಿ ಬಿಡುತ್ತಾರೆ. ಮಕ್ಕಳು ದೊಡ್ಡವರ ಜೊತೆಜೊತೆಗೆ ಜಾತ್ರೆಯನ್ನು ಕಣ್ಣು ತುಂಬಿ ಸಾಗುವುದೇ! ಚಂದ. 'ಜೀವನವೇ ಯಾತ್ರೆ' ಇದು ಆಗಾಗ ಮಂಜತ್ತೆ ಹೇಳುವ ಮಾತು.

ಅಲ್ಲಿ ಕಾಣಿರೇ....ಅಯ್ಯಬ್ಬ! ಹರೆಯದ ಹುಡುಗಿಯರ ಗುಂಪಲ್ಲಿ ಹುಡುಗಿಯರ ಮಾತು ಸೂಲಾಗಿ ಏನೆಲ್ಲ ಹೊಲಿಯುತ್ತ ದಾರಿ ಸಾಗುತ್ತಿದೆಯಲ್ಲ? ಹರೆಯಕ್ಕೆ ಎನಿತು ಕುತೂಹಲವೋ?.... 'ಕುಸುಮನ ಮನೆಯಲ್ಲಿ ದುಡ್ಡಿನ ಮರವೇ ಉಂಟಂತೆ ಕಣೆ, ಅವರಜ್ಜ ನೆಟ್ಟಿದ್ದು, ಅರೆ! ಸೋಡಾದೊಳಗೆ ಗೋಲಿಯ ಗುಳುಗುಳು ನೋಡು, ಅದನ್ನು ಕುಡಿವ ಮಟ್ಟು ಹೀಂಗೆ..... ಹುಶಾರು! ಅಮ್ಮ ಹೇಳಿದಂತೆ ಕೊಳದಲ್ಲಿ ಜಾರಿಕೆಯಿದೆ. ಆಡುವ ಮೀನ ನೋಟ ಹುಡುಗಿಯರ ಕಣ್ಣಲ್ಲಿ, ಅರೆರೆ! ಪುಣುಕ್ಕ ಮಿಣುಕ್ಕನೆ ಜಾರುವ ಸೊಗಸೇ... ಗುರುತಿನವರು ನೋಡಿಯಾರು ಕಣೇ ಎಂದರೂ ಸೋಡ್ತಿ ಆಡಿದೆಯಾ? ಹೋಯಿತಾ... ದುಡ್ಡೆಲ್ಲ ಪೋಯ್ಯ....ಆಯ್ತು, ಅದು ಜೂಜು ಕಣೇ'

'ಅರೆ! ಕಸ್ತೂರಿ ಯಾಕೆ ಅಳುತ್ತಿದ್ದಾಳಪ್ಪ? ನೋಡ್ರೇ, ಯಾರೋ ಎದೆಗೆ ಕೈ ಹಾಕಿದರಂತೆ. ಹೂಂ! ಕಣೆ ...ಮೆತಿಲ್ದಾಳ ಅಣ್ಣ ಹೀಗೆ ಒಂದು ಹುಡುಗಿಗೆ ಮಾಡಿದ್ದನಾ? ಅವಳು ಮನೆಗೆ ಹೋಗುವಾಗಲೇ ಬಸುರಿಯಾಗಿದ್ದಳಂತೆ. ಆದರೆ ಯಾರಿಗೂ ಹೇಳಬೇಡೆಂದು ಕಸ್ತೂರಿ ಈಗ ಭಾಷೆ ಇಟ್ಟುಬಿಟ್ಟಳು ಕಣೆ. ಕಾಣೆಯಾದ ಮಗುವೊಂದು ಅಮ್ಮನನ್ನು ಹುಡುಕುತ್ತಿದೆ ಅಲ್ಲಿ ನೋಡಿರೇ....'

ಇವತ್ತು ಅಮ್ಮನಿಗೆ ಹೇಳಲೇಬೇಕಾದ ವಿಚಾರ ಇದೆ. ಏನು ಗೊತ್ತಾ? ಹುಳಿಹೆಂಡ ಹಾಕಿದ ವೆಂಕ ಕೊಟ್ಟ ವಾಲೆ ಬೆಲ್ಲ ತಿಂದುಬಿಟ್ಟೆ! ಗಾಂಧೀಜಿ ಸತ್ಯವನ್ನು ಅವರಪ್ಪನ ಮುಂದೆ ಒಪ್ಪಿಕೊಂಡ ಹಾಗೆ ಹೇಳಿಬಿಡುತ್ತೇನೆ. ಅಮ್ಮ ಬಯ್ಯುವುದಿಲ್ಲ. ಅಪ್ಪಿಕೊಳ್ಳುತ್ತಾಳೆ, ಸಧ್ಯ ತಪ್ಪಿಸಿಕೊಳ್ಳದೆ ಮನೆಗೆ ಬಂದೆನೆಂದು.

ಸಣ್ಣ ಊರಿನಿಂದ ಬಂದವರು ಕೋಟೇಶ್ವರ ದೀಪ ನೋಡಿದಾಗೆಲ್ಲ ಹೇಳುವ ಮಾತೊಂದನ್ನ ಇಲ್ಲಿ ಕೇಳಿ. 'ನಿಮ್ಮಂತೆ ನಮ್ಮದು ದೊಡ್ಡ ಊರಲ್ಲ. ದೊಡ್ಡ ದೇವಳವಿಲ್ಲ. ನಮ್ಮ ಚಿಕ್ಕ ದೇವಳ, ಪಾಂಡವರು ಒಂದೇ ರಾತ್ರಿಯಲ್ಲಿ ಅವಸವಸರದಲ್ಲಿ ಕಟ್ಟಿದ್ದು. ಅದೂ ರಾತ್ರಿ ವೇಳೆಯೇ ಅವರು ಕಟ್ಟುವುದು ಗೊತ್ತಾ?' ಇಂಥ ತರ್ಕದ ನಡುವೆಯೆ ಸಂಜೆ ದೇವರು ಬರುವ ಹೊತ್ತಿಗೆ ಸಾಲು ದೀಪ ಹಚ್ಚಿದಾಗ ನನ್ನೂರು ಸ್ವರ್ಗದ ಹಾದಿಯಂತೆ ಕಾಣುತ್ತದೆ. ಆಕಾಶ ಲೋಕ ಕೆಳಗಿಳಿದಂತೆ, ದೀಪದ ಕಡಲಂತೆ.

ಇಂಥ ಕಡಲಿನ ಸಡಗರ ತಿಂಗಳೊಪ್ಪತ್ತಿನಿಂದಲೆ ಶುರುವಾಗುತ್ತದೆ ಮಗುವಿಗೆ ಎಣ್ಣೆ ಮೀಯಿಸುತ್ತ ಸಾಗುವ ವೆಂಕನ ಮಾತಲ್ಲಿ. ಆ ದಿನ ಬಂದೇ ಬಿಟ್ಟಾಗ ತಲೆಯಲ್ಲಿ ಸಿಂಗಾರದ ಕೊನೆ ಸಿಗಿಸಿಕೊಂಡು ಸೀತು 'ನನ ಗಂಡ ಕ್ವಾಟೆಸರ ತೇರಿಗೆ ಹೋಯ್ನಲೆ' ಎನ್ನುತ್ತ ದೀಪದ ಪಾವಾಣೆ ಪಡೆದು ಓಡುಬಲಿಯಲ್ಲೇ ಕೆಲಸ ಮುಗಿಸಿ ಹೊರಟಾಗ ಅವಳ ಮುಖದ ಮೇಲೆ ದೀಪ ಹಚ್ಚಿಟ್ಟಂತಿದೆ. ಅವಳ ಉತ್ಸಾಹದ ನಗೆ ಕಂಡರೆ ಜೀವ ಇಲ್ಲದವರಿಗೂ ಜೀವ ಬರುವುದೇ ಸೈ!!

ಅಲ್ಲಿಂದ, ಇಲ್ಲಿಂದ, ಆ ಎಡಕಲಿಂದ ಬರುವ ಸದ್ದು ಅದ್ಯಾವುದು? ಕೊಳಲಿನದು. ಕೊರಗರ ಡೋಲು ಕೊಳಲಿಲ್ಲದೆ ಹಬ್ಬದ ಗುಡಿಗೆ ಗೆಲುವೇ ಇಲ್ಲ ಬಿಡಿ. ಕೂಗುತ್ತ ಕುಣಿಯುತ್ತ ಕುಮ್ಚಟ್ಟು ಹಾರುತ್ತ ಚನಿಯ ಧ್ಯಾನಸ್ಥನಾಗಿದ್ದಾನೆ. ಕಾಣೆರಿ... ಕಪ್ಪಿಗೆ ಇನ್ನಷ್ಟು ಕಪ್ಪು ಬಳಿದು ಅರೆ ಸೀರೆ, ಅರೆ ಸೆರಗಿನ ಕೊರತಿ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಸಿಕ್ಕಿದ್ದು ಹೆಕ್ಕುತ್ತ ಸಾಗುತ್ತಿದ್ದಾಳೆ.

ವ್ಹೋ... ಎಂದು ಒಂದೇ ರಾಗದಲ್ಲಿ ದುಃಖಿಸುವ ಆ ಕೊಳಲಿನ ರಾಗ ಭಿನ್ನತೆಯ ಕುರುಹಾಗಿ ಕಿವಿಗೆ ಬೆರಳನ್ನು ಇಟ್ಟುಕೊಂಡರೂ ಒಳಗಿಳಿಯದೆ ಕರುಳಿನ ಹಗ್ಗಕ್ಕೆ ಹೊಟ್ಟೆಯೊಳಗಿನ ನೋವನ್ನು ಬಿಗಿದು ಬಲವಂತವಾಗಿ ಹೊರಗೆ ಎಳೆದು ತಂದಂತಿದೆಯಲ್ಲ. ಬಾರಿಸುವುದಷ್ಟೇ, ದೂರದಲ್ಲಿ ನಿಂತು ಭಕ್ತಿಗೆ! ತೇರಿನ ಹತ್ತಿರ ಕೊರಗರು ಸುಳಿದಾಡುವಂತಿಲ್ಲ.

ಆನು, ಆನು ಎಂದು ಮಕ್ಕಳ ದಂಡು ಅಮ್ಮನ ಜೊತೆಗೆ ಹೋಗುವಾಗ ಕಿವಿ ಕೆಪ್ಪಾಗದೆ ಉಳಿದರೂ ಮುಪ್ಪು ಮೌನದಲ್ಲಿ ಅಮ್ಮನ ಕಿವಿ ಕೆಪ್ಪಾಗಿದ್ದೇಕೆ? ಅಮ್ಮ ಮನೆಗೆ ಬರುವುದರಲ್ಲಿ ಗಿರಿಜಕ್ಕ ಬಂದು ಅಪ್ಪನ ಜೊತೆ ಮಾತಿಗೆ ಕುಂತಾಯಿತು. ದೀಪಕ್ಕೆ ಬೆಳಕು ಬಂದ ಹಾಗೆ. ಮೇಲೆ ಕೆಳಗೆ ಇಡಿ ಓಣಿಯ ಮನೆ ಮನೆಯೇ ದೀಪ ಹಚ್ಚಿ ಅಲಕಾನಗರಿಗೂ ಮಿಗಿಲಾಗಿ. ಓಹ್! ದೇವರು ಈ ಗಡಿಬಿಡಿಯಲ್ಲಿ ಬಂದಾಯಿತು. ಪ್ವೆಪ್ವೆ... ಢುಮ್ಮಕ ಢುಮ್ಮಕ ಸದ್ದಿಗೆ ಒಳಮನೆ ಬಾಣಂತಿ ಪದ್ಮಕ್ಕನ ಮಗುವೂ ಕಣ್ಣರಳಿಸಿ ಕಿಟಕಿ ಸರಳ ಹಿಂದಿನಿಂದ ದೇವರಂತೆ ಅರಳುಗಣ್ಣು, ಕಿಲಕಿಲಕಿಲ ಗಿಲಕಿಯ ನಗು.

ಬ್ಯಾಂಡು ವಾದ್ಯದ ಹಿಂದೆ ಸುತ್ತುವ ದೊಡ್ಡ ತಟ್ಟಿರಾಯ, ಮೆರವಣಿಗೆಯಲ್ಲಿ ಜನವೋ ಜನ. ಪಲ್ಲಕ್ಕಿಯಲ್ಲಿ ಸುಖವಾಗಿ ಒರಗಿದ್ದಾನೆ ಪುಟ್ಟ ದೇವರು. ರೇಷ್ಮೆ ಕುಚ್ಚುಗಳು ಪಲ್ಲಕ್ಕಿ ಹೊತ್ತವರ ನಡೆಯಂತೆ ತುಯ್ಯುತ್ತಿವೆ. ಹಿಂದೆ ಮುಂದೆ! ಆರತಿಗೆ ಅಂಗೈಯೊತ್ತಿ ಕಣ್ಣಿಗೆ ಮುಟ್ಟಿಕೋ... ಎಂಥ ಶಾಖ ಎನಿತು ಸುಖ. ಆಹಾ!

ಇತ್ತೀಚೆಗೆ ಲೈಟು ಅಲಂಕಾರ, ಪಟಾಕಿಗಳು ಬಂದಿವೆ. ಮನೆಗೆ ಮೇಣದಬತ್ತಿ ಬಂದ ಹಾಗೆ. ಮೆರವಣಿಗೆ, ರಾತ್ರಿಗಳನ್ನು ಗುತ್ತಿಗೆ ಹಿಡಿದಂತೆ ಗಂಡುಗಳು ಪಟಾಕಿ ಬಿಡುವುದನ್ನು ನೋಡುತ್ತಾರೆ. ಹೆಣ್ಣುಗಳು ನಾವು ಸ್ವಸ್ಥವಾಗಿ ಮಲಗುವುದಷ್ಟೇ... ರಾತ್ರಿ ವಾಪಾಸು ಬರುವಾಗ ಅಮ್ಮ ಎಬ್ಬಿಸಿದರೂ ನಿದ್ದೆಗಣ್ಣಲಿ ಕಂಡದ್ದೇನು?.... ಧಾಂಧೂಂ

ಇಲ್ಲದ ಚಪ್ಪೆ ತಟ್ಟೆರಾಯಗಳು ಕುಣಿತವಿಲ್ಲದೆ ನಡೆದು ಹೋಗುತ್ತಿವೆ ಸರಸರನೆ. ನಡು ನಡುವೆ ಗರ್ರನೆ ತಿರುಗುತ್ತಿವೆ ನೆನಪಾದಾಗೊಮ್ಮೆ. ಆಗ ಕಾಣಿಸದೇ ಉಳಿದ ಮೆರವಣಿಗೆ ಹೊತ್ತವರು ಈಗ ಕಾಣುತ್ತಿದ್ದಾರೆ. ನಡುರಾತ್ರಿಯ ನಿಶ್ಶಬ್ಧವೊಂದು ದಾಟಿ ಹೋಗುತ್ತಿದೆ. ಗ್ಯಾಸ್‌ಲೈಟಿನ ನಿಟ್ಟುಸಿರಿನಲ್ಲಿ...ಅದರ 'ಉಷ್' ಶಬ್ದ ಮನೆಯೊಳಗೇ ಕೇಳಿ ಬರುತ್ತಿದೆ.

ಜಾತ್ರೆ ಹೇಗೆ ಕೂಡಿಕೊಳ್ಳುತ್ತದೆ? ಹೇಗೆ ಮಾಯವಾಗುತ್ತದೆ? ಗೌಜಿ, ಗದ್ದಲದ ನಡುವ ತಿಳಿಯುವುದಿಲ್ಲ. ವರುಷವಿಡೀ ಊರಿಂದ ಊರಿಗೆ ಹೀಗೆ ಸಾಗಿ ಹೋಗುತ್ತದೆ? ಅಟ್ಟದ ಮೇಲೆ ಅಡಿ ಉಳಿದ ಕೈಯ್ಯೋ ಕಾಲೋ ಇರದ ಮಿಣಕಿ ಮಿಂಚು ಆಟ ಸಾಮಾನಿನ ಪಳೆಯುಳಿಕೆಗಳನ್ನು ಇಟ್ಟುಕೊಳ್ಳಬೇಕಿತ್ತು ಅಂದಾಗ ಅಮ್ಮ ನಮಗೆ ಅರ್ಥವಾಗದ ಮಾತೊಂದನ್ನು ಹೇಳುತ್ತಿರುತ್ತಾಳೆ ... 'ನಾ ಕಂಡ ಗಿಣಿ ನಿಮಗೆ ಕಾಣದಿದ್ದರೆ...'

ಬೆಳೆದ ವಯಸ್ಸಿನಂತೆ ರೆಕ್ಕೆ ಬಂದು ಹಾರಿನ್ನಿಗೆ ಹಾರಿದರು ಬೇಜಿಯಕ್ಕ, ರಾಧ ಚಿಕ್ಕಿ. 'ಮಂಜತ್ತೆ ತೇರು ಹೊರಡ್ತಲೇ' ಅಂತ ದುಃಖಿಸುತ್ತ ಹೊರಟಿತು ಅವರ ಸಾವಿನ ರತ್ತ್ರಣ, ಮುಂದೆಮುಂದೆ ಹೋಗುತ್ತ ಅವಳು ನಮ್ಮಿಂದ ಕಳೆದೇ ಹೋದಳು. ಚಿನ್ನದ ಕತ್ತಿನ ಆ ಮಿಡುಕು ಹೆಣ್ಣಿನ ಕಣ್ಣಿನ ಮಿಂಚು ಎತ್ತ ಹೋಯಿತು? ಅವಳ ಚಿನ್ನದಲ್ಲಿ ಸೇರಿ ಹೋಯಿತೇ? ಯಾಕೆ? ಯಾರ್ಯಾರಿಲ್ಲದ ಕೆಂಪನನ್ನು ಊರವರೆಲ್ಲ ಸೇರಿ ಸುಟ್ಟರು ನೋಡಿ ಪ್ರಪಂಚ ಹೇಗೆ? ಒಬ್ಬೊಬ್ಬರದೂ ಒಂದೊಂದು ಹಾದಿ.

ಜಾತ್ರೆ ನೋಡುತ್ತಲೇ ಅಮ್ಮ ಮುದುಕಿಯಾದಳು. ಮಗಳು ಅಮ್ಮನಾದಳು. ಅವಳ ಮಕ್ಕಳೂ ಜಾತ್ರೆ ಸುತ್ತಿದವು. ಮೇಮಿಯವ ಅಮ್ಮನನ್ನು ಕರೆಯುತ್ತಾನೆ... 'ಚಣ್ಣಮ್ಮಾ...'. ಅಮ್ಮ ಮಂಡಕ್ಕಿ ಕಡಲೆ ಕೊಂಡು ತಿರುತಿರುಗಿ ಅವನನ್ನು ನೋಡಿ ಬರುತ್ತಾಳೆ. ಅವನು ಇನ್ನೂ ಕಪ್ಪಾಗಿದ್ದಾನೆ. ಮುದುಕನಾಗಿದ್ದಾನೆ. ಆದರೆ ಅದೇ ತಿನಿಸು... ಅದೇ ಪ್ರೀತಿ.... ಅದೇ ನಗೆ. ಅದೇ ಚಣ್ಣಮ್ಮನ ಕಣ್ಣಲ್ಲಿ ನೀರು ಪಳಕ್ಕೆಂದವು. ಚಂದ ವೇದನೆಗಳು ಚಿಮ್ಮುವುದು ಹೀಗೆ...

ಅವನು ಕೊಟ್ಟ ಮುಷ್ಟಿ ಕಡಲೆಯನ್ನು 'ತಕೊಳಿ, ಅವನು ಮೇಮಿಯಜ್ಜ' ಅಂದಾಗ ಅಮ್ಮನ ಗಂಟಲು ಕಟ್ಟಿತ್ತು. ಜನರ ನಡುವೆ ಮೊಮ್ಮಕ್ಕಳನ್ನು ನುಗ್ಗಿಸಿಕೊಂಡು ಬಂದಳು.

'ಜನ ಮರುಳೋ.... ಜಾತ್ರೆ ಮರುಳೋ'



'ಸರಳವಾಗಿ ಬರೆದರೆ ಗದ್ಯವಾಗುವುದಿಲ್ಲವೇನೋ ಎಂದು ಇತ್ತೀಚಿನ ಸಣ್ಣಕತೆಗಾರರು ತಿಳಿದಂತಿದೆ. ಹಾಗೆ ನೋಡಿದರೆ ನನಗೆ ನನ್ನ ಗದ್ಯದ ಬಗ್ಗೆ ಆ ಅಳುಕು ಇದೆ. ಅಭಿವ್ಯಕ್ತಿಯಲ್ಲಿ ಸಾಧ್ಯವಾಗದ ಸಂಕೀರ್ಣತೆಯನ್ನು ಭಾಷೆಗೆ ತುರುಕುವ ಪ್ರಯತ್ನ ಹೆಚ್ಚಿನ ಗದ್ಯ ಲೇಖಕರದು.

ವೈದೇಹಿ ಸರಳವಾಗಿ ಬರೆದೂ ಸಂಕೀರ್ಣವಾದ ಭಾಷೆ ಸಾಧಿಸುತ್ತಾರೆ. ಮಾಸ್ತಿಯವರ ಸಣ್ಣಕತೆ, ಕಾರಂತರ ಕಾದಂಬರಿಗಳ ಹಿರಿಮೆಗೆ ಕಾರಣವಾಗಿದ್ದ ಈ ಗುಣ ಪ್ರಜ್ಞಾಪೂರ್ವಕವಾಗಿ ಮೈಗೂಡಿಸಿಕೊಂಡ ಸಣ್ಣಕತೆಗಾರರಲ್ಲಿ ವೈದೇಹಿ ಒಬ್ಬರು. ಹಾಗೆಂದೇ 'ಒಂದು ಅಪರಾಧ ತನಿಖೆ' ಇತ್ಯಾದಿ ಕತೆಗಳಲ್ಲಿ ಬದುಕಿನ ವಿವರಗಳನ್ನು ಗ್ರಹಿಸುವ ಪರಿ ಮೆಚ್ಚುಗೆಗೆ ಪಾತ್ರವಾಗುತ್ತದೆ. ಕತೆಯ ಒಟ್ಟಾರೆ ಬಂಧದ ವಿಚಾರದಲ್ಲಿ, ಈ ಸಂಕಲನದಿಂದಾಚೆಗೂ ಬರೆಯುತ್ತಾ ನಡೆದಿರುವ ಅವರ ಕತೆಗಳನ್ನು ಗಮನಿಸಿದಾಗ, ಈಕೆ ಬೆಳೆಯುತ್ತಿದ್ದಾರೆ ಎಂದು ನಿಸ್ಸಂದೇಹವಾಗಿ ಕಾಣುತ್ತದೆ.

ವೈದೇಹಿಯವರನ್ನ ಮಹಿಳಾ ಲೇಖಕಿಯೆನ್ನುವ ಪರಿಮಿತ ಚೌಕಟ್ಟಿನಲ್ಲಿ ಇಟ್ಟು ನೋಡಿ ಮೆಚ್ಚಬೇಕಾದ ಪ್ರಮೇಯವಿಲ್ಲ. ಕನ್ನಡದ ಹೊಸ ಪೀಳಿಗೆಯ ಯಾವುದೇ ಸಣ್ಣಕತೆಗಾರರಿಗೆ ಸರಿಸಾಟಿಯಾಗಬಲ್ಲದು ಇವರ 'ಕಥನ ತಂತ್ರ'.'

- **ಪ್ರಸನ್ನ**

(ವೈದೇಹಿಯವರ 'ಅಂತರಂಗದ ಪುಟಗಳು' ಕಥಾಸಂಕಲನದ ಬೆನ್ನುಡಿಯಲ್ಲಿ)

'ಇಂಥಾ ಮಕ್ಕಳ ಕತೆಗಳನ್ನು ನಾನು ಕನ್ನಡದಲ್ಲಿ ಓದಿಯೇ ಇರಲಿಲ್ಲ. ಲೂಯಿಸ್ ಕ್ಯಾರಲ್ 'ಆಲೈಸ್ ಇನ್ ವಂಡರ್‌ಲ್ಯಾಂಡ್'ನ ಕತೆಯನ್ನು ನೆನಪಿಗೆ ತರುವ ಇಲ್ಲಿಯ ಕತೆಗಳು, ಮಕ್ಕಳ ಕಲ್ಪನಾ ಶಕ್ತಿಯನ್ನು ಬೆಳೆಸಬಲ್ಲವು. ನವೋದಯದ ಸಂದರ್ಭದಲ್ಲಿ ಅತ್ಯಂತ ಸೃಜನಶೀಲವಾಗಿ, ಕಲ್ಪನಾತ್ಮಕವಾಗಿ, ವೈವಿಧ್ಯಪೂರ್ಣವಾಗಿ ಬೆಳೆದಿದ್ದ ಕನ್ನಡ ಮಕ್ಕಳ ಸಾಹಿತ್ಯ ನಂತರದ ದಿನಗಳಲ್ಲಿ ಜಡಗೊಂಡು ಬರಡಾಗಿತ್ತು. ಇದೀಗ ವೈದೇಹಿಯವರು ಕತೆ, ನಾಟಕಗಳ ಮೂಲಕ ಮಕ್ಕಳ ಸಾಹಿತ್ಯವನ್ನು ಪ್ರವೇಶಿಸಿರುವುದು ಒಂದು ದೊಡ್ಡ ಬೆಳವಣಿಗೆ. ನೀರಸವಾದ ನೀತಿ ಕತೆಗಳಿಂದ ತುಂಬಿತುಳುಕುತ್ತಿರುವ ಕನ್ನಡದ ಮಕ್ಕಳ ಕತೆಗಳಿಗೆ ಅವರು ಇಲ್ಲಿ ಕಾಯಕಲ್ಪ ಚಿಕಿತ್ಸೆ ನೀಡಿದ್ದಾರೆ. ಮಕ್ಕಳನ್ನು ಎದುರಿಗೆ ಕೂರಿಸಿಕೊಂಡು ಹೇಳಿದಂತಿರುವ ಈ ಕತೆಗಳ ಆಕರ್ಷಕ ಶೈಲಿ, ನಾಟಕೀಯ ನಿರೂಪಣೆ-ಮಕ್ಕಳ ಕತೆಗಳು ಹೇಗಿರಬೇಕೆಂಬುದಕ್ಕೆ ಮಾದರಿಯಾಗಿವೆ.'

**- ಗಿರಡ್ಡಿ ಗೋವಿಂದರಾಜ**

('ಅಬ್ಬಾಲಕ ಅಜ್ಜೀಮನೆಗೆ ಹೋಗಿದ್ದು' ಸಂಕಲನಕ್ಕೆ ಬರೆದಿರುವ ಹಿನ್ನುಡಿ)

# ವೈದೇಹಿಯವರ ಮಕ್ಕಳ ನಾಟಕಗಳು: ರುಚಿಯೂ ಗುಣವೂ ಕಲೆತ ಜೇನು

✦ ಎಂ ಉಷಾ

ಭಾರತೀಯ ಪರಂಪರೆಯಲ್ಲಿ ದೊಡ್ಡವರ ಸಾಹಿತ್ಯ, ಮಕ್ಕಳ ಸಾಹಿತ್ಯ ಎಂಬ ವರ್ಗೀಕರಣವಿಲ್ಲ. ಯಾವ ಕಥೆಯನ್ನಾದರೂ ಹೇಗೆ ಮತ್ತು ಎಷ್ಟು ಹೇಳುತ್ತೇವೆ ಎಂಬುದರ ಮೇಲೆ ಅದು ಮಕ್ಕಳಿಗೋ ದೊಡ್ಡವರಿಗೋ ಎಂಬುದು ನಿಶ್ಚಯವಾಗುತ್ತದೆ. ಹಾಗಾಗಿಯೇ ನಾವು ಎಳವೆಯಿಂದ ಹಿಡಿದು ವೃದ್ಧಾಪ್ಯದವರೆಗೂ ರಾಮಾಯಣ ಮಹಾಭಾರತಗಳ ಕತೆಯನ್ನು ಅಗತ್ಯಕ್ಕನುಗುಣವಾಗಿ ಎಂತೋ ಅಂತೇ ವಯಸ್ಸಿಗನು ಗುಣವಾಗಿ ಕೂಡ ಕೇಳುತ್ತೇವೆ. 'ಪಂಚತಂತ್ರ'ದಂತಹ ಕಥೆಯನ್ನು ರಾಜನ ಮಕ್ಕಳನ್ನು ವಿವೇಕಿಗಳನ್ನಾಗಿಸಲು ಹೇಳಿದ ಕಥೆ ಎಂಬ ಮಾತಿದ್ದರೂ, ಕೃತಿ ಪ್ರೌಢಕಾವ್ಯದ ಸ್ವರೂಪದಲ್ಲಿದ್ದು ಮಕ್ಕಳು ಓದುವಂತೇನು ಇಲ್ಲ. ಕೆಲವು ಟೀಕು ಮತ್ತಿತರ ಕೃತಿಗಳಲ್ಲಿ 'ಬಾಲ'ರಿಗಾಗಿ ಎಂಬ ಮಾತಿದ್ದರೂ ಅವು ಅಧ್ಯಯನ ಪಠ್ಯಗಳು. ಇನ್ನು ತೆನಾಲಿ ರಾಮಕೃಷ್ಣ, ಅಕ್ಬರ್-ಬೀರ್ಬಲ್ ಕಥೆಗಳು, ಅಡುಗೂಲಜ್ಜಿ ಕಥೆಗಳು, ಜಾನಪದ ಮತ್ತು ನೀತಿಬೋಧಕ ಕಥೆ ಇತ್ಯಾದಿಗಳನ್ನು ನಾವಿಂದು ಮಕ್ಕಳ ಸಾಹಿತ್ಯದ ವ್ಯಾಪ್ತಿಯಲ್ಲಿ ಇಟ್ಟರೂ ಇವುಗಳ ಲಿಖಿತೀಕರಣ ಆದುದು, ಅವುಗಳನ್ನು ಮಕ್ಕಳ ಸಾಹಿತ್ಯವೆಂದು ವರ್ಗೀಕರಿಸಿದುದು ಆಧುನಿಕ ಸಂದರ್ಭದಲ್ಲಿ; ಪಾಶ್ಚಾತ್ಯರ ಸಂಸರ್ಗದಲ್ಲಿ.

ಈಸೋಪನ ಕತೆಗಳು, ಲ್ಯಾಂಬ್ ಮತ್ತವನ ಸಹೋದರಿ ಮಕ್ಕಳಿಗಾಗಿ ಬರೆದ ಶೇಕ್ಸ್‌ಪಿಯರ್ ಟೇಲ್ಸ್ ಮುಂತಾದ ಕೃತಿಗಳು, ಶಿಶುಗೀತೆಗಳು ನವೋದಯ ಸಂದರ್ಭದ ಲೇಖಕರಿಗೆ ಮಕ್ಕಳ ಸಾಹಿತ್ಯ ರಚನೆಗೆ ಪ್ರೇರಣೆ ನೀಡಿದರೂ, ಆನಂತರದಲ್ಲಿ ಕಾಣಿಸಿಕೊಂಡ 'ಗಂಭೀರ' ಸಾಹಿತ್ಯದ ಪರಿಕಲ್ಪನೆಯು ಮಕ್ಕಳ ಸಾಹಿತ್ಯವನ್ನು ಅಂಚಿಗೆ ಸರಿಸಿತು. ಮಕ್ಕಳ ಸಾಹಿತ್ಯ ನಿರ್ಮಾಣದಲ್ಲಿ ತೊಡಗಿದವರು 'ಶಿಶುಸಾಹಿತಿ' ಎಂಬ ಲೇಬಲ್ಲಿನ ಅಡಿ ಬಾಳುವಂತಾಯಿತು; 'ಗಂಭೀರ ಲೇಖಕ'ರು ಇದರಿಂದ ದೂರ ಉಳಿದರು. ಆದಾಗ್ಯೂ ಎನ್.ಎಸ್.ಲಕ್ಷ್ಮೀನಾರಾಯಣಭಟ್ಟ, ಹೆಚ್.ಎಸ್.ವೆಂಕಟೇಶಮೂರ್ತಿ ಮುಂತಾದ ಬೆರಳೆಣಿಕೆಯ ಲೇಖಕರು ಈ ಲೇಬಲ್ಲಿಗೆ ಅಂಜದೆ ಮಕ್ಕಳ ಮತ್ತು ದೊಡ್ಡವರ ಸಾಹಿತ್ಯಗಳೆರಡನ್ನೂ ಬರೆದು ಈ ಪ್ರತ್ಯೇಕತೆಯನ್ನು ತೊಡೆಯಲು ಯತ್ನಿಸಿ. ಸೈ

ಎನಿಸಿಕೊಂಡರು. ಕಳೆದ ಎರಡು ದಶಕದಿಂದ ಅತ್ಯುತ್ತಮವಾದ ಹಲವು ಮಕ್ಕಳ ನಾಟಕಗಳನ್ನು ಬರೆಯುತ್ತ ಅದರೊಳಗೆ ಸುಮಧುರವಾದ ಮಕ್ಕಳ ಕಾವ್ಯವನ್ನು ಅಂತರ್ಗತವಾಗಿಸಿದ ವೈದೇಹಿಯವರದು ಈ ದಿಕ್ಕಿನಲ್ಲಿ ದೊಡ್ಡ ಹೆಸರು ಎಂಬುದು ನನ್ನ ನಂಬಿಕೆ.

ಮಕ್ಕಳ ನಾಟಕಗಳು ಮಕ್ಕಳಷ್ಟೆ ನವಿರಾಗಿರಬೇಕು. ಮಕ್ಕಳ ಮನಸ್ಸಿನಲ್ಲಿರುವ ಮುಗ್ಧತೆಯನ್ನು ಉಳಿಸುತ್ತಲೇ ಅವರ ಬೆರಗನ್ನು ತಣಿಸುವ, ಪ್ರಜ್ಞೆಯನ್ನು ವಿಸ್ತರಿಸುವ ಜವಾಬ್ದಾರಿಯನ್ನು ನಿಭಾಯಿಸಬೇಕು. ಇದರ ಈಡೇರಿಕೆಗಾಗಿಯೇ ಜಗತ್ತಿನ ಅತ್ಯುತ್ತಮ ಮಕ್ಕಳ ನಾಟಕ ರಚನಾಕಾರರು ವಸ್ತು(ಸಂದೇಶವಲ್ಲ) ಮತ್ತು ಸಂವಹನದ 'ಸರಳತೆ'ಯನ್ನು ತಮ್ಮ ಮುಖ್ಯ ಗುಣಧರ್ಮವಾಗಿ ಸ್ವೀಕರಿಸುತ್ತ, ಅದರ ಜೊತೆಗೆ ಮಕ್ಕಳನ್ನು ಆಕರ್ಷಿಸುವ ರಂಗುರಂಗಿನ ಉಡುಗೆ-ತೊಡುಗೆ, ರಂಗಸಜ್ಜಿಕೆ, ಸುಲಲಿತ ಮತ್ತು ಲಯಬದ್ಧ ಭಾಷೆ, ಪ್ರಾಸಬದ್ಧ ಹಾಡು-ನೃತ್ಯ, ತಿಳುವಳಿಕೆಯನ್ನು ವಿಸ್ತರಿಸುವ ವಸ್ತು, ಮೌಲ್ಯವನ್ನು ಬೋಧಿಸುವ ಆಶಯ ಇತ್ಯಾದಿ ಹಲವು ಹತ್ತು ಸಂಗತಿಗಳ ಮೂಲಕ ಮಕ್ಕಳ ನಾಟಕವನ್ನು ರಚಿಸುತ್ತಿದ್ದಾರೆ. ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ವೈದೇಹಿಯವರ ಮಕ್ಕಳ ನಾಟಕಗಳಾದರೂ ಈ ಆಶಯಗಳನ್ನು ಈಡೇರಿಸಿಕೊಡುವ ಪರಿಪೂರ್ಣ ನಿದರ್ಶನಗಳು. ರಂಗಪ್ರಯೋಗಕ್ಕಾಗಿ ರಚನೆಗೊಂಡಿರುವ ಇವರ ಎಲ್ಲ ಮಕ್ಕಳ ನಾಟಕಗಳು ಈ ಗುಣಗಳನ್ನು ಒಂದಿಲ್ಲೊಂದು ರೂಪದಲ್ಲಿ ಒಳಗೊಂಡವೇ ಆಗಿವೆ.

ವೈದೇಹಿಯವರ ಮಕ್ಕಳ ನಾಟಕಗಳ ಸಂಖ್ಯೆ ಸುಮಾರು ಹದಿನೈದು. ಇದರಲ್ಲಿ ನಾಲ್ಕೈದು ವಯಸ್ಸಿನ ಮಕ್ಕಳಿಂದ ಹಿಡಿದು ಹೈಸ್ಕೂಲಿನ ವಯೋಮಾನದವರೆಗಿನ ಮಕ್ಕಳನ್ನು ಅಭಿನಯ ಮತ್ತು ಪ್ರೇಕ್ಷಕ ಎರಡು ನೆಲೆಯಲ್ಲಿ ಗಮನದಲ್ಲಿಟ್ಟುಕೊಂಡು ಮಾಡಲಾದ ಭಿನ್ನ ರಚನೆಗಳಿವೆ. ರಿಂಗರುಂಗುರಾ, ಉಂಗುರಿಂಗುರಾ(ರಿಂಗಾ ರಿಂಗಾ ರೋಸಸ್‌ನಂತೆ) ಎಂದು ಹಾಡುತ್ತ ಸುತ್ತುವ ಪುಟ್ಟಮಕ್ಕಳ 'ಸೋಮಾರಿ ಓಲ್ಯ' ಮತ್ತು 'ಕೋಟುಗುಮ್ಮ'ದಂತಹ ನಾಟಕಗಳಿಂದ ಹಿಡಿದು 'ಮೂಕನ ಮಕ್ಕಳು' ಎನ್ನುವ ಪ್ರಬುದ್ಧ ಮಕ್ಕಳ ಮನಕಲಕುವ ನಾಟಕದವರೆಗೆ ಅದರ ವ್ಯಾಪ್ತಿ ಇದೆ. ಜೊತೆಗೆ ಜಗತ್ತಿನ ಮಹಾನ್ ನಾಟಕಕಾರನೆನಿಸಿದ ಶೇಕ್ಸ್‌ಪಿಯರ್? ಪ್ರಸಿದ್ಧ ದುರಂತನಾಟಕಗಳ ಮಕ್ಕಳ ಅವತರಣಿಕೆಗಳು ಇವೆ. ಹೀಗೆ ಭಿನ್ನ ವಯೋಮಾನದ ಶ್ರೇಣಿಗೆ ಅನುಗುಣವಾಗಿ ವೈದೇಹಿ ತಮ್ಮ ನಾಟಕದ ವಸ್ತು ಮತ್ತು ವಿಧಾನಗಳೆರಡರಲ್ಲೂ ಭಿನ್ನತೆ ತರುತ್ತಾರೆ.

ಮೂಲಭೂತವಾಗಿ ನಾಟಕವೊಂದು ಸಾಮೂಹಿಕ ಕಲೆ. ಮಕ್ಕಳ ನಾಟಕಗಳ ಪ್ರಾಥಮಿಕ ಉದ್ದೇಶ ಮಕ್ಕಳ ಪ್ರತಿಭೆಯನ್ನು ಒರೆ ಹಚ್ಚುವುದಲ್ಲ; ಅವರ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸುವುದು. ಈ ನಾಟಕಗಳು ನೋಡುವವರಿಗಿಂತ ಆಡುವವರಿಗೇ ಮುಖ್ಯವಾದುದು. ಅದಕ್ಕೆ ಮಕ್ಕಳು ಪ್ರೇಕ್ಷಕರಾರೂ ಇಲ್ಲದಿದ್ದಾಗಲೂ ನಾಟಕ ಆಡುವುದರ

ಸಂತಸವನ್ನು ಅನುಭವಿಸಬಲ್ಲರು; ಆಡುತ್ತಲೇ ನೋಡುಗರೂ ಆಗಬಲ್ಲರು. ಆಡಬೇಕಿದ್ದ ಮಾತನ್ನೋ ಮಾಡಬೇಕಿದ್ದ ನೃತ್ಯವನ್ನೋ ಮರೆತು ರಂಗದ ಮೇಲೆಯೇ ಪಕ್ಕದವರನ್ನು ನೋಡುತ್ತ ನಿಲ್ಲುವುದು. ಮುಗಿದ ನಂತರ ಪ್ರೇಕ್ಷಕರೊಂದಿಗೆ ತಾವೂ ಚಪ್ಪಾಳೆ ತಟ್ಟಿ ಆನಂದಿಸುವುದು ಇತ್ಯಾದಿ 'ತಪ್ಪು'ಗಳು ಮಾಡುವುದು. ಮಕ್ಕಳಿಂದ ಘಟಿಸುವ ಈ ತಪ್ಪನ್ನು ನೋಡಿ ಆನಂದಿಸುವ, ಅರ್ಥಮಾಡಿಕೊಳ್ಳುವ ವಿವೇಕ ದೊಡ್ಡವರಿಗಿರಬೇಕಷ್ಟೆ. ಒಂದು ಮಗು ರಂಗದ ಮೇಲೆ ಬಂದು ಎದುರಿನ ಜನರನ್ನು ದಿಟ್ಟಿಸುವುದು, ಉದ್ದೇಶಿಸಿ ಎರಡು ಮಾತನಾಡುವುದು, ರಂಗದ ಹಿಮ್ಮೇಳಕ್ಕೆ ಅನುಗುಣವಾಗಿ ಕೈಬಾಯಿ ಆಡಿಸುವುದರಿಂದ ಹಿಡಿದು, ಪಾತ್ರವೊಂದರ ಪರಕಾಯ ಪ್ರವೇಶ ಮಾಡುತ್ತ ವಿದ್ಯಮಾನವೊಂದನ್ನು ರಂಗದ ಮೇಲೆ ಸೃಷ್ಟಿಸುವವರೆಗೆ ಇರುವ ಎಲ್ಲ ಸಾಧ್ಯತೆಗಳು ಮಕ್ಕಳ ವ್ಯಕ್ತಿತ್ವ ವಿಕಸನದ ಚಟುವಟಿಕೆಯೆ ಆಗಿರುತ್ತದೆ. ಆ ಕಾರಣಕ್ಕಾಗಿಯೇ ವೈದೇಹಿಯವರ ಹಲವು ನಾಟಕಗಳು ಮಕ್ಕಳ ಭಾಗವಹಿಸುವಿಕೆಗೆ ಮುಕ್ತವಾದ ಅವಕಾಶಗಳನ್ನು ಕಲ್ಪಿಸುವ ಸಲುವಾಗಿಯೆ ಪಾತ್ರಗಳ ಸಂಖ್ಯೆ, ಹೆಸರು ಇತ್ಯಾದಿಗಳನ್ನು ನಿಗದಿಗೊಳ್ಳುವುದಿಲ್ಲ. ಮಕ್ಕಳ ಲಭ್ಯತೆಗೆ ಅನುಗುಣವಾಗಿ ಅದನ್ನು ಹೆಚ್ಚಿಸಿಕೊಳ್ಳುವ, ಕ್ರಿಯೆಯನ್ನು ವಿಸ್ತರಿಸುವ, ಸಂಭಾಷಣೆಯನ್ನು ಯಾರೂ ಬೇಕಾದರೂ ಆಡುವ ಸ್ವಾತಂತ್ರ್ಯವನ್ನು ನೀಡುತ್ತದೆ. ಒಂದೇ ಮಗು ಉದ್ದುದ್ದ ಡೈಲಾಗನ್ನು ಹೇಳುವುದಕ್ಕಿಂತ ನಾಲ್ಕು ಮಕ್ಕಳು ಒಂದೊಂದು ಮಾತನ್ನು ಹೇಳುತ್ತ ಸಂಭಾಷಣೆಯನ್ನು, ದೃಶ್ಯವನ್ನು ಹಿಗ್ಗಿಸುವುದಕ್ಕೆ ಅವಕಾಶ ಕಲ್ಪಿಸುತ್ತದೆ.

ವೈದೇಹಿಯವರೇ ಹೇಳಿಕೊಳ್ಳುವಂತೆ ಅವರ ಎಲ್ಲ ನಾಟಕಗಳು ರಂಗ ಪ್ರಯೋಗಕ್ಕಾಗಿಯೇ ಮಾಡಿದ ರಚನೆಗಳು; ಭಿನ್ನ ನಿರ್ದೇಶಕರ ಕೋರಿಕೆಗಳನ್ನು ಮನ್ನಿಸಿದ ಪ್ರಯತ್ನಗಳಾಗಿವೆ. ಹಾಗಾಗಿಯೇ ಅರ್ಧದಷ್ಟು ನಾಟಕಗಳು ನಿರ್ದೇಶಕರ ಕೋರಿಕೆಯ ಮೇರೆಗೆ ಮಾಡಿದ ಭಾಷಾಂತರಗಳಾಗಿದ್ದು, ಅವುಗಳಲ್ಲಿ ಬಹಳಷ್ಟು ದೊಡ್ಡವರ ನಾಟಕಗಳ ಮಕ್ಕಳ ನಾಟಕದ ಅವತರಣಿಕೆಗಳು. ಇವುಗಳಲ್ಲಿ ಬಿ.ವಿ. ಕಾರಂತರ 'ಗಿಲಹರೀ ರಾಮಾಯಣ', ಭಾರತೇಂದ್ರ ಹರಿಶ್ಚಂದ್ರರ 'ಅಂಧೇರಿ ನಗರೀ ಚೌಪಟ್ ರಾಜಾ'ದಂತಹ ನಾಟಕಗಳೊಂದಿಗೆ, ಶೇಕ್ಸ್‌ಪಿಯರನ ಕಿಂಗ್ ಲಿಯರ್, ಮ್ಯಾಕಬೆತ್, ಟೆಂಪೆಸ್ಟ್‌ನಂತಹ ಗಂಭೀರ ನಾಟಕಗಳೂ ಸೇರಿವೆ. ಜೊತೆಗೆ ಮಾಸ್ತಿಯವರ 'ಮೂಕನ ಮಕ್ಕಳು', 'ದಿ ಲಾಸ್ಟ್ ರಿಂಗ್' 'ದಿ ಎಂಪರರ್ಸ್ ನೈಟಿಂಗೇಲ್' ನಂತಹ ಪದ್ಯಗಳನ್ನು ಆಧರಿಸಿದ ನಾಟಕಗಳೂ ಇವೆ.

ವೈದೇಹಿಯವರ ರಚನೆ ಸ್ವಂತದ್ದಾಗಿರಲಿ, ಭಾಷಾಂತರವಾಗಲೀ ಅವರು ಕಾಯ್ದುಕೊಳ್ಳುವ ಕೆಲವು ಸಂಗತಿಗಳಿವೆ. ಅವುಗಳೆಂದರೆ,

ಭಾಷೆಯ ಸರಳತೆ: ಈಗಾಗಲೇ ಹೇಳಿದಂತೆ ವೈದೇಹಿ ನಾಟಕವನ್ನು ರಚಿಸುವ ಸಂದರ್ಭದಲ್ಲಿ ಮಕ್ಕಳನ್ನು ಸಾರಾಸಗಟಾಗಿ ನೋಡದೆ, ವಯೋಮಾನಕ್ಕನುಗುಣವಾದ

ಪದಪ್ರಯೋಗ, ವಾಕ್ಯರಚನೆ, ಪ್ರತಿಮೆಗಳ ನಿರ್ಮಾಣದಲ್ಲಿ ತೊಡಗುತ್ತಾರಾದರೂ ಅಂತಿಮವಾಗಿ ಇವು ಮಕ್ಕಳ ಕಲ್ಪನೆಗೆ ಮತ್ತು ಉಚ್ಚರಣೆಗೆ ನಿಲುಕುವಂತಿರಬೇಕು ಎಂಬುದಕ್ಕೆ ವಿಶೇಷ ಒತ್ತು ನೀಡುತ್ತಾರೆ. (ನಾಲ್ಕು-ಐದನೆ ಕನ್ನಡ ತರಗತಿಯ ಮಕ್ಕಳು ಬಳಸಬಹುದಾದ ಇಂಗ್ಲಿಷ್ ಪದಗಳ ಬಳಕೆ ಸರ್ವೇಸಾಮಾನ್ಯ. ಉದಾಹರಣೆಗೆ,

1. 'ಸೋಮಾರಿ ಓಲ್ಯಾ' ಪುಟ್ಟಮಕ್ಕಳ ನಾಟಕದಲ್ಲಿ ತಾವು ಬಾಲ್ಯದಲ್ಲಿ ಹೇಳುತ್ತಿದ್ದ ಸಂಸ್ಕೃತ ಪದ್ಯವನ್ನು ಸೇರಿಸಿದರು ಅದಕ್ಕಿರುವ ಸಂವಹನದ ಮಿತಿಯನ್ನರಿತು ಸರಳವಾದ ಕನ್ನಡ ಪಾಠಾಂತರವನ್ನು ನೀಡುವದು.

ಉದಯತಿ ಮಿಹಿರೋ
ವಿದಲಿತ ತಿಮಿರೋ
ಭುವನಂ ಕಥಮಭಿರಾಮಂ

ಪ್ರಚರತಿ ಚತುರೋ
ಮಧುಕರ ನಿಕರೋ
ಗುಂಜತಿ ಕಥಮವಿರಾಮಮ್

ಕನ್ನಡ ಪಾಠಾಂತರ:

ಮೂಡಿದ ಮಿಹಿರ
ತೆರಳಿದ ತಿಮಿರ
ಆಹಾ ಮೋಹಕ ಮಹೀ ಮಹೀ

ಹೊರಟಿವೆ ಭ್ರಮರ
ಮಧುರ ಸಂಚಾರ
ಅಹೊ! ಗುಂಜನ ಝೇಂಕಾರ!

2. ಜಗತ್ತಿನ ಅತ್ಯುತ್ತಮ ದುರಂತ ನಾಟಕವೆಂದು ಹೆಸರಾದ ಶೇಕ್ಸ್‌ಪಿಯರನ ಮ್ಯಾಕಬೆತ್ ಆಂಗ್ಲೋಸ್ಯಾಕ್ಸನ್ ಭಾಷಾಬಳಕೆಯ ಪ್ರಬುದ್ಧ ಕೃತಿಯಾಗಿದ್ದು, ಇದನ್ನು ಮಕ್ಕಳ ನಾಟಕವಾಗಿ ಪರಿವರ್ತಿಸುವಾಗ ವೈದೇಹಿ ಅದರ ಭಾಷೆಯನ್ನು ಪಳಗಿಸಿಕೊಳ್ಳುವ ಕ್ರಮ.

When I burn'd in desire to question them further, they made themselves air, into which they vanish'd. While I stood rapt in the wonder of it, came missives from the king, who all- hail'd me "Thane

of Cawdor"; by which title, before, these weird sisters saluted me, and referr'd me to the coming on of time, with "Hail, king that shalt be!" This have I thought good to deliver thee, my dearest partner of greatness, that thou mightst not lose the dues of rejoicing by being ignorant of what greatness is promis'd thee. Lay it to thy heart, and farewell(Macbeth:Act1-5)

ಗಾಳಿಯಲ್ಲಿ ನುಡಿದವರು, ಗಾಲಿ ರೂಪಿನವರು, ಗಾಳಿಯಲ್ಲಿಯೇ ಕರಗಿದರು. 'ನೀನು ಕಾಡರ್‌ನ ದೊರೆ' ಎಂದರು. ಕಾಡರ್‌ನ ದೊರೆಯಾದೆ. ನೀನು ಮಹಾರಾಜನಾಗುವೆ ಎಂದರು. ಆಗಿಯೇನು. ಸುಖವಿದೆ ಮುಂದೆ, ಗುಟ್ಟಿನಲ್ಲಿಡು, ಯಾರಿಗೂ ಹೇಳದೆ..(ಗೊಂಬೆ ಮ್ಯಾಕಬೆತ್)

ಮಕ್ಕಳ ರಂಗಗೀತೆಗಳ ಬಳಕೆ: ವೈದೇಹಿ ತಾವು ಬರೆದ ಎಲ್ಲ ನಾಟಕಗಳಲ್ಲೂ ರಂಗಗೀತೆಗಳನ್ನು ಅಳವಡಿಸುವುದನ್ನು ಮರೆತವರಲ್ಲ. ಈ ರಂಗಗೀತೆಗಳು ಅವರ ನಾಟಕಕ್ಕೆ ಲವಲವಿಕೆ, ಮೆರುಗನ್ನು ಒದಗಿಸುವುದು ಮಾತ್ರವಲ್ಲದೆ ಅದರ ಪರಿಣಾಮವನ್ನು ತೀಕ್ಷ್ಣಗೊಳಿಸಲು ನೆರವಾಗಿವೆ. ಈ ರಂಗಗೀತೆಗಳಲ್ಲಿ ಹಲವು ಮಕ್ಕಳನ್ನು ಮುದಗೊಳಿಸುವ ಪ್ರಾಸಬದ್ಧ ಪದರಚನೆಯಾಗಿದ್ದರೆ, ಕೆಲವು ಕಥೆಯ ನಿರೂಪಣೆ ಮಾಡುವ, ಸಂದೇಶ ಸಾರುವ ಜವಾಬ್ದಾರಿಯನ್ನು ನಿರ್ವಹಿಸುತ್ತವೆ. ಉದಾಹರಣೆಗೆ,

1. ಹೋ ಹೋ ಹೋ ಹೋ ದಾರಿ ಬಿಡೀ,
ಆನೆಯು ಬರುತಿದೆ ಹಾದಿ ಬಿಡೀ
ಆನೆಯ ಮಾರ್ಗದಿ ನಿಲ್ಲದಿರೀ
ರೀರೀರೀರೀ ರೀssssss
ಬಿಡ್ರೀದಾರೀ ಬಿಡ್ರೀeee (ಆನೆ ಬಂತೋ ಆನೆ)

2. ಕಂಚಿನ ಕವಡೆ
ಕೆಂಪು ಕಡಾಯಿ
ಅಂಚನೆ ಇಂಚನೆ
ಮಂಜುಟಿ ಕಾಯಿ
ಗರಿಗರಿಗಾರಿಗೆ
ಜೀರುಂಡೆ
ಕರಿಕರಿಕಾಡಿಗೆ
ಎಳ್ಳುಂಡೆ

ಚುರುಮುರಿ ಚಕ್ಕುಲಿ
ಹಕ್ಕಿಯ ಪುಕ್ಕ
ಚಿರುಟಿದ ಚಪ್ಪಲಿ
ಪೂರಿ-ಸುಕ್ಕ (ಗೊಂಬೆ ಮ್ಯಾಕಬೆತ್)

3. ಯಾಕಿಂಥಾ ಕತೇ ನಡೀತದ್ಯೋ, ಶಿವ ಶಿವಾ
ಯಾಕಿಂಥಾ ಕತೇ ಹುಟ್ತದ್ಯೋ
ಯಾಕಿಂಥಾ ಕತೇ ಮರೀವಲ್ಯೋ, ಸಮ್ಮಪ್ಪಾ
ಯಾಕಿಂಥಾ ಕತೇ ಅಳೀವಲ್ದೋ (ರಾಜ ಲಿಯರ್)

ಕಥೆ ಹೇಳುವ ತಂತ್ರ: ಕಥೆ ಮಕ್ಕಳಿಗೆ ಪ್ರಿಯವಾದ ಮತ್ತು ಸುಲಭವಾಗಿ ಲಭ್ಯವಿರುವ ಮಾಧ್ಯಮ. ಪ್ರತಿಯೊಂದು ಮಗುವು ಬುದ್ಧಿ ತಿಳಿದಂದಿನಿಂದ ಹಿರಿಯರಿಂದ ಕಥೆ ಕೇಳುತ್ತಲೇ ಬೆಳೆಯುತ್ತದೆ. ಹಾಗಾಗಿ ವೈದೇಹಿ ತಮ್ಮ ಹಲವು ನಾಟಕಗಳಲ್ಲಿ ಕಥೆ ಹೇಳುವ ಮೂಲಕ ನಾಟಕವನ್ನು ನಿರೂಪಿಸುವ ಪ್ರಯತ್ನ ಮಾಡುತ್ತಾರೆ. ಉದಾಹರಣೆಗೆ, ನಾಯಿಮರಿ ನಾಟಕ, ಮೂಕನ ಮಕ್ಕಳು, ಅಣಿಲು ರಾಮಾಯಣ, ರಾಜಾ ಲಿಯರ್, ಸೂರ್ಯ ಬಂದ ನಾಟಕಗಳು ಕಥಾನಿರೂಪಣೆಯನ್ನು ಅಂತರ್ಗತವಾಗಿಸಿಕೊಂಡಿವೆ.

ಪರಂಪರೆಯೊಂದಿಗೆ ಕೊಂಡಿ: ವೈದೇಹಿ ಕನ್ನಡಕ್ಕೆ ತಂದಿರುವ 'ಅಣಿಲು ರಾಮಾಯಣ', ರಾಮಾಯಣದ ಸೇತುಬಂಧ ಪ್ರಸಂಗವನ್ನು ಮಕ್ಕಳ ಆಲೋಚನಾ ಕ್ರಮಕ್ಕನುಗುಣವಾಗಿ ನಿರೂಪಿಸುವ ನಾಟಕವಾಗಿದೆ. 'ಝುಂರ್ಝಾಂ ಆನೆ ಮತ್ತು ಪುಟ್ಟ' ನಾಟಕವು ಗಣೇಶನ ಆನೆಮುಖದ ಮತ್ತು ಗಣೇಶಚತುರ್ಥಿಯ ಸಂದರ್ಭದಲ್ಲಿ ಹೇಳುವ ಚಂದ್ರನ ಶಾಪದ ಕಥೆಯನ್ನು ಮಾತ್ರವಲ್ಲದೆ ಆಲೀಬಾಬಾನ ಕಥೆಯನ್ನೂ ಸೊಗಸಾಗಿ ಅಂತರ್ಗತಗೊಳಿಸಿಕೊಳ್ಳುತ್ತದೆ. ಇದಲ್ಲದೆಯೂ ವೈದೇಹಿ ಸೂರ್ಯ, ಚಂದ್ರ, ಪರ್ವತ, ಸಾಗರ ಇತ್ಯಾದಿಗಳ ಬಗ್ಗೆ ಇರುವ ಜನಪ್ರಿಯ ನಂಬಿಕೆಗಳನ್ನು, ಮಕ್ಕಳು ಬಲ್ಲ ರೈಮ್ಸ್‌ಗಳನ್ನು, ಕತೆಗಳನ್ನು ನಡುನಡುವೆ ಬಳಸುವ ಮೂಲಕ ಮಕ್ಕಳೊಂದಿಗೆ 'ಕನೆಕ್ಟ್' ಆಗುವ ತಂತ್ರವನ್ನು ಬಳಸುತ್ತಾರೆ.

ರಂಗತಂತ್ರದತ್ತ ವಿಶೇಷ ಗಮನ: ಮಕ್ಕಳಿಗೆ 'ಏನನ್ನು' ತಲುಪಿಸಬೇಕು ಎಂಬುದರಷ್ಟೇ ಮುಖ್ಯವಾದ ಪ್ರಶ್ನೆ 'ಹೇಗೆ' ತಲುಪಿಸಬೇಕು ಎಂಬುದು. ಮಕ್ಕಳ ಸಂವಹನ ಸಾಧ್ಯತೆ ವೈದೇಹಿಯವರ ನಾಟಕದ ಮುಖ್ಯ ಕಾಳಜಿಯಾದರೂ, ಅದಕ್ಕಾಗಿ ಅವರು ನಾಟಕತಂತ್ರದಲ್ಲಿ ಯಾವುದೇ ಬಗೆಯ ರಾಜಿಗೆ ಒಳಗಾದವರಲ್ಲ. ದೊಡ್ಡವರಿಗಾಗಿ ಒಬ್ಬ ಪ್ರಯೋಗಶೀಲ ನಾಟಕಕಾರ ಎಷ್ಟು ಗಂಭೀರವಾಗಿ ನಾಟಕ ಪ್ರಕಾರವನ್ನು ಪರಿಗಣಿಸಬಲ್ಲನೋ ಅದಕ್ಕಿಂತ ಒಂದು ಪಟ್ಟು ಹೆಚ್ಚಾಗಿಯೇ ವೈದೇಹಿ ಪರಿಶ್ರಮಿಸಿದ್ದಾರೆ. ಈ ಅರ್ಥದಲ್ಲಿ ವೈದೇಹಿಯವರ

ಮಕ್ಕಳ ನಾಟಕಗಳು ನಿರ್ದೇಶಕರ ರಂಗಸಾಧ್ಯತೆಗಳ ನಿರೀಕ್ಷೆಗಳನ್ನು ಈಡೇರಿಸಿಕೊಡುವ, ವಿಸ್ತರಿಸುವ ಪ್ರಯತ್ನಗಳು. ಉದಾಹರಣೆಗೆ, 'ಝುಂಝಾಂ ಆನೆ ಮತ್ತು ಪುಟ್ಟ' ನಾಟಕದ ಆಕಾಶದಿಂದ ಇಳಿದು ಬಂದು ನೆರವು ನೀಡುವ ಚಂದ್ರ, 'ಸೂರ್ಯ ಬಂದ' ನಾಟಕದ ಗುಡ್ಡ ಅಡಿ ಸಿಕ್ಕಿಹಾಕಿಕೊಂಡಿರೋ ಸೂರ್ಯ, 'ಸೋಮಾರಿ ಓಲ್ಯಾ' ನಾಟಕದಲ್ಲಿ ತನ್ನಷ್ಟಕ್ಕೇ ತಾನೇ ಓಡಾಡುವ ಓಲೆ ಉಂಗುರು ಇತ್ಯಾದಿ.

ಮಕ್ಕಳನ್ನು ಮುದಗೊಳಿಸುವ ಕಲ್ಪಕತೆ: ಮಕ್ಕಳಲ್ಲಿರುವ, ಆದರೆ, ಬೆಳೆಯುತ್ತ ಕಳೆದುಹೋಗುವ ಎರಡು ಮುಖ್ಯ ಸಂಗತಿಗಳು ಅವರ ಮುಗ್ಧ ಮನಸ್ಸು ಮತ್ತು ಬೆರಗುಗಣ್ಣು. ಅಕ್ಕಪಕ್ಕ ನಿಂತ ಎರಡು ಮಕ್ಕಳು ಒಂದೇ ಚಂದ್ರನನ್ನು ನೋಡುತ್ತ, ನನ್ನ ಚಂದ್ರನಲ್ಲಿರೋದು ಜಿಂಕೆ.. .. .. ನನ್ನ ಚಂದ್ರನಲ್ಲಿರೋದು ಮೊಲ ಅಂತ ಹೇಳಿಕೊಂಡು ಖುಷಿಪಡುವ.. ಪರಸ್ಪರರನ್ನು ನಂಬುವ ದೃಶ್ಯವೇ ಇದಕ್ಕೆ ಸಾಕ್ಷಿ. ಇಂತಹ ಹಲವು ದೃಶ್ಯಗಳನ್ನು ರಂಗದ ಮೇಲೆ ತರುವುದಕ್ಕೆ ವೈದೇಹಿಯವರು ಪಟ್ಟ ಪರಿಶ್ರಮವೇ ಅವರ ಮಕ್ಕಳ ನಾಟಕಗಳು. ಉದಾಹರಣೆಗೆ, ದಿನದಿನವೂ ತುಂಬಿದಂತೆಯೇ ಇರುವ ಅಂಗಡಿಯ ಮಿಠಾಯಿ ಡಬ್ಬಿಗೆ ಮಿಠಾಯಿ ಎಲ್ಲಿಂದ ಬರುತ್ತೆ ಅನ್ನೋ ಕುತೂಹಲಕ್ಕೆ ಕಣ್ಣು ಪರಿಯುವಷ್ಟೂ ಕಾಣುವ, ಎಷ್ಟು ಮೊಗೆದರೂ ಮುಗಿಯದ ಸಾಗರದಿಂದ ಚೀಲದಲ್ಲಿ ರಾತ್ರಿಯ ಹೊತ್ತು ದಿನವೂ ತುಂಬಿ ತುಂಬಿ ತರುತ್ತಾರೆ ಅನ್ನುವ ಕಲ್ಪನೆ ಮಕ್ಕಳಿಗೆ ಮುದ ನೀಡುವುದು ಮಾತ್ರವಲ್ಲ, ದೊಡ್ಡವರ 'ರತ್ನಾಕರ'ದ ಪಾರಂಪರಿಕ ಪರಿಕಲ್ಪನೆಗೆ ಸಮಾನಾಂತರವಾಗಿ ಬೆಳೆದು ನಿಲ್ಲುವ ಮೂಲಕ ಹಿರಿಯರಿಗೂ ಅರ್ಥಸಾಧ್ಯತೆಯೊಂದನ್ನು ಹೊಳೆಯಿಸುತ್ತದೆ.

ಪ್ರಬೋಧಕತೆ: ವೈದೇಹಿ ತಮ್ಮ ನಾಟಕಗಳ ಮೂಲಕ ಮಕ್ಕಳ ಮನಗೆಲ್ಲುವ ಪ್ರಯತ್ನದ ಅಂತಿಮಗುರಿ ಮಾತ್ರ ಪ್ರಬೋಧನೆಯೇ. ಇದರಲ್ಲಿ ವೈದೇಹಿ ಎರಡು ನೆಲೆಗಳನ್ನು ಅನಾವರಣಗೊಳಿಸುತ್ತಾರೆ. ಒಂದು, ಮಕ್ಕಳು ಕಲಿಯಬೇಕಾದ ಗುಣಗಳು. ಎರಡು, ಮಕ್ಕಳನ್ನು ನೋಡಿ ಹಿರಿಯರು ಕಲಿಯಬೇಕಾದ ಸಂಗತಿಗಳು. ಪ್ರಾಣಿದಯೆ, ಪರಿಸರ ಕಾಳಜಿ, ಮಾನವೀಯ ಮೌಲ್ಯಗಳ ಅರಿವು ಮೂಡಿಸುವಿಕೆ, ಅವಿವೇಕ, ಅತಿಯಾಸೆಗಳ, ಸೋಮಾರಿತನಗಳ ಫಲ ಕೆಡುಕೇ ಎನ್ನುವುದರ ಅನಾವರಣ ಇತ್ಯಾದಿಗಳು ಮೊದಲ ಗುಂಪಿನಲ್ಲಿ ಬಂದರೆ, ಮಕ್ಕಳಲ್ಲಿರುವ ಕಾಮನ್‌ಸೆನ್ಸ್, ಚುರುಕುತನ, ಮುನ್ನುಗ್ಗುವ ಗುಣ, ನಿಷ್ಪಕ್ಷಪಾತ ವರ್ತನೆ ಇತ್ಯಾದಿ ಹಿರಿಯರಿಗೆ ಆದರ್ಶ ಪ್ರಾಯವಾಗಬಲ್ಲ ಹಲವು ಗುಣಗಳಿವೆ ಎಂಬುದು ಎರಡನೆ ನೆಲೆಯ ವಿಚಾರ. ಇದರೊಂದಿಗೆ ವೈದೇಹಿ ಮಕ್ಕಳ ಒಂದು ಸಹಜ ಆಸೆ ಆಕಾಂಕ್ಷೆ, ಇಷ್ಟಾನಿಷ್ಟಗಳನ್ನು, ಮಾನಸಿಕ ಸ್ಥಿತಿಗಳನ್ನು ತಮ್ಮ ನಾಟಕದ ಮೂಲಕ ಪರಿಚಯಿಸುವ ಪ್ರಯತ್ನವನ್ನೂ ಮಾಡುತ್ತಾರೆ. ಮಕ್ಕಳಿಗೆ ತಿಳಿಸಬೇಕಾದ್ದು ನೂರಾರಿದ್ದರೆ, ಮಕ್ಕಳಿಂದ ಹಿರಿಯರು ಕಲಿಯಬೇಕಾದ್ದು ಸಾವಿರಾರು ಎಂಬುದರ ಸಣ್ಣ ಸಣ್ಣ ಉದಾಹರಣೆಗಳು ಈ ನಾಟಕಗಳಲ್ಲಿ ಹೆಜ್ಜೆಗೊಮ್ಮೆ ಕಾಣಸಿಗುತ್ತವೆ.

ಕೆಡುಕನ್ನು ವೈಭವೀಕರಿಸಬಾರದೆಂಬ ಧೋರಣೆ: ಒಳಿತು-ಕೆಡುಕಿನ ಪ್ರಶ್ನೆ ಎಷ್ಟೇ ಮುಖ್ಯವಾದುದಾದರೂ ವೈದೇಹಿ ಅದನ್ನು ಅನಾವರಣಗೊಳಿಸಲು ಕಠಿಣವಾದ ಹಾದಿ ಹಿಡಿಯಲಾರರು. ಒಳ್ಳೆಯದರಿಂದ ಮಕ್ಕಳು ಪ್ರಭಾವಿತರಾಗದಿದ್ದರೂ ಸರಿ ಕೆಟ್ಟದ್ದರಿಂದ ಅವರು ವಿಚಲಿತರಾಗಬಾರದು; ಆಕರ್ಷಿತರಾಗಬಾರದು. ಹಾಗಾಗಿಯೇ ಅವರು ಯಾವ ಕೆಡುಕಿನ ಪಾತ್ರವನ್ನೂ ನಾಟಕದಲ್ಲಿ ವಿಜೃಂಭಿಸಲು ಬಿಡುವುದಿಲ್ಲ. ಅವುಗಳ ಕೆಟ್ಟತನವನ್ನು ಮೂರ್ಖತನವೆಂದೋ ಹಾಸ್ಯವಾಗಿಸಿಯೋ, ಪರಿವರ್ತನೆಗೊಳ್ಳಬಲ್ಲ ಗುಣವೆಂದು ಪಶ್ಚಾತ್ತಾಪಕ್ಕೊಳಪಡಿಸಿಯೋ ಅಥವಾ ಶಿಕ್ಷೆಗೊಳಪಡುವ ರೀತಿಯಲ್ಲಿಯೋ ಮುಕ್ತಾಯಗೊಳಿಸುತ್ತಾರೆ.

ಒಟ್ಟಾರೆ ಹೇಳುವುದಾದರೆ, ವೈದೇಹಿಯವರ ಮಕ್ಕಳ ನಾಟಕಗಳೆಂದರೆ, ಮಕ್ಕಳಿಗೆ ಏನಿಷ್ಟವೋ ಅದೆಲ್ಲವೂ ಬಂದು ನೆರೆಯುವ ಜಾತ್ರೆಯಂತೆ. ಅಲ್ಲಿ ಸೂರ್ಯ-ಚಂದ್ರರಿಂದ ಮೊದಲುಗೊಂಡು ಆನೆ, ಸಿಂಹ, ನಾಯಿ, ಬೆಕ್ಕು, ಗಿಳಿ, ಮೈನಾ, ಇರುವೆಯಿಂದ ಹಿಡಿದು ಕೊನೆಗೆ ಬದನೆಕಾಯಿ, ಮೆಣಸಿನಕಾಯಿವರೆಗೆ.. .. ಎಲ್ಲವೂ ಬಂದು ತಮ್ಮ ತಮ್ಮ ಚಮತ್ಕಾರ ತೋರಿಸಬೇಕು. ಅವುಗಳ ಕ್ರಿಯೆಗೆ ಮಕ್ಕಳು ಬೆರಗುಗಣ್ಣಿಂದ ನೋಡುವ ಉಕ್ಕುವ ಸಾಗರ, ಮುಗಿಲುಮುಟ್ಟುವ ಗುಡ್ಡ, ದಟ್ಟವಾದ ಕಾನನ, ಆಲೀಬಾಬನ ಗುಹೆ ಇತ್ಯಾದಿ ವೇದಿಕೆಗಳೆಲ್ಲ ಸಜ್ಜಾಗಬೇಕು. ಮನುಷ್ಯ ಪಾತ್ರಗಳಲ್ಲೂ ಅಷ್ಟೇ, ಕಥೆ ಹೇಳುವ ಅಜ್ಜ-ಅಜ್ಜಿ, ಒದೆ ತಿನ್ನುವ, ನಗೆ ಉಕ್ಕಿಸುವ ವಿಲನ್‌ಗಳು, ಕಾಳಜಿ ತೋರುವ ಹಿರಿಯರು, ಕುತೂಹಲ ತಣಿಸುವ ಮೇಷ್ಟ್ರು, ಕುತೂಹಲ ಹೆಚ್ಚಿಸುವ ಮಾಂತ್ರಿಕರು ಹೀಗೆ.. .. ನೋಡುತ್ತಿರುವ ಮಕ್ಕಳಿಗೆ ತಾವೂ ಹತ್ತಿರಕ್ಕೋಗಿ ಮುಟ್ಟಬೇಕು, ಮಾತಾಡಿಸಬೇಕು, ಮಡಿಲಲ್ಲಿ ಆಡಬೇಕು ಅನ್ನಿಸೋ ಜೀವಗಳು ಬೇಕು. ಹಾಗೆಯೇ ರಂಗದ ಮೇಲೆ ಮಾತಾಡ್ತ, ಹಾಡ್ತ..ಕುಣೀತಾ..ಇರೋ ಪಾತ್ರಗಳನ್ನು ನೋಡಿ ನಂಗೂ ಅದನ್ನ ಹಾಡೋಕಾಗುತ್ತೆ, ಕುಣಿಯೋಕಾಗುತ್ತೆ ಅಂತ ಅನ್ನಿಸುವಂತಹ ಸುಭಗವಾದ ಸಂಭಾಷಣೆ, ಪ್ರಾಸಬದ್ಧವಾದ (ಕೆಲವೊಮ್ಮೆ ಅರ್ಥವಿಲ್ಲದಿದ್ದರೂ, ಚಿತ್ರವಿಚಿತ್ರವಾದ ಸದ್ದು ಮಾಡುವ ಮೂಲಕವೆ ಮಕ್ಕಳಿಗೆ ಖುಷಿಕೊಡುವ) ಹಾಡುಗಳು ಬಂದು ಮೇಳೈಸಬೇಕು. ಈ ಎಲ್ಲ ಸಂಗತಿಗಳನ್ನು ಒಂದು ದಾರದಲ್ಲಿ ಪೋಣಿಸುವಂತಹ ಮಕ್ಕಳಿಗೆ ಪ್ರಿಯವಾಗುವ, ಪ್ರಬೋಧಕವಾಗುವ ಪಾರಂಪರಿಕ ಇಲ್ಲವೆ ಸ್ವಕಲ್ಪಿತ ಕಥೆಗಳು ರಂಗದ ಮೇಲೆ ನಿರೂಪಣೆಗೊಳ್ಳಬೇಕು. ಇದು ವೈದೇಹಿಯವರ ಮಕ್ಕಳ ನಾಟಕ ಮೀಮಾಂಸೆ.



# ಬಾಲ್ಯಕಾಲದ ವಿತರ್ಕಲೋಕ

✦ ಅಕ್ಷರ ಕೆ ವಿ

ಈ ಸಂಕಲನದ ಒಂದು ಕಥೆಯಲ್ಲಿ ಇಬ್ಬರು ಮಕ್ಕಳು ದೋಣಿಯಲ್ಲಿ ಹೋಗುತ್ತಿದ್ದಾಗ ಮುಳುಗಿ, ಮೀನಿನ ಬಾಯಿಗೆ ಸಿಕ್ಕು ಬಚಾವಾಗಿ, ಅದೇ ಕಾರಣದಿಂದ ನೀರಿನಾಳದ ಮೀನಿನ ಅರಮನೆಯನ್ನೆಲ್ಲ ಓಡಾಡಿಕೊಂಡು, ಮೋಜು-ಮೇಜವಾನಿ ಪೂರೈಸಿ, ಮತ್ತೆ ಮರಳಿ ದೋಣಿ ಹಿಡಿದು ಮನೆ ತಲುಪುವ ಒಂದು ವಿಚಿತ್ರ ವೃತ್ತಾಂತ ಇದೆ. ಅದೇ ರೀತಿಯಲ್ಲಿಯೇ, ವೈದೇಹಿಯವರ ಈ ಕಥೆಗಳು ಐವತ್ನೂರರ ಹೊಸ್ತಿಲಲ್ಲಿರುವ ನನ್ನನ್ನು ಹಠಾತ್ತಾಗಿ ಕಾಲಕೋಶವೊಂದರಲ್ಲಿ ಕೂರಿಸಿಕೊಂಡು ಬಾಲ್ಯದ ಲೋಕದಲ್ಲಿ ತಿರುಗಾಡಿಸಿ ವಾಪಸು ಕರೆತಂದವು. ಬಾಲ್ಯದ ಆ ಲೋಕದಲ್ಲಿ ಅದೇನೆಲ್ಲ ಇತ್ತು – ಅಲ್ಲಿ ಆಟ-ಹೊಡೆದಾಟಗಳಿದ್ದವು, ಹಬ್ಬ-ಹರಿದಿನಗಳಿದ್ದವು, ನೆಂಟರು-ನೇಹಿಗರಿದ್ದರು, ಹಣ್ಣು-ಹಕ್ಕಿಗಳಿದ್ದವು, ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಲೌಕಿಕ ಉಪದ್ವ್ಯಾಪಗಳೇನೂ ತಟ್ಟದ ಒಂದು ಸ್ವಚ್ಛಂದ ವಿಲಾಸ ಆ ಕಾಲಕ್ಕಿತ್ತು. ಹಾಗಂತ ಅದನ್ನು ನಮ್ಮ ಬದುಕಿನ ಸುವರ್ಣಯುಗವೆಂದೇನೂ ವೈಭವಿಸಬೇಕಿಲ್ಲ. ಕಾರಣ, ಆಗಲೂ ನಮಗೆಲ್ಲ ನಮ್ಮದೇ ಖಾಸಗಿಯಾದ ಗಾಢ ಆತಂಕಗಳಿದ್ದವು, ತೀವ್ರ ಪೈಪೋಟಿಯಿತ್ತು, ಹೇಳಿಕೊಳ್ಳಲಿಕ್ಕಾಗದ ಅವಮಾನಗಳಿದ್ದವು, ದೆಯ್ಯಗಳಿಂದ ಆರಂಭಗೊಂಡು ಪೋಲೀಸರವರೆಗಿನ ನಾನಾ ಬಗೆಯ ನಿಗೂಢ ಭಯಗಳೂ ಇದ್ದವು. ಹಾಗಿದ್ದರೂ ಬಾಲ್ಯಕ್ಕೊಂದು ವಿಶೇಷ ಪ್ರಭೆ ಇದ್ದಿದ್ದಾದರೆ, ಅದಕ್ಕೆ ಕಾರಣ, ನನ್ನ ಪ್ರಕಾರ, ಇದು – ಆಗ ನಾವು ಗ್ರಹಿಸುತ್ತಿದ್ದ ಲೋಕವಾಸ್ತವವೇ ಇವತ್ತಿನ ನಮ್ಮ ಲೋಕಾಕಾರಕ್ಕಿಂತ ಭಿನ್ನವಾಗಿತ್ತು. ಈಗ ನಾವು ನೋಡುವ ಮರ ಪರ್ವತ ಮೊದಲಾದ ವಸ್ತುಜಗತ್ತು ಅಂದೂ ಅದೇ ಆಗಿದ್ದರೂ ಆ ವಸ್ತುಜಗತ್ತಿನ ಘಟಕಗಳನ್ನು ನಾವು ಜೋಡಿಸಿಕೊಂಡು ನೋಡುವ ಕ್ರಮವೇ ಬೇರೆಯದಾಗಿತ್ತು. ಅಷ್ಟೇ ಅಲ್ಲ, ಆ ಭವಕ್ಕೆ ನಾವು ಹಚ್ಚುತ್ತಿದ್ದ ಭಾವಗಳು ಈಗಿನದ್ದಕ್ಕಿಂತ ಸಂಪೂರ್ಣ ಭಿನ್ನವೇ ಆಗಿದ್ದವು.

ನನ್ನದೇ ಉದಾಹರಣೆ ನೆನಪಿಸಿಕೊಳ್ಳುವುದಾದರೆ, ಚಂದಮಾಮಾ ಪತ್ರಿಕೆಯನ್ನು ಓದುತ್ತಿದ್ದ ನನಗೆ ಆಗಾಗ ಮರಗಳ ಮೇಲೆ ವಿಕ್ರಮಾದಿತ್ಯ ಎತ್ತಿಕೊಳ್ಳುವ ಪಿಶಾಚಿಯ ಚಿತ್ರ

ಗೋಚರಿಸುತ್ತಿತ್ತು; ಗೋಲಿಗಳು ಈ ಜಗತ್ತಿನ ಅಮೂಲ್ಯ ಆಸ್ತಿಯೆಂದು ನನಗೆ ಕಾಣಿಸುತ್ತಿತ್ತು. ಯಾರದ್ದೋ ಮನೆಯಲ್ಲಿ ಆಟವಾಡುತ್ತಿದ್ದ ನನ್ನನ್ನು ಕರೆದುಕೊಂಡು ಹೋಗಲು ಮನೆಯವರು ಬಂದರೆ, 'ಥತ್, ಇವರದ್ದೇನು ಅಧಿಕ ಪ್ರಸಂಗ' ಎಂದು ಸಿಟ್ಟು ಏರುತ್ತಿತ್ತು. ಒಮ್ಮೆ, ನನಗೆ ನೆನಪಿದೆ, ಪ್ರತಿದಿನವೂ ಸಂಜೆ ನಮ್ಮದೇ ಮನೆಗೆ ನಾವು ವಾಪಸು ಬರುವ ಅಗತ್ಯವಾದರೂ ಏನುಂಟು, ಹಾಗೆ ಕಾನೂನು ಮಾಡಿದವರು ಯಾರು – ಎಂದೆಲ್ಲ ನಾನು ತುಂಬ ಹೊತ್ತು ತಾತ್ವಿಕ ಜಿಜ್ಞಾಸೆ ನಡೆಸಿದ್ದೆ. ವೈದೇಹಿಯವರ ಕಥೆಗಳು ನನ್ನನ್ನು ಬಾಲ್ಯಕ್ಕೆ ಕರೆದೊಯ್ದುವು – ಎಂದು ನಾನು ಹೇಳುತ್ತಿರುವಾಗ, ನಾನು ಹೇಳಬೇಕೆಂದಿರುವುದು ಇದನ್ನೇ. ಈ ಕಥೆಗಳು ನನಗೆ ಮತ್ತೊಮ್ಮೆ ಬಾಲ್ಯವು ಜಗತ್ತನ್ನು ನೋಡುವ ಕ್ರಮಕ್ಕೆ ಮುಖಾಮುಖಿ ಮಾಡಿತು; ಮಾತ್ರವಲ್ಲ, ಆಗ ನಾನು ಜಗತ್ತನ್ನು ಗ್ರಹಿಸುತ್ತಿದ್ದ ಕ್ರಮ ಕೂಡಾ ಈಗ ನಾನು ಅನುಸರಿಸಲು ಕಲಿತಿರುವ ತರ್ಕಪದ್ಧತಿಯಷ್ಟೇ ಮೌಲ್ಯಯುತವಾದದ್ದಲ್ಲವೆ? – ಎಂಬ ಗುಮಾನಿ ಹುಟ್ಟುವ ಹಾಗೆ ಆದದ್ದು ಈ ಕಥೆಗಳ ಓದಿನಿಂದ ನಾನು ಪಡೆದ ಲಾಭ. ಇನ್ನೊಂದು ರೀತಿಯಿಂದ ಹೇಳುವುದಾದರೆ, ಅಂದಿಗೆ ಹೋಲಿಸಿದರೆ ಇಂದು ನಾನೇನೂ ಹೆಚ್ಚು ಪ್ರಬುದ್ಧನೂ ವಿಚಾರಶೀಲನೂ ಆಗಿಲ್ಲ; ನನ್ನ ಬುದ್ಧಿ ಮತ್ತು ವಿಚಾರಗಳ ಕ್ರಮ ಬೇರೆಯಾಗಿದೆ ಅಷ್ಟೇ – ಎಂಬುದು ನನಗೆ ಸ್ಪಷ್ಟವಾಗುವ ಹಾಗೆ ಮಾಡಿದ್ದು ಈ ಕಥೆಗಳ ಸಾಧನೆ.

ನನ್ನ ಇಂಥ ಅರಿವಿಗೆ ಕಾರಣವಾದ ಚೋದಕಗಳು ವೈದೇಹಿಯವರ ಆ ಕಥೆಗಳಲ್ಲೇ ಇದೆ – ಎಂದೂ ನನಗೆ ಅನ್ನಿಸುತ್ತದೆ. ಉದಾಹರಣೆಗೆ, 'ಅಬ್ಬಾಲಕ್ಕ ಅಜ್ಜೀ ಮನೆಗೆ ಹೋದದ್ದು' ಎಂಬ ಹೆಸರಿನ ಮೊದಲನೆಯ ಕಥೆಯನ್ನೇ ನೋಡಿ. ಈ ಕಥೆಯು ವಯಸ್ಕ ಲೋಕವಲ್ಲಿ ನಾವು ಯಾವುದನ್ನು ವಾಸ್ತವ ಎಂದು ಕರೆಯುತ್ತೇವೋ, ಆ ಜಗತ್ತಿನ ತರ್ಕವನ್ನು ಅನುಸರಿಸುವುದಿಲ್ಲ – ಹುಲಿ ಬಂದು ಮೂಸಿ ನೋಡಿದರೂ ಅದು ಈ ಪುಟ್ಟ ಹುಡುಗಿಯನ್ನು ಕೊಲ್ಲುವುದಿಲ್ಲ, ಆಕೆ ನದೀತೀರಕ್ಕೆ ತಲುಪಿದಾಗ ಅಂಬಿಗರು ಆಕೆಗಾಗಿ ಕಾಯುತ್ತ ನಿಂತಿರುತ್ತಾರೆ. ಹಾಗಂತ ಅದನ್ನು ಫ್ಯಾಂಟಸಿ ಎಂದು ಕರೆದು ಬೇರೆ ಕಡೆ ಇಡಬಹುದಾದಷ್ಟು ವೈಚಿತ್ರ್ಯವೂ ಅದರಲ್ಲಿಲ್ಲ. ಯಾಕೆಂದರೆ, ಅತಿಮಾನುಷ ಎಂದು ನಾವು ಕರೆಯಬಹುದಾದ ಯಾವುದೇ ಪಾತ್ರ-ಸನ್ನಿವೇಶ ಅದರಲ್ಲಿ ಇಲ್ಲ. ಅದರಲ್ಲಿರುವ ವಿಶೇಷ ಒಂದೇ ಒಂದು – ಅದು ಈ ನಿತ್ಯಜಗತ್ತಿನ ಅವೇ ಪಾತ್ರಗಳನ್ನೂ ಸನ್ನಿವೇಶಗಳನ್ನೂ ಜೋಡಿಸಿರುವ ಕ್ರಮ. ಈ ಕಥೆಯ ತುದಿಯ ಭಾಗ ಅಂಥ ಜೋಡಣೆಯ ವಿಶೇಷವನ್ನು ಇನ್ನೂ ಒಂದು ಹಂತ ಮೇಲಕ್ಕೆ ಒಯ್ಯುತ್ತದೆ. ಮನೆಯಲ್ಲಿ ಮಲಗಿರುವ ಅಬ್ಬಾಲಕ್ಕನಿಗೆ ಎಚ್ಚರವಾಗಿ, ಇದೆಲ್ಲ ಆಕೆಯ ಕನಸಿರಬಹುದು ಎಂಬ ವಾಸ್ತವಕ್ಕೆ ಈ ಕಥೆ ಹೊರಳಿಕೊಳ್ಳುತ್ತದೆ. ಆದರೆ, ಆ ವಾಸ್ತವವನ್ನೇ ಒಪ್ಪೋಣವೆಂದರೆ, ಅಷ್ಟರಲ್ಲಾಗಲೇ ಆ ಮನೆಯಲ್ಲಿ ಇಲ್ಲದ ಅಜ್ಜಿ ಅಲ್ಲಿಗೆ ಬಂದು ನಿಂತಿರುತ್ತಾಳೆ, ಮತ್ತು ಮನೆಯ ಗೋಡೆಯ ಮೇಲಿರುವ ಅಜ್ಜಿಯ ಫೋಟೋ ಕಾಣೆಯಾಗಿರುತ್ತದೆ. ಹೀಗೆ ಕನಸು ಹರಿದಾಗ ಮೂಡುವ

ವಾಸ್ತವವೇ ಅವಾಸ್ತವವಾದಾಗ, ಇನ್ನು ಅದರೊಳಗಿನ ಕನಸು ಹೇಗಿರಬೇಡ – ಅಂಥ ಒಂದು ವಿಚಿತ್ರ ಕಥನಗುಣ ಈ ಕಥೆಗಿದೆ.

'ಚಿಟ್ಟೆಪಾಲೆ' ಎಂಬ ಇನ್ನೊಂದು ಕಥೆ, ಇಂಥ ವಾಸ್ತವಗಳ ಕಲಬೆರಕೆಗೆ ಇನ್ನೊಂದು ಆಯಾಮವನ್ನೇ ಕೊಡಬಲ್ಲಂಥ ಕೃತಿ. ಇದರಲ್ಲಿ ಮೂಲತಃ ಒಂದೇ ಕಥೆಯು ಎರಡು ವಿರುದ್ಧ ದಿಕ್ಕಿನಿಂದ ಕಥಿತವಾಗುತ್ತಹೋಗುತ್ತದೆ – ತಲೆ ತುಂಬ ಹೇನುಗಳಾಗಿರುವ ಹುಡುಗಿಯ ಕಥೆಯು ಹುಡುಗಿ ಮತ್ತು ಅವಳ ಅಮ್ಮನ ನೆಲೆಯಿಂದ ಕಥನಗೊಳ್ಳುತ್ತಿದ್ದರೆ, ಇನ್ನೊಂದು ಕಡೆ, ಹೇನುಗಳ ನೆಲೆಯಿಂದ ಈ ಕಥೆ ಬೇರೆ ರೂಪದಲ್ಲಿ ತೆರೆದುಕೊಳ್ಳುತ್ತಹೋಗುತ್ತದೆ. ಈ ಎರಡು ಕಥೆಗಳು ನಮಗೇ ಗೊತ್ತಾಗದಂತೆ ಪರಸ್ಪರ ಹೆಣೆದುಕೊಂಡು, ಹೇನುಗಳೇ ಹುಡುಗಿಯ ಸಹಾಯ ಕೇಳಲಿಕ್ಕೆ ಬರುವ ಒಂದು ಘಟ್ಟದಲ್ಲಿ ಹಠಾತ್ತಾಗಿ ಮುಖಾಮುಖಿಯಾಗುತ್ತವೆ. ಮಾತ್ರವಲ್ಲ, ಹೀಗೆ ಮುಖಾಮುಖಿ ಮಾಡುವಾಗ ಕಥನಕಾರರು ಹೇನುಗಳ ವಾಸ್ತವವನ್ನೂ ಮತ್ತು ಮನುಷ್ಯರ ವಾಸ್ತವವನ್ನೂ ಸಮಾನ ಮೌಲ್ಯದವು ಎಂಬಂತೆ ಕಾಣಿಸುತ್ತ ಹೋಗುತ್ತಾರೆ – ಮನುಷ್ಯರಿಗೆ ಹೇನಿನಿಂದ ಆಗುವ ತೊಂದರೆ ಎಷ್ಟು ನಿಜವೋ ಹೇನುಗಳಿಗೆ ಮನುಷ್ಯರಿಂದಾಗುವ ತಾಪತ್ರಯ ಅದಕ್ಕಿಂತ ಹೆಚ್ಚಿನದು. ಇಂಥ ಬಹುವಾಸ್ತವ ಸಂಯೋಜನೆಯೇ ಈ ಎಲ್ಲ ಕಥನಗಳ ಮೂಲದಲ್ಲಿರುವುದರಿಂದ, ಈ ಯಾವ ಕಥೆಯಲ್ಲೂ, ಸಾಧಾರಣವಾಗಿ ಮಕ್ಕಳ ಕಥೆಗಳ ತುದಿಗೆ ಕಾಣಸಿಗಬೇಕೆಂದು ನಾವು ತಿಳಿಯುವ 'ನೀತಿ' ಇಲ್ಲಿ ಇಲ್ಲವಾಗುತ್ತದೆ.

ಹಾಗಿದ್ದರೆ, ಈ ಕಥೆಗಳಲ್ಲಿ ವೈದೇಹಿಯವರು ಮಾಡುತ್ತಿರುವುದೇನು? ಅದನ್ನು ವಿವರಿಸಲಿಕ್ಕೆ ನಾನು ಈ ತರ್ಕ ಎಂಬ ಶಬ್ದವನ್ನು ತುಸು ಜಗ್ಗಿ ನೋಡುತ್ತೇನೆ. ಸಾಧಾರಣವಾಗಿ ವಯಸ್ಕ ಜಗತ್ತಿನಲ್ಲಿ ನಾವು ಉಪಯೋಗಿಸುವ ತರ್ಕ ಎಂಬ ಪದದ ಅರ್ಥವೇನೆಂಬುದು ನಮಗೆ ಪರಿಚಿತ – ಒಂದೇ ಮಾತಿನಲ್ಲಿ ಹೇಳುವುದಾದರೆ, ಅದು ಕಾರ್ಯಕಾರಣ ಸಂಬಂಧದ ಮೇಲೆ, ನಮಗೆ ಕಾಣುವ ವಾಸ್ತವವನ್ನು ವಿವರಿಸುವ ಒಂದು ಕ್ರಮ. ಅದೇ ವಾಸ್ತವವನ್ನು ನಾವು ಕಾರ್ಯಕಾರಣ ಸಂಬಂಧವಿಲ್ಲದೆಯೇ ವಿವರಿಸಲು ಹೊರಟರೆ ಅಂಥ ಕ್ರಮಕ್ಕೆ ನಾವು ಅ–ತರ್ಕ ಎಂದು ಕರೆಯಬಹುದು. ಅಥವಾ, ಅಂಥ ಕಾರ್ಯಕಾರಣ ಸಂಬಂಧವನ್ನು ನಾವು ಪ್ರಜ್ಞಾಪೂರ್ವಕವಾಗಿ ತಿರುಚಿ, ಅಪಾರ್ಥವೋ ಅಥವಾ ಅವಾಸ್ತವಿಕವೋ ಆಗುವ ಹಾಗೆ ಮಾಡಿದರೆ, ಅದನ್ನು ಕು–ತರ್ಕ ಎಂದು ಕರೆಯಬಹುದು. ಆದರೆ ವೈದೇಹಿಯವರ ಈ ಕಥನಗಳಲ್ಲಿ ಕಾಣಸಿಗುವುದು ಮೇಲೆ ಸೂಚಿಸಿದ ಬಗೆಯ ತರ್ಕದ ಲೋಕವೂ ಅಲ್ಲ; ಅಥವಾ ಅದು ಅತರ್ಕ ಯಾ ಕುತರ್ಕಗಳ ಲೋಕವೂ ಅಲ್ಲ. ಬದಲು, ಬಾಲ್ಯದ ಒಂದು ವಿ–ತರ್ಕವನ್ನು ವೈದೇಹಿ ಈ ಕಥೆಗಳಲ್ಲಿ ಆವಿಷ್ಕರಿಸಲು ಪ್ರಯತ್ನ ಮಾಡಿದ್ದಾರೆ. ಉದಾಹರಣೆಗೆ, 'ಪುಟ್ಟಪುಟ್ಟರ ಪುಟಾಣಿ ದಿನಗಳು' ಎಂಬ ಕಥೆಯಲ್ಲಿ, ನದಿಯಲ್ಲಿ ಸಾಗುವ ಮಕ್ಕಳು ದೋಣಿ ಮಗುಚಿದಾಗ ಮುಳುಗಿ ಸಾಯುವುದಿಲ್ಲ;

ಬದಲು, ಮೀನಿನ ಹೊಟ್ಟೆಯೊಳಗೆ ಸೇರಿ ತಮ್ಮ ಪಯಣವನ್ನು ಮುಂದುವರೆಸುತ್ತಾರೆ. ಇದು ನಾವು ಕಾಣುವ ಲೋಕವಾಸ್ತವದ ಕಾರ್ಯಕಾರಣ ಸಂಬಂಧವನ್ನು ಮುರಿಯುವುದರಿಂದ, ಇದನ್ನು ತರ್ಕಬದ್ಧವೆನ್ನಲಾಗದು. ಆದರೆ, ಇದು ತರ್ಕವೇ ಇಲ್ಲದ ಜಗತ್ತೂ ಅಲ್ಲ-ಇಲ್ಲಿ ನಡೆಯುವ ಕಥೆಯ ಹರಿವು ಒಂದು ಘಟನೆಯಿಂದ ಇನ್ನೊಂದಕ್ಕೆ ಕುಣಿಕೆ ಹಾಕಿಕೊಂಡೇ ಸಾಗುವುದರಿಂದ, ಅದು ಅತರ್ಕ ಎನ್ನಲೂ ಬರುವಂತಿಲ್ಲ; ಅಥವಾ ಉದ್ದೇಶಪೂರ್ವಕ ತಿರುಚುವಿಕೆಯ ಕುತರ್ಕವೂ ಈ ಕಥೆಯಲ್ಲಿಲ್ಲ. ಬದಲು, ಇದು ಬಾಲ್ಯದಲ್ಲಿ ನಾವೆಲ್ಲ ಸತ್ಯವೆಂದು ಭಾವಿಸಿದ್ದ ಇನ್ನೊಂದು ಬಗೆಯ ಕಾರ್ಯಕಾರಣ ಸಂಬಂಧವನ್ನಾಧರಿಸಿದ ವಿತರ್ಕವೊಂದನ್ನು ನಮ್ಮೆದುರಿಗೆ ಬಿಚ್ಚುತ್ತದೆ. ವೈದೇಹಿ ಅವರ ಈ ಸಂಕಲನದ ಎಲ್ಲ ಕಥೆಗಳಿಗಿರುವ ಒಂದು ವಿಶಿಷ್ಟ ಸಾಮಾನ್ಯ ಲಕ್ಷಣ ಇದೇ ಎಂದು ನಾನು ಭಾವಿಸುತ್ತೇನೆ.

ಸ್ವಾರಸ್ಯದ ಸಂಗತಿಯೆಂದರೆ, ಮೇಲೆ ನಾನು ಚುಟುಕಾಗಿ ಗುರುತಿಸಿರುವ ಈ ಎಲ್ಲ ವಿಶೇಷಗಳು, ವೈದೇಹಿಯವರು ಪ್ರಜ್ಞಾಪೂರ್ವಕವಾಗಿ ಮಕ್ಕಳಿಗಾಗಿ ಎಂದೇ ಬರೆದ ಕಥೆ-ಕವನ-ನಾಟಕಗಳಿಗೆ ಮಾತ್ರ ಸೀಮಿತವಾದ ಸಂಗತಿಗಳಲ್ಲ; ಸೂಕ್ಷ್ಮವಾಗಿ ನೋಡಿದರೆ, ವೈದೇಹಿಯವರ ಕಲಾಗ್ರಹಿಕೆಯ ಮಾರ್ಗದಲ್ಲಿಯೇ ಇಂಥ ಒಂದು ವಿಶೇಷ ಇದೆ. ಒಂದು ಬಗೆಯ ತರ್ಕದಿಂದ ಇನ್ನೊಂದು ಬಗೆಯ ತರ್ಕಕ್ರಮಕ್ಕೆ ಸಲೀಸಾಗಿ ದಾಟಿಕೊಳ್ಳುವ ಗುಣ, ಒಂದೇ ವಾಸ್ತವವನ್ನು ಇನ್ನೊಂದು ದಿಕ್ಕಿನಿಂದ ಸಂಪೂರ್ಣ ಬೇರೆಯಾಗಿಯೇ ಗ್ರಹಿಸುವ ಸಾಮರ್ಥ್ಯ- ಇವು, ತಕ್ಷಣಕ್ಕೆ ನೆನಪಾಗುವ ಉದಾಹರಣೆಗಳಲ್ಲೇ ಹೇಳುವುದಾದರೆ, ವೈದೇಹಿಯವರ 'ಕ್ರೌಂಚಪಕ್ಷಿಗಳು' ಕಥೆಯಲ್ಲೋ ಅಥವಾ 'ಶಿವನ ಮೀಸುವ ಹಾಡು'ದಂಥ ಪದ್ಯಗಳಲ್ಲೋ ಕಾಣಸಿಗುವ ಒಂದು ಲಕ್ಷಣವೇ ಆಗಿದೆ. 'ಚಿಟ್ಟಿಬಾಲೆ' ಕಥೆಯಲ್ಲಿ ಹುಡುಗಿಯ ಗ್ರಹಿಕೆಯ ಲೋಕ ಮತ್ತು ಹೇನಿನ ಗ್ರಹಿಕೆಯ ಲೋಕಗಳು ಪರಸ್ಪರ ಢಿಕ್ಕಿಹೊಡೆದು ಇವೆರಡಕ್ಕೂ ಮಿಗಿಲಾದ ಒಂದು ವಿಶಾಲ-ವಾಸ್ತವವನ್ನು - ಮೆಟಾರಿಯಾಲಿಟಿಯನ್ನು - ನಮಗೆ ತೆರೆಸುವ ಹಾಗೆಯೇ, 'ಕ್ರೌಂಚಪಕ್ಷಿಗಳು' ಕಥೆಯಲ್ಲೂ ಅಶ್ವಾರ್ಣ ಭಟ್ಟರು ಮತ್ತು ಅವರ ಹೆಂಡತಿಯರ ಕಥೆಯಲ್ಲಿ ವಿರುದ್ಧ ಗ್ರಹಿಕೆಗಳ ಒಂದು ಮುಖಾಮುಖಿ ಇದೆ - 'ಚಿಟ್ಟಿಬಾಲೆ'ಯಂತೆ ಅಲ್ಲೂ, ಈ ಎರಡರಲ್ಲಿ ಯಾವುದೇ ಒಂದು ಗ್ರಹಿಕೆಯ ಕ್ರಮವನ್ನು ಲೇಖಕರು ಅಧಿಕೃತಗೊಳಿಸದೆ, ನಮಗೆ ಇವೆರಡಕ್ಕೂ ಮೀರಿದ ಒಂದು ಮೆಟಾರಿಯಾಲಿಟಿ ಕಾಣುವ ಹಾಗೆ ಮಾಡುತ್ತಾರೆ. ಆದ್ದರಿಂದ, ಸೂಕ್ಷ್ಮವಾಗಿ ನೋಡಿದರೆ, 'ಕ್ರೌಂಚಪಕ್ಷಿಗಳು' ಕಥೆಗೂ ಮತ್ತು 'ಚಿಟ್ಟಿಬಾಲೆ'ಯಂಥ ಕಥೆಗೂ ವ್ಯತ್ಯಾಸ ಇರುವುದು ಅದರ ಸಾಮಾಜಿಕ ಪ್ರತಿಫಲನದ ವ್ಯಾಪ್ತಿ-ವಿಸ್ತಾರಗಳಲ್ಲೇ ಹೊರತು, ನಾವು ಹಲವೊಮ್ಮೆ ತಿಳಿಯುವಂತೆ, ಅದರ ಗ್ರಹಿಕೆಯ ಕ್ರಮದಲ್ಲಿಯೂ ಅಲ್ಲ; ಅಥವಾ ಸಂಕೀರ್ಣತೆಯ ತಾರತಮ್ಯದಲ್ಲೂ ಅಲ್ಲ.

ಮುನ್ನುಡಿಯ ನೆಪದಲ್ಲಿ ಈ ಎಲ್ಲ ಪ್ರಸ್ತಾಪಗಳನ್ನು ನಾನು ಮಾಡುತ್ತಿರುವುದರ ಹಿಂದೆ ಎರಡು ಉದ್ದೇಶಗಳಿದ್ದಾವೆ. ಅದನ್ನು ತುಂಬ ಚುಟುಕಾಗಿ ಹೇಳುತ್ತೇನೆ. ಮೊದಲನೆಯದಾಗಿ, ಮಕ್ಕಳ ಸಾಹಿತ್ಯ ಎಂಬ ಹೆಸರಿನಿಂದ ಈಚೆಗೆ ಪ್ರಚಲಿತವಾಗಿರುವ ಒಂದು ವರ್ಗೀಕರಣವು ಎಷ್ಟು ತೆಳುವಾದ ಬೌದ್ಧಿಕ ನೆಲಗಟ್ಟಿನ ಮೇಲೆ ನಿಂತಿದೆ ಎಂಬುದನ್ನು ಕಾಣಿಸಲಿಕ್ಕಾಗಿ ನಾನು ಮೇಲಿನ ಮಾತುಗಳನ್ನು ಬರೆಯುತ್ತಿದ್ದೇನೆ. ಹೆಚ್ಚೆಂದರೆ, ಅದು ಆಯಾ ಕಥೆಗಳ ಉದ್ದೇಶಿತ ಓದುಗವರ್ಗವನ್ನು ಮಾರುಕಟ್ಟೆಯ ದೃಷ್ಟಿಯಿಂದ ಬೇರೆ ಮಾಡಲಿಕ್ಕಾಗಿ ಹುಟ್ಟಿಕೊಂಡಿರುವ ಒಂದು ವಿಭಜನೆಯಾದೀತೇ ಹೊರತು ಅದು ಖಂಡಿತವಾಗಿಯೂ ಒಂದು ಸಾಹಿತ್ಯಿಕ ವರ್ಗೀಕರಣ ಅಲ್ಲ. ಉದಾಹರಣೆಗೆ, ಕಥೆ, ಕಾವ್ಯ, ನಾಟಕ – ಮೊದಲಾದ ಸಾಹಿತ್ಯಿಕ ವರ್ಗೀಕರಣಗಳ ಹಿಂದೆ ಕಡೆಯ ಪಕ್ಷ ಒಂದು ಪ್ರಾಥಮಿಕ ಭಿನ್ನತೆಯ ನೆಲೆಗಟ್ಟಾದರೂ ಇದೆ; ಕಥೆ–ಕಾದಂಬರಿಗಳು ಕಥನವನ್ನಾಧರಿಸಿದ್ದರೆ, ಕಾವ್ಯವು ಲಯವನ್ನಾಧರಿಸಿದೆ ಮತ್ತು ನಾಟಕವು ಸಂಭಾಷಣೆಯ ಮೇಲೆ ನಿಂತಿದೆ – ಇವತ್ತಿನ ಕಾಲದಲ್ಲಿ ಈ ಕಥೆ, ಕಾವ್ಯ, ನಾಟಕವೆಂಬ ವರ್ಗೀಕರಣವನ್ನೇ ಹಲವರು ಪ್ರಶ್ನಿಸುತ್ತಿದ್ದಾಗ್ಯೂ ಇಷ್ಟರ ಮಟ್ಟಿಗಿನ ಪ್ರಾಥಮಿಕ ವ್ಯತ್ಯಾಸ ಈ ಪ್ರಕಾರಗಳ ನಡುವೆ ಇದೆ. ಆದರೆ ಮಕ್ಕಳ ಕಥೆ, ಮಕ್ಕಳ ನಾಟಕ, ಮಕ್ಕಳ ಕಾವ್ಯ – ಎಂಬ ವರ್ಗೀಕರಣಕ್ಕೆ ಅಂಥ ನೆಲೆಗಟ್ಟೇ ಇಲ್ಲ. ಆದ್ದರಿಂದಲೇ, ಮಕ್ಕಳ ಸಾಹಿತ್ಯವೆಂಬ ಪ್ರಕಾರವು ಹುಟ್ಟಿದ್ದು ಶಿಕ್ಷಣವನ್ನು ಮಾರುವ–ಕೊಳ್ಳುವ ವಸ್ತುವಾಗಿ ಪರಿವರ್ತಿಸಿದ, ಮತ್ತು ಅದೇ ಕಾರಣದಿಂದ 'ಮಕ್ಕಳು' ಎಂಬ ಹೊಸ ಗ್ರಾಹಕವರ್ಗವೊಂದನ್ನು ಸೃಷ್ಟಿಸಿದ ಆಧುನಿಕ ಕಾಲದಲ್ಲಿ ಮಾತ್ರ ಎಂಬುದನ್ನು ನಾವು ನೆನಪಿಟ್ಟುಕೊಳ್ಳಬೇಕು. ಇಲ್ಲದೆ ಹೋದರೆ, 19ನೆಯ ಶತಮಾನಕ್ಕೂ ಮೊದಲು ಮಕ್ಕಳಿಗಾಗಿಯೇ ಮೀಸಲಾದ ಸಾಹಿತ್ಯವು ಭಾರತದ ಯಾವ ದೇಶಭಾಷೆಯಲ್ಲೂ ಇಲ್ಲದ್ದಕ್ಕೆ ಕಾರಣ, ಆ ಕಾಲಗಳ ಸಮಾಜಕ್ಕೆ ಮಕ್ಕಳ ಬಗ್ಗೆ ಕಾಳಜಿಯೇ ಇರಲಿಲ್ಲ ಎಂದು ನಾವು ತೀರ್ಮಾನಿಸಬೇಕಾದೀತು.

ಎರಡನೆಯದಾಗಿ, ಇವತ್ತಿನ ಸಾಂಸ್ಕೃತಿಕ ರಾಜಕಾರಣದಲ್ಲಿ ಬಗೆಬಗೆಯ ತರ್ಕದ ಕ್ರಮಗಳನ್ನು ಸಮಾನ ಅವಧಾರಣೆಯಿಂದ ಮತ್ತು ಸಮಾನ ಗೌರವದಿಂದ ಕಾಣಿಸುವುದು ಅತ್ಯಂತ ಅಗತ್ಯವಾದ ಒಂದು ರಾಜಕೀಯ ಧೋರಣೆಯಾಗಿದೆ ಎಂಬುದನ್ನು ನಾವು ನೆನಪಿಸಿಕೊಳ್ಳಬೇಕು. ಆಫ್ರಿಕನ್ನರೇ ಆಗಲಿ ಅಥವಾ ಭಾರತೀಯರೇ ಆಗಲಿ ಅವರು 'ಹಿಂದುಳಿದ ಯುರೋಅಮೇರಿಕನ್ನರು' ಅಲ್ಲ; ಬದಲು, ಇವರು ತಮ್ಮದೇ ವಿತರ್ಕವೊಂದರ ನೆಲೆಯಲ್ಲಿ ಗ್ರಹಿಸಿ ತೀರ್ಮಾನಿಸುವ 'ವಿಭಿನ್ನ ವೈಚಾರಿಕರು' ಎಂಬುದನ್ನು ಇವತ್ತು ಹಲವು ಚಿಂತಕರು ಪ್ರಖರವಾಗಿ ಮುನ್ನೆಲೆಗೆ ತರುತ್ತಿದ್ದಾರೆ. ಅದಕ್ಕೆ ಸಮಾನಾಂತರವಾಗಿ, ಮಕ್ಕಳು ಕೂಡಾ ಕೇವಲ 'ಕಾಲಾನುಕ್ರಮದಲ್ಲಿ ಹಿಂದುಳಿದ ಹಿರಿಯರು' ಅಲ್ಲ, ಆದ್ದರಿಂದ ಅವರು ವಯಸ್ಕ ತರ್ಕವನ್ನು ನಿಭಾಯಿಸಲಾಗದ ಅಪ್ರಬುದ್ಧರಲ್ಲ; ಬದಲು, ತಮ್ಮದೇ ಪ್ರಬುದ್ಧ ವಿತರ್ಕವೊಂದನ್ನು ಪಡೆದಿರುವ ಜನವಿಶೇಷ ಎಂಬುದನ್ನು ಅರ್ಥ ಮಾಡಿಕೊಂಡರೆ,

ಆಗ ವೈದೇಹಿಯವರ ಇಂಥ ಕಥನಗಳ ಹಿಂದಿರುವ ರಾಜಕಾರಣವು ಬೇರೆ ಬಗೆಯಲ್ಲೇ ನಮಗೆ ಕಾಣಿಸಲು ಆರಂಭವಾಗುತ್ತದೆ. ಅರ್ಥಾತ್, ಆಧುನಿಕ ಮತ್ತು ಆಧುನಿಕೋತ್ತರ ನಾಗರಿಕತೆಗಳಿಗೆ ಭಾರತದಂಥ ಒಂದು ದೇಶ ಮತ್ತು ಅದರ ಗ್ರಹಿಕೆಯ ಕ್ರಮಗಳು ಅಪ್ರಬುದ್ಧವೆಂದು ಕಾಣಿಸುವುದಕ್ಕೇ ಆಗಲಿ, ಅಥವಾ ಮಕ್ಕಳನ್ನು ಅಪ್ರಬುದ್ಧರು ಎಂದು ಭಾವಿಸುವುದಕ್ಕೇ ಆಗಲಿ, ಅದಕ್ಕೆ ಮೂಲಕಾರಣ ಅಂಥ ಯೋಚನಾಕ್ರಮದಲ್ಲಿ ಬಳಸಲಾಗುವ ತರ್ಕ-ತಾರತಮ್ಯದಲ್ಲಿಯೇ ಇದೆ. ವೈದೇಹಿಯವರು ತಮ್ಮ ಗ್ರಹಿಕೆಯ ಕ್ರಮದಲ್ಲಿ ಮತ್ತು ಅದನ್ನು ಕಥಿಸುವ ತರ್ಕದ ವಿಧಾನದಲ್ಲಿ ಇಂಥ ತರ್ಕ-ತಾರತಮ್ಯವನ್ನು ಮೀರಿದ ಲೋಕವೊಂದನ್ನು ಸಮರ್ಥವಾಗಿ ನಮ್ಮ ಎದುರು ಕಟ್ಟುವ ಮೂಲಕ, ನಮಗೆ ಹೊಸ ಬಗೆಯ ಒಂದು ರಾಜಕೀಯ ನಿಲುವನ್ನೂ ಪರಿಚಯಿಸುತ್ತಿದ್ದಾರೆ - ಎಂಬುದು, ನನ್ನ ಮಟ್ಟಿಗೆ, ಅವರ ಸಾಹಿತ್ಯದ ಒಂದು ಮುಖ್ಯ ಸಾಧನೆಯೆಂದು ಕಾಣುತ್ತದೆ. ಇದನ್ನು ಅರಿಯಲಾಗದೆ ಹೋದರೆ, ನಾವು ಇನ್ನೂ ಹತ್ತಾರು ವರ್ಷಗಳ ಕಾಲ, 'ವೈದೇಹಿಯವರು ಮಹಿಳಾ ಜಗತ್ತಿನ ಸಂವೇದನೆಯ ನೆಲೆಗಳನ್ನು ಸಮರ್ಥವಾಗಿ ಅನಾವರಣ ಮಾಡುತ್ತಾರೆ' - ಎಂಬಿತ್ಯಾದಿ ಸವಕಳಿಯ ಮಾತುಗಳನ್ನೇ ಪುನರುಚ್ಚರಿಸುತ್ತ ಕಾಲ ಕಳೆಯಬೇಕಾದೀತು.

ಇಷ್ಟು ಸಾಕು. ಅಥವಾ, ಒಂದು ವೇಳೆ ಯಾರಿಗಾದರೂ, ಇಂಥ ಒಂದು ಮಕ್ಕಳ ಪುಸ್ತಕದ ಈ ಮುನ್ನುಡಿಯು ಮುಖಕ್ಕಿಂತ ಭಾರವಾದ ಮೂಗುತಿ ಎನ್ನಿಸಿದರೆ, ಅಂಥವರು ಈ ಮೂಗುತಿಯನ್ನು ಬದಿಗೆ ತಳ್ಳಿ ತಮ್ಮ ಖಾಸಾ ಮೂಗಿನಿಂದ ನೇರವಾಗಿ ಮುಂದಿನ ಕಥೆಗಳನ್ನು ಆಘ್ರಾಣಿಸಲೆಂದು ಹಾರೈಸಿ ವಿರಮಿಸುತ್ತೇನೆ.



'ವೈದೇಹಿಯವರ ಕಥೆಗಳಲ್ಲಿ ಎರಡು ಸಾಮಾನ್ಯ ಲಕ್ಷಣಗಳ ಮಾದರಿಗಳನ್ನು ಗುರುತಿಸಬಹುದು. ಒಂದು ಮಾದರಿ ನಿರೂಪಕಿಯ ಮಧ್ಯವರ್ತಿತನ ಇಲ್ಲದ್ದು. ಇನ್ನೊಂದು ಘಟನೆಗಳ ವ್ಯಾಖ್ಯೆ ಹಾಗೂ ವಿನ್ಯಾಸಗಳಲ್ಲಿ ನಿರೂಪಕಿಯ ಪ್ರವೇಶ ಎದ್ದುಕಾಣುವಂಥದ್ದು. ಮೊದಲ ಮಾದರಿಯ ಕಥೆಗಳಲ್ಲಿ ಹೆಣ್ಣು ಜಗತ್ತಿನ ಹೆಣ್ಣುತನ ಸಮಗ್ರವಾಗಿ ಮಂಡಿತವಾಗುವುದು ಮುಖ್ಯ. 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗಳು' ಸಂಕಲನದ ಕಥೆಗಳಲ್ಲೂ ಈ ಲಕ್ಷಣದ ಕಥೆಗಳು ಹಲವಿವೆ. ಹಲವು ತಲೆಮಾರಿನ ಹೆಂಗಸರು, ಬದಲಾಗುತ್ತಿರುವ ಸಾಮಾಜಿಕ ವಿನ್ಯಾಸ, ಬದುಕಿನ ಚಲನಶೀಲತೆ, ಗಂಡು ಜಗತ್ತಿನ ದೂರೀಕರಣ ಇತ್ಯಾದಿ ಹಲವು ಸಂಗತಿಗಳ ಮೂಲಕ ಈ ಕಥೆಗಳ ಹೆಣ್ಣು ಜಗತ್ತು ಮಂಡಿತವಾಗುತ್ತದೆ.

ವೈದೇಹಿಯವರ ಎರಡನೇ ಮಾದರಿಯ ಕಥೆಗಳಲ್ಲಿ, ಘಟನೆಗಳ ಜೊತೆಗೆ ವ್ಯಾಖ್ಯೆ ಕೂಡ ವಿನ್ಯಾಸದಲ್ಲಿ ತೆರೆದುಕೊಳ್ಳುತ್ತದೆ. ಜೀವನವನ್ನು ಕಲೆಯಾಗಿಸುವ ಒಂದು ಬಗೆಯನ್ನು ಕತೆಗಾರ್ತಿ ಇಲ್ಲಿ ಆಯ್ದುಕೊಂಡಿದ್ದಾರೆ. 'ಸೌಗಂಧಿಯ ಸ್ವಗತಗಳು', 'ಶೋಧ' ಇಂಥ ಕತೆಗಳು ಈ ಮಾದರಿಗೆ ನಿದರ್ಶನಗಳು. ಕತೆಗಾರ್ತಿಯ ಸಾಧನೆಗಳು ಈ ಮಾದರಿಯ ಕತೆಗಳಲ್ಲಿ ಮಿಂಚುವುದು.'

- ಕೆ ವಿ ನಾರಾಯಣ

(ಸಣ್ಣಕತೆ: ಕೆಲವನ್ನು ಕುರಿತ ಟಿಪ್ಪಣಿಗಳು-ಕನ್ನಡ ವಾರ್ಷಿಕ-೧೯೯೧)

# ವೈದೇಹಿ ಬರೆದ ಬಿ.ವಿ. ಕಾರಂತರ 'ಆತ್ಮಕತೆ' ಯಲ್ಲಿ ಸತ್ಯದ ಸ್ವರೂಪ

✦ ಜಿ ರಾಜಶೇಖರ್

ವೈದೇಹಿಯವರ ವೈವಿಧ್ಯಮಯ ಬರಹಗಳ ಪೈಕಿ, ಅವರು ಬರೆದುಕೊಂಡು ಪ್ರಕಟಣೆಗೆ ಸಿದ್ಧಪಡಿಸಿದ ಬಿ.ವಿ. ಕಾರಂತರ ಆತ್ಮಕತೆ, 'ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ' (ಪ್ರಿಸಮ್ ಬೆಂಗಳೂರು–2003)– ಕೃತಿಗೆ ಒಂದು ವಿಶಿಷ್ಟ ಸ್ಥಾನವಿದೆ. ನಿತ್ಯದ ಬದುಕಿನ ಬಗೆಗೆ ಪ್ರೀತಿ, ಕುತೂಹಲಗಳನ್ನು ಮೈಗೂಡಿಸಿಕೊಂಡಿರುವ ವೈದೇಹಿ, ಬದುಕು ಮತ್ತು ಬರಹ ಎರಡರಲ್ಲೂ ಅಪಾರ ಶ್ರದ್ಧೆ ಉಳ್ಳವರು. ಸಿನಿಕತನದಲ್ಲಿ ಅಥವಾ ಅನಾಸಕ್ತಿಯಲ್ಲಿ ಅವರು ತನ್ನ ಸುತ್ತಲಿನ ಜಗತ್ತಿಗೆ ಸ್ಪಂದಿಸಿದ್ದು ನನಗೆ ಗೊತ್ತಿಲ್ಲ. ಅವರು ರಚಿಸಿದ ಜೀವನ ಚರಿತ್ರೆಗಳು ದಿ.ಕೆ.ಎಲ್. ಕಾರಂತರನ್ನು ಕುರಿತ 'ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು' (1984), ದಿ. ಸೇಡಿಯಾಪು ಕೃಷ್ಣಭಟ್ಟರ ಬಗೆಗಿನ 'ಸೇಡಿಯಾಪು ನೆನಪುಗಳು' (1996), ದಿ. ಸರಸ್ವತಿಬಾಯಿ ರಾಜವಾಡೆ ಬದುಕಿಗೆ ಸಂಬಂಧಿಸಿದ 'ಮುಂತಾದ ಕೆಲ ಪುಟಗಳು' (2008).. ಈ ಕೃತಿಗಳು ಅವರ ಪ್ರತಿಭೆಗೆ ಹೇಗೋ ಹಾಗೆಯೇ ಶ್ರಮವರಿಯದ ಅವರ ಏಕಾಗ್ರತೆ ಮತ್ತು ಛಲಗಳಿಗೂ ನಿದರ್ಶನಗಳಾಗಿವೆ. ಈ ಕೃತಿಗಳೇ ಅಲ್ಲದೆ, ತಾನು ಹಚ್ಚಿಕೊಂಡ ನೂರೆಂಟು ಉಪದ್ವ್ಯಾಪಗಳ ನಡುವೆ ಖ್ಯಾತ ರಂಗನಿರ್ದೇಶಕ ದಿ. ಬಿ.ವಿ. ಕಾರಂತರ ಜೀವನಾನುಭವವನ್ನು ದಾಖಲಿಸಿಕೊಂಡು ಸಿದ್ಧಪಡಿಸಿದ ಅದರ ಲಿಖಿತ ಪಠ್ಯ 'ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ' ವೈದೇಹಿಯವರ ಒಂದು ಅನನ್ಯ ಕೃತಿ. ಬಿ.ವಿ. ಕಾರಂತರ ನೆನಪುಗಳ ಈ ಸುದೀರ್ಘ ನಿರೂಪಣೆ ತನ್ನ ಮೊದಲ ಪುಟದಿಂದಲೇ ಓದುಗರ ಮನಸ್ಸನ್ನು ಸೆಳೆದುಕೊಳ್ಳುತ್ತದೆ. ಪುಸ್ತಕ ಓದಿ ಮುಗಿಸಿದ ಹಲವು ದಿನಗಳ ನಂತರವೂ ಅದರ ಗುಂಗಿನಿಂದ ಹೊರಬರುವುದೇ ಬೇಡ ಎನ್ನಿಸುವಷ್ಟು ಅದು ನಮ್ಮನ್ನು ಆವರಿಸಿಕೊಳ್ಳುತ್ತದೆ. ಬಿ.ವಿ. ಕಾರಂತರು ಬಗೆಬಗೆಯ ರಂಗು, ನೇಸಲುಗಳ ತನ್ನ ಸಮೃದ್ಧ ಅನುಭವ ನಿರೂಪಣೆಯಿಂದ ನಮ್ಮನ್ನು ಬೆರಗುಗೊಳಿಸುತ್ತಾರೆ, ಮರುಳು ಮಾಡುತ್ತಾರೆ, ಒಮ್ಮೊಮ್ಮೆ ಅಮಲೇರಿಸಿ 'ಚಿತ್' ಮಾಡಿಬಿಡುತ್ತಾರೆ. ಕಾರಂತರಿಗೆ ಬಿಡುವಾದಾಗ, ಅದಕ್ಕಿಂತ ಮುಖ್ಯವಾಗಿ ಅವರು 'ಮೂಡ್'ನಲ್ಲಿದ್ದಾಗ ನೆನಪಿಗೆ ಬಂದಷ್ಟು ತನ್ನ ಗತಕಾಲದ ಕಥನವನ್ನು (ಕಾಲಾನುಕ್ರಮದಲ್ಲಿ ಅಲ್ಲ) ಹೇಳಿದ್ದನ್ನು ವೈದೇಹಿ ದಾಖಲಿಸಿಕೊಂಡಿದ್ದಾರೆ: ಪರಿಣಿತ

ಚಲನಚಿತ್ರ ಸಂಕಲನಕಾರನ ಕೌಶಲದಲ್ಲಿ ಕಾರಂತರ ನಿರೂಪಣೆಯ ತುಣುಕುಗಳನ್ನು ಜೋಡಿಸಿ, ಕಾರಂತರ ಮಾತು, ಮಾತಿನ ಧ್ವನಿ, ಅದರ ಏರಿಳಿತ, ಮಾತ್ರವಲ್ಲ ಮಾತಿನ ಲಯ ಮತ್ತು ಮಾತುಗಳ ನಡುವಿನ ಮೌನವನ್ನು ಸಹಾ ಸರಿಯಾಗಿ ಕೇಳಿಸಿಕೊಂಡು ಪಡಿಮೂಡಿಸಿದ್ದಾರೆ. 'ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ' ಕೃತಿಯ ಯಶಸ್ಸು ಯಾರಿಗೆ ಸಲ್ಲಬೇಕು? ವೈದೇಹಿ ಆ ಬಗ್ಗೆ ತಲೆಕೆಡಿಸಿಕೊಳ್ಳುವವರಲ್ಲ; ಬಿ.ವಿ. ಕಾರಂತರಂತೂ ಅಂತಹದ್ದನ್ನೆಲ್ಲ ತಲೆಗೇ ಹಚ್ಚಿಕೊಳ್ಳದೆ ಅವಧೂತನಂತೆ ಇದ್ದವರು. ಕೃತಿ ಯಾರದ್ದು? ಅದರ ಯಶಸ್ಸಿನ ಪಾಲು ಯಾರಿಗೆ, ಎಷ್ಟು, ಅದು ಹೇಗೇ ಇರಲಿ; ಕನ್ನಡದ ಮಟ್ಟಿಗಂತೂ ಇದೊಂದು ಅಮೂಲ್ಯ ಕೊಡುಗೆ ಎಂಬುದರಲ್ಲಿ ಸಂದೇಹವಿಲ್ಲ!

ಬಿ.ವಿ. ಕಾರಂತರು ತಮ್ಮ ಅತ್ಯಂತ ಯಶಸ್ವೀ ರಂಗಪ್ರಯೋಗಗಳಾದ ಜಿ.ಬಿ. ಜೋಷಿಯವರ ನಾಟಕ 'ಸತ್ತವರ ನೆರಳು', ಪು.ತಿ.ನ. ಅವರ 'ಗೋಕುಲ ನಿರ್ಗಮನ, ಅವರು ನಿರ್ದೇಶಿಸಿದ ಚಲಚ್ಚಿತ್ರ 'ವಂಶವೃಕ್ಷ' (ಭೈರಪ್ಪನವರ ಕಾದಂಬರಿ ಆಧಾರಿತ) ಮತ್ತು 'ಚೋಮನ ದುಡಿ'(ಲೇ. ಶಿವರಾಮ ಕಾರಂತ) ಮುಂತಾದ ಕಲಾಕೃತಿಗಳಿಂದ ಕನ್ನಡಿಗರಿಗೆ ಪರಿಚಿತರು. ಆದರೆ ಕಾರಂತರ ಈ ಆತ್ಮಕತೆ, ಅವರು ಕೇವಲ ರಂಗ, ಚಲಚ್ಚಿತ್ರ ನಿರ್ದೇಶಕ ಮಾತ್ರವಲ್ಲ, ಓರ್ವ ನಿಪುಣ ಕತೆಗಾರನೂ ಹೌದು ಎಂಬುದನ್ನು ಸಾಬೀತು ಪಡಿಸುತ್ತದೆ. ರಂಗಭೂಮಿಗೆ ಬದಲಾಗಿ ಕತೆ ಕಾದಂಬರಿಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರೆ, ಅವರು ಕನ್ನಡದ ಪ್ರಮುಖ ಲೇಖಕರಲ್ಲಿ ಒಬ್ಬರಾಗಿರುತ್ತಿದ್ದರು. ಕಾರಂತರು ತಮ್ಮ ಬದುಕಿನಲ್ಲಿ ಕಂಡದ್ದು, ಕೇಳಿದ್ದು, ಅನುಭವಿಸಿದ್ದು ಎಲ್ಲವನ್ನು ಗಾಢ ಅನುರಕ್ತಿಯಲ್ಲಿ ತದೇಕಚಿತ್ತರಾಗಿ ಮಾಡಿದವರು. ಅವರ ತನ್ಮಯತೆ ಮತ್ತು ಏಕಾಗ್ರತೆಗಳಿಗೆ ಅವರ ಆತ್ಮಕತೆಯ ಪುಟ ಪುಟದಲ್ಲೂ ನಿದರ್ಶನಗಳು ದೊರೆಯುತ್ತವೆ.

ಬಿ.ವಿ. ಕಾರಂತರ ಈ ಆತ್ಮಕತೆಯ ಶೀರ್ಷಿಕೆಗೆ ಸರಿಯಾಗಿ ಅವರ ಬದುಕಿನಲ್ಲಿ ಎಲ್ಲವೂ ಡೋಲಾಯಮಾನ; ಪ್ರವಾಹದ ಸೆಳೆತಕ್ಕೆ ಸಿಕ್ಕು ಹೊಯ್ದಾಡುವ ದೋಣಿಯಂತೆ. ದಕ್ಷಿಣ ಕನ್ನಡದ ಬಂಟವಾಳ ತಾಲೂಕಿನ ಒಂದು ಹಳ್ಳಿ ಬಾಬುಕೋಡಿಯಲ್ಲಿ ಹುಟ್ಟಿದ ಬಿ.ವಿ. ಕಾರಂತರಿಗೆ, ತಾವು ಹುಟ್ಟಿದ ದಿನಾಂಕ ನಿಖರವಾಗಿ ಯಾವುದು ಎಂದು ಸಹ ಗೊತ್ತಿಲ್ಲ! ಅವರ ಅಪ್ಪ ಹೇಳುವ ಪ್ರಕಾರ ಅವರು ಹುಟ್ಟಿದ ಇಸವಿ 1928. ಅವರ ಅಮ್ಮನ ಪ್ರಕಾರ ಅವರು ಹುಟ್ಟಿದ್ದು 1929ರಲ್ಲಿ. ಬಿ.ವಿ. ಕಾರಂತರು ಮೆಟ್ರಿಕ್ ಪರೀಕ್ಷೆಗೆ ಕೂರಲು ಸಲ್ಲಿಸಬೇಕಾದ ಅರ್ಜಿಯಲ್ಲಿ ತನ್ನ ಜನ್ಮದಿನಾಂಕವನ್ನು ನಮೂದಿಸುವುದು ಅತ್ಯಗತ್ಯವಾಗಿತ್ತು. ಆ ಕ್ಷಣಕ್ಕೆ ತನಗೆ ಹೊಳೆದ ಒಂದು ದಿನಾಂಕ 1929ನೇ ಸೆಪ್ಟೆಂಬರ್ 19 ತನ್ನ ಜನ್ಮದಿನ ಎಂದು ಅರ್ಜಿಯಲ್ಲಿ ಅವರು ಬರೆದುಬಿಟ್ಟರು. ಆ ದಿನಾಂಕವೇ ಈಗಲೂ ಅವರ ಅಧಿಕೃತ ಜನ್ಮದಿನ. ಇಳಿ ವಯಸ್ಸಿನಲ್ಲಿ ಅವರನ್ನು ಬಾಧಿಸುತ್ತಿದ್ದ ಅಸ್ವಸ್ಥತೆಯ ನಡುನಡುವೆ ಕಾರಂತರು ಹೇಳಿ ವೈದೇಹಿ ಬರೆದುಕೊಂಡ ಈ ಆತ್ಮಕತೆಯನ್ನು ಪುಸ್ತಕರೂಪವಲ್ಲಿ

ಕಾಣಲು ಕಾರಂತರು ಬದುಕಿರಲಿಲ್ಲ. ಅವರು ತಮ್ಮ 73ನೆಯ ವಯಸ್ಸಿನಲ್ಲಿ 2002ನೇ ಸೆಪ್ಟೆಂಬರ್ 1 ರಂದು ತೀರಿಕೊಂಡರು. ಪುರಂದರದಾಸರ ಪದ್ಯದ ಸಾಲೊಂದನ್ನು ಜಿ.ವಿ. ಕಾರಂತರು ತಮ್ಮ ಆತ್ಮಕತೆಗೆ ಶೀರ್ಷಿಕೆಯಾಗಿಸಿ ಕೊಂಡಿರುವುದು ಅವರು ಬದುಕಿದ ರೀತಿಗೆ ಒಪ್ಪುವಂತಿದೆ. ನೆಲೆ, ನೆಮ್ಮದಿ ಎರಡನ್ನೂ ಜಿ.ವಿ. ಕಾರಂತರು ಆರ್ತರಾಗಿ ಬಯಸಿದವರು. ಅವನ್ನು ತನ್ನ ದಿಕ್ಕೆಟ್ಟ ಬದುಕಿನುದ್ದಕ್ಕೂ ಅರಸಿ, ಬಳಲಿ ಬೆಂಡಾದವರು. ಸ್ವಂತದ ಮನೆ ಇದ್ದೂ ಕವಿವಾಣಿಯಂತೆ ಅನಿಕೇತನರಾಗಿ, ನಿರಂಕುಶಮತಿಗಳಾಗಿ ಅವರು ಸತ್ಯವನ್ನು ಶೋಧಿಸಿದವರು. ಸತ್ಯದ ಬಗ್ಗೆ ಖಾತ್ರಿಯಾಗಿ ಇರುವವನಿಗೆ ತನ್ನ ಸತ್ಯ ಕುರಿತು ಸಂದೇಹಗಳಿರಲು ಸಾಧ್ಯವಿಲ್ಲ. ಅಂತಹ ನಟನಿಗೆ ಸತ್ಯ ಮಾತ್ರವಲ್ಲ ಯಾವುದರ ಬಗೆಗೂ ಸಂದೇಹಗಳಿರುವುದಿಲ್ಲ. ದೇವರ ಬಗೆಗೂ ಕೂಡ. ಆದರೆ ಸತ್ಯಶೋಧಕ ಸದಾ ಸಂದೇಹಿ. ಭಕ್ತಿ ಪಂಥದ ಶರಣರು ಮತ್ತು ದಾಸರು ತಮ್ಮ ದೇವರ ಬಗ್ಗೆ ಸದಾ ಸಂದೇಹಿಗಳು. ಒಂದು ಕ್ಷಣ ದೇವರು ತಮ್ಮ ಕಣ್ಣ ಮುಂದೆಯೇ ನಿಂತಿದಂತಿದೆ ಎಂದು ಅವರು ಭಾವಿಸಿದರೆ, ಅವನ ಜೊತೆಯಲ್ಲಿ ಸಂಭಾಷಣೆಗೂ ತೊಡಗಿದರೆ, ಮರುಕ್ಷಣವೇ ಅವನಿಗಾಗಿ ಹಂಬಲಿಸುತ್ತ 'ಎಲ್ಲಿದ್ದೀಯ ನೀನು? ನನ್ನ ಮೇಲೆ ಇನ್ನೂ ದಯ ಬಾರದೇ? ನಿನ್ನನ್ನು ತೊರೆದು ನಾನು ಜೀವಿಸಬಹುದೇ? ಎಂದಿತ್ಯಾದಿಯಾಗಿ ಹಲುಬುವರು. ಸ್ವತಹ ಜಿ.ವಿ. ಕಾರಂತರಿಗೆ ಸಹಾ ತನಗೆ ದೇವರಲ್ಲಿ ನಂಬಿಗೆ ಇದೆಯೋ ಇಲ್ಲವೋ ಎಂಬ ಪ್ರಶ್ನೆಗೆ ಉತ್ತರ ಗೊತ್ತಿರಲಿಲ್ಲ. ಹಾಗೆಂದು ನಾಸ್ತಿಕರ ಹಾಗೆ ಖಡಾಖಂಡಿತವಾಗಿ 'ದೇವರಿಲ್ಲ' ಎಂದು ಘೋಷಿಸಿಬಿಡಲೂ ಅವರಿಗೆ ಮನಸ್ಸು ಬಾರದು. ಅಕಸ್ಮಾತ್ ಇದ್ದು ಬಿಟ್ಟರೆ! ಎಂಬುದು ಸದಾ ಅವರನ್ನು ಕಾಡುತ್ತಿದ್ದ ದಿಗಿಲು. ತನ್ನ ಆತ್ಮಕತೆಯಲ್ಲಿ ಅವರು ಅದನ್ನೂ ಹೇಳಿಕೊಂಡಿದ್ದಾರೆ. ಹಾಗಿದ್ದೂ ಗರಿಷ್ಠ ಸಂಖ್ಯೆಯಲ್ಲಿ ಎಲ್ಲ ವಯಸ್ಸಿನ ಎಲ್ಲ ಬಗೆಯ ಜನರನ್ನೂ ತನ್ನೆಡೆ ಸೆಳೆಯುವ ದೇವಸ್ಥಾನಗಳಿಗೆ ಅವರು ಸದಾ ಭೇಟಿ ಕೊಡುತ್ತಿದ್ದರು. ಜನರ ವೈವಿಧ್ಯಮಯ ಬದುಕಿನ ಬಗ್ಗೆ ಅವರಿಗಿದ್ದ ವ್ಯಾಮೋಹವೇ ಅದಕ್ಕೆ ಕಾರಣ.

ಸ್ವತಹ ಕಾರಂತರೇ ತಮ್ಮ ಈ ಆತ್ಮಕತೆಯಲ್ಲಿ ಹೇಳಿಕೊಂಡ ಹಾಗೆ, ಅವರು ಎಲ್ಲಕ್ಕಿಂತ ಮೊದಲು ಓದಿದ ಪುಸ್ತಕವೇ ಗಾಂಧೀಜಿಯವರ ಆತ್ಮಕತೆ, ಅಥವಾ 'ಸತ್ಯದೊಡನೆ ಪ್ರಯೋಗ'. ಗಾಂಧೀಜಿ ಕೂಡಾ ಸದಾ ಸತ್ಯಶೋಧಕರಾಗಿದ್ದರೇ ವಿನಾ ತನ್ನ ಸತ್ಯವೇ ಪರಮ ಸತ್ಯ ಎಂದು ಯಾವತ್ತೂ ಹಠ ಹಿಡಿದವರಲ್ಲ. ಸತ್ಯದ ಬಗ್ಗೆ ಖಾತ್ರಿ ಇರುವವನಿಗೆ ಸತ್ಯಶೋಧನೆ ಎಂಬ ಮಾತು ದೈವನಿಂದನೆಯ ಹಾಗೆ ಕಂಡೀತು! ಗಾಂಧೀಜಿಯವರಿಗೆ ಸತ್ಯವೇ ದೇವರಾದರೆ, ಮೂಲಭೂತವಾದಿಗಳಿಗೆ ದೇವರು ಅಂದರೆ ಅವರ ದೇವರು ಮಾತ್ರ ಸತ್ಯ! ಗಾಂಧೀಜಿ ತಮ್ಮ ದೇವರನ್ನು ಎಲ್ಲ ಧರ್ಮಗಳಲ್ಲೂ ಕಂಡುಕೊಂಡರು. ಈಶ್ವರ, ಅಲ್ಲಾ, ಯೇಸು–ಎಲ್ಲರಲ್ಲೂ ಅವರು ಸತ್ಯವನ್ನೇ ಅರಸಿದರು. ಜಿ.ವಿ.ಕಾರಂತರು ತುಂಬ ಗೌರವಿಸುತ್ತಿದ್ದವರಲ್ಲಿ ಗಾಂಧೀಜಿಯವರಿಗೆ ಮೊದಲನೆಯ ಸ್ಥಾನ. ಆದರೆ ತನ್ನ ದೇವರ ಬಗ್ಗೆ ಗಾಂಧೀಜಿಯವರಿಗೆ ಇಲ್ಲದ ತೊಳಲಾಟ ಜಿ.ವಿ.ಕಾರಂತರಿಗೆ ಇದೆ. ತನ್ನ

ಆತ್ಮಕತೆಯಲ್ಲೂ ಅವರು ಇದನ್ನು ಹೇಳಿಕೊಂಡಿದ್ದಾರೆ. ಒಮ್ಮೆ ಶಿವರಾಮ ಕಾರಂತರನ್ನು 'ನೀವು ಆಸ್ತಿಕರೋ, ನಾಸ್ತಿಕರೋ' ಎಂದು ಯಾರೋ ಕೇಳಿದಾಗ, ಅವರು ತಾನು 'ಅನಾಸ್ತಿಕ' ಎಂದು ಉತ್ತರಿಸಿದರಂತೆ. 'ಅನಾಸ್ತಿಕ'ಎಂಬ ಶಬ್ದದ ಸಂಧಿ ವಿಂಗಡಿಸಿದರೆ, ಆಸ್ತಿಕನಲ್ಲ ಎಂದು ಅರ್ಥವಾಗುತ್ತದೆ. ಶಬ್ದವನ್ನು ಇಡಿಯಾಗಿ ಗ್ರಹಿಸಿದರೆ ನಾಸ್ತಿಕನಲ್ಲ ಎಂದಾಗುತ್ತದೆ. ಆಸ್ತಿಕನೂ ಹೌದು, ನಾಸ್ತಿಕನೂ ಹೌದು. ಅಥವಾ ಎರಡೂ ಅಲ್ಲ. ಶಿವರಾಮ ಕಾರಂತರೂ ಸಹ ಸತ್ಯವನ್ನು ಹುಡುಕಿಕೊಂಡು ಅಲೆದವರೇ ವಿನಾ ಸತ್ಯ ತನ್ನ 'ಕರತಲಾಮಲಕ' ಎಂದು ಯಾವತ್ತೂ ವಿಶ್ವಾಸದಿಂದ ಇದ್ದವರಲ್ಲ. ಆ ಕಾರಣದಿಂದಲೇ ಅವರು ಕಾದಂಬರಿಕಾರರಾದರು. ಅವರ ಹಾಗೇನೇ ದೇವರ ಬಗ್ಗೆ ಸಂದೇಹಿಯಾಗಿದ್ದು ಸತ್ಯವನ್ನು ಸದಾ ಅರಸಿದ ಬಿ.ವಿ.ಕಾರಂತರು ರಂಗನಿರ್ದೇಶಕರಾದರು. ತನ್ನ 'ಸ್ವ' ದ ಅರಿವು ಬಿ.ವಿ.ಕಾರಂತರಿಗೆ ಇರುವುದರಿಂದಲೇ ತನ್ನ ಆತ್ಮಕತೆಗೆ ಅವರು ಮಾಡಿಕೊಂಡ ಟಿಪ್ಪಣಿಗಳಲ್ಲಿ ಅವರು ಹೀಗೆ ಬರೆಯುತ್ತಾರೆ... 'ಆತ್ಮಕತೆ' ಚರಿತ್ರೆ ಯಾಕಲ್ಲ? ಆತ್ಮಕತೆ ಒಂದು ಕತೆಯೂ ಆಗಬಹುದು. ನಾಟಕದವರ 'ಆತ್ಮಕತೆ' 'ಜೀವನ ಚರಿತ್ರೆ' ತುಂಬಾ ಬೇರೆ ಬೇರೆ. 'ಆತ್ಮಕತೆ'ಯಾಗಿ ಈ ಪುಸ್ತಕ ಪ್ರಕಟವಾಗುತ್ತಿದೆ. ಆದರೆ 'ಆತ್ಮ'ದ ಜೊತೆ 'ಕತೆ' ಸೇರುವುದರ ಕಾರಣವೇನು? ತನ್ನದೇ ಜೀವನ ಚರಿತ್ರೆಯಲ್ಲದೆ 'ಕತೆ'ಯಾಗುತ್ತದೆಯೇ? (ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ – ಪುಟ 19)

ಕಾರಂತರು 'ಸತ್ಯ'ದ ಬಗ್ಗೆ ಸದಾ ಜಿಜ್ಞಾಸುವಾಗಿದ್ದು ತಾನು ಅನುಭವ ವೇದ್ಯವೆಂದುಕೊಂಡ ಸತ್ಯ ಕೂಡಾ ಹಂಗಾಮಿ ಅಥವಾ ತಾತ್ಕಾಲಿಕ ಆಗಿರುವಂತಹದ್ದು ಎಂದು ನಂಬಿದವರು. ಸತ್ಯದ ಬಗ್ಗೆ ಖಾತರಿಯಾಗಿರುವವರು, ಅಥವಾ ಅಂತಹ ಸ್ಥಿರವೂ ಶಾಶ್ವತವೂ ಆದ ಸತ್ಯವನ್ನು ಅರಸುವವರು ಚರಿತ್ರೆ ರಚಿಸುತ್ತಾರೆ. ಸತ್ಯದ ಹಂಗಾಮಿತನವನ್ನು ಅರಿತವರು ಕತೆಗಾರರಾಗುತ್ತಾರೆ. ಕತೆ ನಿರೂಪಿಸುವ ಬದುಕು ಸದಾ ಚಲನಶೀಲವಾದದ್ದು, ನಿರಂತರವಾಗಿ ಅದು ಬದಲಾಗುವಂತಹದ್ದು. ರಂಗ ನಿರ್ದೇಶಕರಾದ ಬಿ.ವಿ.ಕಾರಂತರು ಸಹ ಮೂಲತಃ ಕತೆಗಾರರೇ. ನಾಟಕಗಳ ಮುಖಾಂತರ ಕತೆಗಳನ್ನು ಹೇಳುವ, ತೋರಿಸುವ, ನಿರೂಪಿಸುವ ಕತೆಗಾರ ಅವರು. ಹಾಗಾಗಿ 'ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ' ಕಾರಂತರ ಜೀವನ ಚರಿತ್ರೆಯೂ ಅಲ್ಲ, 'ಆತ್ಮಚರಿತ್ರೆ'ಯೂ ಅಲ್ಲ, ಅದು ಕತೆ, ಆತ್ಮಕತೆ, ಆತ್ಮಚರಿತ್ರೆ ಎಂದೇ ನೀವು ಹಠ ಹಿಡಿಯುವುದಾದರೆ, ಸ್ವತಹ ಕಾರಂತರೇ ಹೇಳುವಂತೆ, ಅದು 'ಮತ್ತೊಬ್ಬನ ಆತ್ಮಚರಿತ್ರೆ'. ಎ.ಕೆ. ರಾಮಾನುಜನ್‌ರ ಹೆಸರಾಂತ ಕಾದಂಬರಿ ಅದು. ರಾಮಾನುಜನ್‌ರ ಕೃತಿಯಲ್ಲಿ ನಿರೂಪಕ ತನ್ನ ಬದುಕಿಗೆ ತಾನೇ ಪ್ರೇಕ್ಷಕನಾಗಿ, ಅಂದರೆ ತನಗೆ ತಾನೇ ಪರಕೀಯನಾಗಿ, ಅನ್ಯನಾಗಿ ದೂರ ನಿಂತು ನೋಡುವವನಂತೆ. ಒಂದು ಬಗೆಯ ತಣ್ಣಗಿನ ನಿರ್ಲಿಪ್ತತೆಯಲ್ಲಿ ತನ್ನ ವೃತ್ತಾಂತವನ್ನು ಹೇಳುತ್ತ ಹೋಗುತ್ತಾನೆ. ಕಾರಂತರ ಪ್ರಸ್ತುತ 'ಆತ್ಮಕತೆ'ಯ ಧೋರಣೆಯೂ ಅದೇ. ತನ್ನ ಬದುಕಿಗೆ ತಾನೇ ಹೊರಗಿನವನಾಗಿ, ಆಗಂತುಕನಾಗಿ ಬಣ್ಣಿಸುವುದು. ಅವರ ಈ ಜೀವನ

ನಾಟಕದಲ್ಲಿ ಅವರೇ ನಟ, ನಾಯಕ ನಟ, ಪ್ರೇಕ್ಷಕ, ನಡುನಡುವೆ ವಿಮರ್ಶಕ ಹಾಗೂ ನಿರೂಪಕ. ಎಲ್ಲಕ್ಕಿಂತ ಮುಖ್ಯವಾಗಿ ಬಿ.ವಿ.ಕಾರಂತರು ಕೇಳುಗರ ಮನ ಮೆಚ್ಚುವಂತೆ ಹೃದಯ ಮಿಡಿಯುವಂತೆ ಕತೆ ಹೇಳಬಲ್ಲ ಮತ್ತು ಅಷ್ಟೇ ಆಸಕ್ತಿಯಿಂದ ಪರರ ಕತೆಗಳಿಗೆ ಕಿವಿಗೊಡುವ ಸಹೃದಯಿ. ಉದಾಹರಣೆಗೆ ಬಿ.ವಿ. ಕಾರಂತರು ಪದವಿ ಗಳಿಸಿದ ಮೇಲೆ, ಹೆಚ್ಚಿನ ಶಿಕ್ಷಣಕ್ಕಾಗಿ ಕಾಶಿಗೆ ತೆರಳಿ, ಅಲ್ಲಿ ಕೆಲವು ವರ್ಷ ನೆಲೆಸಿದ್ದರು. ಕಾಶಿಯಲ್ಲಿ ಅವರ ಕಳೆದ ದಿನಗಳ ನೆನಪು, ಅವರ ಈ ಆತ್ಮಕತೆಯ ಒಂದು ರೋಚಕ ಹಾಗೂ ಅರ್ಥಪೂರ್ಣ ಅಧ್ಯಾಯ. ಹೇಳಿ ಕೇಳಿ ಕಾಶಿ ಹಿಂದುಗಳ ಅತ್ಯಂತ ಪವಿತ್ರ ಪುಣ್ಯಕ್ಷೇತ್ರ. ಚೀನಾದ ರಾಜಧಾನಿ ಬೀಜಿಂಗ್. ಹಾಗೂ ಯಹೂದಿಗಳು, ಕ್ರೈಸ್ತರು, ಮುಸ್ಲಿಮರು–ಈ ಮೂರೂ ಸಮುದಾಯಗಳ ಪವಿತ್ರ ಕ್ಷೇತ್ರವಾಗಿರುವ ಜೆರುಸಲೇಂ ಬಿಟ್ಟರೆ, ಕಾಶಿ ಜಗತ್ತಿನ ಅತ್ಯಂತ ಪ್ರಾಚೀನ ನಗರ. ಕಾಶಿಗೆ 2500 ವರ್ಷಗಳನ್ನೂ ಮೀರಿದ ಲಿಖಿತ ಚರಿತ್ರೆಯೇ ಇದೆ. ಕಾಶಿ ಬಹುವಚನಿ ಪರಂಪರೆಯ ಒಂದು ನಗರವೂ ಹೌದು. ಸಿದ್ಧಾರ್ಥ ಜ್ಞಾನೋದಯವಾಗಿ ಬುದ್ಧನಾದ ಮೇಲೆ ಮೊದಲು ಆತ ತನ್ನ ಶಿಷ್ಯರಿಗೆ ಉಪದೇಶಿಸಿದ ಸಾರನಾಥ ಕಾಶಿಯ ಹೊರವಲಯದಲ್ಲಿದೆ. ಕಾಶಿ ಜೈನರಿಗೂ ಒಂದು ಪವಿತ್ರ ಕ್ಷೇತ್ರ. ಹಾಗೆಯೇ ಕಾಶಿಯಲ್ಲಿ ಆ ಪ್ರದೇಶದ ಮೂಲನಿವಾಸಿಗಳ ಹಲವು ದೈವಸ್ಥಾನಗಳಿವೆ. ಗಣನೀಯ ಸಂಖ್ಯೆಯಲ್ಲಿ ಮುಸ್ಲಿಮರೂ ಕಾಶಿಯಲ್ಲಿ ನೆಲೆಸಿದ್ದು, ಅಲ್ಲಿ ದೇವಸ್ಥಾನಗಳ ಅಜುಬಾಜಿನಲ್ಲೇ ಮಸೀದಿ ಕಾಣಸಿಗುವುದು ಅಪರೂಪವೇನಲ್ಲ. ಹಿಂದು–ಮುಸ್ಲಿಮ್ ಉಭಯ ಸಮುದಾಯಗಳವರೂ ತಮ್ಮ 'ಗುರು' ಎಂದು ಗೌರವಿಸುವ 15ನೇ ಶತಮಾನದ ಸಂತ ಕವಿ 'ಕಬೀರ್' ಕಾಶಿಯ ಜನಸಾಮಾನ್ಯರ ಸ್ಮೃತಿಯಲ್ಲಿ ಈಗಲೂ ಜೀವಂತವಾಗಿದ್ದಾನೆ. ಕಾಶಿ ಲಾಗಾಯ್ತಿನಿಂದಲೂ ಅನೇಕ ಕೈಕಸುಬು ಹಾಗೂ ಕಿರು ಉದ್ಯಮಗಳ ಕೇಂದ್ರವಾಗಿದ್ದು ಕಳೆದ ಶತಮಾನದ 60ರ ದಶಕದಲ್ಲಿ ಕಮ್ಯುನಿಷ್ಟ್ ಪಕ್ಷ ಸಹ ಅಲ್ಲಿ ಪ್ರಭಾವಶಾಲಿಯಾಗಿತ್ತು. ಕಾಶಿಯ ಬದುಕಿನ ಈ ವೈವಿಧ್ಯ, ಈ ಶ್ರೀಮಂತ ಪರಂಪರೆ ಸದಾ ಕ್ರಿಯಾಶೀಲರಾಗಿರುವ ಅಲ್ಲಿನ ಸಾಮಾನ್ಯ ಜನ, ಜನರಿಂದ ಗಿಜಿಗುಡುವ ಅಲ್ಲಿನ ಬೀದಿಗಳು, ಗಂಗಾನದಿ ತೀರದ ಘಾಟ್‌ಗಳು, ಹಾಗೂ ಹಬ್ಬದ ದಿನಗಳಲ್ಲಿ ಈ ಘಾಟ್‌ಗಳ ಜಾತ್ರೆ, ನೆರೆಯುವ ಜನ–ಕಾಶಿಯ ಈ ಲೌಕಿಕ ಬದುಕನ್ನು ವ್ಯಾಮೋಹಿಯೊಬ್ಬನ ಗಾಢ ಅನುರಕ್ತಿಯಲ್ಲಿ ಕಾರಂತರು ಬಣ್ಣಿಸುತ್ತಾರೆ. ಕಾಶಿಯಲ್ಲಿ ಅವರು ಕಳೆದ ದಿನಗಳಲ್ಲಿ ಕಾರಂತರು ಒಮ್ಮೆ ಅವರ ಕಣ್ಣಿಗೆ ಬಿದ್ದ ಗಂಗಾ ನದಿಯ ದಡದ ಒಂದು ದೃಶ್ಯವನ್ನು ನೆನಪು ಮಾಡಿಕೊಂಡು ಉತ್ಕಟವಾಗಿ ವರ್ಣಿಸುತ್ತಾರೆ. ಕಾರಂತರ ಮಾತು, ಮಾತಿನ ಲಯ, ಅದರೊಟ್ಟಿಗೇ ಬರುವ ಹಾವಭಾವಗಳನ್ನು ಕಂಡು, ಆಲಿಸಿ ಹಾಗೇ ದಾಖಲಿಸುವುದರ ಜೊತೆಗೆ ಮಾತಿನ ನಡುವಿನ ನೀರವತೆ, ನಿಟ್ಟುಸಿರುಗಳನ್ನೂ ಕೇಳಿಸಿಕೊಂಡು ಅದನ್ನು ಚೂರೂ ಮುಕ್ಕಾಗದಂತೆ ಓದುಗರಿಗೆ ತಲುಪಿಸುವ ವೈದೇಹಿಯವರ ಸೂಕ್ಷ್ಮಜ್ಞತೆಗೆ ಸಹ ಒಂದು ಉದಾಹರಣೆ

ಇಲ್ಲಿದೆ. ಕಾರಂತರ ಆತ್ಮಕತೆಯ ಗದ್ಯದ ಉತ್ಕೃಷ್ಟತೆಗೂ ಈ ಉದ್ಧೃತ ಒಂದು ಒಳ್ಳೆಯ ನಿದರ್ಶನ.

"ಹನುಮಾನ್ ಘಾಟ್‌ನಿಂದ ದಶಾಶ್ವಮೇಧ ಘಾಟ್‌ಗೆ ನಾನು ವಾರಕ್ಕೊಮ್ಮೆ ಹೋಗುತ್ತಿದ್ದೆ, ಜನಸರನ್ನು ನೋಡುವ ಆಸಕ್ತಿಯಿಂದಲೇ. ಮಹಾಲಯ ಅಮಾವಾಸ್ಯೆಯ ದಿನ ಪವಿತ್ರ ಅಂದು ಗಂಗಾತೀರ್ಥ ಮೀಯಲೇ ಬೇಕು. ಆ ತೀರ್ಥಸ್ನಾನಕ್ಕಾಗಿ ಅಕ್ಕಪಕ್ಕದ ಹಳ್ಳಿಗಳಿಂದೆಲ್ಲ ಜನ ಈ ಘಾಟ್‌ನಲ್ಲಿ ಸಾಗರದಂತೆ ನೆರೆಯುತ್ತಾರೆ. ನೆರೆಯುವುದೆಂದರೆ ಅದು ಜನರ ನೆರೆಯೇ. ವಿಶೇಷವಾಗಿ ಭೋಜ್‌ಪುರಿ ಕಡೆಯಿಂದ. ಭೋಜ್‌ಪುರಿ ಭಾಷಾ ಪ್ರದೇಶ ಅದಿಡೀ. ದಶಾಶ್ವಮೇಧ ಘಾಟ್‌ನಲ್ಲಿ ಮಹಾಲಯ ಅಮಾವಾಸ್ಯೆಯ ಜಾತ್ರೆ-ಬಂಧು ಬಾಂಧವ, ಸ್ನೇಹಿತರ ವಿರಳ ಭೇಟಿಯ ಸಂದರ್ಭ ಕೂಡಾ. ಆ ಹಳ್ಳಿಯವರು ಈ ಹಳ್ಳಿಯವರನ್ನು ಭೇಟಿಯಾಗಿ ಸಂಭ್ರಮಿಸೋದು, ತಬ್ಬಿಕೊಳ್ಳೋದು, ಸುಖದುಃಖ ತೋಡಿಕೊಳ್ಳೋದು, ವಿಚಾರಿಸಿಕೊಳ್ಳೋದು-ನಾನು ನೋಡಿದ ದೃಶ್ಯವೊಂದು - ಮಗಳಿಗೆ ಮದುವೆ ಆಗಿದೆ. ಗಂಡನ ಮನೆಗೆ ಕಳಿಸಿಕೊಟ್ಟಿದ್ದಾರೆ. ಆಮೇಲೆ ಅವಳು ತವರಿಗೆ ಬಂದೇ ಇಲ್ಲ. ಇಲ್ಲಿ ಈಗ ಅಕಸ್ಮಾತ್ ತಾಯಿ ಮಗಳು ಭೇಟಿ ಆಗಿದ್ದಾರೆ. ಮದುವೆ ಮಾಡಿ ಕಳಿಸಿಕೊಟ್ಟ ಮೇಲೆ ಮಗಳನ್ನು ತಾಯಿ ಅದೇ ಮೊದಲ ಬಾರಿಗೆ ನೋಡುತ್ತಿದ್ದಾಳೆ. ಬಹುಶಃ ನೋಡಿದ್ದೇ ಇಬ್ಬರೂ ಅಲ್ಲೇ ಕುಸಿದು ಕುಳಿತು ಪರಸ್ಪರರ ಹೆಗಲಿಗೆ ತಲೆಯಾನಿಸಿ ತೂಗೀ ತೂಗೀ ತಾಯಿ-ತೂ ಮೇರೀ ಬಿಟಿಯಾ, ತೂ ಕಹಾಂ ಥೀ? ಕ್ಯೋಂ ನಹೀಂ ಆಯೀ? ಬೊಬ್ಬೆ. ಮಗಳು-ಹಾಯ್ ಮೇರೀ ಮಂಯ್ಯಾ, ತೂನೇ ಕ್ಯೋಂ ನಹೀಂ ಬುಲಾಯಾ? ಅಳು. ನಿಜವಾಗಿಯೂ ಹೃದಯ ಕಲಕಿ ಹೋಗಬೇಕು. ಅಕ್ಕಪಕ್ಕವೆಲ್ಲ ಜನ ಜನ. ನಡೆಯುತ್ತಲೇ ಇದೆ. ಈ ದೃಶ್ಯ ನನ್ನ ಮನಸ್ಸಿನಲ್ಲಿ ಉಳಿದಿರುವುದು ಕೇವಲ ಇಷ್ಟಕ್ಕಾಗಿ ಅಲ್ಲ. ಅವರ ಕೂಗಿನ ಧಾಟಿ, ರಾಗ, ಅವರು ಮಾತಾಡುತ್ತಾರೋ, ಕೂಗುತ್ತಾರೋ, ಹಾಡುತ್ತಾರೋ ಏನೆಂದೇ ಗೊತ್ತಾಗದ ವಿಶೇಷ ಧಾಟಿ ಅದು. ಮಾತು ತಾನಾಗಿ ಲಯಬದ್ಧವಾಗುತ್ತಿದೆಯಲ್ಲ! ಹ್ರಸ್ವ ದೀರ್ಘಾಕ್ಷರಗಳು ಇರೋದರಿಂದ ಸುಲಭವಾಗಿ ನಾವು ಮಾತಾಡೋದನ್ನೇ ಹಾಗಾದರೆ ಸಂಗೀತ ಮಾಡಬಹುದೇ-ವಿನಾಶ್ಚರ್ಯ- ದಶಾಶ್ವಮೇಧ ಘಾಟ್‌ನಲ್ಲಿ ಹೀಗೆ ಅನೇಕ ಹೊಸ ಹೊಸ ಅನುಭವಗಳಾದವು. ಹಾಂ. ಆಮೇಲೆ ಆ ಹುಡುಗಿಯನ್ನು ಗಂಡನ ಕಡೆಯವರು 'ಚಲೋ, ಚಲೋ' ಅಂತ ನಿರ್ಭಾವದಿಂದ ಎಳೆದುಕೊಂಡು ಹೋದರು. ನನಗನಿಸಿತು. ಇಲ್ಲಿಯೂ ಕೂಡ ಸಮಸ್ಯೆ ಇದೆ. ನಮಗಿಂತಲೂ ಹೆಚ್ಚಿನ ಸಮಸ್ಯೆ. ಹಿರಿಯಡಕದ ಸಿರಿಜಾತ್ರೆಗೆ ಹೋದಾಗಲೂ ಈ ಜಾತ್ರೆ ಜ್ಞಾಪಕಕ್ಕೆ ಬಂತು. ಮನುಷ್ಯ ಸಂಬಂಧಗಳ ದರ್ಶನಗಳೆಲ್ಲ ಹೀಗೆ ಇಂತಹ ಪ್ರದೇಶದಲ್ಲೇ ಆಗೋದು." (ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ ಪುಟ 199-200).

1929ರಲ್ಲಿ ಹುಟ್ಟಿದ ಬಿ.ವಿ. ಕಾರಂತರು ತಾರುಣ್ಯಕ್ಕೆ ಕಾಲಿಡುತ್ತಿದ್ದಂತೆ ಭಾರತ, ಸ್ವಾತಂತ್ರ್ಯ ಮತ್ತು ದೇಶ ವಿಭಜನೆ ಎರಡನ್ನೂ ಕಂಡಿತು. ಸಂಭ್ರಮದಲ್ಲಿ ವಿಷಾದ

ಬೆರೆತಿತ್ತು. ಜೊತೆಗೆ ಹಿಂಸೆ ಕೂಡ. ಅನಂತರ ಕಾರಂತರು ಇನ್ನೊಂದು ಐತಿಹಾಸಿಕ ವಿದ್ಯಮಾನ, ರಾಮಜನ್ಮಭೂಮಿ ಚಳುವಳಿ, ದೇಶದಲ್ಲಿ ದಿನೇ ದಿನೇ ಬೆಳೆಸಿಕೊಂಡ ಜನಪ್ರಿಯತೆಗೂ ಸಾಕ್ಷಿಯಾದರು. ಸ್ವತಃ ಕಾರಂತರು, ರಾಮಜನ್ಮಭೂಮಿ ಚಳುವಳಿಯ ಹಿಂದಿನ ರಾಜಕೀಯ ಒತ್ತಾಸೆಗಳನ್ನು ವಿರೋಧಿಸಿದರು. ಬಹುತ್ವವನ್ನೂ, ವೈವಿಧ್ಯವನ್ನೂ ಸದಾ ಎತ್ತಿ ಹಿಡಿಯುವ, ಸದಾ ಪೋಷಿಸುವ ಕಾಶಿಯ ಬಹು ಸಮುದಾಯಗಳ ಸಹಬಾಳ್ವೆಯ ಪರಂಪರೆ ಕುರಿತು ಮೆಚ್ಚುಗೆಯಲ್ಲಿ ಅವರು ತಮ್ಮ ಆತ್ಮಕತೆಯಲ್ಲಿ ಬರೆಯುವುದು ಅವರ ಹೃದಯವಂತಿಕೆಯನ್ನು ತೋರಿಸುತ್ತದೆ. ಬದುಕಿನಲ್ಲಿ ತನಗೆ ಸಲ್ಲದ್ದು, ತಾನು ಒಲ್ಲದ್ದು ಎಂದು ಅವರು ಏನನ್ನೂ ಹೊರಗಿಟ್ಟವರಲ್ಲ: ತಿರಸ್ಕರಿಸಿದವರೂ ಅಲ್ಲ. ಯಾರನ್ನಾದರೂ ದ್ವೇಷಿಸುವುದಂತೂ ಅವರ ಸ್ವಭಾವದಲ್ಲೇ ಇರಲಿಲ್ಲ. ಹಾಗೆಂದು ತನ್ನ ರಾಜಕೀಯ ನಿಲುವು ಇದು ಎಂದು ವಾಚ್ಯವಾಗಿ, ಸಾರ್ವಜನಿಕವಾಗಿ ಅವರು ಎಂದೂ ಹೇಳಿದ್ದೇ ಇಲ್ಲ. ಅಂತಹ ಒಂದು ರಾಜಕೀಯ ನಿಲುವು ಅವರಿಗೆ ಇದ್ದದ್ದೇ ಆದರೆ ಅವರು ಅದನ್ನು ತನ್ನ ಖಾಸಗೀ ಸಂಗತಿಯಾಗಿಯೇ ಇರಿಸಿಕೊಂಡಿದ್ದರು.

ಆದಾಗ್ಯೂ ಬಿ.ವಿ. ಕಾರಂತರು ತಮ್ಮ ದಿನನಿತ್ಯದ ಪಡಿಪಾಟಲುಗಳಲ್ಲೇ ಮುಳುಗಿ ಬೇರೆ ಯಾವ ಯೋಚನೆಗೂ ವ್ಯವಧಾನವೇ ಇಲ್ಲದೆ ರಾಜಕೀಯವನ್ನು ದೂರವಿಟ್ಟವರಲ್ಲ. ತಮ್ಮ ಆತ್ಮಕತೆಯಲ್ಲಿ ಅವರೇ ಒಂದೆಡೆ ಹೇಳಿಕೊಂಡಿರುವ ಹಾಗೆ ಕೆಲ ಕಾಲ ಅವರು ಕಮ್ಯುನಿಷ್ಟ್ ಪಕ್ಷದ ಸದಸ್ಯರಾಗಿದ್ದರು. ಕಮ್ಯುನಿಷ್ಟ್ ಪಕ್ಷಕ್ಕೆ ಅವರು ವಿದಾಯ ಹೇಳಿದ್ದು ಒಂದು ಘನವಾದ ನೈತಿಕ ಕಾರಣಕ್ಕೆ. ಅಮೇರಿಕದ ಅಣುಬಾಂಬ್ ಸ್ಫೋಟದ ಪ್ರಯೋಗಗಳನ್ನು ಬೀದಿಗೆ ಇಳಿದು ಪ್ರತಿಭಟಿಸಿದ ಕಮ್ಯುನಿಸ್ಟರು ರಷ್ಯದ ಅಂತಹದ್ದೇ ಪ್ರಯೋಗಗಳ ಬಗ್ಗೆ ಮಾತ್ರ ಮೌನವಾಗಿರುತ್ತಾರೆ! ಅಣುಬಾಂಬ್ ಸಮೂಹನಾಶದ ಒಂದು ಪ್ರಳಯಾಂತಕ ಅಸ್ತ್ರವಾಗಿದ್ದು, ಅದು ಕೊಲ್ಲುವುದು ಜನಸಾಮಾನ್ಯರನ್ನು ಎಂಬ ಕಾಮನ್‌ಸೆನ್ಸ್‌ನ ವಿವೇಕಕ್ಕೂ ಎರವಾದ ಕಮ್ಯುನಿಸ್ಟರು ತಮ್ಮ ಕುರುಡು ಪಕ್ಷನಿಷ್ಠೆಯಲ್ಲಿ ಕ್ಯಾಪಿಟಲಿಸ್ಟ್ ಬಾಂಬ್ ಮತ್ತು ಸೋಷಿಯಲಿಸ್ಟ್ ಆತ್ಮರಕ್ಷಣೆಯ ಬಾಂಬ್‌ಗಳ ನಡುವೆ ವ್ಯತ್ಯಾಸವೇ ಇಲ್ಲವೇ? ಇತ್ಯಾದಿ ವಿತಂಡವಾದದ ಕ್ಯಾತೆ ಶುರು ಮಾಡಿದಾಗ ಬಿ.ವಿ. ಕಾರಂತರು ಜುಗುಪ್ಸೆಯಲ್ಲಿ ಪಕ್ಷ ತೊರೆಯಲು ನಿರ್ಧರಿಸುತ್ತಾರೆ. ಸೋವಿಯತ್ ಹೈಡ್ರೋಜನ್ ಬಾಂಬ್‌ನ ಕಾರಣಕರ್ತನೆನಿಸಿದ ನೊಬೆಲ್ ಪ್ರಶಸ್ತಿ ವಿಜೇತ ವಿಜ್ಞಾನಿ ಆಂದ್ರೇಯ ಸಖಾರೋವ್, ಸೋವಿಯತ್ ಅಣ್ವಸ್ತ್ರ ಪ್ರಯೋಗವನ್ನೂ ವಿರೋಧಿಸಿ, ತನ್ನ ದೇಶದ ಸರಕಾರವನ್ನು ಎದುರು ಹಾಕಿಕೊಂಡಿದ್ದರು. ಅಣು ಅಸ್ತ್ರಗಳಿಗೆ ಬಿ.ವಿ. ಕಾರಂತರು ತೋರಿದ ಪ್ರತಿರೋಧ, ಭಿನ್ನಮತೀಯ ಸೋವಿಯತ್ ವಿಜ್ಞಾನಿ ಸಖಾರೋವ್ ಅವರ ನಡೆಗೆ ಯಾವ ರೀತಿಯಲ್ಲೂ ಕಡಿಮೆಯದ್ದಲ್ಲ. ಕಮ್ಯುನಿಸ್ಟ್ ಪಕ್ಷಕ್ಕೆ ರಾಜೀನಾಮೆ ಕೊಟ್ಟ ನಂತರವೂ ಕಾರಂತರು ತನ್ನ ಎಡಪಂಥೀಯ ಮಾನವತಾದಿ ನಿಲುವುಗಳಿಗೆ ಬದ್ಧರಾಗಿದ್ದರು. ಕಾಶಿಯ ಧಾರ್ಮಿಕ ಪರಂಪರೆ ಮತ್ತು ಬಹುತ್ವವನ್ನು ಮೆಚ್ಚುಗೆಯಲ್ಲಿ ವರ್ಣಿಸುವ

ಕಾರಂತರು ಕಾಶಿಯ ಅನನ್ಯತೆಯನ್ನು ಹಾಳುಗೆಡವುವವರೇ ಆರ್.ಎಸ್.ಎಸ್. ನ ಸಂಘ ಪರಿವಾರದ ಸಂಘಟನೆಗಳಾದ ವಿಹಿಂಪ ಮತ್ತು ಭಜರಂಗದಳ ಎಂದು ಭಾವಿಸಿದ್ದಾರೆ. ತನ್ನ ಆತ್ಮಕತೆಯಲ್ಲಿ ಕಾರಂತರು ಹೇಳುತ್ತಾರೆ, 'ಯಾವ ಧರ್ಮದ, ವರ್ಗದ, ಉಪವರ್ಗದ ಮಠಗಳೆಲ್ಲ ಕಚ್ಚಾಡದೆ, ಜೊತೆಗೇ ಲಾಗಾಯ್ತಿನಿಂದಲೂ ಬದುಕಿ ಬಂದಂತಹ ಊರು ಕಾಶಿ. ಕೋಮು ಜಗಳಗಳು ಏನೇ ಇದ್ದರೂ ಅದೆಲ್ಲ ಈಗೀಗ ಭಜರಂಗದಳ ಮತ್ತು ವಿಹಿಂಪದಿಂದಲೇ ಅಲ್ಲಿನ ವಾತಾವರಣ ಹದೆಗೆಡುತ್ತಿದೆಯೇ ಹೊರತು ನಿತ್ಯಕ್ಕೆ ಅಂತಹ ಯಾವುದೂ ಇಲ್ಲದ ಸಹಜ ಸಹ ಅಸ್ತಿತ್ವ ಸಾಧಿಸಿಕೊಂಡ ನಗರವದು.' (ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ ಪುಟ 202)

ವಿಹಿಂಪ, ಭಜರಂಗದಳ ಮತ್ತು ಅವುಗಳ ತಾಯಿಬೇರಿನಂತಹ ಸಂಘಟನೆ ಆರ್.ಎಸ್.ಎಸ್.ನ ಹಠಮಾರಿತನ ಸಹ ಮೂಲವಿರುವುದು ಸತ್ಯದ ವಾರಸುದಾರರು ತಾವು ಮಾತ್ರ ಎಂಬ ಧಾರ್ಷ್ಟ್ಯದಲ್ಲಿ. 'ಮಂದಿರವಲ್ಲೇ ಕಟ್ಟುವೆವು' ಎಂಬ ಘೋಷಣೆಯೂ ಅದೇ ಹಠಮಾರಿತನದ ಇನ್ನೊಂದು ಮೂಲ ವರಸೆ. ಕಾರಂತರು ರಾಮಜನ್ಮಭೂಮಿ ಚಳುವಳಿಯನ್ನು ಅದರ ಪ್ರಾರಂಭದಿಂದಲೂ ವಿರೋಧಿಸಿದವರು. ಬಾಬರಿ ಮಸೀದಿ ಧ್ವಂಸವಾದ ಮೇಲೆ, ಅದೇ ಜಾಗದಲ್ಲಿ ಮಂದಿರದ ಬದಲು ಮಸೀದಿ ಕಟ್ಟುವುದಾದರೆ ತಾನು ಅದಕ್ಕೆ ಇಟ್ಟಿಗೆ ಹೊರಲು ಸಿದ್ಧ ಎಂದು ಅವರು ಸಾರ್ವಜನಿಕ ಸಭೆಯೊಂದರಲ್ಲಿ ಹೇಳಿದ್ದರು. ಮಂದಿರ ನಿರ್ಮಾಣದ ಹಠ ತೊಟ್ಟವರ ರಾಷ್ಟ್ರದ ಪರಿಕಲ್ಪನೆಯನ್ನೂ ಸಹ ಬಿ.ವಿ. ಕಾರಂತರು ತಿರಸ್ಕರಿಸಿದ್ದರು. ತಮ್ಮ ಆತ್ಮಕತೆಯಲ್ಲಿ ಅವರು ರಂಗಭೂಮಿ ಮತ್ತು ರಾಷ್ಟ್ರ ಎರಡಕ್ಕೂ ಅನ್ವಯಿಸುವಂತೆ ಹೇಳುತ್ತಾರೆ, 'ನಟನಿಗೆ ಬಹುರೂಪಿ ಎಂಬುದು ಅತ್ಯಂತ ಸೂಕ್ತ ಹೆಸರು. ಮೂಲತಃ ನಟನಿಗೆ ಒಂದು ನಿರ್ದಿಷ್ಟ ರೂಪವಿಲ್ಲ. ಅದು ಬದಲಾಗುತ್ತಲೇ ಇರುತ್ತದೆ. ತನಗೆ ತಾನೇ ಮಾಧ್ಯಮವಾಗುವ ನಟ ಬಹುರೂಪಿಯಾಗದೆ ಹೋದರೆ ನಟನಾಗಿ ಉಳಿಯಲಾರ. ಅದರಲ್ಲಿಯೂ ನಮ್ಮದು ಬಹುಭಾಷಾ ದೇಶ, ಬಹು ಧರ್ಮದ ದೇಶ, ಬಹು ವ್ಯವಹಾರದ ದೇಶ. ಆದ್ದರಿಂದ ಬಹುರೂಪಿ ಇನ್ನಷ್ಟು ಸೂಕ್ತ ಶಬ್ದವಾಗಿ ಕಾಣುತ್ತದೆ. ಪ್ರಜಾಪ್ರಭುತ್ವವೆಂದರೇನೆ ಒಂದು ರೀತಿಯಲ್ಲಿ ಬಹುವಚನ, ಬಹುರೂಪ. ನಾನು ಇತ್ತೀಚೆಗೆ ಭಾಷೆಗಳ ಬಗ್ಗೆ ಹೇಳುವುದು ಇದೇ ಕಾರಣಕ್ಕೆ. ಯಾವುದೂ ಏಕೈಕ ಭಾಷೆ ಆಗಬಾರದು. ಆಗಲಾರದು ಕೂಡ.' (ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ ಪುಟ 234)

ಸ್ವತಹ ರಂಗನಿರ್ದೇಶಕರಾಗಿ ಬಿ.ವಿ. ಕಾರಂತರಿಗೆ ರಂಗಭೂಮಿ ಮತ್ತು ರಾಷ್ಟ್ರದ ಬಹುರೂಪಗಳ ಹಾಗೇನೇ ಸತ್ಯದ ಬಹುರೂಪ ಕೂಡ ಪ್ರತಿಕ್ಷಣದ ಅನುಭವವೇದ್ಯ ವಾಸ್ತವವಾಗಿತ್ತು. ನಾವು ನೋಡುವ ನಾಟಕವೊಂದು ಎಷ್ಟರ ಮಟ್ಟಿಗೆ ಸತ್ಯ? ಅದರಲ್ಲಿ ಎಷ್ಟು ಸುಳ್ಳು? ನಾವು ನೋಡುವ ನಾಟಕ ಸುಳ್ಳೇ ಆದರೆ ಅದನ್ನು ನಾವು ನೋಡುವುದಾದರೂ ಯಾವ ಪುರುಷಾರ್ಥಕ್ಕೆ? ರಂಗಕರ್ಮಿಯಾದ ಬಿ.ವಿ. ಕಾರಂತರನ್ನು ಈ ಪ್ರಶ್ನೆಗಳು

ಕಾಡಿವೆ. ಅವರಿಗೆ ಸುಳ್ಳು ಕೂಡ ಸತ್ಯದ ಇನ್ನೊಂದು ರೂಪದ ಹಾಗೆ ಕಾಣುತ್ತದೆ. ನಾವು ಹೇಳಿದ ಸುಳ್ಳು ಥೇಟ್ ಸತ್ಯದ ಹಾಗಿದ್ದರೆ ಮಾತ್ರ ಕೇಳುಗ ಅದನ್ನು ನಂಬುತ್ತಾನೆ. ಅವನು ಅದನ್ನು ನಂಬಿದರೆ, ಸುಳ್ಳು ಹೇಳಿದ ನಮ್ಮ ಉದ್ದೇಶವೂ ಈಡೇರಿದಂತೆ. ತನ್ನದೇ ಖಾಸಗೀ ಬದುಕಿನಲ್ಲಿ ಕೂಡ ಕಾರಂತರು ಮತ್ತೆ ಮತ್ತೆ ಸುಳ್ಳು ಹೇಳಿದವರೇ. ಸುಳ್ಳು ಹಾಗೂ ಸತ್ಯ ರಂಗಕಲೆಯಲ್ಲಿ ಒಂದು ಮತ್ತೊಂದರ ಜೊತೆ ಬಿಡಿಸಲಾಗದಂತೆ ನಿಕಟವಾಗಿ ಬೆಸೆದುಕೊಂಡಿದೆ. ಸ್ವತಹ ಕಾರಂತರು ಸುಳ್ಳು ಹೇಳುವುದರಲ್ಲಿ ಅಂದರೆ ತಾನು ಹೇಳಿದ ಸುಳ್ಳೇ ಪರಮ ಸತ್ಯವೆಂದು ಜನರು ಭಾವಿಸುವಂತೆ ಮಾಡುವುದರಲ್ಲಿ ನಿಷ್ಣಾತರು. ಕತ್ತಲೆ–ಬೆಳಕು, ಪಾಪ–ಪುಣ್ಯ, ತಪ್ಪು–ಸರಿ, ನ್ಯಾಯ–ಅನ್ಯಾಯ ಒಂದು ಇನ್ನೊಂದಕ್ಕೆ ತದ್ವಿರುದ್ಧವಾಗಿರುವ ವೈರಿಗಳಂತೆ ಕಾಣಿಸುತ್ತದೆ. ಆದರೆ ನಿತ್ಯ ಜೀವನದಲ್ಲಿ ಇವೆಲ್ಲವೂ ಪರಸ್ಪರ ಒಂದರಲ್ಲಿ ಇನ್ನೊಂದು ಅಖಂಡವಾಗಿ ಬೆರೆತುಕೊಂಡಿವೆ. ಕಾರಂತರ ಬದುಕಿಗೆ ಒಂದು ನಿರ್ಣಾಯಕ ತಿರುವು ಕೊಟ್ಟದ್ದೇ, ಬಾಲ್ಯದಲ್ಲಿ ಅವರು ಮಾಡಿದ ಒಂದು ಕಳ್ಳತನ; ಮತ್ತು ಅದನ್ನು ಮುಚ್ಚಿಹಾಕಲು ಅವರು ಹೇಳಿದ ಸುಳ್ಳು. ಒಬ್ಬ ಬಡ ವಿದ್ಯಾರ್ಥಿಯಾಗಿ ಹೈಸ್ಕೂಲ್ ಓದುತ್ತಿದ್ದ ಕಾರಂತರು ಅನ್ನ ವಸತಿ ಕೊಟ್ಟು ಸಾಕಿ ಸಲಹಿದ ತನ್ನ ಆಶ್ರಯದಾತರ ಮನೆಯಿಂದಲೇ ನಗದು ಹಣ ಕದ್ದು ಸಿಕ್ಕಿ ಬಿದ್ದವರು. ಆ ಪ್ರಸಂಗವನ್ನು ತನ್ನ ಆತ್ಮಕಥೆಯಲ್ಲಿ ಕಾರಂತರು ಬಣ್ಣಿಸುವ ರೀತಿಯಲ್ಲೇ ಆ ಅನುಭವ ಓದುಗನ ಸ್ವಾನುಭವವೂ ಆಗಿಬಿಡುತ್ತದೆ. ಕಳ್ಳತನ ಮಾಡಿ ರೆಡ್ ಹ್ಯಾಂಡ್ ಆಗಿ ಸಿಕ್ಕಿಬಿದ್ದ ಕಾರಂತರ ತಲ್ಲಣದಲ್ಲಿ ನಾವೂ ಕೂಡಾ ಭಾಗೀದಾರರಾಗಿ ಅವರು ಮಾಡಿದ ಕಳ್ಳತನಕ್ಕೆ ನಾವು ಅಪರಾಧೀ ಭಾವವನ್ನು ಅನುಭವಿಸತೊಡಗುತ್ತೇವೆ. ಆ ಕಳ್ಳತನ ನಮ್ಮಿಂದಲೂ ಆಗಬಹುದಿತ್ತು ಎಂದು ಅರಿವಾಗುತ್ತದೆ. (ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ, ಪುಟ 96–103)

ಬಾಲ್ಯ ಕಳೆದು ತಾರುಣ್ಯಕ್ಕೆ ಕಾಲಿರಿಸುವ ಸಂಧಿಕಾಲದ ಕಿಶೋರ ಬಿ ವಿ ಕಾರಂತರ ಬದುಕಿಗೆ ಅವರ ಕಳ್ಳತನ ಮತ್ತು ಅದನ್ನು ಮುಚ್ಚಿಹಾಕಲು ಅವರು ಹೇಳಿದ ಸುಳ್ಳು ಒಂದು ಹೊಸ ಸಾಧ್ಯತೆಯನ್ನು ತೆರೆಯಿತು. ಕಾರಂತರು ಪುತ್ತೂರು ತೊರೆದು ಮೈಸೂರಿಗೆ ಹೋಗಿ ಗುಬ್ಬಿ ವೀರಣ್ಣನವರ ನೇತೃತ್ವದ ನಾಟಕ ಕಂಪೆನಿಗೆ ಸೇರಿಕೊಂಡರು. ವೃತ್ತಿನಿರತ ನಾಟಕ ಸಂಸ್ಥೆಯಾದ ಗುಬ್ಬಿ ಕಂಪೆನಿಯಲ್ಲಿ ಉದ್ಯೋಗ ನಿರ್ವಹಿಸಿದ ನಂತರ ಅವರ ಬದುಕು ಮತ್ತೊಂದು ಕಡಿದಾದ ತಿರುವು ತೆಗೆದುಕೊಂಡಿತು. ಯುವ ಕಾರಂತರು ಹೆಚ್ಚಿನ ಶಿಕ್ಷಣಕ್ಕಾಗಿ ಕರ್ನಾಟಕಕ್ಕೆ ವಿದಾಯ ಹೇಳಿ ಕಾಶಿಗೆ ಪ್ರಯಾಣ ಬೆಳೆಸಿದರು. ಕಾಶಿಯಲ್ಲಿ ಅವರು ಕಳೆದ ಕಾಲಾವಧಿಯ ನೆನಪುಗಳ ಕಥನ ಅವರ ಆತ್ಮಕತೆಯ ಅತ್ಯಂತ ಚೇತೋಹಾರಿ ಅಧ್ಯಾಯ. ಕಾಶಿ ಬಿ.ವಿ. ಕಾರಂತರ ಬದುಕು ಮತ್ತು ಚಿಂತನೆಗಳಿಗೆ ಒಂದು ಹೊಸ ಆಯಾಮ ಕಲ್ಪಿಸಿಕೊಟ್ಟರೆ ಭಾರತದ ಇನ್ನೊಂದು ಪ್ರಮುಖ ನಗರ ಭೋಪಾಲ್ ಅವರ ಪ್ರತಿಭೆಯ ಅಭಿವ್ಯಕ್ತಿಗೆ ಹೊರದಾರಿಗಳನ್ನು ತೆರೆಯಿತು. ಆದರೆ ಕೊನೆಗೆ ಬಿ.ವಿ. ಕಾರಂತರನ್ನು ಹತಾಶೆಯ ಅಂಚಿಗೆ ತಳ್ಳಿದ್ದು ಕೂಡಾ ಭೋಪಾಲ್

ನಗರವೇ. 1981ರ ಸುಮಾರಿಗೆ ಬಿ.ವಿ. ಕಾರಂತರು, ಅದುವರೆಗೆ ನಿರ್ದೇಶಕನಾಗಿದ್ದ ದೆಹಲಿಯ ರಾಷ್ಟ್ರೀಯ ನಾಟಕಶಾಲೆ ತೊರೆದು ಭೋಪಾಲ್‌ನ ರಾಷ್ಟ್ರಮಟ್ಟದ ಕಲಾಕೇಂದ್ರ 'ಭಾರತ ಭವನ'ದ ಆಹ್ವಾನದ ಮೇರೆಗೆ ಭೋಪಾಲ್‌ಗೆ ತೆರಳಿದರು. ಕವಿ ಹಾಗೂ ಆಡಳಿತ ಅಧಿಕಾರಿ ಅಶೋಕ್ ವಾಜಪೇಯಿ ಭಾರತ ಭವನ ಮುಖ್ಯಸ್ಥರಾಗಿದ್ದರು. ಅಂತರಾಷ್ಟ್ರೀಯ ಖ್ಯಾತಿಯ ಕಲಾವಿದ ಸ್ವಾಮಿನಾಥನ್ ಕೂಡಾ ಆಗ ಭಾರತ ಭವನದ ಉದ್ಯೋಗಿಯಾಗಿದ್ದರು. ಬಿ.ವಿ. ಕಾರಂತರ ಪ್ರತಿಭೆಗೆ ಭೋಪಾಲ್ ಸೂಕ್ತ ವೇದಿಕೆ ಒದಗಿಸಿದರೂ ಆ ನಗರದ ಜೊತೆ ಅವರ ಸಂಬಂಧ ಪರ್ಯವಸಾನಗೊಂಡದ್ದು ಮಾತ್ರ ಒಂದು ದಾರುಣ ಪ್ರಸಂಗ. ಕಾರಂತರು ಕನಸಿನಲ್ಲಿಯೂ ಯೋಚಿಸದ ಒಂದು ಕ್ರಿಮಿನಲ್ ಅಪರಾಧದ ಆರೋಪವನ್ನು ಅವರ ಮೇಲೆ ಹೊರಿಸಿ ನ್ಯಾಯಾಲಯದ ಕಟಕಟೆಯಲ್ಲಿ ನಿಲ್ಲಿಸಿ ಅವರ ತನಿಖೆ ನಡೆದು ಶಿಕ್ಷೆಯೂ ಆಗಿ ಅವರು ಜೈಲುವಾಸವನ್ನು ಅನುಭವಿಸಬೇಕಾಯ್ತು. ತಮ್ಮ ಕಾಶಿಯ ನೆನಪುಗಳ ಕಾರಂತರ ನಿರೂಪಣೆ, ಅವುಗಳಲ್ಲಿ ಉಕ್ಕುವ ಜೀವನೋತ್ಸಾಹದಿಂದ ನಮ್ಮ ನೆನಪಿನಲ್ಲಿಯೂ ಚಿರಕಾಲ ಉಳಿವಂಥದ್ದು. ಅದಕ್ಕೆ ಪ್ರತಿಯಾಗಿ ಅವರ ಭೋಪಲ್ ಕಥನ, ಅದರ ತೀವ್ರ ಉಲ್ಲಾಸ ಜೊತೆಗೆ ಉದ್ವಿಗ್ನತೆ ಮತ್ತು ಕೊನೆಯಲ್ಲಿ ಅವರಿಗೆ ಬಂದೊದಗಿದ ಸಂಕಟಗಳಿಂದಾಗಿ ಸ್ಥಾಯಿಯಾಗಿ ನಮ್ಮ ನೆನಪಿನ ಭಾಗವಾಗಿ ಬಿಡುತ್ತದೆ.

ಕಾರಂತರು ತಮ್ಮ ಬದುಕಿನ ಅತ್ಯಂತ ಯಾತನೆಯ ದಿನಗಳಲ್ಲೂ ತಮ್ಮ ಮನಸ್ಸನ್ನು ಕಹಿ ಮಾಡಿಕೊಂಡವರಲ್ಲ. ಭಾವತೀವ್ರತೆ ಕಾರಂತರ ಸ್ವಭಾವದಲ್ಲೇ ಇದೆ; ಆದರೆ ಅವರು ಎಂದೂ ಭಾವುಕರಾಗಲಾರರು. ಬದುಕಿನ ವಾಸ್ತವಗಳನ್ನು ವಸ್ತುನಿಷ್ಠವಾಗಿ ಗ್ರಹಿಸುವ ನಿಷ್ಠುರ ಬೌದ್ಧಿಕತೆಯನ್ನು ಕಾರಂತರು ಮೈಗೂಡಿಸಿಕೊಂಡಿದ್ದರು. ಮನುಷ್ಯ ಸ್ವಭಾವದ ವಿಪರ್ಯಾಸದ ಬಗೆಗಿನ ಅವರ ಚಿಂತನೆಗೆ ಒಂದು ನಿದರ್ಶನವಾಗಿ ಭೋಪಾಲ್ ಜೈಲಿನಲ್ಲಿ ಅವರು ಕೈದಿಯಾಗಿದ್ದಾಗ ಬರೆಯುತ್ತಿದ್ದ ದಿನಚರಿಯ ಒಂದು ತುಣುಕನ್ನು ಇಲ್ಲಿ ಕಾಣಿಸಿದ್ದೇನೆ. ಇದು ಜೈಲಿನಲ್ಲಿ ಕಾರಂತರ ಪಕ್ಕದ ಕೋಣೆಯಲ್ಲಿ ಬಂಧಿಯಾಗಿದ್ದ ಕ್ರಿಮಿನಲ್ ಹಜಮುಲ್ಲಾಖಾನ್ ಎಂಬುವನ ಕುರಿತು ಕಾರಂತರು ಬರೆದಿರುವುದು.

ಹಜಮುಲ್ಲಾಖಾನ್ ಕಡ್ಡಿಗಿಡ್ಡಿಗಳಿಂದ ಒಂದು ಗೂಡು ಮಾಡಿದ್ದ. ದಿನಾ ಆ ಗೂಡಿನೊಳಗೆ ರೊಟ್ಟಿ ತುಂಡು ಇಡೋನು. ಅದರಾಸೆಗೆ ಅಳಿಲುಗಳು ಬರುತ್ತಿದ್ದವು. ಗೂಡಿನ ಬಾಗಿಲಿಗೊಂದು ಪುಟ್ಟ ಹಗ್ಗ ಕಟ್ಟಿ ಅದರ ತುದಿಯನ್ನು ತನ್ನ ಕಾಲ್ಬೆರಳಿಗೆ ಕಟ್ಟಿಕೊಂಡು ಮಲಗಿರುತ್ತಿದ್ದ. ಗೂಡಿನೊಳಗೆ ಅಳಿಲು ಹೋದೊಡನೆ ಪಟಕ್ಕನೆ ಕಾಲೆಳೆದುಕೊಂಡು ಅದನ್ನು ಬಂಧಿಸುತ್ತಿದ್ದ. ಆಮೇಲೆ ಹಿಂಸಿಸಿ ಬಿಟ್ಟು ಬಿಡುತ್ತಿದ್ದ. ನಾನೂ ಕುತೂಹಲದಿಂದ ಗೂಡೊಳಗೆ ಸಿಕ್ಕಿ ಬೀಳುವ ಅಳಿಲುಗಳನ್ನು ನೋಡುತ್ತ ಇರುತ್ತಿದ್ದೆ. ಹೀಗಿರುವಾಗ ಒಮ್ಮೆ ಪಾಪ ಒಂದು ಬಸುರಿ ಅಳಿಲು ಸಿಕ್ಕಿಕೊಂಡಿತು. ಜೋರಾಗಿ

ಚಲಿಸಲೂ ಸಾಧ್ಯವಿಲ್ಲದ ಅಳಿಲು ಅದು. ಒದ್ದಾಡುತ್ತಿತ್ತು. ಇಣುಕಿ ನೋಡಿದವನಿಗೆ ಸಂಕಟ ಭುಗಿಲೆಂದಿತು. ರೇಗಿ, 'ಯಾಕೆ ಹೀಗೆ ಮಾಡ್ತೀಯಾ? ನಾವೇ ಜೈಲಲ್ಲಿದ್ದೇವೆ. ಹಾಗಿರೋವಾಗ ಇನ್ನೊಂದು ಪ್ರಾಣೀನ ಜೇಲಿಗೆ ಹಾಕೋದು ಸರೀನಾ?' ಅಂತಂದೆ. ಅದಕ್ಕೆ ಅತ 'ಮನ್ ಬೆಹಲ್‌ತಾ ಹೈ' ಅಂತಂದ. ಸಣ್ಣ ದನಿಯಲ್ಲಿ. 'ಮನಸ್ಸಿಗೇನೋ ಖುಷಿಯಾಗುತ್ತೆ' ಹಾಗೆಂದವ ಸಂಜೆ ನೋಡಿದರೆ ಅದನ್ನು ಬಿಟ್ಟು ಬಿಟ್ಟಿದ್ದ. (ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ – ಪುಟ 385). ಬಡಪಾಯಿ ಹಜಮುಲ್ಲಾಖಾನ್ ಇರುವುದು ಜೈಲಲ್ಲಿ. ಅವನಿಗಿಂತ ಅಸಹಾಯಕ ಸ್ಥಿತಿಯಲ್ಲಿರುವ ಮೂಕ ಜೀವಿಗಳನ್ನು ಅವನು ಬಂಧಿಸಿ, ಹಿಂಸೆ ಕೊಟ್ಟು ಮಜಾ ತೆಗೆದುಕೊಳ್ಳುತ್ತಾನೆ! ಮನುಷ್ಯನ ಅಸ್ತಿತ್ವಕ್ಕೆ ಮತ್ತು ಅವಸ್ಥೆಗೆ ಇದಕ್ಕಿಂತ ಒಳ್ಳೆಯ ರೂಪಕ ನನಗಂತೂ ಹೊಳೆಯುತ್ತಿಲ್ಲ.

ಬಿ.ವಿ. ಕಾರಂತರು ತಮ್ಮ ಆತ್ಮಕತೆಯಲ್ಲಿ ಮೂವರು ಹಿರಿಯರನ್ನು ತನ್ನ ಗಾಡ್ ಫಾದರ್ಸ್ ಎಂದು ನೆನಪಿಸಿಕೊಳ್ಳುತ್ತಾರೆ. ಈ ಮಹಾನುಭಾವರಲ್ಲಿ ಮೊದಲನೆಯವರು. ಪುತ್ತೂರಿನಿಂದ ಮೈಸೂರಿಗೆ ಬಂದ ತಲೆಮಾಸದ ಹುಡುಗ ಬಿ.ವಿ. ಕಾರಂತರಿಗೆ ತನ್ನ ನಾಟಕ ಕಂಪೆನಿಯಲ್ಲಿ ಆಶ್ರಯ, ಉದ್ಯೋಗಗಳನ್ನು ಕೊಟ್ಟು, ಅವರನ್ನು ಕಲಾವಿದನನ್ನಾಗಿ ರೂಪಿಸಿದ ಗುಬ್ಬಿ ವೀರಣ್ಣ. ಪ್ರೌಢ ಕಾರಂತರು ರಾಷ್ಟ್ರೀಯ ನಾಟಕ ಶಾಲೆಯ ಪದವಿ ಪಡೆದು, ಬೆಂಗಳೂರಿನಲ್ಲಿ ನಾಟಕ ಆಡಿಸಿ, ಬೆಂಗಳೂರಿನ ಪತ್ರಿಕೆಗಳಿಂದಲೇ 'ರಾಜ್ಯ ಮಟ್ಟದ ನಿರ್ದೇಶಕ' ಎನ್ನಿಸಿಕೊಳ್ಳುವ ಮೊದಲೇ ಅವರನ್ನು ತಾನು ಪ್ರಿನ್ಸಿಪಾಲರಾಗಿದ್ದ ಉಡುಪಿಯ ಎಂ.ಜಿ.ಎಂ. ಕಾಲೇಜಿಗೆ ಆಹ್ವಾನಿಸಿ, ಅವರ ರಂಗ ಪ್ರಯೋಗಗಳಿಗೆ ನಾಂದಿ ಹಾಡಿದ ಕು.ಶಿ. ಹರಿದಾಸ ಭಟ್ಟರು, ಕಾರಂತರು ಹೆಸರಿಸುವ ಅವರ ಇನ್ನೊಬ್ಬ ಗಾಡ್‌ಫಾದರ್. ಕಾರಂತರ ಪ್ರಕಾರ ಅವರ ಮೂರನೆಯ ಗಾಡ್ ಫಾದರ್, ಕರ್ನಾಟಕದ ಸಾಗರ ತಾಲೂಕಿನ ಹೆಗ್ಗೋಡಿನಲ್ಲಿ ನೀನಾಸಂ ನಾಟಕ ಸಂಸ್ಥೆಯನ್ನು ಹುಟ್ಟು ಹಾಕಿ, ಕ್ರಮೇಣ ಅದರ ಆಶ್ರಯದಲ್ಲಿ ಒಂದು ನಾಟಕ ತರಬೇತಿ ಶಾಲೆಯನ್ನೂ ಪ್ರಾರಂಭಿಸಿ, ಜೊತೆಗೆ ಪುಸ್ತಕ ಪ್ರಕಟಣೆಗಾಗಿ 'ಅಕ್ಷರ ಪ್ರಕಾಶನ'ವನ್ನು ಸ್ಥಾಪಿಸಿ, ರಾಜ್ಯದಲ್ಲಿ ಒಂದು ರಂಗ ಚಳುವಳಿಯನ್ನೇ ಪ್ರವರ್ತಿಸಿದ ಕೆ.ವಿ. ಸುಬ್ಬಣ್ಣ. ಈ ಮೂವರ ಕಲಾ ಕೈಂಕರ್ಯವೂ ಕೇವಲ 'ಸ್ವಾಂತ ಸುಖಾಯ' ಎಂಬ ದೃಷ್ಟಿಯಲ್ಲಿ ಅವರುಗಳು ಕೈಗೊಂಡಂತಹದ್ದು. ಆತ್ಮತೃಪ್ತಿ ಒಂದನ್ನು ಬಿಟ್ಟು ಬೇರೆ ಯಾವ ಸ್ವಾರ್ಥವೂ ಅವರಲ್ಲಿ ಯಾರಿಗೂ ಇರಲಿಲ್ಲ. ಅವರು ಮೂವರ ಈ ಸುಖ ಯಾವ ಬಗೆಯದು ಎಂದರೆ ಜನರನ್ನು ಸಂತೋಷ ಪಡಿಸುವುದರಲ್ಲೇ, ತೃಪ್ತಿ ಪಡಿಸುವುದರಲ್ಲೇ ಅವರಿಗೆ ಸುಖ, ಆತ್ಮತೃಪ್ತಿ. ಈ ಮೂವರೂ ರಂಗಭೂಮಿಯಿಂದ ಏನೂ ಗಳಿಸಲಿಲ್ಲ; ಕೂಡಿಡಲೂ ಇಲ್ಲ. ಆದರೆ ಸಮಾಜದಿಂದ ತಾವು ಪಡೆದದ್ದಕ್ಕಿಂತ ಹೆಚ್ಚು ಸಮಾಜಕ್ಕೆ ಸಲ್ಲಿಸಿದರು. ಈ ಮೂವರು ಧೀಮಂತರ ಕೊಡುಗೆಯಿಂದ ಕನ್ನಡ ಸಂಸ್ಕೃತಿ ಶ್ರೀಮಂತವಾಗಿದೆ.

ಗುಬ್ಬಿ ವೀರಣ್ಣ, ಕು.ಶಿ. ಹರಿದಾಸ ಭಟ್ಟ, ಕೆ.ವಿ. ಸುಬ್ಬಣ್ಣ ಹಾಗೂ ಇವರುಗಳ ಬಗ್ಗೆ ಅಪಾರ ಗೌರವವಿರುವ ಬಿ.ವಿ. ಕಾರಂತ, ಈ ನಾಲ್ವರ ಬಗ್ಗೆ ನಾನು ಹೇಳಲೇಬೇಕಾದ ಮಾತೊಂದಿದೆ. ಹೆರರಿಗಾಗಿ ತಾನು ಎಂಬ ತಿಳುವಳಿಕೆಯನ್ನು ಮೈಗೂಡಿಸಿಕೊಂಡ ಈ ನಾಲ್ವರ ಬದುಕಿನ ಹಿನ್ನೆಲೆಯಲ್ಲಿ ಫ್ರೆಂಚ್ ತತ್ವಜ್ಞಾನಿ ಡೇಕಾರ್ಟೆಯ 'ಐ ಥಿಂಕ್, ದೇರ್‌ಫೋರ್ ಐ ಯಾಮ್' ಎಂಬ ಮಾತು ಕೇವಲ ಅಹಂಕಾರದಿಂದ ಹುಟ್ಟಿಕೊಂಡದ್ದು ಎನ್ನಿಸುತ್ತದೆ. 'ನಾನು ಯೋಚಿಸುತ್ತೇನೆ, ಆದ್ದರಿಂದ ನಾನು ನಾನಾಗಿದ್ದೇನೆ' ಎಂಬ ಮಾತು ಅಹಂಕಾರ ಜನ್ಯ ಮಾತ್ರವಲ್ಲ, ಅದು ಯೋಚಿಸುವ ಮನುಷ್ಯ ಪ್ರಜ್ಞೆಯನ್ನು ವಿಶ್ವದ ಉಳಿದ ಜೀವಜಗತ್ತಿನಿಂದ ಬೇರ್ಪಡಿಸುತ್ತದೆ. ವಿಶ್ವವನ್ನು ನಿಯಂತ್ರಿಸಲು, ಆಳಲು ಮತ್ತು ಉಪಭೋಗಿಸಲು ಮನುಷ್ಯನಿಗೆ ಅನುವು ಮಾಡಿಕೊಡುತ್ತದೆ. ಡೇಕಾರ್ಟೆಯ ಈ ತತ್ವಕ್ಕೆ ಪ್ರತಿಕ್ರಿಯೆಯಾಗಿ ಆಫ್ರಿಕಾ ಖಂಡದ ಸೆನೆಗಾಲ್ ದೇಶದ ಕವಿ-ರಾಜಕಾರಣಿ ಲಿಯೋಪಾಲ್ ಸೆನೆಟ್ ಸೆಂಗೋರ್ 'ಐ ಫೀಲ್, ದೇರ್ ಫೋರ್ ಐ ಯಾಮ್' ಎಂದು ಹೇಳಿದ್ದೆಂದು -ನಾನು ಭಾವಿಸುತ್ತೇನೆ. ಆದ್ದರಿಂದ ನಾನು ನಾನಾಗಿದ್ದೇನೆ ಎಂಬ ಮಾತು ಡೇಕಾರ್ಟೆಯ ಈ ತತ್ವಕ್ಕಿಂತ ಹೆಚ್ಚು ಮಾನವೀಯವಾಗಿದೆ, ನಿಜ. ಆದರೆ ಸೆಂಗೋರ್ ಮಾತಿನಲ್ಲಿಯೂ 'ಐ' 'ನಾನು' ಎಂಬ ಸ್ವ – ಪ್ರಜ್ಞೆಗೇ ಪ್ರಾಶಸ್ತ್ಯ. ವಿಶ್ವದ ಜೀವಕೋಟಿಯ ಬಗೆಗೆ ಪ್ರೀತಿ, ಪ್ರತಿಯೊಂದು ಜೀವದ ಸ್ವಾಯತ್ತತೆಯ ಬಗ್ಗೆ ಗೌರವ ಮತ್ತು ಸಹಾನುಭೂತಿಗಳನ್ನು ಪ್ರತಿನಿಧಿಸುವ ತಾತ್ವಿಕತೆಯ ಹೊಳಪು ಆಫ್ರಿಕದ ಜುಲು ಭಾಷೆಯ 'ಉಬುಂಟು' ಎಂಬ ನುಡಿಗಟ್ಟಿನಲ್ಲಿ ಅಡಗಿದೆ. 'ಉಬುಂಟು' ಎಂಬ ಶಬ್ದ ಸರಳ ಅನುವಾದದಲ್ಲಿ 'ವಿ ಆರ್, ದೇರ್‌ಫೋರ್ ಐ ಯಾಮ್' ಅಥವಾ 'ಯೂ ಆರ್, ದೇರ್‌ಫೋರ್ ಐ ಯಾಮ್' ಎಂದಾಗುತ್ತದೆ. 'ನಾವೆಲ್ಲ ಇರುವ ಕಾರಣಕ್ಕೆ ನಾನು ನಾನಾಗಿದ್ದೇನೆ' ಅಥವಾ 'ನೀವು ಇರುವ ಕಾರಣಕ್ಕೆ ನಾನು ಒಂದು ಜೀವ' 'ನಿಮ್ಮಿಂದಾಗಿ ನಾನು'-ಗುಬ್ಬಿ ವೀರಣ್ಣ, ಕು.ಶಿ. ಹರಿದಾಸ ಭಟ್ಟ, ಕೆ.ವಿ. ಸುಬ್ಬಣ್ಣ ಮತ್ತು ಬಿ.ವಿ. ಕಾರಂತ-ಇವರೆಲ್ಲರೂ ತಮ್ಮ ಸಹ ಮನುಷ್ಯರು ಮಾತ್ರವಲ್ಲ, ಈ ಲೋಕದ ಎಲ್ಲ ಜೀವಿಗಳ ಬಗೆಗೂ ಭಾವಿಸುವುದು ಮತ್ತು ಸ್ಪಂದಿಸುವುದು ಹೀಗೇನೇ.



# ವೈದೇಹಿ ನಿರೂಪಿತ ಮೂರು ಆತ್ಮಕಥೆಗಳು : ಒಂದು ಅವಲೋಕನ

✦ ಡಾ. ಎಸ್ ಡಿ ಶಶಿಕಲಾ

ಎರಡು ತಿಂಗಳ ಹಿಂದೆ ಕವಯಿತ್ರಿ ಸವಿತಾ ನಾಗಭೂಷಣ ಅವರು ಫೋನಿಸಿ ವೈದೇಹಿ ಅವರಿಗೆ 74, ಆ ಕಾರಣಕ್ಕೆ ಅಭಿನಂದನ ಗ್ರಂಥವೊಂದನ್ನು ತರಲಿದ್ದು ನೀವು ಮೂರು ಪುಸ್ತಕಗಳ (ವ್ಯಕ್ತಿಚಿತ್ರ) ಬಗ್ಗೆ ಬರೆದುಕೊಡಿ ಎಂದರು. ಕೆಲಸದ ಒತ್ತಡಗಳಿದ್ದುದರಿಂದ ಒಂದಷ್ಟು ಸಮಯವನ್ನು ಕೇಳಿ ಬರೆಯಲು ಒಪ್ಪಿಕೊಂಡೆ. ನನಗೆ ಅವರು ಕಳಿಸಿಕೊಟ್ಟವು ಕೋ.ಲ. ಕಾರಂತ, ಸೇಡಿಯಾಪು, ಸರಸ್ವತಿಬಾಯಿ ರಾಜವಾಡೆ ಕುರಿತು ವೈದೇಹಿ ನಿರೂಪಿಸಿದ ಆತ್ಮಕಥೆಗಳಾಗಿದ್ದವು. ಸೇಡಿಯಾಪು ಅವರ ಪಂಚಮೀ ವಿಭಕ್ತಿ ಮೊದಲಾದವನ್ನು ಓದಿಕೊಂಡಿದ್ದೆ. ಸರಸ್ವತಿಬಾಯಿ ರಾಜವಾಡೆಯವರನ್ನು (ನಾನು ಆರ್. ಕಲ್ಯಾಣಮ್ಮ ಕುರಿತ ಸಂಶೋಧನೆಯ ಸಂದರ್ಭದಲ್ಲಿ) 1992ರಲ್ಲಿ ಚಿಟ್ಪಾಡಿಯ ಶಾರದಾಂಬೆಯ ದೇಗುಲದಲ್ಲಿ ಸಂದರ್ಶಿಸಿ ಮಾತನಾಡಿದ್ದೆ. ಕೋ.ಲ. ಕಾರಂತ ಬಗ್ಗೆ ತಿಳಿದಿದ್ದರೂ ಓದಿಕೊಂಡಿರಲಿಲ್ಲ. ಈ ಮೂವರ ಬದುಕನ್ನು ಓದಿಕೊಳ್ಳುವ ಸುಸಂದರ್ಭವನ್ನು ಸವಿತಾ ಮತ್ತು ವೈದೇಹಿ ಒದಗಿಸಿದ್ದಾರೆ. ವೈದೇಹಿಯವರ ಕಥೆ–ಕಾವ್ಯ–ಕಾದಂಬರಿ–ನಾಟಕ ಓದಿದ್ದ ನನಗೆ ಅವರ ಈ ಬಗೆಯ ಬರವಣಿಗೆ ಸಹಜವಾಗಿ ಕುತೂಹಲವನ್ನು ಕೆರಳಿಸಿತು. ಇದಕ್ಕೆ ಮತ್ತೊಂದು ಕಾರಣ ಇಲ್ಲದಿಲ್ಲ. ನಾನು ವಿಜಯಾದಬ್ಬೆಯವರ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಸಂಶೋಧನೆಗೆ ತೊಡಗಿದ ನಂತರ ಅವರೊಂದಿಗೆ ಸುತ್ತಾಡಿದ್ದೇನೆ. ಅಂತಹ ಎರಡು ಸುತ್ತಾಟಗಳಲ್ಲಿ ಮೇಡಂ ಜೊತೆ ವೈದೇಹಿಯವರನ್ನು ಕಂಡಿದ್ದೇನೆ. ಒಂದು: ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ. ಎರಡು: ಕುಂದಾಪುರದ ಬಸ್ರೂರಿನ ಶಾರದಾ ಕಾಲೇಜಿನಲ್ಲಿ ವೈದೇಹಿ ಸಾಹಿತ್ಯ ಕುರಿತ ವಿಚಾರ–ಸಂಕಿರಣದಲ್ಲಿ. ವಿಜಯಾದಬ್ಬೆಯವರೊಂದಿಗೆ ಕುಂದಾಪುರದ ವೈದೇಹಿಯವರ ಮನೆಗೂ ಭೇಟಿಕೊಟ್ಟು ಅವರೊಂದಿಗೆ ಮತ್ತು ಅವರ ಕುಟುಂಬದವರೊಂದಿಗೆ ಬೆರೆತ ಭಾಗ್ಯ ನನ್ನದು. ಹೀಗಾಗಿ ವೈದೇಹಿಯವರ ಬರವಣಿಗೆಯ ಬಗ್ಗೆ ನನ್ನದು ಸದಾ ತುಡಿಯುವ ಮನಸ್ಸು. ಸಾಹಿತ್ಯ–ಶೈಕ್ಷಣಿಕ ಕ್ಷೇತ್ರದ ದಿಗ್ಗಜರ ಈ ಮೂರು ಕಥಾನಕದ ಮೂಲಕ ಅವರ ಬದುಕನ್ನು ಅರಿಯುವಲ್ಲಿ ನನ್ನ ಬದುಕನ್ನು ಹಿಗ್ಗಿಸಿಕೊಳ್ಳುವಲ್ಲಿ ಈ ಕೃತಿಗಳ ಪಾತ್ರ ದೊಡ್ಡದೆಂದೇ

ಭಾವಿಸುತ್ತೇನೆ. ಇಂಥ ಮೇರು ವ್ಯಕ್ತಿತ್ವಗಳ ಬದುಕನ್ನು ತಮ್ಮ ಬರಹದ ಮೂಲಕ ಓದುಗ ವರ್ಗಕ್ಕೆ ಕೊಟ್ಟ ವೈದೇಹಿ ನಿಜಕ್ಕೂ ಅಭಿನಂದನಾರ್ಹರು.

ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು (1985) ಕೃತಿಯಲ್ಲಿ ಅಣ್ಣ ಹೆಬ್ಬಾರರ ಮತ್ತು ಕೆ.ವಿ. ಸುಬ್ಬಣ್ಣನವರ ಪ್ರೇರಣೆಯಿಂದ ವೈದೇಹಿಯವರು ಕೋ.ಲ. ಕಾರಂತರ ಜೀವನವನ್ನು ಹೊಸತಲೆಮಾರಿಗೆ ಕಾಣಿಸುವ ಕೆಲಸವನ್ನು ಮಾಡಿದ್ದಾರೆ. ಅವರೇ ಹೇಳುವಂತೆ ಈ ಕೃತಿ 'ಅನುಭವ ಸಂಗ್ರಹ'ವಾಗಿದೆ. ಕೃತಿಯ ಶೀರ್ಷಿಕೆ ಹೇಳುವಂತೆ ನೆನಪಿನಂಗಳದಿಂದ ಕೋ.ಲ. ಕಾರಂತರು ಬಿಚ್ಚಿಟ್ಟ ಸಂಗತಿಗಳನ್ನು ಕೇಳಿಸಿ ಬರೆದುಕೊಂಡ ವೈದೇಹಿ ಅದಕ್ಕೊಂದು ಬರಹದ ರೂಪವನ್ನು ಕೊಟ್ಟಿದ್ದಾರೆ.

ಕೋ.ಲ. ಕಾರಂತರ ಬದುಕಿನ ಅನುಭವಗಳನ್ನು ಒಟ್ಟು ಒಂಬತ್ತು ಶೀರ್ಷಿಕೆಗಳಲ್ಲಿ ವೈದೇಹಿ ದಾಖಲಿಸಿದ್ದಾರೆ. 1. ಅಂದಿನ ಆ ಕೋಟ 2. ಅಂದಿನ ನಮ್ಮೂರ ಹೆಂಗಸರು 3. ಕಳೆದ ಪುಟ್ಟ ದಿನಗಳ ನೆನಪು ಈಗ ಎಷ್ಟು? 4. ಸಯನ್ಸ್ ಮಾಸ್ಟರ್ ಅನುಭವ ಶಾಲೆ 5. ಬದುಕಿನ ಬೇರಿಗೆ ತೋಟಗಾರಿಕೆ 6. ಸಮಾಜದ ಋಣ ಹೇಗೆ ತೀರಿಸಿಯೇನು? 7. ನೆನಪು ಹಿಡಿದಿಟ್ಟಿರುವ ವಾದ ವಿವಾದಗಳು 8. ಅಲ್ಲಲ್ಲಿನ ವೃತ್ತಾಂತ 6. ಮುಗಿಸುವ ಮುನ್ನ – ಇವು ಕಾರಂತರ ಬದುಕಿನ ಹಲವು ಮಜಲುಗಳನ್ನು ಒಳಗೊಂಡಿವೆ.

ಅಂದಿನ ಆ ಕೋಟದ ಪ್ರಾದೇಶಿಕ ವಿಸ್ತೀರ್ಣ, ಪ್ರಕೃತಿಯ ಸೊಬಗು, ಬ್ರಿಟೀಷರ ಆಳ್ವಿಕೆಯಿಂದಾಗಿ ಕೋಟವನ್ನು ಪ್ರವೇಶಿಸಿದ ಆಧುನಿಕತೆ, ತಂದೆ ತಾಯಿಯ ಆರ್ಥಿಕ ಸ್ಥಿತಿ, ಕೃಷಿ, ಬ್ರಾಹ್ಮಣರನ್ನು ಕಾಡುತ್ತಿದ್ದ ಬಡತನ, ಹಾಗಿದ್ದಾಗಲೂ ಇದ್ದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಕಾರಂತರು ಸವಿವರವಾಗಿ ಹೇಳಿದ್ದನ್ನು ವೈದೇಹಿ ವರ್ಣಿಸಿದ್ದಾರೆ.

'ಅಂದಿನ ನಮ್ಮೂರ ಹೆಂಗಸರು' ಎಂದು ಅವರ ಸ್ಥಿತಿಗತಿಗಳನ್ನು, ಅವರ ಶೋಷಿತ ನೆಲೆಯನ್ನು, ಅಸಹಾಯಕ ಸ್ಥಿತಿಯನ್ನು ಕಾರಂತರು ತಿಳಿಸುತ್ತಾರೆ. ಕುಟುಂಬದಲ್ಲಿನ ಹೆಂಗಸರ ಸ್ಥಾನಮಾನಗಳನ್ನು ಇಲ್ಲಿ ಹಿಡಿದಿಡಲಾಗಿದೆ. ಬಸಿರು-ಬಾಣಂತನಗಳಲ್ಲಿ ಕಳೆದುಹೋಗುತ್ತಿದ್ದ ಹೆಂಗಸರು ತಮಗೇ ಅಂತ ಏನನ್ನೂ ಬಯಸಲು ಅಸಾಧ್ಯವಾದ ಪರಿಸರದ ಬಗ್ಗೆ ಕಾರಂತರು ಅಂತಃಕರಣದಿಂದ ನುಡಿದಿದ್ದಾರೆ. ಮನೆಯ 'ಯಜಮಾನಿಕೆ' ಪುರುಷನದ್ದೇ ಆಗಿದ್ದು ಹೆಂಡತಿಯೊಂದಿಗೆ ಒಂದಿಬ್ಬರನ್ನು 'ಇಟ್ಟುಕೊಂಡ' ಸಂಗತಿಗಳು ಪುರುಷರ ಪ್ರತಿಷ್ಠೆಯ ಸಂಕೇತವಾಗಿದ್ದರ ಉಲ್ಲೇಖಗಳು ಇಲ್ಲಿವೆ. ವರದಕ್ಷಿಣೆ, ವೈಧವ್ಯದ ಸಮಸ್ಯೆಗೆ ಸಿಲುಕಿದ ಮಹಿಳೆಯರ ಶೋಚನೀಯ ಸ್ಥಿತಿಯ ಬಗ್ಗೆ ಮಾತನಾಡುತ್ತಲೇ ಕಾರಂತರು ಪುರುಷ ಕ್ರೌರ್ಯದ ಅನಾವರಣವನ್ನು ಮಾಡುತ್ತಾರೆ. ಒಟ್ಟು ಸ್ತ್ರೀವಾದಿಯಾಗಿ ಕಾರಂತರು ಮಹಿಳೆಯರನ್ನು ಕಂಡ ಬಗೆ ವಿಶಿಷ್ಟವಾಗಿದೆ.

ಕಳೆದ ದಿನಗಳ ನೆನಪನ್ನು ಮಾಡಿಕೊಳ್ಳುವ ಕಾರಂತರು ಬಾಲ್ಯವನ್ನು ಮತ್ತೆ ಸೃಷ್ಟಿಸುತ್ತಾರೆ. ಮಕ್ಕಳನ್ನು ಜತನ ಮಾಡುವಲ್ಲಿ ತಾಯಿಯ ಪಾತ್ರವನ್ನು ಆಪ್ಯಾಯಮಾನವಾಗುವಂತೆ ಚಿತ್ರಿಸಿದ್ದಾರೆ. ತಂದೆಯಲ್ಲಿದ್ದ ದೈವಭಕ್ತಿಯನ್ನು ಕುರಿತು

ಹೇಳುವಂತೆ ಅವರಲ್ಲಿದ್ದ ಸಾಮಾಜಿಕ ಕಳಕಳಿಯ ಬಗ್ಗೆಯೂ ಬರೆಯುತ್ತಾರೆ. ಶಿಕ್ಷಣದ ಮಹತ್ವವನ್ನರಿತ ಕಾರಂತರ ತಂದೆ ಕಟ್ಟಿಸಿದ ಶಾಲೆಯೊಂದನ್ನು ಕೋ.ಲ.ಕಾರಂತರು ಬೆಳೆಸಿದ ಬಗೆ ಇಲ್ಲಿ ನಿರೂಪಿತಗೊಂಡಿದೆ. ಪ್ರಾಣಿ-ಪಕ್ಷಿಗಳ ಬಗ್ಗೆ ತಂದೆಗಿದ್ದ ಪ್ರೀತಿ, ಮಮತೆ, ತಂದೆ ಕಟ್ಟಿಸಿದ ಉಯ್ಯಾಲೆಯಿಂದ ಹೆಂಗಸರು-ಮಕ್ಕಳಾದಿಯಾಗಿ ಅನುಭವಿಸಿದ ಸಂತೋಷ, ತಂದೆಯ ವೈದ್ಯದಿಂದಾಗಿ ಊರಿಗೆ ಆದ ಉಪಕಾರ, ಕಾರಂತರ ಅನಾರೋಗ್ಯದ ಕಾಲದಲ್ಲಿ ತಂದೆಯಾಗಿ ಶೇಷಕಾರಂತರು ಮಾಡಿದ ಸೇವೆಗಳನ್ನು ಕಾರಂತರ ಸ್ಮೃತಿ ಪಟಲದಿಂದ ಹೊರತಂದು ವೈದೇಹಿ ಬರೆಯುತ್ತಾರೆ. ತಂದೆಯಾಗಿ ಶೇಷಕಾರಂತರ ಪಿತೃತ್ವದ ಜವಾಬ್ದಾರಿಯನ್ನೂ ವ್ಯಕ್ತಿಯಾಗಿ ಅವರು ನಿರ್ವಹಿಸುತ್ತಿದ್ದ ಸಾಮಾಜಿಕ ಜವಾಬ್ದಾರಿಯನ್ನೂ ಕೋ.ಲ. ಕಾರಂತರು ನಿವೇದಿಸುತ್ತಾರೆ.

ಶಾಲಾ ಕಾಲೇಜು ದಿನಗಳಲ್ಲಿ ಕನ್ನಡ ಭಾಷೆ ಬಗ್ಗೆ ಶಿಕ್ಷಕರಿಗಿದ್ದ ಔದಾಸೀನ್ಯತೆ, ಇಂಗ್ಲಿಷ್ ಮಾಧ್ಯಮದ ವಿದ್ಯಾಭ್ಯಾಸಕ್ಕಿದ್ದ ಮಹತ್ತ್ವ, ಮದ್ರಾಸಿನ ಮೆಡಿಕಲ್ ಕಾಲೇಜಿನಲ್ಲಿ ಸೀಟನ್ನು ತಾವು ದಕ್ಕಿಸಿಕೊಂಡ ಬಗೆಯನ್ನು ಕೋ.ಲ. ಕಾರಂತರು ತಿಳಿಸುತ್ತಾರೆ. ಓದಿನ ನಂತರ ವಿಜ್ಞಾನದ ಶಿಕ್ಷಕರಾಗಿ ಪುತ್ತೂರಿನಲ್ಲಿ ನೇಮಕಗೊಳ್ಳುವ, ವಿಜ್ಞಾನವನ್ನು ಕನ್ನಡದಲ್ಲಿ ಪಾಠಮಾಡುವ ತವಕ, ಉತ್ಸಾಹ, ಅನಿವಾರ್ಯತೆಯನ್ನು ಕೋ.ಲ. ಕಾರಂತ ಮನಗಾಣುತ್ತಾರೆ. ಕಳೆಗಿಡಗಳನ್ನು ಕುರಿತ ಶಿಷ್ಯನ ತಿಳಿವಳಿಕೆಗೆ ತಲೆದೂಗುವ ಕಾರಂತರ ಶಿಷ್ಯಪ್ರೀತಿ ಅಭಿನಂದನೀಯವಾದುದು. ವಿಜ್ಞಾನ ಕುರಿತ ಸಹ ಅಧ್ಯಾಪಕರ ಅಜ್ಞಾನ ಕುರಿತಂತೆ ಕಾರಂತರಿಗೆ ವಿಷಾದವೂ ಇತ್ತು. ಚಿತ್ರಪುಸ್ತಕ ಭಂಡಾರ ಸ್ಥಾಪನೆ, ಖಗೋಳಶಾಸ್ತ್ರ ಕುರಿತ ಆಸಕ್ತಿ, ಔದ್ಯೋಗಿಕವಾಗಿ ಎದುರಾದ ಸಂದಿಗ್ಧಗಳು, ಕೋಟದ ಹೈಸ್ಕೂಲ್‌ಗೆ ಮುಖ್ಯೋಪಾಧ್ಯಾಯರಾಗಿ ಬಂದದ್ದು, ಅಲ್ಲಿ ದೊರೆತ ವಿದ್ಯಾರ್ಥಿಗಳ ಪ್ರೀತಿಯ ಹಲವು ಮಜಲುಗಳನ್ನು ಈ ಕೃತಿಯಲ್ಲಿ ದಾಖಲಿಸಿದ್ದಾರೆ. ಸಂಗೀತ, ಕಸೂತಿ, ಕೃಷಿ, ತೋಟಗಾರಿಕೆ, ಪ್ರಥಮ ಚಿಕಿತ್ಸೆ, ವಿದೇಶಗಳಿಂದ ತರಿಸಿದ ಸಾಕ್ಷ್ಯಚಿತ್ರಗಳನ್ನು ವಿದ್ಯಾರ್ಥಿಗಳಿಗೆ ತೋರಿಸುವ ಉತ್ಸಾಹ, ಅದರ ಹಿಂದಿನ ವೈಜ್ಞಾನಿಕ-ವೈಚಾರಿಕ ದೃಷ್ಟಿಕೋನ ಮೊದಲಾದವನ್ನು ಪ್ರಸ್ತುತಪಡಿಸುವ ಕಾರಂತರ ಬರಹ ಅವರ ಆಸಕ್ತಿಯ ಹರಹನ್ನು ವಿಶದಪಡಿಸುತ್ತದೆ.

ಕೋ.ಲ. ಕಾರಂತ ಒಳ್ಳೆಯ ಶಿಕ್ಷಕರಾಗಿ ಕಂಡುಬರುವುದರೊಂದಿಗೆ ಒಳ್ಳೆಯ ಕೃಷಿಕರಾಗಿಯೂ ಗೋಚರಿಸುತ್ತಾರೆ. ಗೇರು, ಅಪ್ಪೆಮಿಡಿ, ಹಲಸು, ಜಾಯಿಕಾಯಿ, ಸಂಪಿಗೆ ಬೆಳೆಸುವುದರೊಂದಿಗೆ ಹುಲಿ, ಮೊಸಳೆ, ಹಾವುಗಳಿರುವ ತೋಟದಲ್ಲಿನ ಪ್ರಾಣಿ ಪಕ್ಷಿಗಳ ಲೋಕವನ್ನೂ ತೆರೆದಿಡುತ್ತಾರೆ. 'ಸಮಾಜದ ಋಣ ಹೇಗೆ ತೀರಿಸಿಯೇನು?' ಎಂದು ಸ್ವವಿಮರ್ಶೆ ಮಾಡಿಕೊಳ್ಳುತ್ತಾರೆ ಕಾರಂತರು. ಕುಷ್ಠರೋಗಿಗಳ ಬಗೆಗಿನ ಅಂತಃಕರಣದೊಂದಿಗೆ ಅದು ಸಾಂಕ್ರಾಮಿಕವಾಗಿ ಹಬ್ಬುವ ಬಗ್ಗೆ ಎಚ್ಚರಿಕೆಯನ್ನೂ ನೀಡುತ್ತಾರೆ.

ಕುದ್ಮುಲ್ ರಂಗರಾಯರ ಸೇವೆಯಿಂದ ಪ್ರಭಾವಿತರಾಗಿದ್ದ ಕೋ.ಲ. ಕಾರಂತರು ಜಾತಿ-ಮಡಿವಂತಿಕೆಗಳ ಹಂಗನ್ನು ಮೀರಿ ಬೆಳೆದವರು. ಹರಿಜನ ಹಾಸ್ಟೆಲಿಗೆ ಅವರ

ಮನೆಯಿಂದಲೇ ಊಟದ ಸರಬರಾಜು ಮಾಡಿಸುವ, ಸಹಪಂಕ್ತಿ ಭೋಜನ ಮಾಡುವ ಸಾಮಾಜಿಕ ಬದ್ಧತೆಯನ್ನು ತೋರಿದವರು. ಜನೋಪಯೋಗಿ ಕೆಲಸಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವರು. ಇಷ್ಟೆಲ್ಲ ರೀತಿಯಲ್ಲಿ ಮಾನವೀಯ ಗುಣವನ್ನು ಮೈಗೂಡಿಸಿಕೊಂಡ ಕಾರಂತರನ್ನು ಕಾಡಿದ್ದು 'ಸಾರ್ವಜನಿಕ ಆಸ್ತಿಯ ಮೇಲೆ ಸಾರ್ವತ್ರಿಕ ಪ್ರೀತಿ ಬೆಳೆಸುವ ಬಗೆ ಹೇಗೆ ಎಂಬುದು ಇಂದಿಗೂ ನನಗೆ ಬಗೆಹರಿಯದ ಪ್ರಶ್ನೆ' (82)

ಕೋ.ಲ. ಕಾರಂತರ ಬದುಕನ್ನು ವೈದೇಹಿ ಆತ್ಮೀಯವಾಗಿ ನಿರೂಪಿಸಿದ್ದಾರೆ. ಕಾರಂತರ ಪ್ರಕೃತಿ ಪ್ರೇಮವನ್ನು, ಅದರ ವಿಸ್ಮಯವನ್ನು, ವಿಜ್ಞಾನದ ಅರಿವನ್ನು ವೈದೇಹಿ ಹಿಡಿದಿಟ್ಟಿರುವ ಬಗೆ ಅನನ್ಯವಾದುದು. ಅನುಕರಣೀಯ ನೆಲೆಯಲ್ಲಿ ವೈದೇಹಿ ಅಕ್ಷರರೂಪ ನೀಡಿದ್ದಾರೆ. ಕೋ.ಲ. ಕಾರಂತರ ಬದುಕಿನ ಅಮೂಲ್ಯ ಕ್ಷಣಗಳನ್ನು ಓದುಗವರ್ಗಕ್ಕೆ ದಾಟಿಸಿದ ವೈದೇಹಿಯವರ ಪ್ರಯತ್ನ ಸ್ತುತ್ಯಾರ್ಹವಾದುದು.

ಸೇಡಿಯಾಪು ನೆನಪುಗಳು ಕೃತಿ 1966ರಲ್ಲಿ ಪ್ರಕಟಗೊಂಡ ಸೇಡಿಯಾಪು ಕೃಷ್ಣಭಟ್ಟರ ಜೀವನ ಚರಿತ್ರೆಯಾಗಿದೆ. ಆತ್ಮಕಥೆಯ ದಾಟಿಯಲ್ಲಿ ವೈದೇಹಿ ಸಂಗ್ರಹಿಸಿದ್ದಾರೆ. 'ಜೀವನ ಚರಿತ್ರೆ'ಯನ್ನು ಬರೆದುಕೊಳ್ಳುವ ಬಗ್ಗೆ ಸೇಡಿಯಾಪು ಅವರಿಗೆ ಒತ್ತಡವಿದ್ದರೂ ಬರೆಯಲು ಮನಸ್ಸಿರಲಿಲ್ಲ. ಅವರದೇ ಮಾತುಗಳಲ್ಲಿ ಹೇಳುವುದಾದರೆ 'ಮಹಾಪುರುಷರ ಜೀವನ ಚರಿತ್ರೆಗಳನ್ನು ಓದುವುದರಿಂದ ಆಗುವಂತಹ ಲಾಭವು ಸಾಮಾನ್ಯ ಜನರ ಜೀವನ ಚರಿತ್ರೆಯಿಂದ ಆಗುವಂತಹ ಲಾಭವು ಸಾಮಾನ್ಯ ಜನರ ಜೀವನ ಚರಿತ್ರೆಯಿಂದ ಆಗುವಂತಹುದಲ್ಲ' ಎಂಬ ನಮ್ರತೆ ಅದಕ್ಕೆ ಕಾರಣವಾಗಿತ್ತು. ವೈದೇಹಿಯವರ ಒತ್ತಾಯ-ಒತ್ತಾಸೆಯ ಕಾರಣದಿಂದ ಸೇಡಿಯಾಪು ಅವರ ಜೀವನ ಚರಿತ್ರೆ ನಮ್ಮ ಮುಂದಿದೆ. ವೈದೇಹಿಯವರಿಗೆ ಕೂಡಾ ಸೇಡಿಯಾಪು ಜೀವನವನ್ನು ಬರಹದಲ್ಲಿ ಹಿಡಿದಿಡುವುದು ಕಷ್ಟವಾಗಿತ್ತು. ವೈದೇಹಿಯವರೇ ಹೇಳುವಂತೆ '...ನಾನು ಮತ್ತೆ ಸೇಡಿಯಾಪು ಅವರ ಮನೆಗೆ ಹೋದೆ. ಆದರೆ ಆಗಷ್ಟೇ ಅವರು ಒಮ್ಮೆ ಆಚೆ ಹೋಗಿ ಈಚೆ ಬಂದಂತಿದ್ದರು. ನಿಧಾನವಾಗಿ ಚೇತರಿಸಿಕೊಳ್ಳುತ್ತಾ ಇದ್ದರು'. ಇಂಥ ಸಂದರ್ಭದಲ್ಲಿ ಸೇಡಿಯಾಪು ಅವರ ನೆನಪುಗಳನ್ನು ಕೆದಕುತ್ತಾ ಹೋದಂತೆ ಸೇಡಿಯಾಪು ಹೇಳುತ್ತಾ ಹೋದಂತೆ.. ಸೃಷ್ಟಿಯಾದ ಕೃತಿ ಇದು.

ಹೀಗಿದ್ದಾಗಲೂ ಸೇಡಿಯಾಪು ಅವರಿಗೆ ಬರವಣಿಗೆ ಕುರಿತಂತೆ ತುಂಬಾ ಕಾಳಜಿ. ವೈದೇಹಿ ಹೇಳುವಂತೆ 'ಬರೆದದ್ದನ್ನು ಮತ್ತೆ ಮತ್ತೆ ಓದಿಸಿ, ತನಗೆ ಸರಿ ಕಾಣುವವರೆಗೂ ತಿದ್ದಿಸುವ ಒಂದು ಸಣ್ಣ ಆಚೀಚಿಗೂ ಅವರು ಚಡಪಡಿಸುವ ರೀತಿ, ದಿಂಬಿಗೊರಗಿ ಕುಳಿತು ಮುಚ್ಚಿದ ಕಣ್ಣುಗಳಲ್ಲಿಯೇ ಆಲೈಸುತ್ತಾ ಯೋಚಿಸುವ, ವಜ್ರವನ್ನು ತೂಗಿದಂತೆ ಶಬ್ದ ತೂಗುವ ಪರಿ, ಒಮ್ಮೊಮ್ಮೆ ಆಡುಮಾತಿನ ಓಟಕ್ಕೂ ಮನ್ನಣೆ ಕೊಡುವ ಔದಾರ್ಯ, ನಿಜವಾಗಿ ಸಹಜವಾಗಿ ಮೂಡುವ ಅವರ ನಗೆ, ಭಾವೋದ್ದಿಗ್ನತೆ, ಮುದಗೊಳಿಸುವ ಅವರ ಹಾಸ್ಯ ಪ್ರವೃತ್ತಿ, ಎಲ್ಲಿ ಇರಬೇಕೋ ಅಲ್ಲಿ ಬಿಡದೆ ತೋರುವ ಪಂಡಿತನ ಜಿಗುಟುತನ,

ಹಠಮಾರಿತನ, ಸತ್ಯನಿಷ್ಠುರತೆ......' ಎದ್ದು ಕಾಣುತ್ತಿದ್ದವು. ಸೇಡಿಯಾಪು ಅವರ ವಯಸ್ಸು, ಆಯಾಸ ಬರವಣಿಗೆಯನ್ನು ಸರಿಪಡಿಸುವಲ್ಲಿ ಅಡ್ಡಿಯಾಗಲಿಲ್ಲವೆಂಬುದು ಇಲ್ಲಿ ವ್ಯಕ್ತವಾಗುತ್ತದೆ.

'ಸೇಡಿಯಾಪು ನೆನಪುಗಳು' ಕುರಿತ ಈ ಕೃತಿಯಲ್ಲಿ ವೈದೇಹಿ ನಾಲ್ಕು ಭಾಗಗಳಲ್ಲಿ ಸೇಡಿಯಾಪು ಜೀವನವನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಚಿಕ್ಕಂದಿನ ದಿನಗಳನ್ನು ಮೆಲುಕು ಹಾಕುವ ಸೇಡಿಯಾಪು ತಮ್ಮ ಊರು, ಭೂಮಿಯ ವಿಚಾರಗಳು, 'ಸೇಡಿಯಾಪು' ಎಂಬ ಪದದ ನಿಷ್ಪತ್ತಿಯನ್ನು ಕುರಿತು ಪ್ರಸ್ತಾಪಿಸುತ್ತಾರೆ. ಇಲ್ಲಿ ಸೇಡಿಯಾಪು ಅವರ ಶಾಸ್ತ್ರಜ್ಞನ, ನಿಘಂಟುಕಾರನ, ವೈಯಾಕರಣಿಯ ವ್ಯಕ್ತಿತ್ವ ಗೋಚರಿಸುತ್ತದೆ. ಕೌಟುಂಬಿಕ ವಿಚಾರಗಳನ್ನು ಉಲ್ಲೇಖಿಸುವ ಸೇಡಿಯಾಪು ಅಜ್ಜಂದಿರಾದಿಯಾಗಿ ವಂಶದ ವಿವರಗಳನ್ನು ತೆರೆದಿಡುತ್ತಾರೆ. ಐದೂವರೆ ವರ್ಷದವರಿರುವಾಗಲೇ ಸೇಡಿಯಾಪು ತಂದೆಯನ್ನು ಕಳೆದುಕೊಂಡರು. ಆ ದುಃಖಕ್ಕಿಂತ ಅನಂತರದ ತಾಯಿಯ ಸ್ಥಿತಿಯ ಬಗ್ಗೆ ತಮ್ಮ 94ನೇ ವಯಸ್ಸಿನಲ್ಲಿ ವ್ಯಾಖ್ಯಾನಿಸುವ ಬಗೆ ಹೀಗೆ: 'ಆ ಸಮಯದಲ್ಲಿಯೇ ತಾಯಿಯ ತಲೆಯನ್ನು ಬೋಳಿಸಿದ್ದರಿಂದ ತಂದೆ ತೀರಿಹೋದ ದುಃಖದಲ್ಲಿಯೇ ಅದು ಇಂಗಿಹೋಯಿತು. ನನ್ನ ತಾಯಿ, ಆಗ ಇಪ್ಪತ್ತಾರು ವರ್ಷ ಅವರಿಗೆ. 'ತಲೆ ಬೋಳಿಸುವುದು ಬೇಡ ಇರಲಿ ಹಾಗೆಯೇ' ಎಂದು ಕೂಗಿದರಂತೆ. ನನ್ನ ತಂದೆಯ ಒಬ್ಬ ಅಣ್ಣ ಸ್ವಲ್ಪ ಕಾರುಬಾರಿ. ತಾನು ಹೇಳಿದ ಹಾಗೆಯೇ ಆಗಬೇಕು ಎಂಬವರು. ಅದು ಕೂಡದು ಅಂತ ಕೈಹಿಡಿದು, ಎಳೆದುಕೊಂಡು ಬಂದು ಕ್ಷೌರಿಕನ ಹತ್ತಿರ ಕಳಿಸಿದರಂತೆ. ನಾನು ನೋಡಿಲ್ಲ. ಹೀಗೆ ಅಂತ ಕೇಳಿದ್ದು ಊರಲ್ಲೆಲ್ಲ ಅಂದು ವಿಧವೆಯರಿಗೆ ಹಾಗೇ ಮಾಡುತ್ತಿದ್ದುದರಿಂದ ನಮಗೆ ವಿಚಿತ್ರ ಕಂಡಿರಲಿಕ್ಕಿಲ್ಲ. ಆ ಮೊದಲಿಂದ ನನ್ನ ತಾಯಿ ಉಡುತ್ತಿರುವ ಸೀರೆ ಅಥವಾ ಕೆಂಪು ಸೀರೆ... ಕ್ಷೌರಿಕ ಬಂದಾಗ ತಲೆಬೋಳಿಸಿ ಕೊಳ್ಳುತ್ತಿದ್ದರು...' (3, 4) ಬಾಲಕರಾಗಿ ಸೇಡಿಯಾಪುಗೆ ತಾಯಿಯ ಸ್ಥಿತಿಯ ಬಗ್ಗೆ ಇದ್ದ ಅಂತಃಕರಣ, ದುಃಖ ಇಲ್ಲಿ ವ್ಯಕ್ತವಾಗಿದೆ.

ಶಾಲಾ ದಿನಗಳಲ್ಲಿಯೇ ದೊರೆತ ಪಂಜೆಮಂಗೇಶರಾಯರ ಸಂಪರ್ಕದ ಬಗ್ಗೆ ಬರೆವ ಸೇಡಿಯಾಪು ಭಂಗಿ ಎಳೆದು ನಿದ್ದೆ ಹೋಗುವ ಉಪಾಧ್ಯಾಯರ ಬಗ್ಗೆ ನವಿರಾದ ಹಾಸ್ಯದ ಧಾಟಿಯಲ್ಲಿ ಬರೆಯುತ್ತಾರೆ. ಚಿಕ್ಕಂದಿನಲ್ಲೇ ಶಬ್ದಗಳ ಬಗ್ಗೆ ಸೇಡಿಯಾಪುಗೆ ಇದ್ದ ಕುತೂಹಲ ಅವರ ಸಂಶೋಧನಾ ಗುಣದ ದ್ಯೋತಕವಾಗಿದೆ.

ಸೇಡಿಯಾಪುಗೆ ಚಿಕ್ಕಂದಿನಿಂದಲೇ ಮೈಗೂಡಿದ ಪ್ರತಿಭಟನಾ ವ್ಯಕ್ತಿತ್ವ ವಿಶೇಷವಾದುದು. ಏಳನೇ ತರಗತಿಯಲ್ಲಿದ್ದಾಗ ಹೆಡ್‌ಮಾಸ್ಟರ್ ಎಂ.ರಘುನಾಥರಾವ್ ಪಾಠ ಮಾಡಿದ ರಾಮಾಯಣದ ಒಂದು ಪದ್ಯದಲ್ಲಿದ್ದ ತಪ್ಪುಗಳನ್ನು ಎತ್ತಿ ತೋರಿಸಿದ ಪ್ರಸಂಗ ಅದಕ್ಕೆ ಸಾಕ್ಷಿಯಾಗಿದೆ. ಸನಾತನ ಧರ್ಮ ಕುರಿತ ಅವರ ಪಾಠವನ್ನು ನಿರ್ಲಕ್ಷಿಸಿ ಕರ್ನಾಟಕ ಕವಿಚರಿತ್ರೆಯನ್ನು ಓದುತ್ತಿದ್ದ ಸಂದರ್ಭವನ್ನು ಇಲ್ಲಿ ಸ್ಮರಿಸಬಹುದು. ಸೇಡಿಯಾಪು ಅವರ ಪ್ರತಿಭಟನೆ, ಹಠಗಳು ಅವರ ಹುಟ್ಟುಗುಣವಾಗಿದ್ದು ಗುರುಗಳ ಸಂದರ್ಭದಲ್ಲಿ ಅದು ಪ್ರಯೋಗವಾಗುತ್ತಿದ್ದುದನ್ನು ಕಾಣಬಹುದು.

ಶಾಲಾ ಉಪಾಧ್ಯಾಯರಂತೆ ಸಂಗಡಿಗರನ್ನು ಸಹಪಾಠಿಗಳನ್ನು ಸೇರಿಸಿಕೊಂಡು ಮುಂಡಾಸನ್ನು ತೊಟ್ಟು ಶಾಲೆ ಪ್ರವೇಶಿಸುವ ಪ್ರಯೋಗವನ್ನು ಮಾಡಿದ್ದರು. ಇಂಥ ಸೇಡಿಯಾಪು ಅವರಲ್ಲಿ ದೇಹಕ್ಕೆ ಹೊಂದುವ comfort ಎನಿಸುವ ವೇಷಧರಿಸುವುದರ ಹಿಂದೆ ಅವರ ಸ್ವಂತಿಕೆ, ಸ್ವಇಚ್ಛೆಯಂತೆ ನಡೆಯುವ ಧೋರಣೆ ಎದ್ದು ಕಾಣುತ್ತದೆ.

ಗೋವಿಂದ ಪೈ ಏರ್ಪಡಿಸಿದ್ದ ಆಶು ಕವಿತಾ ಸ್ಪರ್ಧೆಯಲ್ಲಿ ಕೆನರಾ ಹೈಸ್ಕೂಲಿನ ವಿದ್ಯಾರ್ಥಿ ಕಡಂಗೋಡ್ಲು ಶಂಕರಭಟ್ಟರ ಕವಿತೆಗೆ ಪ್ರಥಮ ಬಹುಮಾನ ಬಂದಿತ್ತು. 'ಸ್ವದೇಶಾಭಿಮಾನಿ'ಯಲ್ಲಿ ಈ ಸಂಗತಿ ತಿಳಿದ ಸೇಡಿಯಾಪು ಸಾರಿಗೆ ವ್ಯವಸ್ಥೆ ಸರಿಯಾಗಿ ಇಲ್ಲದ ಆ ಕಾಲದಲ್ಲಿ ಮಂಗಳೂರಿಗೆ ಪ್ರಯಾಣಿಸಿ ಅವರ ಮನೆಗೆ ಹೋಗಿ ಆ ಕವಿತೆಯನ್ನು ಓದಿದ ಪರಿ ಅವಿಸ್ಮರಣೀಯವಾದುದು. ಅವರೇ ಹೇಳುವಂತೆ 'ವಯಸ್ಸಿನಲ್ಲಿ ನನಗಿಂತ ಒಂದೆರೆಡು ವರ್ಷ ಕಿರಿಯನಾದರೂ ವಾಗ್ವಿಭವದಲ್ಲಿ ಈತನೇ ಹಿರಿಯನು ಎಂದು ಮನಸ್ಸಿನಲ್ಲಿ ಅಂದುಕೊಂಡೆ. ಮೆಚ್ಚಿದೆನೇ ಹೊರತು ಮಚ್ಚರಿಸಲಿಲ್ಲ, ಪೆಚ್ಚಾಗಲೂ ಇಲ್ಲ'.(17)

ಬಹಳ ಕಷ್ಟದಲ್ಲಿ ಎಲೋಸಿಯಸ್ ಹೈಸ್ಕೂಲು ಸೇರಿಕೊಂಡರು. ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಸೇಡಿಯಾಪು ಪಟ್ಟ ಕಷ್ಟ ಅತ್ಯಂತ ವಿಷಾದನೀಯವಾಗಿದೆ. ಬಂಧುಗಳು ಕೂಡಾ ವ್ಯಾವಹಾರಿಕ ದೃಷ್ಟಿಯಿಂದ ನೋಡಿದಾಗ ಸೇಡಿಯಾಪು ಅವರನ್ನೇನೂ ಅನ್ನದೆ ಕೊಟ್ಟ ಹಣವನ್ನು ಸಾಲವೆಂಬಂತೆ ತೀರಿಸುತ್ತಾರೆ. ಶಾಲೆಗೆ ತಿಲಾಂಜಲಿ ನೀಡಿ ಪರಂಪರಾನುಗತವಾಗಿ ಬಂದ ವೈದ್ಯವೃತ್ತಿಯನ್ನು ಆರಂಭಿಸುತ್ತಾರೆ. ಮಂಗಳೂರಿನಲ್ಲಿ ಪತ್ನಿಯೊಂದಿಗೆ ಜೀವನ, ಪತ್ರಿಕೆಯಲ್ಲಿ ಕೆಲಸ, ಶಾಲಾ ಶಿಕ್ಷಕನಾಗುವ ಬಯಕೆ, ಅದಕ್ಕಾಗಿ ವಿದ್ವತ್ ಪರೀಕ್ಷಾ ಸಿದ್ಧತೆಗಳು ಹಂತ ಹಂತವಾಗಿ ನಡೆಯುತ್ತವೆ. ಅನಂತರ ಸೈಂಟ್ ಎಲೋಸಿಯಸ್ ಹೈಸ್ಕೂಲಿನಲ್ಲಿ ಶಿಕ್ಷಕ ವೃತ್ತಿಯನ್ನು ಕೈಗೊಳ್ಳುತ್ತಾರೆ. ಕ್ರೈಸ್ತಧರ್ಮದ-ಪಾದ್ರಿಗಳ ಪರಿಸರದಲ್ಲಿ ಉತ್ತಮ ಶಿಕ್ಷಕರಾಗಿ ಹೆಸರು ಗಳಿಸುತ್ತಾರೆ. ಅಲ್ಲಿ ಮಾಡಿಕೊಂಡ 'ಪಂಡಿತರ ಸಂಘ' – ಅದರ ಉದ್ದೇಶ, ಸಾಫಲ್ಯ-ವೈಫಲ್ಯಗಳನ್ನು ಸೇಡಿಯಾಪು ವಿವರವಾಗಿ ತಿಳಿಸುತ್ತಾರೆ.

1932ನೆಯ ಇಸವಿಯಲ್ಲಿ ಮಡಿಕೇರಿಯಲ್ಲಿ ನಡೆದ ಕನ್ನಡ ಸಾಹಿತ್ಯ ಪರಿಷತ್ತಿನ ಸಮ್ಮೇಳನದಲ್ಲಿ ಸೇಡಿಯಾಪು 'ಪಿರಿಯಕ್ಕರ'ವನ್ನು ಕುರಿತು ಸುದೀರ್ಘ ಪ್ರಬಂಧವನ್ನು ಮಂಡಿಸುತ್ತಾರೆ. ಆ ಕಾಲದಲ್ಲೂ ವಿದ್ವತ್ತನ್ನು ಕುರಿತ ಅಸಮಾಧಾನ-ಪ್ರಶಂಸೆಗಳು ಇದ್ದವು ಎಂಬುದನ್ನು ಸೇಡಿಯಾಪು ಮುಚ್ಚುಮರೆಯಿಲ್ಲದೆ ದಾಖಲಿಸುತ್ತಾರೆ. ಹಿರಿಯ ವಿದ್ವಾಂಸರಾದ ಪಂಜೆಮಂಗೇಶರಾಯರು, ಆತ್ಮಾರಾಮಶಾಸ್ತ್ರಿ, ಡಿ.ವಿ. ಗುಂಡಪ್ಪ, ಸುಬೋಧರಾಮರಾಯರು, ಬೆಳ್ಳಾವೆ ವೆಂಕಟನಾರಾಯಣಪ್ಪ ಮೊದಲಾದವರ ಸಂಸರ್ಗ, ಸ್ನೇಹ, ಅಭಿಮಾನಗಳು, ಸೇಡಿಯಾಪು ಅವರನ್ನು ಪುಳಕಿತರನ್ನಾಗಿ ಮಾಡಿದ್ದವು. ಕೇಶಿರಾಜನ ಶಬ್ದಮಣಿದರ್ಪಣ ಮತ್ತು ಭಟ್ಟಾಕಲಂಕನ ಶಬ್ದಾನುಶಾಸನಗಳನ್ನು ಆತ್ಮೀಯವಾಗಿ ಓದಿಕೊಂಡ ಬಗೆ, ಅದರ ಮೇಲೆ ಸಾಧಿಸಿದ ಪ್ರಭುತ್ವ, ಪಂಚಮೀ ವಿಭಕ್ತಿ ಕುರಿತ ವಿಚಾರ-ಇವೆಲ್ಲವೂ ಸೇಡಿಯಾಪು ವ್ಯಾಕರಣಕ್ಕೆ ಕೊಟ್ಟ ಮಹತ್ವವಾಗಿದೆ.

ಧಾರವಾಡದ ಕರ್ನಾಟಕ ರಿಸರ್ಚ್ ಇನ್ಸ್‌ಟಿಟ್ಯೂಟ್‌ನಲ್ಲಿ ಸೇಡಿಯಾಪು ಮಾಡಿದ ವ್ಯಾಕರಣದ ಕುರಿತ ಮೂರು ಉಪನ್ಯಾಸಗಳು, ಅದರ ಮುದ್ರಣಕ್ಕಾಗಿ ಅವರು ವಹಿಸಿದ ಕಾಳಜಿಗಳು, ತೆಗೆದುಕೊಂಡ ರಿಸ್ಕ್‌ಗಳು – ಈ ಎಲ್ಲವನ್ನು ಈ ಕೃತಿ ಒಳಗೊಂಡಿದೆ.

ಕೌಟುಂಬಿಕವಾಗಿ ಸೇಡಿಯಾಪು ಪಟ್ಟ ಕಷ್ಟಗಳನ್ನು ಬದಿಗಿಟ್ಟು ಬದುಕನ್ನು ಕಟ್ಟಿಕೊಂಡವರು. ಪತ್ನಿಯ ಸಹಿಷ್ಣುತೆ, ಮಕ್ಕಳ ಪ್ರೀತಿಯಲ್ಲಿ ಮಿಂದ ಸೇಡಿಯಾಪು ಅವರದು 94 ವರ್ಷಗಳ ತುಂಬು ಜೀವನ. ಅವರ ಬದುಕಿನ ಅಮೂಲ್ಯ ಕ್ಷಣಗಳನ್ನು ವೈದೇಹಿ ಅತ್ಯಂತ ಆತ್ಮೀಯವಾಗಿ ನಿರೂಪಿಸಿದ್ದಾರೆ. ಸೇಡಿಯಾಪು ಅನಾರೋಗ್ಯದ ಸಂದರ್ಭದಲ್ಲಿ ಹೇಳಿದ ನೆನಪುಗಳಿಗೆ ಅಕ್ಷರ ರೂಪುಕೊಡುವ ಸಾಹಸವನ್ನು ವೈದೇಹಿ ಸಮರ್ಥವಾಗಿ ನಿರ್ವಹಿಸಿದ್ದಾರೆ. ಸೇಡಿಯಾಪು ಅವರ ನೆನಪುಗಳ ದಾಖಲೆ ಇದಾದರೂ ಸೇಡಿಯಾಪು ಅವರ ನೆನಪುಗಳಲ್ಲಿ ಲೀನರಾಗಿ ಪರಕಾಯ ಪ್ರವೇಶ ಮಾಡಿದವರಂತೆ ಅವರ ಅನುಭವಗಳನ್ನು ತಮ್ಮ ಅನುಭವಗಳನ್ನಾಗಿಸಿಕೊಂಡು ಆತ್ಮಕಥೆಯ ರೂಪವನ್ನು ಇತ್ತಿದ್ದಾರೆ.

'ಮುಂತಾದ ಕೆಲ ಪುಟಗಳು' (ಸರಸ್ವತಿಬಾಯಿ ರಾಜವಾಡೆ ಅವರ ಬದುಕು ಮತ್ತು ಬರಹ) ಎಂಬ ಕೃತಿ 2008ರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ಭಾಗ–1 ಮತ್ತು ಭಾಗ–2 ಎಂಬ ಎರಡು ವಿಭಾಗಗಳಿವೆ. ಭಾಗ–1 'ಬದುಕು' ಎಂಬ ಶೀರ್ಷಿಕೆಯನ್ನು ಹೊಂದಿದ್ದು ಮೂರು ಉಪಶೀರ್ಷಿಕೆಗಳಲ್ಲಿ ರಾಜವಾಡೆಯವರ ಬದುಕಿನ ಅನಾವರಣಗೊಂಡಿದೆ. ಮೊದಲನೆಯ ಲೇಖನವು 'ಹೊಸ ಸದಾರಮೆ–ಸರಸ್ವತಿಬಾಯಿ ರಾಜವಾಡೆ' ಎಂಬ ಶೀರ್ಷಿಕೆಯಲ್ಲಿ ಕೆ.ವಿ. ಸುಬ್ಬಣ್ಣನವರಿಂದ ರಚಿತವಾಗಿದೆ. 'ಲೋಕಾನುರಾಗಿ ವಿರಾಗಿ' ಎಂಬ ಲೇಖನ ವೈದೇಹಿಯವರೇ ಈ ಹಿಂದೆ ಹಲವು ಪತ್ರಿಕೆಗಳಿಗೆ ಬರೆದು ಪ್ರಕಟಗೊಂಡ ಲೇಖನವಾಗಿದೆ. ಮುಂದಿನ ಮೂರನೇ ಬರಹ 'ಮುಂತಾದ ಕೆಲ ಪುಟಗಳು' ಎಂಬ ಶೀರ್ಷಿಕೆಯಲ್ಲಿದ್ದು ಸರಸ್ವತಿಬಾಯಿ ರಾಜವಾಡೆಯವರ ಆತ್ಮಕಥೆಯಾಗಿದೆ. ಇದನ್ನು ವೈದೇಹಿ ನಿರೂಪಣೆ ಮಾಡಿದ್ದಾರೆ. ಹಾಗಾಗಿ ಈ ಕೃತಿ ನಿರೂಪಣಾ ಪ್ರಧಾನವಾಗಿಯೂ ಇದೆ. ಸಂಪಾದನೆಯೂ ಆಗಿದೆ.

ಭಾಗ–2, 'ಬರಹ' ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಇದರಲ್ಲಿ ಸರಸ್ವತಿಬಾಯಿ ರಾಜವಾಡೆಯವರ ಸಾಹಿತ್ಯವನ್ನು ಪ್ರಾತಿನಿಧಿಕವಾಗಿ ಎಂಟು ಉಪ ಶೀರ್ಷಿಕೆಗಳಲ್ಲಿ ದಾಖಲಿಸಲಾಗಿದೆ. 1. ಕತೆ–ಆಕೆ, 2. ಕತೆ–ಅವಳ ಉದ್ಧಾರ, 3. ಮೂರು ಕವನಗಳು, 4. ಒಂದು ತುಳು ಲಾವಣಿ, 5. ರಾಜವಾಡೆ ಅವರ ನಿವೇದನೆ, 6. ಎಸ್ ವೆಂಕಟರಾಜರ ಮುನ್ನುಡಿ, 7. ಮಂಜೇಶ್ವರ ಗೋವಿಂದ ಪೈಯವರ ಪತ್ರಗಳು, 8. ಸರಸ್ವತಿಬಾಯಿ ರಾಜವಾಡೆಯವರ ಕೃತಿಗಳು.

ಕೃತಿಯಲ್ಲಿ ನಮಗೆ ಬಹಳ ಮುಖ್ಯ ಎನಿಸುವುದು ರಾಜವಾಡೆಯವರ ವೈವಿಧ್ಯಮಯವಾದ ಬದುಕನ್ನು ವೈದೇಹಿ ಕಟ್ಟಿಕೊಟ್ಟಿರುವ ಬಗೆಯಲ್ಲಿ. ವೈದೇಹಿ ಇದನ್ನು

ನಿರೂಪಿಸಿದ್ದಾದರೂ ರಾಜವಾಡೆಯವರೇ ತಮ್ಮ ಆತ್ಮಕಥೆಯನ್ನು ತಾವೇ ಬರೆದಂತೆ ಓದುಗರಿಗೆ ಭಾಸವಾಗುತ್ತದೆ. ರಾಜವಾಡೆಯವರ ಭೌತಿಕ, ಬೌದ್ಧಿಕ ಸ್ವರೂಪಗಳೆರಡನ್ನೂ ಅವರ ಜೀವನದ ಹಲವು ಘಟನಾವಳಿಗಳ ಮೂಲಕ ವೈದೇಹಿ ಅನಾವರಣಗೊಳಿಸಿದ್ದಾರೆ. ಲೇಖಕಿಯರ ಸಂಘದ ಕಾರ್ಯಕ್ರಮವೊಂದರಲ್ಲಿ ಸನ್ಮಾನಿತರಾಗಬೇಕಾದ 'ಲೋಕಾನುರಾಗಿ ವಿರಾಗಿ' ಯಾದ ಸರಸ್ವತಿಬಾಯಿ ರಾಜವಾಡೆಯವರನ್ನು ಅದಕ್ಕೆ ಒಪ್ಪಿಸುವ ಜವಾಬ್ದಾರಿಯನ್ನು ವೈದೇಹಿ ಸಮರ್ಥವಾಗಿ ನಿಭಾಯಿಸಿದ್ದಾರೆ. ರಾಜವಾಡೆಯವರ ವರ್ಣಮಯ ವೈವಿಧ್ಯಮಯ ಬದುಕನ್ನು ದಾಖಲಿಸಬೇಕೆಂಬ ಉಮೇದು ಕೆ. ವಿ. ಸುಬ್ಬಣ್ಣನವರಿಂದ ವೈದೇಹಿಗೆ ಬಂದಿದ್ದು ನಿಜವಾದರೂ ವೈದೇಹಿ ಎಲ್ಲವನ್ನು ದಾಖಲಿಸುವಲ್ಲಿ ಎಲ್ಲಿಯೂ ನಿರುತ್ಸಾಹಗೊಂಡಿಲ್ಲ ಎಂಬುದು ಇಡೀ ಆತ್ಮವೃತ್ತಾಂತವನ್ನು ಓದಿದಾಗ ತಿಳಿಯುತ್ತದೆ.

ರಾಜವಾಡೆಯವರು ಕೌಟುಂಬಿಕವಾಗಿ ಅನುಭವಿಸಿದ ನೋವು-ಹಿಂಸೆಗಳು ಅವರನ್ನು ಸಾಹಿತಿಯನ್ನಾಗಿ ರೂಪಿಸಿರುವ ಸಾಧ್ಯತೆ ಆತ್ಮಕಥೆಯಲ್ಲಿದೆ. ಹಸಿವು, ಬಡತನ, ತಾಯಿಯ ಕ್ರೌರ್ಯ, ಓದುಗರ ಮನಸ್ಸನ್ನು ಕಾಡುವಂತೆ ಮಾಡುತ್ತವೆ. ಹೆಜ್ಜೆ ಹೆಜ್ಜೆಗೆ ತಪ್ಪು ಕಂಡುಹಿಡಿಯುತ್ತಾ ರಾಜವಾಡೆಗೆ ಹೊಡೆಯುವ, ಪೋಲಿಸರಿಗೆ ಒಪ್ಪಿಸಿ ತನಗೂ ಮಗಳಿಗೂ ಸಂಬಂಧವಿಲ್ಲದಂತೆ ಹೊರಟು ಹೋಗುವ ತಾಯಿಯ ಕ್ರೌರ್ಯ, ಸಗಣಿ ತಿನ್ನಿಸುವ ಸೋದರಮಾವ... ಇಂಥ ಕ್ರೌರ್ಯಕ್ಕೆ ತುತ್ತಾದ ರಾಜವಾಡೆ ಬದುಕನ್ನು ರೂಪಿಸಿಕೊಂಡ ಬಗೆ ಅನನ್ಯವಾದದ್ದು.

ಇಷ್ಟೆಲ್ಲಾ ಸಂಕಟಗಳಿದ್ದಾಗಲೂ ರಾಜವಾಡೆಯವರ ಪ್ರತಿಭೆ ಅವರನ್ನು ಸಾಂಸ್ಕೃತಿಕ ಲೋಕಕ್ಕೆ ತೆರೆದುಕೊಳ್ಳುವಂತೆ ಮಾಡಿತ್ತು. ಅಂಬಾ ಪ್ರಸಾದಿತ ನಾಟಕ ಮಂಡಳಿಯಲ್ಲಿ ಆಡುತ್ತಿದ್ದ ಧ್ರುವ ಚರಿತ್ರೆ ನಾಟಕದಲ್ಲಿ ಉತ್ತಮನ ಪಾತ್ರ, ಪ್ರಹ್ಲಾದ ಚರಿತ್ರೆಯಲ್ಲಿ ಲಕ್ಷ್ಮೀ ಪಾತ್ರ ನಿರ್ವಹಿಸಿದ್ದರು. 'ರಾಜಗಂಧಿನೀ ರಂಭಾ' ಎಂಬ ಹಿಂದಿ ಚಲನಚಿತ್ರದಲ್ಲಿ ಬಾಲ ನಟಿಯಾಗಿ ಅಭಿನಯಿಸಿದ್ದರು. ಆರ್ಕೆಸ್ಟ್ರಾಗಳಲ್ಲಿ ಹಾಡುತ್ತಿದ್ದ ರಾಜವಾಡೆ ಕಿರಿಯ ವಯಸ್ಸಿನಲ್ಲಿಯೇ ಪ್ರತಿಭಾವಂತ ಕಲಾವಿದೆಯಾಗಿ ಗುರುತಿಸಿಕೊಂಡರು.

ಶಾಲೆಗೆ ಸೇರಿಸಿದರೂ ವಿದ್ಯೆ ಹತ್ತದ ಹದಿನೈದರ ರಾಜವಾಡೆ ತನಗಿಂತ ಮೂವತ್ತೇಳು ವರ್ಷದ ಹಿರಿಯ ವಿಧುರನಾದ ಅಂಬಿಕಾಪತಿರಾಯ್ ಶಾಸ್ತ್ರಿ ರಾಜವಾಡೆಯವರನ್ನು ವಿವಾಹವಾಗುವ ಸಂದರ್ಭ ಎದುರಾಗುತ್ತದೆ. ಈ ವಿವಾಹವು ಭೌತಿಕವಾಗಿ ಹಸಿವು-ಬಡತನದಿಂದ ರಾಜವಾಡೆಯವರನ್ನು ಮುಕ್ತಗೊಳಿಸಿತಾದರೂ ಗೃಹಬಂಧನದಲ್ಲಿ ಜೀಕುವಂತೆ ಮಾಡುತ್ತದೆ. ಪತಿ-ಪತ್ನಿಯರನ್ನು ಕಂಡಾಗ Is it your daughter? ಎಂದರೆ yes ಎನ್ನಬೇಕಾದ ಸ್ಥಿತಿ ಪತಿಯದಾಗುತ್ತದೆ. ರಾಜವಾಡೆಯವರ ಗೃಹಬಂಧನದ ಸ್ವರೂಪವನ್ನು ವೈದೇಹಿ ಕಟ್ಟಿಕೊಡುವ ರೀತಿ ಮನಕಲಕುವಂಥದ್ದು. ರಾಜವಾಡೆಯವರ ಪತಿ ಮನೆಯಿಂದ ಹೊರ ಹೋಗುವಾಗ ಮನೆಗೆ ಬೀಗ ಹಾಕಿಕೊಂಡು ಹೋಗುತ್ತಿದ್ದುದಲ್ಲದೆ 'ನಾಟ್ ಎಟ್ ಹೋಮ್' ಎಂದು ಬೋರ್ಡು ಹಾಕಿ ಹೋಗುತ್ತಿದ್ದರು. 'ಕುಲಪತ್ನಿಯಾದವಳು

ಸೂರ್ಯನನ್ನು ನೋಡಬಾರದು ಪಾತಿವ್ರತ್ಯ ಕೆಡುತ್ತದೆ' ಎನ್ನುತ್ತಿದ್ದ ಪತಿ ರಾಜವಾಡೆ. ಮುಟ್ಟಾದಾಗ ಕೆಲಸದವರೊಂದಿಗೆ ಮಾತನಾಡಿದರೆ ಸಹಿಸಿದೆ ಸ್ನಾನ ಮಾಡುತ್ತಿದ್ದರು. ಇಂಥದ್ದನ್ನು ಕಂಡಾಗ ರಾಜವಾಡೆಗೆ 'ಎಂಥ ರಾಕ್ಷಸದ ಸಹವಾಸ ಮಾಡಿದೆನಪ್ಪಾ' ಎಂದೆನಿಸಿದೆ. ಇಂಥದ್ದನ್ನೆಲ್ಲ ರಾಜವಾಡೆ ಸಹಿಸಿಕೊಂಡು ಸುಮ್ಮನಿದ್ದವರೂ ಅಲ್ಲ. 'ನೀವು ಎಂಥ ಗಂಡು? ದತ್ತು ತೆಗೆದುಕೊಂಡು ಮದುವೆ ಮಾಡಬೇಕಾದಂತಹ ಹುಡುಗಿಯ ಹತ್ತಿರ ಹೀಗೆ ಮಾಡುತ್ತೀರಲ್ಲ. ಇಷ್ಟು ಕಲಿತು! ನಿಮ್ಮ ವಿದ್ಯೆಗೆ ಧಿಕ್ಕಾರ' (ಪು. 44) ಎಂದು ಹೇಳುವುದರೊಂದಿಗೆ ಕರಿಮಣಿ ಕಡಿದು ಬಿಸಾಡುತ್ತಾರೆ. ಇದೆಲ್ಲ ವೈಯಕ್ತಿಕ ಬದುಕಿನ ಸಂಕಟಗಳಿಗೆ ರಾಜವಾಡೆ ತೋರಿದ ಪ್ರತಿಭಟನೆ. ಹಾಗಂತ ಪತಿಯ ಒಳ್ಳೆಯ ಗುಣಗಳನ್ನೂ ಮರೆಮಾಚುವುದಿಲ್ಲ. ಬಯಸಿದ್ದನ್ನು ತಂದುಕೊಡುವ ಶ್ರೀಮಂತಿಕೆಯ ಸುಪ್ಪತ್ತಿಗೆಯಲ್ಲಿ ಪತ್ನಿಯನ್ನು ತೂಗುವಂತೆ ಮಾಡಬೇಕೆಂಬ ಪತಿಯ ಹಂಬಲವೂ ರಾಜವಾಡೆಗೆ ಅಚ್ಚುಮೆಚ್ಚು. ಕಡುಬಡತನದಲ್ಲಿ ಬೆಳೆದು ಬಂದ ರಾಜವಾಡೆಗೆ ಪತಿಯ ಈ ನಡವಳಿಕೆ ಒಂದಷ್ಟು ಸಮಾಧಾನ ನೀಡಿತ್ತೆಂಬುದರಲ್ಲಿ ಅನುಮಾನವಿಲ್ಲ. ರಾಜವಾಡೆಯವರ ಮೊದಲ ಕಥೆ ಅಂದಿನ 'ಕಂಠೀರವ'ದಲ್ಲಿ ಪ್ರಕಟವಾದಾಗ ಪತಿ ಅದನ್ನು ಮೆಚ್ಚಿ ಅಚ್ಚಾದ ಕಥೆಯ ಪ್ರತಿಯನ್ನು ಸುರಕ್ಷಿತವಾಗಿ ತೆಗೆದಿಡಲು ಸೂಚಿಸಿದ್ದು ರಾಜವಾಡೆಯವರ ಬರವಣಿಗೆಗೆ ದೊರೆತ ಪ್ರೋತ್ಸಾಹವೇ ಆಗಿದೆ.

1941ರಲ್ಲಿ ಪಾರ್ಶ್ವವಾಯುವಿಗೆ ತುತ್ತಾಗಿ ಪತಿ ತೀರಿದ ನಂತರ ಸುಮಾರು 53 ವರ್ಷಗಳ ಕಾಲ ಬದುಕಿದ್ದ ರಾಜವಾಡೆ ಆ ಕಾಲದ ತಾಯಿನಾಡು, ಕಂಠೀರವ, ಅಂತರಂಗ, ಸುಬೋಧ, ಧರ್ಮಬೋಧ ಮೊದಲಾದ ಪತ್ರಿಕೆಗಳಿಗೆ ಬರೆದರು. 1952ರಲ್ಲಿ ಪ್ರಾರಂಭಿಸಿದ ಸುಪ್ರಭಾತ ಅವರು 'ಗುರುದೇವ' ಎಂದು ಭಾವಿಸಿ ಆರಾಧಿಸುತ್ತಿದ್ದ ಗೋವಿಂದ ಪೈ ಅವರ ಸೂಚನೆಯ ಮೇರೆಗೆ ಅವರಿಗೆ 'ಭಾಷೆ' ಕೊಟ್ಟು ಒಂದು ವರ್ಷ ಪೂರೈಸಿ ನಿಲ್ಲಿಸಿದರು. ಈ ಬಗ್ಗೆ ರಾಜವಾಡೆಯವರಿಗೆ ಒಂದು ಅಸಮಾಧಾನ ವಿದ್ದಂತಿದೆ. "ಪತ್ರಿಕೆಯನ್ನು ನಿಲ್ಲಿಸುತ್ತಿದ್ದೇನೆ. ಕಾರಣ ಹಣದ ಕೊರತೆ' ಎಂದು ಸುಪ್ರಭಾತದ ಕೊನೆಯ ಸಂಚಿಕೆಯಲ್ಲಿ ನಾನು ಬರೆದೆನಲ್ಲ, ಅದೊಂದು ಬಗೆಯ ದಾಕ್ಷಿಣ್ಯಕ್ಕೆ. ಹಣದ ಕೊರತೆ ಎಲ್ಲಿತ್ತು ನನಗೆ? ಚಂದಾ ಹಣ ಸಾಲದಿದ್ದರೆ ನನ್ನದೇ ದುಡ್ಡಿನಲ್ಲಿ ಪತ್ರಿಕೆ ಮುಂದುವರೆಸಲು ಸಿದ್ಧಳಿದ್ದೆ. ನಿಜವಾಗಿ ನಡೆದ ವಿಷಯ ಹೀಗೆ'. (ಪು.57) ಪತ್ರಿಕೆಗಾಗಿ ಹಣ ಕಳೆದುಕೊಂಡು ರಾಜವಾಡೆ ಕಷ್ಟಕ್ಕೀಡಾಗಬಾರದೆಂಬ ಕಳಕಳಿ ಗೋವಿಂದ ಪೈ ಅವರಲ್ಲಿದ್ದಿತ್ತಾದರೂ ರಾಜವಾಡೆಯವರ ಈ ಮೇಲಿನ ಮಾತುಗಳು ಓದುಗರಲ್ಲಿ ಅನುಮಾನ ಮೂಡಿಸದೇ ಇರುವುದಿಲ್ಲ. ಮಹಿಳೆಯೊಬ್ಬಳು ಯಾರಿಗೂ ಕಡಿಮೆಯಿಲ್ಲದಂತೆ ಬರವಣಿಗೆಯಲ್ಲಿಯೂ ತೊಡಗಿಕೊಂಡು ಪತ್ರಿಕೋದ್ಯಮದಲ್ಲಿಯೂ ತೊಡಗುವಂತಾದದ್ದು ಗೋವಿಂದ ಪೈ ಅಂಥ ರಾಷ್ಟ್ರಕವಿಗೆ ಸಹಿಸಲಾಗಲಿಲ್ಲವೇ? ಎಂಬುದು ರಾಜವಾಡೆಯವರ ಆತ್ಮಕಥೆ ಓದಿದ ನನ್ನಂಥವಳಿಗೆ ಅನ್ನಿಸದಿರದು. ಆದರೆ 'ಲೋಕಾನುರಾಗಿ ವಿರಾಗಿ' ಲೇಖನದಲ್ಲಿಯಾದರೂ ಈ ಬಗ್ಗೆ ವೈದೇಹಿ ಪ್ರತಿಕ್ರಿಯೆ ನೀಡದೇ ಹೋದದ್ದು ಏಕೆ? ಎಂದು ತಿಳಿಯುವುದಿಲ್ಲ.

ರಾಜವಾಡೆ ತಮ್ಮ ಬದುಕಿನ ಸಂಜೆಯಲ್ಲಿ ಅಧ್ಯಾತ್ಮದ ಸೆಳವಿಗೆ ಒಳಗಾದವರು. ದಕ್ಷಿಣ ಕನ್ನಡದ ಚಿಟ್ಪಾಡಿಯಲ್ಲಿ ಶಾರದಾಂಬೆಯ ದೇವಸ್ಥಾನವನ್ನು ಕಟ್ಟಿಸಿ ತಮ್ಮ ದೈವಭಕ್ತಿಯನ್ನು ಪ್ರತಿಷ್ಠಾಪಿಸಿ ದೇವಿಯ ಆರಾಧನೆಯಲ್ಲಿ ತಮ್ಮ ಬದುಕನ್ನು ಸವೆಸಿದವರು. 1994ರ ಏಪ್ರಿಲ್ ಇಪ್ಪತ್ತರಂದು ರಾಜವಾಡೆ ಇಹಲೋಕವನ್ನು ತ್ಯಜಿಸಿದರು.

ರಾಜವಾಡೆಯವರ ವರ್ಣಮಯ ಬದುಕನ್ನು, ಬದುಕಿನ ಏರಿಳಿತಗಳನ್ನು ವೈದೇಹಿ ಸಾದ್ಯಂತವಾಗಿ ನಿರೂಪಿಸಿದ್ದಾರೆ. ರಾಜವಾಡೆಯವರು ಹೇಳಿದ್ದನ್ನು ಬರಹರೂಪದಲ್ಲಿ ದಾಖಲಿಸುವ ಸಾಹಸವನ್ನು ವೈದೇಹಿ ಮಾಡಿದ್ದಾರೆ. ವಿಷಯಗಳನ್ನು ದಾಖಲಿಸುವಾಗ ಭೂತಕಾಲದ ವರ್ತಮಾನದ ಸಂಗತಿಗಳು ಒಂದಿಷ್ಟು ಕ್ರಮಬದ್ಧತೆಯನ್ನು ಮೀರಿವೆ ಎಂದೆನಿಸಿದರೂ ರಾಜವಾಡೆ ಹೇಳಿದ್ದನ್ನು ಗ್ರಹಿಸಿಕೊಂಡು ಬರೆಯುವಲ್ಲಿ ವ್ಯಕ್ತವಾಗುವಂತೆ ವೈದೇಹಿಯವರ ಸೂಕ್ಷ್ಮತೆ, ತಾಳ್ಮೆ, ಸಂಯಮ, ಉತ್ಸಾಹ ಎಲ್ಲಿಯೂ ಭಂಗಗೊಂಡಿಲ್ಲ. ಇಪ್ಪತ್ತನೇ ಶತಮಾನದ ಆರಂಭದ ಲೇಖಕಿಯರ ಬದುಕು-ಹೋರಾಟಗಳು ಅವರನ್ನು ಬರಹಗಾರ್ತಿಯರನ್ನಾಗಿ ರೂಪಿಸಿದ ಬಗೆಯನ್ನು ಅರಿಯುವಲ್ಲಿ ವೈದೇಹಿಯವರ ಸಾರ್ಥಕ ಪ್ರಯತ್ನದ ಯಶಸ್ಸು ಇದೆ. ಹೊಸತಲೆಮಾರಿಗೆ, ಸಮಕಾಲೀನ ಓದುಗರಿಗೆ ರಾಜವಾಡೆಯವರನ್ನು ಅರ್ಥಮಾಡಿಸುವಲ್ಲಿ ಈ ಕೃತಿಗೆ ಮಹತ್ವ ಸಂದಿದೆ. ಒಂದು ರೀತಿಯಲ್ಲಿ ಪರಂಪರೆಯೊಂದಿಗೆ ಅನುಸಂಧಾನಗೊಳಿಸುವ ಪ್ರಕ್ರಿಯೆ ಇದರಿಂದ ಸಾಧಿತವಾಗಿದೆ. ಭಾಗ-2 ರಲ್ಲಿ ಕೊಟ್ಟಿರುವ ರಾಜವಾಡೆಯವರ ಪ್ರಾತಿನಿಧಿಕ ಸಾಹಿತ್ಯ ಓದುಗರ ಕುತೂಹಲವನ್ನು ಕೆರಳಿಸುವಲ್ಲಿ ರಾಜವಾಡೆಯವರ ಸಮಗ್ರ ಸಾಹಿತ್ಯದ ಓದನ್ನು ಉತ್ತೇಜಿಸುವಲ್ಲಿ ಸಹಕಾರಿಯಾಗಿದೆ.

ಒಟ್ಟಾರೆಯಾಗಿ ವೈದೇಹಿಯವರು ಸಂಪಾದಿಸಿದ, ಸಂಗ್ರಹಿಸಿದ ಈ ಮೂರೂ ಕೃತಿಗಳು ಏಕಕಾಲಕ್ಕೆ ಆತ್ಮಕಥೆಯೂ ಹೌದು, ಜೀವನ ಚರಿತ್ರೆಯೂ ಹೌದು, ಅನುಭವ ಕಥನವೂ ಹೌದು, ವ್ಯಕ್ತಿ ಚಿತ್ರವೂ ಹೌದು, ಆ ಬಗೆಯಲ್ಲಿ ಈ ಕೃತಿಗಳು ಸಂಕೀರ್ಣವೆನಿಸಿದರೂ ಸರಳ, ನೇರ ನಿರೂಪಣೆಯಿಂದಾಗಿ ಓದಿಸಿಕೊಳ್ಳುತ್ತವೆ. ಸಾಹಿತಿಗಳನ್ನು ಸಂದರ್ಶಿಸುತ್ತಾ ಪ್ರಶ್ನಿಸುತ್ತಾ ಮಾಹಿತಿಗಳನ್ನು ಹೆಕ್ಕಿ ತೆಗೆಯುತ್ತಾ ವ್ಯವಸ್ಥಿತವಾಗಿ ಅಕ್ಷರ ರೂಪವನ್ನು ಕೊಡುವುದು ಸಾಹಸವೇ ಸರಿ. ವೈದೇಹಿ ಇಂಥದೊಂದು ಸವಾಲಿಗೆ ತಮ್ಮನ್ನು ಒಡ್ಡಿಕೊಂಡು ಓದುಗರನ್ನು ತೇವಗೊಳಿಸಿದ್ದಾರೆ, ನಗಿಸಿದ್ದಾರೆ. ಆಲೋಚಿಸುವಂತೆ ಮಾಡಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳು ಸಲ್ಲುತ್ತವೆ.



# ಗೌರವಿಸುವ ಚೇತನ ನನ್ನ ವೈದೇಹಿ

✦ ಭಾಗೀರಥಿಬಾಯಿ ಕದಂ

ವೈದೇಹಿ ಎಂದಾಕ್ಷಣ ಸೀತೆ ನೆನಪಾಗುತ್ತಾಳೆ. ಒಬ್ಬ ಸಂಪೂರ್ಣ ಮಹಿಳೆ ನಮ್ಮ ವೈದೇಹಿಯವರು. ನನಗವರು ಬರಿಯ ಲೇಖಕಿ ವೈದೇಹಿಯಾಗಿ ಮಾತ್ರ ಕಾಣುವುದಿಲ್ಲ. ತಾಯಿಯಾಗಿ, ಅಕ್ಕನಾಗಿ, ಸ್ನೇಹಿತೆಯಾಗಿ, ಶಿಕ್ಷಕಿಯಾಗಿ ಕಾಣಿಸುತ್ತಾರೆ. ನನ್ನ ಅಭಿನಯವನ್ನು ಕಂಡು ತಿದ್ದುವ, ಮೆಚ್ಚುವ ಸಹೃದಯ ಪ್ರೇಕ್ಷಕಿ. ನಾನು ಬೇರೆ ಕತೆಗಾರ್ತಿಯರ ಕತೆಗಳನ್ನು ಓದುತ್ತಾ ನಾಟಕಗಳನ್ನು ಕಾದಂಬರಿಯನ್ನು ಓದುತ್ತಾ ತಲ್ಲೀನಳಾಗಿ ಅವರ ಬಗ್ಗೆ ನನ್ನದೇ ಆದ ಕಲ್ಪನೆಗಳಲ್ಲಿ ಇದ್ದು ಬಿಡುತ್ತಿದ್ದೆ. ನನ್ನ ಹಳ್ಳಿಯಲ್ಲಿ ಸೀಮೆಎಣ್ಣೆಯ ದೀಪವನ್ನು ಹತ್ತಿಸಿಕೊಂಡು ಅದರ ಬೆಳಕಲ್ಲಿ ಅದೆಷ್ಟೋ ಲೇಖಕಿಯರ ಕಥೆಗಳ ಪಾತ್ರಗಳ ಜೊತೆ ವಿಹರಿಸುತ್ತಾ ಪುಳಕಿತಗೊಳ್ಳುತ್ತಾ ಅದೇ ಗುಂಗಿನಲ್ಲಿ ಮಲಗುತ್ತಿದ್ದೆ. ಆ ಕತೆಯೇನಾದರೂ ಸಿನಿಮಾ ಆಗಿ ಬಂದರೆ ನನ್ನ ಕಲ್ಪನೆಯ ಪಾತ್ರಗಳೊಂದಿಗೆ ಪರದೆಯ ಮೇಲೆ ಮೂಡಿದ ಪಾತ್ರಗಳನ್ನು ಹೋಲಿಸುತ್ತಾ, ದಿನ ಕಳೆಯುತ್ತಿದ್ದದ್ದೇ ಗೊತ್ತಾಗುತ್ತಿರಲಿಲ್ಲ. ವೈದೇಹಿ ಅವರ ಕತೆಗಳ ಪಾತ್ರಗಳ ಜೊತೆ ಮಾತ್ರ ವಿಶೇಷವಾಗಿ ನಾನು ಉಸಿರಾಡಿದ್ದೇನೆ, ಬದುಕಿದ್ದೇನೆ ಎಂದು ಹೇಳಲು ನನಗೆ ಹೆಮ್ಮೆಯಾಗುತ್ತದೆ. ವೈದೇಹಿ ಅವರನ್ನು ನಾನು ನೋಡಿದ್ದು ಮೊದಲು. ಓದಿದ್ದು ನಂತರ, 21ರ ಹರೆಯದಲ್ಲಿ. ಅದು ರಂಗಶಿಕ್ಷಣ ಕೇಂದ್ರ ನೀನಾಸಂನಲ್ಲಿ. ನೀನಾಸಂನಲ್ಲಿ ವರ್ಷಕ್ಕೊಮ್ಮೆ ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮಕ್ಕೆ ಬಂದು ಅವರು ಕವಿತೆಗಳನ್ನು ಓದುತ್ತಿದ್ದಾಗ. ಕವಿತೆಗಳೆಂದರೆ ಅರ್ಥವಾಗದ ಶಬ್ದಗಳ ಭಂಡಾರವೇ ತುಂಬಿರುತ್ತದೆ; ಪ್ರೀತಿ ಪ್ರೇಮದ ಮೇಲೆ, ನಿಸರ್ಗದ ಮೇಲೆ, ದೇಶಭಕ್ತಿಯ ಮೇಲೆ ಅಂತೆಲ್ಲ ಎಂದುಕೊಂಡಿದ್ದೆವು. ಇವರು ಓದಿದ್ದು ಅಡುಗೆ ಮನೆಯಲ್ಲಿ ಉಪಯೋಗಿಸುವ 'ಸಾಸಿವೆ', ಮೇಲಿನ ಕವಿತೆ! ಸಾಸಿವೆಯ ಮೇಲೇನೇ ಕವಿತೆಯೆ ಎಂದು ನನಗೆ ಆಶ್ಚರ್ಯವಾಗಿತ್ತು. ಹಾಗಾದರೆ ನಾನೂ ಬರೆಯಬಹುದಲ್ಲ ಎಂದು ಆರಂಭಿಸಿದ್ದು ಉಂಟು. ಆದರೆ ಶಬ್ದಗಳ ಜೊತೆ ಆಡುವುದಕ್ಕೆ ಆಗುತ್ತಿಲ್ಲವಲ್ಲ ಎಂದು ಕಸಿವಿಸಿ ಆಗಿದ್ದೂ ನಿಜ.

ವೈದೇಹಿ ಅಂದರೆ ನನಗೆ ಬಹಳ ಅಚ್ಚುಮೆಚ್ಚು ಎಂದು ನಾನು ಅಂದುಕೊಳ್ಳುತ್ತೇನೆ. ಆದರೆ ಹೊರಗೆ ಇಣುಕಿ ನೋಡಿದರೆ ನಾನಷ್ಟೇ ಅಲ್ಲ ಬಹಳ ಮಂದಿಗೆ ಅವರು ಅಚ್ಚುಮೆಚ್ಚು. ನಾನು ವೈದೇಹಿ ಅವರನ್ನು ಭೇಟಿಯಾಗುವ ಮೊದಲು ಯಾವ ಕವಯತ್ರಿಯನ್ನೂ ಲೇಖಕಿಯನ್ನೂ ನೋಡಿಯೇ ಇರಲಿಲ್ಲ. ನೀನಾಸಂನಲ್ಲಿ ನಮಗೆ ಹಲವಾರು ಲೇಖಕರನ್ನು ನೋಡುವ ಅದೃಷ್ಟ ಒದಗಿತು. 'ಆಲಿಬಾಬ ಮತ್ತು ನಲವತ್ತು ಜನ ಕಳ್ಳರು' ನಾಟಕದಲ್ಲಿ ನಾನು ಫಾತಿಮಾಳ ಪಾತ್ರ ಮಾಡುತ್ತಿದ್ದೆ. 'ಅರೆ ಮೂಗೀ, ಬಾರೆ ಇಲ್ಲೀ, ಮರ್ಜಿನಾನೋ ಗಿರ್ಜಿನಾನೋ ಬಾರೇ' ಅನ್ನುತ್ತಿದ್ದ ನನ್ನ ಆ ಕೂಗು ಹಾಗೂ ನಟನೆಯನ್ನು ಈಗಲೂ ನೆನೆದು ಮನೆಯವರೆಲ್ಲ ನಗುತ್ತಾರೆ. ನಮ್ಮ ನಾಟಕಗಳನ್ನು ನೋಡಿ ಎಂಥ ಚಂದ ಮಾಡ್ತೀ. ಭಾರಿ ಲಾಯ್ಕಾಯ್ತ್ ಎಂದು ನನ್ನನ್ನು ಮೆಚ್ಚಿ ನುಡಿದ ಅಂದಿನ ಅವರ ಆತ್ಮೀಯ ಮಾತುಗಳು ಅವರನ್ನು ಆಪ್ತರನ್ನಾಗಿ ಮಾಡಿದವು. ನನ್ನ ಅವರ ಸಂಬಂಧ ಹಂತ ಹಂತವಾಗಿ ಗಟ್ಟಿಯಾಗುತ್ತಾ ಹೋಯಿತು.

ಚಿಕ್ಕಂದಿನಲ್ಲಿ ಸಿನಿಮಾಗಳನ್ನು ನೋಡೀನೋಡಿ ನಾನೂ ನಟಿಯಾಗಬೇಕು ಎಂದು ಆಸೆ ಪಟ್ಟೆ. ಆದರೆ ನಟಿಯಾಗಲು ಸೌಂದರ್ಯ ಬೇಕು. ಆ ದೇವರು ನನಗೆ ಸೌಂದರ್ಯವನ್ನೇ ಕೊಟ್ಟಿಲ್ಲವಲ್ಲಾ ಎಂದು ಹರೆಯದಲ್ಲಿ ಕೀಳರಿಮೆಯಲ್ಲಿ ಬಳಲುತ್ತಿದ್ದೆ. ನೀನಾಸಂನಲ್ಲಿ ಟ್ರೈನಿಂಗ್ ಪಡೆಯುವಾಗಲೂ ಮನಸ್ಸಿನ ಆಳದಲ್ಲಿ ಅದು ಕಾಡುತ್ತಲೇ ಇತ್ತು. ವೈದೇಹಿಯವರು ನನ್ನ ಅಭಿನಯವನ್ನು ಹೊಗಳುವಾಗ ಅವರನ್ನು 'ನಾನು ನೋಡಲು ಚೆನ್ನಾಗಿಲ್ಲ. ಆದರೂ ನಿಮಗೆ ಹೇಗೆ ನನ್ನ ಅಭಿನಯ ಇಷ್ಟವಾಗುತ್ತೆ?' ಎಂದು, ಬಾಲಿಶ ಪ್ರಶ್ನೆ ಎಂದು ಅನಿಸಿದರೂ ಸಹ, ಕೇಳಿದೆ. ಆಗ ಅವರು –ನಾವು ನಿನ್ನಲ್ಲಿ ನೋಡುವುದು ನಿನ್ನ ಪಾತ್ರವನ್ನು, ನಿನ್ನ ಒಳಗಿನ ಸೌಂದರ್ಯವನ್ನು, ಸುಂದರವಾದ ಮುಖವನ್ನು ನೋಡುತ್ತಾ ನಾವೇನು ಮಾಡೋಣ– ಎಂದರು. ಈ ಮಾತುಗಳು ನನ್ನನ್ನು ರಂಗನಟಿಯನ್ನಾಗಿ ಕಲಾತ್ಮಕ ಚಿತ್ರಗಳ ನಟಿಯನ್ನಾಗಿ ಮಾಡಲು ಎಷ್ಟು ವಿಶ್ವಾಸವನ್ನು ಕೊಟ್ಟಿದೆ ಎಂದು ವಿವರಿಸಲಾರೆ. ಅಲ್ಲಿಂದ ನನ್ನ ಹೊರರೂಪದ ಕೀಳರಿಮೆ ನನ್ನನ್ನು ಕಾಡಲೇ ಇಲ್ಲ.

ದಿನೇ ದಿನೇ ಅವರು ದೊಡ್ಡ ಲೇಖಕರಾಗಿ, ನಾಟಕಕಾರರಾಗಿ, ಬೆಳೆಯುತ್ತಾ ಹೋಗುವುದನ್ನು ನೋಡಿ ಸಂತೋಷ ಸಂಭ್ರಮ ನಮಗೆ. ಕೆಲವರು ಎತ್ತರಕ್ಕೆ ಹೋದ ಹಾಗೆ ಅವರ ಸ್ವಭಾವದಲ್ಲಿದ ಬದಲಾವಣೆ ಆಗುತ್ತ ಹೋಗುವುದನ್ನು ನೋಡಿದ್ದೇನೆ. ಆದರೆ ವೈದೇಹಿ ಹಾಗಲ್ಲ. ಅವರ ಕೀರ್ತಿ ಎಷ್ಟೇ ಎತ್ತರಕ್ಕೆ ಏರುತ್ತಾ ಹೋದರೂ ಮೊದಲು ಹೇಗಿದ್ದರು ಹಾಗೆಯೇ ಇವತ್ತೂ. ಅದೇ ಗುಣ, ಅದೇ ಸಜ್ಜನಿಕೆ, ಅಷ್ಟೇ ಸ್ವಾಭಿಮಾನಿ. ಅಹಂ ಅವರ ಪಕ್ಕದಲ್ಲಿಯೂ ಸುಳಿಯಲಿಲ್ಲ.

ಅವರ ಬರಹಗಳು ನನ್ನನ್ನೂ, ನನ್ನ ಅಭಿನಯವನ್ನೂ ಗಟ್ಟಿಗೊಳಿಸಿದೆ. ಕವಿ ಕಾಳಿದಾಸನ ಅಭಿಜ್ಞಾನ ಶಾಕುಂತಲೆಯನ್ನು ಆಧರಿಸಿ ಕೆ. ವಿ. ಸುಬ್ಬಣ್ಣನವರು 'ಲೋಕ ಶಾಕುಂತಲ' ನಾಟಕವನ್ನು ಬರೆದರು. ಗುರುಗಳಾದ ಚಿದಂಬರರಾವ್ ಜಂಬೆ ಈ ನಾಟಕವನ್ನು ನಿರ್ದೇಶನ ಮಾಡಿದರು. ನಾಟಕ ನೋಡಿದ ವೈದೇಹಿಯವರು ನಮಗೊಂದು ಉಪಹಾರ ಕೊಟ್ಟರು. ಅದು 'ಶಕುಂತಲೆಯೊಂದಿಗೆ ಕಳೆದ ಅಪರಾಹ್ನ' ಎಂಬ ಕತೆ. ಜಂಬೆಯವರು ನನ್ನೊಡನೆ ಆ ಕತೆಯನ್ನು ಓದು ಎಂದರು, ಓದಿದೆ. ಅಭಿನಯಿಸುವ ತವಕ ಎಡೆಬಿಡದೆ ಕಾಡುತ್ತಿತ್ತು. ನಿರ್ದೇಶನ ಮಾಡಲು ಕೆ. ವಿ. ಸುಬ್ಬಣ್ಣನವರನ್ನೇ ಕೇಳಿದೆ. ನನಗೂ ಒಳಗೊಳಗೆ ಸುಬ್ಬಣ್ಣನವರಿಂದಲೇ ಸೋಲೋ ನಿರ್ದೇಶನ ಮಾಡಿಸಿಕೊಳ್ಳಬೇಕೆಂಬ ಬಯಕೆ. ಹಟ ಹಿಡಿದೆ ಎನ್ನಬಹುದು. ನಿರ್ದೇಶನವನ್ನು ಮಾಡುವಾಗ ಅವರು ಹೇಳುತ್ತಿದ್ದ ಮಾತುಗಳು, ಪ್ರಶ್ನೆಗಳು ಒಬ್ಬ ನಟಿಗೆ ಬಹಳ ದೊಡ್ಡ ಸವಾಲುಗಳು. ಧೈರ್ಯಗೆಡದೆ ಪ್ರತಿಯೊಂದು ಮಾತುಗಳನ್ನು ಆಲಿಸುತ್ತಾ ಶಕುಂತಲೆಯನ್ನು ಜೀವಿಸಿದ್ದೇನೆ. ಸುಬ್ಬಣ್ಣನವರ ಒಂದು ಸಲಹೆ ಏನಿತ್ತು ಎಂದರೆ ನೀನು ಮೊದಲು ವೈದೇಹಿಯವರ ಬಳಿ ಹೋಗು. ಅವರ ಹತ್ತಿರ ಇದ್ದು ಈ ಕತೆಯನ್ನು ಶಕುಂತಲೆ ಒಬ್ಬಳೇ ಹೇಳುವ ಹಾಗೆ ಮಾಡಿಕೊಂಡು ಬಾ ಎಂದರು. ಈಗ ನನಗೆ ಅರ್ಥವಾಗುತ್ತಿದೆ. ಒಬ್ಬ ಲೇಖಕಿ ಹಾಗೂ ನಟಿಯ ಜೊತೆಗಿನ ಸಂಬಂಧ ಹೇಗೆ ಬೆಳೆಯಬೇಕೆಂಬುದಕ್ಕೆ ಅವರು ದಾರಿ ತೋರಿಸಿದಂತಾಯಿತು. ಲೇಖಕಿಯ ಭಾವನೆಗಳನ್ನು, ಚಿಂತನೆಗಳನ್ನು ನಟಿಯಾದವಳು ಅರ್ಥಮಾಡಿಕೊಂಡು ಅದಕ್ಕೆ ಧಕ್ಕೆ ಬರದ ಹಾಗೆ ರಂಗಮಂಚದ ಮೇಲೆ ತಂದಾಗ ಉದ್ಭವಿಸುವ ರಸವೇ ಬೇರೆ.

ಯಾವಾಗಿಂದ ನಾನು ಶಕುಂತಲೆಯಾಗಿ ಅಭಿನಯಿಸಲು ಆರಂಭಿಸಿದೆನೋ ಆಗಿನಿಂದ ಅವರ ಬರವಣಿಗೆಯ ಮಹತ್ವವನ್ನು ಅರಿಯತೊಡಗಿದೆ. ಶಕುಂತಲೆಯನ್ನು ಕಾಳಿದಾಸನಿಂದ ಬೇರೆಯಾಗಿ, ತಮ್ಮದೇ ಆದ ರೀತಿಯಲ್ಲಿ ವೈದೇಹಿಯವರು ಚಿತ್ರಿಸಿದ್ದಾರೆ. ಸ್ತ್ರೀ ಸಂವೇದನೆ, ಪ್ರೀತಿ, ನೋವು ಚಿಂತನೆ, ಅರಿವು ನಿಲುವು ಹಂತಹಂತವಾಗಿ ಎಲ್ಲವನ್ನು ಈ ಪಾತ್ರ (ಶಕುಂತಲೆ) ಬಿಚ್ಚಿಡುತ್ತಾ ಮುಕ್ತವಾಗುವ ಆ ವೈಖರಿ, ಆ ಶಬ್ದಗಳು ಅದರೊಳಗಿಂದ ಉದ್ಭವಿಸುವ ಅರ್ಥಗಳು. . . . . ಓ ಎಷ್ಟು ಸಲ ಓದಿದೆ. ಎಷ್ಟು ಸಲ ಅಭಿನಯಿಸಿದೆ. ಬೇರೆ ಬೇರೆ ಭಾಷೆಯಲ್ಲಿ, ಕನ್ನಡ, ಹಿಂದಿ, ಅಸ್ಸಾಮೀಸ್ ಪ್ರತಿ ಸಲವೂ ಅದು ಹೊಸ ಚಿಂತನೆಗೆ ಎಡೆ ಮಾಡಿಕೊಡುತ್ತದೆ. ಕೊನೆಯಲ್ಲಿ ಶಕುಂತಲೆ ತೆಗೆದುಕೊಳ್ಳುವ ನಿರ್ಧಾರ, ಕಾಳಿದಾಸನಿಗೆ ಹೊಳೆದಿರಲಿಲ್ಲವೇನೋ. ಹೌದು, ಅದು ವೈದೇಹಿಯವರಿಗಲ್ಲದೆ ಕಾಳಿದಾಸನಿಗೆ ಹೇಗೆ ಹೊಳೆಯಲು ಸಾಧ್ಯ?

ವೈದೇಹಿ ಅವರು ದುಶ್ಯಂತ ಶಕುಂತಲೆಯನ್ನು ಬಾ ಎಂದು ಕರೆದಾಗ ಶಕುಂತಲೆ ಯೋಚಿಸಿದ್ದನ್ನು ಈ ರೀತಿ ಬರೆಯುತ್ತಾರೆ 'ಬಾ ಎಂದ, ಹೋಗಲೇ ನಾನು? ನನಗೆ ಆತ ಅನಿವಾರ್ಯನೆಂದ ಮಾತ್ರಕ್ಕೆ ನಾನು ಆತನಿಗೆ ಅನಿವಾರ್ಯವಾಗಬೇಕಾಗಿಲ್ಲ ಎಂಬ

ಸತ್ಯದಂಚಿನಲ್ಲಿ ನಿಂತು ಚಿಂತಿಸಿದೆ. ನಾ. . . . ಹೋಗಲಿಲ್ಲ'. ಎಂತಹ ಸ್ವಾಭಿಮಾನದ ಪದಗಳಿವು! ನಟಿಯಾದ ನಾನು ಈ ಪದಗಳನ್ನು ನಾಟಕದಲ್ಲಿ ಬಳಸುವಾಗ ಬರಿಯ ಪದಗಳಾಗಿ ಮೂಡುವುದಿಲ್ಲ. ಅವು ನನ್ನ ಒಳಗೆ ಗೊತ್ತಿಲ್ಲದೆ ನನ್ನನ್ನು ಗಟ್ಟಿ ಮಾಡುತ್ತಾ ಸ್ವಾಭಿಮಾನವನ್ನು ತುಂಬುತ್ತಾ ಹೋಗುತ್ತವೆ. ಅದೆಷ್ಟೋ ಸಮಯದಲ್ಲಿ ನನ್ನ ಜೀವನದಲ್ಲಿಯೂ ಸಹ ಈ ಪದಗಳು ಕಾರ್ಯ ನಿರ್ವಹಿಸುತ್ತವೆ ಎಂಬುದು ಸುಳ್ಳಲ್ಲ.

'ಮರೆವಿನ ನಟನೆಗೆ ಉಂಗುರ ಎಂದಾದರೂ ಔಷಧಿಯಾಗುತ್ತದೆ ಎಂದಿದೆಯೇನು?. ಪ್ರೇಮಭಿಕ್ಷೆ ಬೇಡುವಷ್ಟು ಶೂನ್ಯಳೇ ನಾನು?' ಗೌತಮಿ ಉಂಗುರ ತೋರಿಸು ಎಂದಾಗ ಶಕುಂತಲೆ ಹೇಳುವ ಮಾತಿದು. ಇಡೀ ಪ್ರೇಕ್ಷಕ ಸಮುದಾಯವೇ, ಪುರುಷರ ಈ ವಿಸ್ಮರಣೆಯ ನಾಟಕಕ್ಕೆ ವಿಸ್ಮಯಪಟ್ಟರು. ಸ್ತ್ರೀ ತನ್ನ ಸ್ವಾಭಿಮಾನ, ಆತ್ಮಾಭಿಮಾನವನ್ನು ಬಿಟ್ಟು ಹೋಗಬಾರದು ಎಂಬುದನ್ನು ವೈದೇಹಿಯವರ ಈ ಕತೆಯಲ್ಲಿ ನಮಗೆ ತೋರಿಸಿಕೊಟ್ಟರು.

ಶಕುಂತಲೆ ನನ್ನ ಯೌವ್ವನದ ದಾರಿಯಲ್ಲಿ ಗಟ್ಟಿತನವನ್ನು ತಂದುಕೊಟ್ಟ ಕತೆಯಾದರೆ ಸದ್ಯಕ್ಕೆ ನಾನು ನಟಿಸುತ್ತಿರುವ ವೈದೇಹಿ ಅವರೇ ಬರೆದಿರುವ 'ಕಮಲಾದೇವಿ ಚಟ್ಟೋಪಾಧ್ಯಾಯ; ಒಂದು ನೆನಪು' ನಾಟಕವನ್ನು ಹಿಂದಿಯಲ್ಲಿ ಮತ್ತು ಕನ್ನಡದಲ್ಲಿ ಮಾಡುತ್ತಿದ್ದೇನೆ. ಇದು ನನಗೆ ಭಾರತದಲ್ಲಿಯೇ ಗೌರವವನ್ನು ತಂದುಕೊಟ್ಟ ನಾಟಕ. ಕರ್ನಾಟಕದ ಧೀಮಂತ ಮಹಿಳೆ ಕಮಲಾದೇವಿ ಚಟ್ಟೋಪಾಧ್ಯಾಯರ ಜೀವನವನ್ನು ಮಾತ್ರವಲ್ಲ, ಸ್ವಾತಂತ್ರ್ಯಪೂರ್ವದಲ್ಲಿನ ಸ್ವಾತಂತ್ರ್ಯ ನಂತರದ ನಮ್ಮ ದೇಶದ ಸ್ಥಿತಿಗತಿಗಳನ್ನು, ಹೆಣ್ಣುಮಕ್ಕಳ ಸ್ಥಿತಿಗತಿಗಳನ್ನು ಸಾಂಸ್ಕೃತಿಕ ಜೀವನ, ರಾಜಕೀಯ ಜೀವನ, ವೈಯಕ್ತಿಕ ಜೀವನ ಇತ್ಯಾದಿ ಎಲ್ಲವನ್ನೂ ಕಾಣಬಹುದು ಈ ಒಂದು ನಾಟಕದಲ್ಲಿ.

ಒಂದು ಮಹಿಳಾ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಅಸ್ಸಾಂಗೆ ಅವರು ಬಂದಾಗ ನನ್ನ ಮನೆಗೂ ಬಂದಿದ್ದರು. ಬಂದು ನಮ್ಮ ನಾಟಕ ತಂಡದ ಜೊತೆ ಅವರ ಅಮೂಲ್ಯ ಸಮಯ ಕಳೆದರು.

ಬರೀ ನಾಟಕಕ್ಕೆ ಸಂಬಂಧಪಟ್ಟ ವಿಷಯ ಮಾತ್ರವಲ್ಲ ವೈಯಕ್ತಿಕ ವಿಷಯಗಳನ್ನೂ ನಾನು ಅವರೊಂದಿಗೆ ಹಂಚಿಕೊಳ್ಳುತ್ತೇನೆ. ಬಿಡುವು ಸಿಕ್ಕಾಗಲೆಲ್ಲಾ ಅವರ ಹತ್ತಿರ ಹೋಗುತ್ತೇನೆ; ಒಂದು ಗ್ರಂಥಕ್ಕೆ ಹೋಗಿ ಬಂದ ಅನುಭವ ಪಡೆಯುತ್ತೇನೆ. ವೈಯಕ್ತಿಕವಾಗಿ ಸಲಹೆಗಳನ್ನು ಕೇಳುತ್ತೇನೆ. ನನ್ನ ಮದುವೆಯ ಸಂದರ್ಭದಲ್ಲಿ ನಾನು ಬಹಳ ಚಿಂತೆಯಲ್ಲಿದ್ದೆ, ಆಗ ತಾನೆ ಬಾಬರಿ ಮಸೀದಿ ಬಿದ್ದಿತ್ತು. ಆತಂಕ, ಭಯ, ಮೊದಲೇ ಯಾವುದೇ ಜಾತಿ ಧರ್ಮಗಳ ಗೊಂದಲದಲ್ಲಾಗಲೀ, ಯಾವುದೇ ನಂಬಿಕೆಯಲ್ಲಿಯಾಗಲೀ ಬೆಳೆದವಳಲ್ಲ ನಾನು. ವ್ಯಕ್ತಿಯನ್ನು ಪ್ರೀತಿಸಿದ್ದಾಗಿದೆ. ಅವರ ಮನೆಯವರೊಂದಿಗೆ ಸಹ ಹೊಂದಿಕೊಳ್ಳಬೇಕು. ಧರ್ಮ ಅಡ್ಡಿ ಬರುತ್ತಿದೆಯಲ್ಲ, ಏನು ಮಾಡುವುದು? ಎಂಬ ಗೊಂದಲದ ಸಮಯದಲ್ಲಿ

ವೈದೇಹಿಯವರು ಕೊಟ್ಟ ಒಂದು ಸಲಹೆ ಈ ದಿನದ ತನಕ ನನಗೆ ಸಹಾಯ ಮಾಡಿದೆ. ಬಹಳ ನಾಜೂಕಾಗಿ ಅವರು ಹೇಳಿದರು, 'ಇನ್ನೊಬ್ಬರಿಗೆ ನೋವನ್ನುಂಟು ಮಾಡಿ ಜೀವನ ಸಾಗಿಸುವುದು ತುಂಬಾ ಕಷ್ಟ. ನಿನ್ನಿಂದಾಗಿ ಬೇರೆಯವರಿಗೆ ನೋವಾಗುವುದು ನಿನಗೆ ಮತ್ತಷ್ಟು ನೋವುಂಟು ಮಾಡುವುದಾದರೆ, ನೀನು ಅವರಿಗೆ ನೋವುಂಟು ಮಾಡದೆ, ಅವರ ಭಾವನೆಗಳಿಗೆ ಧಕ್ಕೆ ಉಂಟು ಮಾಡದೆ ನಿನ್ನ ಭಾವನೆಗಳನ್ನು, ಸಾಧ್ಯವಾದಷ್ಟು, ನಿಯಂತ್ರಿಸಿಕೊ. ಆಗ ಅವರೆಲ್ಲರ ಜೊತೆಯಲ್ಲಿ ನಿನ್ನ ಜೀವನ ಹಗುರವಾಗಿ ಸಾಗುತ್ತದೆ. ನಿನಗೂ ಆನಂದ, ಬೇರೆಯವರಿಗೂ ನೆಮ್ಮದಿ ಸಿಗುತ್ತದೆ'

ಹೀಗೆ ಹತ್ತು ಹಲವು ರೀತಿಯಿಂದ ನಟಿಯಾದ ನನ್ನ ಜೀವನದಲ್ಲಿ ವೈದೇಹಿ ಅವರ ಪಾತ್ರ ಬಹಳ ಮುಖ್ಯವಾಗಿದೆ. ನನ್ನ ಜೀವನದಲ್ಲಿ ಬಹಳ ಗೌರವಿಸುವ ಚೇತನ ನನ್ನ ವೈದೇಹಿ.



# ‘ವ್ಯಾನಿಟಿಬ್ಯಾಗ್’ ಪ್ರಸ್ತುತಿ ರೂಪಾಂತರ ವೇಷಾಂತರಗೊಂಡ ಬಗೆ

✦ ಮಂಗಳಾ ಎನ್

ಇದೊಂದು ಕವನಗಳ ತೋರಣ. ವೈದೇಹಿಯವರ **‘ನೋಡಬಾರದು ಚೀಲದೊಳಗನು’** ಕವನ ಓದಿದಂತೆಲ್ಲ ಮತ್ತೆ ಮತ್ತೆ ಮರುಓದಿಗೆ ಆಹ್ವಾನಿಸುತ್ತಿತ್ತು. ಈ ಸ್ತ್ರೀಲೋಕದ ಚೀಲದ ಅನಾವರಣ ರಂಗದ ಮೇಲೆ ಹೇಗೆ ಆಗಬೇಕೆಂಬುದರ ಕಲ್ಪನೆ ಒಂದು ಕಡೆಯಾದರೆ, ವೈದೇಹಿಯವರ ಕವನಗಳು ನಮ್ಮ ಬಾಯಿಯಲ್ಲಿ ಹೇಗೆ ಹೊರಡುವುದೆಂಬ ಆತಂಕ ಒಂದು ಕಡೆ. ವೈದೇಹಿಯವರ ಕವನಗಳನ್ನು ಕವನಗಳಾಗಿಯೇ ಒಂದು ಕಾವ್ಯವನ್ನಾಗಿ ರಂಗಮಾಧ್ಯಮದ ಮೂಲಕ ತಲುಪಿಸಬೇಕೇ ಹೊರತು ಅದನ್ನು ನಾಟಕೀಕರಣಗೊಳಿಸಬಾರದು ಎಂಬ ಎಚ್ಚರದಿಂದಲೇ ಅವರ ಕಾವ್ಯದಲ್ಲಿರುವ ನಾಟಕೀಯ ಗುಣಗಳ ಜೊತೆಯೇ ನಾಟಕ ಕಟ್ಟುವ ಸಾಹಸ ಮಾಡಬೇಕೆಂದು ನಿರ್ಧರಿಸಿದೆ. ಆ ಸಂದರ್ಭದಲ್ಲಿ ಯೋಚನೆಗೆ ಬಂದದ್ದು ವೈದೇಹಿ ಕಾವ್ಯತೋರಣ! ಒಂದು ಕಡೆ ರಂಗಕಲಾವಿದೆಯರೂ ಮತ್ತು ಸಾಹಿತಿಗಳೂ ಒಟ್ಟಿಗೆ ಕಲೆತು ವೈದೇಹಿಯವರ ಕವನಗಳನ್ನು ಓದಿ, ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಿದೆವು. ಅದಾದ ಒಂದು ವರುಷದ ನಂತರ **‘ಅಂತರರಾಷ್ಟ್ರೀಯ ಮಹಿಳಾದಿನ’** ದ (2012 ಮಾರ್ಚ್ 8) ಅಂಗವಾಗಿ **‘ವ್ಯಾನಿಟಿಬ್ಯಾಗ್’** ಸಿದ್ಧವಾಯಿತು.

ವೈದೇಹಿಯವರು ಕನ್ನಡದ ಪ್ರಮುಖ ಕವಯಿತ್ರಿ. ಬುದ್ಧಿಭಾವದ ಅಪೂರ್ವ ಸಂಗಮವಾದ ವೈದೇಹಿಯವರ ಕಾವ್ಯಲೋಕದ ನೆಲೆಗಳನ್ನು ಅನಾವರಣಗೊಳಿಸುತ್ತಾ ಆ ಮೂಲಕ ಹೆಣ್ಣಿನ ಚಿತ್ತ ಚಿತ್ತಾರದ ಅನೂಹ್ಯ ಸಂಗತಿಗಳನ್ನು, ಹೆಣ್ಣಿಗೆ ಮಾತ್ರ ಅನುಭವಗಮ್ಯವಾಗುವ ಹಲವು ಅಮೂರ್ತ ಪ್ರಸಂಗಗಳನ್ನು, ಅವಳ ಭಾವಪ್ರಪಂಚದ ಹಲವು ಸೂಕ್ಷ್ಮ ನೇಯ್ಗೆಗಳನ್ನು ದೃಶ್ಯರೂಪಕದಲ್ಲಿ ಕಾಣಿಸುವುದು ಸುಲಭದ ಕೆಲಸವಾಗಿ ಎದುರಾಗಲಿಲ್ಲ. ಅದಕ್ಕಾಗಿಯೇ ಸಿದ್ಧಗೊಳ್ಳಲು ಸುಮಾರು ದಿನಗಳೇ ಬೇಕಾದವು.

ವ್ಯಾನಿಟಿಬ್ಯಾಗಿನಲ್ಲಿ ವೈದೇಹಿಯವರು 18 ಕವನಗಳು ಮತ್ತು ಒಂದು ಗದ್ಯಭಾಗವಿದೆ. ಈ ಹದಿನೆಂಟು ಕವನಗಳು ಬಿಡಿ ಬಿಡಿ ಕವನಗಳಾದರೂ ನಾವೊಂದು ದೃಶ್ಯರೂಪವಾಗಿ ಮಾಡಲು ಹೊರಟಾಗ ಅದಕ್ಕೊಂದು ಪ್ರಬಂಧಧ್ವನಿ ಇರಬೇಕಾಗುತ್ತದೆ ಎಂಬ ಕಾರಣದಿಂದ

ಮತ್ತು ಒಂದರಿಂದ ಮತ್ತೊಂದಕ್ಕೆ ಹೊರಳುವ ಪ್ರಕ್ರಿಯೆ ಜಿಗಿತದ ಹಾಗೆ ಕಾಣಿಸದೇ ಜೀಕುವ ಹಾಗೆ ಅಥವಾ ಹೊರಳುವ ಹಾಗೆ ಮಾಡಬೇಕಾದ ಅನಿವಾರ್ಯತೆ ನನ್ನ ಮುಂದೆ ಕಾಣಿಸಿತು. ಮತ್ತು ಅದನ್ನು ಬೇರೊಂದು ರೂಪಕ್ಕೆ ವೇಷಾಂತರಿಸಬೇಕಾದ ಅಗತ್ಯ ಕಂಡು ಬಂದಿತು. ಕೆಲವೆಡೆ ಕವನಗಳನ್ನು ಒಂದರೊಳಗೊಂದು ಹೆಣೆಯಬೇಕಾಗಿತ್ತು. ಕೆಲವು ಕಡೆ ಕತ್ತರಿಸಿ, ಅದನ್ನು ಮತ್ತೆಲ್ಲೋ ಅಂಟಿಸುವ, ಕೆಲವು ಬಾರಿ ಒಂದು ಪದ್ಯದ ಕೆಲವು ಭಾಗಗಳನ್ನು ಸ್ಥಳಾಂತರಿಸುವ ಕೆಲಸ ಮಾಡುತ್ತಾ ಅವನ್ನೆಲ್ಲ 'ನೋಡಬಾರದು ಚೀಲದೊಳಗನು' ಪದ್ಯದ ಮೂಲಕ ಪೋಣಿಸುವ ಕೆಲಸ ಮಾಡಲಾಯಿತು. ಈ ಪದ್ಯ ಒಂದು ದಾರದ ಹಾಗೆ ಉಳಿದು, ಉಳಿದ 17 ಕವನಗಳನ್ನು, ಒಂದು ಗದ್ಯಭಾಗವನ್ನು ಅದರೊಳಗೆ ಪೋಣಿಸುವ ಕೆಲಸ ಪ್ರಾರಂಭವಾಯಿತು. ಹೀಗೆ ಒಂದು ರಂಗಕೃತಿ ಸಿದ್ಧವಾಯಿತು. ಅದನ್ನೆತ್ತಿಕೊಂಡು ಮಣಿಪಾಲಕ್ಕೆ ಹೋಗಿ ಒಮ್ಮೆ ವೈದೇಹಿಯವರ ಮುಂದೆ ಕುಳಿತು ಓದಿದಾಗ, 'ಅದು ಹೇಗೆ ನಾನು ಬರೆದ ಕವನಗಳನ್ನು ಒಂದಕ್ಕೊಂದು ಎಷ್ಟು ಚೆಂದ ಪೋಣಿಸಿದ್ದಿ ಮಾರಾಯ್ತಿ, ನನಗೆ ನಿನ್ನ ಬಗ್ಗೆ ಸಂಜಿಕೆ ಉಂಟು, ಮುಂದುವರಿ' ಎಂದು ಹೇಳಿದ್ದಷ್ಟೇ, ಬೆಂಗಳೂರಿಗೆ ಬಂದವಳೇ ಸಂಚಾರಿ ಥಿಯೇಟರ್ ತಂಡಕ್ಕಾಗಿ ವ್ಯಾನಿಟಿಬ್ಯಾಗ್ ಹೊಲೆಯಲು ಶುರುಮಾಡಿದೆ.

ಸಂಚಾರಿಯ ಹೆಗಲ ಮೇಲೆ ವೈದೇಹಿಯ ವ್ಯಾನಿಟಿಬ್ಯಾಗ್!

ಹೆಣ್ಣು ದೇಹವಷ್ಟೇ ಅಲ್ಲ, ಅಲ್ಲೊಂದು ಪಿಸುನುಡಿಯಿದೆ, ನೋವಿದೆ, ಸಂಭ್ರಮವಿದೆ, ಚೈತನ್ಯವಿದೆ, ಕಷ್ಟವಿದೆ, ಕಾಯುವಿಕೆಯಿದೆ. ಹಂಬಲ, ಹಪಹಪಿಕೆ, ಬಿಕ್ಕು, ತಲ್ಲಣ, ಎದೆಗಾರಿಕೆ, ಬೆಂಕಿ ಎಲ್ಲ ಇದೆ. ಇವೆಲ್ಲವನ್ನು ಒಳಗೊಂಡಿರುವುದು ವ್ಯಾನಿಟಿಬ್ಯಾಗ್ ಎಂಬ ರೂಪಕ ಎಂಬುದನ್ನು ನಾನು ಅಭಿವ್ಯಕ್ತಿಸಬೇಕೆನಿಸಿತ್ತು. ಇವುಗಳ ಬಗ್ಗೆ ಕುತೂಹಲದ ಇಣುಕುವಿಕೆ ಸಲ್ಲದು. ಇಣುಕಿದರೂ ನೋಡಲಾಗದು. ಅರ್ಥ ಮಾಡಿಕೊಳ್ಳುವ ಹೃದಯವಂತಿಕೆ ಬೇಕು ಎಂಬುದನ್ನು ಧ್ವನಿಸಬೇಕು ಎಂಬುದೇ ನನ್ನ ಉದ್ದೇಶವಾಗಿತ್ತು. ಒಂದು ದೊಡ್ಡ ವ್ಯಾನಿಟಿಬ್ಯಾಗ್ ರಂಗದ ಮೇಲೆ ವಿನ್ಯಾಸಗೊಂಡು ಹಿಂಬದಿಯಲ್ಲಿ ನಿಲ್ಲಿಸಲಾಗಿತ್ತು. ಬ್ಯಾಗ್ ಒಳಗಿನಿಂದ ನಟಿಯರು ಹೊರಗೆ ಬಂದು ಹೋಗುವ ಹಾಗೆ ನಿರ್ಮಿಸಲಾಗಿತ್ತು. ಅವೇ ಅವರ ಪ್ರವೇಶ ಹಾಗೂ ನಿರ್ಗಮನದ ದಾರಿಯಾಗಿ ವಿನ್ಯಾಸ ಮಾಡಲಾಯಿತು. ಅದ್ಭುತ ರಂಗವಿನ್ಯಾಸಗಾರ ಅರುಣ್ ಸಾಗರ್ ಈ ವಿನ್ಯಾಸವನ್ನು ನಮಗಾಗಿ ಮಾಡಿಕೊಟ್ಟರು.

ಮೊದಲಿಗೆ ಇಣುಕುವ ಮನಸ್ಸುಗಳಿಗೆ ಹೆಣ್ಣು (ವ್ಯಾನಿಟಿಬ್ಯಾಗ್) ಅಂದರೆ ಲಿಪ್‌ಸ್ಟಿಕ್, ಕನ್ನಡಿ, ಬಳೆ, ನುಣ್ಣನೆಯ ದೇಹ, ಉದ್ದನೆಯ ಜಡೆ, ಹೂವು ಸೀರೆ ಎಂತಷ್ಟೇ ಕಾಣಿಸುತ್ತದೆಯೇ ಹೊರತು ಅದರಾಚೆಗಿನ ಮನಸ್ಸು, ಅಂತರಂಗದ ಅಲ್ಲೋಲ ಕಲ್ಲೋಲಗಳು ಅರ್ಥವಾಗುವುದೇ ಇಲ್ಲ ಎಂಬುದನ್ನು ಧ್ವನಿಸಲು ವ್ಯಾನಿಟಿಬ್ಯಾಗ್ ನೊಳಗಿನಿಂದ ಮೇಲೆ ಹೇಳಿದ ಎಲ್ಲ ವಸ್ತುಗಳು ಬ್ಯಾಗಿನಾಚೆ ಇಣುಕುವ ಹಾಗೆ ಕಾಣಿಸುತ್ತಿರುತ್ತವೆ. ಇಣುಕುವ ಮನಸ್ಸುಗಳು ಸಂಭ್ರಮಿಸುತ್ತಿರುವಾಗಲೇ ಎಲ್ಲ ವಸ್ತುಗಳು ಮರೆಯಾಗಿ ಹೆಣ್ಣುಗಳು ಬ್ಯಾಗಿನಾಚೆ

ಹೊರಬರುತ್ತಾ 'ವ್ಯಾನಿಟಿ ಬ್ಯಾಗಿನಲ್ಲಿ ಕೈ ಹಾಕಿ ನೋಡುವುದು ಎಂದಿಗೂ ಉಚಿತವಲ್ಲ' ಎಂದು ಎಚ್ಚರಿಸುತ್ತಾ, ಹಾಡುತ್ತಾ ನಾಟಕ ಪ್ರಾರಂಭಿಸುತ್ತಾರೆ. ಕೆಲವೊಮ್ಮೆ ಹಾಡುತ್ತಾರೆ. ಕೆಲವೊಮ್ಮೆ ಅದನ್ನೇ ಆಡುತ್ತಾರೆ. ಈ ಕವನಕ್ಕೆ ಗಜಾನನ. ಟಿ. ನಾಯ್ಕ್ ಸಂಗೀತ ಸಂಯೋಜನೆ ಮಾಡಿ ಅದನ್ನೇ ಇಡೀ ನಾಟಕದ theme music ಆಗಿ, ಪದ್ಯದಿಂದ ಪದ್ಯಕ್ಕೆ bridge music ಆಗಿ ಗುನುಗುವ ಹಾಗೆ ಮಾಡಿದರು. ಮೊದಲಿಗೆ ಕವನವನ್ನು ಅವರ ಕೈಗಿತ್ತು ಇದಕ್ಕೆ ಸಂಗೀತ ಸಂಯೋಜನೆ ಮಾಡಿ ಎಂದಾಗ, 'ಇದೇನು ಮೇಡಂ. ಓಗಿದೆ, ಇದಕ್ಕೆ ಹೇಗೆ ಮ್ಯೂಸಿಕ್ ಮಾಡುವುದು' ಎಂದು ಮೌನವಾದವರು, ಎರಡು ದಿನದ ನಂತರ ಹಾಡುತ್ತಾ ಬಂದರು.

'ಅವಳ ಉಯಿಲು', 'ಗೆಳತಿಯ ಗುಟ್ಟು' ಮತ್ತು 'ಬೆರಣಿ ತಟ್ಟುವ ಹುಡುಗಿ' ಕವನಗಳು ಮೂರು ಭಿನ್ನ ಕವನಗಳಾದರೂ ಅಭಿನಯಿಸುವವರೂ ಮೂರು ಬೇರೆ ನಟಿಯರಾದರೂ ಅವುಗಳಲ್ಲಿ ಒಂದು ಸಾಮ್ಯತೆಯಿದೆ. ಪರಸ್ಪರ ಕೊಡುಕೊಳ್ಳುವಿಕೆ ಇದೆ. ಎಲ್ಲರೂ ಎದೆನೋವಿಗೆ ಮದ್ದು ಹುಡುಕುತ್ತಿರುವವರೇ. ಬೇರೆ ಬೇರೆ ಕಾಲಘಟ್ಟದಲ್ಲಿ ನಿಂತಿರುವ ಮೂರು ಹೆಣ್ಣುಗಳ, ಅವರುಗಳ ಆಂತರಿಕ ತುಮುಲವನ್ನು ಧ್ವನಿಸುವ. ಆ ತುಮುಲ ಕೇವಲ ಒಬ್ಬಳದ್ದೇ ಆಗಿರದೇ ಎಲ್ಲರದ್ದೂ ಆಗಿಬಿಡುವ. ಮತ್ತೆ ತಮ್ಮ ತಮ್ಮ ಕವನಗಳಿಗೆ ಮರಳುತ್ತಾ ನಾಟಕ ಮುಂದುವರೆಸುವ ತಂತ್ರವೊಂದನ್ನು ನಾನು ಕಂಡುಕೊಂಡೆ. ಮೂರೂ ಕವನಗಳನ್ನು ಒಂದರ ನಂತರ ಮತ್ತೊಂದರ ದೃಶ್ಯೀಕರಣ ಮಾಡದೆ, ಮೂರನ್ನೂ ಒಂದರೊಳಗೊಂದು ಹೆಣೆದು ಮೂರೂ ಸೇರಿ ಒಂದಾಗುವ ಹಾಗೆ ಕಟ್ಟಿಕೊಳ್ಳಬೇಕಾಯಿತು. ಹಾಗಾಗಿ ಇಲ್ಲಿ 'ಗೆಳತಿಯ ಗುಟ್ಟು'ವಿನ ಪುಟಾಣಿ ಪೋರಿ, 'ಬೆರಣಿ ತಟ್ಟುವ ಹುಡುಗಿ' ಯ ದೊಡ್ಡ ಹುಡುಗಿ ಮತ್ತು 'ಅವಳ ಉಯಿಲು'ವಿನ ತಾಯಿ ಎಲ್ಲರೂ ರಂಗದ ಮೇಲೆ ಏಕ ಕಾಲದಲ್ಲಿ ಇರುತ್ತಾರೆ.

ಈ ಮೂವರನ್ನು ಒಂದು ಬಂಧದಲ್ಲಿಡಲು ಮೇಳ ಇರುತ್ತದೆ. ಪೋರಿಯ ಮಾತುಗಳೆಲ್ಲವೂ ತನ್ನದೇ ಎಂಬಂತೆ ತಾಯಿ(ಅಜ್ಜಿ) ಆಲಿಸುತ್ತಾಳೆ. ಬೆರಣಿ ತಟ್ಟುವ ಹುಡುಗಿ ಚಂದ್ರಾಮನ ಕಾಯುವಿಕೆಯಿಂದ ಅನುಭವಿಸುವ ವಿರಹದ ನೋವನ್ನು, ತಾಯಿಯೂ, ತಾನೂ ಆ ನೋವು ಉಂಡ ದಿನಗಳನ್ನು ನೆನಪಿಸಿಕೊಳ್ಳುವ ಮೂಲಕ ಅನುಭವಿಸುತ್ತಾಳೆ. ಅವಳ ಅನುಭವವನ್ನು ಇವಳು ಕೆಲವೊಮ್ಮೆ ಮಾತಾಗಿಸುತ್ತಾಳೆ. ಬೆರಣಿ ತಟ್ಟುವ ಹುಡುಗಿಯ ಚಂದ್ರಾಮ ದೇವರು ಒಂದು ಬಿಳಿ ಬೆಳದಿಂಗಳು. ಅದನ್ನು ಅಭಿವ್ಯಕ್ತಿಸಲು ಉದ್ದನೆಯ ಪಾರದರ್ಶಕ ಹೊಳಪಿನ ಬೆಳ್ಳಿ ಬಣ್ಣದ ಬಟ್ಟೆ ಮತ್ತು ಅದರೊಳಗಿನ ಬೆಳಕು. ಚಂದ್ರಾಮನ ಬಳಿಗೆ ಸಾಗುವ ಬೆರಣಿ ತಟ್ಟುವ ಹುಡುಗಿ ಆ ಬೆಳ್ಳಿಬಟ್ಟೆಯನ್ನು 'ಕಬ್ಬು ಜಲ್ಲೆಯನೇರಿ ಬರುವೆನೋ ಚಂದ್ರಾಮ ನಿಂತಲ್ಲೇ ನೀನು ನಿಂತಿರು' ಎಂದು ಹಾಡುತ್ತಾ ಏರುತ್ತಾಳೆ. ಅವಳು ಏರುತ್ತಿದ್ದಂತೆ ಚಂದಿರನ ಬಳಿಯಿದ್ದ ಮೇಳದ ಹುಡುಗಿಯರು ಅವಳ ವಿರುದ್ಧ ದಿಕ್ಕಿನಲ್ಲಿ ಇಳಿಯುತ್ತಾ ಹೋಗುತ್ತಾರೆ. ಇದರಿಂದ ನೋಡುಗನಿಗೆ ಹುಡುಗಿ

ಕಬ್ಬಜಲ್ಲೆಯನೇರಿ ಸಾಗುತ್ತಿದ್ದಾಳೆ ಎಂಬ ಭಾವ ಸ್ಫುರಿಸುತ್ತದೆ. ನಂತರ ಅವಳು ಮೈಮ್ ಮೂಲಕ ತಾನು ಏರಿ ಏರಿ ಅವನ ಅರಮನೆಗೆ ಹೆಜ್ಜೆಯಿಡುತ್ತಾಳೆ. ಹೀಗೇ ಮೂರೂ ಭಿನ್ನ ಪದ್ಯಗಳಲ್ಲಿ ಬರುವ ಮೂರೂ ಪಾತ್ರಗಳು ಎಲ್ಲರ ಮಾತುಗಳಿಗೆ ದನಿಯಾಗುವ, ಮಾತಾಗುವ, ಭಾವವಾಗುವ ಅಭಿವ್ಯಕ್ತಿ ತಂತ್ರವೊಂದನ್ನು ಕಂಡುಕೊಳ್ಳಲಾಯಿತು. ತಾಯಿ ಕೇವಲ ತನ್ನ ನೆನಪುಗಳ ದಾರಿ ಹಿಡಿದರೆ, ಬೆರಣಿ ತಟ್ಟುವ ಹುಡುಗಿ ದೂರದ ಚಂದ್ರಾಮನಿಗೇ ಗುರಿಯಿಟ್ಟು ಜಪಿಸುತ್ತಾಳೆ.

ಗೆಳತಿಯ ಗುಟ್ಟುವಿನ ಪೋರಿ ತನ್ನ android phone ನಲ್ಲಿ ಮುತ್ತಿನಂತಹ ಗೀಚು ಕೊಟ್ಟು ಮಾಯವಾದವನ message ಗಳಿಗಾಗಿ ಕಾಯುತ್ತಾ, ಬಾರದ message ಗಾಗಿ ಪರಿತಪಿಸುತ್ತಾ, ಮಾಯವಾದವನು ಮಾಡಿದ ಗಾಯದ ನೋವಿಗೆ ಮದ್ದುಂಟೇ ಎಂದು ತಾಯಿಯನ್ನು (ಅಜ್ಜಿಯನ್ನು) ಕೇಳುತ್ತಾಳೆ. ಬೆರಣಿ ತಟ್ಟುವ ಕಾಯಕ ಕಷ್ಟದ ಹುಡುಗಿ ಮದ್ದುಂಟೇ ಎಂದು ಚಂದ್ರಾಮ ದೇವರನ್ನು, ತಾರೆಗಳನ್ನು, ಎಲ್ಲರನ್ನೂ ಕೇಳುತ್ತಾಳೆ. ಆ ತಾಯಿಯಾದರೋ ತನ್ನ ಇಡೀ ಬದುಕಿನ ಪ್ರಯಾಣದಲ್ಲಿ ಸಾಗಿ ಬಂದವಳು, ತನ್ನದು ಎಂಬ ಏನೊಂದೂ ಇಲ್ಲದವಳು, ಅವರಿವರು ಕೊಟ್ಟ ವಸ್ತುಗಳನ್ನೇ ಜೋಪಾನ ಮಾಡಿಟ್ಟುಕೊಂಡವಳು, ಅದನ್ನು ಮಕ್ಕಳಿಗೆ ಹಂಚುತ್ತಾ ಉಯಿಲು ಬರೆವವಳು, ತನ್ನ ಎದೆನೋವಿಗೇ ಮದ್ದು ಕಾಣದವಳು. ಮೊಮ್ಮಗಳು ಕೇಳುವ ಮದ್ದನ್ನು ಎಲ್ಲಿಂದ ತಂದಾಳು. ಹಾಗಾಗಿ ಎದೆನೋವಿಗೆ ತನ್ನ ಬಳಿ ಮದ್ದುಂಟೇ? ಎಂದು ಪ್ರೇಕ್ಷಕರನ್ನು ಕೇಳುತ್ತಾಳೆ.

ಉಯಿಲು ಬರೆಸಿ, ತನ್ನೆಲ್ಲ ಸೀರೆ ಒಡವೆಗಳನ್ನು ತಾಯಿ ಬಿಟ್ಟುಹೋಗುತ್ತಾಳೆ. ಅಮ್ಮನ ಸೀರೆಗಳ ಮಧ್ಯೆ ಕುಳಿತ ಮಕ್ಕಳು(ಗಂಡುಮಕ್ಕಳು ಮತ್ತು ಹೆಣ್ಣುಮಕ್ಕಳು) ಆಕೆ ಬಿಟ್ಟು ಹೋದ ಸೀರೆಗಳ ಸ್ಪರ್ಶಿಸುತ್ತಾ 'ಅಮ್ಮ' ಎಂಬ ಭಾವವಲಯದೊಳಗೆ ಸಿಲುಕಿ 'ಅಮ್ಮನ ಸೀರೆ', 'ಅಮ್ಮ' ಕವನಗಳ ಮೂಲಕ ಅಮ್ಮನ ವಿವಿಧ ಭಾವಗಳನ್ನು ಸ್ಫುರಿಸುವ ಕವನಗಳನ್ನು ಅಭಿವ್ಯಕ್ತಿಸುತ್ತಾ, ಎಲ್ಲರನ್ನೂ ಹಿಡಿದಿಡಲು ಸಾಧ್ಯವಾಗುವ ಒಂದು ತಂತುವಾಗಿ ಅಮ್ಮನ ಸೀರೆಯನ್ನು ಹೊದ್ದು 'ಅಮ್ಮಾ ಎನ್ನುವ ಸುಖದ ನಿಟ್ಟುಸಿರ ಕರೆದೂ ಕರೆದೂ, ಸವೆದೂ ಸವೆಯದ ಆ ಪದವ ನೆನೆದೂ.........' ಎಂದು ಜೋಗುಳವ ಹಾಡಿಕೊಳ್ಳುತ್ತಾ ಅಮ್ಮನಿಲ್ಲದ ಪ್ರಪಂಚ ಹೇಗಿರುತ್ತದೆಂಬುದನ್ನು ತಿಳಿಸುತ್ತಾ ವ್ಯಾನಿಟಿಬ್ಯಾಗಿನೊಳಗೆ ಸೇರಿಕೊಳ್ಳುತ್ತಾರೆ.

'ಶಿವನ ಮೀಸುವ ಹಾಡು' ಒಂದು ಆಚರಣೆಯ ಹಾಗೆ. ಮತ್ತೆ ಮತ್ತೆ ಬರುವ ಶಿವ, ಶಿವನನ್ನು ಮೀಸುವ ಪಾರ್ವತಿ ಮತ್ತು ಅವಳ ಧ್ಯಾನಸ್ಥ ಸ್ಥಿತಿಯಲ್ಲಿ ನೆಟ್ಟಗೆ ನಡೆದುಬಿಡುವ ಶಿವ, ಅವನು ಹೊರಟು ಹೋದ ಎಂದು ಅಂದುಕೊಳ್ಳುತ್ತಿರುವಷ್ಟರಲ್ಲೇ ಮತ್ತೆ ಮರಳಿ ಬರುವ ಲೋಕಸಂಚಾರಿಯ ಸೇವೆ ಮಾಡುತ್ತಲೇ, ನಾನೆಷ್ಟನೆಯ ನಾರಿ? ಎಂದು ಲೇವಡಿ ಮಾಡುತ್ತಾ ಬಿಕ್ಕುವ ಆರ್ದ್ರಗರ್ವದ ಹುಡುಗಿ ಗೌರಿ. ಹೀಗೆ

ಪುನರಾವರ್ತನೆಗೊಳ್ಳುವ ಕ್ರಿಯೆಯಿಂದಾಗಿ ಈ ಕವನದ ಅಭಿವ್ಯಕ್ತಿಗೆ ಒಂದು ಆಚರಣೆಯ ಸ್ವರೂಪವನ್ನು ನೀಡಿದೆ. ಚಲನೆ ಪುನರಾವರ್ತನೆಗೊಳ್ಳುತ್ತಾ ಇರುವ ಹಾಗೆ ವಿನ್ಯಾಸಗೊಂಡಿದೆ.

ಇನ್ನು ಅಡುಗೆಮನೆ ಹುಡುಗಿ ಕವನದಲ್ಲಿ ಬೆಳಕು ಮತ್ತು ಆವರಣದ ಜೊತೆ ಕೆಲಸ ಮಾಡಬೇಕಾಗಿ ಬಂತು. ಮುದ್ದಣ್ಣ/ ವಿನಯಚಂದ್ರ/ ಅರವಿಂದ್ ಕುಪ್ಳೀಕರ್ ಅವರ ಬೆಳಕಿನ ವಿನ್ಯಾಸ ಈ ನಾಟಕಕ್ಕಿದೆ. ಇಕ್ಕಟ್ಟಿನ ಎರಡೂವರೆ ಅಡಿಯ ಚಚ್ಚೌಕದ ಜಾಗದಲ್ಲಿ ಹುಡುಗಿ ಅಡುಗೆಮನೆಯನ್ನು ಸೃಷ್ಟಿಸುತ್ತಾಳೆ. ಉಸಿರು ಕಟ್ಟಿಸುವ, ಕಿಟಕಿಯಿಲ್ಲದ ಗೂಡಿನ ಒಳಗೆ ಕೇವಲ ತನ್ನ ಕಿವಿಯನ್ನಷ್ಟೇ ಜಾಗೃತಗೊಳಿಸಿ ಹೊರಗಡೆ ಪ್ರಪಂಚದ ಶಬ್ದಗಳಿಗೆ ಕಿವಿಯ ತೆರೆದು, ಹೊರಗಿನ ಪ್ರಪಂಚದ ಜೊತೆಗೆ ಸಂಬಂಧ ಕಲ್ಪಿಸುವ ಪ್ರಯತ್ನ ಮಾಡುತ್ತಲೇ ಕನಸು ಕಟ್ಟುತ್ತಾಳೆ. ಯಕ್ಷಗಾನದ ಧಾಟಿಯಲ್ಲಿ ಹಾಡುತ್ತಾಳೆ. ಆ ಇಕ್ಕಟ್ಟಿನ ಜಾಗದಲ್ಲೇ ಕುಣಿಯುತ್ತಾಳೆ. ಹೊರಗಡೆ ಶಬ್ದ ಕಡಿಮೆಯಾದ ಹಾಗೆ ಮೆಣಸಿನ ಚೊಟ್ಟು ಬಿಡಿಸುತ್ತಾ ಅಲ್ಲಿಯೇ ಕೂರುತ್ತಾಳೆ. ಇವಳ ಈ ಸ್ಥಿತಿಯನ್ನು ನಮಗೆ ಮೇಳದ ಹಾಗೆ ಇರುವ ಒಂದು ಗುಂಪು ಅವಳ ಪರವಾಗಿ ಪ್ರೇಕ್ಷಕರನ್ನು ಉದ್ದೇಶಿಸಿ ಹೇಳುತ್ತದೆ.

ಅಸ್ತಮಾನದ ಕವಿತೆಗಳನ್ನು ದೃಶ್ಯಕ್ಕೆ ಕಟ್ಟುವಾಗ ಬಹಳಷ್ಟು ತೊಡಕನ್ನು ಎದುರಿಸಬೇಕಾಗಿ ಬಂದಿತು. ಪುಟ್ಟ ಪುಟ್ಟ ಈ ಕವನಗಳು ಓದಿಕೊಳ್ಳುವಾಗ ನೀಡುವ ಆನಂದ ದೃಶ್ಯದಲ್ಲಿ ಸಿಗದೇ ಹೋಗಿಬಿಡಬಹುದಾದ ಆತಂಕ ಕಾಡಿತು. ಎಲ್ಲವೂ ಸೂರ್ಯನ ಕುರಿತಾದ ಕವನಗಳು. ಬದುಕಿನ ಸೂರ್ಯ, ನಮ್ಮೊಳಗಿನ ಸೂರ್ಯ, ನಮ್ಮ ಕನಸಿನ ಸೂರ್ಯ, ನಾನು ಎಂಬ ಅಹಂ ಅನ್ನು ಸುಟ್ಟುಬಿಡುವ ಸೂರ್ಯ, ಏನಾದರೂ ಆಗಬಹುದಾದ ಹೆಣ್ಣಿನ ಸೂರ್ಯ ಹೇಗಿರಬಹುದೆಂಬ ಕಲ್ಪನೆಯಲ್ಲೇ 'ಕುಶಾಲಿಗೆ', 'ಸುಡುವ ಕಾಯಕ', ಮತ್ತು 'ಹುಡುಗಿ ಹೇಳಿದ ಕಥೆ'ಯನ್ನು ಪೋಣಿಸಿ ಕತೆ ಕಟ್ಟುವ ಕೆಲಸ ಶುರು ಮಾಡಿದೆ. ಎಲ್ಲಕ್ಕೂ ಮುಕ್ತಾಯ ನೀಡಲು ವೈದೇಹಿಯವರ ಮತ್ತೊಂದು ಚುಟುಕು ಪದ್ಯ 'ಎಚ್ಚರಿಕೆ ಸೂರ್ಯ' ನೆರವಾಯಿತು. ನಂತರ ಅವೆಲ್ಲವೂ ತಾನಾಗಿಯೇ ಒಂದು ಬಂಧಕ್ಕೆ ಸೇರಿಕೊಂಡು 'ನೋಡಬಾರದು ಚೀಲದೊಳಗನು' ಪದ್ಯದ ಸಾಲಿನೊಳಗೆ ಬೆರೆತು ಹೋಗಿದ್ದೇ ದೃಶ್ಯ ಸಲೀಸಾಯಿತು. ಕಲಾವಿದೆಯರು ರವಿಕೆಯೊಳಗೆ ಬಚ್ಚಿಟ್ಟುಕೊಂಡ ತಮ್ಮ ಪ್ರೇಮಪತ್ರಗಳನ್ನು ಓದಿಕೊಳ್ಳುತ್ತಾ ದೂರದ ಸೂರ್ಯನನ್ನು ಉದ್ದೇಶಿಸಿ ಕೇವಲ ತಮ್ಮ ಆಂಗಿಕ ಚಲನೆಯಿಂದಲೇ ದೇಹ ಚಲಿಸುತ್ತಾ, ಪದ್ಯವನ್ನು ವಾಚಿಸುತ್ತಾ, ಭಿನ್ನ ಭಿನ್ನ group composition ಗಳಲ್ಲಿ ಈ ಪದ್ಯಗಳನ್ನು ತೆರೆದಿಡುವ ಸರಳವಾದ ಒಂದು ತಂತ್ರದ ಮೂಲಕ ಸುಡುವ ಸೂರ್ಯನ ಮಿಂದು ಸ್ವತಃ ತಾವೇ ಸೂರ್ಯರಾಗಿ, ನಿತ್ಯ ಮೂಡುತ, ನಿತ್ಯ ಮುಳುಗುತ ಕಷ್ಟಸುಖಗಳ ಬೆಟ್ಟ ಕಡಲಲಿ ನಿತ್ಯ ಸುಡುತಿಹ ಹೆಣ್ಣುಗಳಾಗುವ ಅಭಿವ್ಯಕ್ತಿಯನ್ನು ಮಾಡಲು ಸಾಧ್ಯವಾಯಿತು.

'ಆಕೆ ಆತ ಭಾಷೆ' ಕವನವಂತೂ ಅದ್ಭುತ ಕವನ. ಆದರೆ ದೃಶ್ಯ ಕಟ್ಟುವ ಪ್ರಕ್ರಿಯೆ ವಿಪರೀತ ಸವಾಲಿನದಾಗಿ ಕಂಡುಬಂದಿತು. ಅಸಂಗತ ಪ್ರಹಸನದ ಹಾಗೆ ಕಾಣಬರುವ

ಈ ಕವನ ದೃಶ್ಯೀಕರಣದ ಯಾವ ಚೌಕಟ್ಟಿನಲ್ಲೂ ಸಿಗದ ಹಾಗೆ ಇದ್ದ ಕಾರಣ, ವೈದೇಹಿಯವರ ಮಲ್ಲಿನಾಥ ಧ್ಯಾನ ಪುಸ್ತಕದಿಂದ ಆಯ್ದ ಒಂದು ಗದ್ಯಭಾಗವನ್ನು ಆರಿಸಿಕೊಂಡ ನಂತರ ಈ ಕವನವನ್ನು ಅಭಿವ್ಯಕ್ತಿಸಲು ಒಂದು ಹೊಸ ಮಾರ್ಗ ತಾನಾಗಿಯೇ ಕಾಣಿಸತೊಡಗಿತು. ಗಂಡು ಹೆಣ್ಣುಗಳ ಸಂಬಂಧದ ಗ್ರಾಫ್, ಮದುವೆಯೆಂಬ ಒಂದು ಆಚರಣೆಯ ಒಳಗೆ ಕಾಲಕಾಲಕ್ಕೆ ಬದಲಾಗುವ ಸಹಜ ಗುಣಸ್ವಭಾವವನ್ನು, ಜೀವನದಲ್ಲಿ ಮದುವೆಯೆಂಬ ನಾಟಕವನ್ನು ಆಡುವ ಬಗೆಯನ್ನು ತಮಾಷೆಯಾಗಿ ನೋಡುತ್ತಲೇ ವಾಸ್ತವದ ಪರಿಚಯವನ್ನು ಮಾಡಿಕೊಡಲು ಈ ದೃಶ್ಯದೊಳಗೊಂದು ನಾಟಕ ಕಟ್ಟುವ ಪ್ರಯತ್ನ ಮಾಡಲಾಯಿತು. ಮದುವೆಯೆಂಬ ನಾಟಕದ ಆಟವನ್ನು ಈ ಪದ್ಯದೊಳಗೆ ಇಟ್ಟು ರಂಗದ ಮೇಲೆ ತರಲಾಯಿತು. ಇದನ್ನು ಅರ್ಥೈಸುವ ಇಬ್ಬರು ಅನುಭವಸ್ತರು ಅದನ್ನು ವ್ಯಾಖ್ಯಾನಿಸುವ ಹಾಗೆ ದೃಶ್ಯ ಕಟ್ಟಲಾಯಿತು.

'ಲಾಲಿದೀಪ' ದಲ್ಲಿ ದಾರಿಯಲ್ಲೂ ದೀಪವಿಲ್ಲ, ಮನೆಯೊಳಗೂ ಎಣ್ಣೆ ಮುಗಿದು ದೀಪ ನಂದಿದೆ. ಆದರೆ ಮನೆಯೊಳಗೆ ತಾಯಿ ಮಗುವಿಗೆ ಲಾಲಿ ಹಾಡುತ್ತಾ ಸೀಮೆಯನ್ನು ಮನೆಯೊಳಗೆ ತಂದು ನಿಲ್ಲಿಸುತ್ತಾಳೆ. ಲಕ್ಷದೀಪೋತ್ಸವ ತೋರಿಸುತ್ತಾಳೆ. ಮುಚ್ಚಿದೆವೆಯೊಳಗೇ ಮಗು ನಗುತ್ತದೆ. ಮುಚ್ಚಿದೆವೆಯೊಳಗೇ ಮಗು ಅಳುತ್ತದೆ. ಈ ಕವನವನ್ನು ದೃಶ್ಯಕ್ಕೆ ತರುವಾಗ ರಂಗಮಂದಿರದ ಬೆಳಕನ್ನು ಬಳಸದೆ ಕತ್ತಲು ತುಂಬಿದ ರಂಗಮಂದಿರದಲ್ಲಿ ತಾಯಿಯ ಲಾಲಿ ಹಾಡು ಮಾತ್ರ ಕೇಳಿಸುತ್ತಿರುತ್ತದೆ. ದೀಪೋತ್ಸವದ ಸಂಭ್ರಮ ಹುಟ್ಟಿಸುವಂತಹ ಬೇರೆ ಬೇರೆ ಆಕಾರದ ಬಿದಿರಿನ ಹಿಡಿಕೆಗಳು ನಿಧಾನವಾಗಿ ರಂಗ ಪ್ರವೇಶಿಸುತ್ತವೆ. ಚಲಿಸುತ್ತದೆ. ಬೇರೆ ಬೇರೆ ಆಕಾರಗಳಲ್ಲಿ ದೀಪದ ಹಿಡಿಕೆಗಳು ಚಲಿಸುತ್ತಾ ನಿರ್ಗಮಿಸುತ್ತವೆ. ಈ ಬೆಳಕಿನಲ್ಲಿ ತಾಯಿ ಮಗುವಿಗೆ ಲಾಲಿ ಹಾಡುತ್ತಾ ಮಲಗಿಸುತ್ತಿರುವುದು ಕಾಣಿಸುತ್ತದೆ.

ಹೀಗೆ ಆವರಣ, ಬೆಳಕು, ವಿನ್ಯಾಸ, ರಂಗಕೃತಿ, ಆಂಗಿಕ ಚಲನೆ, ನಟನೆ, ವಾಚನ ಮುಂತಾದ ಹಲವು ಮಾರ್ಗಗಳ ಮೂಲಕ ಈ ಇಡೀ ವ್ಯಾನಿಟಿಬ್ಯಾಗ್ ಎಂಬ ಪ್ರಸ್ತುತಿಯನ್ನು ಕಾವ್ಯಾತ್ಮಕ ನೆಲೆಯಲ್ಲಿಯೇ ದರ್ಶಿಸಲು ಪ್ರಯತ್ನಿಸಿದ್ದೇವೆ.

ಕಲಾವಿದರೂ ಕೂಡ ವೈದೇಹಿಯವರ ಕವನವನ್ನು ಓದುತ್ತಾ, ಅರ್ಥ ಮಾಡಿಕೊಳ್ಳುತ್ತಾ ಆನಂದಿಸುವ, ಅನುಭವಿಸುವ ಹಲವಾರು ಪ್ರಕ್ರಿಯೆಗಳಿಗೆ ಒಡ್ಡಿಕೊಂಡಿದ್ದಾರೆ. ಅರ್ಥವಾಗದೇ ಪೇಚಾಡಿದ್ದಾರೆ. ಚರ್ಚೆ ಮಾಡಿದ್ದಾರೆ. ವ್ಯಾನಿಟಿಬ್ಯಾಗ್ ಎಂಬ ಹೆಣ್ಣು ಮಕ್ಕಳ ಖಾಸಗಿ ಆವರಣದ ಹಾಗೆಯೇ ಗಂಡುಮಕ್ಕಳಿಗೂ ಒಂದು ಖಾಸಗಿ ಎನಿಸುವಂತಹ ಆವರಣ ಇರುತ್ತದೆ ಎಂದೂ ಮಾತನಾಡಿಕೊಂಡಿದ್ದಾರೆ. ಹೌದು ಪ್ರತಿಯೊಬ್ಬರಿಗೂ ಒಂದೊಂದು ಖಾಸಗಿ ಆವರಣ ಬೇಕು ಮತ್ತು ಅದು ಇರುತ್ತದೆ. ಅದರೊಳಗೆ ಯಾರೂ ಎಂದೂ ಕೆಟ್ಟ ಕುತೂಹಲದಲ್ಲಿ ಇಣುಕಬಾರದು. ಅದನ್ನು ಗೌರವ ಘನತೆಯಿಂದ ಅರ್ಥಮಾಡಿಕೊಳ್ಳುವುದು ಮುಖ್ಯ ಎಂಬ ಸತ್ಯವನ್ನು ಮನಗಂಡಿದ್ದಾರೆ.



# ಅಮ್ಮಚ್ಚಿಯೆಂಬ ನೆನಪು

✦ ಚಂಪಾ ಶೆಟ್ಟಿ

ಹಿಂದೆ ಪ್ರಜಾವಾಣಿಯಲ್ಲಿ ಖ್ಯಾತ ವಿಮರ್ಶಕರಾದ ಡಾ.ಆಶಾದೇವಿಯವರು ಬರೆಯುತ್ತಿದ್ದ ಕಥೆ, ಕಾದಂಬರಿಗಳಲ್ಲಿನ ಪಾತ್ರಗಳನ್ನು ಕುರಿತಾದ ವಿಶೇಷ ಅಂಕಣವನ್ನು ತಪ್ಪದೆ ಓದುತ್ತಿದ್ದೆ. ಅವುಗಳಲ್ಲಿ ಕೆಲವು ನಾನು ಓದಿದ್ದ ಕತೆಗಳಾದರೆ, ಕೆಲವು ಓದದೇ ಇದ್ದ ಕತೆಗಳ ಪಾತ್ರಗಳೂ ಇರುತ್ತಿದ್ದವು. ಹಾಗೆ ಓದುವಾಗ ನನಗೆ ಸಿಕ್ಕವರೇ 'ಅಕ್ಕು' ಮತ್ತು ವೈದೇಹಿ ಮೇಡಂ. ಓದಿದಾಗ, ವಿಮರ್ಶೆಯಲ್ಲಿಯೇ ಇಷ್ಟು ಸೆಳೆಯುವ ಅಕ್ಕು ಇನ್ನು ಕತೆಯಲ್ಲಿ ಹೇಗಿರಬಹುದು? ಎಂದು ಕುತೂಹಲದಿಂದ. ಅಂದೇ ಹೋಗಿ 'ವೈದೇಹಿ ಕತೆಗಳು' ಪುಸ್ತಕವನ್ನು ಕೊಂಡು ತಂದೆ.

ಒಬ್ಬ ರಂಗ ನಿರ್ದೇಶಕಿಯಾಗಿ ನಾನು ಕತೆ ಕಾದಂಬರಿಗಳನ್ನು ಓದುವಾಗ ಅವುಗಳಲ್ಲಿ ರಂಗಸಾಧ್ಯತೆ ಇದೆಯೇ? ಎಂಬ ಸಣ್ಣ ಬಯಕೆ ಸದಾ ಸುಪ್ತವಾಗಿರುತ್ತದೆ. ಅಕ್ಕುವನ್ನು ಓದುತ್ತಿದ್ದಂತೆಯೇ 'ಅಕ್ಕು' ರಂಗದ ಮೇಲೆ ಬರಬೇಕೆಂಬ ಆಸೆ ಬಲವಾಯಿತು. ಕೂಡಲೇ ನಾನು ಓಡಿದ್ದು ನಮ್ಮ ತಂಡದವರೇ ಆದ ಗೀತಾ ಸುರತ್ಕಲ್ ರವರ ಮನೆಗೆ. ಏಕೆಂದರೆ ಅವರಿಗೆ ವೈದೇಹಿ ಬಹಳ ಆತ್ಮೀಯರೆಂದು ನನಗೆ ಗೊತ್ತಿತ್ತು.

ವೈದೇಹಿಯವರನ್ನು ಕೆಲವು ವೇದಿಕೆಗಳಲ್ಲಿ ಕಂಡಿದ್ದೆನಾದರೂ ಅವರನ್ನು ಎಂದೂ ಮಾತನಾಡಿಸುವ ಅವಕಾಶ ಸಿಕ್ಕಿರಲಿಲ್ಲ. ಆಗ ನನ್ನ ಕಲ್ಪನೆಯಲ್ಲಿದ್ದ ವೈದೇಹಿಯವರಿಗೂ ಮುಂದೆ ನಾನು ಕಂಡ ವೈದೇಹಿಯವರಿಗೂ ಅಜಗಜಾಂತರ ಎಂದು ತಿಳಿದದ್ದು ನಂತರದಲ್ಲಿ. ನನ್ನ ಕಲ್ಪನೆಯ ಪ್ರಕಾರ ವೈದೇಹಿಯವರೆಂದರೆ, ಬಹಳ ಸಿಟ್ಟು, ಯಾರೊಡನೆಯೂ ಹೆಚ್ಚು ಮಾತನಾಡುವುದಿಲ್ಲ. ಹೀಗೆ ನನ್ನದೇ ಕೆಲವು ಊಹೆಗಳಿದ್ದವು. ಆದರೆ ಗೀತಾ ಸುರತ್ಕಲ್‌ರವರನ್ನು ಭೇಟಿ ಮಾಡಿ ಹೀಗೆ ಅಕ್ಕು ನಾಟಕ ಮಾಡಬೇಕೆಂದಿದ್ದೇನೆ. ಅದಕ್ಕೆ ವೈದೇಹಿಯವರ ಅನುಮತಿ ಬೇಕೆಂದಾಗ, ಗೀತಾ, 'ಅದಕ್ಕೇನಂತೆ. ಆ ಜವಾಬ್ದಾರಿ ನನ್ನದು ವೈದೇಹಿ ಖಂಡಿತಾ ಇಲ್ಲ ಎನ್ನುವುದಿಲ್ಲ' ಎಂದಾಗ ನನಗೆ ಒಮ್ಮೆಲೇ ಆಶ್ಚರ್ಯ, ಅನುಮಾನ. ಆದರೆ ಗೀತಾರವರು ಕೊಟ್ಟ ಭರವಸೆಯ ಮೇಲೆ ಅಕ್ಕುವನ್ನು ರಂಗದ

ಮೇಲೆ ತರಲು ಮನದಲ್ಲಿಯೇ ತಯಾರಿ ನಡೆಸಿ ನಂತರ ಅವರ ಅನುಮತಿ ಪಡೆಯಲು ನಾನು ಮತ್ತು ಗೀತಾ ಸುರತ್ಕಲ್ ಹೊರಟದ್ದು ನೇರ ಮಣಿಪಾಲ್‌ಗೆ. ಗೀತಾ ಎಷ್ಟೇ ಹೇಳಿದ್ದರೂ ನನ್ನೊಳಗೊಂದು ರೀತಿಯ ಭಯ, ಆತಂಕ ಕಾಡುತ್ತಲೇ ಇತ್ತು. ಆದರೆ ವೈದೇಹಿಯವರ ಮನೆಗೆ ಹೋಗಿ ಅವರನ್ನು ಭೇಟಿ ಮಾಡಿದ ಘಳಿಗೆ ನಿಜಕ್ಕೂ ಅವರ ಬಗೆಗಿದ್ದ ನನ್ನ ಅನಿಸಿಕೆಗಳೂ ಪೂರಾ ತಲೆಕೆಳಗಾಗಿದ್ದವು.

ಅಂದು ನಾನು ವೈದೆಹಿಯವರಲ್ಲಿ ಕಂಡದ್ದು ಒಬ್ಬ ತಾಯಿಯ ಮಮತೆ ಎಂದರೆ ನಿಜಕ್ಕೂ ಉತ್ಪ್ರೇಕ್ಷೆಯಲ್ಲ. ಅಂದು ನಾಟಕ ಮಾಡಲು ಅನುಮತಿ ನೀಡಿದ್ದರ ಜೊತೆಗೆ, ಮಧ್ಯಾಹ್ನ ರೊಟ್ಟಿ ಊಟ ಮತ್ತು ರೈಲಿಗೆ ಪ್ರೀತಿಯ ಮೊಸರನ್ನದ ಬುತ್ತಿ ತಾಯಿಯಂತೆ ಇನ್ನಾರು ಕೊಡಲು ಸಾಧ್ಯ? ನಾನು ಯಾರು, ನನ್ನ ಹಿನ್ನೆಲೆ ಏನು? ನಾಟಕ ಹೇಗೆ ಮಾಡಬಹುದು? ಎಂಬ ಯಾವ ಚಿಂತೆಯೂ ಮಾಡದೆ 'ಒಬ್ಬ ಹೆಣ್ಣುಮಗಳು ಪ್ರಯತ್ನ ಮಾಡುತ್ತಿದ್ದೀಯಾ ಎಂದರೆ ನನ್ನ ಬೆಂಬಲ ಇದ್ದೇ ಇರುತ್ತದೆ' ಎಂದು ಒಂದೇ ಮಾತಿನಲ್ಲಿ ಅನುಮತಿ ನೀಡಿದ್ದರು.

ಆದರೆ ಎರಡು ಷರತ್ತುಗಳ ಜೊತೆಗೆ. ಒಂದು ನಾಟಕದಲ್ಲಿ ಶುದ್ಧ ಕುಂದಾಪುರ ಭಾಷೆ ಬಳಸಬೇಕು. ಇನ್ನೊಂದು ನಾಟಕ ನೋಡಲು ಅವರನ್ನು ಕರೆಯಬಾರದು ಎಂದು. ನಾನು ಎರಡಕ್ಕೂ ಒಪ್ಪಿದೆ. ಹಾಗೇ ಕುಂದಾಪುರ ಭಾಷೆ ಅಂದರೆ ನೀವೇ ಸಂಭಾಷಣೆ ಬರೆದು ಕೊಡುತ್ತೀರಾ ಎಂದು ಆತಂಕದಲ್ಲಿಯೇ ಕೇಳಿದ ನನಗೆ ಪ್ರೀತಿಯಿಂದಲೇ ಒಪ್ಪಿಗೆ ಸೂಚಿಸಿದ್ದು ವೈದೇಹಿ.

'ಅಕ್ಕು' ರಂಗದ ಮೇಲೆ ಬರಲು ತಯಾರಿ ಭರದಿಂದ ಸಾಗಿತು. 'ಅಕ್ಕು' ಕತೆ ಕೆಲವು ಘಟನಾವಳಿಗಳನ್ನೊಳಗೊಂಡಿದೆ. ಅದನ್ನು ನಾಟಕವಾಗಿಸುವುದು ಹೇಗೆ? ಎಂಬ ಪ್ರಶ್ನೆ ನನ್ನ ಮುಂದಿತ್ತು. ಅಕ್ಕುಗೆ ಹಿನ್ನೆಲೆ ಅಥವಾ ಮುನ್ನೆಲೆ ಸೇರಿದರೆ ಎಂಬ ಆಲೋಚನೆ ಬಂತು. ನಂತರ ಹಾಗೆ ಮಾಡಿದರೆ ನಿಜಕ್ಕೂ ಅಕ್ಕುವನ್ನು ಹಾಳುಗೆಡವುತ್ತೇನೆ ಎನಿಸಿತು ಕೂಡ. ನನ್ನ ಯಾವ ಕಲ್ಪನೆಗಳನ್ನು ಸೇರಿಸದೆ ಕತೆಯನ್ನು ಇದ್ದ ಹಾಗೆ ತರಬೇಕೆಂಬ ಹಟದಲ್ಲಿ ಚಿಂತಿಸಿದಾಗ ನನಗೆ ಹೊಳೆದದ್ದು ಅಕ್ಕು. ಜೊತೆಗೆ ಅಂತಹುದೇ ಅದ್ಭುತ ಪಾತ್ರಗಳಾದ ಪುಟ್ಟಮ್ಮತ್ತೆ ಮತ್ತು ಅಮ್ಮಚ್ಚಿ. ಹಾಗಾಗಿ ಈ ಮೂರು ಕತೆಗಳನ್ನು ಸೇರಿಸಿ ಚಿತ್ರಕತೆ ಸಿದ್ಧಪಡಿಸಿಕೊಂಡು, ಮತ್ತೊಮ್ಮೆ ಗೀತಾ ಜೊತೆ ಮಣಿಪಾಲ್‌ಗೆ ಹೊರಟೆ. ಚಿತ್ರಕತೆ ನೋಡಿ ವೈದೇಹಿ ಏನನ್ನುವರೋ ಎಂಬ ದೊಡ್ಡ ಆತಂಕದಲ್ಲಿಯೇ ಅವರ ಮನೆ ಮುಟ್ಟಿದೆವು. ಆದರೆ ಚಿತ್ರಕತೆ ನನ್ನಿಂದಲೇ ಓದಿ ಕೇಳಿ ಇಷ್ಟಪಟ್ಟು ವಾರದೊಳಗೆ ಸಂಭಾಷಣೆಯನ್ನೂ ಬರೆದು ಅದ್ಭುತವಾದ ನಾಟಕ ರಚಿಸಿಕೊಟ್ಟಿದ್ದು ಮರೆಯಲಾಗದ ಘಟನೆ.

ನಾಟಕ ಸಿದ್ಧಗೊಂಡಿತು. ಮೊದಲ ಪ್ರದರ್ಶನವೇ ಅಪಾರ ಜನಮೆಚ್ಚುಗೆ ಗಳಿಸಿದರೂ ನನಗೆ ಎರಡು ದೊಡ್ಡ ಬೇಸರದ ಸಂಗತಿಗಳು ಘಟಿಸಿದವು. ಒಂದು ಮೊದಲ ಪ್ರದರ್ಶನದ ಹಿಂದಿನ ದಿನವೇ ನನ್ನ 'ಅಮ್ಮ'ನನ್ನು ಕಳೆದುಕೊಂಡದ್ದು. ಮತ್ತೊಂದು ಷರತ್ತಿನಂತೆ ವೈದೇಹಿಯವರು ಮೊದಲ ಪ್ರದರ್ಶನಕ್ಕೆ ಬಾರದೆ ಇದ್ದದ್ದು. ಆದರೆ ಆ ಬೇಸರ ದೂರವಾದದ್ದು ಮುಂದೆ ಮುಂಬೈ ಕನ್ನಡ ಸಂಘದಲ್ಲಿ ಮೂರನೆ ಪ್ರದರ್ಶನವಾದಾಗ. ಅಲ್ಲಿ ಅತಿಥಿಯಾಗಿದ್ದ ವೈದೇಹಿಯವರು ಅನಿವಾರ್ಯವಾಗಿ ನಾಟಕ ನೋಡಿದಾಗ. ನಾಟಕದ ಪ್ರದರ್ಶನದ ನಂತರ ನನ್ನನ್ನು ಆಲಂಗಿಸಿ, ವೈದೇಹಿಯವರು ಕಣ್ತುಂಬಿ ಹೇಳಿದ ಮೆಚ್ಚುಗೆಯ ಮಾತುಗಳಿಂದ ನನ್ನ ಕಣ್ಣುಗಳೂ ತುಂಬಿದ್ದವು. ಕತೆಗಾರರು ನಾಟಕ ನೋಡಲೇಬಾರದು, ನಿರ್ದೇಶಕರಿಗೆ ತೊಂದರೆ, ಹಾಗಾಗಿ ನನ್ನನ್ನು ಕರೆಯಬೇಡ ಎಂದು ಪ್ರೀತಿಯಿಂದಲೇ ನಾಟಕಕ್ಕೆ ಬರುವುದಿಲ್ಲವೆಂದಿದ್ದ ವೈದೇಹಿಯವರು ಮುಂದೆ ರಂಗಶಂಕರದಲ್ಲಿ ನೀವು ನಾಟಕ ನೋಡಲೇಬೇಕು ಎಂಬ ನನ್ನ ಇನ್ನಿಲ್ಲದ ಆಸೆಗೆ ತಮ್ಮ ಖರ್ಚಿನಿಂದಲೇ ಬೆಂಗಳೂರಿಗೆ ಬಂದು ಒಂದೇ ದಿನ ಎರಡು ಪ್ರದರ್ಶನ ವೀಕ್ಷಿಸಿ, ಆ ರಾತ್ರಿಯೆ ಹೊರಟುಹೋದರು. ಇದು ನಮ್ಮ 'ರಂಗ ಮಂಟಪ' ತಂಡದ ಪುಣ್ಯವೆಂದೇ ಭಾವಿಸುವೆ.

ನನ್ನ ಕಿರಿದಾದ ಅನುಭವದಲ್ಲಿ ನಾನು ನಿರ್ದೇಶಿಸಿದ್ದ ನಾಟಕವನ್ನು ಮೆಚ್ಚಿ ಬೆನ್ನು ತಟ್ಟಿದ್ದು ಪ್ರೋತ್ಸಾಹಿಸಿದ್ದು ವೈದೇಹಿಯವರ ಹಿರಿತನ. ಅವರ ಆ ನಿರಂತರ ಪ್ರೋತ್ಸಾಹದಿಂದಲೇ ಅಕ್ಕು 49 ಯಶಸ್ವಿ ಪ್ರದರ್ಶನಗಳನ್ನು ಕಂಡು 50 ಕ್ಕೆ ಕಾಲಿಟ್ಟಿದ್ದಾಳೆ. ಹಾಗೂ ಅದೇ ಪ್ರೋತ್ಸಾಹದಿಂದಲೇ ನಾನು ಅಮ್ಮಚ್ಚಿಯನ್ನು ಬೆಳ್ಳಿತೆರೆಗೆ ತರುವ ದೊಡ್ಡ ಸಾಹಸಕ್ಕೆ ಕೈ ಹಾಕಿದೆ. ಈ ಎಲ್ಲ ಪ್ರೋತ್ಸಾಹಕ್ಕೆ, ಕಾಳಜಿಗೆ, ಪ್ರೀತಿಗೆ ವೈದೇಹಿ ಮೇಡಂಗೆ ಹಾಗೂ ಶ್ರೀನಿವಾಸಮೂರ್ತಿ ಸರ್ಗೆ ಒಂದು ದೊಡ್ಡ ನಮನ.



# ಗುಲಾಬಿ ಟಾಕೀಸು : ಆಧುನಿಕತೆಯೊಂದಿಗಿನ ಅನುಸಂಧಾನದ ಮಾದರಿ

✦ ಟಿ ಅವಿನಾಶ್

ಆರ್ದ್ರ ಗರ್ವದ ಲೇಖಕಿ ಎಂದು ವಿಮರ್ಶಕರಿಂದ ಗುರುತಿಸಲ್ಪಡುವ ವೈದೇಹಿಯವರ ಕಥಾ ಪ್ರಪಂಚಕ್ಕೆ ಹಲವು ಸಂಕೀರ್ಣ ಆಯಾಮಗಳಿವೆ. ಅದು ಸ್ತ್ರೀಲೋಕವನ್ನು ಅದರೆಲ್ಲಾ ಸಂಕೀರ್ಣತೆಗಳಿಂದ ದಾಖಲಿಸುತ್ತದೆ ಎಂಬುದು ನಿಜ. ಇಲ್ಲಿ ಸ್ತ್ರೀಲೋಕದ ಹಲವು ವಿಭಿನ್ನ ಆಯಾಮಗಳು ಸಹಜವಾಗಿಯೇ ರೂಪುಗೊಂಡು ನಿರೂಪಿತವಾಗಿವೆ. ಇದರ ಜೊತೆಗೆ ವೈದೇಹಿಯವರ ಕಥನ ಆಧುನಿಕತೆ ಎಂಬ ಪರಿಕಲ್ಪನೆಯನ್ನು ಅನುಸಂಧಾನ ಮಾಡುವ ಕ್ರಮ ನನಗೆ ವಿಶಿಷ್ಟ ಎನ್ನಿಸಿದೆ. ಕಳೆದ ಎರಡು ಶತಮಾನಗಳಿಂದಲೂ ನಡೆಯುತ್ತಿರುವ ಆಧುನಿಕತೆಯೊಂದಿಗಿನ ಅನುಸಂಧಾನದ ಒಂದು ಮಾದರಿ ವೈದೇಹಿಯವರ ಕಥನ ಪ್ರಪಂಚದಲ್ಲಿ ನಿರೂಪಿತವಾಗಿದೆ.

ಇವರ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಕತೆಯನ್ನೇ ಪ್ರಧಾನವಾಗಿಟ್ಟುಕೊಂಡು ಆಧುನಿಕತೆಯೊಂದಿಗಿನ ಅನುಸಂಧಾನದ ನೋಟಕ್ರಮವನ್ನು ಚರ್ಚಿಸಬಹುದು. ಈ ಬಗೆಯ ಸೈದ್ಧಾಂತಿಕ ಚರ್ಚೆ ವೈದೇಹಿಯವರ ಕಥನವನ್ನು ವ್ಯಾಖ್ಯಾನಿಸಲು ಅತ್ಯಗತ್ಯವಾಗಿ ಬೇಕಾಗುತ್ತದೆ. ಆದ್ದರಿಂದ ವೈದೇಹಿಯವರ ಕಥನಕ್ಕೆ ಚಾರಿತ್ರಿಕ, ಸೈದ್ಧಾಂತಿಕ ಆಯಾಮವಿರುವುದನ್ನು ಗುರುತಿಸಿಕೊಂಡು ಈ ಲೇಖನ ವೈದೇಹಿಯವರ ಕಥೆಗಳಿಗೆ ಕನ್ನಡ ಸಾಹಿತ್ಯ ಪರಂಪರೆಯೊಂದಿಗಿರುವ ಸಾತತ್ಯವನ್ನೂ ಸಹ ಗುರುತಿಸುವ ಪ್ರಯತ್ನ ಮಾಡುತ್ತದೆ. ಈ ಕತೆಯನ್ನು ಆಳವಾಗಿ ವಿಶ್ಲೇಷಿಸುವ ಮೊದಲು ಆಧುನಿಕತೆ ಎಂಬ ಪರಿಕಲ್ಪನೆ ಭಾರತವನ್ನು ಪ್ರವೇಶಿಸಿದಾಗ ಎದ್ದ ದೊಡ್ಡ ಅಲೆಗಳು ಮತ್ತು ಅದನ್ನು ಬೇರೆ ಬೇರೆ ಲೇಖಕ/ಚಿಂತಕರು ಸ್ವೀಕರಿಸಿದ ಬಗೆಯನ್ನು ಕುರಿತು ಚಿಕ್ಕದಾಗಿ ಚರ್ಚಿಸೋಣ.

**ಸೈದ್ಧಾಂತಿಕ ಚೌಕಟ್ಟು:**

ಪಶ್ಚಿಮ ಮೂಲದ ಆಧುನಿಕತೆ (Modernity) ಎಂಬ ಪರಿಕಲ್ಪನೆ ಭಾರತೀಯ ಸಾಂಸ್ಕೃತಿಕ-ಸಾಮಾಜಿಕ-ರಾಜಕೀಯ ಪರಿಸರವನ್ನು ಪ್ರವೇಶಿಸಿದಾಗ ಸೃಷ್ಟಿಯಾದ

ಗೊಂದಲಗಳು, ತಂದಿಟ್ಟ ದ್ವಂದ್ವ, ಆತಂಕ-ಸಂಕಟಗಳು ಅಪಾರ. ವಸಾಹತುಶಾಹಿ ಆಡಳಿತ ತನ್ನ ಸಾಮ್ರಾಜ್ಯದ ಸ್ಥಾಪನೆ ಮತ್ತು ವಿಸ್ತರಣೆಗಾಗಿ ಈ ಜ್ಞಾನಯುಗದ ಆಧುನಿಕತೆಯನ್ನು ಒಂದು ಆಯುಧವನ್ನಾಗಿ ಬಳಸಿಕೊಂಡಿತು ಎಂಬುದನ್ನು ಮೀಮಾಂಸಕರು ಈಗಾಗಲೇ ಪುರಾವೆಗಳ ಸಮೇತರಾಗಿ ಚರ್ಚಿಸಿದ್ದಾರೆ.

ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಪಾಶ್ಚಿಮಾತ್ಯ ವಿಜ್ಞಾನ-ತಂತ್ರಜ್ಞಾನ ಪ್ರಣೀತ 'ಹೊಸಜ್ಞಾನ' ಭಾರತದಲ್ಲಿ ಒಂದು ದೊಡ್ಡ ಅಲೆಯನ್ನೇ ಎಬ್ಬಿಸಿತು. ತನ್ನ ಪಾಡಿಗೆ ನಿರುಮ್ಮಳವಾಗಿದ್ದ ಭಾರತೀಯ ನಾಗರೀಕತೆ ಈ ತೀವ್ರ ಸ್ವರೂಪಿ ಮುಖಾಮುಖಿಗೆ ತನ್ನನ್ನು ತಾನು ತೆರೆದುಕೊಂಡಿತು. ಈ ಪ್ರಕ್ರಿಯೆಗೆ ಹಲವಾರು ಆಯಾಮಗಳು, ಬಗೆ ಬಗೆಯ ಪ್ರತಿಕ್ರಿಯೆಗಳಿದ್ದರೂ, ಸ್ಥೂಲವಾಗಿ ಎರಡು ಮುಖ್ಯವಾದ ನೆಲೆಗಳಲ್ಲಿ ಈ ಆಧುನಿಕತೆ ತಂದಿಟ್ಟ ಹೊಸ ಮೌಲ್ಯಗಳನ್ನು ಅರ್ಥೈಸಬಹುದು. ಒಂದು – ಜ್ಞಾನಯುಗದ ಆಧುನಿಕತೆಗಿದ್ದ ವೈಚಾರಿಕ, ಸೆಕ್ಯುಲರ್ ಆಯಾಮಗಳು ಇಲ್ಲಿನ ನಾಗರೀಕತೆ/ ಸಮುದಾಯಗಳಲ್ಲಿದ್ದ ನ್ಯೂನತೆಗಳನ್ನು ಎತ್ತಿ ತೋರಿಸಿದ್ದರಿಂದ ನಾವು ನಮ್ಮನ್ನು ಪುನರ್ ಪರಿಶೀಲಿಸಿಕೊಳ್ಳಲು ಅದು ಸಹಾಯ ಮಾಡಿತು. ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳಿಗೆ, ದಲಿತರಿಗೆ ಮತ್ತು ಸ್ತ್ರೀ ಪ್ರಪಂಚಕ್ಕೆ ಈ ಬಗೆಯ ಆಧುನಿಕತೆ ಮತ್ತು ತಾಂತ್ರಿಕತೆಗಳು ಧ್ವನಿ ನೀಡಿ ಬಿಡುಗಡೆಯ ಆಯಾಮವನ್ನು ಒದಗಿಸಿದವು. ಆಧುನಿಕತೆ ತಂದಿಟ್ಟ ಹೊಸ ಬಗೆಯ ಮೌಲ್ಯಗಳು ಸಮುದಾಯಗಳಿಗೆ ಹೊಸ ಬಗೆಯ ಅವಕಾಶವನ್ನು ಸಹ ಕಲ್ಪಿಸಿದವು. ಆದ್ದರಿಂದ ಆಧುನಿಕತೆಯನ್ನು ಬಿಡುಗಡೆಯ ಮತ್ತು ಸಾಮಾಜಿಕ ಚಲನೆಯ ಸಂಕೇತವಾಗಿ ಹಲವು ಬರಹಗಾರರು ಗ್ರಹಿಸಿದ್ದಾರೆ.

ಮತ್ತೊಂದು, ಈ ಪಾಶ್ಚಿಮಾತ್ಯ ಪ್ರಣೀತ ಆಧುನಿಕತೆಗೆ ವಿನಾಶದ ಇನ್ನೊಂದು ಆಯಾಮವೂ ಇದೆ. ಆಶಿಶ್ ನಂದಿ, ಡಿ.ಆರ್.ನಾಗರಾಜ ತರಹದ ವಸಾಹತೋತ್ತರ ಚಿಂತಕರು ವಾದಿಸುವಂತೆ ಆಧುನಿಕತೆ ಎಂಬ ಪ್ರಕ್ರಿಯೆ ಹಿಂಸೆಯೊಂದಿಗೆ ತಳುಕು ಹಾಕಿಕೊಂಡಿದೆ. ತಂತ್ರಜ್ಞಾನ-ವಿಜ್ಞಾನ-ವೈಚಾರಿಕತೆಗಳು ಪಾಶ್ಚಿಮಾತ್ಯ ಜೀವನಕ್ರಮವನ್ನು ಉತ್ಕೃಷ್ಟ ಎಂದು ಬಿಂಬಿಸಿದ್ದರಿಂದ ಸ್ಥಳೀಯ ಜ್ಞಾನಶಾಖೆಗಳು, ಜೀವನಕ್ರಮಗಳು, ಸರ್ವನಾಶದ ಅಂಚಿಗೆ ತಳ್ಳಲ್ಪಟ್ಟವು. ಆಧುನಿಕತೆಯು ತನ್ನದಲ್ಲದ ಜೀವನಕ್ರಮ, ಜ್ಞಾನಶಾಖೆಗಳನ್ನು ಅನುಪಯುಕ್ತ ಎಂದು ತಿರಸ್ಕರಿಸಿದ್ದರಿಂದ ವಸಾಹತೀಕರಣಕ್ಕೆ ಒಳಗಾದ ಸಮುದಾಯಗಳ ಅಸ್ಮಿತೆ (identity) ನಾಶವಾಯಿತು ಎಂಬುದು ಈ ಮೀಮಾಂಸಕರ ವಾದ.

ಅಂದರೆ, ಆಧುನಿಕತೆಯೊಂದಿಗಿನ ಭಾರತೀಯ ಲೇಖಕ-ಲೇಖಕಿಯರ ಅನುಸಂಧಾನಕ್ಕೆ ದ್ವಂದ್ವಾತ್ಮಕ ಆಯಾಮವಿದೆ. ಅದನ್ನು ಪೂರ್ತಿಯಾಗಿ ಒಪ್ಪಿಕೊಳ್ಳದ ಮತ್ತು ಸಂಪೂರ್ಣವಾಗಿ ನಿರಾಕರಿಸದ ಒಂದು ನೋಟಕ್ರಮವನ್ನು ಭಾರತೀಯ ಲೇಖಕರಲ್ಲಿ

ನಾವು ಕಾಣಬಹುದು. ವೈದೇಹಿಯವರ ಕಥನ ಪ್ರಪಂಚವೂ ಇದಕ್ಕೆ ಹೊರತಲ್ಲ. ಗುಲಾಬಿ ಟಾಕೀಸು ಕತೆ ಈ ಬಗೆಯ ಬಿಡುಗಡೆ, ಬೆರಗು ಮತ್ತು ಬೆಂಕಿಯ ಆಯಾಮವನ್ನು ನಮ್ಮೆದುರಿಗೆ ಬಹಳ ಪರಿಣಾಮಕಾರಿಯಾಗಿ ದಾಖಲಿಸುತ್ತದೆ. ಉದಾ: ಈ ಕತೆಯಲ್ಲಿ ಬರುವ ಲಿಲ್ಲಿಬಾಯಿಯ ಪಾತ್ರ ಹೊಸದಾದ ಟಾಕೀಸಿನ ಪ್ರವೇಶದಿಂದ ಅನುಭವಿಸುವ ಬೆರಗು, ಆಕರ್ಷಣೆ ಹಾಗೂ ಕಾಲಾನಂತರದಲ್ಲಿ ಆಗುವ ಭ್ರಷ್ಟತೆ ನನ್ನ ಈ ಮೇಲಿನ ಮಾತನ್ನು ಸಾಕ್ಷೀಕರಿಸುತ್ತದೆ.

ಕಥಾಸಂಕಲನದ ಶೀರ್ಷಿಕೆ 'ಗುಲಾಬಿ ಟಾಕೀಸು ಮತ್ತು ಸಣ್ಣ ಅಲೆಗಳು' ಎಂದಿರುವುದು ಗಮನಾರ್ಹವಾಗಿದೆ. ಸಣ್ಣ ಊರು ಅಥವಾ ಮಾಫುಸಿಲ್ ಶಹರದಲ್ಲಿ ನಡೆಯುವ ಈ ಕತೆಯಲ್ಲಿ 'ಹೆಂಗಳೆಯರು ಸ್ವಂತ ಕಾಲುಗಳಿಂದ ನಡೆಯುವ' ಪ್ರಕ್ರಿಯೆ ವೇಗ ಪಡೆದುಕೊಂಡಿದ್ದನ್ನು ಪರಿಣಾಮಕಾರಿಯಾಗಿ ಅನಾವರಣಗೊಳಿಸಲಾಗಿದೆ. ಗುಲಾಬಿ ಎಂಬ ಮಹಿಳೆ ಕಟ್ಟಿಸಿದ ಟೂರಿಂಗ್ ಟಾಕೀಸ್ ಆ ಊರಿನಲ್ಲಿ ತಂದಿಟ್ಟ ಬದಲಾವಣೆ ಮತ್ತು ಪಲ್ಲಟಗಳು ಈ ಕಥೆಯ ಪ್ರಮುಖ ಆಶಯಗಳಲ್ಲೊಂದಾಗಿದೆ. ಕಥೆ ಪ್ರಾರಂಭವಾಗುವುದೇ ಪುರುಷ ಪ್ರಪಂಚ ಮತ್ತು ಸ್ತ್ರೀ ಪ್ರಪಂಚದ ನಡುವೆ ಇರುವ ತಾರತಮ್ಯ ಹೇಗೆ ನಮ್ಮ ಸಮಾಜದಲ್ಲಿ ಅವು ಬಹಳ ಸಹಜವಾದ ರಚನೆಗಳು ಎಂಬಂತೆ ಬಿಂಬಿತವಾಗಿದೆ ಎಂಬುದನ್ನು ಎತ್ತಿ ತೋರಿಸುವ ಮೂಲಕ. ಪುರುಷರು ಊರ ಬಯಲಿನಲ್ಲಿ ಕುಳಿತು ಯುದ್ಧ, ಮಳೆ ಮುಂತಾದ 'ದೊಡ್ಡ' ವಿಚಾರಗಳನ್ನು ಚರ್ಚಿಸುತ್ತಿದ್ದರೆ, ಮಹಿಳೆಯರು ಹೂವು ಕಟ್ಟುವುದು, ದೇವರಿಗೆ ದೀಪ ಹಚ್ಚಿ ಭಜನೆ ಮಾಡುತ್ತಲೇ ಕಾಲ ಕಳೆಯುತ್ತಿದ್ದರು. ಹೀಗೆ ಪ್ರಾರಂಭವಾಗುವ ಈ ಕಥೆಗೆ ಒಂದು ದೊಡ್ಡ ಜಿಗಿತ ಸಿಗುವುದು 'ಶಾಂತವಾಗಿ, ನಿಯತ್ತಿನಿಂದ' ಬದುಕುತ್ತಿದ್ದ ಊರಿನಲ್ಲಿ ಸಿನಿಮಾ ಟಾಕೀಸು ಬಂದ ನಂತರ ಆಗುವ ಬದಲಾವಣೆಗಳಿಂದ. ಬಾಂಬೆಯಂತಹ ಬೃಹತ್ ನಗರಕ್ಕೆ ವಲಸೆಯಾದ ಗುಲಾಬಿ ಎಂಬ ಮಹಿಳೆ ಈ ಸಣ್ಣ ಊರಿನಲ್ಲಿ ಮಾಡುವ ಕೆಲಸ ಇಡೀ ಸಮುದಾಯದಲ್ಲೆ ಒಂದು ದೊಡ್ಡ ಸಾಮಾಜಿಕ ಚಲನೆಯನ್ನು ತರುತ್ತದೆ. ಮುಖ್ಯವಾಗಿ ಸೂಲಗಿತ್ತಿಯಾಗಿದ್ದ ಲಿಲ್ಲಿಬಾಯಿ ಎಂಬ ಮಹಿಳೆಯ ಜೀವನದಲ್ಲಿ ಹಠಾತ್ ಬದಲಾವಣೆ ಕಾಣುತ್ತದೆ. ಸಿನೆಮಾ ಆಕರ್ಷಣೆಗೊಳಗಾದ ಆಕೆ ಗೇಟ್ ಕೀಪರ್ ಆಗುವುದು, ಹೆಂಗಳೆಯರಿಗೆ ಸಿನಿಮಾ ಸುದ್ದಿ ನೀಡಿ ಅವರುಗಳು ಸಹ ಮನೆಯಿಂದ ಹೊರಬರುವಂತೆ ಮಾಡುವುದು, ಭಜನೆಗಿಂತ ಹೆಚ್ಚಾಗಿ ಸಿನಿಮಾ ಹಾಡುಗಳು ಜನಪ್ರಿಯವಾಗುವುದು, ಹೊಸಬಗೆಯ ಉಡುಗೆ-ತೊಡುಗೆಗಳ ಪ್ರವೇಶ ಮುಂತಾದ ವಿವರಗಳೆಲ್ಲವೂ ಈ ಆಧುನಿಕತೆಯ ಪ್ರವೇಶಿಕೆಯಿಂದಾಗಿ ಆದ ಬದಲಾವಣೆಗಳ ಸ್ವರೂಪವನ್ನು ಎತ್ತಿ ತೋರಿಸುತ್ತವೆ. ಲಿಲ್ಲಿಬಾಯಿಗೆ ಸಿಕ್ಕ ಹೊಸ ಆರ್ಥಿಕ ಸ್ವಾತಂತ್ರ್ಯ ಅವಳು ತನ್ನ ಹಳ್ಳಿವೃತ್ತಿಯಾದ 'ಬಾಣಂತನದ' ಕೆಲಸವನ್ನು ಬದಿಗೊತ್ತುವಂತೆ ಮಾಡುತ್ತದೆ. ಊರಿನ

ಮಹಿಳೆಯರು ಆಧುನಿಕ ಆಸ್ಪತ್ರೆಯತ್ತ ಅನಿವಾರ್ಯವಾಗಿ ಹೋಗುವ ಪ್ರಕ್ರಿಯೆಯನ್ನು ದಾಖಲಿಸುತ್ತದೆ.

ಕಾಲಕ್ರಮೇಣ, ಊರಿನ ಹೆಂಗಳೆಯರ ಪುರುಷ ಪ್ರಪಂಚದ ಅನೇಕ ಅಲಿಖಿತ ಗಡಿ ಗೆರೆಗಳನ್ನು ಮೀರುವ ಬಹಳ ಮುಖ್ಯವಾದ ಬದಲಾವಣೆಯನ್ನೂ ಕತೆ ಎತ್ತಿ ತೋರಿಸುತ್ತದೆ. ಮೊದಮೊದಲು ಮನೆಯಿಂದ ಹೊರಗೆ ಹೋಗಲು ಪುರುಷರ ಅನುಮತಿ ಕೇಳಬೇಕಾಗಿದ್ದ ಹೆಂಗಳೆಯರು ಮುಂದೆ ಸಿನಿಮಾಕ್ಕೆ ಹೋಗುವುದು ಸಹಜ ಪ್ರಕ್ರಿಯೆ ಎಂಬಂತೆ ವರ್ತಿಸುವುದು ಸಾಮಾಜಿಕ ಚಲನೆಯ ಒಂದು ಮಾದರಿ ಎಂದು ತಿಳಿಯಬಹುದು. ಲಿಲ್ಲಿಬಾಯಿಯ ವ್ಯಕ್ತಿತ್ವಕ್ಕೆ ದಕ್ಕಿದ ಹೊಸ ಅಸ್ಮಿತೆ ಆ ಊರಿನ ಹೆಂಗಳೆಯರ ಬದುಕಿನಲ್ಲಾಗುವ ಬದಲಾವಣೆಗಳ ಸ್ವರೂಪವನ್ನು ಎತ್ತಿ ತೋರಿಸುತ್ತದೆ. ಹೆಣ್ಣುಮಕ್ಕಳ ಸಾಮಾಜಿಕ ಜೀವನದಲ್ಲಾದ ಚಲನೆ ಇಡೀ ಕಥೆಯ ಜೀವಾಳ ಎನ್ನಬಹುದು.

ಹಾಗಾದರೆ ಇದು ಆಧುನಿಕತೆಯ ಏಕಮುಖಿ ವಿಜೃಂಭಣೆಯೆ? ಈ ಪ್ರಶ್ನೆಯನ್ನೇ ಕೇಂದ್ರವಾಗಿಟ್ಟುಕೊಂಡು ನೋಡುವುದಾದರೆ, ಹೊಸ ಮೌಲ್ಯಗಳು, ಹೊಸ ಜೀವನಕ್ರಮ ಒಂದು ಸರಳ ಸಾಂಪ್ರದಾಯಿಕ ಜಗತ್ತನ್ನು ಪ್ರವೇಶಿಸಿದಾಗ ಅನಿವಾರ್ಯವಾಗಿರುವ ಕೆಟ್ಟ ಪದ್ಧತಿ ಕೂಡ ಸಹಜವಾಗಿಯೇ ಸಮುದಾಯದಲ್ಲಿ ಪ್ರವೇಶಿಕೆ ಪಡೆಯುತ್ತದೆ. ಉದಾಹರಣೆ ಎಂದರೆ ಲಿಲ್ಲಿಬಾಯಿ ಗೇಟ್‌ಕೀಪರ್ ಆದಾಗ ಆಕೆ ಭ್ರಷ್ಟಳೂ ಆಗುತ್ತಾಳೆ. ಇದ್ದಬದ್ದವರ ಮೇಲೆಲ್ಲ ಗಾಸಿಪ್ ಕಟ್ಟತೊಡಗುತ್ತಾಳೆ. ಮ್ಯಾನೇಜರ್‌ನ ಅನೈತಿಕ ಸಂಬಂಧವನ್ನು ಗಟ್ಟಿಯಾಗಿ ಹೇಳಿ ಅವನ ಕೆಲಸವನ್ನೇ ತೆಗೆಸುತ್ತಾಳೆ. ಆಕೆ ಗೇಟ್ ಕೀಪರ್ ಆದಾಗ ದಕ್ಕಿದ ಆರ್ಥಿಕ ಸ್ವಾತಂತ್ರ್ಯದಂತೆಯೆ ಅವಳು ಹಣಕಾಸಿನ ದುರುಪಯೋಗಕ್ಕೂ ಮುಂದಾಗುವುದನ್ನು ಲೇಖಕಿ ಗಮನಿಸಿದ್ದಾರೆ. ಅಂದರೆ ಇಲ್ಲಿ ಆಧುನಿಕತೆಯ ಏಕಮುಖೀ ಆರಾಧನೆ ಇಲ್ಲ. ಬದಲಾಗಿ ಅದು ತರುವ ಬೆರಗು, ಆಕರ್ಷಣೆ ಮತ್ತು ಚಲನೆಯ ಜೊತೆಗೆ ಅದರೊಟ್ಟಿಗೆ ಬರುವ ವಿಪತ್ತಿನ ಬಗ್ಗೆಯು ಲೇಖಕಿಗೆ ಗಮನವಿದೆ. ಖ್ಯಾತ ನೈಜೀರಿಯನ್ ಲೇಖಕ ಚಿನುವಾ ಅಚಿಬೆ 'ಥಿಂಗ್ಸ್ ಫಾಲ್ ಅಪಾರ್ಟ್' ಕೃತಿಯಲ್ಲಿ ವಸಾಹತುಷಾಹಿ ಆಧುನಿಕತೆಯ ಆಕರ್ಷಣೆ ಮತ್ತು ಅದರ ಭ್ರಷ್ಟಾಚಾರದ ವಿಕರ್ಷಣೆಯನ್ನು ದಾಖಲಿಸಿದ್ದಾರೆ. ಹಾಗೆಯೇ ಅಬಚೂರಿನ ಪೋಸ್ಟಾಫೀಸ್ ಕತೆ ಆಧುನಿಕತೆ ತರುವ ಸಾಮಾಜಿಕ ಚಲನೆಯ ಜೊತೆಗೆ ಒಂದು ಕುಟುಂಬದ ನೆಮ್ಮದಿಯೇ ಹಾಳಾಗುವ ಆಯಾಮವನ್ನೂ ಗುರುತಿಸುತ್ತದೆ. ಅಂದರೆ ಮೂರನೇ ಜಗತ್ತಿನ ಬರವಣಿಗೆಯಲ್ಲಿ ಆಧುನಿಕತೆ ತಂದಿಡುವ ವಿಭಿನ್ನ ಆಯಾಮಗಳನ್ನು ಬಹಳ ಗಂಭೀರವಾಗಿ ಮತ್ತು ಸಂಕೀರ್ಣವಾಗಿ ಅನುಸಂಧಾನ ಮಾಡಲಾಗಿದೆ. ಈ ಕತೆಯಲ್ಲಿ ಬರುವ ಸಾಮಾಜಿಕ ಬದಲಾವಣೆಯನ್ನು ಸ್ತ್ರೀ ದೃಷ್ಟಿಕೋನದ ಮೂಲಕ ಕಟ್ಟಿರುವುದರಿಂದ ಆಧುನಿಕತೆಗಿರುವ ಮತ್ತೊಂದು ಆಯಾಮವೂ ಈ ಕತೆಗೆ ದಕ್ಕಿದೆ ಎನ್ನಬಹುದು. ಇದು ಕೇವಲ ಲಿಲ್ಲಿಬಾಯಿ ಎಂಬ ವ್ಯಕ್ತಿಯ ಕತೆಯಾಗದೇ

ವಿಶಾಲ ಜಗತ್ತಿನ ಸಂಕೀರ್ಣ ಕತೆಯಾಗಿದೆ ಎನ್ನಬಹುದು. ಆದರೆ ಆ ಟಾಕೀಸು ಸಹ ಅಂತಿಮವಾಗಿ ಊರಿನಿಂದ ನಿರ್ಗಮಿಸಿದಾಗ ಆಕೆಯ ಬದುಕು ನಿರ್ಗಮನದತ್ತ ಸಾಗುತ್ತದೆ.

ಒಟ್ಟಾರೆಯಾಗಿ ನೋಡುವುದಾದರೆ, ಗುಲಾಬಿ ಟಾಕೀಸು ಕಥೆಗೆ ವಿಶಾಲ ಸಾಮಾಜಿಕ ಆಯಾಮವಿದೆ. ದೇವನೂರು ಮಹಾದೇವರ 'ಡಾಂಬರು ಬಂದುದು' ಅಥವಾ ಪೂರ್ಣಚಂದ್ರ ತೇಜಸ್ವಿಯವರ 'ಅಬಚೂರಿನ ಪೋಸ್ಟಾಫೀಸು' ಅಥವಾ ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ರೀತಿಯ ರಚನೆಗಳನ್ನು ಗಮನಿಸಿದರೆ ಈ ಕಥೆ ಪಡೆದುಕೊಂಡಿರುವ ಆಳ ಮತ್ತು ವಿಸ್ತಾರವನ್ನು ನಾವು ಗಮನಿಸಬಹುದು. ಕನ್ನಡ ಕಥನ ಜಗತ್ತು ನಿರಂತರವಾಗಿ ಅನ್ವೇಶಿಸುತ್ತಿರುವ ಸಾಮಾಜಿಕ ಚಲನೆಯ ಒಂದು ಮಾದರಿ ಇಲ್ಲಿ ರೂಪುಗೊಂಡಿದೆ.



# ವೈದೇಹಿ ಅವರ ಅನುವಾದ ಕೃತಿಗಳ ಗುರಿ ಮತ್ತು ದಾರಿ

+ ಮೇಟಿ ಮಲ್ಲಿಕಾರ್ಜುನ

ವೈದೇಹಿ ಅವರು ಮಾಡಿರುವ ಎಲ್ಲ ಅನುವಾದಗಳ ವಸ್ತು-ವಿಷಯವನ್ನು ಕುರಿತು ಈ ಟಿಪ್ಪಣಿಯಲ್ಲಿ ಚರ್ಚಿಸುವುದರ ಬದಲಾಗಿ, ಒಬ್ಬ ಸೃಜನಶೀಲ ಬರಹಗಾರ್ತಿ ಅನುವಾದವೆಂಬ ಸಾಂಸ್ಕೃತಿಕ ವಿದ್ಯಮಾನವನ್ನು ಹೇಗೆ ನಿಭಾಯಿಸಿದ್ದಾರೆ ಎಂಬ ವಾಸ್ತವವನ್ನು ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಅನುವಾದಕ್ರಿಯೆಯೂ ಅತ್ಯಂತ ಸೃಜನಶೀಲ ವ್ಯಾಪಾರವಾಗಿರುವ ಕಾರಣ, ವೈದೇಹಿ ಅವರ ಅಭಿವ್ಯಕ್ತಿ ವಿನ್ಯಾಸಗಳ ಹರವು ಮತ್ತು ಆಳವನ್ನು ಇಲ್ಲಿ ಅರಿಯುವುದಾಗಿದೆ. ಬರಹಗಾರರ ತಾತ್ವಿಕತೆಯ ಬೇರೆ ಮಜಲುಗಳನ್ನು ಗುರುತಿಸುವಲ್ಲಿಯೂ ಈ ನಿಲುವುಗಳು ಒತ್ತಾಸೆಯಾಗುತ್ತವೆ.

ಒಂದು ಭಾಷೆಯ ಮಹತ್ವದ ಬರಹಗಾರ್ತಿ ಇಲ್ಲವೇ ಬರಹಗಾರ ಮತ್ತೊಂದು ಭಾಷೆಯಲ್ಲಿ ಮೈದಳೆದ ತಿಳಿವು, ಅನುಭವ, ಸಂವೇದನೆಯನ್ನು ತನ್ನ ಭಾಷೆಗೆ ಅನುವಾದಿಸುವುದೆಂದರೆ, ಅದೊಂದು ಅತ್ಯಂತ ಮಹತ್ವದ ವಿದ್ಯಮಾನವಾಗಿರುತ್ತದೆ. ಏಕೆಂದರೆ, ಯಾವ ಕವಿ, ಬರಹಗಾರ ಇಲ್ಲವೇ ಚಿಂತಕ ತನ್ನ ಗ್ರಹಿಕೆ ಅಥವ ಸೃಷ್ಟಿಶೀಲ ವ್ಯಾಪ್ತಿಯಿಂದ ಯಾವುದು ಹೊರಗೆ ಇರುತ್ತದೆಯೋ ಅದನ್ನು ತಾನು ಸಾಹಿತ್ಯ ಕೃಷಿಗೈಯುವ ಭಾಷೆಗೆ ಕೊಂಡು ತರಬೇಕು ಎಂಬ ಹಂಬಲವನ್ನು ಎಲ್ಲ ಮಹತ್ವದ ಬರಹಗಾರರು ಸಹಜವಾಗಿಯೇ ಹೊಂದಿರುತ್ತಾರೆ. ಆದರೆ ಈ ಹಂಬಲವನ್ನು ಈಡೇರಿಸಿಕೊಳ್ಳುವ ದಾರಿಗಳು ಹಲವು ಬಗೆಯಲ್ಲಿ ಮೈದೆರೆಯುತ್ತವೆ. ಇಂತಹ ದಾರಿಗಳಲ್ಲಿ ಅನುವಾದ ಕ್ರಿಯೆಯೂ ಅತ್ಯಂತ ಮುಖ್ಯವಾದದ್ದು. ಕತೆ, ಕಾವ್ಯ, ನಾಟಕ, ವ್ಯಕ್ತಿಚಿತ್ರ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಅತ್ಯಂತ ಸಂವೇದನಾಶೀಲ ಹಾಗೂ ಸೃಷ್ಟಿಶೀಲ ಬರಹವನ್ನು ಮಾಡಿರುವ ವೈದೇಹಿ ಅವರು ಕೂಡ ಅನುವಾದವನ್ನು ಮಾಡಿರುವುದು ವಿಶೇಷವೇ ಸರಿ. ಅಂದರೆ ತಮ್ಮ ಅಭಿವ್ಯಕ್ತಿಯಲ್ಲಿ ಈಗಾಗಲೇ ಹೊರಹೊಮ್ಮಿದ ಸಂವೇದನಾಶೀಲ ಹಾಗೂ ಸೃಜನಶೀಲ ಪ್ರಕ್ರಿಯೆಗಳನ್ನು ಹೊರತುಪಡಿಸಿ, ವೈದೇಹಿ ಅವರು ಶಾಸ್ತ್ರೀಯ ಹಾಗೂ ಜೀವನಾನುಭವದ ವಾಸ್ತವಗಳಿಗೆ ಸಂಬಂಧಿಸಿದ ಸಂಕಥನಗಳನ್ನು (ಡಿಸ್ಕೋರ್ಸ್) ಅನುವಾದ ಮಾಡಿರುತ್ತಾರೆ.

ಇವರ ಅನುವಾದಗಳನ್ನು ಹೀಗೆ ಪಟ್ಟಿ ಮಾಡಬಹುದು: ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ (1984–ಮೂಲ: ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ ಬರೆದ 'ಇಂಡಿಯನ್ ವುಮೆನ್ಸ್ ಸ್ಟ್ರಗಲ್ ಫಾರ್ ಫ್ರೀಡಂ'), ಬೆಳ್ಳಿಯ ಸಂಕೋಲೆಗಳು (1985–ಮೂಲ: ಶ್ರೀಮತಿ ಮೈತ್ರೇಯಿ ಮುಖ್ಯೋಪಾಧ್ಯಾಯ ಬರೆದ 'ಸಿಲ್ವರ್ ಶ್ಯಾಕಲ್ಸ್'), ಮೂವರು ಅಕ್ಕತಂಗಿಯರು (2012–ಮೂಲ: ಆಂಟನ್‌ಚೆಕಾಫ್ ಬರೆದ 'ದ ತ್ರೀ ಸಿಸ್ಟರ್ಸ್'), ಸಂಗೀತ ಸಂವಾದ (1999–ಮೂಲ: ಸಂಗೀತ ವಿದ್ವಾಂಸ ಡಾ.ಭಾಸ್ಕರ್ ಚಂದಾವರ್ಕರರ ಉಪನ್ಯಾಸಗಳು), ಸೂರ್ಯಕಿನ್ನರಿಯರು (1996–ಮೂಲ: ಸ್ವಪ್ನದತ್ತ ಅವರ 'ದ ಸನ್ ಫೈರೀಸ್'), ಮಹಾಪಂಡಿತ ರಾಹುಲ ಸಾಂಕೃತ್ಯಾಯನ (1996–ಮೂಲ: ಗುಣಾಕರ ಮುಳೆಯವರ ಹಿಂದೀ ಕೃತಿ) ಹೀಗೆ. ಸಾಹಿತ್ಯ ಇಲ್ಲವೇ ಇತರೆ ಯಾವುದೇ ತಿಳಿವಿಗೆ ಸಂಬಂಧಿಸಿದ ವಿಚಾರ ಪ್ರಕ್ರಿಯೆಯನ್ನು ಅನುವಾದ ಮಾಡುವುದರ ಹಿಂದೆ ಬದುಕಿನ ಬಹುದೊಡ್ಡ ಕಾಣ್ಕೆ ಇರುತ್ತದೆ. ಈ ಮಾತನ್ನು ಸಾಮಾನ್ಯೀಕರಿಸುವುದು ಸೂಕ್ತವಲ್ಲ ದಿಟ. ಆದರೆ ಮಹತ್ವದ ಬರಹಗಾರರ ಸನ್ನಿವೇಶದಲ್ಲಿ ಈ ಮಾತನ್ನು ಒಪ್ಪುವುದಕ್ಕೆ ಯಾವುದೇ ಅಡ್ಡಿಗಳಿಲ್ಲ.

ಕನ್ನಡದ ಪ್ರತಿಯೊಬ್ಬ ಮಹತ್ವದ ಬರಹಗಾರ್ತಿ ಇಲ್ಲವೇ ಬರಹಗಾರ ಕೂಡ ತಮ್ಮ ಸೃಜನಶೀಲ ಅಭಿವ್ಯಕ್ತಿಗೆ ಹೊರತಾಗಿ ಬೇರೊಂದು ಭಾಷೆಯಿಂದ ಅನುವಾದವನ್ನು ಮಾಡಿರುವ ಸಾಕಷ್ಟು ನಿದರ್ಶನಗಳು ಕನ್ನಡದಲ್ಲಿ ಸಿಗುತ್ತವೆ. ಬೇಂದ್ರೆ, ಕುವೆಂಪು, ಮಾಸ್ತಿ, ಲಂಕೇಶ್, ತೇಜಸ್ವಿ, ಅನಂತಮೂರ್ತಿ, ಶಿವಪ್ರಕಾಶ್ ಮೊದಲಾದ ಬರಹಗಾರರು ತಮ್ಮ ಸೃಜನಶೀಲ ಅಭಿವ್ಯಕ್ತಿಯ ಜೊತೆಗೆ ಬೇರೆ ಭಾಷೆಯ ಹಲವು ಪ್ರಕಾರಗಳ ಕೃತಿಗಳನ್ನು ಅನುವಾದಿಸಿರುವುದನ್ನು ನೋಡುತ್ತೇವೆ. ಈ ಪ್ರಕ್ರಿಯೆಯಲ್ಲಿ ಕಾಳಿದಾಸ, ಶೇಕ್ಸಪೀಯರ್, ಸಾಫೋಕ್ಲಸ್, ಟಾಲ್‌ಸ್ಟಾಯ್, ವಾಲ್ಮೀಕಿ, ವ್ಯಾಸ ಮುಂತಾದ ಮಹಾಕವಿಗಳ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದ ಮಾಡಲಾಗಿದೆ. ಸಾಹಿತ್ಯ ಪಠ್ಯಗಳ ಜೊತೆಗೆ ಇತರೆ ಲಲಿತ ಕಲೆಗಳು ಹಾಗೂ ಶಾಸ್ತ್ರೀಯ, ಚಾರಿತ್ರಿಕ ಮತ್ತು ವೈಚಾರಿಕ ಜ್ಞಾನಶಿಸ್ತುಗಳಿಗೆ ಸಂಬಂಧಿಸಿದ ತಿಳಿವನ್ನು ಕನ್ನಡದ ಜಾಯಮಾನಕ್ಕೆ ಒಗ್ಗಿಸುವ ಹೊಣೆಗಾರಿಕೆಯನ್ನು ನಿಭಾಯಿಸಿದ್ದಾರೆ. ಈ ಬಗೆಯ ಅನುವಾದ ಎರಡು ನೆಲೆಗಳಿಂದ ಕೂಡಿರುತ್ತದೆ. ಒಂದು: ನಮ್ಮ ನುಡಿ ಪರಿಸರದೊಳಗೆಯೇ ಹುಟ್ಟಿ ಬೆಳೆದು, ಅತ್ಯಂತ ಮಹತ್ವದನ್ನು ಸಾಧಿಸಿದ ಮಹನೀಯರ ಬದುಕು–ಬರಹ ಬೇರೊಂದು ನುಡಿಯಲ್ಲಿ ಮೈದಾಳಿದಾಗ, ಅದನ್ನು ಆಯಾ ವ್ಯಕ್ತಿಯ ನುಡಿ ಪರಿಸರಕ್ಕೆ 'ಮರು ಪಡೆಯುವ' (ರೀ–ಕ್ಲೇಮಿಂಗ್) ಬಗೆಯೂ ಇಂತಹ ಅನುವಾದಗಳಿಂದ ನೆಲೆಗೊಳ್ಳುತ್ತದೆ. ಎರಡು: ಸಮೂಹಗಳ ಬದುಕಿನ ಏಳ್ಗೆಗೆ ಪೂರಕವಾದ ತಾತ್ವಿಕ ದಾರಿಗಳನ್ನು ಮರುವಿನ್ಯಾಸ ಗೊಳಿಸುವ ದಾರಿಗಳು ಕೂಡ ಅನುವಾದದ ಮುಖೇನ ನಮಗೆ ಒದಗುತ್ತವೆ. ಉದಾ.ಗೆ ಡಾ.ಕಮಲಾದೇವಿ ಚಟ್ಟೋಪಾಧ್ಯಾಯ ಅವರ 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' ಎಂಬ ಹೊತ್ತಿಗೆ ಈ ವಿನ್ಯಾಸಕ್ಕೆ ತಕ್ಕುದಾಗಿದೆ. ಅಂದರೆ ಈ

ಹೊತ್ತಿಗೆಯನ್ನು ಕೇವಲ ಸ್ವಾತಂತ್ರ್ಯ ಹೋರಾಟದ ಒಂದು ಕಥನವನ್ನಾಗಿ ನೋಡದೇ, ಮಹಿಳಾ ವಿಮೋಚನೆಯ ಸಂಕಥನವಾಗಿಯೂ ಇದು ನಮಗೆ ಒದಗಿಬಂದಿದೆ. ಹೆಣ್ಣಿನ ಅಸ್ಮಿತೆ, ಪ್ರತಿನಿಧೀಕರಣ ಹಾಗೂ ಅಭಿವ್ಯಕ್ತಿಯ ಮಾದರಿಗಳನ್ನು ವಿಭಿನ್ನ ನೆಲೆಗಳಲ್ಲಿ ನಿರೂಪಿಸುವ ವೈದೇಹಿ ಅವರ ಕಥಾಲೋಕವು, ಆಯಾ ಹೆಣ್ಣಿನ ಒಳತೋಟಿಗಳನ್ನು ಅವಳ ದಿನನಿತ್ಯದ ಬದುಕಿಗೆ ಒತ್ತುಕೊಟ್ಟು ವ್ಯಾಖ್ಯಾನಿಸುತ್ತವೆ. ಆದರೆ ಕಮಲಾದೇವಿ ಅವರ ಹೋರಾಟ ಕಥನವನ್ನು ಅನುವಾದಿಸುವ ಮೂಲಕ ಇವರು ತಮ್ಮ ಕಥಾ ಪಾತ್ರಗಳ ಕೌಟುಂಬಿಕ ಬದುಕಿನ ಪರಧಿಯನ್ನು ಸಾಮಾಜಿಕ-ರಾಜಕೀಯ ವಲಯಗಳಿಗೆ ವಿಸ್ತರಿಸುವ ಇರಾದೆಯನ್ನು ತಮ್ಮೀ ಅನುವಾದಗಳಲ್ಲಿ ಕಾಣುತ್ತಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ಆ ಅನುಭವವನ್ನು ಒಂದು ಸಾಂಸ್ಕೃತಿಕ ಕಥನವನ್ನಾಗಿ ನಿರೂಪಿಸುವ ಬಗೆಗಳು ಭಾರತದ ಭಾಷೆಗಳಲ್ಲಿ ಈಗಾಗಾಲೇ ಸಾಕಷ್ಟು ಬಂದಿವೆ. ಹಾಗ್ಾಗಿ ಈ ಪಠ್ಯವನ್ನು ಕೇವಲ ಸ್ವಾತಂತ್ರ್ಯ ಹೋರಾಟದ ದಾಖಲೆಯನ್ನಾಗಿ ಮಾತ್ರ ನೋಡಲು ಸಾಧ್ಯವಿಲ್ಲ. ಸಾವಿತ್ರಿಭಾಯಿ ಫುಲೆಯವರ ವಿಚಾರಗಳು ಹೇಗೆ ಒಂದು ಬಗೆಯಲ್ಲಿ ಮಹಿಳಾ ಸಮೂಹವನ್ನು ವಿಮೋಚನೆಗೊಳಿಸಲು ಒತ್ತಾಸೆಯಾಗುತ್ತವೋ, ಹಾಗೇನೇ ಕಮಲಾದೇವಿಯವರ ಈ ಅನುಭವ ಕಥನವು ಕೂಡ ಇನ್ನೊಂದು ಬಗೆಯಲ್ಲಿ ಮಹಿಳೆಯರ ವಿಮೋಚನೆಯ ದಾರಿಯನ್ನು ತೋರಿಸುತ್ತದೆ. ದಿಟ, ಮಹಿಳಾ ಹೋರಾಟಗಾರರ ಬದುಕಿಗೆ ಸಂಬಂಧಿಸಿದ ಬರಹಗಳು ಅತ್ಯಂತ ಕಡಿಮೆ ಎಂದು ಹೇಳಬಹುದು. ಆದರೂ ಮಹಿಳಾ ಅಧ್ಯಯನದಲ್ಲಿ ಇವುಗಳು ಮಹತ್ವದ ಪರಿಣಾಮಗಳನ್ನು ಬೀರುತ್ತವೆ. ಹಾಗಾಗಿ ಇಂತಹ ಕೆಲವೇ ಪಠ್ಯಗಳು ಇಡೀ ಮಹಿಳಾ ಸಮೂಹಗಳನ್ನು ಪ್ರತಿನಿಧಿಸುವ ಸಂಕಥನವಾಗಿ ರೂಪುಗೊಂಡಿವೆ. ಭಾರತದ ಸಮಾಜಗಳಲ್ಲಿ ಸಹಸ್ರಮಾನಗಳಿಂದ ನೆಲೆನಿಂತಿರುವ ಅನಿಷ್ಟ ಆಚಾರ-ವಿಚಾರಗಳು ಶಾಸ್ತ್ರೀಯ ಆಯಾಮವನ್ನು ಪಡೆದು, ಬದುಕಿನ ಸಹಜ ವಿದ್ಯಮಾನಗಳಾಗಿವೆ. ಹೀಗೆ ಪ್ರಶ್ನಾತೀತವಾಗಿ ಬೇರೂರಿದ ಯಾವುದೇ ಸಾಮಾಜಿಕ ನಿಲುವುಗಳನ್ನು ಪ್ರಶ್ನಿಸುವ, ವಿಮರ್ಶಿಸುವ ಕ್ರಮಗಳೇ ಅಪರಾಧಗಳಾಗಿ ಬಿಂಬಿತವಾಗುವ ಸನ್ನಿವೇಶದಲ್ಲಿಯೇ ಕಮಲಾದೇವಿ ಅವರ ನಡೆಗಳು ಹೊರಹೊಮ್ಮಿವೆ. ಈಗಾಗಲೇ ಶಾಸ್ತ್ರೀಯ ಮಾನ್ಯತೆ ಪಡೆದಿರುವ ಈ 'ಅರಿವಿನ ಹಿಂಸೆ' (ಎಪಿಸ್ಟಮಿಕ್ ವೈಲೆನ್ಸ್)ಯ ಪ್ರಭಾವವನ್ನು ವೈದೇಹಿ ಅವರ ಕಥಾ ಪಾತ್ರಗಳು ಹೇಗೆ ಮೀರುತ್ತವೆ ಅನ್ನುವುದನ್ನು, ಕಮಲಾದೇವಿ ಅವರ ಈ ಹೋರಾಟ ಕಥನವು ಇನ್ನಷ್ಟು ತಾತ್ವಿಕಗೊಳಿಸುತ್ತದೆ.

ವೈದೇಹಿ ಅವರ ಆರೂ ಅನುವಾದ ಕೃತಿಗಳನ್ನು ಇಲ್ಲಿ ವಿಶದೀಕರಿಸುವುದಕ್ಕೆ ಅವಕಾಶವಿಲ್ಲ. ಈಗಾಗಲೇ ಪ್ರಸ್ತಾಪಿಸಿದಂತೆ, ಒಬ್ಬ ಸೃಜನಶೀಲ ಬರಹಗಾರ್ತಿ ಯಾಕೆ ಅನುವಾದಗಳನ್ನು ಮಾಡಬೇಕು? ಆ ಕ್ರಿಯೆಯ ಹಿಂದಿನ ವೈಚಾರಿಕ ಉದ್ದೇಶವೇನು? ಎಂಬೀ ಪ್ರಶ್ನೆಗಳು ಇಲ್ಲಿ ಮುಖ್ಯವಾಗುತ್ತವೆ. ಏಕೆಂದರೆ, ಅನುವಾದವೆಂಬ ವಿದ್ಯಮಾನವು ಕೇವಲ ಮಾಹಿತಿಯನ್ನು ರವಾನಿಸುವುದಲ್ಲ. ಬದಲಾಗಿ ತಿಳಿವಿನ ಮಾದರಿ ಹಾಗೂ

ವೈಚಾರಿಕ ಚೌಕಟ್ಟುಗಳನ್ನು ವಿಸ್ತಾರಗೊಳಿಸುವುದು ಒಂದು ಗುರಿಯಾದರೆ, ಈಗಾಗಲೇ ನೆಲೆಯೂರಿದ ತಾತ್ವಿಕ ನಂಬಿಕೆಗಳಲ್ಲಿ ಪಲ್ಲಟಗಳನ್ನು ಏರ್ಪಡಿಸುವುದು ಮತ್ತೊಂದು ಮಹತ್ವದ ಗುರಿಯಾಗಿದೆ. ಕಲೆ, ಸಾಹಿತ್ಯ, ರಾಜಕಾರಣ, ಹೋರಾಟ ಮೊದಲಾದ ವಲಯಗಳಲ್ಲಿ ಪಾಲ್ಗೊಂಡಿರುವ ವ್ಯಕ್ತಿಗಳ ಅನುಭವ ವ್ಯಾಪಕವಾಗಿದ್ದರೂ, ಅದು ವಿಸ್ತಾರಗೊಳ್ಳುವ ನೆಲೆಗಳು ಎಲ್ಲ ಸನ್ನಿವೇಶದಲ್ಲಿಯೂ ವೈಚಾರಿಕ ವೈಶಿಷ್ಟ್ಯವನ್ನು ಬಿಂಬಿಸಲಾರವು ಹಾಗೂ ಸಾಂಸ್ಕೃತಿಕ ಹೊಸತನವನ್ನು ನೆಲೆಗೊಳಿಸಲಾರವು. ಆದರೆ ವೈದೇಹಿ ಅವರು ಅನುವಾದಕ್ಕೆ ಆಯ್ಕೆ ಮಾಡಿಕೊಂಡಿರುವ ಕೃತಿಗಳು ವಿಭಿನ್ನ ಗ್ರಹಿಕೆಗೆ ಸಂಬಂಧಿಸಿವೆ. ಅಂದರೆ, ಸ್ವಪ್ನದತ್ತ ಅವರ ಮಕ್ಕಳ ಕಥನ, ಚೆಕಾಫ್ ಅವರ ನಾಟಕ, ಕಮಲಾದೇವಿ ಅವರ ಹೋರಾಟ ಕಥನ, ಮೈತ್ರೇಯಿ ಅವರ ಮಹಿಳೆ ಮತ್ತು ಅಭಿವೃದ್ಧಿ ಕುರಿತ ಬರಹಗಳು ಹಾಗೂ ಭಾಸ್ಕರ್ ಚಂದಾವರ್ಕರ್ ಅವರ ಸಂಗೀತ ಮೀಮಾಂಸೆ ಮೊದಲಾದ ಪಠ್ಯಗಳನ್ನು ಗಮನಿಸಿದರೆ ಇಲ್ಲಿ ಅಭಿವ್ಯಕ್ತಿಯ ವಿಭಿನ್ನ ಮಾದರಿಗಳನ್ನು ಕಾಣುತ್ತೇವೆ. ಒಂದು ಕಾಲಘಟ್ಟದಲ್ಲಿ ಹೊರಹೊಮ್ಮಿದ ಯಾವುದೇ ವೈಚಾರಿಕ ವಿನ್ಯಾಸಗಳು ಕೇವಲ ಆ ಕಾಲ ಮತ್ತು ದೇಶಕ್ಕೆ ಮಾತ್ರ ಸೀಮಿತವಾಗಿರದೇ, ಸಮೂಹಗಳ ಬದುಕಿನ ಮುಂಗಾಣ್ಕೆಗಳಾಗಿ ಮೈದಾಳುತ್ತವೆ. ಹಾಗಾಗಿ ಇಂತಹ ಅನುವಾದಗಳು ಯಾವತ್ತಿಗೂ ಮಹತ್ವವನ್ನು ಪಡೆಯುತ್ತವೆ.

ವೈದೇಹಿ ಅವರ ಕಥಾ ಪ್ರಪಂಚವು ಹೆಣ್ಣನ್ನೇ ನೆಲೆಯಾಗಿಸಿಕೊಂಡಿದೆ. ಹೆಣ್ಣಿನ ಅನುಭವದ ಮುಖೇನ ಬದುಕಿನ ವಿರಾಟ್ ಸ್ವರೂಪವನ್ನು ಮೌಲ್ಯಮಾಪನ ಮಾಡುವ ತೀವ್ರವಾದ ಕಾಳಜಿಗಳು ಇಲ್ಲಿ ಅಗಾಧವಾಗಿ ಕಾಣಿಸುತ್ತವೆ. ಈ ಹೆಣ್ಣು ಕಣ್ನೋಟ ಇವರ ಕಥನಗಳಲ್ಲಿ ಒಂದು ಅಖಂಡ ತತ್ವವಾಗಿಯೇ ಗೋಚರಿಸುತ್ತದೆ. ಮನುಷ್ಯ ಬದುಕಿನ ಸಂಕೀರ್ಣತೆಯನ್ನೂ ಅತ್ಯಂತ ಸೂಕ್ಷ್ಮವಾಗಿ ತಮ್ಮ ಕತೆಗಳ ಮೂಲಕ ನಿರೂಪಿಸಿದ್ದಾರೆ. ಹಾಗಾಗಿ ಇಲ್ಲಿಯ ಪಾತ್ರಗಳನ್ನು ಸರಳ ರೇಖಾತ್ಮಕವಾಗಿ ವಿಶ್ಲೇಷಿಸಲು ಸಾಧ್ಯವಿಲ್ಲ. ಗಂಡು–ಹೆಣ್ಣುಗಳ ನಡುವಣ ಸಂಬಂಧದಲ್ಲಿ ಅಡಕವಾಗಿರುವ ಈ ಸಂಕೀರ್ಣತೆಯನ್ನು ವಿಶದೀಕರಿಸುವ ಹಲವು ಆಯಾಮಗಳು ಇವರು ಅನುವಾದಿಸಿದ ಈ ಪಠ್ಯಗಳಲ್ಲಿ ತಲೆಯೆತ್ತುತ್ತವೆ. ವಿಶೇಷವಾಗಿ ಕಮಲಾದೇವಿ, ಮೈತ್ರೇಯಿ ಹಾಗೂ ಚೆಕಾಫ್ ಅವರ ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು. ದಿನನಿತ್ಯ ಬದುಕಿನ ದಂದುಗದಲ್ಲಿ ಮನುಷ್ಯ ಸ್ವಭಾವವು ವ್ಯಂಗ್ಯ, ಸಿಟ್ಟು, ಸಿನಿಕತೆ, ಪ್ರತಿಭಟನೆ, ಆಕ್ರೋಶ ಎಂಬಿತ್ಯಾದಿ ವಿವಿಧ ಭಾವಗಳಲ್ಲಿ ನಮಗೆ ಮನವರಿಕೆಯಾಗುತ್ತದೆ. ಆದರೆ ಈ ಭಾವ ಪ್ರಪಂಚವನ್ನು ವಾಚ್ಯಗೊಳಿಸದೇ, ಅತ್ಯಂತ ಕಲಾತ್ಮಕವಾಗಿ ನಿರೂಪಿಸುತ್ತಾರೆ. ವೈದೇಹಿ ಅವರ ಪಾತ್ರಗಳ ಸೃಷ್ಟಿ ಕೇವಲ ಸ್ಫೋಟಕ ಪ್ರವೃತ್ತಿಯಿಂದ ಕೂಡಿರದೇ ಒಂದು ಬಗೆಯ ಆಸ್ಫೋಟಕ ನೆಲೆಯಲ್ಲಿರುತ್ತವೆ. ಹಾಗಾಗಿ ಹೆಣ್ಣು ತನ್ನ ತಾದಾತ್ಮ್ಯ ಮನೋಭಾವದಿಂದಲೇ ಹೇಗೆ ಪ್ರತಿರೋಧವನ್ನು ಪ್ರಕಟಿಸುತ್ತಾಳೆ ಎನ್ನುವುದು ಇಲ್ಲಿ ಮುಖ್ಯವಾಗುತ್ತದೆ. ವೈದೇಹಿ ಅವರ ಈ ಕಲಾತ್ಮಕ

ನಿರೂಪಣೆಗಳಿಗೆ ಸ್ಪಷ್ಟ ತಾತ್ವಿಕ ಚೌಕಟ್ಟುಗಳು ಅವರು ಅನುವಾದಿಸಿದ ಈ ಹಲವು ಪಠ್ಯಗಳಲ್ಲಿ ಪ್ರಕಟಗೊಳ್ಳುತ್ತವೆ. ಯಾವುದೇ ಒಂದು ನಿರೂಪಣೆಗೆ ಅರಿವಿನ ಆಯಾಮಗಳು ದೊರೆಯುವುದು ಕೂಡ ಇಂತಹ ತಾತ್ವಿಕ ಚೌಕಟ್ಟುಗಳ ಮೂಲಕವೇ. ಈ ಲೋಕದ ಹೆಣ್ಣು ಸಂಕಥನವನ್ನು ಹಿಡಿದು ನೋಡುವ ದಾರಿಗಳನ್ನು ಲೇಖಕರು ತಾವು ರಚಿಸಿದ ಕೃತಿಗಳಿಗೆ ಮಾತ್ರ ಸೀಮಿತಗೊಳಿಸದೇ, ಅವುಗಳನ್ನು ಈ ಲೋಕದ ಬೇರೆ ಬೇರೆ ಲೇಖಕರಲ್ಲಿ ಶೋಧಿಸುವ ಇರಾದೆಯನ್ನೂ ಹೊಂದಿರುತ್ತಾರೆ. ಈ ಪ್ರಕ್ರಿಯೆಯ ಭಾಗವಾಗಿ ವೈದೇಹಿ ಅವರು ಈ ಹಲವು ಅನುವಾದಗಳನ್ನು ಕೈಗೊಂಡಿದ್ದಾರೆ ಎನ್ನುವುದು ನನ್ನ ಅಭಿಪ್ರಾಯ. ಇಂತಹವೊಂದು ಹಂಬಲವನ್ನು ಲೇಖಕರು ಯಾವುದೇ ಒಂದು ರಾಜಕೀಯ ಪ್ರೇರಣೆಯಿಂದ ಕೈಗೊಳ್ಳುತ್ತಾರೆ ಎಂದು ಹೇಳಲಾರೆ. ಆದರೆ ಮನುಷ್ಯ ಬದುಕಿನ ವಿಭಿನ್ನ ಶೋಧನೆಗಳಲ್ಲಿ ಅನುವಾದವೂ ಒಂದು ಮಹತ್ವದ ಬೆಳವಣಿಗೆ. ಈ ಬೆಳವಣಿಗೆಗೆ ಪೂರಕವಾಗಿ ವೈದೇಹಿ ಅವರ ಅನುವಾದಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಕಲೆ ಮತ್ತು ಶಾಸ್ತ್ರೀಯ ವಿಚಾರಗಳಿಗೆ ಸಂಬಂಧಿಸಿದ ಕೃತಿಗಳನ್ನು ಅನುವಾದಿಸುವಾಗ, ವೈದೇಹಿ ಅವರ ನಿರೂಪಣೆಗಳು ಕಥನ ಮಾದರಿಯಲ್ಲಿಯೇ ಮೂಡಿಬಂದಿವೆ. ಅಂದರೆ, ಯಾವುದೇ ಒಂದು ನಿರೂಪಣೆಗೆ 'ಅರಿವಿನ' ಆಯಾಮಗಳು ದೊರೆಯುವುದು ಕೇವಲ ಪೂರ್ಣ ವಾಕ್ಯಗಳ ಇಲ್ಲವೇ ಭಾಷಿಕ ರಚನೆಗಳನ್ನು ಬಳಸುವುದರ ಮೂಲಕ ಮಾತ್ರವಲ್ಲ. ಬದಲಾಗಿ ಆ ನಿರೂಪಣೆಗಳು ಹೇಗೆ ಅಭಿವ್ಯಕ್ತಿಯ ನೆಲೆಗಳಾಗಿ ಪ್ರಚುರಗೊಳ್ಳುತ್ತವೆ. ಪರಿಣಾಮವಾಗಿ ಸಂಕಥನವೊಂದು ಹೇಗೆ ಒಡಮೂಡುತ್ತದೆ ಎನ್ನುವುದು ಮುಖ್ಯ. ಅನುವಾದದಲ್ಲಿ ಎದುರಾಗುವ ಬಹುತೇಕ ಗ್ರಹಿಕೆಯ ಸಮಸ್ಯೆಗಳು 'ನುಡಿ ನಿರೂಪಣೆಗೆ' ಸಂಬಂಧಿಸಿರುತ್ತವೆ. ಅಂತಹ ಸವಾಲುಗಳನ್ನು ವೈದೇಹಿ ಅವರು ಅತ್ಯಂತ ಸಮರ್ಪಕವಾಗಿ ತಮ್ಮೀ ಅನುವಾದ ಪಠ್ಯಗಳಲ್ಲಿ ನಿಭಾಯಿಸಿದ್ದಾರೆ. ಸಂಗೀತ ಮೀಮಾಂಸೆ ಇಲ್ಲವೇ ಶಾಸ್ತ್ರಗಳಿಗೆ ಸಂಬಂಧಿಸಿದ ವಿಚಾರಗಳನ್ನು ಅತ್ಯಂತ ಸುಲಲಿತವಾಗಿ ಲೀಲಾಜಾಲವಾಗಿ ನಿರೂಪಿಸುವುದು ಅತ್ಯಂತ ವಿರಳ! ಆದರೆ ವೈದೇಹಿ ಅವರು ತಮ್ಮೀ ಅನುವಾದಗಳನ್ನು ಓದುಗರ ಗ್ರಹಿಕೆಗೆ ಯಾವುದೇ ಅಡೆತಡೆಗಳಾಗದಂತೆ, ಸುಲಲಿತವಾಗಿ ಅನುವಾದಿಸಿರುತ್ತಾರೆ. 'ಸಂಗೀತ ಸಂವಾದ' ಪುಸ್ತಕವನ್ನು ಓದುವಾಗ ಇದನ್ನು ನಾನು ಅನುಭವಿಸಿದ್ದೇನೆ. ಈ ಪುಸ್ತಕ ಹೆಚ್ಚು ತಾತ್ವಿಕ-ಶಾಸ್ತ್ರೀಯ ವಿಚಾರಗಳಿಗೆ ಸೀಮಿತವಾಗಿದೆ. ತಾತ್ವಿಕ ವಿಚಾರ ನಿರೂಪಣೆಗಳು ಬಹುತೇಕವಾಗಿ ಅಮೂರ್ತ ವಾಗಿರುತ್ತವೆ. ಅಮೂರ್ತ ವಿಚಾರಗಳನ್ನು ಮನವರಿಕೆ ಮಾಡುವ ಕಸುವು ಇರುವುದು ಕೂಡ ಭಾಷೆಗೆ. ಅನುವಾದದ ಅತ್ಯಂತ ದೊಡ್ಡ ಸವಾಲೇನೆಂದರೆ, ಒಂದು ನುಡಿಯ ನಿರೂಪಣೆಗಳನ್ನು ಮತ್ತೊಂದು ನುಡಿಯ ಜಾಯಮಾನಕ್ಕೆ 'ಮರುಸಾಂದರ್ಭಿಕರಣ' ಗೊಳಿಸುವ ಜರೂರಿರುತ್ತದೆ. ವಿಚಾರ, ತತ್ವ ಹಾಗೂ ಪ್ರಾಯೋಗಿಕತೆಗೆ ಸಂಬಂಧಿಸಿದ ಸಂಗೀತಶಾಸ್ತ್ರದ ವಿಚಾರಗಳು, ಒಟ್ಟಿನಲ್ಲಿ ತತ್ವಶಾಸ್ತ್ರೀಯ ಗ್ರಹಿಕೆಗಳಾಗಿ ಮೈಪಡೆಯುತ್ತವೆ. ಸಂಕಥನ ಮತ್ತು ತಾತ್ವಿಕತೆಯ ನಡುವಣ

ಹವ ಕೆಡದಂತೆ ಒಂದು ನುಡಿಯಿಂದ ಮತ್ತೊಂದು ನುಡಿಗೆ ತಿಳಿವನ್ನು ರವಾನಿಸುವುದೆಂದರೆ, ಕೇವಲ ನುಡಿಗಳ ಪಲ್ಲಟ ಮಾತ್ರವಲ್ಲ. ಬದಲಾಗಿ ಅನುಭವಗಳ ಮರುಸಾಂದರ್ಭೀಕರಣ ಎಂದೇ ಹೇಳಬೇಕಾಗುತ್ತದೆ.

ಸಂಗೀತ ಸಂವಾದ ಎನ್ನುವುದು ಕೇವಲ ಸ್ವರ, ಲಯ ಹಾಗೂ ಶೃತಿಗಳಿಗೆ ಮಾತ್ರ ಸೀಮಿತಗೊಂಡಿಲ್ಲ. ಸಪ್ತಕ, ಪ್ರಮಾಣ ಶೃತಿ, ಮನೋಧ್ವನಿ ಸಿದ್ಧಾಂತ, ಶ್ರವಣೇಂದ್ರೀಯ ಗ್ರಹಿಕೆಗಳು, ಸಂವಾದಶಾಸ್ತ್ರ, ಭಾಷಾಶಾಸ್ತ್ರ, ಸೆಮಿಯಾಟಿಕ್ಸ್, ಮಾನವಶಾಸ್ತ್ರ, ಸಂಖ್ಯಾಶಾಸ್ತ್ರ, ಭೌತಶಾಸ್ತ್ರ ಹಾಗೂ ಇತರೆ ವೈಜ್ಞಾನಿಕ ಸೂತ್ರಗಳನ್ನು ಅನ್ವಯಿಸಿಕೊಂಡ ಸಾಂದರ್ಭಿಕ ಚರ್ಚೆಗಳು ಮೇಲಿಂದ್ಮೇಲೆ ಈ ಕೃತಿಯಲ್ಲಿ ಪ್ರಸ್ತಾಪಗೊಳ್ಳುತ್ತವೆ. ನಮ್ಮ ನಂಬಿಕೆ, ಚಿಂತನೆಗಳು, ಶ್ರವಣಕ್ರಮ, ಶಬ್ದಸೃಷ್ಟಿ, ಶಬ್ದಗಳ ಬಳಕೆ, ಪ್ರಮಾಣ ಶೃತಿ ಮೊದಲಾದ ಪರಿಪಾಕಗಳಿಂದ ಸಂಗೀತವೆಂಬ ವಿದ್ಯಮಾನ ಏರ್ಪಡುವಂತೆ, ಅನುವಾದ ಪ್ರಕ್ರಿಯೆಯು ಕೂಡ ಹೀಗೆ ಹಲವು ವಿದ್ಯಮಾನಗಳ ಫಲಿತವಾಗಿದೆ. ಅನುವಾದದಲ್ಲಿ ರಚನೆ ಮತ್ತು ಬಳಕೆಯ ಎಲ್ಲ ವಿನ್ಯಾಸಗಳನ್ನು ಅನುಕ್ರಮವಾಗಿ ಬೆಸೆಯುವುದು ಮುಖ್ಯ. ಸೂತ್ರರೂಪದಲ್ಲಿ ಅಡಕವಾಗಿರುವ ಸಂಗೀತವನ್ನು ಭಾಷಿಕ ಪರಿಕರಗಳ ಮೂಲಕ ವ್ಯಾಖ್ಯಾನಿಸುವುದು ಅತ್ಯಂತ ಸವಾಲಿನ ಸಂಗತಿಯಾಗಿದೆ. ಸ್ವರ-ಶೃತಿ ಸಂಗೀತದ ಎರಡು ಪ್ರಧಾನ ಅಂಶಗಳು. ಅಂತೆಯೇ ಭಾಷೆಗೂ ಸೇರಿಕೆ [ಕೊಹೆಸೆನ್]ಮತ್ತು ಸುಸಂಬದ್ಧತೆ[ಕೊಹೆರೆನ್ಸ್] ಎಂಬಂಶಗಳು ಅಷ್ಟೇ ಮುಖ್ಯ. ಸೇರಿಕೆ ತಿರುಳಿಗೆ ಸಂಬಂಧಿಸಿದ್ದಾದರೆ ಸುಸಂಬದ್ಧತೆ ವಾಕ್ಯಗಳ ನಡುವಣ ನಂಟಿನ ಬೆಸುಗೆಯನ್ನು ಕುರಿತಾಗಿರುತ್ತದೆ. ಈ ಎರಡು ಪರಿಕಲ್ಪನೆಗಳು ಅಭಿವ್ಯಕ್ತಿ-ಉಕ್ತಿಯೊಳಗಣ ಭಾವಪ್ರಪಂಚವನ್ನು ಅರಿಯುವುದಕ್ಕೆ ಪೂರಕವಾಗಿರುವಂತೆ, ಅನುವಾದ ಕ್ರಿಯೆಯನ್ನು ನೆರವೇರಿಸುವ ಬಗೆಗಳೂ ಆಗಿರುತ್ತವೆ. ಇಂತಹವೊಂದು ಪಕ್ವತೆ ವೈದೇಹಿ ಅವರ ಅನುವಾದ ಪ್ರಕ್ರಿಯೆಯಲ್ಲಿ ಹದಗೊಂಡಿದೆ. ಸಂಗೀತ ಮನಸ್ಸಿಗೆ ಸಂಬಂಧಿಸಿದಂತೆ, ಅನುವಾದವೂ ಮನಸ್ಸಿಗೆ ಸಂಬಂಧಿಸಿದೆ. ಈ ಕೃತಿಯ ಮಾತೊಂದು ಅತ್ಯಂತ ಮಾರ್ಮಿಕವಾಗಿದೆ, 'ಕಲಾ ಸಿದ್ಧಾಂತಗಳಲ್ಲಿ, ಸೌಂದರ್ಯ ಮೀಮಾಂಸೆಗಳಲ್ಲಿ ಒಟ್ಟು ಫಿಲಾಸಫಿಯಲ್ಲಿ ಚರ್ಚಿತವಾಗುವುದು ಅಂತಿಮವಾಗಿ ಮನಸ್ಸು' (ಪು.26). ಮನಸ್ಸಿಗೆ ಮುದ ನೀಡುವ ನಿರೂಪಣೆಗಳು ವೈದೇಹಿ ಅವರ ಕಥನಗಳಲ್ಲಿ ಯಥೇಚ್ಛವಾಗಿವೆ. ಈ ವಿನ್ಯಾಸ ಇವರ ಅನುವಾದದಲ್ಲಿಯೂ ಅಷ್ಟೇ ಯಥೇಚ್ಛವಾಗಿ ಒಡಮೂಡಿದೆ.



# ಅಸ್ಪೃಶ್ಯರು(ಕಾದಂಬರಿ): ಕುಟುಂಬದಿಂದ ಸಮಾಜಕ್ಕೆ ಹಾಯುವ ವಿದ್ಯಮಾನ

✦ ಡಾ. ಬಿ ಜನಾರ್ದನ ಭಟ್

ವೈದೇಹಿ ಕನ್ನಡದ ಒಬ್ಬರು ಮುಖ್ಯ ಗದ್ಯ ಲೇಖಿಕಿ. ಅವರು ಸೃಷ್ಟಿಸಿರುವ ಲೋಕದಲ್ಲಿ ಬರುವ ಸ್ತ್ರೀಯರ ವಿಶಿಷ್ಟ ಸ್ತ್ರೀಕೇಂದ್ರಿತ ದೃಷ್ಟಿಕೋನ, ಅವರು ಹೆಂಗರುಳಿನಿಂದ ಲೋಕವನ್ನು ಭಾವಿಸುವುದರಿಂದ ಹೊಸ ಅರಿವಿನಿಂದ ಬದುಕನ್ನೂ ಅದರ ಸತ್ಯವನ್ನೂ ಕಾಣಿಸುವುದಕ್ಕೆ ಸಾಧ್ಯವಾಗಿರುವುದು ಇತ್ಯಾದಿಗಳನ್ನು ಕನ್ನಡದ ವಿಮರ್ಶಾಲೋಕ ಗಮನಿಸಿದೆ (ಉದಾಹರಣೆಗೆ, ಡಾ. ಬಿ.ಎಸ್. ಸುಮಿತ್ರಾ ಬಾಯಿ).

ವೈದೇಹಿಯವರು 1982 ರಲ್ಲಿ ಬರೆದ 'ಅಸ್ಪೃಶ್ಯರು' ಕಾದಂಬರಿ ಅವರ ಏಕೈಕ ಕಾದಂಬರಿ. ಇದು ಪಠ್ಯಪುಸ್ತಕವಾಗಿತ್ತು ಮತ್ತು ಇಂಗ್ಲಿಷಿಗೆ ಭಾಷಾಂತರವಾಗಿದೆ. ಅವರ ಸಣ್ಣ ಕತೆಗಳಿಗಿಂತ ಸ್ವಲ್ಪ ಭಿನ್ನವಾದ, ಅಂದರೆ ಸಾಮಾಜಿಕ ನೆಲೆಯನ್ನು ಧ್ರುವವಾಗಿಟ್ಟುಕೊಂಡು ಸಾಂಸಾರಿಕ ಬದುಕನ್ನು ಪರಿಶೀಲಿಸಿರುವ ಕಥಾನಕ ಇದರಲ್ಲಿದೆ. ಕರಾವಳಿಯಲ್ಲಿ ಅತ್ಯಂತ ದಮನಿತರಾದ ಕೊರಗ ಸಮುದಾಯದ ಪ್ರತಿನಿಧಿಯಾದ ತುಕ್ರಿ ಎಂಬ ಯುವತಿಯನ್ನು ಕ್ರಾಂತಿಕಾರಿ ಸಮಾಜಸುಧಾರಕನಾದ ಬ್ರಾಹ್ಮಣ ಯುವಕ ಭಾಸ್ಕರ ಮದುವೆಯಾಗಿ 'ಕುಮುದಿನಿ' ಎಂದ ಹೆಸರಿಟ್ಟು ಅವಳನ್ನು 'ಸುಧಾರಿಸುವುದು' ಈ ಕಥಾನಕದ ಒಂದು ಆಯಾಮ.

ವಾಸುದೇವರಾಯರ ಸುಧಾರಣಾವಾದಿ ನಿಲುವು ಇನ್ನೊಂದು ಆಯಾಮ. ಅವರ ಆಶ್ರಯದಲ್ಲಿರುವ ಭಾಸ್ಕರನ ತಾಯಿ ಪಾರ್ತಕ್ಕ ಪ್ರತಿನಿಧಿಸುವ ಆಯಾಮ ಮೂರನೆಯದು. ಈ ಮೂರನೆಯ ಆಯಾಮ ಕಾದಂಬರಿಗೆ ಸಂಕೀರ್ಣತೆಯನ್ನು ನೀಡಿ, ಜಾತಿ ಸಮಸ್ಯೆ ಮತ್ತು ಅಸ್ಪೃಶ್ಯತೆಯನ್ನು ಸ್ತ್ರೀವಾದಿ ನೆಲೆಗೆ ಒಯ್ದು ಅದನ್ನೊಂದು ಸಂಕೀರ್ಣ ರೂಪಕವನ್ನಾಗಿ ಮಾಡುತ್ತದೆ.

ಇನ್ನೊಂದು ವೈಶಿಷ್ಟ್ಯ ಎಂದರೆ ವೈದೇಹಿಯವರು ಮದುವೆ ಎಂಬ ವಿದ್ಯಮಾನದ ಮೂಲಕವೇ ಜಾತಿ ಸಮಸ್ಯೆ–ಅಸ್ಪೃಶ್ಯತೆಯನ್ನೂ ಗ್ರಹಿಸಿರುವುದು. ಶಿವರಾಮ ಕಾರಂತರು 'ಚೋಮನ ದುಡಿ'ಯಲ್ಲಿ ಭೂಮಿ ಹಕ್ಕಿನ ನೆಲೆಯಲ್ಲಿ ಈ ಸಮಸ್ಯೆಯನ್ನು ಗ್ರಹಿಸಿದ್ದರೆ

ವೈದೇಹಿಯವರು (ತಮ್ಮ ಹಲವು ಕತೆಗಳಲ್ಲಿ ಸ್ತ್ರೀಯರ ಅಸ್ಮಿತೆಯನ್ನು ಪರಿಶೀಲಿಸಲು ಬಳಸುವಂತೆ) ಮದುವೆಯ ಮುಖಾಂತರ ಈ ಸಮಸ್ಯೆಯನ್ನು ಎದುರಿಸುವ ಸಾಧ್ಯತೆಯನ್ನು ಪರಿಶೀಲಿಸಿದ್ದಾರೆ. ಕೊನೆಗೆ ಅಂತರ್ಜಾತೀಯ ವಿವಾಹವು ಇದಕ್ಕೆ ಪರಿಹಾರವಲ್ಲ ಎಂಬ ಅರಿವಿನ ಜತೆಗೆ ಎಲ್ಲ ವ್ಯವಸ್ಥೆಗಳ ಒಳಗಿರುವ ಅಸ್ಪೃಶ್ಯತೆ, ಲಿಂಗ ತಾರತಮ್ಯ ಎಂಬ ಅಸ್ಪೃಶ್ಯತೆ ಇತ್ಯಾದಿಗಳನ್ನು ಈ ಸಮಸ್ಯೆಯ ಜತೆಗಿರಿಸಿ ಸಂಕೀರ್ಣವಾಗಿಸುತ್ತಾರೆ.

ಈ ಕಾದಂಬರಿಯಲ್ಲಿ ವೈದೇಹಿಯವರ ಮುಂದಿನ ಬರವಣಿಗೆಯಲ್ಲಿ, ಮುಖ್ಯವಾಗಿ ಅವರ ಕತೆಗಳಲ್ಲಿ ಕಾಣುವ ಸೂಕ್ಷ್ಮ ಅವಲೋಕನ, ಸ್ಪಂದನ ಮತ್ತು ನಿರೂಪಣೆಯ ಸೊಗಸು ಪೂರ್ಣವಾಗಿ ತೆರೆದುಕೊಂಡಿಲ್ಲ. ಆದರೆ ಪ್ರತಿಭಟನೆಯ ಆವೇಗ ಮುಂದಿನ ಹಂತದ ಬರವಣಿಗೆಯಲ್ಲಿ ಕಾಣುವುದಕ್ಕಿಂತ ತೀವ್ರವಾಗಿದೆ.

ಈ ಕಾದಂಬರಿಯ ಶೀರ್ಷಿಕೆ 'ಅಸ್ಪೃಶ್ಯರು' ಎನ್ನುವುದಕ್ಕೆ ಅದು ಸೂಚಿಸುವ ವಾಚ್ಯ ಅರ್ಥದ ಜತೆಗೆ ಧ್ವನ್ಯಾರ್ಥಗಳೂ ಇವೆ. ದಲಿತ ಅಸ್ಪೃಶ್ಯರು ಅನ್ನುವುದು ವಾಚ್ಯಾರ್ಥವಾದರೆ, ಹೆಂಗಸರು, ಸಹಸ್ಪಂದನೆ ಸಾಧ್ಯವಾಗದೆ ದೂರವಾಗಿಯೇ ಉಳಿಯುವ ಗಂಡ ಹೆಂಡತಿಯರು ಇತ್ಯಾದಿ ಅರ್ಥಗಳೂ ಈ ಶಬ್ದಕ್ಕೆ ಅಲ್ಲಲ್ಲಿ ಸೂಚಿತವಾಗಿವೆ. ಪ್ರಬಂಧ ಧ್ವನಿಯಾಗಿ, ಅಸ್ಪೃಶ್ಯರನ್ನು ಮುಟ್ಟಿಸಿಕೊಳ್ಳಲಾರೆವೆಂಬ ಹಠದಲ್ಲಿ ಅಟ್ಟ ಹತ್ತಿಯಾದರೂ ಅಡಗಿಕೊಳ್ಳುವ ಸಂಪ್ರದಾಯಸ್ಥರೇ ಅಸ್ಪೃಶ್ಯರೆನ್ನುವುದು ಕಾದಂಬರಿಯ ಧ್ವನಿ. ಸಂಪ್ರದಾಯಸ್ಥ ಬ್ರಾಹ್ಮಣರಿಗೆ ದಲಿತ ಸಮುದಾಯಗಳು ಅಸ್ಪೃಶ್ಯರಾದಂತೆ ಸಂಪ್ರದಾಯಸ್ಥ ದಲಿತ ಸಮುದಾಯಗಳಿಗೂ ಬ್ರಾಹ್ಮಣರು ಮನೆಗೆ ಬಂದರೆ ಅನಿಷ್ಟ ಎನ್ನುವುದು ಸಮಾಜಶಾಸ್ತ್ರಜ್ಞರಿಗೆ ಗೊತ್ತಿರುತ್ತದೆ. ಹಾಗಾಗಿ ಒಬ್ಬರನ್ನೊಬ್ಬರು ಮುಟ್ಟಿಸಿಕೊಳ್ಳದೆ ದೂರ ಸರಿಯುವುದು ಒಂದು ಸಾಮಾಜಿಕ ಸಮಸ್ಯೆ ಮಾತ್ರವಲ್ಲ, ಕೌಟುಂಬಿಕ, ವೈಯಕ್ತಿಕ ಮತ್ತು ಮಾನಸಿಕ ನೆಲೆಗಳ ಸಮಸ್ಯೆಗಳೂ ಹೌದು.

ಈ ಕಾದಂಬರಿಯ ಕೇಂದ್ರದಲ್ಲಿ ಒಂದು ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬವಿದೆ. ಅದು ಆಧುನಿಕತೆಗೆ ತೆರೆದುಕೊಳ್ಳುತ್ತಿದ್ದ ಕುಟುಂಬ. ಅದರ ಯಜಮಾನ ವಾಸುದೇವರಾಯರು ದಲಿತರ ಪರವಾದ ಚಿಂತನೆಯುಳ್ಳವರು, ಆದರೆ ಅವರಿಗೆ ಯಾವುದೇ ಬದಲಾವಣೆಯನ್ನು ತಾವೇ ಮುಂದಾಗಿ ಮಾಡಲು ಭಯವಿದೆ. ಆದರೆ ಅವರ ತಂಗಿಯ ಮಗ ಭಾಸ್ಕರ ಈ ಬದಲಾವಣೆಯನ್ನು ಸಾಧಿಸಲೆಂದು ಒಬ್ಬಳು ಕೊರಗರ ಹುಡುಗಿಯನ್ನು ಮದುವೆಯಾಗಿ, ತುಕ್ರಿ ಎಂದಿದ್ದ ಹೆಸರನ್ನು ಕುಮುದಿನಿ ಎಂದಿಟ್ಟು, ಅವಳಿಗೆ ಕೋಟ ಬ್ರಾಹ್ಮಣರ ಸಂಪ್ರದಾಯ ಮತ್ತು ಅಡಿಗೆಗಳನ್ನು ಕಲಿಸಿ ಕ್ರಾಂತಿ ಮಾಡುತ್ತಾನೆ. ಆದರೆ ಅವರಿಬ್ಬರನ್ನೂ ಎರಡೂ ಸಮುದಾಯಗಳು ದೂರವಿಡುತ್ತವೆ.

ಮಗನ ಕ್ರಾಂತಿಯಿಂದ ಅವನ ವಿಧವೆ ತಾಯಿ, ಅಣ್ಣ ವಾಸುದೇವರಾಯರ ಆಶ್ರಯದಲ್ಲಿರುವ ಪಾರ್ತಕ್ಕನಿಗೆ ದೊಡ್ಡ ಆಘಾತವಾಗುತ್ತದೆ. ಭಾಸ್ಕರ ಆಮೇಲೆ ಹಳ್ಳಿಯ

ಮನೆಗೆ ಬಾರದೆ ನಗರದಲ್ಲಿ ಪ್ರತ್ಯೇಕ ಮನೆ ಮಾಡಿಕೊಂಡಿರುತ್ತಾನೆ. ನಗರಗಳಲ್ಲಿ ಜಾತಿ ಅಸ್ಪೃಶ್ಯತೆಯ ಮತ್ತು ಮಹಿಳೆಯ ಅಸ್ಪೃಶ್ಯತೆಯ (ಮುಟ್ಟಾದ ಹೆಂಗಸರು ದೂರ ಕುಳಿತುಕೊಳ್ಳಬೇಕಾದುದು ಇತ್ಯಾದಿ) ಸಮಸ್ಯೆ ಅಷ್ಟು ತೀವ್ರವಾಗಿಲ್ಲ. ಭಾಸ್ಕರನ ಮನೆಗೆ ಕುಟುಂಬದ ಗಂಡಸರಾದ ವಾಸುದೇವರಾಯರು ಮತ್ತು ಅವರ ಮಗ ಶಿವ (ಪೇಟೆಯಲ್ಲಿ ವಿದ್ಯಾರ್ಥಿಯಾಗಿದ್ದವ) ಆಗಾಗ ಹೋಗಿ ಬರುತ್ತಿರುತ್ತಾರೆ. ಆದರೆ ಹೆಂಗಸರಿಗೆ ಈ ಬದಲಾವಣೆಗಳಿಂದೆಲ್ಲ ಕಳವಳವಾಗಿದೆ.

ಮನೆಯಲ್ಲಿರುವ ಹೆಂಗಸರೆಂದರೆ ವಾಸುದೇವರಾಯರ ಹೆಂಡತಿ ಗೌರಮ್ಮ, ರಾಯರ ತಂಗಿ, ವಿಧವೆ ಹಾಗೂ ಅನಾಥೆ, ಭಾಸ್ಕರನ ತಾಯಿ ಪಾರ್ತಕ್ಕ, ಹೆರಿಗೆಗೆ ಬಂದ ಮಗಳು ರತ್ನ, ಮದುವೆಯಾಗದ ಹೆಣ್ಣು ಮಕ್ಕಳಾದ ಸರೋಜ, ಶಾಮಿ ಇವರು. ಸರೋಜಳನ್ನು ಲೇಖಕಿಯ ಪ್ರತಿನಿಧಿ ಪಾತ್ರ ಎನ್ನಬಹುದು. ಅವಳು ದಲಿತರ ಜತೆಗೆ ಸ್ಪಂದಿಸುತ್ತ, ತಾನು ಕೂಡಾ ತನಗೆ ಸ್ಪಂದಿಸುವವನಾದರೆ ಕೊರಗರ ಹುಡುಗನನ್ನೇ ಮದುವೆಯಾದೇನೆಂದು ಕನಸು ಕಾಣುತ್ತ ಇರುತ್ತಾಳೆ. ಅಮ್ಮನಿಂದ ಮತ್ತು ಪಾರ್ತಕ್ಕನಿಂದ ಭಾಸ್ಕರ ಮತ್ತು ಅವನ ಹೆಂಡತಿಯನ್ನು ತೆಗಳುವ ಮಾತು ಬಂದಾಗಲೆಲ್ಲ ಸರೋಜ ಅವರನ್ನು ವಿರೋಧಿಸಿ ಮಾತಾಡುವವಳು. ಶಾಮಿ ಆಗಷ್ಟೆ ಮೈ ನೆರೆದ ಹುಡುಗಿ.

ಮನೆಯ ಹುಡುಗರು ಕೂಡ ಭಾಸ್ಕರನ ಬಗ್ಗೆ ಸಹಾನುಭೂತಿ ಹೊಂದಿರುವವರು. ಇದರಿಂದಾಗಿ ಸರೋಜಳನ್ನು ಹೊರತುಪಡಿಸಿದರೆ ಹೆಂಗಸರೆಲ್ಲ ಜಾತಿಯನ್ನು ಮೀರುವ ಬದಲಾವಣೆಗಳಿಗೆ ಭಯಪಡುವವರು ಎನ್ನುವಂತಾಗಿದೆ. ಅವರ ಭಯಕ್ಕೂ ಕಾರಣವಿಲ್ಲದೆ ಇಲ್ಲ. ಅವರಿಗೆ ಸಮಾಜವನ್ನು ನಿತ್ಯವೂ ಎದುರಿಸಿ ವ್ಯಂಗ್ಯದ ಮಾತುಗಳನ್ನು ಕೇಳುವ ಪರಿಸ್ಥಿತಿ ಒದಗಿದೆ. ಯಾರಾದರೂ ಕೊರಗರು ಮನೆಯ ಕಡೆಗೆ ಬಂದರೆ 'ಪಾರ್ತಕ್ಕನ ಕಡೆಯವರು' ಎಂದು ಕೆಲಸದ ಶೂದ್ರ ಹೆಂಗಸರೂ ತಮಾಷೆ ಮಾಡಿ ನಗುತ್ತಾರೆ. ಪಾರ್ತಕ್ಕನನ್ನು ಆ ಕಾರಣಕ್ಕೆ ಮನೆಬಿಟ್ಟು ಹೊರಡಿಸಲು ಆಗುತ್ತದೆಯೆ? ಅಲ್ಲದೆ ಜಾತಿಬಾಂಧವರು ಅವರ ಕುಟುಂಬವನ್ನು ಸೂಕ್ಷ್ಮವಾಗಿ ದೂರವಿಡುತ್ತಿರುವುದೂ, ಅದರಿಂದಾಗಿಯೇ ಸರೋಜನಿಗೆ ಮದುವೆಯಾಗದಿರುವುದೂ ಅವರ ಚಿಂತೆಗೆ ಕಾರಣವಾಗಿದೆ.

ಗಂಡಸರಿಗೆ ಯೋಚನೆಯಿಲ್ಲದ ಇನ್ನೊಂದು ಯೋಚನೆಯೂ ಹೆಂಗಸರಿಗೆ ಇದೆ. ಅದೇನೆಂದರೆ ಕುಟುಂಬ ನಡೆಸುವುದು ಕಷ್ಟವಾಗುತ್ತಾ ಹೋಗುತ್ತಿದೆ. ಆಧುನಿಕತೆ, ಜಾತಿ ವಿರೋಧ ಇತ್ಯಾದಿಗಳ ಜತೆಗೆ ಭೂಸುಧಾರಣೆಯೂ ಪ್ರವೇಶಿಸಿ, ಆರ್ಥಿಕ ವಿನ್ಯಾಸವನ್ನು ಬದಲಾಯಿಸುತ್ತಿದೆ. ಮನೆಗೆ ಕೆಲಸಕ್ಕೆ ಬರುತ್ತಿದ್ದ ಶೂದ್ರ ವರ್ಗದವರು ಈಗ ಸುಲಭವಾಗಿ ಸಿಗುವುದಿಲ್ಲ. ಮನೆಯಲ್ಲಿ ಹಿಂದಿನ ಅನುಕೂಲವೂ ಇಲ್ಲ. ಹೆಂಗಸರ ಮಟ್ಟಿಗೆ ಅದೆಲ್ಲ ಧರ್ಮ ನಾಶವಾಗುತ್ತಿರುವುದರ ಪರಿಣಾಮ; ಜಾತಿ ನೀತಿ ಎಲ್ಲಾ ಇದ್ದ ಕಾಲದಲ್ಲಿ

ಹೀಗಿರಲಿಲ್ಲ. ಗೌರಮ್ಮ ಕೆಲಸದಾಳು, ಶೂದ್ರನಾದ ಮಂಜನ ಜತೆಗೆ ನಡೆಸುವ ಒಂದು ಸಂಭಾಷಣೆ ನೋಡಿ :

'(ಗೌರಮ್ಮನಿಗೆ) ಕೂಡಲೇ ಮನೆವಾರ್ತೆಯ ಖರ್ಚು, ಇನ್ನೂ ಮದುವೆಗಿರುವ ಹೆಣ್ಣು ಮಕ್ಕಳು, ಎಲ್ಲ ನೆನಪಾಗುತ್ತದೆ. ಮುಂಚೆ ಗೇಣಿ ಅಕ್ಕಿಯಾದರೂ ಬರುತ್ತಿತ್ತು...... ಬರುವ ದುಡ್ಡು ಆಚೆಗೆಳೆದರೆ ಈಚೆಗಿಲ್ಲ, ಈಚೆಗೆಳೆದರೆ ಆಚೆಗಿಲ್ಲ. ಬದುಕಿನಲ್ಲಿ ಗೆಲುವಿಲ್ಲ. ತನ್ನ ಮನಸ್ಸಿಗೇನೋ ಹೀಗೆಲ್ಲ ಆಗುತ್ತಿರುವುದಕ್ಕೆ ವಾಸುದೇವರಾಯರು ಧರ್ಮ ಆಚಾರವೆಲ್ಲ ಬಿಟ್ಟು ಭಾಸ್ಕರನ ಮನೆಗೆ ಹೋಗಿ ಬರುತ್ತಿರುವುದೇ ಕಾರಣವಂತ ಕಾಣುತ್ತದೆ. ಆಚಾರವೇ ಪ್ರಥಮ ಧರ್ಮ ಅಂತ ಹೇಳುತ್ತಿದ್ದರು ತನ್ನ ಅಪ್ಪಯ್ಯ. ಆದ್ರೆ ತನ್ನ ಮನೆಯಲ್ಲಿ ಈಗೀಗ ಆಚಾರವೇ ಕೆಟ್ಟು ಹೋಗುತ್ತ ಇದೆ. ಅಂತೆಲ್ಲ ಹೇಳಿದಾಗ ಮಂಜನಿಗೂ ಬೇಸರವಾಗುತ್ತದೆ. 'ಅಯ್ಯ ಯಾಕೆ ಹಾಗೆಲ್ಲ ಮಾಡುತ್ತಾರೆ? ಭಾಸ್ಕರಯ್ಯನ ಮನೆಗೆ ಹೋಗುವುದನ್ನು ಅವರು ನಿಲ್ಲಿಸಬೇಕು. ಕೊರಗರು ಎಂದರೆ ಅಂಥಿಂಥ ನೀಚ ಜಾತಿಯ? ನಾವು ಕೂಡ ಯಾಕೆ, ಕೂಸಾಳುಗಳು ಕೂಡ ಅವರನ್ನು ಮುಟ್ಟಿಸಿಕೊಳ್ಳುವುದಿಲ್ಲ. ಅಮ್ಮ ಬಿರಾಮಣರು ಬಿರಾಮಣರೇ. ಬಿರಾಮಣರು ಅಂತಲ್ಲ, ನಮಗಿಂತ ಊಂಚು ಜಾತಿಯವರು ಯಾರೇ ಇರಲಿ, ನಮ್ಮ ಮನೆ ಬಾಗಿಲಿಗೆ ಬಂದರೆ ನಮಗೆ ಪಾಪ. ನಾನೇ ಒಬ್ಬ ಹಳೆಪೈಕದವನ ಮನೆಗೆ ಹೋದರೆ ಅವನಿಗೆ ಪಾಪ ಹೊರತು ನಮಗಲ್ಲ.." (ಪುಟ 44–45)

ಮೇಲಿನ ಸಂಭಾಷಣೆಯಲ್ಲಿಯೂ, ಬೇರೆ ಕಡೆಗಳಲ್ಲಿ ಬರುವ ಮಾತುಗಳಲ್ಲಿಯೂ ತಿಳಿಯುವ ವಿಷಯವೇನೆಂದರೆ ಜಾತಿಯನ್ನು ಬಿಡುವುದಾಗಲೀ, ಅಳಿಸಿಹಾಕುವುದಾಗಲಿ ಅಷ್ಟು ಸುಲಭವಲ್ಲ. ಪ್ರತಿಯೊಂದು ಜಾತಿಯಲ್ಲಿಯೂ ಮತ್ತೆಷ್ಟೋ ಜಾತಿಗಳು, ಒಬ್ಬರು ಮತ್ತೊಬ್ಬರಿಗಿಂತ ಮೇಲು ಅಥವಾ ಕೀಳು ಎಂಬ ಮಾನಸಿಕತೆ; ಬ್ರಾಹ್ಮಣರಲ್ಲಿಯೂ ಹಲವು ಪಂಗಡಗಳು. ಭಾಸ್ಕರ ಒಂದು ಕಡೆ ಹೇಳುತ್ತಾನೆ : 'ಈ ತಪ್ಪು ಕೇವಲ ನಮ್ಮಿಂದಲೇ ಎಂದರೆ ಬರೀ ಬ್ರಾಹ್ಮಣರಿಂದ ಮಾತ್ರವೇ ಆಯಿತೆಂದು ನಾನು ಹೇಳುತ್ತಿಲ್ಲ. ಎಲ್ಲ ಜಾತಿಯ ಒಳಕೋಣೆಯಲ್ಲಿ ಇಣುಕಿ ನೋಡಿ. ಮೇಲು ಕೀಳುಗಳ ಹಾಸು ಹಾಸು ಸಿಗುತ್ತದೆ. ಯಾಕೆ, ಕೊರಗರನ್ನೇ ತೆಗೆದುಕೊಳ್ಳಿ, ಕಪ್ಪಡದ ಕೊರಗರಿಗೆ ತಾವು ಶ್ರೇಷ್ಠ ಅಂತ ಉಂಟು. ಅವರು ಸೊಪ್ಪಿನ ಕೊರಗರು ಮನೆ ಬಾಗಿಲಿಗೆ ಬಂದರೆ ಗೆರಟೆಯಲ್ಲಿಯೇ ನೀರು ಕೊಡುತ್ತಾರೆ..... ಸೊಪ್ಪಿನ ಕೊರಗರು ನೀಚರಲ್ಲಿ ನೀಚರು ಎಂದು ಕೊರಗರೇ ಹೇಳುತ್ತಾರೆಯಾದ್ದರಿಂದ.'

ಕಾದಂಬರಿಯಲ್ಲಿ ವಾಸುದೇವ ರಾಯರ ಮನೆಯ ದೈನಂದಿನ ಜೀವನದಲ್ಲಿ ಕಾಣಸಿಗುವ ಹಲವು ಬಗೆಯ ಸ್ಪೃಶ್ಯಾಸ್ಪೃಶ್ಯತೆಗಳ ವಿವರಗಳಿವೆ. ಈ ಎಲ್ಲ ದೈನಂದಿನ ಬದುಕಿನ ನಡೆಯ ನಡುವೆ ಭಾಸ್ಕರನ ಕತೆ, ಅಂದರೆ ಜಾತಿಯ ಸಲುವಾಗಿ ಅವನು ಮಾಡಿದ ಕ್ರಾಂತಿಯ ಕತೆ ಅನಾವರಣಗೊಳ್ಳುತ್ತಾ ಹೋಗುತ್ತದೆ. ಕೊನೆಗೆ ಭಾಸ್ಕರನ

ಕತೆಯೇ ಪ್ರಧಾನ ನೆಲೆಗೆ ಬರುತ್ತದೆ. ತನ್ನ ಕ್ರಾಂತಿಕಾರಕ ನಿಲುವಿನಿಂದ ಮೊದಲು ಕೆಲಸ ಕಳೆದುಕೊಳ್ಳುವ ಭಾಸ್ಕರ, ತನ್ನ ಯಾವುದೋ ಹೋರಾಟದಿಂದಾಗಿ ಜೈಲಿಗೆ ಹೋಗುತ್ತಾನೆ. ಆಗ ಅವನ ಹೆಂಡತಿ ಕುಮುದಿನಿ ತುಂಬು ಗರ್ಭಿಣಿ. ಅವಳ ಕಡೆಯವರೂ ಅವಳನ್ನು ಬಹಿಷ್ಕರಿಸಿದ್ದಾರೆ. ಸುತ್ತಮುತ್ತಲಿನವರು ಸಹಾಯ ಮಾಡುವವರಲ್ಲ. ಆಗ ವಾಸುದೇವರಾಯರು ಹೆಂಡತಿ ಗೌರಮ್ಮ ಮತ್ತು ಪಾರ್ತಕ್ಕನ ತೀವ್ರ ವಿರೋಧದ ನಡುವೆ ಕುಮುದಿನಿಯನ್ನು ಮನೆಗೆ ಕರೆದು ತರುತ್ತಾರೆ. ಆಗ ಪಾರ್ತಕ್ಕ ಕಾಣೆಯಾಗುತ್ತಾರೆ. ಅವರನ್ನು ಹುಡುಕಿದಾಗ ಅವರು ದೇವರ ಮನೆಯ ಬಾಗಿಲಿನ ಹಿಂದೆ ಅಡಗಿರುವುದು ತಿಳಿಯುತ್ತದೆ. ಅವರ ವರ್ತನೆಯಿಂದ ವಾಸುದೇವರಾಯರ ಹಠ ಜೋರಾಗುತ್ತದೆ. ಅವರು ಕುಮುದಿನಿಯನ್ನು ದೇವರ ಕೋಣೆಗೇ ಹೊಗಿಸುತ್ತೇನೆಂದು ಮುಂದುವರಿದಾಗ ಪಾರ್ತಕ್ಕ ಅಟ್ಟ ಹತ್ತಿ ಎಲ್ಲೋ ಅಡಗಿಕೊಳ್ಳುತ್ತಾರೆ. ವಾಸುದೇವರಾಯರು, ಶಿವ, ಮತ್ತು ಸಣ್ಣಹುಡುಗ ಪುಟ್ಟ, ಯಾವುದೋ ಅಡಗಿ ಕುಳಿತ ಪ್ರಾಣಿಯನ್ನು ಹೊರಗೆಳೆಯುವಂತೆ ಲಘುವಾಗಿ ಮಾತಾಡುತ್ತಾ ಪಾರ್ತಕ್ಕನನ್ನು ಹೊರಗೆಳೆಯುವುದಕ್ಕೆ ಕಾರ್ಯಾಚರಣೆ ಪ್ರಾರಂಭಿಸಲು ಸಿದ್ಧತೆ ನಡೆಸುವುದರೊಂದಿಗೆ ಕಾದಂಬರಿ ಮುಕ್ತಾಯವಾಗುತ್ತದೆ.

ಈ ಕಾದಂಬರಿಯಲ್ಲಿ ವೈದೇಹಿಯವರು ಜಾತಿ ವ್ಯವಸ್ಥೆಯ ಸಮಸ್ಯೆಯ ಸಂಕೀರ್ಣತೆಯನ್ನು ಚಿತ್ರಿಸಿ, ಅದಕ್ಕೆ ಪರಿಹಾರ ಸುಲಭವಲ್ಲ ಎನ್ನುವುದನ್ನಷ್ಟೇ ಸೂಚಿಸಿದ್ದಾರೆ. ವಿಚಿತ್ರವೆಂದರೆ ಸಮಾಜದಲ್ಲಿ ಸರಿ ಮಾಡಲು ಹೋದಾಗಲೇ ಅದು ಸಮಸ್ಯೆ ತಂದೊಡ್ಡುವುದು.

ಕುಟುಂಬದಲ್ಲಿ ಸಣ್ಣಮಟ್ಟಿಗೆ ಕಾಣಿಸಿಕೊಳ್ಳುವ ಯಾವುದೇ ಅತಿರೇಕ ಸಮಾಜದಲ್ಲಿ ಬೃಹದಾಕಾರವಾಗಿ ಕಾಣಿಸಿಕೊಳ್ಳುತ್ತದೆ ಎನ್ನುವುದಕ್ಕೆ ಕಾಫ್ಕಾನ ಬದುಕು ಮತ್ತು ಅವನದನ್ನು ಸಮಾಜದ ರೂಪಕಗಳನ್ನಾಗಿ ಪರಿವರ್ತಿಸಿದ್ದು ಸಾಕ್ಷಿಯಾಗಿದೆ. ವೈದೇಹಿಯವರ 'ಅಸ್ಪೃಶ್ಯರು' ಕೃತಿಯಲ್ಲಿಯೂ ಹೀಗೆಯೇ, ಸಮಾಜದಲ್ಲಿ ದೊಡ್ಡ ಸಮಸ್ಯೆಯಾಗಿ ನಿಂತಿರುವ ಅಸ್ಪೃಶ್ಯತೆ ಕುಟುಂಬದಲ್ಲಿ ಗುರುತಿಸಲಾಗದಷ್ಟು ಸೂಕ್ಷ್ಮ ರೂಪಗಳಲ್ಲಿ ಇರುವುದನ್ನು ಅವರು ಓದುಗನ ಅರಿವಿಗೆ ತಂದುಕೊಡುತ್ತಾರೆ. ಸ್ತ್ರೀಯರನ್ನು ನಡೆಸಿಕೊಳ್ಳುವ ಹಲವು ನೆಲೆಗಳಲ್ಲಿ ಅಸ್ಪೃಶ್ಯತೆ ಸೂಕ್ಷ್ಮವಾಗಿ ಇದ್ದರೂ ಇದನ್ನೂ ಸಂಪ್ರದಾಯ ಎಂದು ಹೆಂಗಸರೇ ವೈಭವೀಕರಿಸುತ್ತಾರೆ. ಕಾದಂಬರಿ ಯಾವುದನ್ನೂ ಫೋಕಸ್ ಮಾಡದೆ ವಾಸ್ತವವನ್ನು ಅನನ್ಯವಾಗಿ ಗ್ರಹಿಸಿ, ಓದುಗರ ಮುಂದಿಡುತ್ತದೆ ಅಷ್ಟೆ.



'What attracted me towards Vaidehi's story 'The Confession' is the internal drama enacted by the narrator. The locale of the story is a train journey, although no specific town or route is mentioned; leading the reader to conclude that the journey is really an inward one. From its very first sentence the story has the quality of a secret cult about it. The narrator, is a married woman, has a tale to release. And it appears to be the rule of the cult to pass on the story to someone else. The art of such story-telling is at the very heart of women's survival.

In the 'The Confession' Vaidehi departs from her usual mode of writing which celebrates thick and dense details of women's everyday lives; here she explores the fundamentals of a woman's world. The dangers involved in such an enterprise make the writer lift the experience out of everyday reality to place it in a twilight region that oscillates between modern story and feminist myth.'

- Dr. D.R. Nagaraj

(In the anthology 'A Southern Harvest')

# ಪ್ರೀತಿಯ ಗೆಳತಿ ವೈದೇಹಿ

✦ ವೀಣಾ ಶಾಂತೇಶ್ವರ

'ವೈದೇಹಿ' ಅಂದೊಡನೆ ನನ್ನ ಮನಸ್ಸಿನಲ್ಲಿ ಮೂಡುವುದು ಒಂದು ಸ್ನಿಗ್ಧ, ಮೃದು-ಮಧುರ, ಅತ್ಯಂತ ಸಂವೇದನಾಶೀಲ, ಅರ್ಥಗರ್ಭಿತ ಮಂದಹಾಸದ ಮಹಿಳೆಯ ಚಿತ್ರ. ಅದರೊಂದಿಗೆ ಬೆರೆತಿರುವುದು ಪ್ರೀತಿ, ಸ್ನೇಹ, ಆತ್ಮೀಯತೆಯ ಭಾವಗಳು. ಕಳೆದ ನಲ್ವತ್ತು ವರ್ಷಗಳಿಗಿಂತ ದೀರ್ಘಕಾಲದ ಹಿಂದಿನಿಂದ ಉಳಿದು-ಬೆಳೆದು ಬಂದಿರುವ ನಮ್ಮ ಗೆಳೆತನ ನಮ್ಮಿಬ್ಬರ ಪಾಲಿಗೂ ಒಂದು ಅಪೂರ್ವ ಭಾಗ್ಯವೆಂದೇ ನಾವಿಬ್ಬರೂ ನಂಬಿಕೊಂಡು ಬಂದಿದ್ದೇವೆ. ನಾವಿಬ್ಬರೂ ಹುಟ್ಟಿದ್ದು ಫೆಬ್ರುವರಿ 1945ರಲ್ಲಿ. ವೈದೇಹಿ ನನಗಿಂತ ಹತ್ತು ದಿನ ದೊಡ್ಡಾಕೆ. ನನ್ನ ಮೊದಲ ಕಥಾಸಂಕಲನ ಪ್ರಕಟವಾದ (ಅರವತ್ತರ ದಶಕದ ಪ್ರಾರಂಭದಲ್ಲಿ) ಹಲವಾರು ವರ್ಷಗಳ ನಂತರ ಆಕೆ ಬರೆಯಲು ತೊಡಗಿದರು. 'ಲಂಕೇಶ ಪ್ರತಿಕೆ'ಯ ಮೂಲಕವೇ ಎಲ್ಲರಂತೆ ನನಗೂ ಆಕೆ ಪರಿಚಯವಾದದ್ದು. ತುಂಬ ಶ್ರದ್ಧೆ-ಉತ್ಸಾಹ-ಲವಲವಿಕೆಯಿಂದ ಬರೆಯತೊಡಗಿದ ವೈದೇಹಿ ಲೇಖಕಿಯಾಗಿ ಮಾಗುತ್ತಲೇ ಸಾಗಿದರು. ಅನೇಕ ಸಂದರ್ಭಗಳಲ್ಲಿ ಆಕೆ ಹೇಳಿದ್ದಾರೆ, 'ನಮಗೆಲ್ಲ ಪ್ರಾರಂಭದಲ್ಲಿ ಮೈ ಚಳಿ ಬಿಟ್ಟು ಬರೆಯತೊಡಗಲು ವೀಣಾ ಅವರೇ ಪ್ರೇರಣೆ'- ಅಂತ. ಇರಬಹುದು. ಆದರೆ ವೈದೇಹಿ ಸ್ವಂತದ ಪ್ರತಿಭೆಯಿಂದ, ಅನುಭವದ ಪಕ್ವತೆಯಿಂದ, ತಮ್ಮದೇ ಆದ ಅನನ್ಯ ಅಭಿವ್ಯಕ್ತಿ ವಿಧಾನದಿಂದ, ಬಹಳ ಮುಂದೆ ಹೋದರು. ಒಬ್ಬ ಸಂಪ್ರದಾಯಸ್ಥ ಕುಟುಂಬದ, ಸಾಮಾನ್ಯ ಶೈಕ್ಷಣಿಕ ಹಿನ್ನೆಲೆಯ, ಸೀಮಿತ ಅವಕಾಶಗಳ ವಾತಾವರಣದಲ್ಲಿ ಬೆಳೆದ ಕನ್ನಡ ಮಹಿಳೆ ಸಾಹಿತ್ಯಲೋಕದಲ್ಲಿ ಇಷ್ಟೊಂದು ಗಮನಾರ್ಹ ಹೆಜ್ಜೆ ಗುರುತುಗಳನ್ನು ಮೂಡಿಸಿದ್ದು ನಿಜವಾಗಿಯೂ ಸ್ತುತ್ಯ, ಅಭಿನಂದನಾರ್ಹ.

ವೈಯಕ್ತಿಕವಾಗಿ ನಾವಿಬ್ಬರೂ ಎಂದಿನಿಂದಲೂ ಗೆಳತಿಯರು. ಒಟ್ಟಾಗಿ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದೇವೆ. ಒಟ್ಟಾಗಿ ಅಮೇರಿಕೆಯವರೆಗೂ ಹೋಗಿ 'ಸಾಹಿತ್ಯರಂಗ' ಸಮಾರಂಭದಲ್ಲಿ ಪಾಲುಗೊಂಡಿದ್ದೇವೆ. ಫೋನಿನಲ್ಲಿ ಯಾವಾಗಲೂ ಹರಟೆ ಹೊಡೆಯುತ್ತೇವೆ. ನಮ್ಮಿಬ್ಬರ ಮನೆಗಳು ಅಕ್ಕಪಕ್ಕದಲ್ಲೇ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅಂದುಕೊಂಡಿದ್ದೇವೆ.

ನಮಗೆ ಬಹಳಷ್ಟು Common ಅಭಿರುಚಿಗಳಿವೆ. ತುಂಬ ಸಂವೇದನಾಶೀಲೆಯಾದ ಭಾವಜೀವಿಯಾದ ವೈದೇಹಿ ಪ್ರಸಂಗ ಬಂದಾಗ ನಿಷ್ಠುರಿಯೂ ಆಗಬಲ್ಲರು. ಹಾಗೆ ಆಕೆ ಅಂತರ್ಯದಲ್ಲಿ ಬಹಳ ಜಾಣೆ ಹೆಣ್ಣುಮಗಳು. ಆಕೆಯ ಗೆಳೆತನ ನನಗೆ ಬಹಳ ಅಮೂಲ್ಯವಾದದ್ದು.

ಈ ನನ್ನ ಗೆಳತಿಗೆ ಎಪ್ಪತ್ತೈದು ತುಂಬುತ್ತಿರುವ ಈ ಸಂದರ್ಭದಲ್ಲಿ ನನ್ನ ಹಾರ್ದಿಕ ಶುಭಹಾರೈಕೆಗಳು. ವೈದೇಹಿ ಬದುಕು-ಬರಹ ಕುರಿತಾದ ಪುನರಾವಲೋಕನ ರೂಪದ ಈ ಕೃತಿಯನ್ನು ಹೊರತರುತ್ತಿರುವ ಎಲ್ಲ ಆತ್ಮೀಯರಿಗೂ ಅಭಿನಂದನೆಗಳು.



# ಒದಗಿ ಬಂದ ಬಂಧು

✦ ಕಡಿದಾಳು ಶಾಮಣ್ಣ, ಶ್ರೀದೇವಿ

ನಮ್ಮ ಮಗಳು ಉಲೂಪಿಯನ್ನು ಪಿ.ಯು.ಸಿ.ಗೆ ಸೇರಿಸಬೇಕಾದ ಸಂದರ್ಭದಲ್ಲಿ ಶಿವಮೊಗ್ಗಕ್ಕಿಂತ ಉಡುಪಿಯ ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜೇ ಉತ್ತಮವೆಂದು ನನಗನ್ನಿಸಿತು. ಹೆಗ್ಗೋಡಿನ ನೀನಾಸಂನಲ್ಲಿ ನಾಟಕ ನೋಡಲು ನಾನು ಮತ್ತು ನಮ್ಮ ಮನೆಯವರು ಹೋಗಿದ್ದಾಗ, ಅದೇ ಸಮಯದಲ್ಲಿ ಅಲ್ಲಿಗೆ ಬಂದಿದ್ದ ಶ್ರೀಮತಿ ವೈದೇಹಿಯವರಲ್ಲಿ ವಿಚಾರಿಸಿಕೊಂಡಿದ್ದೆ. ಉಡುಪಿಯಲ್ಲಿ ಅವಳನ್ನು ಓದಿಸಲು ಉತ್ತಮವಾದ ಸ್ಥಳವೆಂದು ಅನ್ನಿಸಿದ್ದು ಮುಖ್ಯತಃ ಶ್ರೀಮತಿ ವೈದೇಹಿಯವರೂ ಅವರ ಯಜಮಾನರಾದ ಮತ್ತು ಶಿವಮೊಗ್ಗದವರೇ ಆದ ಶ್ರೀನಿವಾಸಮೂರ್ತಿಯವರೂ ಉಡುಪಿಯಲ್ಲಿ ಇದ್ದುದರಿಂದ. ಅವರು ಉಲೂಪಿಯ ಲೋಕಲ್ ಗಾರ್ಡಿಯನ್ ರಾಗಿರುತ್ತಾರೆಂಬ ಆಶೆ ನಮ್ಮದು. ಹಾಗೆಯೇ ಆಯಿತು.

ಇನ್ನೊಂದು ಕಾರಣ ನಮ್ಮ ಜಿ.ಪಿ.ಬಸವರಾಜ್ ಆಗ ಪ್ರಜಾವಾಣಿಯ ವರದಿಗಾರರಾಗಿ ಮಂಗಳೂರಿನಲ್ಲಿ ಹೆಂಡತಿ ಶಾಂತಾ ಜೊತೆ ನೆಲೆಸಿದ್ದುದು. ಅವರು ಉಡುಪಿಗೆ ಬಂದು ಉಲೂಪಿಯನ್ನು ವಿಚಾರಿಸಿಕೊಳ್ಳಲು ಅನುಕೂಲವಾದೀತು ಎಂಬುದು.

ನಾನು-ಶ್ರೀದೇವಿ ಉಲೂಪಿಯನ್ನು ನಮ್ಮ ಜೀಪಿನಲ್ಲೇ ಹಾಸಿಗೆ, ಟ್ರಂಕ್ ಸಮೇತ ಕೂರಿಸಿಕೊಂಡು, ನಾನೇ ಜೀಪ್ ಬಿಟ್ಟುಕೊಂಡು ಮೇಗರವಳ್ಳಿ, ನಾಲೂರು ಮೇಲಾಸಿ ಆಗುಂಬೆ ಘಾಟಿ ಇಳಿದು ಉಡುಪಿಯ ಎಂ.ಜಿ.ಎಂ ಕಾಲೇಜಿಗೆ ಉಲೂಪಿಯನ್ನು ಸೇರಿಸಿದೆವು. ಬಳಿಕ ಕಾಲೇಜು ಹಾಸ್ಟೆಲಿನ ವಾರ್ಡನ್ ಅನುಮತಿ ಪಡೆದು ಉಲೂಪಿಯನ್ನು ಕರೆದುಕೊಂಡು ಉಡುಪಿಯಲ್ಲಿರುವ ವೈದೇಹಿಯವರ ಮನೆಗೆ ಮೊದಲ ಸಾರಿಗೆ ಹೋದೆವು. ವೈದೇಹಿಯವರು ನಗುಮುಖದಿಂದ ನಮ್ಮನ್ನು ಸ್ವಾಗತಿಸಿ, ಮೊದಲು ಉಲೂಪಿಯನ್ನು ಮುಟ್ಟಿ ಪ್ರೀತಿಯಿಂದ ಮಾತಾಡಿಸಿದರು. ನಂತರ ನಮ್ಮನ್ನು ಮನೆಯೊಳಗೆ ಕರೆದುಕೊಂಡು ಹೋದರು. ಶಿವಮೊಗ್ಗ ಘಟ್ಟದ ಮೇಲಿಂದ ಬಂದ ನಮ್ಮನ್ನು ನೋಡಿ ವೈದೇಹಿಯವರು ಸಂತೋಷಗೊಂಡ ರೀತಿಯನ್ನು ನೋಡಿದ ಸಂತೋಷ ನಮಗೇ ಗೊತ್ತದು. ಆಸರಕ್ಕೆ

ಏನು ಕೊಡಲಿ ಎಂದು ಕೇಳುತ್ತ ಉಲೂಪಿಯನ್ನು ಕೈಹಿಡಿದು ಕರೆದುಕೊಂಡು ಅಡುಗೆಮನೆಗೇ ಹೋದರು. ವೈದೇಹಿಯವರ ಯಜಮಾನರಾದ ಶ್ರೀನಿವಾಸಮೂರ್ತಿಯವರು ಹೊರಗೆ ಪೇಟೆ ಕಡೆ ಹೋಗಿದ್ದರು. ನಾವು ಪಾನಕ ಕುಡಿದು ಮುಗಿಸುವ ಹೊತ್ತಿಗೆ ಶ್ರೀನಿವಾಸಮೂರ್ತಿ ಯವರೂ ಮನೆಗೆ ಬಂದರು. ಅವರೂ ಲಿಂಬೇಹಣ್ಣಿನ ಶರಬತ್ತು ಕುಡಿಯುತ್ತ ನಮ್ಮ ಪ್ರಯಾಣ, ಉಲೂಪಿ ಎಂ.ಜಿ.ಎಂ ಕಾಲೇಜಿಗೆ ಮತ್ತು ಹಾಸ್ಟೆಲಿಗೆ ಸೇರಿದ ವಿಷಯಗಳನ್ನೆಲ್ಲಾ ವಿಚಾರಿಸುತ್ತ ನಮ್ಮೆಲ್ಲರ ಜೊತೆ ಸೇರಿಕೊಂಡರು. ಅದೇ ಮೊದಲು ಅವರ ಮನೆಗೆ ಹೋದರೂ ಬೇರೊಬ್ಬರ ಮನೆಗೆ ಬಂದಿದ್ದೇವೆಂಬ ಭಾವನೆಯೇ ನಮಗೆ ಬರಲಿಲ್ಲ. ನಮ್ಮ ಹತ್ತಿರದ ಬಂಧುಗಳ ಮನೆಯೇ ಎಂಬ ಭಾವನೆ ನಮಗೆ ಮತ್ತು ಉಲೂಪಿ, ಲಾಜವಂತಿಯರಿಗೂ ಅಂದು ಬಂದಿತ್ತು. ನಮಗೆ ಉಲೂಪಿ, ಲಾಜವಂತಿಯವರಿದ್ದ ಹಾಗೇ ವೈದೇಹಿಯವರಿಗೂ ನಯನ, ಪಲ್ಲವಿಯರೆಂಬ ಇಬ್ಬರು ಮಕ್ಕಳು. ನಯನ ಮತ್ತು ಪಲ್ಲವಿಯವರು ಉಲೂಪಿ ಲಾಜವಂತಿ ಜೊತೆ ಸ್ನೇಹಿತೆಯರಂತೆ ಮಾತುಕತೆ ಆಡ ತೊಡಗಿದರು. ನನಗೆ ಮತ್ತು ಶ್ರೀದೇವಿಗೆ ಮಗಳನ್ನು ದೂರ ಘಾಟಿ ಕೆಳಗೆಲ್ಲೋ ಇರುವ ಕಾಲೇಜಿನ ಹಾಸ್ಟೆಲಿನಲ್ಲಿ ಬಿಟ್ಟು ಹೋಗುತ್ತಿದ್ದೇವೆಂಬ ಯೋಚನೆ ಬರಲೇ ಇಲ್ಲ. 'ಉಲೂಪಿ ಹಾಸ್ಟೇಲಿನಲ್ಲಿದ್ದಾಳೆಂದು ನೀವು ಚಿಂತೆ ಮಾಡಲೇಬೇಡಿ. ನಾವಿದ್ದೇವಲ್ಲ' ಎಂದು ವೈದೇಹಿ ಧೈರ್ಯ ನೀಡಿದ್ದು ನನಗಿಂದೂ ನೆನಪಿದೆ. ಅದೇ ದಿನ ಸಂಜೆ ಯಾವ ಚಿಂತೆಯೂ ಇಲ್ಲದೆ ಉಲೂಪಿಯನ್ನು ಅವಳ ಹಾಸ್ಟೆಲಿಗೆ ಬಿಟ್ಟು ನಾವು ಆಗುಂಬೆ ಹತ್ತಿರದ ನನ್ನ ಅತ್ತೆ ಮನೆಯಾಗಿದ್ದ ನಾಲೂರು ಸೇರಿ, ರಾತ್ರಿ ಅವರ ಮನೆಯಲ್ಲೇ ಉಳಿದು, ಸಂಜೆ ಹೊತ್ತಿಗೆ ಶಿವಮೊಗ್ಗ ಸೇರಿ, ಅಲ್ಲಿಂದ ಕೇವಲ 15 ಕಿ.ಮೀ. ದೂರವಿರುವ ನಮ್ಮ ತೋಟದ ಮನೆ ಭಗವತೀಕೆರೆಯನ್ನು ಸೇರಿಕೊಂಡೆವು. ನಮ್ಮ ಜೊತೆ ನಮ್ಮ ಚಿಕ್ಕ ಮಗಳಾದ ಲಾಜವಂತಿ ಮಾತ್ರ 'ಅಮ್ಮಾ, ಅಕ್ಕ ಈ ಕಡೇನೇ ಯೋಚನೆ ಮಾಡ್ತಿರಬಹುದಲ್ಲವಾ' ಎಂದು ಆಗಾಗ ಕೇಳುತ್ತ ವೈದೇಹಿ ಶ್ರೀನಿವಾಸಮೂರ್ತಿಗಳು ನಯನಕ್ಕ ಪಲ್ಲವಿ ಅಕ್ಕ ಎಲ್ಲರೂ ಇದ್ದಾರಲ್ಲವಾ ಎಂದು ನಮಗೇ ಸಮಾಧಾನ ಮಾಡುತ್ತಿದ್ದದ್ದು ನೆನೆದು ಈಗಲೂ ನಗು ಬರುತ್ತದೆ. ವೈದೇಹಿಯವರು ಲೋಕಲ್ ಗಾರ್ಡಿಯನ್ ಆಗಿದ್ದುದರಿಂದ ಒಂದು ದಿನವೂ ನಮಗೆ ಉಲೂಪಿ ಅಷ್ಟು ದೂರದ ಘಟ್ಟದ ಕೆಳಗಿನ ಉಡುಪಿಯಲ್ಲಿದ್ದಾಳೆಂಬ ಬೇಸರವಾಗಲಿಲ್ಲ. ಆಗಿಂದ ಇದ್ದ ವೈದೇಹಿ ಮತ್ತು ಶ್ರೀನಿವಾಸಮೂರ್ತಿಯವರ ಜೊತೆಯ ಪತ್ರ ವ್ಯವಹಾರ ಈಗಲೂ ಮುಂದುವರೆದಿದೆ. ಅವರ ಮೊದಲನೆಯ ಮಗಳ ಮದುವೆಯ ಸಂದರ್ಭದಲ್ಲಿ ಇಬ್ಬರೂ ಶಿವಮೊಗ್ಗದಿಂದ ಬಸ್ ಹತ್ತಿಕೊಂಡು ನಮ್ಮ ಮನೆಯಿರುವ ಭಗವತೀಕೆರೆಗೆ ಬಂದು ಆಹ್ವಾನ ಪತ್ರವನ್ನು ಕೊಟ್ಟು ಆಹ್ವಾನಿಸಿ ಬಸ್ಸಿನಲ್ಲೇ ವಾಪಸ್ ಶಿವಮೊಗ್ಗಕ್ಕೆ ಹೋಗಿದ್ದರು.

ಈಚೆಗೆ ಕೆಲ ವರ್ಷಗಳ ಹಿಂದೆ ಮಂಗಳೂರಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದಾಗ, ನಾನು ಕನ್ನಡದಲ್ಲಿ ಛಾಯಾಚಿತ್ರಗಳ ನೂರಾರು ಗ್ರೀಟಿಂಗ್ ಕಾರ್ಡುಗಳನ್ನು

ತಯಾರು ಮಾಡಿಕೊಂಡು, ಅವುಗಳನ್ನೆಲ್ಲ ನನ್ನ ಫಿಯಟ್ ಕಾರಿನಲ್ಲಿ ತುಂಬಿಕೊಂಡು, ನಮ್ಮೂರ ಹತ್ತಿರದ ಮೈದೊಳಲು ಊರಿನ ಗೆಳೆಯರಾದ ಪರಮೇಶ್ವರ ಮತ್ತು ವಿಶ್ವನಾಥ ಇವರುಗಳನ್ನು ಕೂರಿಸಿಕೊಂಡು, ಸಮ್ಮೇಳನದಲ್ಲಿ ಮಾರಾಟ ಮಾಡಿಕೊಂಡು ಬರಲು ಮಂಗಳೂರಿಗೆ ಹೋಗಿದ್ದೆ. ಸಮ್ಮೇಳನಕ್ಕೆ ಬಂದಿದ್ದ ವೈದೇಹಿಯವರು ಕನ್ನಡದಲ್ಲಿ ಮುದ್ರಿಸಿದ್ದ ಆ ಶುಭಾಶಯ ಚಿತ್ರಗಳನ್ನು ನೋಡಿ ಸಂತೋಷಪಟ್ಟು ತಾವೂ ಹಲವನ್ನು ಖರೀದಿ ಮಾಡಿದ್ದಲ್ಲದೆ ಬೇರೆ ಸಾಹಿತಿಗಳಿಗೂ ಖರೀದಿ ಮಾಡುವಂತೆ ಹೇಳಿ ನಾವು ತಂದ ಎಲ್ಲಾ ಶುಭಾಶಯ ಪತ್ರಗಳೂ ಖರ್ಚಾಗುವಂತೆ ಸಹಕರಿಸಿದ ಘಟನೆ ಮಾತ್ರ ನನಗೆ ಮರೆಯಲಾಗದ ಸಂಗತಿಯಾಗಿದೆ. ಮಂಗಳೂರಿನಿಂದ ಹೊರಡುವಾಗ ತಡವಾಗಿ ಉಡುಪಿಗೆ ಮುಟ್ಟುವಾಗಲೇ ರಾತ್ರಿಯಾಯಿತು. ನಾವು ವೈದೇಹಿಯವರ ಮನೆಗೆ ಹೋದೆವು. ರಾತ್ರಿ ಹೋಗುವುದು ಬೇಡವೆಂದು ಹೇಳಿ ಮೂರ್ತಿಯವರೂ ವೈದೇಹಿಯವರೂ ತಮ್ಮಲ್ಲೇ ನಮ್ಮನ್ನು ಉಳಿಸಿಕೊಂಡರು. ಅಡಿಗೆ ಮಾಡಿ ನಮಗೆಲ್ಲ ತಮ್ಮ ನೆಂಟರಂತೆ ಊಟ ಬಡಿಸಿ ಮರುದಿನ ಬೆಳಗ್ಗೆ ನಮ್ಮನ್ನು ಕಳಿಸಿದ ಘಟನೆಯೂ ಮರೆಯಲಾಗದ್ದು.

ವೈದೇಹಿಯವರು ಕೇವಲ ಸಾಹಿತ್ಯ ಪ್ರೇಮಿಗಳೆಂದು ಯಾರಾದರೂ ತಿಳಿದಿರಬಹುದು. ಇವರು ಸಂಗೀತ ಪ್ರೇಮಿಗಳೂ ಹೌದು. ಇಲ್ಲೊಂದು ನೆನಪು ಹೇಳಬೇಕು. ಈಗೊಂದೆರಡು ವರ್ಷಗಳ ಹಿಂದೆ ನಾನವರಿಗೆ ಫೋನ್ ಮಾಡಿ 'ಶಿವಮೊಗ್ಗದ ಪ್ರಖ್ಯಾತ ಸಾಹಿತಿಗಳಾದ ಶ್ರೀ ಸತ್ಯನಾರಾಯಣ ಅಣತಿಯವರ ಮಗ ವಿಜೇತ, ಇಂಜಿನಿಯರ್ ಮಾತ್ರವಲ್ಲದೆ ಖ್ಯಾತ ಹಿಂದೂಸ್ಥಾನಿ ಸರೋದ್ ವಾದಕನೂ ಹೌದು. ಪಂಡಿತ್ ರಾಜೀವ ತಾರಾನಾಥ್‌ರವರಲ್ಲಿ ತುಂಬಾ ಸಮಯದಿಂದ ಸರೋದ್ ವಾದನ ಕಲಿತಿರುತ್ತಾನೆ. ಸಾರ್ವಜನಿಕವಾಗಿ ಸರೋದ್ ಕಾರ್ಯಕ್ರಮವನ್ನೂ ಕೊಡುತ್ತಿದ್ದಾನೆ. ಉಡುಪಿ ಮಠದಲ್ಲಿ ಪ್ರತಿವರ್ಷ ಹಬ್ಬ ಹರಿದಿನಗಳಲ್ಲಿ ಸಂಗೀತ ಕಾರ್ಯಕ್ರಮ ನಡೆಯುತ್ತದೆ. ನೀವೇಕೆ ಉಡುಪಿ ಮಠದಲ್ಲಿ ನಮ್ಮ ಕಿರಿಯ ಸರೋದ್ ವಾದಕನಿಗೆ ಕಾರ್ಯಕ್ರಮ ಕೊಡಿಸಬಾರದು?' ಎಂದು ಹೇಳಿದೆ. ವೈದೇಹಿಯವರು ಉಡುಪಿ ಮಠದಲ್ಲಿ ವಿನಂತಿಸಿ ಆತನ ಸರೋದ್ ವಾದನ ಇಡಿಸಿದರು. ಮೂರ್ತಿಯವರೊಂದಿಗೆ ತಾವೂ ಕುಳಿತು ವಿಜೇತನ ಸರೋದ್ ವಾದನವನ್ನು ಆಸಕ್ತಿಯಿಂದ ಕೇಳಿದರು. ಬಹಳ ಸಾಹಿತಿಗಳಿಗೆ ಈ ರೀತಿಯ ಯುವ ಕಲಾವಿದರಿಗೆ ಪ್ರೋತ್ಸಾಹ ಕೊಡುವ ಗುಣಗಳಿರುವುದಿಲ್ಲ. ವೈದೇಹಿಯವರಿಗೆ ತನ್ನ ಸಾಹಿತ್ಯಾಸಕ್ತಿಯ ಜೊತೆಜೊತೆಗೆ ಶಾಸ್ತ್ರೀಯ ಸಂಗೀತದ ಆಸಕ್ತಿಯೂ ಇರುವುದು, ಆ ಆಸಕ್ತಿ ಬೇರೆಯವರಲ್ಲಿ ಬೆಳೆಯುವಂತೆ ನೋಡಿಕೊಳ್ಳುವ ಒಳ್ಳೆಯ ಗುಣವಿರುವುದು ನಾವು ಸ್ವತಃ ಮನಗಂಡಿದ್ದೇವೆಂದು ತಿಳಿಸಲು ಹೆಮ್ಮೆಯಾಗುತ್ತದೆ.

ಕಾರಂತರ ಕ್ಯಾಮರ ಪ್ರೀತಿ ಕುರಿತು ನಾನು ಅವರೊಂದಿಗೂ ತೇಜಸ್ವಿಗೂ ಹೇಳುವುದಿತ್ತು. ಕಾರಂತರೆಂದರೆ ನಮಗೆಷ್ಟು ಪ್ರೀತಿ ಗೌರವವೆಂದು ವೈದೇಹಿಯವರಿಗೆ ತಿಳಿದಿತ್ತು. ಒಂದಿನ ವೈದೇಹಿಯವರಿಂದ ನನಗೊಂದು ಫೋನ್‌ಕಾಲ್ ಬಂತು. ಏನಂದ್ರೆ

'ಕಾರಂತರ ಆರೋಗ್ಯ ಕೆಟ್ಟಿದೆ. ಮಣಿಪಾಲ್ ಆಸ್ಪತ್ರೆಯಲ್ಲಿದ್ದಾರೆ' ಅಂತ. 'ನೀವು ಹೇಳುತ್ತಿದ್ದಿರಲ್ಲ, ನಿಮ್ಮ ಕೆಲ್ಸ, ಕಾರಂತಜ್ಜನ ಬಾಲಭವನ ನಿರ್ಮಿಸಬೇಕು ಅಂತ. ಅನುಮತಿ ಬೇಕಿದ್ದರೆ ಬೇಗ ಬಂದು ಮಾತನಾಡುವುದು ಒಳಿತು' ಎಂದರು. ಶಿವಮೊಗ್ಗದಲ್ಲಿ ಶ್ರೀ ಲಕ್ಷ್ಮೀನಾರಾಯಣ್ ಡಿ.ಸಿ. ಆಗಿದ್ದರು ಆಗ. ಕೂಡಲೇ ಭದ್ರಾವತಿಯಿಂದ ಸರ್ವೆಯವರನ್ನು ಕರೆಸಿ ಸಂಜೆಯೊಳಗೆ ಭಗವತೀಕೆರೆ ಹತ್ತಿರದಲ್ಲೇ ಖಾಲಿ ಸೈಟನ್ನು ಮಂಜೂರು ಮಾಡಿಸಿಕೊಂಡು, ಜಿಲ್ಲಾಧಿಕಾರಿಯವರ ಸಹಿಯನ್ನು ಪಡೆದು ಮರುದಿನವೇ ಮಣಿಪಾಲಿಗೆ ಹೋದೆ. ಕಾರಂತರಿದ್ದ ಆಸ್ಪತ್ರೆ ಪ್ರವೇಶಿಸಿ ಅರ್ಜಿಗೆ ಅವರ ಸಹಿ ಮಾಡಿಸಿಕೊಡಲು ಅವರ ಮಗನ ಹತ್ತಿರ ಕೊಟ್ಟೆ. ಕಾರಂತರು ಆಗ ಸ್ವಲ್ಪ ಕಾಲ ನಿದ್ರಾವಸ್ಥೆಯಲ್ಲಿ ಮತ್ತೆ ಸ್ವಲ್ಪ ಕಾಲ ಎಚ್ಚರದ ಅವಸ್ಥೆಯಲ್ಲಿರುತ್ತಿದ್ದರು. ಕಾರಂತರ ಮಗ ಅವರು ಎಚ್ಚರವಿದ್ದಾಗ ವಿಷಯ ತಿಳಿಸಿ ಹೇಳಿದರು. ಕೆಲಸ ಮುಗಿಸಿ ಕಾರಂತರ ಕಾಲಿಗೆ ನಮಸ್ಕರಿಸಿ ನಾನು ಊರಿಗೆ ಮರಳಿದೆ. ಹೀಗೆ ಬಾಲಭವನವನ್ನು ಕಾರಂತಜ್ಜನವರ ಹೆಸರಿನಲ್ಲಿ ನಿರ್ಮಿಸುವ ನನ್ನ ಕನಸಿಗೆ ವೈದೇಹಿ ನೀಡಿದ ಸಹಕಾರವನ್ನೂ ಹೆಮ್ಮೆಯಿಂದ ನೆನೆಯುತ್ತೇನೆ. ಆದರೆ ಆ ಕೆಲ್ಸ ಕಾರಣಾಂತರದಿಂದ ಈವರೆಗೂ ಮಾಡಲಾಗಲೇ ಇಲ್ಲವೆಂಬ ವಿಷಾದ ನನಗಿದೆ. ಕಾರಂತರು ಅಂದು ನನ್ನನ್ನು ನೋಡಿ, ನನ್ನ ಕೈಗೆ ಮುಟ್ಟಿಸಿದ ಬಾಲಭವನದ ಅರ್ಜಿ ಭದ್ರಾವತಿ ತಾಲ್ಲೂಕು ತಡಸದ ಭೀಮರಾವ್‌ರವರ ಹತ್ತಿರ ಹಾಗೆಯೇ ಕುಳಿತಿದೆ.



# ಸ್ನೇಹ ಸಂಪನ್ನೆ ವೈದೇಹಿ

✦ ಡಾ. ವಿಜಯಾ(ಇಳಾ)

ವೈದೇಹಿಗೆ ಅಭಿನಂದಿಸುವದೆಂದರೆ ಒಂದು ಹಿಗ್ಗಿನ ಸಂಗತಿ. ಅದಕ್ಕೊಂದು ಕಾರಣ, ನೆಪ ಬೇಕೆನಿಸುವುದಿಲ್ಲ. ವೈದೇಹಿ ಪ್ರತಿನಿತ್ಯ, ಪ್ರತಿಕ್ಷಣ ಓದುಗರ ಮನಸ್ಸಿನಲ್ಲಿ ಅಭಿನಂದನೆಗೆ ಒಳಗಾಗುತ್ತಲೇ ಇರುತ್ತಾರೆ. ಓದಿನ ಐಸಿರಿಯನ್ನೇ ಕೊಟ್ಟು ಕೋಟ್ಯಂತರ ಮನಸ್ಸುಗಳಲ್ಲಿ ನೆಲೆಸಿರುವ ವೈದೇಹಿಗೊಂದು ನುಡಿನಮನ ಎಂದರೆ ಮನಸ್ಸು ಮುದಗೊಳ್ಳುತ್ತದೆ.

ವೈದೇಹಿಯೆಂದ ಕೂಡಲೇ ಮನಸ್ಸು ನಿನ್ನೆಗಳಿಗೆ ಜಿಗಿಯುತ್ತದೆ. ವೈದೇಹಿ ನನ್ನ ಗಮನ ಸೆಳೆದದ್ದೇ ಒಂದು ವಿಶೇಷ ಸಂದರ್ಭದಲ್ಲಿ.

ಬೆಂಗಳೂರಿನ ಚಾಮರಾಜಪೇಟೆಯ ಬಳಿ ಇರುವ ರಾಯನ್ ಸರ್ಕಲ್ ಹತ್ತಿರ ಪ್ರೊ. ವಿ.ಸೀ. ಅವರ ಮನೆ. ಅದರ ಬದಿಯ ರಸ್ತೆಯಲ್ಲಿ ಕೆನರಾ ಬ್ಯಾಂಕಿನ ಕಟ್ಟಡ. ಮೇಲಿನ ಅಂತಸ್ತುಗಳಲ್ಲಿ ಮನೆಗಳು. ಅಪಾರ್ಟ್‌ಮೆಂಟ್‌ಗಳ ಮಾದರಿಯವು. ಅಂಥ ಒಂದು ಮನೆಯಲ್ಲಿ ನಾವೂ ಕೆಲಕಾಲ ಇದ್ದೆವು. ಇಷ್ಟು ವಿವರ ಏಕೆ ಹೇಳಬೇಕೆಂದರೆ ಈ ಮನೆಯನ್ನು ಹುಡುಕಿಕೊಂಡು, ಎರಡು ಮಹಡಿಗಳನ್ನು ಹತ್ತಿ ನಮ್ಮ ಮನೆಯ ಬಾಗಿಲಲ್ಲಿ ಶುಭ್ರ ಶ್ವೇತ ವಸ್ತ್ರಧಾರಿಯೊಬ್ಬರು ಬಂದು ನಿಂತರು. ಬಾಗಿಲು ಪೂರಾ ನಿಂತ ಆಕಾರ, ಆಜಾನುಬಾಹು!

'ವಿಜಯಾ ಇದ್ದೀರಾ?' ಎಂಬ ತುಂಬು ಕಂಠ ಕೇಳಿಸಿತು. ಇದಾವುದೋ ಪರಿಚಯದ ಸ್ವರ ಅನ್ನಿಸಿತು, ಹೊರಗೆ ಬಂದರೆ ಎದುರಿಗೆ ನಿಂತವರು ನಮ್ಮೆಲ್ಲರ ಮೆಚ್ಚಿನ ಜಿ.ಪಿ. ರಾಜರತ್ನಂ!

'ಮೆಟ್ಟಿಲು ಹತ್ತಿ ದಣಿದಿರಾ? ಹೇಳಿದ್ದರೆ ನಾನೇ ಬರುತ್ತಿದ್ದೆನಲ್ಲ ಗುರುಗಳೆ, ಆಯಾಸವಾಯಿತೆ?' ಎನ್ನುತ್ತ ಒಳಗೆ ಕರೆತಂದು ಕೂರಿಸಿದೆ.

'ನನಗೆ ದೀಪಾವಳಿ ಸಂಚಿಕೆ ಕೊಡಮ್ಮ' ಅಂದರು. ಉದಯವಾಣಿ ದೀಪಾವಳಿ ಸಂಚಿಕೆ ಬಹುತೇಕ ಹಿರಿಯ, ಖ್ಯಾತ ಲೇಖಕರಿಗೆ ಮನೆಗೆ ಒಯ್ದು ಕೊಡುತ್ತಿದ್ದೆ.

'ನಾನೇ ಬರುತ್ತಿದ್ದೆನಲ್ಲ, ಇಷ್ಟೇಕೆ ಶ್ರಮ ತೆಗೆದುಕೊಂಡಿರಿ' ಅಂದೆ.

'ಇಳಾಗೆ ಹೋದೆ, ನೀವಿರಲಿಲ್ಲ. ವಿ.ಸೀ. ಮನೆಗೆ ಬಂದೆ. ಇಲ್ಲೇ ಇದ್ದೀರಿ ಅಂತ ತಿಳಿಯಿತು. ಬಂದುಬಿಟ್ಟೆ. ನನಗೆ ದೀಪಾವಳಿ ಸಂಚಿಕೆ ಬೇಕು. ಅದರಲ್ಲಿ ನಮ್ಮ ವೈದೇಹಿ ಬರೆದ ಕತೆ ಇದೆಯಂತೆ. ನಾನು ಓದಬೇಕು. ಅದು ನಮ್ಮ ಹುಡುಗಿಯೇ' ಅಂದರು.

ಉದಯವಾಣಿ ಕೊಟ್ಟು, ಉಪಚರಿಸಿ ಕಳಿಸಿಕೊಟ್ಟೆ. ಅಬ್ಬಾ, ಇದ್ಯಾರು ಈ ವೈದೇಹಿ. ರಾಜರತ್ನಂಗೆ ಪ್ರಿಯವಾದ ಬರಹಗಾರ್ತಿ ಎಂಬ ಕುತೂಹಲ ನನಗೆ.

ಮಣಿಪಾಲಕ್ಕೆ ಹೋದಾಗ ವಿಚಾರಿಸಿ ತಿಳಿದೆ. ಅನಂತರ ಆಕೆ 'ವೈದೇಹಿ'ಯಾದ ಜಾನಕಿ ಎಂಬುದನ್ನು ಗೆಳೆಯ ಎಂ.ಜಿ.ಸಿಂಗ್ ರಂಗುರಂಗಾಗಿ ಹೇಳಿದ್ದರು.

ಶಿವಮೊಗ್ಗೆಯಲ್ಲಿ ನಡೆದ ಮಕ್ಕಳ ಸಮ್ಮೇಳನಕ್ಕೆ ರಾಜರತ್ನಂ ಹೋಗಿದ್ದರಂತೆ. ಅಲ್ಲಿ ಪರಿಚಯವಾದರು ವೈದೇಹಿ ದಂಪತಿ. ಅಂದು ಭಾಷಣ, ಮಾತುಕತೆಗಳಲ್ಲಿ ರಾಜರತ್ನಂ 'ಮಕ್ಕಳ ಸಾಹಿತ್ಯ ನಾವು ಬರೆಯುವುದಲ್ಲ. ನೀವು ತಾಯಂದಿರು ಬರೆಯಬೇಕು. ನಿಮಗೆ ಮಕ್ಕಳ ಒಡನಾಟ ಹೆಚ್ಚು. ಅವರ ಮನಸ್ಸು, ಬಯಕೆ, ಆಸಕ್ತಿ ಎಲ್ಲವನ್ನೂ ಹತ್ತಿರದಿಂದ ಬಲ್ಲವರು ನೀವು. ನೀವು ಬರೆಯಬೇಕು ಮಕ್ಕಳಿಗಾಗಿ' ಎಂದಿದ್ದರಂತೆ.

'ರಾಜರತ್ನಂ ಅವರ ಈ ಮಾತುಗಳು ನನ್ನೊಳಗೆ ನುಗ್ಗಿ ಬಚ್ಚಿಟ್ಟುಕೊಂಡಿವೆ. ನಾನು ಮಕ್ಕಳಿಗಾಗಿ ನಾಟಕ ಬರೆಯುವಾಗೆಲ್ಲ ಆ ಮಾತುಗಳು ರಿಂಗಣಿಸುತ್ತವೆ. ನನ್ನ ಮಕ್ಕಳ ಸಾಹಿತ್ಯ ರಚನೆಗೆ ರಾಜರತ್ನಂ ಅವರೇ ಪ್ರೇರಣೆ' ಎಂದು ನೆನೆಯುತ್ತಾರೆ ವೈದೇಹಿ.

ಅನಂತರ ಶಿವಮೊಗ್ಗೆಗೆ ಬಂದಾಗೆಲ್ಲ ಭೇಟಿ, ಮಾತು. ಅವರೊಂದಿಗಿನ ಒಡನಾಟ, ಮಾತು ಪ್ರತಿಯೊಂದೂ ಒಂದು ಸಂಭ್ರಮದಂತೆ ಎನ್ನುವ ವೈದೇಹಿ, ರಾಜರತ್ನಂರೊಂದಿಗೆ ತಾವು ಗಂಡ-ಹೆಂಡತಿ ಒಂದು ಫೋಟೊ ತೆಗೆಸಿಕೊಳ್ಳಬೇಕೆಂದೆಣಿಸಿ ಅವರ ಎಡ, ಬಲದಲ್ಲಿ ಇಬ್ಬರೂ ನಿಂತರು. ಆದರೆ ರಾಜರತ್ನಂ ಗಂಡ ಹೆಂಡಿರ ಮಧ್ಯೆ ನಿಲ್ಲಬಾರದು ಎಂದು ಅವರೇ ಇವರಿಬ್ಬರನ್ನೂ ಜೋಡಿಯಾಗಿ ನಿಲ್ಲಿಸಿ ತಾವು ಅವರ ಪಕ್ಕದಲ್ಲಿ ನಿಂತು ಫೋಟೊ ತೆಗೆಸಿಕೊಂಡದ್ದನ್ನು ನೆನಪು ಮಾಡಿಕೊಳ್ಳುತ್ತಾರೆ. ವೈದೇಹಿಗೆ ರಾಜರತ್ನಂ ಪ್ರೇರಣೆಯಾದರೆ, ರಾಜರತ್ನಂಗೆ ವೈದೇಹಿಯು ಪ್ರೀತಿಯಿಂದ ಓದುವಂಥ ಬರಹಗಾರ್ತಿ ಆಗಿದ್ದರು.

ಇದಲ್ಲವೇ ನಿಜವಾದ ಸೌಭಾಗ್ಯ!

* * *

ವೈದೇಹಿ 'ತರಂಗ'ದಲ್ಲಿ ಸಹಸಂಪಾದಕಿಯಾಗಿ ಕೆಲಕಾಲ ಕೆಲಸ ಮಾಡಿದರು. ಅದು ಅವರು ಶಿವಮೊಗ್ಗೆಯಿಂದ ಉಡುಪಿಗೆ ಬಂದ ಹೊಸತು. ನಾನು ತುಷಾರದ ಕೆಲಸಗಳಿಗಾಗಿ ತಿಂಗಳಿಗೊಮ್ಮೆ 2-3 ದಿನ ಹೋಗುತ್ತಿದ್ದೆ. ಉದಯವಾಣಿ ದೀಪಾವಳಿ

ಸಂಚಿಕೆಯ ಕೆಲಸವಾದರೆ ಒಂದೂವರೆ, ಎರಡು ತಿಂಗಳು ಸಹ ಮಣಿಪಾಲದಲ್ಲಿರುತ್ತಿದ್ದೆ. ಆ ದಿನಗಳಲ್ಲಿ ನಾನು, ಸಹೋದರ ಗುರುರಾಜ ಜೊತೆಯಾಗಿ ಓಡಾಡುತ್ತಿದ್ದುದನ್ನೆಲ್ಲ ವೈದೇಹಿ ತಮ್ಮ ಕಚೇರಿಯಿಂದಲೇ ಗಮನಿಸುತ್ತಿದ್ದುದನ್ನು ನೆನಪು ಮಾಡಿಕೊಳ್ಳುತ್ತಾರೆ– 'ನಿಮ್ಮ ಓಡಾಟ ಚಿತ್ರದಂತೆ ಕಣ್ಣ ಮುಂದಿದೆ. ನಿಮ್ಮ ಶುಭ್ರ ಶ್ವೇತವಸ್ತ್ರ, ದೊಡ್ಡ ಕುಂಕುಮ....' ಅಂತೆಲ್ಲ. ಅವರೇನೇ ಹೇಳಲಿ ನನಗಂತೂ ವೈದೇಹಿ ನಮ್ಮ ಹೆಮ್ಮೆ ಅನ್ನಿಸುತ್ತದೆ.

'ಅಡಿಗೆ ಮನೆ ಸಾಹಿತ್ಯ' ಅನ್ನುತ್ತಿದ್ದವರಿಗೆ ಅಡಿಗೆಮನೆಯಿಂದ, ಹಿತ್ತಲಿನಿಂದ ಆಯ್ದ ವಸ್ತುವಿನಿಂದಲೇ ಕೋದು ಕಟ್ಟಿದ ಕತೆ, ಕವಿತೆಗಳ ಮೂಲಕ ಉತ್ತರಿಸಿದರು ವೈದೇಹಿ.

ವೈದೇಹಿಯವರನ್ನು ಹತ್ತಿರದಿಂದ ಕಂಡದ್ದು, ಒಂದೆರಡು ದಿನ ಜೊತೆಗೇ ಒಡನಾಡಿದ್ದು ಪೀಟರ್ ಬ್ರೂಕ್ ಅವರು ಬೆಂಗಳೂರಿಗೆ ಬಂದಿದ್ದಾಗ. ವೈದೇಹಿಯೂ ಆಹ್ವಾನಿತರಲ್ಲೊಬ್ಬರು. ನಾನು–ವೈದೇಹಿ ಜೊತೆಯಲ್ಲೇ ಶಿಬಿರದಲ್ಲಿ ಭಾಗವಹಿಸಿದೆವು; ಜೊತೆಯಲ್ಲೇ ಪೀಟರ್ ಬ್ರೂಕ್ ಅವರ 'ಮಹಾಭಾರತ'ವನ್ನೂ ಚೌಡಯ್ಯ ಸ್ಮಾರಕ ಭವನದಲ್ಲಿ ನೋಡಿದ್ದೆವು.

ಬ್ರೂಕ್ ಅವರ ಈ ವಾಸ್ತವ್ಯದಲ್ಲಿ ನಾಡಿನ ಅನೇಕ ಖ್ಯಾತ ರಂಗಕರ್ಮಿಗಳೂ ಭಾಗವಹಿಸಿದ ವಿಶೇಷವಿತ್ತು. ಶಿಬಿರ ನಡೆದದ್ದು ಯಲಹಂಕ ಬಳಿಯಿದ್ದ ಸೈನಿಕ ತಾಣವೊಂದರಲ್ಲಿ.

ಆಗ ವೈದೇಹಿ ಅವರು ಲಂಕೇಶ್ ಪತ್ರಿಕೆಯಲ್ಲಿ ಅಂಕಣ ಬರೆಯುತ್ತಿದ್ದರು. ಪರಸ್ಪರ ಪರಿಚಯ, ಸ್ನೇಹವಾಗಿತ್ತು. ಆ ಮಾತುಕತೆಯ ವೇಳೆ ಲಂಕೇಶ್ ಬಗ್ಗೆ ಕೊಂಚ ಎಚ್ಚರದಿಂದಿರಿ ಎಂದಿದ್ದೆ. ಆಕೆ ನಕ್ಕುಬಿಟ್ಟರು.

* * *

ವೈದೇಹಿ ಬಿ.ವಿ. ಕಾರಂತರ ಬಗ್ಗೆ ಬರೆದ ಜೀವನ ಚರಿತ್ರೆಯ ನಿರೂಪಣೆಯೇ ಒಂದು ಅಪರೂಪದ ದಾಖಲೆ.

ತುಂಟ ಮಗುವಿನ ಹಾಗೆ ಒಂದು ಕಡೆ ನಿಲ್ಲದೆ ಓಡುವ ಕಾರಂತರು, ಮಾತಿನಲ್ಲೂ ಒಂದು ದಿಕ್ಕು, ಗುರಿ ಇಲ್ಲದೆ ನಾಟಕದಿಂದ ಸಂಗೀತಕ್ಕೆ, ಸಂಗೀತದಿಂದ ತಮ್ಮ ಪ್ರೀತಿಯ ನಾಯಿಗಳು, ಪಕ್ಷಿಗಳು, ಪ್ರಕೃತಿ ಎಂತ ಜಿಗಿಯುವ ಕಾರಂತರಿಂದ ಇಷ್ಟು ಮಾಹಿತಿ ಸಂಗ್ರಹಿಸಿ, ಅವನ್ನು ಒಂದು ಸರಾಗವಾದ ಓದಿಗೆ ಸಿಗುವಂತೆ ಜೋಡಿಸಿದ ವೈದೇಹಿಯ ಶ್ರಮ ಎಂಥದ್ದೆಂದು ವರ್ಣಿಸಲು ನನ್ನ ಬಳಿ ಪದ ಸಂಪತ್ತಿಲ್ಲ. ಆದರೆ ನಮಗೆ ಕಾರಂತರನ್ನು ಒಂದು ಅಳತೆಯಲ್ಲಿ ದಕ್ಕಿಸಿಕೊಳ್ಳುವಂತೆ ಮಾಡಿದ ವೈದೇಹಿಗೊಂದು ಕೃತಜ್ಞತೆಯ ನಮಸ್ಕಾರ ಹೇಳಬೇಕು. ಅದು ರಂಗಪ್ರಿಯರ ಕರ್ತವ್ಯ.

ಅಷ್ಟೊಂದು ಕೆಲಸ ಮಾಡಿದ ವೈದೇಹಿ ಅವರಿಗೆ ಪುಸ್ತಕ ಅಚ್ಚಾಗುವ ಹೊತ್ತಿಗೆ ಕೆಲವು ಸಮಸ್ಯೆಗಳು ಎದುರಾದವು. ಕಾರಂತರು ತೀರಿಕೊಂಡರು. ಪ್ರೇಮಾ ಕಾರಂತ

ಕೆಲವು ಕರ್ತವ್ಯಗಳನ್ನು ನಿರ್ವಹಿಸಿಬೇಕಿತ್ತು. ಈ ಹೊತ್ತಿನಲ್ಲಿ ಕಾರಂತರ ಜೀವನ ಚರಿತ್ರೆಯ ಕಾಪಿರೈಟ್ ಪ್ರೇಮಾಗೆ ಮುಖ್ಯವಾಗಿತ್ತು. ಅದನ್ನು ಬೇರೆ ಬೇರೆ ಭಾಷೆಗೆ ಮುಖ್ಯವಾಗಿ ಹಿಂದಿಗೆ ಅನುವಾದಿಸಿ ಪ್ರಕಟಿಸಿದರೆ ಹೆಚ್ಚು ಹಣ ಬರುವುದಿತ್ತು. ಹಾಗೆಂದು ರಾಷ್ಟ್ರೀಯ ನಾಟಕ ಶಾಲೆಯ ಮುಖ್ಯಸ್ಥರಾಗಿದ್ದ ಶ್ರೀ ಅಂಕುರ್ ಅವರು ಹೇಳಿದ್ದರು.

ಹಾಗೆ ಬರುವ ಹಣದಿಂದ ಕಾರಂತ ಟ್ರಸ್ಟ್ ಮೂಲಕ ಕೆಲವು ಕೆಲಸಗಳನ್ನು – ಕಾರಂತರ ಅಪೇಕ್ಷೆಯಂತೆ – ಮಾಡಬೇಕೆಂಬುದು ಪ್ರೇಮಾ ಕಾರಂತರ ಇಚ್ಛೆಯಾಗಿತ್ತು. ಆದರೆ ಬರೆದವರು / ನಿರೂಪಿಸಿದವರು ವೈದೇಹಿ. ಕಾಪಿರೈಟ್ ಯಾರದಾಗಬೇಕೆಂಬ ಜಿಜ್ಞಾಸೆ ಎದ್ದಿತು. 'ಪ್ರಿಸಂ' ಪ್ರಕಾಶನ ಸಮಸ್ಯೆ ಬಗೆಹರಿಸಲಾಗದೆ ತುಂಬಾ ಗೊಂದಲದಲ್ಲಿತ್ತು. ಅಂಥ ಹೊತ್ತಿನಲ್ಲಿ ಕಾರಂತರ ಮನೆಯಿಂದಲೇ ವೈದೇಹಿಗೆ ಕರೆ ಮಾಡಿ ಪ್ರೇಮಾ 'ನೀವೇ ಹೇಳಿ ವಿಜಯಾ' ಅಂತ ನನಗೆ ಫೋನ್ ಕೊಟ್ಟರು. ನಾನು ವೈದೇಹಿಗೆ ನಿಧಾನವಾಗಿ ಎಲ್ಲವನ್ನೂ ವಿವರಿಸಿ, ಇದಕ್ಕೆ ನಿಮ್ಮ ಸಹಾಯ ಬೇಕಮ್ಮ. ಅದೂ ಒಂದು ಅರ್ಥದಲ್ಲಿ ಕಾರಂತರಿಗೆ ನಿಮ್ಮ ಕೊಡುಗೆ ಅಂದೆ. ವೈದೇಹಿ ಎರಡನೆಯ ಮಾತಾಡದೆ ಒಪ್ಪಿದರು. ಅದು ಆಕೆಯ ದೊಡ್ಡ ಮನಸ್ಸು.

ಮುಂದೆ ಪುಸ್ತಕಕ್ಕೆ ಅಗತ್ಯವಾಗಿದ್ದ ಕೆಲವು ಬರಹಗಳು ಇತ್ಯಾದಿ ನಾನು ನಿರ್ವಹಿಸಿದೆ. ವೈದೇಹಿ ಬಯಸಿದ್ದ 'ಎನಗೂ ಆಣೆ ರಂಗ ನಿನಗೂ ಆಣೆ' ಶೀರ್ಷಿಕೆಯನ್ನು ಪ್ರೇಮಾ ಒಪ್ಪಲಿಲ್ಲ. ಅಂತಿಮವಾಗಿ 'ಇಲ್ಲಿರಲಾರೆ, ಅಲ್ಲಿಗೆ ಹೋಗಲಾರೆ' ಶೀರ್ಷಿಕೆಯಲ್ಲಿ ಪುಸ್ತಕ ಹೊರಬಂತು. ಮತ್ತೊಮ್ಮೆ ಭೇಟಿಯಾದಾಗ ವೈದೇಹಿ 'ನೀವು ನನ್ನ ಪರಿಚಯ ಬರೆದದ್ದು ನನಗೆ ಇಷ್ಟವಾಯಿತು' ಎಂದು ನಿಷ್ಕಲಂಕ ಮನಸ್ಸಿನಿಂದ ಹೇಳಿ ನಕ್ಕಿದ್ದರು. ಇದನ್ನೇ ಹೃದಯ ವೈಶಾಲ್ಯ ಎನ್ನುತ್ತಾರೇನೊ!

* * *

ವೈದೇಹಿಯವರನ್ನು 'ಸುಚಿತ್ರ'ದ ಸಾಹಿತ್ಯ ಸಂಜೆಗೆ ಕರೆಸಿಕೊಂಡೆ. ಅವರ ಅಭಿಮಾನಿಗಳನ್ನು ಕೂರಿಸಲು ಸ್ಥಳ ಸಾಲದೆನ್ನಿಸಿತು. ಅವರ ಮಾತೂ ಅಷ್ಟೇ ಚಂದ. ಅಕಾಡೆಮಿಕ್ ಅಲ್ಲ, ಆದರೆ ಅದನ್ನು ಮೀರಿದ ಅನುಭವ ಕೊಟ್ಟ ಮಾತುಗಳು. ತರಕಾರಿ ಹೆಚ್ಚುತ್ತ, ಒಗ್ಗರಣೆ ಹಾಕುತ್ತ ಮಾತಾಡುವಂತಿರುತ್ತದೆ. ಆದರವು ಎಂಥ ದೊಡ್ಡ ಸತ್ಯವನ್ನ ದಾಟಿಸುತ್ತಿರುತ್ತವೆಂದರೆ ಕೆಲವರಿಗೆ ಮೆಲ್ಲಗೆ ತಟ್ಟಿದರೆ; ಹಲವರಿಗೆ ಮುಖಕ್ಕೆ ರಾಚುತ್ತವೆ. ಶಬ್ದಾಡಂಬರವಿಲ್ಲದ ನಡುಮನೆಯ ಪಿಸುಮಾತೇ, ಒಡಲಾಳದಲ್ಲಿ ತಳಮಳ ಹುಟ್ಟಿಸುವ ಬಗೆ ಎಂದರೆ ಹೀಗೆ ಏನೊ!

ವೈದೇಹಿ ಅವರಿಗೆ ನುಡಿ ಪ್ರಕಾಶನದ ರಂಗನಾಥ್ ಒಂದು ಗೌರವ ಸಮಾರಂಭ ಏರ್ಪಡಿಸಿದರು. ಅವರ ಕೃತಿಗಳ ವಾಚಿಕೆಯನ್ನು ಪ್ರಕಟಿಸಿ ಆ ದಿನ ಬಿಡುಗಡೆ ಮಾಡಿದ್ದರು. ನಾನು ಅಭಿನಂದನಾ ಭಾಷಣ ಮಾಡಿದೆ. ಅದೊಂದು ಅಮೃತ ಘಳಿಗೆ. ವೈದೇಹಿ ಒಣ

ಮಾತಿಗೆ ಮೀರಿದ ಹೃದಯ ಸಂವಾದಿ ಲೇಖಕಿ. ಅವರ ಪಾತ್ರಗಳಲ್ಲಿ ನಮ್ಮ ಪರಿಸರದ ಜನ, ಅಪ್ಪ, ಅಮ್ಮ, ಅಣ್ಣ, ಅಕ್ಕ, ಮನೆಗೆಲಸದವರು, ನಾನು–ನೀವು ಎಲ್ಲರೂ ಇದ್ದೇವೆ ಅನಿಸುತ್ತದೆ; ಇದ್ದೇವೆ ಕೂಡಾ.

ನನ್ನ ಗೆಳೆಯ, ಮಗನ ಹಾಗೇ ಇದ್ದವ ಸೇತು ಮಾಧವ ಜೋಡಿದಾರ್, ಲೇಖಕಿಯರ ಬಗ್ಗೆ ಒಂದು ಸಾಕ್ಷ್ಯಚಿತ್ರ ಮಾಡಿದ್ದ. ವೈದೇಹಿಯ ಭೇಟಿ, ಅವರೊಂದಿಗೆ ಸರಸ್ವತಿಬಾಯಿ ರಾಜವಾಡೆ ಅವರ ಬಗ್ಗೆ ತಿಳಿಯಲು, ಚಿತ್ರೀಕರಿಸಲು ಹೋದದ್ದು, ಆಕೆಯಿದ್ದ ದೇವಸ್ಥಾನ. ಹಾಗೆ ಪ್ರಯಾಣದ ಮಧ್ಯೆ ಎದುರಾದವರನ್ನೆಲ್ಲ ಮಾತನಾಡಿಸುವ ಪರಿ ಎಲ್ಲವನ್ನೂ ಹೇಳುತ್ತ ಭಾವುಕನಾಗುತ್ತಿದ್ದ ಸೇತುಮಾಧವ.

ಇವತ್ತು ಸೇತುಮಾಧವ ಇಲ್ಲ. ಅವನಿದ್ದಿದ್ದರೆ ವೈದೇಹಿಗೆ ಅಭಿನಂದನೆ ಎಂದು ಎಷ್ಟು ಹಿಗ್ಗುತ್ತಿದ್ದನೊ. ವೈದೇಹಿಯೂ ಹಾಗೆ ಒಂದು ಅಯಸ್ಕಾಂತ; ಇನ್ನು ಸ್ಥಳವಿಲ್ಲವೆಂಬಷ್ಟು ಎಲ್ಲ ಪ್ರೀತಿಯನ್ನು ಮೆತ್ತಿಕೊಂಡು ನಗುತ್ತಿರುವ ಅಯಸ್ಕಾಂತ.

* * *

ಕರ್ನಾಟಕ ಲೇಖಕಿಯರ ಸಂಘದ ಸಲುವಾಗಿ ಚಿಕ್ಕಸುರೇಶ ವೈದೇಹಿಯವರ ಸಾಕ್ಷ್ಯಚಿತ್ರವೊಂದನ್ನು ಸಿದ್ಧಪಡಿಸಿದ. ಚಿತ್ರೀಕರಣ ಮಾಡಿಕೊಂಡು ಬಂದು ನನಗೊಮ್ಮೆ ತೋರಿಸುತ್ತಿದ್ದ. ವೈದೇಹಿಯ ಸಾಕ್ಷ್ಯಚಿತ್ರವನ್ನು ಪ್ರತಿ ಹಂತದಲ್ಲೂ ನೋಡುತ್ತಿದ್ದೆ. ಆ ವಿಡಿಯೋದಲ್ಲಿದ್ದ ಒಂದು ಚಿತ್ರಿಕೆ ನನಗೆ ತುಂಬ ಇಷ್ಟವಾಗಿತ್ತು.

ಅದು ವೈದೇಹಿ ಸಮುದ್ರದ ದಂಡೆಯಲ್ಲಿ ನಡೆಯುತ್ತ ಬಂದು ಒಂದು ಬದಿಯಲ್ಲಿ ಕೂರುವುದು. ಅಯಾಚಿತವಾಗಿ ಬೆರಳುಗಳು ಮರಳಿನಲ್ಲಿ ಆಡುತ್ತವೆ. ಮರಳಿನ ಮೇಲೆ ಬರೆಯುತ್ತವೆ. ಆಗ ಮೂಡಿದ್ದು 'ಶ್ರೀರಾಮ' ಎಂಬ ಹೆಸರು. ಆ ಇಡೀ ಚಿತ್ರಿಕೆ ಅದ್ಭುತವಾಗಿ ಮೂಡಿ ಬಂದಿದೆ ಎಂದಿದ್ದೆ. ಛಾಯಾಗ್ರಾಹಕನನ್ನೂ ಅಭಿನಂದಿಸಿದ್ದೆ. ಆದರೆ ಅಂತಿಮವಾಗಿ ಬಿಡುಗಡೆಯಾದಾಗ ಆ ಚಿತ್ರಿಕೆ ಇರಲಿಲ್ಲ.

ವೈದೇಹಿ ಕೃತಿಗಳಾನ್ನಾಧರಿಸಿದ ಹಲವು ನಾಟಕಗಳು ಬಂದಿವೆ. ಅವರೇ ರಚಿಸಿದ ನಾಟಕಗಳೂ ಇವೆ; ಪ್ರದರ್ಶನಗೊಂಡಿವೆ. ಅವರ ಸಣ್ಣಕತೆ ಆಧಾರಿತ 'ಗುಲಾಬಿ ಟಾಕೀಸು' ಚಲನಚಿತ್ರವೂ ಆಗಿದೆಯಷ್ಟೆ.

ವೈದೇಹಿ ತನ್ನ ಕೃತಿಯನ್ನು ತದ್ವತ್ ರಂಗದ ಮೇಲೆ ಅಥವಾ ಯಾವುದೇ ಮಾಧ್ಯಮದಲ್ಲಿ ತರಬೇಕೆಂದು ಹಠ ಮಾಡುವುದಿಲ್ಲ. ಮತ್ತೊಂದು ಮಾಧ್ಯಮದಲ್ಲಿ ಇನ್ನೊಂದೇ ಸೃಜನಶೀಲ ಪ್ರಕ್ರಿಯೆ ಹೇಗೆ ಒಂದು ವಸ್ತುವನ್ನು ದುಡಿಸಿಕೊಳ್ಳುತ್ತದೆ ಎಂಬ ಕುತೂಹಲದಿಂದ ನಿರುಕಿಸುವ ಒಂದು ವಿಶಿಷ್ಟ 'ದೂರತ್ವ'ದ ಸಿದ್ಧಿ ಅವರಿಗಿದೆ.

'ಅದು ಅವರ ಕೃತಿ. ಅವರ ಸೃಷ್ಟಿ. ನಾನು ಕತೆ ಬರೆದಾಗಿದೆಯಲ್ಲ' ಎಂದು ಹೇಳುವ ನಿರ್ಮಲ ಮನಸ್ಸು. ಹಾಗೆ ಮತ್ತೊಂದು ಮಾಧ್ಯಮದಲ್ಲಿ ಹೊಸ ಹುಟ್ಟು

ಪಡೆದ ವಸ್ತು ಮತ್ತಷ್ಟು ಸುಂದರ, ಎತ್ತರ ಅನ್ನಿಸಿದಾಗ ಸೃಷ್ಟಿಸಿದವರನ್ನು ಮುಕ್ತವಾಗಿ ಮೆಚ್ಚಿಕೊಳ್ಳುತ್ತಾರೆ. ಸಮರ್ಪಕವಾಗಲಿಲ್ಲ ಅಥವಾ ಇನ್ನಷ್ಟು ಉತ್ತಮಗೊಳಿಸುವ ಅವಕಾಶ ಇದೆ ಅನ್ನಿಸಿದಾಗ ಮೆಲುಮಾತಿನಲ್ಲಿ ಅವರಿಗೊಂದಷ್ಟು ಸಲಹೆ ಕೊಟ್ಟಿದ್ದೂ ಇದೆ. ಅದು ವೈದೇಹಿಯ ಹೃದಯ ವೈಶಾಲ್ಯ.

ವೈದೇಹಿಯ ಸೃಜನಶೀಲ ಕೃತಿಗಳ ಪಾತ್ರಗಳು ಹೇಗೆ ಮನದಲ್ಲಿ ಅಚ್ಚೊತ್ತಿ ನಿಲ್ಲುತ್ತವೆಯೋ ಹಾಗೇ ಅವರ ಸೃಜನೇತರ ಕೃತಿಗಳೂ ಮನಸನ್ನು ಆವರಿಸಿಕೊಳ್ಳುತ್ತವೆ.

ನಾನು ಮೊದಲು ಓದಿದ, ಮತ್ತೆ ಮತ್ತೆ ಓದಬೇಕೆನಿಸುವ ಅಂಥ ಕೃತಿಗಳಲ್ಲಿ ಕೋ.ಲ. ಕಾರಂತರು, ಕಮಲಾದೇವಿ ಚಟ್ಟೋಪಾಧ್ಯಾಯ, ಬಿ.ವಿ. ಕಾರಂತರು ಜೀವನ ಚಿತ್ರಗಳು ಮುಖ್ಯವಾದವು. ಕೋ. ಲ. ಕಾರಂತರ ಬಗೆಗೆ ಏನೂ ಗೊತ್ತಿರದಿದ್ದ ನನ್ನೊಳಗೆ ಅವರನ್ನು ಅಳಿಸಲಾಗದಂತೆ ಪ್ರತಿಷ್ಠಾಪಿಸಿದ್ದು ವೈದೇಹಿಯ ಬರಹ. ಮತ್ತೊಂದು, ಈ ನಾಡಿನಲ್ಲಿ ಇಷ್ಟೆಲ್ಲ ಸಾಧಿಸಿದರೇ ನಮ್ಮ ಹಿರಿಯರು ಎಂಬಂಥ ಬೆರಗನ್ನು ಕೊಟ್ಟಿದ್ದು ವೈದೇಹಿ ಅನುವಾದಿಸಿದ 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' ಕೃತಿ.

ಹೀಗೆ ಪಟ್ಟಿ ಬೆಳೆಯುತ್ತದೆ. ಅವರ ಸೃಜನಶೀಲ ಕೃತಿಗಳಂತೂ ಅಲ್ಲಿಯ ಭಾಷೆ, ಪಾತ್ರಗಳಿಂದಾಗಿ ಆಪ್ತವಾಗುತ್ತವೆ.

ಶ್ರೇಷ್ಠ ಸಾಹಿತ್ಯದ ಮೂಲಕವೇ ಜನಪ್ರಿಯರೂ ಆಗಿರುವ ಅಪರೂಪದ ಲೇಖಕಿ, ಗೆಳತಿ ವೈದೇಹಿಯ ಅಭಿನಂದನೆಯಲ್ಲಿ ನನ್ನದೂ ನಾಲ್ಕು ಮಾತು ಸೇರಿಕೊಳ್ಳುತ್ತಿದೆಯೆಂಬುದು ಸಂತೋಷ.

ವೈದೇಹಿ ಮತ್ತಷ್ಟು ಬರೆಯಲಿ. ಚಂದವಾಗಿರಲಿ. ಸದಾ ಲೋಕದ ಹಿರಿಯರು, ಎಳೆಯರು ಅವರನ್ನು ಓದುತ್ತಲೇ ಇರಲಿ.



# ಅಂತ'ರಂಗಸ್ಥಳ'ದ ಸೋಜಿಗ

✦ ಭುವನೇಶ್ವರಿ ಹೆಗಡೆ

ಧಾರವಾಡದಲ್ಲಿ ನಾನು ಎಂ.ಎ ಓದುತ್ತಿದ್ದಾಗ ಬಹುಶಃ ವಿಶೇಷಾಂಕವೊಂದರಲ್ಲಿ ವೈದೇಹಿಯವರ 'ಗೂಡಿನೊಳಗೆ ಒಂದು ಹಕ್ಕಿ' ಎಂಬ ಕಥೆ ಪ್ರಕಟವಾಗಿತ್ತು. ಅದೇ ತಿಂಗಳ ತುಷಾರ ಪತ್ರಿಕೆಯಲ್ಲಿ ನನ್ನ 'ಏಕಾಂತ ಸುಖ'ವೆಂಬ ಹಾಸ್ಯ ಲೇಖನವೂ ಪ್ರಕಟವಾಗಿತ್ತು. ಒಂದೇ ವಿಷಯ. ಹಾಸ್ಯದ ದೃಷ್ಟಿಕೋನದಿಂದ. ಹಾಸ್ಟೆಲ್ಲಿನಲ್ಲಿ ಅಲಭ್ಯವಾದ ಏಕಾಂತವನ್ನು ಅದು ಸಿಕ್ಕಾಗ ಅನುಭವಿಸುವ ಆನಂದವನ್ನೂ ನನ್ನ ಲೇಖನ ಬಣ್ಣಿಸಿದ್ದರೆ, ಪ್ರಯೋಗಕ್ಕಾಗಿ ಏಕಾಂತವನ್ನು ಸೃಷ್ಟಿಸಿಕೊಳ್ಳುವ ಯುವತಿಯ ಅಂತರಂಗಕ್ಕೆ ಇಳಿದು ಮಹಿಳೆಗೆ ಸಮಾಜ ವಿಧಿಸುವ ಮನೆಯೊಳಗಿನ ಲೋಕದೊಳಗೇ ನಡೆಸುವ ಹುಡುಕಾಟ. ದೈಹಿಕ, ಮಾನಸಿಕ ಸ್ವತಂತ್ರ ಕ್ಷಣಗಳ ಹುಡುಕಾಟ ತೆರೆದುಕೊಳ್ಳುವ ಪರಿ ನನ್ನೆದುರು ಸೋಜಿಗವೊಂದನ್ನೇ ಅನಾವರಣಗೊಳಿಸಿತ್ತು. ಆ ಕಥೆಯಲ್ಲಿ ಬರುವ 'ಯಾವಾಗಲೂ ಸೆನ್ಸ್ ಇರಲೇಬೇಕಾ? ನಾನ್ಸೆನ್ಸ್ ಆಸೆಗಳೂ ಖುಷಿ ತರುತ್ತವೆ' ಎಂಬ ವಾಕ್ಯವನ್ನು 'ಅನಿರ್ಬಂಧತೆಯಲ್ಲಿ ಎಷ್ಟು ಖುಷಿಯಿದೆ ಎಂಬುದನ್ನು ಸ್ವತಃ ಅನುಭವಿಸಬೇಕು' ಎಂಬ ವಿಚಾರವನ್ನು ನನ್ನ ಜೀವನಧರ್ಮವನ್ನಾಗಿ ಸ್ವೀಕರಿಸಿದ್ದ ಹುಡುಗಾಟದ ದಿನಗಳವು. ಹೀಗೂ ಬರೆಯಲು ಸಾಧ್ಯವೇ ಎಂಬ ವಿಸ್ಮಯದಲ್ಲಿಯೇ ವೈದೇಹಿಯವರ ಕುರಿತಾಗಿ ಒಂದು ಬೆರಗು ಮಿಶ್ರಿತ ಗೌರವವನ್ನೂ ಆದರವನ್ನೂ ಒಳಗೇ ಬೆಳೆಸಿಕೊಂಡಿದ್ದೆ.

ನನ್ನ ಅನ್ನದ ದಾರಿ ಉತ್ತರಕನ್ನಡ ಜಿಲ್ಲೆಯ ಮೂಲೆಯಿಂದ ಮಂಗಳೂರಿನ ಸರಕಾರಿ ಕಾಲೇಜಿಗೆ ನನ್ನನ್ನು ತಂದು ಬಿಟ್ಟಾಗ ಮೊದಲು ನೆನಪಾದವರು ವೈದೇಹಿ. ಇನ್ನೂ ಮುಖ ಭೆಟ್ಟಿಯೇ ಆಗಿರದ ವೈದೇಹಿ ಇರುವ ದಕ್ಷಿಣ ಕನ್ನಡ ಇನ್ನು ನನ್ನ ವಾಸಸ್ಥಳ ಎಂಬ ಭಾವನೆಯೇ ಒಂದು ಸಂಭ್ರಮವನ್ನುಂಟುಮಾಡಿತ್ತು. ಅಲ್ಲಲ್ಲಿ ವೇದಿಕೆಗಳಲ್ಲಿ ಕಂಡೆನಾದರೂ ಈ ನನ್ನ ಮೆಚ್ಚಿನ ಲೇಖಕಿಯ ಮನೆಯ ಅಂಗಳಕ್ಕೇ ಹೋಗಿಬರಬೇಕಾದ ಅವಕಾಶ ಒದಗಿಸಿದ್ದು ಪ್ರಜಾವಾಣಿ ಪತ್ರಿಕೆ.

ಆ ವರ್ಷ ವೈದೇಹಿಯವರಿಗೆ ಅತ್ತಿಮಬ್ಬೆ ಪ್ರಶಸ್ತಿ ಬಂದಿತ್ತು. ಆ ಸಂದರ್ಭದಲ್ಲಿ ಅವರನ್ನು ಸಂದರ್ಶಿಸಿ ಲೇಖನ ಬರೆದುಕೊಡಬೇಕೆಂದು ಪ್ರಜಾವಾಣಿ ಕೇಳಿತ್ತು. ಬಾಲಿಶ ಸಂಭ್ರಮದಲ್ಲಿ ತುಂಬ ಗಂಭೀರವಾಗಿ ಪ್ರಶ್ನೆಗಳನ್ನು ಸಿದ್ಧಪಡಿಸಿಕೊಂಡು ಹೋಗಿದ್ದೆ. ಆದರೆ ತಮ್ಮ ಕಿರುನಗೆ ಹಾಸ್ಯದ ಹೊಡ್ತಗಳ ಮೂಲಕ ಒಮ್ಮೆಲೆ ನನ್ನ ಭಯ ಮುಜುಗರ ಸಂಕೋಚಗಳನ್ನೆಲ್ಲ ಇಲ್ಲವಾಗಿಸಿಬಿಟ್ಟರು. ಅಂದು ಸಂದರ್ಶನದ ನೆವದಲ್ಲಿ ದೊರೆತ ಈ ಹಿರಿಯಕ್ಕನಂಥ ಸ್ನೇಹಿತೆ ಇಂದೂ ಹಾಗೇ ಇರುವುದು ನನ್ನ ಅದೃಷ್ಟವೇ ಸರಿ. ಬೂಟಾಟಿಕೆ ಇಲ್ಲದ ಪ್ರಖರ ವೈಚಾರಿಕತೆ ಮೃದು ಮಾತಿನಲ್ಲಿ ವ್ಯಕ್ತವಾಗುವ ದೃಢ ನಿಲುವು, ಮಾತಿನಲ್ಲಿ ನಡು ನಡುವೆ ನುಸುಳಿ ಬರುವ ನಗೆ ಮಾತು, ಎಲ್ಲಿಯೋ ನೊಂದವರ ಪ್ರಸ್ತಾಪವಾಗುತ್ತಲೇ ತಾಳುವ ವಿಷಾದದ ಮೌನ....ಈ ಸಂವೇದನಾಶೀಲ ಜೀವ ತನ್ನೊಳಗೆ ತುಂಬಿಕೊಂಡಿರುವ ಜೀವನ ಪ್ರೀತಿ, ಜೀವ ದಯೆ, ಮಾನವ ಕಾರುಣ್ಯ, ಅಲುಗಾಡಿಸಲಾಗದ ಸಾಮಾಜಿಕ ಪ್ರಜ್ಞೆ ಹಾಗೂ ನೈತಿಕ ಸ್ಥೈರ್ಯ... ಉಹೂಂ ವೈದೇಹಿಯಂಥ ಇನ್ನೊಬ್ಬರನ್ನೂ ನಾನು ಕಂಡಿಲ್ಲ ಕಾಣಲಾರೆ ಸಹ.

ಮತ್ತೆ ಮತ್ತೆ ಒದಗಿ ಬರುತ್ತಿದ್ದ ನಮ್ಮ ಭೆಟ್ಟಿಗಳು ಪ್ರಯಾಣಗಳು ವೈದೇಹಿಯವರಲ್ಲಿ ನನಗೆ ಒಂದು ಬಂಧುತ್ವದ ಎಳೆಯನ್ನೂ ಸಲುಗೆಯ ಎಳೆಯನ್ನೂ ತಂದುಕೊಟ್ಟವೆಂದೇ ಹೇಳಬೇಕು. ಬೆಂಗಳೂರು, ಮಂಡ್ಯ, ಧಾರವಾಡ, ಹೆಗ್ಗೋಡು, ಸಿರಸಿ, ಶೃಂಗೇರಿ...... ಹೀಗೆ ನಾವು ಒಟ್ಟೊಟ್ಟಿಗೆ ಪ್ರಯಾಣ ಮಾಡುವಾಗೆಲ್ಲ ನಿರಾಳವಾದ ಸಾಹಚರ್ಯ. ಒಂದಷ್ಟು ಮಾತು, ನಗು, ನಡುನಡುವೆ ಮೌನ, ಮತ್ತೆ ಹಳೆಯ ನೆನಪುಗಳು. ವೈದೇಹಿಯವರೊಟ್ಟಿಗಿನ ಪ್ರಯಾಣ ಅದೊಂದು ಚೇತೋಹಾರೀ ಯಾನ. ಸಮಾಜದಲ್ಲಿ ಇನ್ನೂ ಮಾಯವಾಗದ ಕ್ರೌರ್ಯ, ಪುರುಷ ಹೇಂಕಾರ, ಮಾತೃ ಹೃದಯದ ಪುರುಷರು, ಖಾಲಿ ಕೊಡಗಳು, ವೈದೇಹಿಯವರ ಪಾತ್ರ ಪ್ರಪಂಚವೇ ವೈವಿಧ್ಯಮಯ, ಸ್ವಾರಸ್ಯಕರ.

ಅವರಾಡುವ ಕುಂದಾಪುರದ ಆಡುಭಾಷೆ ನನ್ನ ಹವ್ಯಕ ಕನ್ನಡಕ್ಕೆ ಹತ್ತಿರವಾದ್ದರಿಂದ ನಮ್ಮ ಮಾತುಕಥೆಯಲ್ಲಿ ಧಾರಾಳವಾಗಿ ನುಸುಳುವ ಆಪ್ತತೆಯ ಮೂಲಕವೇ ನಾನವರ ಅನೇಕ ಪಾತ್ರಗಳನ್ನು ಕಣ್ಣಾರೆ ಕಂಡಷ್ಟೇ ಸ್ಪಷ್ಟವಾಗಿ ಕೇಳಿ ಬಲ್ಲೆ. ಅವರ ಮಾತುಕತೆಯಲ್ಲಿ ಅವರ ತಾಯಿಯ ಪ್ರಸ್ತಾಪ, ಮನುಷ್ಯ ಸ್ವಭಾವದ ಬಗ್ಗೆ ಅವರ ಖಂಡ ತುಂಡ ಮಾತುಗಳು, ತಮಾಷೆಯ ಹೇಳಿಕೆಗಳು ಎಲ್ಲವೂ ಆಗಾಗ ನುಸುಳುತ್ತವೆ.

ಕುಮಟಾ ಕಾಲೇಜಿಗೊಮ್ಮೆ ವೈದೇಹಿಯವರನ್ನು ಆಹ್ವಾನಿಸಿದ್ದರು. ನಾವು ಮಣಿಪಾಲದಿಂದ ಕಾರಲ್ಲಿ ಹೊರಟೆವು. ಕಂಡ ಕಂಡಲ್ಲಿ ಕಾರು ನಿಲ್ಲಿಸಿ ಅಲ್ಲಿನ ವೈಶಿಷ್ಟ್ಯಗಳ ಪರಿಚಯ ಮಾಡಿಕೊಳ್ಳುವ ಉಮೇದು ನಮಗೆ. ಗುಣವಂತೆ ಹೆದ್ದಾರಿ ಪಕ್ಕದ ಚಿಕ್ಕದಾದ ಭಟ್ಟರ ಹೋಟೆಲಿನಲ್ಲಿ ದೋಸೆ ಚಾ ಸವಿದ ಅವರು ಭಟ್ಟರ ಬಳಿ ಚಾಪುಡಿ ಚೆನ್ನಾಗಿದೆ

ಛತ್ರಿ ! ಎಲ್ಲಿಂದ ತರಿಸೋದು ನೀವು? ಎಂದು ಹೇಳಿ ನಂತರ ಹೊನ್ನಾವರದಲ್ಲಿ ಅದನ್ನು ಖರೀದಿಸಿಯೂ ಇದ್ದರು. ಹಂದಿಗೋಣದಿಂದ ಕುಮಟಾವರೆಗೂ ಚಪ್ಪರದಂತೆ ತೂಗಿಬಿಡುವ ಉಳ್ಳಾಗಡ್ಡೆ (ಜಡೆ ಈರುಳ್ಳಿ) ವೈದೇಹಿಯವರನ್ನು ಆಕರ್ಷಿಸಿದ್ದು ಅಚ್ಚರಿಯಿಲ್ಲ. ಬೆಳೆಗಾರರ ಕಷ್ಟಕ್ಕೆ ಕಿವಿಯಾಗಿದ್ದೂ ಉಂಟು. ಪ್ರತಿ ಬಾರಿ ಪಯಣಿಸುವಾಗಲೂ ಕಾರಿನಲ್ಲಿ ಉಳ್ಳಾಗಡ್ಡೆ 'ಪೊತ್ತೆ' ತುಂಬಿಸುತ್ತಾರೆ. ಬಂಧುಗಳಿಗೂ ಕಳಿಸಿಕೊಡುತ್ತಾರೆ.

ವೈದೇಹಿಯವರ ಕಾದಂಬರಿಯೊಂದು ಮಂಗಳೂರು ವಿಶ್ವವಿದ್ಯಾಲಯದ ಪದವಿ ತರಗತಿಗಳಿಗೆ ಪಠ್ಯವಾಗಿದೆ. ನನ್ನ ಕೆಲ ಸಾಹಿತ್ಯಾಸಕ್ತ ವಿದ್ಯಾರ್ಥಿಗಳು ಒಮ್ಮೆ ವೈದೇಹಿ ಅವರನ್ನು ಕರೆಸಿ ಮೇಡಂ ನಮಗವರ ಜತೆ ಮಾತುಕತೆ ಸಂವಾದಬೇಕು ಎನ್ನತೊಡಗಿದ್ದರು. ಹೀಗ್ಹೀಗೆ ಮಾರಾಯ್ತಿ ನಮ್ಮ ಕಾಲೇಜಿಗೆ ಬರಬೇಕು ಎಂದು ಕರೆದರೆ ಆ ಕಡೆಯಿಂದ ಹೂಂ ಊಹೂಂ ಸಪ್ಪಳವಿಲ್ಲ. ಒತ್ತಾಯಿಸಿದರೆ ಬೇಡ ಕಣೆ, ಭಾಷಣ ಗೀಷಣ ಏನೂ ಬೇಡ ಅನ್ನಿಸ್ತಿದೆ ಎಂದರು. ಆರೋಗ್ಯ ವಿಚಾರಿಸಿಕೊಂಡೆ. ಮಂಗಳೂರಿನ ತನಕ ಬಂದು ಹೋಗುವಷ್ಟು ಸರಿಯಿದೆ ಅನಿಸಿತು. ಒಮ್ಮೊಮ್ಮೆ ಅವರ ಅನ್ಯಮನಸ್ಕತೆ ಹೀಗೆ ಎಂದು ಹೇಳಲಾಗದ್ದು ಎಂಬುದು ಗೊತ್ತಿತ್ತಾದ್ದರಿಂದ ಆ ಕ್ಷಣಕ್ಕೆ ಸುಮ್ಮನಾದೆನಾದರೂ ವಿದ್ಯಾರ್ಥಿಗಳ ಆಸೆಗೆ ತಣ್ಣೀರೆರಚುವುದು ಸುಲಭವಾಗಿರಲಿಲ್ಲ.

ಮರುದಿನ ವೈದೇಹಿಯವರ ಪತಿ ಶ್ರೀನಿವಾಸಮೂರ್ತಿಯವರ ಬಳಿ ಈಗ ನಾನೊಂದು ಕಿತಾಪತಿ ಮಾಡಲಿಕ್ಕಿದೆ ನೀವು ನನಗೆ ಸಪೋರ್ಟ್ ಮಾಡಬೇಕು ಎಂದೆ. ವಿಷಯ ಹೀಗುಂಟು ಎಂದು ವಿವರಿಸಿದೆ. ನಗುತ್ತ ಆಯ್ತು ಮೇಡಂ ಅಂದರು. ವೈದೇಹಿ ಅವರಿಗೆ ಫೋನುಕೊಟ್ಟರು. 'ನೀವು ಎಷ್ಟು ಕೆಜಿ ತೂಗುತ್ತೀರಿ?' ಎಂದು ಕೇಳಿದೆ. ಯಾಕೇ ತುಲಾಭಾರ ಮಾಡಿಸ್ತೀಯಾ? ಅಂತ ನಕ್ಕರು. ಇಲ್ಲ, ನೀವು ನಮ್ಮ ಕಾಲೇಜಿಗೆ ಬರಲಿಲ್ಲ ಅಂತ ವಿದ್ಯಾರ್ಥಿಗಳು ನನ್ನ ಬಳಿ ವಿಪರೀತ ಒತ್ತಡ ಮಾಡುತ್ತಿದ್ದಾರೆ. ನಿಮ್ಮನ್ನು ಸೀದಾ ಎತ್ತಿಕೊಂಡಾದರೂ ಕಾಲೇಜಿಗೆ ತರುವದು ಎಂದು ನಿಶ್ಚಯಿಸಿದ್ದೇವೆ. ನಿಮ್ಮ ತೂಕ ಕೇಳಿ ಎಷ್ಟು ವಿದ್ಯಾರ್ಥಿಗಳನ್ನು ಕಳಿಸುವದು ಎಂದು ನಿರ್ಧರಿಸಬೇಕಲ್ಲ... ಎಂದಾಗ ಇವಳ ಕೈಲಿ ಎಡೀದು ಮಾರಾಯ್ತಿ...ಎಂದಿದ್ದೂ ಪಾಪ ವಿದ್ಯಾರ್ಥಿಗಳು ಕರೀತಿದ್ದಾರೆ ಹೋಗಿ ಬಂದುಬಿಡು ಎಂದು ಮೂರ್ತಿಯವರು ಹೇಳುವುದೂ ಕೇಳಿಸಿತು.

ವೈದೇಹಿ ನಮ್ಮ ಕಾಲೇಜಿಗೆ ಬಂದರು. ವಿದ್ಯಾರ್ಥಿಗಳಿಗೆ ಪ್ರಾಧ್ಯಾಪಕರುಗಳಿಗೆ ಎಲ್ಲರಿಗೂ ಸಂತೋಷವಾಗುವಂತೆ ಭಾಷಣ ಮಾಡಿದರು. ಮತ್ತೂ ಕೆಲ ಬಾರಿ ಬಂದರು. ಮಣಿಪಾಲ ವಿಶ್ವವಿದ್ಯಾಲಯದ ವತಿಯಿಂದ ಮಂಗಳೂರು ವಿಶ್ವವಿದ್ಯಾಲಯದ ಶಿವರಾಮ ಕಾರಂತ ಪೀಠದ ಜತೆ ಸೇರಿ ಕಾಲೇಜು ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವಂತೆ ಸೃಜನಶೀಲ ಬರವಣಿಗೆಯ ಕುರಿತಾದ ಕಮ್ಮಟವೊಂದನ್ನು ಆಯೋಜಿಸಿ ವಿಮರ್ಶಕಿ

ಡಾ.ಆಶಾದೇವಿ ಅವರನ್ನೂ ಕರೆಸಿದ್ದರು. ಆಮೇಲೂ ನಮ್ಮ ವಿದ್ಯಾರ್ಥಿಗಳು ಮಣಿಪಾಲದಲ್ಲಿ ನಡೆದ 'ಅಡುಗೆ ಮನೆ..' ಸಾಹಿತ್ಯ ವಿಚಾರ ಸಂಕಿರಣದಲ್ಲಿ ಸ್ವೇಚ್ಛೆಯಿಂದ ಹೋಗಿ ಭಾಗವಹಿಸಿ ಖುಷಿಪಟ್ಟು ಬಂದರು.. ಯುವಕ ಯುವತಿಯರಿಗೆ ಆಪ್ತವಾಗುವ ಹಾಗೆ ಮಾತಾಡುವ ವೈದೇಹಿಯವರದು ಬಡ ಮಧ್ಯಮ ವರ್ಗದ ವಿಧ್ಯಾರ್ಥಿಗಳ ಪರವಾದ ಕಾಳಜಿಯ ಧಾಟಿ. ಸಮಾಜದಲ್ಲಿ ಇನ್ನೂ ನೆಲೆಸಿರುವ ಲಿಂಗ ಅಸಮಾನತೆ ಕುರಿತು ವಿದ್ಯಾರ್ಥಿಗಳಲ್ಲಿ ಆಕ್ರೋಶಕ್ಕೆಡೆ ಮಾಡದ ಅರಿವನ್ನು ಮೂಡಿಸುವ ಅವರ ಮಾತಿನ ಶೈಲಿ ಅತ್ಯಂತ ಆಕರ್ಷಕ.

ವೈದೇಹಿಯವರ ಬರಹಗಳು ಹೇಗೆ ಕುಸುರಿ ಕೆಲಸದ ನಾಜೂಕು ನೆನಪು ತರುವ ಕಲೆಗಾರಿಕೆಯಿಂದ ಕೂಡಿರುತ್ತವೆಯೋ ಅವರ ಭಾಷಣಗಳೂ ಅಷ್ಟೇ ಸುಂದರ. ಅವರೆಂದೂ ಓತಪ್ರೋತವಾಗಿ ಧಬಧಬೆಯ ಹಾಗೆ ವಾಕ್ಪ್ರವಾಹ ನಡೆಸಿದವರೇ ಅಲ್ಲ. ಅನ್ಯಾಯದ ವಿರುದ್ಧ ಕಟ್ಟೆಚ್ಚರದ ಧ್ವನಿಯೆತ್ತುತ್ತಾರಾದರೂ ಆಕ್ರೋಶದ ಕಿರುಚಾಟ ಎಂದೂ ಅವರಿಗಾಗದು. ವೇದಿಕೆಯ ಮೇಲೆ ಕಹಿ ಕಾರಿಕೊಂಡವರೂ ಅಲ್ಲ. ಓಲೈಕೆ, ಮೆಚ್ಚಿಸುವಿಕೆಗಳ ಗುಮಾನಿ ಬಂದರೆ ದೂರ ಸಿಡಿದು ಒಂಟಿಯಾಗಿ ನಿಲ್ಲುತ್ತಾರೆ. ಯಾವುದರಲ್ಲಿಯೂ ಅತಿ ಬೇಡವೆನ್ನುವ ಅವರದು ಪ್ರಸ್ತುತ ಕನ್ನಡ ಸಾಹಿತ್ಯದಲ್ಲಿಯೇ ಅತಿ ವಿಶಿಷ್ಟವಾದ ಮಹಿಳಾ ಸಂವೇದನೆಯ ಗಟ್ಟಿ ದನಿ. ಪುರಾಣದ ಸ್ತ್ರೀ ಪಾತ್ರಗಳಿಗಾದ ಅನ್ಯಾಯವೂ ಅವರನ್ನು ಕಾಡದೇ ಬಿಟ್ಟಿಲ್ಲ. ಗಾಂಧೀಜಿಯವರ ಅಪರಿಗ್ರಹ ಸಿದ್ಧಾಂತದಿಂದ ಪ್ರಭಾವಿತರಾದ ಅವರದು ತನಗೆ ಬರಬೇಕಾದುದೆಲ್ಲ ಬಂದಿದೆ. ಹೊಸಬರಿಗೆ, ಮುಂದಿನ ಪೀಳಿಗೆಗೆ ಅವಕಾಶ ಪ್ರೋತ್ಸಾಹ ಸಿಗಲಿ ಎಂಬ ಹಂಬಲ.

ಶಿರಸಿಯ ಜಿ.ಎಚ್ ಶ್ರೀಧರ ಪ್ರಶಸ್ತಿ ನನಗೆ ಕೊಡಲ್ಪಟ್ಟ ವರ್ಷ ಪ್ರಶಸ್ತಿ ಪ್ರದಾನ ಮಾಡಲು ವೈದೇಹಿಯವರು ಬಂದಿದ್ದರು. ಹಿರಿಯ, ಆಗಿಹೋದ ತಲೆಮಾರಿನ ಸಾಹಿತಿಗಳ ಜೀವನ ಮೌಲ್ಯಗಳನ್ನು ನೆನಪಿಸಿಕೊಳ್ಳುತ್ತ ಅವರಾಡಿದ ಮಾತುಗಳನ್ನು ಸಿರಸಿಯ ಜನ ಇಂದಿಗೂ ನೆನಪಿಟ್ಟು ಸ್ಮರಿಸುತ್ತಾರೆ. ನಾನು ಅಲ್ಲಿ ನೆರೆದ ನನ್ನ ಅಧ್ಯಾಪಕರು, ಗುರುತಿನವರನ್ನು ಪರಿಚಯಿಸುತ್ತ ಇವರು ಪಿ.ಎಂ ಹೆಗಡೆ ನನ್ನ ಇಂಗ್ಲಿಷ್ ಮಾಷ್ಟ್ರು, ಇವರು ಎಂ.ಪಿ ಹೆಗಡೆ, ಡಿ.ಜಿ ಹೆಗಡೆ ಎಂದೆಲ್ಲ ಪರಿಚಯಿಸಿದ ಬಳಿಕ ಕೀಟಲೆ ತುಂಬಿದ ಸ್ವರದಲ್ಲಿ ಅಯ್ಯೋ ಇದೊಳ್ಳೆ ಹೆಗಡೆಗಳ ಅಡ್ಡೆ ಇದ್ದಂತಿದೆಯಲ್ಲೆ ಎಂದು ನಕ್ಕಿದ್ದರು. ಎಲ್ಲಿ ಹೋದರೂ ಅಲ್ಲಿಯ ಸ್ಥಳೀಯ ಸ್ವಾರಸ್ಯಗಳನ್ನು ಸವಿಯದೇ ಬಂದವರಲ್ಲ. ಸಹಸ್ರಲಿಂಗಕ್ಕೆ ಬೆಳಬೆಳಗ್ಗೆ ಹೋದಾಗ ಅಲ್ಲಿ ಶಾಲ್ಮಲಾನದಿಯ ಪ್ರತಿ ಬಂಡೆಯ ಮೇಲೂ ಈಶ್ವರ ಲಿಂಗ, ನಂದಿಗಳು ಕೆತ್ತಲ್ಪಟ್ಟಿದ್ದನ್ನು ನೋಡಿ ಹರ್ಷಿಸಿ, ಇಲ್ಲಿ ಯಾರೋ ರಾಜರು ಈಶ್ವರಲಿಂಗ ಕೆತ್ತುವ ಶಿಲ್ಪಿಗಳ ವರ್ಕ್‌ಶಾಪ್ ನಡೆಸಿರಬೇಕು ಎಂದುದ್ಗರಿಸುತ್ತಿದ್ದರು.

ಸಿರಸಿಯಿಂದ ನಾವು ಯಾಣಕ್ಕೆ ಪಯಣಿಸಿದ್ದಂತೂ ಮರೆಯಲಾರದ ನಿಸರ್ಗಾನುಸಂಧಾನ. ಯಾಣದತ್ತ ಹೋಗುತ್ತಿದ್ದಂತೇ ದಟ್ಟವಾಗುತ್ತ ಹೋಗುವ ಕಾಡಿನ ನಡುವೆ ಪ್ರಯಾಣದ ಆಯಾಸವೇ ತಿಳಿಯದಂತೆ ಹರಟೆ ಕುಶಾಲುಗಳಲ್ಲಿ ಮುಳುಗಿದ್ದ ನಮಗೆ ಕಣ್ಣೆದುರೇ ಧುತ್ತೆಂದು ಮುಗಿಲೆತ್ತರಕ್ಕೆ ನಿಂತ ಕಪ್ಪು ಶಿಲೆಯ ಭೈರವೇಶ್ವರ ಪರ್ವತ ಗೋಚರಿಸಿ ಬಿಟ್ಟಾಗ ಮಗುವಿನಂತೆ ಸಂಭ್ರಮಪಟ್ಟರು. ಆಯಾಸವನ್ನೂ ಲೆಕ್ಕಿಸದೇ ಗುಹೆಯೊಳಗೆ ಹೊಕ್ಕು ಹೊರಟು ಖುಶಿಪಟ್ಟರು. ಯಾಣದ ಅಗಾಧತೆ ಕಾನನದ ಸೌಂದರ್ಯ ಅವರ ಮನಸ್ಸನ್ನು ತುಂಬಿದ್ದು ಮಣಿಪಾಲ ತಲುಪುವ ತನಕವೂ ಅದರ ಪರಿಮಳ ಮಾತಿನಲ್ಲಿ ಹೊಮ್ಮುತ್ತಲೇ ಇತ್ತು.

ಶತಮಾನಕ್ಕೊಬ್ಬ ವೈದೇಹಿ. ಕನ್ನಡಕ್ಕೊಬ್ಬಳೇ ವೈದೇಹಿ.... ಹೇಗೇ ಹೇಳಿದರೂ ಅತಿಶಯೋಕ್ತಿಯಾಗದು. ಅವರ ಹತ್ತಿ ಹಗುರಿನ ದೇಹಕ್ಕೆ ಅಸೌಖ್ಯವುಂಟಾದರೆ ನನಗೆ ಅಸ್ವಸ್ಥತೆ ಕಾಡತೊಡಗುತ್ತದೆ. ನೂರು ಬಾರಿ ಅವರ ಪತಿ ಮೂರ್ತಿಯವರ ಬಳಿ ವಿಚಾರಿಸುತ್ತೇನೆ. ಕಡಿಮೆಯಾಯ್ತು ಎಂಬ ಸಮಾಧಾನ ಬರುವ ತನಕವೂ ಆತಂಕ ಕಡಿಮೆಯಾಗುವುದಿಲ್ಲ. ನನ್ನ ಸರಿತಪ್ಪುಗಳನ್ನು ನಿಷ್ಠುರವಾಗಿ ತಿಳಿಸಬಲ್ಲ, ನಿನಗದು ಬೇಡ ಕಣೆ...ಎಂದು ಧರ್ಮಸಂಕಟದ ಕ್ಷಣಗಳಲ್ಲಿ ಪಾರು ಮಾಡುವ ವೈದೇಹಿ ಅವರಿಗೆ ಎಪ್ಪತ್ತೈದಾಗಲಿ ನೂರಾಗಲಿ.....ಕನ್ನಡ ಸಾಹಿತ್ಯದ ಕಣಜ ಇವರ ಗಟ್ಟಿಕಾಳುಗಳಿಂದ ತುಂಬುತ್ತಲೇ ಇರಲಿ.



# ಸ್ನೇಹಜೀವಿ

✦ ಸಾರಾ ಅಬೂಬಕ್ಕರ್

ದಕ್ಷಿಣ ಕನ್ನಡ ಜಿಲ್ಲೆ ಮಾತ್ರವಲ್ಲ ಇಡೀ ಕರ್ನಾಟಕದಲ್ಲಿಯೇ ಹೆಸರುವಾಸಿಯಾದ ಲೇಖಕಿ ಶ್ರೀಮತಿ ವೈದೇಹಿಯವರಿಗೆ ಅಭಿನಂದನಾ ಗ್ರಂಥವನ್ನರ್ಪಿಸುವುದನ್ನು ತಿಳಿದು ಸಂತೋಷವಾಯಿತು. ನಾನು ಬರಹವನ್ನಾರಂಭಿಸುವ ಮೊದಲೇ ವೈದೇಹಿಯವರು ಬರಹವನ್ನಾರಂಭಿಸಿದ್ದರು ಎಂಬುದು ನನ್ನ ನೆನಪು. ಅವರು ನನಗಿಂತ ಹತ್ತಿಪ್ಪತ್ತು ವರ್ಷ ಕಿರಿಯರಾಗಿದ್ದಾರೆಂದೆನಿಸುತ್ತದೆ. ನಾವು ಅಕ್ಕಪಕ್ಕದ ಜಿಲ್ಲೆಯವರಾಗಿದ್ದರೂ ಪರಸ್ಪರ ಭೇಟಿಯಾಗುತ್ತಿದ್ದುದು ಯಾವುದಾದರೊಂದು ಸಾಹಿತ್ಯ ಕಾರ್ಯಕ್ರಮ ಅಥವಾ ಇತರ ಕಾರ್ಯಕ್ರಮಗಳಲ್ಲಿ ಮಾತ್ರ. ಆದರೂ ಕೆಲವು ಸಂದರ್ಭಗಳಲ್ಲಿ ನಾವು ಒಟ್ಟಾಗಿಯೇ ಇರುತ್ತಿದ್ದೆವು.

ನನಗೀಗ 82 ವರ್ಷ ಪ್ರಾಯವಾಗಿದೆ. ಇತ್ತೀಚೆಗೆ ಇತರ ದೈಹಿಕ ಅನಾರೋಗ್ಯ ದೊಡನೆ ಬಹಳ ಮರೆವೂ ನನ್ನನ್ನು ಕಾಡುತ್ತಿದೆ. ವೈದೇಹಿಯವರ ಕೆಲವು ಸಣ್ಣ ಕಥೆಗಳನ್ನು ನಾನು ಓದಿದ್ದರೂ ಈಗ ಅವುಗಳ ಹೆಸರೂ ಕೂಡ ಸಮನಾಗಿ ನೆನಪಾಗುತ್ತಿಲ್ಲ. ಪತ್ರಿಕೆಯಲ್ಲೇನಾದರೂ ವೈದೇಹಿಯವರ ಕತೆ ಇದ್ದರೆ ಕೂಡಲೇ ತೆಗೆದುಕೊಂಡು ಓದುತ್ತಿದ್ದೆ. ಅವರ ಸಮಾಜದಲ್ಲಿ ಕೂಡಾ ಹೆಣ್ಣುಮಕ್ಕಳು ಹೇಗೆ ಧರ್ಮದ ಹೆಸರಿನಲ್ಲಿ ಶೋಷಣೆಗೊಳಗಾಗುತ್ತಾರೆಂಬುದನ್ನು ಕಲಾತ್ಮಕವಾಗಿ ನಮ್ಮ ಮನದಾಳವನ್ನು ಕಲಕುವಂತೆ ನಿರೂಪಿಸುವ ಆ ಶೈಲಿಯೇ ನನಗೆ ತುಂಬಾ ಇಷ್ಟವಾಗುತ್ತಿತ್ತು. ಹೆಣ್ಣು ಮನಸ್ಸನ್ನು, ಆ ನೋವುಗಳನ್ನು ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರಲ್ಲಾ ಎಂದನ್ನಿಸುತ್ತಿತ್ತು. ಈ ಅಭಿನಂದನಾ ಗ್ರಂಥವನ್ನು ಒಂದೆರಡು ವರ್ಷಗಳ ಹಿಂದೆಯೇ ಸಮರ್ಪಿಸುವ ಕಾರ್ಯಕ್ರಮವಿದ್ದಿದ್ದರೆ ನಾನು ಅವರ ಸಾಹಿತ್ಯದ ಕುರಿತು ಸ್ವಲ್ಪ ಚೆನ್ನಾಗಿಯೇ ಬರೆಯಬಹುದಿತ್ತೆನಿಸುತ್ತದೆ. ಈಗ ಯಾವುದೂ ನೆನಪಾಗುತ್ತಿಲ್ಲ. ಹೀಗಾಗಿ ವೈದೇಹಿಯವರ ಸಾಹಿತ್ಯದ ಕುರಿತು ಬರೆಯಲು ಸಾಧ್ಯವಾಗುತ್ತಿಲ್ಲ.

ನಾನು ಮತ್ತು ವೈದೇಹಿಯವರು ದೆಹಲಿಯ ಒಂದು ಕಾರ್ಯಕ್ರಮಕ್ಕಾಗಿ ಒಟ್ಟಾಗಿ ವಿಮಾನದಲ್ಲಿ ಪ್ರಯಾಣ ಮಾಡಿ ಅಲ್ಲಿ ಹೊಟೆಲಿನ ಒಂದೇ ಕೋಣೆಯಲ್ಲಿ ಒಟ್ಟಾಗಿ

ತಂಗಿದ್ದೆವು. ಆ ಸಂದರ್ಭದಲ್ಲಿ ನಮ್ಮನ್ನು ಅಮೇರಿಕಾದ (ಯು.ಎಸ್.ಎ.) ರಾಯಭಾರ ಕಚೇರಿಗೆ ಕರೆಸಿದ್ದು ನನಗೆ ನೆನಪಿದೆ. ಎರಡು ದಿನಗಳ ಕಾರ್ಯಕ್ರಮ ಮುಗಿದೊಡನೆ ವೈದೇಹಿ ಊರಿಗೆ ಹೊರಟರು. ನನಗೆ ದೆಹಲಿಯಲ್ಲಿ ಅಣ್ಣನ ಮನೆ ಇದ್ದುದರಿಂದ ನಾನು ಅಲ್ಲೇ ಉಳಿದೆ. ಆ ಸಂದರ್ಭದಲ್ಲಿ ವೈದೇಹಿಯವರು ತಮ್ಮ ಗಂಡನಿಗಾಗಿ ಕೆಲವು ಬಟ್ಟನ್‌ಗಳನ್ನು ಕೊಂಡುಕೊಳ್ಳಲು ಪ್ರಯತ್ನಿಸಿದ್ದರೂ ಅದು ಅವರಿಗೆ ದೊರೆಯಲಿಲ್ಲ. ಆದರೆ ಅದನ್ನು ಕೊಂಡುಕೊಳ್ಳಲು ಅವರಿಗೆ ವೇಳೆ ಇರಲಿಲ್ಲ. ಆಗ ಅವರ ಕೈಯಿಂದ ಆ ಹೆಸರು ತೆಗೆದುಕೊಂಡು, 'ನೀವು ಯೋಚನೆ ಮಾಡಬೇಡಿ. ನಾನು ಇದನ್ನು ತೆಗೆದುಕೊಂಡು ಬರುವೆ' ಎಂದು ಅವರಿಗೆ ವಾಗ್ದಾನ ನೀಡಿದೆ. ಮರುದಿನ ನನ್ನ ಅತ್ತಿಗೆಯೊಡನೆ ಕನ್ನಾಟ್‌ಪ್ಲೇಸಿಗೆ ಹೋಗಿ ಅವರು ಹೇಳಿದ ಆ ಬಟ್ಟನ್ ಕೊಂಡುಕೊಂಡೆ.

ನಾನು ದೆಹಲಿಯಿಂದ ಹಿಂತಿರುಗಿದ ಮರುದಿನವೇ ಅವರು ಬಯಸಿದ್ದ ಆ ಬಟ್ಟನ್‌ಗಳನ್ನೆತ್ತಿಕೊಂಡು ಉಡುಪಿಯ ಮಣಿಪಾಲಕ್ಕೆ ಹೊರಟೆ. ಅವರ ಮನೆ ಮಣಿಪಾಲದಲ್ಲಿದೆಯೆಂಬ ನೆನಪಿತ್ತು. ಆದರೆ ಆ ದಾರಿ ಮರೆತು ಹೊಗಿತ್ತು.. ಆಮೇಲೆ ಯಾರನ್ನೋ ಕೇಳಿಕೊಂಡು ಅವರ ಮನೆ ತಲುಪಿದೆ. ಅವರಿಗೆ ದೆಹಲಿಯಲ್ಲಿ ನಾನು ವಾಗ್ದಾನ ನೀಡಿದಂತೆ ಆ ಬಟ್ಟನ್‌ಗಳನ್ನು ಅವರ ಕೈಯಲ್ಲಿಟ್ಟು ನಾನು ಹೊರಡುವೆನೆಂದಾಗ, 'ಇಲ್ಲ, ನೀವು ಇಂದು ನನ್ನಲ್ಲಿ ಊಟ ಮಾಡಿಕೊಂಡೇ ಹೊರಡಬೇಕು.' ಎಂದು ಒತ್ತಾಯದಿಂದ ನನ್ನನ್ನು ಊಟಕ್ಕೆ ನಿಲ್ಲಿಸಿಕೊಂಡು ಆತಿಥ್ಯ ನೀಡಿದರು. ಅವರ ಪುಟ್ಟ ಮೊಮ್ಮಗಳೂ ಇದ್ದಳು. ವೈದೇಹಿಯವರು ನಮಗೆಲ್ಲರಿಗೂ ಒಟ್ಟಾಗಿ ಊಟಕ್ಕೆ ಬಡಿಸಿದರು. ನಾನು ಓರ್ವ ಮುಸ್ಲಿಮಳಾಗಿ ಅವರು ಬ್ರಾಹ್ಮಣರಾಗಿ ನಾವೆಲ್ಲರೂ ಒಟ್ಟಿಗೆ ಕುಳಿತು ಊಟ ಮಾಡಿದ್ದನ್ನು ನಾನು ಇಂದಿಗೂ ಮರೆತಿಲ್ಲ. ನಮ್ಮ ನಡುವೆ ಯಾವ ಜಾತಿ ಭೇದವೂ ತಲೆ ಎತ್ತಲಿಲ್ಲ.

ಎರಡೋ ಮೂರೋ ವರ್ಷಗಳ ಹಿಂದೆ ಚೆನ್ನೈಯ 'ಹಿಂದೂ' ಪತ್ರಿಕೆಯ ಒಂದು ಕಾರ್ಯಕ್ರಮಕ್ಕಾಗಿ ನಮ್ಮಿಬ್ಬರನ್ನೂ ಆ ಪತ್ರಿಕೆಯವರು ಆಹ್ವಾನಿಸಿದ್ದರು. ನಾವಿಬ್ಬರು ಮಂಗಳೂರಿನ ವಿಮಾನ ನಿಲ್ದಾಣದಲ್ಲಿ ಒಟ್ಟು ಸೇರಿ ವಿಮಾನದಲ್ಲಿ ಚೆನ್ನೈಗೆ ಪ್ರಯಾಣಿಸಿದೆವು. ಅಲ್ಲಿಯೂ ಎರಡು ದಿನ ನಾವು ಒಟ್ಟಾಗಿಯೇ ತಂಗಿದ್ದೆವು. ಮರುದಿನ ವೈದೇಹಿ ನನ್ನೊಡನೆ, 'ಇಲ್ಲಿ ಚೆಂದದ ಬ್ಲೌಸ್ ಪೀಸ್ ದೊರೆಯುತ್ತದೆ. ನಾವು ಪೇಟೆಗೆ ಹೋಗಿ ಕೊಂಡುಕೊಂಡು ಬರೋಣವಾ?' ಎಂದು ಕೇಳಿದರು. ಅವರಿಗೆ ಒಬ್ಬರೇ ಹೋಗಲು ಇಷ್ಟವಿರಲಿಲ್ಲ. ಹಾಗೆ ನಾನು ಅವರೊಡನೆ ಹೋಗಿ ಕೆಲವು ಬ್ಲೌಸ್‌ಪೀಸ್ ಕೊಂಡುಕೊಂಡು ಮರಳಿದೆವು. ಮರುದಿನ ನಾವು ಒಟ್ಟಾಗಿ ಮಂಗಳೂರು ಸೇರಿದೆವು. ಅವರನ್ನು ಕರೆದೊಯ್ಯಲು ವಿಮಾನ ನಿಲ್ದಾಣಕ್ಕೆ ಅವರ ಪತಿಯವರು ಬಂದಿದ್ದರು.

ಒಮ್ಮೆ ಉಡುಪಿಯಲ್ಲಿ ಕೋಮು ಸೌಹಾರ್ದ ವೇದಿಕೆಯ ಒಂದು ಕಾರ್ಯಕ್ರಮವಿತ್ತು. ಆ ದಿನ ಆ ಕಾರ್ಯಕ್ರಮಕ್ಕೆ ಮಂಗಳೂರು ಮತ್ತು ಉಡುಪಿಯಿಂದ ತುಂಬಾ ಜನರು ಬಂದಿದ್ದರೂ ಮಹಿಳೆಯರ ಸಂಖ್ಯೆ ಬಹಳ ಕಮ್ಮಿಯಾಗಿತ್ತು. ಕಾರ್ಯಕ್ರಮಕ್ಕೆ ಬಂದಿದ್ದ ವೈದೇಹಿಯವರೊಡನೆ ನಾನು, 'ಏನು ಉಡುಪಿಯಲ್ಲಿ ಇಂತಹ ಕಾರ್ಯಕ್ರಮಗಳಿಗೆ ಮಹಿಳೆಯರು ಬರುವುದು ಇಷ್ಟು ಕಮ್ಮಿಯೇ?' ಎಂದು ಕೇಳಿದೆ. ಅದಕ್ಕೆ ವೈದೇಹಿಯವರು ನೀಡಿದ ಉತ್ತರ ನನಗೆ ಇಂದಿಗೂ ನಗೆ ತರಿಸುತ್ತದೆ. ಅವರೆಂದರು,

'ಮಹಿಳೆಯರ ಮೆದುಳು ತೊಳೆದಿಟ್ಟಿದ್ದಾರೆ. ಇಲ್ಲಿಗೆ ಬಂದು ಭಾಷಣ ಕೇಳಿದರೆ ಅವರ ಮೆದುಳಿಗೆ ಮೈಲಿಗೆಯಾಗುತ್ತದೆ. ಅದನ್ನು ತೊಳೆದು ಶುದ್ಧೀಕರಿಸುವುದು ಕಷ್ಟವಾಗುತ್ತದೆ. ಹಾಗಾಗಿ ಅವರು ಬಂದಿಲ್ಲ.' ಎನ್ನುತ್ತಾ ನಕ್ಕಾಗ ನಾನೂ ಅವರೊಡನೆ ಆ ನಗುವಿನಲ್ಲಿ ಪಾಲ್ಗೊಂಡೆ.

ವೈದೇಹಿಯವರು ಬಹಳ ಹಿಂದೆ ಒಮ್ಮೆ ಸಂತೋಷಕುಮಾರ ಗುಲ್ವಾಡಿ ಯವರೊಡನೆ ನನ್ನ ಮನೆಗೆ ಬಂದು 'ತರಂಗ' ವಾರ ಪತ್ರಿಕೆಗಾಗಿ ನನ್ನ ಸಂದರ್ಶನ ತೆಗೆದುಕೊಂಡಿದ್ದರು.

ಇತ್ತೀಚೆಗೆ ವೈದೇಹಿಯವರ ಮೂರು ಸಣ್ಣ ಕತೆಗಳನ್ನು ಸೇರಿಸಿ ಚಲನಚಿತ್ರ ನಿರ್ಮಿಸಿ ಮುಂದಿನ ತಿಂಗಳಲ್ಲಿ ಬಿಡುಗಡೆಯಾಗಲಿದೆ ಎಂದು ಪತ್ರಿಕೆಯಲ್ಲಿ ಸುದ್ದಿ ಇದೆ. 'ಅಕ್ಕು', ಮತ್ತು 'ಅಮ್ಮಚ್ಚಿ ಎಂಬ ನೆನಪು' ಎಂಬ ಕತೆಗಳೂ ಈ ಚಿತ್ರದಲ್ಲಿವೆ ಎಂದು ಕೇಳಿದ್ದೇನೆ. ಚಿತ್ರಕ್ಕೆ 'ಅಮ್ಮಚ್ಚಿ ಎಂಬ ನೆನಪು' ಎಂದು ನಾಮಕರಣ ಮಾಡಲಾಗಿದೆ.

ವೈದೇಹಿಯವರು ತಮ್ಮ ಪತಿ, ಮೊಮ್ಮಕ್ಕಳು ಮತ್ತು ಮಕ್ಕಳೊಡನೆ ತುಂಬಾ ವರ್ಷ ಬದುಕಿ ಇನ್ನಷ್ಟು ಅತ್ಯುತ್ತಮ ಕತೆಗಳನ್ನು ಬರೆಯುವಂತಾಗಲಿ, ಆರೋಗ್ಯವಂತರಾಗಿ ಬದುಕಿ ಬಾಳಲಿ ಎಂಬ ಹಾರೈಕೆ ನನ್ನದು.



# ವೈದೇಹಿ ಒಡನಾಟ

✦ ಎಲ್ ಸಿ ಸುಮಿತ್ರಾ

ವೈದೇಹಿಯವರನ್ನು ನಾನು ಮೊದಲು ನೋಡಿದ್ದು ಕುವೆಂಪು 90 ಕಾರ್ಯಕ್ರಮದಲ್ಲಿ. 1994 ರಲ್ಲಿ, ಕುಪ್ಪಳಿಯಲ್ಲಿ ಅದೊಂದು ದೊಡ್ಡ ಕಾರ್ಯಕ್ರಮ. ಕುವೆಂಪು ಅವರ 90 ನೇ ಹುಟ್ಟುಹಬ್ಬ ಆಚರಿಸಲು ಕನ್ನಡದ ಮುಖ್ಯ ಲೇಖಕರೆಲ್ಲರೂ ಸೇರಿದ್ದರು. ಜಿ ಎಸ್ ಎಸ್, ಯು ಆರ್ ಅನಂತಮೂರ್ತಿ, ಎಚ್ ನರಸಿಂಹಯ್ಯ, ತೇಜಸ್ವಿ, ಕಿ ರಂ ನಾಗರಾಜ್, ಲಲಿತಾ ನಾಯಕ್, ವೈದೇಹಿ, ಅಗ್ರಹಾರ ಕೃಷ್ಣಮೂರ್ತಿ, ಜಿ ಎಚ್ ನಾಯಕ್ ಹೀಗೆ ಬೆಂಗಳೂರು ಮೈಸೂರಿನ ಮತ್ತು ಕರ್ನಾಟಕದ ವಿವಿಧೆಡೆಯ ಅದೆಷ್ಟೊ ಲೇಖಕರು. ಅವತ್ತು ಕುವೆಂಪು ಅವರ ಹಳೆ ಮನೆಯ ಅಂಗಳದಲ್ಲಿ ಕಾರ್ಯಕ್ರಮ. ತೋಟದಲ್ಲಿ ಊಟ. ನಾನು, ವೈದೇಹಿ, ಮುರಾರಿ ಬಲ್ಲಾಳ್, ವೀಣಾ ಬನ್ನಂಜೆ ಅವರ ಜತೆ ತೋಟದಲ್ಲಿ ಕುಳಿತು ಊಟ ಮಾಡುತ್ತಿದ್ದ ಫೋಟೊ ಕಡಿದಾಳ್ ಶಾಮಣ್ಣ ತೆಗೆದಿದ್ದು ನನ್ನ ಬಳಿ ಇದೆ. ಅವತ್ತು ವೈದೇಹಿ ಪಿಂಕ್ ಪ್ಲೈನ್ ಸೀರೆಗೆ ಕಪ್ಪು ಬ್ಲೌಸ್ ಧರಿಸಿದ್ದರು ಸರಳವಾಗಿದ್ದರು. ಕೆಲವರನ್ನು ಮೊದಲ ಸಲ ನೋಡಿದ ಸಮಯ, ಸಂದರ್ಭ, ಆಡಿದ ಮಾತು ಮನದಲ್ಲಿ ಉಳಿದುಬಿಡುತ್ತವೆ. ವೈದೇಹಿಯವರದು ಅಂತಹ ವ್ಯಕ್ತಿತ್ವ.

ಎರಡನೇ ಸಲ ಅವರದೇ ಊರು ಕುಂದಾಪುರದಲ್ಲಿ. ಸಮೀಪದ ಬಸರೂರಿನ ಶಾರದಾ ಕಾಲೇಜ್‌ನಲ್ಲಿ. ಸಾಹಿತ್ಯ ಪರಿಷತ್ ಕಾರ್ಯಕ್ರಮ, ವೈದೇಹಿ ಸಾಹಿತ್ಯ ಕುರಿತು ವಿಚಾರ ಸಂಕಿರಣ ಮತ್ತು ಅವರಿಗೆ ಸನ್ಮಾನ. ಮೈಸೂರಿನಿಂದ ಮೇಡಮ್ ವಿಜಯಾ ದಬ್ಬೆ ಕಾಗದ ಬರೆದರು, ಕುಂದಾಪುರಕ್ಕೆ ಬಂದವಳು ನಿಮ್ಮಲ್ಲಿಗೂ ಬರುತ್ತೇನೆ ಅಂತ. ನಾನು ಅವರನ್ನು ನಮ್ಮ ಕಾಲೇಜಿಗೆ ಬರುವಂತೆ ಕರೆಯುತ್ತಲೇ ಇದ್ದೆ. ಇಲ್ಲಿಗೆ ಬಾ ನೀನೂ ಕಾರ್ಯಕ್ರಮದಲ್ಲಿ ಭಾಗವಹಿಸಿದಂತೆ ಆಗುತ್ತೆ ಅಂದರು. ಸರಿ, ನಾನು ಬಸರೂರಿನ ಶಾರದಾಕಾಲೇಜ್‌ಗೆ ಹೋದೆ. ವೈದೇಹಿ ಸಾಹಿತ್ಯ ಕುರಿತು ವಿಜಯಾದಬ್ಬೆ, ಟಿ ಪಿ ಅಶೋಕ್ ಇನ್ನೂ ಕೆಲವರು ಮಾತಾಡಿದರು. ವೀಣಾ ಬನ್ನಂಜೆ ಇದ್ದರು. ಊಟದ ನಂತರ ಸನ್ಮಾನ. ಊಟ ಹರಿಕೃಷ್ಣ ಪುನರೂರು ಅವರದಂತೆ. ದ ಕ ದ ಟಿಪಿಕಲ್ ಊಟ. ಸನ್ಮಾನ ನೋಡಲು ಅವರ ತಾಯಿ ಬಂದಿದ್ದರು. ಕಾರ್ಯಕ್ರಮ ಮುಗಿದ ಮೇಲೆ, ಮಧ್ಯಾಹ್ನ

ನಾನು ವಿಜಯಾ ಮೇಡಮ್, ಅವರ ಮಗಳು ಚಾರು ತೀರ್ಥಹಳ್ಳಿಗೆ ಬಂದೆವು. ಆದರೆ ಊಟಕ್ಕೆ ಕುಳಿತಾಗ ಒಂದು ತಮಾಷೆಯ ಮಾತು ಕಿವಿಗೆ ಬಿತ್ತು. ಅತಿರಸ, ಪಾಯಸ, ಬೋಳುಹುಳಿ ಇತ್ಯಾದಿಗಳಿದ್ದ ದಕ್ಷಿಣ ಕನ್ನಡ ಶೈಲಿಯ ಊಟವನ್ನು ಬಾಳೆಲೆ ಮೇಲೆ ಬಡಿಸಿದರು. ಕುಂದಾಪುರದ ಒಬ್ಬ ಕನ್ನಡ ಅಧ್ಯಾಪಕರು ಮತ್ತು ಎಂ ಜಿ ಎಂ ನ ಒಬ್ಬರು ಅಧ್ಯಾಪಕರು (ಇವರು ಈಗಿಲ್ಲ) 'ಈ ಊಟ ಮಾಡಲು ತೀರ್ಥಹಳ್ಳಿಯಿಂದೆಲ್ಲ ಜನ ಬಂದಿದಾರೆ ಮಾರಾಯ', ಅಂತ ಆಡಿಕೊಂಡು ನಕ್ಕರು. ನನಗೆ ಈಗ ತಮಾಷೆ ಅನ್ನಿಸಿದರೂ ಆಗ ಅವಮಾನ ಅನ್ನಿಸಿತ್ತು. ಎಷ್ಟೋ ವರ್ಷಗಳ ನಂತರ ಇದನ್ನು ವೈದೇಹಿಗೆ ಹೇಳಿದೆ.

ಆಮೇಲೆ ಹೆಗ್ಗೋಡಿನ ಸಂಸ್ಕೃತಿ ಶಿಬಿರಗಳಲ್ಲಿ ಆಗೀಗ ಭೇಟಿ. ಒಂದೆರಡು ನಿಮಿಷದ ಮಾತು. ಅಲ್ಲೊಬ್ಬರು ಸ್ಥಳೀಯರು ವೈದೇಹಿಯನ್ನು, ವೈದೇವಿ ಎಂದೇ ಕರೆಯುತ್ತಿದ್ದರು. ನಾನೂ ಕೆಲವೊಮ್ಮೆ ತಮಾಷೆಗೆ ಹಾಗೇ ಕರೆಯುತ್ತಿದ್ದೆ. ಸಾಗರದ ಎಲ್ ಬಿ ಕಾಲೇಜ್‌ನಲ್ಲಿ ವೈದೇಹಿಯವರ ಸಣ್ಣಕಥೆಗಳ ಕುರಿತ ಅಧ್ಯಯನ ಶಿಬಿರದಲ್ಲಿ 'ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗೆ' ಕಥೆಯ ಕುರಿತು ನಾನೊಂದು ಟಿಪ್ಪಣಿ ಮಂಡಿಸಿದೆ. ನನ್ನ 'ವಿಭಾವ' ವಿಮರ್ಶಾ ಸಂಕಲನದಲ್ಲಿ ಅವರ ಕಥೆಗಳ ಕುರಿತು ಒಂದು ಲೇಖನ, ಕಾದಂಬರಿ ಕುರಿತು ಒಂದು ಲೇಖನ ಇದ್ದವು. ಪತ್ರಿಕೆಯೊಂದಕ್ಕೆ ಸಂದರ್ಶನ ಮಾಡಲು ಒಮ್ಮೆ ಅವರ ಮನೆಗೆ ಹೋದಾಗ ಕೆಂಪು ನೆಲದ 'ಇರುವಂತಿಗೆ' ಹೆಸರಿನ ಸರಳ ಸುಂದರ ಮನೆ ನನ್ನನ್ನು ಆಕರ್ಷಿಸಿತು. ಹಾಲ್‌ನಲ್ಲಿ ಜೋಕಾಲಿ. ಸಾಂಪ್ರದಾಯಿಕ ಶೈಲಿಯ ಮುಂಭಾಗದ ಕಟ್ಟೆ. ಎಲ್ಲವೂ ಕುಂದಾಪುರದ ಸೊಗಡನ್ನು ಬೀರುತ್ತಿದ್ದವು. ಬಿಸಿಲಿನಲ್ಲಿ ಹೋದ ನಮಗೆ ಬೆರಸಿದ ಮಜ್ಜಿಗೆ ಸೇವೆ ಆಯಿತು. ಮಾತುಕಥೆಯ ನಂತರ ಊಟದ ಸಮಯದಲ್ಲಿ ಸೀಮೆಬದನೆ ತರಹ ಇದ್ದ ಪಲ್ಯವೊಂದನ್ನು ಬಡಿಸಿ ಇದೇನು ಹೇಳು ಅಂದರು. ಸ್ವಲ್ಪ ಸಿಹಿ ರುಚಿಯಿದ್ದ ಹೋಳುಗಳು ಸೌತೆಕಾಯಿಯನ್ನು ನೆನಪಿಸಿದವು. ಕೊನೆಗೆ ಅವರೆ ಗೆದ್ದವರಂತೆ ಕಲ್ಲಂಗಡಿಯ ಸಿಪ್ಪೆಯ ಜತೆಗಿರುವ ಬಿಳಿಯ ಭಾಗ ಅಥವ ಬಿಳೀ ಬಣ್ಣದ ತಿರುಳು ಅಂದರು. ನಾನು ಅದನ್ನು ಆಮೇಲೆ ಹಲವು ಸಲ ಮಾಡಿದೆ. ಅವರು ಸದ್ಗೃಹಿಣಿ ಅನ್ನುವುದನ್ನು ಅವರ ಅಡಿಗೆ ಮನೆ ಡೈನಿಂಗ್ ಟೇಬಲ್‌ಗಳೂ ಹೇಳುತ್ತಿದ್ದವು. ಒಮ್ಮೆ ಭಾಷಣಕಾರರೊಬ್ಬರು 'ದೋಸೆ ಮಗುಚಿದಷ್ಟು ಸುಲಭ' ಎಂದು ಹೇಳಿದಾಗ ವೈದೇಹಿ ಅದನ್ನು ಖಂಡಿಸಿ 'ದೋಸೆ ಮಗುಚುವುದು ಸುಲಭವಲ್ಲ' ಎಂದು ಲೇಖನವನ್ನೇ ಬರೆದರು. 'ಕಾವಲಿ ತುಂಬ ದೋಸೆ ಹೊಯ್ಯುವುದೂ ಇಲ್ಲ ಅಷ್ಟು ಜಿಪುಣಿ' ಎಂದು ಅಡಿಗೆ ಮನೆಯ ಅನುಭವ ಅವರ ಭಾಷೆಯಲ್ಲಿ ರೂಪಕವಾಗುತ್ತಿತ್ತು. ಅವರ ಕಥಾಪಾತ್ರ ಸಿರಿ ಬಡವಳಾದರೂ ಕಾವಲಿ ತುಂಬಾ ದೋಸೆ ಹೊಯ್ಯುವವಳು. 'ಸಂಜೆ ಮಣಿಪಾಲದ ಕೆಂಪು ಮಣ್ಣಿನ ದಾರಿಯಲ್ಲಿ ನಡೆಯುವಾಗ ಸಣ್ಣಗೆ ಮಳೆ ಹನಿಯುತ್ತಿತ್ತು. ದೂರದ ಕ್ಷಿತಿಜದಲ್ಲಿ ಸಮುದ್ರ ಗೆರೆಯಂತೆ ಕಾಣುತ್ತಿತ್ತು. ಸಮುದ್ರ ಅಳುತ್ತಿದೆ ಅಂದರು.

ನಮ್ಮ ಕಾಲೇಜ್‌ನಲ್ಲಿ ನಡೆದ ಸಾಹಿತ್ಯ ಸಂಘದ ಕಾರ್ಯಕ್ರಮಕ್ಕೆ ಕರೆದಾಗ ಬಂದರು. ಲೇಖಕಿಯ ಜತೆಗೆ ಸಂವಾದವೂ ಇತ್ತು. 1998 ರಲ್ಲಿ ಅವರ ಸ್ವಂತ ಕೆಲಸದ ಮೇಲೆ ಬಂದಾಗ ಈ ಕಾರ್ಯಕ್ರಮಕ್ಕೂ ಬಂದರು. ಆಡಿಟೋರಿಯಮ್ ತುಂಬ ವಿದ್ಯಾರ್ಥಿಗಳು. ಚೀಟಿಯಲ್ಲಿ ಬರೆದುಕೊಟ್ಟ ಪ್ರಶ್ನೆಗಳಿಗೆ ಮಕ್ಕಳಿಗೆ ಅರ್ಥವಾಗುವಂತೆ ಸೃಜನಶೀಲ ಬರೆಹ, ಕಥೆ ಕಾದಂಬರಿ ರಚನೆ, ಬದುಕು ಬರಹಗಳಿಗಿರುವ ಸಂಬಂಧಗಳ ಕುರಿತು ಮಾತನಾಡಿದರು. 2005ರಲ್ಲಿ ಮತ್ತೊಮ್ಮೆ ನೀನಾಸಮ್ ಕಾರ್ಯಕ್ರಮ ನಮ್ಮ ಕಾಲೇಜ್‌ನಲ್ಲಿ ನಡೆದಾಗ ಅದಕ್ಕೂ ಆಹ್ವಾನಿಸಿದಾಗ ಬಂದರು. ಅದು ಕನ್ನಡ ಕಥನ ಸಾಹಿತ್ಯದ ಸ್ತ್ರೀವಾದೀ ಅಧ್ಯಯನ. ವೈದೇಹಿ ಮಾತನಾಡಿದ ನಂತರ ಅಮ್ಮಚ್ಚಿಯೆಂಬ ನೆನಪು ಕಥೆ ಓದಿದರು. ಆ ಕಥೆಯನ್ನು ಅವರು ಹೆಗ್ಗೋಡಿನಲ್ಲಿ ಓದಿದ್ದನ್ನೂ ಕೇಳಿದ್ದೆ. ತುಸು ಭಾವುಕರಾಗುತ್ತಿದ್ದರು. ಒಂದು ಕಳ್ಳ ವೃತ್ತಾಂತ ಕಥೆಯ ಒಂದು ಸನ್ನಿವೇಶ ವೈದೇಹಿಯವರು ಸ್ತ್ರೀವಾದವನ್ನು ಹೇಳುವ ರೀತಿಗೆ ಒಳ್ಳೆಯ ನಿದರ್ಶನ. ಹಳ್ಳಿಯ ಮನೆಯ ಚಪ್ಪರದ ಅಂಗಳದಲ್ಲಿ ಮದುವೆಯೊಂದು ನಡೆಯುತ್ತಿದೆ. ಬೇಸಗೆಯ ಕೊನೆಯ ಸಮಯವಾದುದರಿಂದ ಇದ್ದಕ್ಕಿದ್ದಂತೆ ಮಳೆ ಬರುತ್ತದೆ. ಮದುವೆಯನ್ನು ನೋಡುತ್ತ ಅಂಗಳದಲ್ಲಿ ಕುಳಿತಿದ್ದ ಹೆಂಗಳೆಯರು ರೇಷ್ಮೆ ಸೀರೆ ಹಾಳಾಗಬಾರದೆಂದು ಮನೆಯೊಳಗೆ ನುಗ್ಗುತ್ತಾರೆ. ಮದುವೆ ಮನೆಯ ಯಜಮಾನಿಕೆ ವಹಿಸಿದವನಂತಿದ್ದ ನರಸಿಂಹಯ್ಯ ನೆಂಬುವವನು ನುಗ್ಗಿ ಬಂದು ಎಲ್ಲರನ್ನೂ ತಡೆದು ನಿಲ್ಲಿಸಿ ದೊಡ್ಡ ಜರಿಯಂಚಿನ ಜಾಸ್ತಿ ಬೆಲೆಯ ಸೀರೆಯವರು ಮೊದಲು ಒಳಗೆ ಹೋಗಿ ಅನ್ನುತ್ತಾನೆ. ಕಡಿಮೆ ಬೆಲೆಯ ಸೀರೆಯವರು ತಾವಾಗಿ ಹಿಂದೆ ಸರಿಯುತ್ತಾರೆ. ಹೀಗೆ ಸಾಲಾಗಿ ಒಳಹೋಗುವವರನ್ನು ನೋಡಲು ಅಡಿಗೆ ಮಾಡುವವರೂ ಬರುತ್ತಾರೆ. ಸಂಬಂಧವೇ ಇಲ್ಲದ ವ್ಯಕ್ತಿ ಕೇವಲ ಗಂಡು ಎಂಬ ಕಾರಣಕ್ಕೆ ಹೆಂಗಸರನ್ನು ನಿಯಂತ್ರಿಸುವ ಕಾಲ ಅದು ಎಂಬುದನ್ನು ಈ ಚಿತ್ರ ಸಮರ್ಥವಾಗಿ ಕಟ್ಟಿಕೊಡುತ್ತದೆ. ಆಮೇಲೊಮ್ಮೆ ನಾನು ಈ ಕುರಿತು ಪ್ರಸ್ತಾಪಿಸಿದಾಗ ತಮ್ಮ ಸಮೀಪ ಬಂಧುವೊಬ್ಬರ ಮದುವೆಯಲ್ಲಿ ಹೀಗೆ ನಡೆದಿತ್ತು ಅಂದರು.

ಈ ನಡುವೆ ಮೈಸೂರಿನಲ್ಲಿ ನಡೆದ ವಿಜಯಾದಬ್ಬೆ ಅಭಿನಂದನಾ ಸಮಾರಂಭಕ್ಕೆ ನಮಗಿಬ್ಬರಿಗೂ ಆಹ್ವಾನವಿತ್ತು. ನಾವಿಬ್ಬರೂ ಮಾತನಾಡಬೇಕಿತ್ತು. ವೈದೇಹಿ ತೀರ್ಥಹಳ್ಳಿಗೆ ಬಂದು ನಾವಿಬ್ಬರೂ ಕಾರಿನಲ್ಲಿ ಮೈಸೂರಿಗೆ ಹೋದೆವು. ವಿಜಯಾ ಮೇಡಮ್ ಆಗ ಅಪಘಾತಕ್ಕೆ ಈಡಾಗಿ ನೆನಪಿನ ಶಕ್ತಿ ಕಳೆದುಕೊಂಡಿದ್ದರು. ನಾನು ಮೈಸೂರಿಗೆ ಹೋದಾಗ ನಮ್ಮ ಮನೆ ಸಮೀಪದಲ್ಲೇ ಇದ್ದ ಅವರನ್ನು ಅಪಘಾತದ ನಂತರ ಹಲವು ಸಲ ಭೇಟಿಯಾಗಿದ್ದೆ. ಆದರೆ ವೈದೇಹಿಗೆ ಅವರನ್ನು ನೋಡಿ ಆಘಾತವಾಗಿತ್ತು. ವೈದೇಹಿ ಅವರು ವೇದಿಕೆಯಲ್ಲಿ ಮಾತಾಡಲು ನಿಂತಾಗ ಗದ್ಗದಿತರಾಗಿ ಮಾತಾಡಲು ಕಷ್ಟವಾಯಿತು. ನಾನು ಮೇಡಮ್ ಸಾಹಿತ್ಯ ಕುರಿತು ಸಿದ್ಧಪಡಿಸಿದ ಲೇಖನವನ್ನು ಹೇಗೋ ಓದಿದೆ.

ವಿಜಯಾದಬ್ಬೆ ಆರೋಗ್ಯವಾಗಿದ್ದಾಗ ಅವರಿಂದ ಉಪಕೃತರಾದ ಕೆಲವರು ಈಗ ಆ ಕಡೆಗೆ ಸುಳಿಯಲಿಲ್ಲ. ಕಾರ್ಯಕ್ರಮ ಭಾರತೀಯ ಭಾಷಾ ಸಂಸ್ಥಾನದ ಸಭಾಂಗಣದಲ್ಲಿ ನಡೆಯಿತು. ಕನ್ನಡ, ಇಂಗ್ಲಿಷ್ ವಿಭಾಗ ಸಮೀಪವೆ ಇದ್ದವು. ವೈದೇಹಿ 'ಎಲ್ಲ ಇಷ್ಟೆ ಸರಿಸರಿ ಇರುವಾಗ ಪರಿಪರಿ ನೆಂಟರು' ಎಂದರು. ಮತ್ತೆ ಮರಳಿ ಬರುವಾಗ ಜೀವನ ಮೀಮಾಂಸೆ ನಡೆಯಿತು.

ಮತ್ತೊಮ್ಮೆ ಹಂಪಿ ಕನ್ನಡ ವಿ ವಿ ಯಲ್ಲಿ ನಡೆದ ಹೆಣ್ಣು ಮತ್ತು ಭಾಷೆ ಸೆಮಿನಾರ್‌ಗೆ ಹೋದಾಗ ಒಂದೇ ಕೊಠಡಿಯಲ್ಲಿದ್ದೆವು. ರಾತ್ರಿ ವಿ. ವಿ. ಯ ಖಾಲಿ ಖಾಲಿ ರಸ್ತೆಗಳಲ್ಲಿ ವಾಕ್ ಮಾಡುತ್ತ ನಕ್ಷತ್ರ ನೋಡಿದ್ದಾಯಿತು. ಉತ್ತರ ಕರ್ನಾಟಕದ ಖಾರದ ಊಟ.. ಊಟದ ಮೇಜಿನಲ್ಲಿ ನಟಿ ಜಯಮಾಲ ಖಾರದ ಊಟ ಬೇಡವೆಂದು ಬರೀ ಮೊಸರನ್ನ ತಿಂದರು. ಭಾರ್ಗವಿ ನಾರಾಯಣ್ ನಮ್ಮೆದುರಿಗೆ ಕುಳಿತಿದ್ದರು. ಅವರು ಕೈಮಗ್ಗದ ಬಟ್ಟೆಯಿಂದ ಕಲಾತ್ಮಕವಾಗಿ ಹೊಲಿದ ರವಿಕೆ ತೊಟ್ಟಿದ್ದರು. ವೈದೇಹಿ ಅವರನ್ನು ನಿಮಗೆ ಇಷ್ಟು ಚೆಂದದ ಬ್ಲೌಸ್ ಯಾರು ಹೊಲೆದುಕೊಡುತ್ತಾರೆ ಎಂದು ಕೇಳಿದರು. ಭಾರ್ಗವಿ ನಾನೇ ಹೊಲಿದುಕೊಳ್ಳುವುದು ಅಂದರು. ನಮಗೆಲ್ಲ ಆಶ್ಚರ್ಯವಾಯಿತು. ಅವರು ಸೀರಿಯಲ್‌ಗಳಲ್ಲಿ ನಟಿಸುವಾಗ ಧರಿಸುವ ಎಲ್ಲ ಬ್ಲೌಸ್ ಅವರೇ ಹೊಲಿದುಕೊಳ್ಳುವುದಂತೆ. ಗೆಸ್ಟ್‌ಹೌಸ್‌ನ ಮೆಟ್ಟಿಲ ಮೇಲೆ ಕುಳಿತು ಮಾತನಾಡುತ್ತಿದ್ದ ವಿದ್ಯಾರ್ಥಿನಿಯೊಬ್ಬಳ ಜತೆ ರಾತ್ರಿ ಮದ್ಯಪಾನದಿಂದ ನಿಯಂತ್ರಣ ಕಳೆದುಕೊಂಡಿದ್ದ ಗಂಡು ಅತಿಥಿಯೊಬ್ಬರು ಅನುಚಿತವಾಗಿ ವರ್ತಿಸಿದ್ದೂ ಅಯಿತು. ನಾವೆಲ್ಲ ಆ ಮನುಷ್ಯನಿಗೆ ಬೈದುಕೊಂಡಿದ್ದೂ ಆಯಿತು. ಹೆಣ್ಣಿನ ಭಾಷೆ ಬಗ್ಗೆ ಎಷ್ಟು ಮಾತಾಡಿದರೂ ಇಂತಹ ಸಂದರ್ಭದಲ್ಲಿ ಸನ್ನಿವೇಶದ ಮರ್ಯಾದೆ ಉಳಿಸಲು ಹೆಣ್ಣಿನ ಭಾಷೆ ಮೌನವೇ? ಅಲ್ಲವೇ? ಅಂದುಕೊಂಡೆವು.

ವೈದೇಹಿಯವರ ಸೃಜನಶೀಲತೆಯ ಒಂದು ಭಾಗವೆ ಆಗಿ ಅವರೊಳಗೊಂದು ಮಗುತನವಿತ್ತು. ಬೆಳಿಗ್ಗೆ ಸಭೆಗೆ ಸಿದ್ಧವಾಗುವಾಗ ಈ ಸೀರೆ ಸಾಕಾ ನೋಡು ಅಂದರು. ಸ್ನಾನದ ನಂತರ ಕಂಚಿ ಕಾಟನ್ ಸೀರೆಯನ್ನು ಉಟ್ಟಿದ್ದರು. ನಾನು ಮೇಲಿನಿಂದ ಕೆಳಗೆ ನೋಡಿ ಇಸ್ತ್ರೀ ಇಲ್ಲವಲ್ಲ ಅಂದೆ. ನಾನು ರೆಡಿಯಾಗುವಷ್ಟರಲ್ಲಿ ಅವರು ಕಡಕ್ ಇಸ್ತ್ರೀ ಇದ್ದ ಚೆಂದದ ಸೀರೆಯನ್ನು ಉಟ್ಟು ಈಗ್ ಹೇಗೆ ಅನ್ನುವಂತೆ ಹುಬ್ಬು ಹಾರಿಸಿದರು. ನನ್ನ ಭಾಷಣದಲ್ಲಿ ಉದಾಹರಣೆಗೆ ಬೇಕಾದ 'ಅತ, ಆಕೆ ಮತ್ತು ಭಾಷೆ' ಪದ್ಯ ನೆನಪಿನ ಬಲದಿಂದಲೇ ಹೇಳಿದರು. ನಾನು ಬರೆದುಕೊಂಡೆ. ಸಂಜೆ ವಿ ವಿ ವಾಹನದಲ್ಲಿ ಹೊಸಪೇಟೆಗೆ ಬಿಟ್ಟರು. ನಮಗೆ ಶಿವಮೊಗ್ಗ ಬಸ್ ತಡವಾಗಿ ಬಂತು. ನಾನು ಚಡಪಡಿಸುತ್ತಿದ್ದರೆ ವೈದೇಹಿ 'ತಡಿ ಬರುತ್ತೆ' ಎಂದು ಸಮಾಧಾನಿಸುತ್ತಿದ್ದರು. ಬಸ್ ಬಂದು ಹೊರಟು ಊರು ಕಳೆದ ಮೇಲೆ ಒಳಗಿನ ದೀಪಗಳಾರಿದವು. ಕೆಲವರು ನಿದ್ರೆಗೆ ಜಾರಿದರು. ನಾನು ವೈದೇಹಿಗೆ ನನ್ನ ವಿಚಿತ್ರ ಅನುಭವ ಹೇಳಿದೆ. ನಾನು ಹೊಸಪೇಟೆಗೆ ಎರಡು ದಿನ

ಮೊದಲು ಬಂದು ತಲುಪುವಾಗ ರಾತ್ರಿ ಹತ್ತು ಗಂಟೆಯಾಗಿತ್ತು. ಇಬ್ಬರು ವಿದ್ಯಾರ್ಥಿಗಳು ನನ್ನನ್ನು ಒಂದು ಹೋಟೆಲಿಗೆ ಕರೆದುಕೊಂಡು ಹೋದರು. ಬೆಳಿಗ್ಗೆ ವಿಶ್ವವಿದ್ಯಾಲಯದ ವಾಹನ ಬಂದು ಹಂಪಿ ಗೆಸ್ಟ್‌ಹೌಸ್‌ಗೆ ಕರೆದೊಯ್ಯುವುದಾಗಿ ತಿಳಿಸಿದರು. ಅಲ್ಲಿ ಸಿಬ್ಬಂದಿ ಒಂದು ಫಾರಮ್ ಕೊಟ್ಟು ನನ್ನ ವಿವರ ಬರೆದುಕೊಡುವಂತೆ ತಿಳಿಸಿದರು. ನನ್ನ ವಿವರ, ಕೆಲಸ ಮಾಡುವ ಸ್ಥಳ, ಈಗ ಬಂದಿರುವ ಉದ್ದೇಶಗಳ ಜತೆಗೆ ನನ್ನ ದೇಹದ ಮೇಲೆ ಶಾಶ್ವತವಾಗಿರುವ ಗುರುತು ನಮೂದಿಸಿ ಎಂದಿತ್ತು. ಒಂದು ವೇಳೆ ಒಂಟಿ ಮಹಿಳೆ ಸತ್ತು ಹೋದರೆ ಗುರುತಿಸಲು ಅಂತೆ. ನಾನು ಇದನ್ನು ವೈದೇಹಿಗೆ ಹೇಳಿ ಇನ್ನಾ್ಯವತ್ತು ಹೀಗೆ ಒಬ್ಬಳೇ ಉಳಿಯುವ ಸಂದರ್ಭ ಬರಬಾರದು ಅಂದೆ. ಆಮೇಲೆ ವೈದೇಹಿ ಪ್ರಯಾಣದ ಏಕತಾನತೆ ಮುರಿಯಲು ಮೆಲ್ಲನೆ 'ಮೆಲ್ಲುಸಿರೀ ಸವಿ ಗಾನ' ಹಾಡತೊಡಗಿದರು. ಜಲಲ ಜಲಲ ಜಲಧಾರೆ ಆಯಿತು. ಬೇಂದ್ರೆ, ಕುವೆಂಪು ಎಲ್ಲ ಆಗಿ ಯಾವ ಜನ್ಮದ ಮೈತ್ರಿ ಹಾಡು ಮುಗಿಯುವಾಗ ಪ್ರಯಾಣದ ಆಯಾಸವೇ ತಿಳಿಯದಂತೆ ಶಿವಮೊಗ್ಗ ಬಂದಿತ್ತು. ಜೀವನ ಪಯಣದ ಕಷ್ಟವನ್ನು ಸಹನೀಯವಾಗಿಸಿಕೊಂಡು, ಸುಖವಾಗಿಸಿಕೊಳ್ಳುವುದು ಹೇಗೆಂಬ ಪಾಠ ನನಗೆ ದೊರಕಿತ್ತು. ಅಂದ ಹಾಗೆ ನಾವು ಪಯಣಿಸಿದ್ದು ಸಾಮಾನ್ಯ ಕೆಂಪು ಬಸ್ಸಿನಲ್ಲಿ. ಆದರೆ ಅದು ವಿಮಾನ ಪ್ರಯಾಣಕ್ಕಿಂತ ಮಿಗಿಲಾಗಿ ಸುಖವಾಗಿತ್ತು. ದಿನ ನಿತ್ಯದ ಬದುಕನ್ನು ಸಣ್ಣ ಪುಟ್ಟ ಸಂತೋಷಗಳ ಮೂಲಕ ಸಂಭ್ರಮಿಸುವ, ಸಮಾಜದ ತಾರತಮ್ಯಗಳಿಗೆ ಮರುಗುವ ಸ್ವಭಾವ ವೈದೇಹಿಯವರದು.

ಮತ್ತೊಮ್ಮೆ ಮಳೆಗಾಲದಲ್ಲಿ ತೀರ್ಥಹಳ್ಳಿಗೆ ಬಂದವರು ನಮ್ಮ ಮನೆಯಲ್ಲಿ ಉಳಿದಿದ್ದರು. ಸಂಜೆ ಭೀಮನಕಟ್ಟೆಗೆ ಹೋಗಿದ್ದೆವು. ಅಲ್ಲಿ ತುಂಗಾ ಮಾಲತಿ ನದಿಗಳ ಸಂಗಮ. ಆ ದಿನ ಭಾದ್ರಪದದ ಹುಣ್ಣಿಮೆ ಚಂದ್ರ ಮಂಕಾಗಿದ್ದ. ನದಿ ಬಂಡೆಗಳ ಮೇಲೆ ಜುಳು ಜುಳು ಹರಿಯುತ್ತಿತ್ತು.. ನಾವು ದಡದ ಪುಟ್ಟ ಶಿವದೇವಾಲಯದ ಕಟ್ಟೆಯ ಮೇಲೆ ಕುಳಿತಿದ್ದೆವು. ಎದುರಿಗೆ ಅರಳಿಮರದ ಎಲೆಗಳು ಗಾಳಿಗೆ ಮರಮರಿಸುವುದನ್ನು ಬಿಟ್ಟರೆ ದೈವಿಕ ಮೌನವೊಂದು ತಾನೇ ತಾನಾಗಿತ್ತು. ಶಾಂತಿ ನೆಲೆಸಿತ್ತು. ಗುಡಿಯೊಳಗೆ ಸಂಜೆಯ ದರ್ಶನಕ್ಕೆ ಬಂದವರು ಯಾರೊ ಟಣ್ ಎಂದು ಗಂಟೆ ಬಾರಿಸಿದರು. ಒಮ್ಮೆ ಮಾತ್ರ ನಾದ ತರಂಗವಾಗಿ ನಿಧಾನಕ್ಕೆ ಶಾಂತಿ ನೆಲೆಸಿತು ...ಅವರು ತನ್ಮಯರಾಗಿದ್ದರು ಕಣ್ಣುಗಳು ತುಂಬಿದ್ದವು.

ಮೂಡಬಿದರೆಯಲ್ಲಿ ಭಾರತೀಯ ಲೇಖಕಿಯರ ಸಾಹಿತ್ಯ ಕುರಿತ ಕಮ್ಮಟದಲ್ಲಿ ನಾನು ಅಮೃತಾ ಪ್ರೀತಮ್ ಕುರಿತು ಮಾತನಾಡಲು ಹೋದಾಗ ಸಂಜೆ ಆಳ್ವಾಸ್ ವಿರಾಸತ್‌ನಲ್ಲಿ ಪರ್ವೀನ್ ಸುಲ್ತಾನರ ಸಂಗೀತ ಒಟ್ಟಿಗೆ ಕುಳಿತು ಕೇಳಿದೆವು. ರಾತ್ರಿ ತುಂಬ ಹೊತ್ತಿನವರೆಗೂ ಸಾಹಿತ್ಯ ಚರ್ಚೆ. ಸಬೀಹಾ, ಶಶಿಕಲಾ ವೈದೇಹಿ ಇನ್ನೂ ಕೆಲವರ ಜತೆ. ಬೆಳಿಗ್ಗೆ ಕಾರ್ಕಳದವರೆಗೆ ಒಟ್ಟಿಗೇ ಬಂದೆವು. ಶಿವರಾಮ ಕಾರಂತ ಶತಮಾನೋತ್ಸವ

ಕಾರ್ಯಕ್ರಮದಲ್ಲಿ ಕಾರಂತರ ಕಾದಂಬರಿ ಕುರಿತು ಮಾತನಾಡಲು ಹೋದಾಗ ಕುಂದಾಪುರದ ಅವರ ತವರು ಮನೆ ತೋರಿಸಲು ಕರೆದೊಯ್ದರು. ತವರಿನ ಕುರಿತು ಎಷ್ಟು ಹೇಳಿದರೂ ಮುಗಿಯದು. ಅವರು ಸ್ತ್ರೀವಾದವನ್ನು ರೂಪಕಗಳಲ್ಲಿ ಹೇಳಿದವರು. ಅವರ 'ಅಡಿಗೆ ಮನೆ ಹುಡುಗಿ' ಕವಿತೆಯನ್ನೂ ಕುವೆಂಪು ಅವರ ಮನೆ ಮನೆಯ ತಪಸ್ವಿನಿಯನ್ನು ಹೋಲಿಸಿ ಬರೆದ ಲೇಖನ ನನ್ನ ವಿಭಾವ ವಿಮರ್ಶ ಸಂಕಲನದಲ್ಲಿದೆ. ಕುವೆಂಪು 'ಹೊಸಲಾಚೆಗೆ ನೀನೋತರೆ ಹೊಸಲೀಚೆಗೆ ಬೆಳಕಿಲ್ಲ' ಅಂದರೆ ವೈದೇಹಿ ಅಡಿಗೆಮನೆ ಹುಡುಗಿ, ಅವಳಿಗೆ ಹೊರ ಜಗತ್ತಿನ ಸಂಪರ್ಕವೇ ಇಲ್ಲದ, ಯಾರಾದರೂ ಬಂದು ಬಿಡುಗಡೆಗೊಳಿಸಬಾರದೆ ಎಂದು ಹಂಬಲಿಸುತ್ತಾಳೆ. ಅವರ ಕಥೆಗಳಲ್ಲಿ ಬರುವ ಸಿರಿ, ಪಾರ್ವತಿ, ಮಾಂಕಾಳಿ, ಮಂಜಿ, ಲಕ್ಷ್ಮೀದೇವಮ್ಮನಂತಹ ಪಾತ್ರಗಳು ನಾನು ನನ್ನ ಬಾಲ್ಯದಲ್ಲಿ ನೋಡಿರುವಂತವೇ. ಹಕ್ಕಿಲ್ಲದವರು ಕಥೆಯಲ್ಲಿ ಬಡವಳಾದ ವೃದ್ಧೆ ದೊಡ್ಡಮ್ಮನನ್ನು ನೋಡಲು ಹೋಗುವ ತವರಿಗೆ ಬಂದ ಶ್ರೀಮಂತ ಹೆಣ್ಣುಮಕ್ಕಳು ತಾವು ಹೋಗುತ್ತಿರುವುದು ಎಲ್ಲಿಗೆಂದೆ ಅರಿಯದವರಂತೆ ತಮ್ಮ ಹಣದ ಪ್ರದರ್ಶನವೆಂಬಂತೆ ಅಲಂಕರಿಸಿಕೊಂಡು ನಾಲ್ಕಾರು ಕಾರುಗಳಲ್ಲಿ ಹೋಗುವುದು ಅಲ್ಲಿ ಆ ಬಡ ಬಂಧುಗಳ ಪ್ರೀತಿಯ ಸತ್ಕಾರವನ್ನು ಕಡೆಗಣಿಸಿ ನೋಡುವುದು, ಮೊದಲ ಸಲ ಓದಿದಾಗ ನನ್ನೊಳಗನ್ನು ಅಲ್ಲಾಡಿಸಿದ ಕಥೆ, ಈಗಲೂ ಕಾಡುವ ಕಥೆ. ಅಲ್ಲಲ್ಲಿನ ಲೋಕದವರು, ಭೂತ, ಅಮ್ಮಚ್ಚಿಯೆಂಬ ನೆನಪು ತುಂಬ ಇಷ್ಟವಾದ ಕಥೆಗಳು. ತಾರ್ಕಿಕತೆಯನ್ನು ಹೊರತುಪಡಿಸಿದ ಸಹಜ ಭಾವಾಭಿವ್ಯಕ್ತಿಯಲ್ಲಿಯೇ ಬದುಕಿನ ಗಹನ ವಿನ್ಯಾಸವನ್ನು ಚಿತ್ರಿಸುವ ವೈದೇಹಿಯವರ ಶೈಲಿ ನನಗೆ ಇಷ್ಟ. ಒಂದು ಬಗೆಯ ಸಾಂತ್ವನದ ಗುಣ ವೈದೇಹಿಯವರ ಕಥೆಗಳಿಗಿದೆ. ಇದು ಕಾವ್ಯ ಮೀಮಾಂಸೆಯ 'ಶೋಧನೆ'ಯ ಹಾದು. ಅವರ ಕಥೆಗಳು ಬೌದ್ಧಿಕತೆಯ ಭಾರದಿಂದ ಬಳಲುವುದಿಲ್ಲ. ಅವರ ಕಥಾಪಾತ್ರಗಳಲ್ಲಿ 'ಪುರುಷೋತ್ತಮ' ಎಲ್ಲೂ ಕಾಣಿಸದಿರುವುದೂ ಗಮನಿಸಬೇಕಾದ ಅಂಶ. ಬಹಳ ಬೇಗ ನೋವಿಗೆ ಮಿಡಿಯುವ ಆರ್ದ್ರ ಹೃದಯದ ವೈದೇಹಿಯವರ ಕ್ರಿಯಾಶೀಲತೆಗೆ ಇದೂ ಒಂದು ಕಾರಣ. ಬದುಕಿನ ಸಣ್ಣಪುಟ್ಟ ಸಂಗತಿಗಳನ್ನೂ ಸಂಭ್ರಮಿಸುವ ಅವರ ಗುಣ ಜೀವನವನ್ನು ಸುಂದರವಾಗಿಸಿದೆ, ಸಹ್ಯವಾಗಿಸಿದೆ.

ನಾಲ್ಕು ವರ್ಷಗಳ ಹಿಂದೆ ನಮ್ಮ ಕಾಲೇಜ್‌ನಲ್ಲಿ ನೀನಾಸಮ್ ಸಾಹಿತ್ಯ ಅಧ್ಯಯನ ಶಿಬಿರ ನಡೆದಾಗ, ಹೆಗ್ಗೋಡಿನ ವಿದ್ಯಾ, ವೈದೇಹಿಯವರ ಕಥೆ 'ಗೂಡಿನೊಳಗೆ ಒಂದು ಹಕ್ಕಿ'ಯ ನಾಟಕ ರೂಪವನ್ನು ಪ್ರಸ್ತುತ ಪಡಿಸಿದರು. ಅದನ್ನು ನೋಡಲು ವೈದೇಹಿ ಪತಿ ಶ್ರೀನಿವಾಸಮೂರ್ತಿಯವರೊಡನೆ ಬಂದಿದ್ದರು. ಅವರಿಗೆ ಆಗತಾನೆ ಕೇಂದ್ರ ಸಾಹಿತ್ಯ ಅಕ್ಯಾಡೆಮಿ ಬಹುಮಾನ ಬಂದಿತ್ತು. ಕಾಲೇಜಿನ ವತಿಯಿಂದ ಅವರನ್ನು ಅಭಿನಂದಿಸಿ ಸನ್ಮಾನಿಸಿದೆವು. ಅಡಿಗೆ ಮನೆ ಕುರಿತು ಕವಿತೆ ಬರೆದರೂ ದೈನಿಕಗಳ ಜಗತ್ತನ್ನು ಅವರು

ಪ್ರೀತಿಸುತ್ತಿದ್ದರು. ಎಂ ಜಿ ಎಂ ಕಾಲೇಜ್‌ನಲ್ಲಿ ಕುವೆಂಪು ಶತಮಾನೋತ್ಸವ ನಡೆದಾಗ ಜಿ ಎಸ್ ಶಿವರುದ್ರಪ್ಪ ಬಂದಿದ್ದರು. ಅವರೊಡನೆ ಇನ್ನೂ ಕೆಲವರನ್ನು ವೈದೇಹಿ ಬೆಳಗಿನ ಉಪಾಹಾರಕ್ಕೆ ಆಹ್ವಾನಿಸಿದ್ದರು. ನನ್ನದೂ ಅವತ್ತು ಭಾಷಣ ಇದ್ದಿದ್ದರಿಂದ ನನಗೂ ಬರುವಂತೆ ತಿಳಿಸಿದ್ದರು. ದಕ್ಷಿಣ ಕನ್ನಡದ ನೀರು ದೋಸೆಯ ಜತೆ ಹಲವಾರು ಬಗೆಯ ತಿಂಡಿಗಳು.. ಸಂತೋಷದಿಂದ ಅತಿಥಿಗಳನ್ನು ಉಪಚರಿಸುವ ವೈದೇಹಿ.. ಅವರನ್ನು ಹಚ್ಚಿಕೊಂಡವರಿಗೆ, ಅವರ ಓದುಗರಿಗೆ ಅವರ ಮನೆ ಮುಕ್ತವಾಗಿರುತ್ತಿತ್ತು.

ನನ್ನ ಸುಡಲು ಹೆಚ್ಚು ಕಟ್ಟಿಗೆ ಬೇಡ ಎಂದು ತಮ್ಮ ಕೃಶಕಾಯವನ್ನು ತಾವೇ ತಮಾಷೆ ಮಾಡಿಕೊಳ್ಳುವ ಹಾಸ್ಯ ಮನೋಭಾವವೂ ಅವರಿಗೆ ಇದೆ. ಅವರಿಗೆ ಶುಭಾಶಯಗಳು.



# ವೈದೇಹಿ: ಶುದ್ಧ ಸ್ನೇಹದ ಬತ್ತದ ಒರತೆ

✦ ಗಂಗಾ ಪಾದೇಕಲ್

1985 ರ ಮಾರ್ಚ್‌ನಲ್ಲಿ ಬೆಂಗಳೂರಿನ ಕರ್ನಾಟಕ ಲೇಖಕಿಯರ ಸಂಘ ಬರಹಗಾರ್ತಿಯರಿಗಾಗಿ ರಾಜ್ಯಮಟ್ಟದ ಎರಡುದಿನಗಳ ಸಮ್ಮೇಳನವನ್ನು ಆಯೋಜಿಸಿತ್ತು. ನಾನು ಮೊದಲ ಸಲ ವೈದೇಹಿ ಮತ್ತು ಡಾ. ಅನುಪಮಾ ನಿರಂಜನರನ್ನು ನೋಡಿದ್ದು ಅಲ್ಲಿಯೇ. ಅಷ್ಟು ದೊಡ್ಡ ಸಮಾವೇಶದಲ್ಲಿ ಭಾಗವಹಿಸುತ್ತಿದ್ದ ನನ್ನ ಖುಷಿ, ಬೆರಗುಗಳ ಹಿನ್ನೆಲೆಯಲ್ಲಿದ್ದುದು ಅನುಪಮಾ. ಅಪರೂಪದ ಗುಣಗ್ರಾಹಿ, ಹೃದಯವಂತೆ ಅನುಪಮಾ ಬಗ್ಗೆ ಬರೆದಷ್ಟೂ ಕಡಿಮೆಯೇ. ಆದರೆ ಈ ಬರಹ ವೈದೇಹಿ ಹಾಗೂ ನನ್ನ ಸ್ನೇಹದ ಕುರಿತು. ಅಲ್ಲದೆ ಆ ಬಗ್ಗೆ ನಾನೀಗಾಗಲೇ ಬರೆದಿದ್ದೇನೆ. ಇರಲಿ. ಬೆಂಗಳೂರಿನಿಂದ ದ.ಕ.ಜಿಲ್ಲೆಯ ಪುತ್ತೂರಿನ ನನ್ನ ಪುಟ್ಟ ಬಾಡಿಗೆ ಮನೆಗೆ ಮರಳಿದ್ದ ನಾನು ಖುಷಿಯಾಗಿದ್ದೆ. ಕಾರಣ, ಆ ಸಮ್ಮೇಳನದಲ್ಲಿ ನಾ ನೋಡಿದ್ದ, ಆದರೆ ನೋಡಿರದ ಎಷ್ಟೋ ಲೇಖಕಿಯರ ಪರಿಚಯವಾಗಿತ್ತಲ್ಲ? ಹಾಗೆ ಆ ಲಹರಿಯಲ್ಲಿದ್ದಾಗಲೇ ಬಂದಿದ್ದು ವೈದೇಹಿಯ ಕಾಗದ. ಸಾರಾಂಶವೆಂದರೆ 'ನನ್ನಲ್ಲಿಗೆ ಸದ್ಯವೆ ಬರಲಿರುವ ಆಕೆಗೆ ನನ್ನ ಮನೆಯ ವಿಳಾಸ, ದಾರಿ ಇತ್ಯಾದಿ ಮಾಹಿತಿಯನ್ನು ಆದಷ್ಟೂ ಬೇಗ ತಿಳಿಸಬೇಕು'. ಅಂದ ಹಾಗೆ ಆ ಪತ್ರ ಬಂದಿದ್ದುದು ಆವಾಗ ನಾನು ಕೆಲಸ ಮಾಡುತ್ತಿದ್ದ ಪುಸ್ತಕ ಭಂಡಾರಕ್ಕೆ. ಆ ಸಂಗತಿ ನನಗೆ ಕೊಟ್ಟ ಸಂತೋಷವನ್ನು ವರ್ಣಿಸಲು ನನ್ನಲ್ಲಿ ಪದಗಳೇ ಇರಲಿಲ್ಲ. ಕಾರಣ ಆ ವೇಳೆಗಾಗಲೇ ವೈದೇಹಿಯ ಬರಹಗಳಿಂದ ನಾನು ತುಂಬಾ ಪ್ರಭಾವಿತಳಾಗಿದ್ದೆ. ಅಂತಹ ಲೇಖಕಿ, ಅದೂ ಉಡುಪಿಯಿಂದ ಕೇವಲ ನನಗಾಗಿಯೇ ಬರುತ್ತಿದ್ದಾರೆ ಎಂದರೆ? ಆ ಕ್ಷಣಗಳಲ್ಲಿ ನಾನು ಅನುಪಮಾಗೆ ಪತ್ರ ಬರೆವ ತಯಾರಿಯಲ್ಲಿದ್ದೆ. ಬೆಂಗಳೂರಿನಲ್ಲಿ ಹೊಸ ಅನುಭವಗಳು ನನಗೆ ದಕ್ಕಲು ಕಾರಣರಾಗಿದ್ದ ಆ ಹಿರಿಯ ಚೇತನಕ್ಕೆ ಕೃತಜ್ಞತೆ ಸಲ್ಲಿಸಬೇಕಾಗಿದ್ದುದು ನನ್ನ ಆದ್ಯ ಕರ್ತವ್ಯವಾಗಿತ್ತು. ಅಂತಿದ್ದಾಗ ಬಂದಿತ್ತು ವೈದೇಹಿ ಪತ್ರ. ಸರಿ, ನನ್ನ ಉತ್ಸಾಹಕ್ಕೆ ತಲೆ ಬಾಗುತ್ತಲೇ ಎರಡು ಪತ್ರಗಳನ್ನು ಬರೆಯಲು ತಕ್ಷಣವೆ ಕೂತಿದ್ದೆ.

ಆ ದಿನಗಳು ನನಗೆ ಕಠಿಣವಾಗಿದ್ದವು. ನಮ್ಮದು ಕೃಷಿಕ ಕುಟುಂಬ. ನನ್ನ ಬಾಳ ಸಖ ಮಧ್ಯದಲ್ಲಿಯೆ ಶಾಶ್ವತವಾಗಿ ನಮ್ಮನ್ನೆಲ್ಲ ಅಗಲಿದ್ದಾಗ ನನಗುಳಿದಿದ್ದುದು ಇಬ್ಬರು ಎಳೆಯ ಹೆಣ್ಣುಮಕ್ಕಳು, ಹಾಳು ಬಿದ್ದ ಅಡಿಕೆ ತೋಟ, ಮತ್ತು ನನ್ನ ಸಾಹಿತ್ಯ ಸೇವೆ. ಆ ವೇಳೆಗಾಗಲೇ ನನ್ನೆರಡು ಪುಸ್ತಕಗಳು ಹೊರಗೆ ಬಂದಿದ್ದವು. ಆಗಾಗ್ಗೆ ಪತ್ರಿಕೆಗಳಲ್ಲಿ ಬರುತ್ತಿದ್ದ ಸಣ್ಣಕಥೆಗಳಿಂದಾಗಿ ಅಲ್ಪಸ್ವಲ್ಪ ಹೆಸರು ಕೂಡ. ಹಾಗೆಂದೆ ಸಾಕೂ ಸಾಲದಿದ್ದ ತೋಟದ ಆಸರೆಗೆ ವಿದಾಯ ಹೇಳಿ, ಬರಹಲೋಕದಲ್ಲಿ ಬದುಕು ಕಟ್ಟಿಕೊಳ್ಳಲು ಹೊರಟಿದ್ದಾಕೆ ನಾನು. ಅದರ ಫಲಶ್ರುತಿಯೇ ಪುತ್ತೂರಿನ ವಾಸ, ಬರಹದ ಜತೆ ಜತೆಯಲ್ಲೇ ಪುಸ್ತಕ ಭಂಡಾರದ ಕೆಲಸ. ಆದರೆ ಸಾಹಿತ್ಯಲೋಕದೊಳಗೂ ಇದ್ದ ಏರುತಗ್ಗುಗಳ ಪರಿಚಯವಿದ್ದುದರಿಂದ ಹೊಸಲೋಕವೊಂದರ ದರ್ಶನವಾಗಿ ಕಂಗಾಲಾಗಿದ್ದೆ. ಅದು ಹಾಗೆಯೆ ಮುಂದುವರೆದಿದ್ದರೆ ನಾನೇನಾಗುತ್ತಿದ್ದೆನೋ? ನನ್ನ ಸುದೈವದಿಂದ ಹಾಗೇನೂ ಆಗಲಿಲ್ಲ. ಸಾಹಿತ್ಯ ಲೋಕದ ಮೇರುಶಿಖರಗಳಲ್ಲಿ ಒಂದಾಗಿದ್ದ ಡಾ.ಅನುಪಮಾ ನಿರಂಜನರು ಸಕಾಲದಲ್ಲಿ ನನ್ನನ್ನು ಗುರ್ತಿಸಿ ಅವರ ಸ್ನೇಹ ಹಸ್ತವನ್ನು ನೀಡಿದ್ದರು. ಮತ್ತು ಆ ವೇಳೆಗಾಗಲೇ ವೈದೇಹಿ ಅನುಪಮಾರ ಬಳಗದಲ್ಲಿ ಒಬ್ಬರಾಗಿಬಿಟ್ಟಿದ್ದರು.

ಮುಂದೆ ನಿಗದಿತ ದಿನದಂದು ವೈದೇಹಿ ಬಂದರು. ಬಂದೊಡನೆ ಕೇಳಿದ ಪ್ರಶ್ನೆ ನನಗಿನ್ನೂ ನೆನಪಿದೆ. 'ಗಂಗಾ, ಯಾಕೆ ಹಣೆಗಿಟ್ಟಿಲ್ಲ ನೀವು?' 'ಓ, ಅದೇ?' ನಗುತ್ತ ಉತ್ತರಿಸಿದ್ದೆ. 'ಮನೆಯಲ್ಲಿದ್ದಾಗ ಇಡುತ್ತೇನೆಂದು ನಿಶ್ಚಯವೇನೂ ಇಲ್ಲ. ಆದರೆ ಹೊರಗೆ ಹೋಗುವಾಗ ಬೊಟ್ಟು ಹಾಕದೇ ಇರುವುದಿಲ್ಲ'. ವಿಧವೆಯರು ಹಣೆಗಿಡುವಂತಿಲ್ಲ ಎಂಬ ಸಾಮಾಜಿಕ ನಿಷೇಧದ ಹಿನ್ನೆಲೆಯಲ್ಲಿ ಅವರಿಗೆ ನನ್ನ ನಿಲುವಿನ ಅರ್ಥವಾಗಿದ್ದೀತು. ಮುಗುಳ್ನಕ್ಕು ಬೇರೆ ವಿಚಾರಗಳತ್ತ ಹೊರಳಿದ್ದರು.

ವೈದೇಹಿಯದು ಪುಟ್ಟ ಆಕೃತಿ. ಆ ಶರೀರಕ್ಕೆ ತಕ್ಕಂತೆ ಮೆಲುಮಾತಿನ ಶಾರೀರ. ನಕ್ಕರೆ ಇಡೀ ಮೋರೆ ಅರಳಿ, ಕಣ್ಣುಗಳಲ್ಲಿ ಆತ್ಮೀಯತೆಯ ಸೆಳೆಮಿಂಚು. ವೈದೇಹಿ ಬರೀ ಸ್ನೇಹಿತೆಯಾಗಿ ಮಾತ್ರ ಆಗಮಿಸಿದ್ದಾಗಿರಲಿಲ್ಲ. ನನ್ನ ಕಷ್ಟಸುಖಗಳಿಗೆ ಕಿವಿಯಾಗುವ, ಜತೆಗೆ ಅವರಿಂದಾಗುವ ಸಹಾಯವನ್ನು ನನಗೆ ಮಾಡಬೇಕೆನ್ನುವ ಒಳ್ಳೆಯ ಅಭಿಲಾಷೆಯುಳ್ಳ ಹಿತೈಷಿಯಾಗಿಯೂ ಬಂದಿದ್ದರು. ಇಲ್ಲಿ ಒಂದು ಮಾತು. ಸುಮಾರು ಅದೇ ದಿನಗಳಲ್ಲಿ ಶಿವಮೊಗ್ಗದಿಂದ ಉಡುಪಿಗೆ ಬಂದು ನೆಲೆಯಾಗಿದ್ದವರು ವೈದೇಹಿ. ಹೊಸಬದುಕಿನ ತವಕ, ತಲ್ಲಣಗಳಂತೇ ಖುಷಿ, ನೆಮ್ಮದಿಗಳನ್ನೂ ಅನುಭವಿಸುತ್ತಿದ್ದ ದಿನಗಳವು. ನಮ್ಮಲ್ಲಿ ಒಂದು ಭಾವನೆ ಮಾಮೂಲೆನ್ನಿಸಿದೆ. 'ನಮ್ಮದೇ ನಮಗೆ ಹಾಸಲುಂಟು, ಹೊದೆಯಲುಂಟು ವೃಥಾ ಇನ್ನೊಬ್ಬರ ವಿಚಾರವೇಕೆ?' ಎನ್ನುವ ಆ ಭಾವ ವೈದೇಹಿಗೂ ಇರಬಹುದಿತ್ತು ಮತ್ತು ಹಾಗೆ ಇದ್ದರೆ ಅದು ತಪ್ಪು ಎನಿಸಿಕೊಳ್ಳುತ್ತಲೂ ಇರಲಿಲ್ಲ. ಕಾರಣ, ಲೋಕ

ಇರುವುದೇ ಹಾಗಲ್ಲವೇ? ಆದರೆ ವೈದೇಹಿ ಸರ್ವೇ ಸಾಮಾನ್ಯವಾಗಿರುವ ಆ ನಿಲುವಿಗೆ ಅಪವಾದವಾಗಿದ್ದರು. ಆ ಹೃದಯ ಸಂಪನ್ನತೆ ನೆನೆದಾಗೆಲ್ಲ ಇಂದಿಗೂ ಮನಸು ಒದ್ದೊದ್ದೆ. ಆ ದಿನ ನಾವಿಬ್ಬರೂ ಎಷ್ಟೋ ಸಂಗತಿಗಳನ್ನು ಹಂಚಿಕೊಂಡಿದ್ದೆವು. ಸಂಜೆ ಆಕೆ ಮರಳಿ ಹೊರಟಿದ್ದಾಗ ಸೋದರಿಯೊಬ್ಬಳನ್ನು ಪಡೆದಿದ್ದ ಸುಖ, ಆಗಲೇ ಬೀಳ್ಕೊಡಬೇಕಿದ್ದ ದುಃಖ ಎರಡೂ ಸೇರಿ ನನ್ನೆದೆ ಮಿಶ್ರಭಾವಗಳ ಗೂಡಾಗಿತ್ತು.

1985ರಲ್ಲಿ ಆರಂಭಿಸಿದ್ದ ನಮ್ಮಿಬ್ಬರ ಸ್ನೇಹಕ್ಕೀಗ 33 ರ ಹರಯ. ನಮ್ಮನ್ನು ಬೆಸೆದ ಕೊಂಡಿ, ಅನುಪಮಾ 85 ರ ಮೇಲೆ ಬದುಕಿದ್ದುದು ಆರೇ ವರ್ಷ. ಆ ದಿನಗಳಲ್ಲಿ ನಾವು ಮೂವರ ಆತ್ಮೀಯ ಬಂಧ ಹೇಗಿತ್ತೆಂದರೆ, ಮಧ್ಯೆ ಮಧ್ಯೆ ಅನುಪಮಾರ ಕ್ಯಾನ್ಸರ್ ಮರುಕಳಿಕೆಯ ಆತಂಕದ ಘಳಿಗೆಗಳನ್ನು ಬಿಟ್ಟರೆ, ಉಳಿದೆಲ್ಲ ದಿನಗಳೂ ಸರಿದದ್ದೇ ತಿಳಿಯಲಿಲ್ಲ. ಆ ದಿನಗಳಲ್ಲಿ ಪುತ್ತೂರು ಕರ್ನಾಟಕ ಸಂಘದಿಂದ ನಡೆದಿದ್ದ ನಿರಂಜನ ಸಾಹಿತ್ಯ ವಿಚಾರ ಸಂಕಿರಣ (85) ನಿರಂಜನ ಅಭಿನಂದನ (86), ಇಡೀ ದಿನದ ಮಹಿಳಾ ಗೋಷ್ಠಿ (87) ಇವಲ್ಲದೆ ಇನ್ನೂ ಎಷ್ಟೋ ಕನ್ನಡ ಕಾರ್ಯಕ್ರಮಗಳು. ಬರೆಯಲು ಹೊರಟರೆ ಒಂದೇ ಎರಡೇ? ಆದರೂ ಎರಡು ನೆನಪುಗಳ ಬಗ್ಗೆ ಬರೆಯದಿರಲಾರೆ. ಒಂದು, ನಿರಂಜನ ಅಭಿನಂದನದಂದು ಮಧ್ಯಾಹ್ನ ನಾವು ಮೂವರೂ ಕಲೆತು, ನನ್ನ ಬಾಡಿಗೆ ಮನೆಯಲ್ಲಿ ಧಾರಾಳವಾಗಿ ಹರಟುತ್ತ, ಸಂಭ್ರಮಿಸುತ್ತ ಊಟ ಮಾಡಿದ್ದು. ಇನ್ನೊಂದು ಇಡೀ ದಿನದ ಮಹಿಳಾಗೋಷ್ಠಿ. ನನ್ನ ವಿನಂತಿ ಮೇರೆಗೆ ವೈದೇಹಿ ಕವಿಗೋಷ್ಠಿ ಅಧ್ಯಕ್ಷತೆ ವಹಿಸಿ ಒಳ್ಳೆಯ ಕವನ ಓದಿದ್ದು ಮತ್ತು ಇಂದು ಧಾರಾಳವಾಗಿ ಹೆಸರು ಮಾಡಿರುವ ಕಥಾವಳಿ ಲೇಖಕಿಯರ ವಾಚಕಿಯರ ಸಂಘಕ್ಕೆ ಆ ದಿನ ಬೀಜಾರೋಹಣ ವಾಗಿದ್ದು ಹಾಗೇ ನೆನಪಿನಂಗಳದಲ್ಲಿ ಭದ್ರವಾಗಿರುವುದು. ಆ ಕಾಲದಲ್ಲಿ ನಮ್ಮೊಳಗೆ ಅಹರ್ನಿಶಿ ನಡೆಯುತ್ತಿದ್ದ ಪತ್ರವ್ಯವಹಾರ. ಸಂತಸ, ಸಂಕಟ, ಸಾಹಿತ್ಯ ವಿಮರ್ಶೆ, ಸಮಸ್ಯೆ, ಪರಿಹಾರ, ನಿರ್ಧಾರ ಇತ್ಯಾದಿತ್ಯಾದಿಗಳಿಂದ ತುಂಬಿರುತ್ತಿದ್ದ, ಮುಖ್ಯವಾಗಿ ಪರಸ್ಪರ ಯಾವುದೇ ವಂಚನೆ, ಗುಟ್ಟುಗಳೂ ಇಲ್ಲದ ಪಾರದರ್ಶಕ ಬರಹಗಳವು. ಅದರಿಂದಾಗಿಯೆ 88 ರಲ್ಲಿ ನನ್ನ 3, 2 ನೇ ಕಥಾಸಂಕಲನ ಅಕ್ಷರ ಪ್ರಕಾಶನದಿಂದ ಹೊರಗೆ ಬಂದುದು. ಅದರ ಹಿನ್ನೆಲೆಯಲ್ಲಿದ್ದವರು ಪ್ರಿಯ ಸ್ನೇಹಿತೆ ವೈದೇಹಿ. ಇದು ನೆನಪುಗಳ ಕೋಶದೊಳಗಿನ ಒಂದು ಬಿಂದು ಮಾತ್ರ. ಅದರೊಳಗೆ ಇಂಥಹ ಅನೇಕಾನೇಕ ಸಿಹಿ ಸ್ಮರಣೆಗಳಿವೆ. ಆದರೆ ಅನಾರೋಗ್ಯ (ಬಲ ಹೆಗಲು, ಬಲದ ಇಡೀ ಕೈ ತೀವ್ರ ಸಿಡಿತ) ನನ್ನನ್ನು ಕಂಗೆಡಿಸಿದೆ. ಏನೇ ಇದ್ದರೂ ನೆನಪುಗಳಿಂದ ಖಂಡಿತ ಸಾವಿಲ್ಲ. ಹಾಗೆಂದೆ, ಮತ್ತೆ ಬರೆವ ನಿರೀಕ್ಷೆ, ಜತೆಗೆ ಈ ಬರಹವನ್ನು ಸಶೇಷವಾಗಿ ಈಗಂತೂ ಕೊನೆಗೊಳಿಸುತ್ತಿದ್ದೇನೆ.

1991 ರಲ್ಲಿ ಅನುಪಮಾ ಜಗತ್ತಿಗೆ ಶಾಶ್ವತ ವಿದಾಯ ಹೇಳಿದ್ದಾಗ ನಾವು ಪಟ್ಟಿದ್ದ ಸಂಕಟಕ್ಕೆ ಅಳತೆಗೋಲೇ ಇರಲಿಲ್ಲ. ಆದರೂ ಕಾಲ ಎಲ್ಲವನ್ನೂ ಮರೆಸುತ್ತದಂತೆ. ಹಾಗೆ ನಾವು ಕೂಡ ನಮ್ಮ ಹಿರಿಯ ಗೆಳತಿ, ಹಿತೈಷಿ, ಮಾರ್ಗದರ್ಶಕಿ ಎಲ್ಲವೂ ಆಗಿದ್ದ ಆ ದಿವ್ಯ ಚೇತನದ ನೆನಪಿನ ಬೆಳಕಿನಲ್ಲಿ ನಮ್ಮ ಸ್ನೇಹವನ್ನು ಬೆಳೆ. ಬೆಳೆಸುತ್ತಲೇ ಬಂದಿದ್ದೇವೆ. ಈಗ ಇಬ್ಬರಿಗೂ ವಯಸ್ಸಾಗಿದೆ. ನೆನೆಸಿದ್ದನ್ನು ಆ ಕ್ಷಣಕ್ಕೇ ಮಾಡಲಾಗುತ್ತಿಲ್ಲ. ಅಪರೂಪಕ್ಕೊಮ್ಮೆ ಭೇಟಿ. ಆಗೀಗ ಒಂದು ಫೋನು ಕರೆ. ಅಷ್ಟರಲ್ಲಿಯೇ ಇಬ್ಬರೂ ತೃಪ್ತರು. ಸದ್ಯವೆ ನಡೆಯಲಿರುವ ವೈದೇಹಿ ಅಭಿನಂದನೆ ಗ್ರಂಥಕ್ಕಾಗಿ ನನ್ನಿಂದಲೂ ಎರಡು ಮಾತನ್ನಪೇಕ್ಷಿಸಿ ಬರೆಯಿಸಿದ ಸೋದರಿ ಸವಿತಾ ನಾಗಭೂಷಣರಿಗೆ ಕೃತಜ್ಞತೆಗಳೊಂದಿಗೆ, ಸಮಾರಂಭ ಚಂದವಾಗಿ ನಡೆಯಲೆಂದು ಹಾರೈಸುತ್ತ ವಿರಮಿಸುತ್ತಿದ್ದೇನೆ.



# ಏಳು ಮಲ್ಲಿಗೆ ಹೂವಿನ ತೂಕದ ರಾಜಕುಮಾರಿ

✦ ಉಮಾರಾವ್

ನಾನು ಮೊದಲ ಬಾರಿ ವೈದೇಹಿಯವರ ಕತೆ ಓದಿದ್ದು ಮುಂಬೈನಲ್ಲಿದ್ದಾಗ. ಒಂದು ದೀಪಾವಳಿ ವಿಶೇಷಾಂಕದಲ್ಲಿ ಎಂದು ನೆನಪು. ಹೆಸರು ನೆನಪಿಲ್ಲ. ಅವರ ಆ ಒಂದು ಕತೆ ಅದರ ಭಿನ್ನತೆಯಿಂದ ನನ್ನನ್ನು ಅಚ್ಚರಿಗೊಳಿಸಿತ್ತು. ಅದರ ವಸ್ತು, ಭಾಷೆ, ಶೈಲಿ, ತೀಕ್ಷ್ಣತೆ, ಆಳ ಮತ್ತು ಸಂವೇದನೆಗಳ ಸೂಕ್ಷ್ಮತೆ ಎಲ್ಲವೂ ಬೇರೆಯೇ ಇದ್ದು ಮನಸ್ಸಿಗೆ ಖುಶಿ ಕೊಟ್ಟಿತ್ತು. ಅಂದಿನಿಂದ ನಾನು ಅವರ ಕತೆಗಳಿಗಾಗಿ ಕಾದು ಕೈಗೆ ಸಿಕ್ಕಿದವನ್ನೆಲ್ಲಾ ಓದುತ್ತಿದ್ದೆ.

ಕುಂದಾಪುರದಂಥಾ ಸಣ್ಣ ಊರಿನಲ್ಲೇ ಇಡೀ ವಿಶ್ವ ಕಂಡ ಪ್ರತಿಭಾವಂತೆ ವೈದೇಹಿ. ಮನದಾಳದಲ್ಲಿ ಬೇರುಬಿಟ್ಟ ಪಾತ್ರಗಳನ್ನು ಹೆಕ್ಕಿ ತೆಗೆದು ಜೀವತುಂಬಿ ನಮ್ಮೆದುರು ನಿಲ್ಲಿಸಿ ನಮಗೆ ತಲ್ಲಣ ಉಂಟುಮಾಡಿ ಕಣ್ತುಂಬುವಂತೆ ಮಾಡುವ ಸಾಮರ್ಥ್ಯ ಉಳ್ಳವರು. ಆದರೆ ದಕ್ಷಿಣ ಕನ್ನಡದ ಮಣ್ಣಿನ ಗಂಧ ಒಸರುವ ಅಲ್ಲಿನ ನೋವು ನಲಿವುಗಳ ಕತೆಗಳಿಗೇ ಎಂದೂ ತಮ್ಮ ಸಾಮರ್ಥ್ಯವನ್ನು ಸೀಮಿತಗೊಳ್ಳಿಸಿಕೊಂಡವರಲ್ಲ ವೈದೇಹಿ. ಅವರ ಲೇಖನಿಯಿಂದಲೇ ಹರಿದದ್ದು 'ಕ್ರೌಂಚ ಪಕ್ಷಿ' ಗಳಂತಹ ದೇಶವಿಭಜನೆಯ ದುರಂತವನ್ನು ತಿರುಳಾಗಿ ಹೊಂದಿದ ಕತೆ. ಅದನ್ನು ಯಾರೂ ಮರೆಯಲಾರರು. ಹಾಗೆ ಎಷ್ಟೊಂದು ಕವಿತೆಗಳು, ಲೇಖನಗಳು, ನಾಟಕಗಳು, ಜೀವನಚರಿತ್ರೆಗಳು ಅವರ ಲೇಖನಿಯಿಂದ ಹೊರಬಂದಿವೆ. ಆ ಪರಿಸರದಲ್ಲಿ ಸ್ವೀಕೃತವೇ ಆಗಿದ್ದ ಸ್ತ್ರೀಯರ ಮೇಲಿನ ಅತೀವ ಕ್ರೌರ್ಯಕ್ಕೆ ತುತ್ತಾಗುವ 'ಅಕ್ಕು'ವಿನಂಥ ಮನಕಲಕುವ ಪಾತ್ರವನ್ನು ನಮ್ಮೆದುರಿಗೆ ತಂದು ನಿಲ್ಲಿಸುವ ವೈದೇಹಿ ಅವರಲ್ಲಿ ಮಕ್ಕಳ ನಾಟಕಗಳನ್ನು ಬರೆಯುವ ಕೋಮಲ ಮನೋಭೂಮಿಕೆಯೂ ಇತ್ತು ಎನ್ನುವುದು ಒಂದು ಅಚ್ಚರಿ.

ಇನ್ನು ರಂಗ ದಿಗ್ಗಜ ಬಿ.ವಿ. ಕಾರಂತರ ಸಂಕೀರ್ಣ ಅನುಭವ ಕಥನ 'ಇಲ್ಲಿರಲಾರೆ, ಅಲ್ಲಿಗೆ ಹೋಗಲಾರೆ...'ಯನ್ನು ಪುಸ್ತಕ ರೂಪಕ್ಕೆ ತಂದದ್ದು ಚಿಕ್ಕ ಸಾಧನೆಯೇನಲ್ಲ.

'ಮನುಷ್ಯ ಮನುಷ್ಯನಾಗಿರೋದು ಸಾಮಾನ್ಯ ಸ್ಥಿತಿಯಲ್ಲಿ ಮಾತ್ರ, ಸಿದ್ಧಾಂತ, ತತ್ತ್ವ, ರೀತಿ ನೀತಿಗಳ ಬುಡ ತುಸುವೇ ಅಲ್ಲಾಡಿದರೂ ಮೊದಲು ಬಲಿಯಾಗೋದು ಮಹಿಳೆ. ಅವಳ ದೇಹ, ಅವಳ ಮನಸ್ಸು, ಅವಳ ಬದುಕು' ಎಂದು ಹೇಳುವ ವೈದೇಹಿಯವರ ನಿಲುವು ಅವರ ಇಡೀ ಬರವಣಿಗೆಯಲ್ಲಿ ಅವರು ತಾಳಿರುವ ಸ್ತ್ರೀಪರ ದಿಟ್ಟ ನಿಲುವು...

'ಪುರುಷರ ಬಗ್ಗೆ ಯೋಚಿಸುವಾಗ ಎಷ್ಟೋ ಸಲ ಮರುಕವುಂಟಾಗುತ್ತದೆ. ಬದುಕಿನ ಎಷ್ಟೋ ದಿವ್ಯ ಅನುಭವಗಳ ಮೃದು ಸ್ಪರ್ಶದಿಂದ ಇವರೆಲ್ಲಾ ವಂಚಿತರಾಗಿದ್ದಾರೆಂದು. ಅಂತಹ ಅನುಭವಗಳನ್ನು ತಮ್ಮ ಯಾವ ಪೌರುಷದಿಂದಲೂ ಕೂಡ ಎಂದೂ ಗಳಿಸಲಾಗುವುದಿಲ್ಲ.' ಎಂದು 'ನಮ್ಮ ಲೋಕದ ಗೀತೆ'ಯಲ್ಲಿ ಹೇಳುವ ವೈದೇಹಿ ಅವರು ತಮ್ಮ ಕತೆಗಳಲ್ಲೂ ಎಷ್ಟೊ ಸಲ ಇದೇ ಒಳನೋಟವನ್ನು ಗಟ್ಟಿಗೊಳಿಸುತ್ತಾ ಹೋಗುತ್ತಾರೆ.

ಇನ್ನು ಅವರು ಕತೆ ಪ್ರಾರಂಭಿಸುವ ಹೊಸತನ ನೋಡಿ. 'ಹೇಳಲು ಹೋದರೆ ಪುಟಪುಟವಾಗಿ ಎಷ್ಟೂ ಹೇಳಬಹುದು. ಆದರೆ ಅಮ್ಮಚ್ಚಿಯನ್ನು ಹಾಗೆ ವಿವರವಿವರವಾಗಿ ನೆನೆಯುತ್ತ ಹೋದಷ್ಟೂ ಆಯಾಸಗೊಳ್ಳುತ್ತೇನೆ. ಇಂತಹ ಆಯಾಸ ಏನೆಂದು ತಿಳಿದವರಿಗೆ ನಾನು ಹೆಚ್ಚು ವಿವರಿಸಬೇಕಾದ್ದೇ ಇಲ್ಲ ಅಲ್ಲವೆ? ಕೆಲವರನ್ನು ನೆನೆವಾಗ ಮನಸ್ಸು ದಣಿಯುವ ರೀತಿಯೇ ಅಂಥಾದ್ದು.'(ಅಮ್ಮಚ್ಚಿಯೆಂಬ ನೆನಪು).

ಹೀಗೆ ಪರಿಪರಿಯಾಗಿ ಬರೆಯುವ ಅಪರೂಪದ ಬರಹಗಾರ್ತಿ ವೈದೇಹಿ ಅವರು. ನಾನು ಲಂಕೇಶ್ ಪತ್ರಿಕೆಯಲ್ಲಿ 'ಮುಂಬೈ ಡೈರಿ' ಅಂಕಣ ಬರೆಯುತ್ತಿದ್ದ ಸಂದರ್ಭದಲ್ಲಿ ವೈದೇಹಿ ಅವರು 'ಜಾತ್ರೆ' ಅಂಕಣ ಬರೆಯುತ್ತಿದ್ದರು. ದಕ್ಷಿಣ ಕನ್ನಡದ ಸತ್ವ ತುಂಬಿದ ಪಾತ್ರಗಳು ಅವರ ಲೇಖನಗಳಲ್ಲಿ ಕಿಕ್ಕಿರಿದರೆ ಹೊಟ್ಟೆಪಾಡಿಗಾಗಿ ದೇಶದ ಮೂಲೆಮೂಲೆಗಳಿಂದ ಬಂದ ಮುಂಬೈ ಮಹಾನಗರದ ವಿಚಿತ್ರ ಚೆಹರೆಗಳು ನನ್ನ ಕಾಲಂನಲ್ಲಿ ಕಾಣಿಸಿಕೊಳ್ಳುತ್ತಿದ್ದುವು. ಎರಡರಲ್ಲೂ ಒಂದೊಂದು ಬಗೆಯ ಜಾತ್ರೆ, ನಮ್ಮಿಬ್ಬರ ಕಾಲಂ ಸಮಾನಾಂತರವಾಗಿ ಓಡುತ್ತಿದ್ದುವು.. ಲಂಕೇಶ್ ಪತ್ರಿಕೆಯಲ್ಲಿ ವೈದೇಹಿಯವರೊಡನೆ ಒಟ್ಟಿಗೆ ಇದ್ದ ಪುಳಕ ನನ್ನದಾಗಿತ್ತು.

ನನ್ನ 'ನೂರು ಸ್ವರ' ಕಾದಂಬರಿ ಲಂಕೇಶ್ ಪತ್ರಿಕೆಯಲ್ಲಿ ಮೊದಲು ಧಾರಾವಾಹಿಯಾಗಿ ಬಂದು ನಂತರ ಪತ್ರಿಕೆ ಪ್ರಕಾಶನದಿಂದ ಹೊರಬಂದಿತು. ಅದಕ್ಕೆ ವೈದೇಹಿಯವರಿಂದ ಮುನ್ನುಡಿ ಬರೆಸಿಕೊಳ್ಳಬೇಕೆಂಬ ಆಸೆ ನನ್ನದಾಗಿತ್ತು. ಒಪ್ಪುತ್ತಾರೋ ಇಲ್ಲವೋ ಎನ್ನುವ ಅಳುಕೂ ಇತ್ತು. ಈ ವಿಷಯ ಲಂಕೇಶರನ್ನು ಕೇಳಿದಾಗ ಅವರೂ ಖುಶಿಯಿಂದ ಒಪ್ಪಿಕೊಂಡರು. ನಾನು ಅದುವರೆಗೂ ವೈದೇಹಿಯವರನ್ನು ಮುಖತಃ ಭೇಟಿಯಾಗಿರಲಿಲ್ಲ. ಲಂಕೇಶ್ ಅವರಿಗೆ ಈ ವಿಷಯ ಹೇಳಿದಾಗ 'ಅಯ್ಯೋ, ನೀವು ವೈದೇಹಿ ಅವರನ್ನು

ಭೇಟಿಯಾಗಬೇಕು. ಶಿ ಈಸ್ ಅ ಲವ್ಲೀ ಪರ್ಸನ್!' ಎಂದರು. ನಾನು ಕೇಳಿದಾಗ ವೈದೇಹಿ ಪ್ರೀತಿಯಿಂದ ಒಪ್ಪಿಕೊಂಡರು.

ಮುಂದೆ ಒಂದು ಸಾಹಿತ್ಯಿಕ ಸಮಾರಂಭದಲ್ಲಿ ವೈದೇಹಿ ಅವರ ಭೇಟಿ ಆಯಿತು. ಅವರ ಅಂದವನ್ನು ಹೇಗೆ ಹೇಳುವುದು! ನನ್ನ ಬಾಲ್ಯದ ದಿನಗಳಲ್ಲಿ ಓದುತ್ತಿದ್ದ ಚಂದಮಾಮ ಪತ್ರಿಕೆಯಲ್ಲಿ ಬರುತ್ತಿದ್ದ 'ಏಳು ಮಲ್ಲಿಗೆ ಹೂವಿನ ತೂಕದ ರಾಜಕುಮಾರಿ'ಯರ ನೆನಪಾಯಿತು! ಆ ಕಣ್ಣುಗಳಲ್ಲಿನ ಮಿಂಚೇ ಸಾಕು!

ಆದರೆ ಇಂಥಾ ಪ್ರತಿಭಾವಂತೆಯಾದರೂ ಇಂದಿಗೂ ವೈದೇಹಿ ಅವರು ಎಂಥಾ ನಿಗರ್ವಿ, ಸ್ನೇಹಮಯಿ ಎಂದು ಆಶ್ಚರ್ಯವಾಗುತ್ತದೆ. ಕೆಲವೇ ಕ್ಷಣಗಳು ಮಾತಿಗೆ ಸಿಕ್ಕರೂ ಎಷ್ಟೋ ವರ್ಷಗಳಿಂದ ಸ್ನೇಹವಿದ್ದಂತೆ ಹರಟೆ. ಮಾತು ಮಾತಿಗೂ ಮೆಲುನಗು. ಅವರ ವ್ಯಕ್ತಿತ್ವವೇ ಹಾಗೆ.

ವೈದೇಹಿ ಅವರು ಇನ್ನೂ ಹೆಚ್ಚು ಹೆಚ್ಚು ಬರೆಯಲಿ. ಇನ್ನೂ ಯಶಸ್ಸು ಗಳಿಸಲಿ. ಅವರ ಬದುಕಿನಲ್ಲಿ ಸಂತೋಷದ ಸುರಿಮಳೆಯಾಗಲಿ ಎಂದು ಹಾರೈಸುತ್ತೇನೆ.



# ಸಖೀಭಾವದ ಪಿಸುಮಾತು

✦ ಬಿ ಎಂ ರೋಹಿಣಿ

ಹಿತೋಪದೇಶದ ಒಂದು ವಾಕ್ಯ ಹೀಗಿದೆ, ಸಂಸಾರವೆಂಬ ವಿಷವೃಕ್ಷದಲ್ಲಿ ಕೇವಲ ಎರಡು ಹಣ್ಣುಗಳು ಅಮೃತಕ್ಕೆ ಸಮ. ಒಂದು ಕಾವ್ಯಾವಲೋಕನ ಮತ್ತೊಂದು ಸಜ್ಜನರ ಸಂಗ. ಕಾವ್ಯಾವಲೋಕನ ಮಾಡುವವನು ಕವಿಯೇ ಆಗಿರಬೇಕೆಂದಿಲ್ಲ. ಸಂವೇದನಾಶೀಲನಾಗಿದ್ದರೆ ಸಾಕು. ಇಂತಹ ಮನಸ್ಸೊಂದು ಬಹಳ ವರ್ಷಗಳ ಹಿಂದೆ, ಅಮೃತಕ್ಕೆ ಸಮಾನವಾದ ಸಜ್ಜನರ ಸಂಗಕ್ಕಾಗಿ ಹಂಬಲಿಸಿದ ಘಟನೆ ನೆನಪಾಗುತ್ತದೆ. ಬಹುಶಃ 1980ರ ದಶಕವಿರಬೇಕು ನನ್ನ ಶಿಷ್ಯೆ ಕೆ.ಪೂರ್ಣಿಮಾ ಭಟ್ ಉಡುಪಿಯಲ್ಲಿ ವೈದ್ಯ ವೃತ್ತಿಯ ವ್ಯಾಸಂಗ ಮಾಡುತ್ತಿದ್ದಳು. ಆ ಸಮಯದಲ್ಲಿ ಅವಳಿಗೆ ವೈದೇಹಿಯವರ ಪರಿಚಯವಾಯಿತು. ವೈದೇಹಿಯವರ ಸಹವಾಸದಿಂದ ಅವಳು ಅನುಭವಿಸಿದ ಸುಖದ ಕ್ಷಣಗಳನ್ನು ಪ್ರತೀವಾರ ಮನೆಗೆ ಬಂದಾಗಲೆಲ್ಲಾ ವರದಿ ಒಪ್ಪಿಸುವ ರೀತಿಗೆ ನಾನು ಅವರ ಅಭಿಮಾನಿಯಾಗಿ ಬಿಟ್ಟೆ. ಪೂರ್ಣಿಮಾ ಉತ್ತಮ ಕವಯಿತ್ರಿಯಾಗಿಯೂ ಗುರುತಿಸಿಕೊಂಡ ಕಾರಣ ವೈದೇಹಿಯವರ ಪ್ರಕಟಿತ ಕವನಗಳ ಬಗ್ಗೆ ಅವರ ಕೃತಿಗಳ ಬಗ್ಗೆ ನಮ್ಮದೇ ರೀತಿಯಲ್ಲಿ ಅವಲೋಕನ ಮಾಡಿ ತೃಪ್ತಿ ಪಟ್ಟುಕೊಳ್ಳುತ್ತಿದ್ದೆವು. ವೈದೇಹಿಯೊಂದಿಗೆ ಒಡನಾಟವಿದ್ದ ಪೂರ್ಣಿಮಾ ಹೇಳಿದ ಮಾತುಗಳು ವೈದೇಹಿಯವರ ಬಗ್ಗೆ ನಾನು ಆರಾಧನಾ ಭಾವದ ಅಭಿಮಾನಿಯನ್ನಾಗಿಸಿಬಿಟ್ಟಿತ್ತು. ಸಾಮಾನ್ಯ ಶಾಲಾ ಶಿಕ್ಷಕಿಯಾದ ನಾನು ಮುಟ್ಟಿದರೆ ಮುದುಡಿಕೊಳ್ಳುವ ಸ್ವಭಾವದವಳಾದ ಕಾರಣ ದೊಡ್ಡ ಸಾಹಿತಿಗಳನ್ನೆಲ್ಲಾ ದೂರದಿಂದಲೇ ಸಾಷ್ಟಾಂಗವೆರಗಿ ತೃಪ್ತಿ ಪಟ್ಟುಕೊಳ್ಳುವವಳು. ವೈದೇಹಿಯವರು ಆಡಿದ ಮಾತುಗಳನ್ನು ಪೂರ್ಣಿಮಾ ತದ್ವತ್ತಾಗಿ ಹೇಳುತ್ತಿದ್ದಾಳೋ ಅಥವಾ ವೈಭವೀಕರಿಸಿ ಹೇಳುತ್ತಿದ್ದಾಳೋ ಗೊತ್ತಿಲ್ಲ. ಅವರ ಮಾತುಗಳಲ್ಲಿದ್ದ ಪನ್ನೀರಿನ ಸುಗಂಧವನ್ನು ನನ್ನ ಮನೆಯಲ್ಲೂ ಆಘ್ರಾಣಿಸುವ ಸೌಭಾಗ್ಯ ದೊರಕಿಸಿಕೊಟ್ಟವಳು ಅವಳು. ಎಷ್ಟೋ ಸಲ ಪೂರ್ಣಿಮಾ ನನ್ನನ್ನು ವೈದೇಹಿಯವರ ಬಳಿ ಕರೆದೊಯ್ಯಲು ಪ್ರಯತ್ನಿಸಿದ್ದುಂಟು. ನನ್ನ ಬಗ್ಗೆ ನನಗಿರುವ ಕೀಳರಿಮೆಯು ಬಹಳ ವರ್ಷಗಳವರೆಗೂ ಅವರ ಮುಖಾಮುಖಿಯಾಗಲು ಆಸ್ಪದವನ್ನೇ ಕೊಡಲಿಲ್ಲ. ಆದರೆ ಅವರು ಏನು ಬರೆದರೂ

ಅದರ ಬಗ್ಗೆ ನಮ್ಮ ಮನೆಯಲ್ಲಿ ಈ ಗುರು ಶಿಷ್ಯೆಯರು ನಮ್ಮದೇ ಆದ ರೀತಿಯಲ್ಲಿ ಒಂದು ವಿಚಾರಗೋಷ್ಠಿ ನಡೆಯುತ್ತಿದ್ದುದು ಸುಳ್ಳಲ್ಲ.

ಆ ಬಳಿಕ 2008ರಲ್ಲಿ ಇರಬೇಕು, ನನ್ನ ಇನ್ನೋರ್ವ ಗೆಳತಿ ಅ.ನಾ ಪೂರ್ಣಿಮಾ ನನ್ನನ್ನು ವೈದೇಹಿಯವರ ಮನೆಗೆ ಕರೆದೊಯ್ದಳು. ನಾವು ಮುಖಾಮುಖಿಯಾದ ಕ್ಷಣವಿದೆಯಲ್ಲಾ, ಅದು ನನ್ನ ದೃಷ್ಟಿಯಲ್ಲಿ ಅಮೃತ ಘಳಿಗೆ. ಜನ್ಮಾಂತರದಿಂದಲೇ ಪರಿಚಯವಿದ್ದವರಂತೆ ವೈದೇಹಿ ನನ್ನನ್ನು ಹೃದಯಕ್ಕೆ ಅಪ್ಪಿಕೊಂಡ ರೀತಿಗೆ ಬೆರಗಾಗಿದ್ದೇನೆ. ನಾನು ಮುಖತಃ ಭೇಟಿಯಾಗುವ ಹೊತ್ತಿಗೆ ವೈದೇಹಿ ಕನ್ನಡ ಸಾಹಿತ್ಯ ಮಾತ್ರವಲ್ಲ ಭಾರತದ ಸಾಹಿತಿಗಳಲ್ಲೇ ಒಬ್ಬರೆಂದು ಗುರುತಿಸುವ ಹಂತಕ್ಕೆ ತಲುಪಿದ್ದರು. ನಾವು ಅವರ ಮನೆಗೆ ಭೇಟಿಯಾಗುವೆವೆಂದು ಮೊದಲೇ ಹೇಳಿರಲಿಲ್ಲ. ಅಭ್ಯಾಗತರಾಗಿ ನುಗ್ಗಿದವರು. ಆದರೂ ನಮ್ಮನ್ನು ಸತ್ಕರಿಸಿದ ರೀತಿಯೇ ನನ್ನಲ್ಲಿ ಪುಳಕವುಂಟು ಮಾಡಿತು. ಚುರುಕಾಗಿ ಆಚೀಚೆ ಓಡಾಡುತ್ತಾ ಜೊತೆಯಲ್ಲಿ ನಮ್ಮ ಕುಶಲ ಸಮಾಚಾರ ಕೇಳುತ್ತಾ ಕಳೆದ ಕಾಲವಿದೆಯಲ್ಲಾ ಅದನ್ನು ಪದಗಳಿಂದ ವಿವರಿಸಲು ಸಾಧ್ಯವಿಲ್ಲ. ಹೀಗೆ ನನ್ನ ಶಿಷ್ಯೆ ಪೂರ್ಣಿಮಾ ಭಟ್ ಕಾವ್ಯಾವಲೋಕನದ ಸುಖವನ್ನು ಕರುಣಿಸಿದರೆ ಗೆಳತಿ ಪೂರ್ಣಿಮಾ ಸಜ್ಜನರ ಸಂಗದ ಸುಖವು ಹೇಗಿರುತ್ತದೆಂದು ನನಗೆ ಪ್ರತ್ಯಕ್ಷ ತೋರಿಸಿಕೊಟ್ಟರು.

ವೈದೇಹಿಗೆ ಇನ್ನೇನು ನಾಳೆ ನಾಡಿದ್ದರಲ್ಲಿ 75 ತುಂಬಿತು ಎಂದು ಅಭಿನಂದನೆ ಮಾಡುವ ಸುಯೋಗವೊಂದು ಸಾಹಿತ್ಯಾಭಿಮಾನಿಗಳಿಗೆ ಲಭಿಸಿದೆ. ಮನುಷ್ಯ ಜೀವನ ಸಾರ್ಥಕವಾಗುವುದು ಎಷ್ಟು ವರ್ಷ ತುಂಬಿತು ಎಂಬುದರಿಂದಲ್ಲ. ಆ ವರ್ಷಗಳಿಗೆ ಹೇಗೆ ಜೀವ ತುಂಬಿಸಲಾಯಿತು ಎಂಬುದರಿಂದ. ಇವತ್ತಿಗೂ ನನಗೆ ವೈದೇಹಿಯವರನ್ನು ಕಂಡಾಗ 40 ವರ್ಷಗಳ ಹಿಂದಿನ ವೈದೇಹಿಯೇ ಕಾಣುತ್ತಾರೆ. ಒಂದೆರಡು ಬೆಳ್ಳಿಕೂದಲು ಇಣುಕಿದ್ದು ಬಿಟ್ಟರೆ ಅದೇ ಮಲ್ಲಿಗೆ ಕಂಪು ಸೂಸುವ ನಗು. ಸಖೀಭಾವವನ್ನು ತುಂಬಿದ ಆಕರ್ಷಕ ಕಣ್ಣುಗಳು. ನಮ್ಮ ಅಂತರಂಗದ ಮೂಲೆ ಮುದುಕುಗಳಲ್ಲಿ ಅಡಗಿದ ಮಿಥ್ಯೆಗಳತ್ತ ಸರ್ಚ್‌ಲೈಟ್ ಹಾಕಿ ಹೊರಗೆಳೆಯುವ ಮಾತಿನ ಪ್ರಬುದ್ಧತೆ, ಮಾತಾಡುವಾಗ ಅವರದ್ದೇ ವಿಶಿಷ್ಟ ಶೈಲಿಯ ಆಂಗಿಕ ಭಾಷೆ ಮುಂತಾದುವು ವೈದೇಹಿಗೊಂದು ಅನನ್ಯತೆಯನ್ನು ಕೊಟ್ಟಿದೆ. ಅವರ ಬರವಣಿಗೆಯಲ್ಲೂ ಕೂಡಾ ಸಾಹಿತ್ಯ ಗೊತ್ತಿಲ್ಲ ತಿಳಿಸಾರು ಗೊತ್ತಿದೆ ಎನ್ನುತ್ತಲೇ ಕನ್ನಡ ಸಾಹಿತ್ಯ ಲೋಕಕ್ಕೆ ಅಡುಗೆ ಮನೆಯ ವಿಶ್ವರೂಪವನ್ನೇ ತೋರಿಸಿಕೊಟ್ಟಿದ್ದಾರೆ. ಮಹಿಳೆಯರು ಬರೆದದ್ದನ್ನು ಕೊತ್ತಂಬರಿ ಜೀರಿಗೆ ಸಾಹಿತ್ಯವೆಂದು ಕೀಳಂದಾಜು ಮಾಡುವ ಅಡುಗೆ ಮನೆಯೊಳಗಿನ ವಿಶಿಷ್ಟ ಭಾವ, ರಸ, ಜ್ಞಾನ, ಪ್ರತಿಭೆ, ಸಾರಸ್ವತಗಳ ಸೌಂದರ್ಯವನ್ನು ಅನಾವರಣಗೊಳಿಸಿ ಸಹೃದಯರು ಬೆರಗಾಗುವಂತೆ ಮಾಡಿದ್ದಾರೆ. ಯಾವ ಇಸಂಗಳಿಗೂ ತಲೆಕೆಡಿಸಿಕೊಳ್ಳದೇ ಮಹಿಳೆಯ ಅಸ್ಮಿತೆ ಎಂದರೆ ಹೀಗಿರಬೇಕು ಎಂಬುದಕ್ಕೆ ಮಾದರಿಯಾಗಿದ್ದಾರೆ. ಶಿವನ ಮೀಸುವ ಹಾಡಾಗಲೀ, ಶಕುಂತಲೆಯೊಂದಿಗೆ ಕಳೆದ ಅಪರಾಹ್ನವಾಗಲಿ, ಆಭಾ ಮತ್ತು ಸೌಗಂಧಿಯ ಸ್ವಗತಗಳಾಗಲೀ, ಅಕ್ಕು ಎಂಬ ಕತೆಯಾಗಲೀ

ಈವರೆಗೆ ಯಾರೂ ದರ್ಶಿಸದ ಮಹಿಳಾ ಸಮುದಾಯದ ಲೋಕವೊಂದರ ಅನಾವರಣವಾಗಿದೆ.

ಅವರ ಕಾವ್ಯ, ನಾಟಕ, ಕತೆ, ಕಾದಂಬರಿಗಳು, ಪ್ರಬಂಧ ಸಂಕಲನಗಳಿಗಿಂತಲೂ ನನಗೆ ಹೆಚ್ಚು ತಟ್ಟಿದ್ದು ಅವರ ಅನುವಾದದ ಕೃತಿಗಳು ಮತ್ತು ಆತ್ಮಕಥಾನಕಗಳು. ಟಿ.ಎಸ್. ಎಲಿಯೆಟ್ ಸಾಹಿತಿಗೆ ಜ್ಞಾನದ ಎಲ್ಲಾ ಶಾಖೆಗಳ ಪರಿಚಯವಿರಬೇಕು ಎನ್ನುತ್ತಾನೆ. ವೈದೇಹಿ ಅನುವಾದಿಸಿದ ಕೃತಿಗಳನ್ನು ಗಮನಿಸಿದಾಗ ಅವರ ಆಸಕ್ತಿಯ ಪರಿಧಿ ಎಷ್ಟು ವಿಶಾಲವಾಗಿದೆ ಎಂಬ ಅರಿವಾಗುತ್ತದೆ. ತಿಳಿಯಾದ ಸರೋವರದ ಆಳ ತಿಳಿಯಲಾರದು. ಹಾಗೆಯೇ ವೈದೇಹಿಯ ಅಭಿರುಚಿಗಳ ಆಳವನ್ನೂ ತಿಳಿಯಲಾರೆವು. ಸಂಗೀತ ವಿದ್ವಾಂಸ ಡಾ. ಭಾಸ್ಕರ್ ಚಂದಾವರ್ಕರ್ ಅವರ ಉಪನ್ಯಾಸಗಳ ಭಾಷಾಂತರವು ಅವರ ಆಸಕ್ತಿಗೆ ಸಾಕ್ಷಿಯಾಗಿದೆ. ಸಾಹಿತಿಯಾದವನು ಸಮಾಜ ಮತ್ತು ಸಂಸ್ಕೃತಿಗೆ ಹೊಣೆಗಾರನಾಗಿದ್ದಾನೆ ಎನ್ನುತ್ತಾರೆ. ಮಂಜು ಮುಸುಕಿದ ನಾಡಿಗೆ ಬಿಸಿಗಾಳಿಯಾಗಿ, ಬೆಂಗಾಡಿಗೆ ಸೋನೆ ಮಳೆಯಾಗಿ ಸಾಹಿತ್ಯ ತಂಪೆರೆಯಬೇಕು. ಸ್ವಾತಂತ್ರ್ಯ ಹೋರಾಟಗಾರ್ತಿ ಕಮಲಾದೇವಿ ಚಟ್ಟೋಪಾಧ್ಯಾಯರು ಬರೆದ 'ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ' ಮತ್ತು ಮೈತ್ರೇಯಿ ಮುಖ್ಯೋಪಾಧ್ಯಾಯರು ಬರೆದ ಭಾರತೀಯ ಮಹಿಳೆಯರ ಸ್ಥಿತಿಗತಿಯುಳ್ಳ 'ಬೆಳ್ಳಿಯ ಸಂಕೋಲೆಗಳು' ಈ ಎರಡೂ ಕೃತಿಗಳು ಅನುವಾದ ಕೃತಿಗಳಾಗಿ ಅಪೂರ್ವವೆನಿಸಿವೆ. ಅಲ್ಲಿ ಕವಯಿತ್ರಿ ರಸಗ್ರಹಣ ಮಾಡಿ ಕವಿತೆ ಬರೆದರೆ ಇಲ್ಲಿ ಸಂಶೋಧಕಿ ಸತ್ವಗ್ರಹಣ ಮಾಡಿ ಕೃತಿ ರಚಿಸಿದ್ದಾರೆ. ಕಳೆದುದ್ದನ್ನು ಹುಡುಕುವವಳು ಸಂಶೋಧಕಿಯಾದರೆ ಕಳೆದು ಹೋಗದಂತೆ ತಡೆಯುವವಳು ಕವಯಿತ್ರಿ. ಪ್ರೀತಿಗೂ ಕವಿತೆಗೂ ಅವಿನಾಭಾವ ಸಂಬಂಧವಿದೆ. ಜೀವನ ಪ್ರೀತಿ ಇಲ್ಲದಲ್ಲಿ ವೈದೇಹಿಯಿಂದ ಇಂತಹ ಅನುವಾದ ಕೃತಿಗಳು ಬರುತ್ತಿರಲಿಲ್ಲ. ಗಿಡದಲ್ಲಿ ಹೂ ಅರಳಿದಂತೆ. ಮರದಲ್ಲಿ ಎಲೆಗಳು ಚಿಗುರಿದಂತೆ ಈ ಕೃತಿಗಳು ವೈದೇಹಿತನದ ಛಾಪು ಮೂಡಿಸಿವೆ. ಬಿ.ವಿ. ಕಾರಂತರ ಆತ್ಮಕಥನ 'ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ' ಈ ಕೃತಿಯೊಂದೇ ಸಾಕು ವೈದೇಹಿ ಏನೆಂದು ಪ್ರುತಪಡಿಸಲು. ಸರಸ್ವತಿ ಬಾಯಿ ರಾಜವಾಡೆಯವರ 'ಮುಂತಾದ ಕೆಲವು ಪುಟಗಳು' ಕೂಡಾ ಅಷ್ಟೇ ಉತ್ಕೃಷ್ಟವಾದ ಕೃತಿ. ವೈದೇಹಿಯವರ ಸೃಜನ ಶಕ್ತಿ ಎಲ್ಲಾ ಕೃತಿಗಳಲ್ಲೂ ಶಾಂತವಾಗಿ, ನಿರ್ಮಲವಾಗಿ, ಹರಿಯುವ ಸ್ಫಟಿಕ ಶುದ್ಧ ಜಲಧಾರೆ. ಬದುಕಿನ ಗತಿ ಹಿಡಿದು ಅದರ ಜೊತೆಯಲ್ಲೇ ಸಾಹಿತ್ಯ ನಿರಂತರವಾಗಿ ಹೆಜ್ಜೆ ಹಾಕುವುದನ್ನು ಕಂಡು ಬೆರಗಾಗಿದ್ದೇನೆ. ಕೋಲ ಕಾರಂತರ ನೆನಪುಗಳು, ಪಂಡಿತ ಸೇಡಿಯಾಪು ಕೃಷ್ಣ ಭಟ್ಟರ ನೆನಪುಗಳು ಮುಂತಾದ ಸಂಗ್ರಹ ಕೃತಿಗಳು ಕನ್ನಡ ಸಾಹಿತ್ಯ ಲೋಕಕ್ಕೆ ಅಪೂರ್ವ ಕೊಡುಗೆಗಳಾಗಿವೆ. ಸಾಹಿತ್ಯ ರಚನೆಗೆ ಜನ ಜೀವನ ಪ್ರೇರಕವಾದರೆ ಜನ ಜೀವನಕ್ಕೆ ಸಾಹಿತ್ಯ ಪ್ರಚೋದಕವಾಗಬೇಕು ಎಂಬ ಆಶಯ ಈ ಕೃತಿಗಳಿಂದ ಸಾರ್ಥಕವಾಗಿದೆ. ಸಾಹಿತಿಯ ಮನೆಯ ಸಿರಿವಂತಿಕೆ ನಾಗರಿಕತೆಯನ್ನು ಮಾತ್ರ ವ್ಯಕ್ತಪಡಿಸುತ್ತದೆ. ಅವನ ಮನದ ಸಿರಿವಂತಿಕೆ ಸಂಸ್ಕೃತಿಯನ್ನು

ಸಂಕೇತಿಸುತ್ತದೆ ಎಂಬುದಕ್ಕೆ ಅವರು ಕೃತಿ ರಚನೆಗೆ ಆಯ್ಕೆ ಮಾಡಿದ ವಸ್ತು ಮತ್ತು ವಿಷಯಗಳು ಸಂಸ್ಕೃತಿಯ ಸಂಪನ್ನತೆಯನ್ನು ವ್ಯಕ್ತಪಡಿಸುತ್ತದೆ. ತಮ್ಮ ಒಂದೊಂದು ಕೃತಿಗಳ ಮೂಲಕ ವೈದೇಹಿ ಅರಿವಿನ ಬೆಳಕನ್ನು ಹಚ್ಚಿದ್ದಾರೆ. ಆ ಬೆಳಕಿನಲ್ಲಿ ನಮ್ಮ ಮುಖದ ಸುರೂಪ ಕುರೂಪಗಳನ್ನು ನಮಗೆ ಕಾಣಿಸಿದ್ದಾರೆ. ಸಾಹಿತ್ಯವು ಜೀವನ ಪಕ್ಷಪಾತಿಯಾಗುವುದು ಹೇಗೆ ಎಂಬುದನ್ನು ಎಳೆಎಳೆಯಾಗಿ ಚಿತ್ರಿಸಿದ್ದಾರೆ.

ಖ್ಯಾತಸಾಹಿತಿ ಡಿ.ವಿ.ಜಿ ಒಂದು ಮಾತು ಹೇಳುತ್ತಾರೆ. 'ಸಾಹಿತಿ ದೊಡ್ಡ ಗಂಟಲಿನ ಮೇಸ್ತ್ರಿಯಲ್ಲ. ಬೆತ್ತ ಹಿಡಿದ ಉಪಾಧ್ಯಾಯನೂ ಅಲ್ಲ. ಮೆಲ್ಲನೆ ಕಿವಿಯಲ್ಲಿ ಉಸುರುವ ಆಪ್ತ ಸ್ನೇಹಿತ. ಕಣ್ಣು ಸನ್ನೆ ಮಾಡಿ ಮನಸೆಳೆಯುವ ಒಡನಾಡಿ' ಅಂತ. ಈ ಮಾತು ವೈದೇಹಿಗೆ ಚೆನ್ನಾಗಿ ಒಪ್ಪುತ್ತದೆ. ಸಾಹಿತ್ಯದಲ್ಲಿ ದೊಡ್ಡ ಪ್ರಸಿದ್ಧಿ ಪಡೆದವರು ಮಕ್ಕಳಿಗೆ ಒದಗುವ ಕೃತಿ ರಚಿಸಿದ್ದು ವಿರಳ. ವೈದೇಹಿ ಅಂತಹ ವಿರಳಾತಿ ವಿರಳರಲ್ಲಿ ಒಬ್ಬರು. ಯಾಕೆಂದರೆ ನಾಟಕ ಕ್ಷೇತ್ರಕ್ಕೆ ಸ್ತ್ರೀಯರ ಕೊಡುಗೆ ವಿರಳ. ಅದರಲ್ಲೂ ಮಕ್ಕಳ ನಾಟಕ ಮತ್ತೂ ಕಡಿಮೆ. ಹಾಗಿರುವಾಗ ವೈದೇಹಿಯವರು ಸುಮಾರು ಹದಿನೈದು ನಾಟಕಗಳನ್ನು ಮಕ್ಕಳಿಗಾಗಿ ಬರೆದು ನಾಟಕ ಪ್ರಕಾರವನ್ನು ಶ್ರೀಮಂತಗೊಳಿಸಿರುವುದು ಅಭಿಮಾನದ ವಿಷಯವೇ ಆಗಿದೆ. ಅದೇ ರೀತಿ ಮಕ್ಕಳ ಕಥೆಗಳ ಸಂಕಲನವೊಂದನ್ನು ಪ್ರಕಟಿಸಿ ಮಕ್ಕಳ ಭಾವಲೋಕವನ್ನು ಶ್ರೀಮಂತಗೊಳಿಸಿದ್ದಾರೆ. ಶಿಕ್ಷಕಿಯಾಗಿದ್ದ ನನಗೆ ನಾಟಕಗಳ ಹುಚ್ಚು ಜೋರಾಗಿದ್ದುದರಿಂದ ಅವರ ಕೆಲವು ನಾಟಕಗಳನ್ನು ಆಡಿಸಲು ಪ್ರಯತ್ನ ಪಟ್ಟಿದ್ದುಂಟು. ನಾಟಕ ಕ್ಷೇತ್ರದಲ್ಲಿ ಪರಿಣತರಾದ ಜೀವನರಾಂ ಸುಳ್ಯ ಅಂತಹವರು ಅವರ ನಾಟಕಗಳನ್ನು ನಿರ್ದೇಶನ ಮಾಡಿ ಪ್ರದರ್ಶನ ಮಾಡಿದ ರೀತಿಯನ್ನು ಕಂಡು ಬೆರಗಾಗಿದ್ದೇನೆ. ನಾಟಕಗಳನ್ನು ಹೀಗೂ ಮಾಡಲು ಸಾಧ್ಯವೆಂಬ ಹೊಸ ಬೆಳಕನ್ನು ನಾನು ಕಂಡಿದ್ದೇನೆ. ವೈದೇಹಿ ಈ ನಾಟಕಗಳ ಮೂಲಕ ಮಕ್ಕಳಿಗೂ ಹಿರಿಯರಿಗೂ ತಮ್ಮ ಭಾವ ಪ್ರಪಂಚದ ವೈಶಾಲ್ಯವನ್ನು ತೋರಿಸಿದ್ದಾರೆ. ಅದ್ಭುತ ರಮ್ಯ ಕಥಾನಕವು ಉಂಟುಮಾಡುವ ರೋಮಾಂಚನವನ್ನು ಪ್ರೇಕ್ಷಕರಿಗೆ ಮೂಡಿಸಿದ್ದಾರೆ. ಲೇಖಕಿ ಸಮಾಜದ ಶಿಶು. ಅವರ ದೈವದತ್ತವಾದ ಪ್ರತಿಭೆಗೆ ಕಾವ್ಯ, ಕಾದಂಬರಿ, ಕತೆ, ನಾಟಕಗಳು ಒಂದು ಮಾಧ್ಯಮವಾಗಿ ಪ್ರಕಟಗೊಂಡಿವೆ. ಕುವೆಂಪು ಹೇಳಿದಂತೆ ನಮ್ಮ ಇಂದಿನ ಕನಸು ನಿಮ್ಮ ನಾಳೆಯ ಮನಸು ಹೌದು. ಕವಯಿತ್ರಿ ಕಂಡ ಕನಸುಗಳು ಕಾಣ್ಕೆಗಳಾಗಿ ಸಹೃದಯರ ಮನಸ್ಸನ್ನು ಅರಳಿಸಿವೆ. ಇದೇ ತಾನೇ ಲೇಖಕಿಯ ಆಶಯ. ಹೆಚ್ಚು ಕಮ್ಮಿ ಸುಮಾರು 40 ವರ್ಷಗಳಿಂದ ಈ ಕಾಯಕ ಮಾಡುತ್ತಾ ಬಂದಿರುವ ವೈದೇಹಿಯನ್ನು ಕನ್ನಡಿಗರು ಅಭಿಮಾನದಿಂದ ಅಭಿನಂದಿಸಿ ಗೌರವ ಅರ್ಪಿಸುತ್ತಿರುವುದು ನಮ್ಮಲ್ಲಿ ಧನ್ಯತಾ ಭಾವವನ್ನು ಮೂಡಿಸಿದೆ. ಈ ಸಂದರ್ಭದಲ್ಲಿ ಎದೆ ತುಂಬಿ ಶುಭ ಹಾರೈಸುತ್ತೇನೆ.



# ವೈದೇಹಿಯೆಂಬ ಜಾನಕಿಯ ನೆನಪು

✦ ಜಯಶ್ರೀ ಕಾಸರವಳ್ಳಿ

ಹೆಚ್ಚೆಂದರೆ ನನಗಾಗ ಹತ್ತೋ ಹನ್ನೊಂದೋ ವಯಸ್ಸಿರಬಹುದು. ಅಥವಾ ಇನ್ನೂ ಕಮ್ಮಿಯೇ? ನೆನಪುಗಳನ್ನು ಹರವಿ ಕುಳಿತಾಗ ವಯಸ್ಸು ಅಷ್ಟಾಗಿ ನೆನಪಿಗೆ ಬರುವುದಿಲ್ಲ. ಚಲಿಸುವ ರೈಲಿನಲ್ಲಿ ಕ್ಷಣ ಕಂಡ ಹಾಗೆ ಸರಿದುಹೋಗುವ ಭಿತ್ತಿ ಚಿತ್ರಗಳೇ ಜಾಸ್ತಿ. ನನ್ನೊಳಗೆ ಗುಟ್ಟಾಗಿ ಅವಿತು ಕುಳಿತುಬಿಟ್ಟ ಎಂದಿನದೋ ಆ ಸ್ತಬ್ಧಚಿತ್ರಗಳು ಆಗಾಗ ಮನಸ್ಸಿನ ಪರದೆ ಮೇಲೆ ಮೂಡಿ, ನೆನಪುಗಳನ್ನು ಕೆದಕುತ್ತಿರುವುದು ನಿಜವಾದರೂ ಅವನ್ನೆಲ್ಲಾ ಅಕ್ಷರ ರೂಪಕ್ಕೆ ಇಳಿಸಿದಾಗ ಎಲ್ಲಿ ಕಳೆದುಹೋಗುತ್ತವೋ ಅನ್ನುವ ಭಯ. ಆದರೂ ಅಂತಹದೊಂದು ಹುಚ್ಚು ಸಾಹಸಕ್ಕೆ ಕೈ ಹಾಕಿದ್ದೇನೆ.

ಸಾವಿರದ ಒಂಭೈನೂರ ಎಪ್ಪತ್ತರ ಸುಮಾರು. ನನಗೆ ಸಂಗೀತದಲ್ಲಿ ಸ್ವಲ್ಪ ಆಸಕ್ತಿಯಿದ್ದಂತಹ ಕಾಲ. ಸಂಗೀತವೆಂದರೆ ತಾಳವನ್ನು ಕುಟ್ಟಿ, ಕುಟ್ಟಿ, ಗಟ್ಟಿಯಾಗಿ ಅರಚುವುದು ಎಂದಷ್ಟೇ ತಿಳಿದಿದ್ದಂತಹ ಬಾಲ್ಯ. ಆಗೆಲ್ಲಾ ಈಗಿನಂತೆ ಸಂಗೀತ ಸಭಾಗಳಿರಲಿಲ್ಲ. ನಮ್ಮ ಶಿವಮೊಗ್ಗದಲ್ಲಿ ಸಂಗೀತೋಪಾಸಕರು ಸಾಕಷ್ಟು ಸಂಖ್ಯೆಯಲ್ಲಿದ್ದರು. ವರುಷಕ್ಕೊಮ್ಮೆ ಬರುವ ಗಣೇಶನ ಹಬ್ಬಕ್ಕೆ, ಹಲವೆಡೆ ಪೆಂಡಾಲ್‌ಗಳೆದ್ದು ಗಣೇಶನ ಕೂರಿಸಿ ನಾನಾ ತರಹದ ಕಾರ್ಯಕ್ರಮಗಳನ್ನು ಏರ್ಪಡಿಸಿರುತ್ತಿದ್ದರು. ಮುಖ್ಯವಾಗಿ ಶಾಸ್ತ್ರೀಯ ಸಂಗೀತ ಕಛೇರಿಗಳೇ ಹೆಚ್ಚು. ನಮ್ಮ ಮನೆಯಿಂದ ಮೂರು ಫರ್ಲಾಂಗ್ ಆಚೆ ದೊಡ್ಡ ಬ್ರಾಹ್ಮಣರ ಕೇರಿ, ಚಿಕ್ಕ ಬ್ರಾಹ್ಮಣರ ಕೇರಿಯೆಂದು ಬ್ರಾಹ್ಮಣರೇ ಹೆಚ್ಚಾಗಿ ನೆಲೆಸಿರುತ್ತಿದ್ದ ರಸ್ತೆಗಳಿದ್ದವು. ದೊಡ್ಡ ದೊಡ್ಡ ಮನೆಗಳಿರುವ ಬೀದಿಯದು. ವರುಷಕ್ಕೊಮ್ಮೆ ಈ ಎಲ್ಲಾ ಮನೆಗಳವರ ಸಹಕಾರದಿಂದ ಬೀದಿಯ ಪ್ರಾರಂಭದಲ್ಲಿ ಒಂದು ಬೃಹತ್ ಪೆಂಡಾಲ್ ಎದ್ದು ವಿದ್ಯಾಗಣಪತಿಯನ್ನು ಪ್ರತಿಷ್ಠಾಪಿಸಿ, ಒಂದು ವಾರ ಪೂರ್ಣ ಅಮೋಘ ಶಾಸ್ತ್ರೀಯ ಸಂಗೀತ ಕಛೇರಿಗಳನ್ನು ಏರ್ಪಡಿಸುತ್ತಿದ್ದರು. ತಮಿಳುನಾಡಿನಿಂದ, ಆಂಧ್ರದಿಂದ ದೊಡ್ಡ ದೊಡ್ಡ ಕಲಾವಿದರನ್ನೇ ಕರೆಸುತ್ತಿದ್ದರು.

ನನ್ನ ಚಿಕ್ಕಮ್ಮನಿಗೆ, ಅಂದರೆ ನನ್ನ ತಾಯಿಯ ತಂಗಿ (ಕೆ. ವಿ ಸುಬ್ಬಣ್ಣನವರ ಪತ್ನಿ) ಗೆ ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ವಿಶೇಷ ಒಲವು. ಮದುವೆಯ ನಂತರವೂ ಅವರು ಸಂಗೀತ ಕಲಿಯುವುದನ್ನು ಬಿಟ್ಟಿರಲಿಲ್ಲ. ಅವರ ಊರು ಸಾಗರದ ಹತ್ತಿರದ ಮುಂಡಿಗೇಸರದಿಂದ ಪ್ರತೀ ವರುಷ ಗಣೇಶನ ಹಬ್ಬದ ಸಮಯದಲ್ಲಿ ಸಂಗೀತ ಕಛೇರಿ ಕೇಳಲು ನಮ್ಮ ಮನೆಗೆ ಬರುತ್ತಿದ್ದರು. ನನಗೂ ಸಂಗೀತ ಕೇಳುವುದರಲ್ಲಿ ಆಸಕ್ತಿಯಿತ್ತು. ಶಾಲೆಯಿಂದ ಬರುತ್ತಿದ್ದಂತೆ ಕಛೇರಿಗೆ ಹೊರಡುವ ಉತ್ಸಾಹ. ಆಗೆಲ್ಲಾ ಆರೆಂದರೆ ಆರಕ್ಕೆ ಸಮಯಕ್ಕೆ ಸರಿಯಾಗಿ ಸಂಗೀತ ಕಛೇರಿ ಶುರುವಾಗುತ್ತಿತ್ತು. ಗಂಡಸರು ಒಂದು ಕಡೆ, ಹೆಂಗಸರು ಒಂದು ಕಡೆ ಕೂರುವ ಪದ್ಧತಿ. ನಾನೂ ನನ್ನ ಚಿಕ್ಕಮ್ಮ ತೀರಾ ಮುಂದೂ ಅಲ್ಲದ, ತೀರಾ ಹಿಂದೂ ಅಲ್ಲದ ಮಧ್ಯದ ಜಾಗದಲ್ಲಿ ಹೋಗಿ ಕೂರುತ್ತಿದ್ದೆವು.

ಒಮ್ಮೆ ಒಂದು ಸಂಗೀತ ಕಛೇರಿ ಶುರುವಾಗಿ ಸ್ವಲ್ಪ ಹೊತ್ತಿನ ನಂತರ ಒಬ್ಬ ತೆಳ್ಳಗಿನ ಹೆಂಗಸು ಎರಡು ಚಿಕ್ಕ ಹೆಣ್ಣು ಮಕ್ಕಳೊಡನೆ ಬಂದು ನನ್ನ ಮಗ್ಗುಲಲ್ಲಿ ಕುಳಿತರು. ಅವರ ಪರಿಚಯ ನನಗಿರಲಿಲ್ಲ. ಆದರೆ ಅವರನ್ನು ಅನೇಕ ಸಲ ದೂರದಿಂದ ನೋಡಿದ್ದೆ. ಬ್ರಾಹ್ಮಣರ ಕೇರಿಗೆ ಕೊಟ್ಟಿದ್ದ ನನ್ನತ್ತೆಯ ಮಗಳು ಸಿರಿ, 'ಅವ್ಳು ಕತೆ ಬರೀತಾಳೆ, ಗೊತ್ತುಂಟಾ?' ಎಂದೊಮ್ಮೆ ನನ್ನ ಕಿವಿಯಲ್ಲಿ ಮೆಲ್ಲಗೆ ಪಿಸುಗುಟ್ಟಿ ಇನ್ನಷ್ಟು ನನಗೆ ಕುತೂಹಲವನ್ನೂ, ಗೊಂದಲವನ್ನೂ ಹುಟ್ಟುಹಾಕಿದ್ದಳು.

ಏಕೆಂದರೆ ಆಗಷ್ಟೇ ಮಿಡಲ್‌ಸ್ಕೂಲಿನ ಮೆಟ್ಟಿಲು ಹತ್ತಿದ್ದ ನನಗೆ ತಾಳ ತಟ್ಟೀ ತಟ್ಟೀ ಸಾಕೆನ್ನಿಸುತ್ತಿತ್ತು. ಸಾಹಿತ್ಯದಲ್ಲಿ ಒಂಚೂರು ಆಸಕ್ತಿ ಮೂಡಿ, ಅದಾಗಲೇ ಕಾರಂತರ ಕಾದಂಬರಿ ಓದಲು ಶುರು ಮಾಡಿದ್ದೆ. ಅನಂತಮೂರ್ತಿಯವರ ಕತೆಗಳನ್ನು ಓದಿ ಅವರ ಪ್ರಭಾವದೊಳಗೆ ಸುತ್ತುತ್ತಿದ್ದೆ. ಚಿತ್ತಾಲರ ಕತೆಗಳನ್ನು ಓದಿ ಅವರ ಕನಸಿನೊಳಗೆ ಸಿಕ್ಕಿ ಹಾಕಿಕೊಂಡಿದ್ದೆ. ನಾನೊಬ್ಬ ಕತೆಗಾರ್ತಿ ಆಗಬೇಕೂಂತ ಹಗಲೂ ರಾತ್ರಿ ಹಲುಬುತ್ತಿದ್ದಂತಹ ಕಾಲವದು. ಅಲ್ಲಿಯವರೆಗೂ ಕತೆ ಬರೆಯುವವರ್‍ಯಾರನ್ನೂ ಹತ್ತಿರದಿಂದ ಇರಲಿ, ದೂರದಿಂದಲೂ ನೋಡಿರಲಿಲ್ಲವಾದ್ದರಿಂದ ಅವರ ಬಗ್ಗೆ ತಣಿಯದ ಕುತೂಹಲ. ಅದಾಗಷ್ಟೇ ಸಾಹಿತ್ಯದತ್ತ ನನ್ನ ಒಲವು ಹರಿದಿದ್ದರಿಂದಲೋ ಏನೋ, ಪಕ್ಕದಲ್ಲಿ ಬಂದು ಕುಳಿತ ವ್ಯಕ್ತಿಯ ಪರಿಚಯವಿಲ್ಲದಿದ್ದರೂ, 'ಆಕೆ ಕತೆ ಬರೀತಾಳೆ. ಗೊತ್ತುಂಟಾ?' ಎಂದು ದೂರದಿಂದ ಅವರನ್ನು ತೋರಿದಂದಿನಿಂದ ಕತೆ ಬರೆಯುವ ಅವರನ್ನೊಮ್ಮೆ ಹತ್ತಿರದಿಂದ ಕಾಣಬೇಕೆಂದು ನನ್ನೊಳಗೇ ಗುಟ್ಟಾಗಿ ಚಡಪಡಿಸುತ್ತಿದ್ದೆ ಅನ್ನಿಸುತ್ತೆ. ಬಹುಷಃ ಆ ಕಾರಣಕ್ಕಿರಬೇಕು, ನನ್ನ ಅತಿ ಸಮೀಪದಲ್ಲಿ ಕುಳಿತವರು ಕತೆ ಬರೆಯುವವರೆಂಬುದು ಸೂಜಿಗಲ್ಲಿನಂತೆ ನನ್ನನ್ನು ಸೆಳೆದಿದ್ದರಿಂದಲೋ ಏನೋ, ನಾನಂತೂ ಮಗ್ಗಲಿಗೇ ಕಣ್ಣು ಚೆಲ್ಲಿ ಕುಳಿತುಬಿಟ್ಟಿದ್ದೆ.

ನನಗೋ ಒಂದು ತರ ಬೆರಗು ಮತ್ತು ವಿಸ್ಮಯ. ಮಹಾ ಕುತೂಹಲ. ನನ್ನ ಅತೀ ಸಮೀಪದಲ್ಲಿ, ಅಂದರೆ ಪಕ್ಕದಲ್ಲೇ ಕತೆಗಾರ್ತಿ ಕುಳಿತಿದ್ದಾರೆ! ಕಛೇರಿಯ ಉದ್ದಕ್ಕೂ

ಅವರನ್ನು ಹಣಿಕಿ, ಹಣಿಕಿ ನೋಡುವುದೇ ಕೆಲಸ. ಹಾಗೆ ಕದ್ದು ಹಣಿಕಿ ನೋಡುವ ಪ್ರತಿ ಕ್ಷಣವೂ ಅದೆಂಥಾ ನಿರಾಶೆ! ಯಾವ ಬದಿಯಿಂದ ನೋಡಿದರೂ ಬರಹಗಾರ್ತಿ ತರಹ ಕಾಣಿಸುತ್ತಲೇ ಇಲ್ಲಾ. ಒಣಗಿದ ರೊಟ್ಟಿಯಂತಹ ಪುಟಾಣಿ ಹೆಂಗಸು ನನ್ನ ಮಗ್ಗುಲಲ್ಲಿ; ಸಣಕಲು ಅಂದರೆ ಆ ಮಟ್ಟದ ಸಣಕಲು. ಜೊತೆಗೆ ಅವರು ತಿರುಗಿದಾಗೆಲ್ಲಾ ಅವರೊಂದಿಗೇ ತಿರುಗುತ್ತಿರುವ ಮೋಟು ಜಡೆ ಬೇರೆ. ಅಂತಹ ಮೋಟು ಜಡೆಯ, ಇಷ್ಟು ಪುಟ್ಟ ಆಕೃತಿಯ ಸಣಕಲು ಹೆಣ್ಣು ಕತೆಗಾರ್ತಿಯೇ?

ನೂರಾರು ಬಾಲಿಶ ಯೋಚನೆಗಳು. ನನ್ನ ಚಿಕ್ಕಮ್ಮನ ಪ್ರಭಾವಕ್ಕೆ ಸಿಕ್ಕಿ ಬಿದ್ದಿದ್ದ ನನಗೆ, ಸಾಹಿತಿಗಳೂ, ಸಂಗೀತಗಾರರಂತೆ ಸದಾ ಗಂಭೀರ ಮುಖ ಮುದ್ರೆ ಒತ್ತಿಸಿಕೊಂಡು ರಾಜಗಾಂಭೀರ್ಯದಿಂದ, ಒಂದು ರೀತಿಯ ಗತ್ತಿನಲ್ಲೇ ಇರುತ್ತಾರೆಂಬ ನನ್ನದೇಯಾದ ಒಂದು ಮುಗ್ಧ ಕಲ್ಪನೆ. ಅದನ್ನೂ ಕೂಡಾ ನನಗರಿವಿಲ್ಲದೇ ನಾನು ಹಗೂರವಾಗಿ ಝೂಡಿಸಿಕೊಳ್ಳುತ್ತಿದ್ದಂತಹ ಸಮಯವದು. ಇಲ್ಲದಿದ್ದರೆ ಅವರನ್ನು ಲೇಖಕರೆಂದು ಯಾರೂ ಭಾವಿಸುವುದಿಲ್ಲವೆಂದುಕೊಂಡಿದ್ದ ನನಗೆ, ಈ ಯಾವ ಸೂತ್ರಕ್ಕೂ ಹೊಂದದ ಈಕೆ, ಕತೆಗಾರ್ತಿಯೇ ಎನ್ನುವುದೊಂದು ಯಕ್ಷಪ್ರಶ್ನೆ!

ನನ್ನ ದೊಡ್ಡಪ್ಪನ ಮೊಮ್ಮಕ್ಕಳು ಬೊಂಬಾಯಿಯಲ್ಲಿದ್ದರು. ರಜೆಗೆ ಶಿವಮೊಗ್ಗಕ್ಕೆ ಅಜ್ಜನ ಮನೆಗೆ ಬಂದಾಗೆಲ್ಲಾ ಆ ಮಕ್ಕಳು ನಮ್ಮ ಮನೆಗೆ ಬರುವುದಿತ್ತು. ಅವು ಕನ್ನಡ ಮಾತನಾಡುವ ರೀತಿಯೇ ಬೇರೆ. ಬರಹಗಾರ್ತಿಯಾಗಬೇಕಿದ್ದರೆ ಮೊದಲು ಕನ್ನಡವನ್ನು ತುಂಬಾ ಸ್ಟೈಲಿಶ್ ಆಗಿ ಮಾತನಾಡಲು ಕಲಿಯಬೇಕೆಂದು ಆ ಮಕ್ಕಳನ್ನು ನೋಡಿ ನನ್ನಲ್ಲೇ ಅಂದುಕೊಂಡು ಭ್ರಮಿಸುತ್ತಿದ್ದೆ. ಎಷ್ಟೋ ಸಲ ನಾನೂ ಕೂಡಾ ಗುಟ್ಟಾಗಿ ಅವರನ್ನು ಅನುಕರಿಸುತ್ತಲೂ ಇದ್ದೆ. ನನ್ನ ಮಗ್ಗುಲಲ್ಲಿರುವ ಕತೆಗಾರ್ತಿಯ ಬಾಯಿಯಿಂದ ಪಕ್ಕಾ ಕನ್ನಡ ಜಿಲ್ಲೆ ಭಾಷೆ ಕೇಳಿ ಯಾಕೋ ವಿಪರೀತ ಹತಾಶೆಯಾಗಿಬಿಟ್ಟಿತ್ತು!

ಯಾವ ಅಂಗುಲದಿಂದಲ್ಲೂ ನನ್ನ ನಿರೀಕ್ಷೆಯ ಕತೆಗಾರ್ತಿಯಾಗಿ ಕಾಣದ ಅವರನ್ನು, ಮಗುವನ್ನು ತಟ್ಟುವ ರೀತಿಯಲ್ಲಾಗಲೀ ಅಕ್ಕಪಕ್ಕದವರೊಡನೆ ಸಂಭಾಷಿಸುವಾಗಲಾಗಲೀ ಪುಟ್ಟ ಜಡೆ, ಮುದುರಿದ ಕಾಟನ್ ಸೀರೆ, ಪುಟ್ಟ ಮೈಕಟ್ಟಿನಲ್ಲಿಯಾಗಲೀ ಆ ಕತೆಗಾರ್ತಿ ಎಲ್ಲಿ ಅಡಗಿ ಕುಳಿತಿದ್ದಾಳೆಂದೇ ತಿಳಿಯದೆ ಪೆಚ್ಚುಪೆಚ್ಚಾಗಿ ಕಣ್ಣು ಪಿಳಿಪಿಳಿ ಮಾಡುತ್ತಾ, ಆ ಕತೆಗಾರ್ತಿಯನ್ನು ಹುಡುಕಿ ತೀರಲೇಬೇಕೆಂಬ ಹಟಕ್ಕೆ ಬಿದ್ದವಳಂತೆ, ಚುರುಕು ಕಣ್ಣು, ಚೂಪು ಮೂಗು, ಬಡಕಲು ಕೈಗಳನ್ನೇ ಹತಾಶೆಯಿಂದ ಮತ್ತೆ ಮತ್ತೆ ನಿಟ್ಟಿಸುತ್ತಾ, ಅವತ್ತಿನ ಸಂಗೀತವನ್ನು ಸಂಪೂರ್ಣ ಮರೆತು ಅವರತ್ತಲೇ ಕಣ್ಣು ನೆಟ್ಟು ಕೈಕಟ್ಟಿ ಕುಳಿತುಬಿಟ್ಟಿದ್ದೆ.

ವಿದ್ಯಾಗಣಪತಿಯ ಕಾರ್ಯ ಕಲಾಪಗಳಲ್ಲಿ ಸಿರಿಯಕ್ಕನ ಪತಿ ಸಕ್ರಿಯವಾಗಿದ್ದವರು. ನನ್ನ ಮಗ್ಗುಲಲ್ಲಿ ಕುಳಿತವರ ಪತಿ ಮತ್ತು ಅವರು ತುಂಬಾ ಆತ್ಮೀಯರಾಗಿದ್ದರಿಂದ, ಅವರ ಹೆಸರು ಶ್ರೀನಿವಾಸಮೂರ್ತಿಯೆನ್ನುವುದು ಗೊತ್ತಿತ್ತು. ವಿದ್ಯಾಗಣಪತಿ ಕಮಿಟಿಯಲ್ಲಿದ್ದ

ಅವರು. ಪ್ರತೀ ಕಾರ್ಯಕ್ರಮದ ಮುಕ್ತಾಯದಲ್ಲಿ ಸಮಾರೋಪ ಭಾಷಣ ಮಾಡುವುದು ಸಾಮಾನ್ಯವಾಗಿತ್ತು. ನನ್ನ ಮಗ್ಗುಲಲ್ಲಿ ಕುಳಿತಿರುವ ಅವರ ಪತ್ನಿಯ ಹೆಸರು 'ಜಾನಕಿ' ಎಂದು ಅವಳು ಹೇಳಿದ್ದು ನೆನಪು.

ಇದರ ಜೊತೆಗೆ ಇನ್ನೂ ಒಂದು ನೆನಪಾಗುತ್ತಿದೆ. ಆಗಿನ್ನೂ ವೈದೇಹಿಯವರ ಕತೆಗಳಿನ್ನೂ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿರಲಿಲ್ಲ. ಪರಿಚಿತರಿಗೆ ಅವರಿನ್ನೂ ಜಾನಕಿಯಾಗಿಯೇ ಉಳಿದಿದ್ದರೆಂದು ನೆನಪು.

ಸುಮಾರು ಅದೇ ಸಂದರ್ಭದಲ್ಲಿ ಕೆಲವರು ಸಿನಿಮಾಸಕ್ತರು ಶಿವಮೊಗ್ಗದಲ್ಲಿ ಫಿಲ್ಮ್ ಸೊಸೈಟಿಯೊಂದನ್ನು ಹುಟ್ಟು ಹಾಕಿದ್ದರು. ಭಾರತದ ಇತರ ಭಾಷಾ ಅಥವಾ ಹಿಂದಿ ಸಿನಿಮಾಗಳಿರಲಿ, ಕನ್ನಡ ಸಿನಿಮಾ ಕೂಡಾ ಬಹಳ ಅಪರೂಪವಾಗಿದ್ದ ನನಗೆ, ಅಲ್ಲಿ 'ಫಾರಿನ್ ಸಿನಿಮಾ' ತೋರಿಸುತ್ತಾರೆನ್ನುವುದು ನನ್ನ ಅಣ್ಣಂದಿರ ಚರ್ಚೆಗಳ ನಡುವೆ ಕೇಳಿ ಹಾಗಂದರೇನೆಂದು ಅರ್ಥವಾಗದಿದ್ದರೂ 'ಫಾರಿನ್' ಎನ್ನುವ ಪದ ನನ್ನ ಮೇಲೆ ಅಗಾಧವಾದ ಪರಿಣಾಮ ಬೀರಿದ್ದಂತಹ ಕ್ಷಣ. ಒಮ್ಮೆ ನಾನೂ ಬರುತ್ತೇನೆಂದು ಹಟ ಮಾಡಿ ಅಣ್ಣಂದಿರ ಜೊತೆಗೆ ಯಾವುದೋ ಫಾರಿನ್ ಸಿನಿಮಾ ನೋಡಲು ಹೋಗಿದ್ದೆ. ಸಿನಿಮಾ ಇನ್ನೇನು ಶುರುವಾಗಬೇಕೆನ್ನುವಷ್ಟರಲ್ಲಿ, ಯಾರೊಡನೆಯೋ ಮಾತನಾಡುತ್ತಾ ಒಳ ಪ್ರವೇಶಿಸಿದ, ಇನ್ನೂ ಕತೆಗಾರ್ತಿಯೋ ಅಲ್ಲವೋ ಎಂದು ನನ್ನೊಳಗೆ ಅನೇಕ ಸಂದಿಗ್ಧವನ್ನೂ, ಗೊಂದಲವನ್ನೂ ಹುಟ್ಟುಹಾಕಿದ್ದ ಜಾನಕಿಯವರು, ಸರಳವಾದ ಕಾಟನ್ ಸೀರೆಯಲ್ಲಿ ನಮ್ಮ ಅತೀ ಸಮೀಪದಲ್ಲಿ ಹಾದುಹೋದರು. ನನ್ನೊಬ್ಬ ಅಣ್ಣ ಮಗ್ಗುಲಲ್ಲಿದ್ದ ಮತ್ತೊಬ್ಬನ ಬಳಿ, 'ಮೊನ್ನೆ ಸುಬ್ಬಣ್ಣೋರು ಕಳುಹಿಸಿದ ಪುಸ್ತಕ ಇವರದ್ದೇ ಕಣೋ' ಎಂದು ಮಾತನಾಡಿಕೊಳ್ಳುತ್ತಿರುವುದು ಕೇಳಿ, ನನ್ನ ಕಿವಿ ಚುರುಕಾಗಿ, ಅನುಮಾನದಿಂದಲೇ, 'ಯಾರ ಪುಸ್ತಕ?' ಕೇಳಿದೆ.

'ಅದೇ ಅಲ್ಲಿ ಹೋದರಲ್ಲಾ, ಅವ್ರೇ. ಅವ್ರು ಕತೆ ಬರೀತಾರೆ..' ಮತ್ತೊಬ್ಬ ಅಣ್ಣ ಉತ್ತರಿಸಿದ.

'ಹೌದಾ? ಯಾರವರು?' ನನ್ನ ಮತ್ತೊಂದು ಪ್ರಶ್ನೆ.

'ವೈದೇಹಿಯಂತೆ. ಮೊನ್ನೆ ಚಿಕ್ಕಪ್ಪಯ್ಯ ಕಳುಹಿಸಿದ ಹೊಸ ಕತೆ ಪುಸ್ತಕ ಅವರದ್ದೇ ಅಂತೇ..'

ಸಿರಿಯಕ್ಕ ಜಾನಕಿ ಅಂದಿದ್ದು ಇವರನ್ನೇ ಅಲ್ವಾ? ಹಾಗಾದರೆ ವಿದ್ಯಾಗಣಪತಿಯಲ್ಲಿ ಕಂಡವರೇ ಬೇರೆ, ಇವರೇ ಬೇರೆಯೇ? ಮತ್ತೊಮ್ಮೆ ಕುತೂಹಲದಿಂದ ಇಣುಕಿ ನೋಡಿದರೆ ಅದೇ ಕೋಲು ಮುಖ, ಸಣಕಲು ಮೈಕಟ್ಟು.

'ಅವ್ರು ಜಾನಕಿ ಅಲ್ವಾ?' ಅಷ್ಟರಲ್ಲಿ ಸಿನಿಮಾ ಶುರುವಾಗುವ ಸೂಚನೆ ಸಿಕ್ಕಿದ್ದರಿಂದ ನನ್ನ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು.

ಅಂದು ಜಾನಕಿಯೇ ವೈದೇಹಿಯೆಂದು ಗಿರೀಶ ನನ್ನನ್ನು ತಿದ್ದಲು ಹೋಗಲಿಲ್ಲ. ಏಕೆಂದರೆ ಅವರಾಗಲೇ ವೈದೇಹಿಯಾಗಿದ್ದರೆಂದು ಅವನಿಗೆ ತಿಳಿದಿತ್ತೋ ಏನೋ. ಸುಮಾರು ಮೂವತ್ತು ವರುಷದ ನಂತರ 'ಗುಲಾಬಿ ಟಾಕೀಸ್' ನೋಡುತ್ತಾ ಈ ಎಲ್ಲಾ ಘಟನೆಗಳು ಸ್ಮತಿಪಟಲದಲ್ಲಿ ಮೂಡಿ ನನ್ನ ಮುಖದಲ್ಲೊಂದು ಕಿರು ನಗೆ. ಆದರೂ ಇವರು ವೈದೇಹಿಯಾಗಿದ್ದು ಯಾಕೆ? ಪ್ರಶ್ನೆ ಉಳಿದೇ ಹೋಯಿತ್ತಲ್ಲಾ? ಹೀಗೇ ಒಮ್ಮೆ ಯೋಚಿಸುತ್ತಿರುವಾಗ ನನಗೇ ಆಶ್ಚರ್ಯ. ಈ ಪ್ರಶ್ನೆಯನ್ನು ವೈದೇಹಿಯವರಲ್ಲೇ ನಾನ್ಯಾಕೆ ಕೇಳಲಿಲ್ಲ?

ಸಾವಿರದೊಂಬೈನೂರಾ ಎಂಭತ್ತೆಂಟರ ಸಮಯವಿರಬೇಕು. ನಾವಿನ್ನೂ ಮದರಾಸಿಗೆ ಹೋಗಿರಲಿಲ್ಲ. ವೈದೇಹಿಯವರು ಶಿವಮೊಗ್ಗ ಬಿಟ್ಟು ಉಡುಪಿಗೆ ಹೋಗಿ ನೆಲೆಸಿದ್ದರು. ಆಗಷ್ಟೇ ವೈದೇಹಿಯವರ ಕಾದಂಬರಿ, 'ಅಸ್ಪೃಶ್ಯರು' ಸುಧಾ ಕಾದಂಬರಿ ಸ್ಪರ್ಧೆಯಲ್ಲಿ ಬಹುಮಾನ ಪಡೆದು ಸುಧಾದಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಿತ್ತು. ನಾವು ಕುಟುಂಬ ಸಮೇತ ಕರಾವಳಿ ಕಡೆ ಹೊರಟವರು ಒಂದೆರಡು ದಿನಗಳು ವೈದೇಹಿಯವರ ಮನೆಯಲ್ಲಿ ಉಳಿಯುವ ಅವಕಾಶ ಒದಗಿ ಬಂದಿತ್ತು. ವೈದೇಹಿಯವರನ್ನು ಬಹಳ ಹತ್ತಿರದಿಂದ ನೋಡುವ, ಮಾತನಾಡುವ, ಅವರೊಡನೆ ಕುಂದಾಪುರದ ಅವರ ಮೂಲ ಮನೆಗೆ ಭೇಟಿ ಕೊಡುವ, ಮರವಂತೆ ಬೀಚ್‌ನ ಮೊರೆತವನ್ನು ಹತ್ತಿರದಿಂದ ಕೇಳುವ, ನದಿಯಲ್ಲಿ ದೋಣಿ ವಿಹಾರ ಮಾಡುವ, ಹಲವು ವಿಚಾರಗಳನ್ನು ಆಪ್ತರಾಗಿ ಹಂಚಿಕೊಳ್ಳುವ ಒಂದು ಸುವರ್ಣಾವಕಾಶವದು. ಅಂದು ಒಟ್ಟಿಗೇ ಅಷ್ಟೊಂದು ಸಮಯವನ್ನು ಕಳೆದಿದ್ದರೂ, ಅವರ ಹೆಸರಿನ ಬಗ್ಗೆ ನನಗಿದ್ದ ಜಿಜ್ಞಾಸೆಯನ್ನು ಬಗೆ ಹರಿಸಿಕೊಳ್ಳಲಾಗಿರಲಿಲ್ಲ.

ಅದಕ್ಕೆ ಕಾರಣ, ಬಹುಷಃ ಅಷ್ಟರೊಳಗಾಗಲೇ ವೈದೇಹಿಯವರ ಅನೇಕ ಕತೆಗಳನ್ನು ಓದಿ, ಅವರ ಬಹು ದೊಡ್ಡ ಅಭಿಮಾನಿ ಆಗಿದ್ದರಿಂದಿರಬಹುದು. ಅದಾಗಷ್ಟೇ ನವ್ಯ ತನ್ನ ಉಚ್ಛ್ರಾಯ ಸ್ಥಿತಿ ಕಳೆದುಕೊಂಡು ಪೇಲವವಾಗುತ್ತಾ ಬಂದಂತಹ ಸಂದರ್ಭವಿರಬೇಕು. ಆಗಿನ್ನೂ ಮುಂಚೂಣಿಗೆ ಬರುತ್ತಿದ್ದ ಕೆಲವು ಪ್ರಮುಖ ಲೇಖಕರು, ತಮ್ಮ ಕಥಾ ಅಭಿವ್ಯಕ್ತಿಯಲ್ಲಿ ವಿಭಿನ್ನತೆ, ಸಮಕಾಲೀನ ಅಭಿರುಚಿಗೆ ತಕ್ಕ ಸಶಕ್ತ ಭಾಷಾ ಬಳಕೆ, ತಂತ್ರ, ಕೌಶಲ್ಯದಿಂದೊಡಗೂಡಿದ ಕಲಾವಂತಿಕೆಯ ಹೆಣಿಗೆಯಲ್ಲಿ ತೊಡಗಿಕೊಳ್ಳುವ ಅನಿವಾರ್ಯತೆ ಬಂದಿತ್ತೆಂದು ಕಾಣುತ್ತದೆ. ವೈದೇಹಿಯವರು ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದ ಕೋಟ ಬ್ರಾಹ್ಮಣರ ಆಡುಭಾಷೆಯನ್ನು ತಮ್ಮ ಕತೆಗಳಲ್ಲಿ ಅಳವಡಿಸಿಕೊಳ್ಳುವುದರೊಂದಿಗೆ ತಮ್ಮ ಕತೆಗಳಿಗೆ ಅನನ್ಯವೆನ್ನಿಸುವಂತಹ ತೀರಾ ಸಹಜವಾದ ಪ್ರಾದೇಶಿಕತೆಯನ್ನು ತಂದು ಕೊಟ್ಟಿದ್ದು, ಈಗಾಗಲೇ ಸಾಕಷ್ಟು ವಿಮರ್ಶಕರು ಗುರುತಿಸಿರುವಂತಹ ಹಳೇ ವಿಚಾರ. ಇವತ್ತು ಕನ್ನಡ ಸಾಹಿತ್ಯದ ಅತ್ಯುತ್ತಮ ಲೇಖಕಿಯಾಗಿ ವೈದೇಹಿಯವರು ಮೂಡಿ ಬರುವುದಕ್ಕೆ ಅವರು ಉಪಯೋಗಿಸಿದ ಕುಂದಾಪುರದ ನೆಲದ ಕಂಪು, ಪ್ರಾಂತೀಯ

ಪದಗುಚ್ಛ, ನುಡಿಗಟ್ಟುಗಳ ಧಾರಾಳ ಪ್ರಯೋಗವೇ ಸಾಕ್ಷಿಯೆನ್ನುವುದು ಎಲ್ಲರಿಗೂ ತಿಳಿದಿದ್ದೇ. ವೈದೇಹಿಯವರ ಪ್ರಾತಿನಿಧಿಕ ಕಥೆಗಳಾದ 'ಅಕ್ಕು', 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು', 'ಅಮ್ಮಚ್ಚಿಯೆಂಬ ನೆನಪು', 'ಹಕ್ಕಿಲ್ಲದವರು', ಎಂಬ ಕಥೆಗಳೇ ಸಾಕು. ಅಕ್ಕುವಿನಲ್ಲಿ ಬರುವ ಕೆಲ ಪದ ಹಾಗೂ ವಾಕ್ಯ ಪ್ರಯೋಗ ನೋಡಿ: 'ಸವಾರಿ ಹೊರಡುವ ರಿವಾಜೂ ಅಕ್ಕುವಿಗುಂಟು', 'ಗುಮ್ಮಕ್ಕಿಯಂತೆ ಕುಳಿತರೂ ಕುಳಿತಳೇ', 'ಮೂಗು ಬಾಯಿ ಕೂಡಿಯಲ್ಲೆಲ್ಲ ಡೊಂಕುಡೊಂಕಾಗಿ ನಗೆ ಬಿಕ್ಕುತ್ತ', 'ಭರಾಕಿಂದ ಸುರಿದು ಉಣ್ಣುವುದೇ', 'ಬರೀ ಚೀಂಕಟೆಯಾಗಿದ್ದ', 'ಮಾತಾಡಲಿಕ್ಕೆ ಕೋರ್ಜಿಯುಂಟು'. 'ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು' ಕಥೆಯ ಕೆಲ ಪ್ರಯೋಗ ಹೀಗಿವೆ: 'ರಾತ್ರಿ ಒಂದ್ ಹುಂಡ್ ನಿದ್ದಿ ಬಿದ್ದಿದ್ರ್ ಹೇಳ್!', 'ಹೆಚ್ಚಿಗೆ ಹೈಲ ಮಾಡ್ಬೇಡ', 'ಹೊಸಲು ಹಾರಿ ಅಲ್ಲಿಂದ ಕುಟ್ಟಿ ಕೀಸಿಯಾನು', 'ಕಂಡವರ ಮನೆಗೆ ಹೇಳದೆ ಪರ್ಸಿ ಹೋಗಿ ಉಂಡು,' 'ಆ ಕ್ವಾಣೆಯೊಳ್ಗ್ ಹಂಯಿಂಸರ ಇಲ್ಲೆ', 'ಬರೀ ಆಡುಪಳೆಯಂತಿದ್ದವರೂ, ದುಡ್ಡು ಸೇರಿತೆಂದರೆ ಭರಮು ಬೇರೆಯೇ'.. ಕನ್ನಡ ಪದಕೋಶಕ್ಕೆ ಸೇರಿಕೊಂಡ ಆಡುಮಾತಿನ ಸೊಗಡು, ಸೊಬಗು ಸಮೃದ್ಧಗೊಳಿಸಿದ ಬಗೆಯಿದು. ಇದು ಕೇವಲ ಒಂದು ನಿದರ್ಶನವಷ್ಟೇ. ಪ್ರಾಂತೀಯತೆಗೆ ಒತ್ತುಕೊಟ್ಟು ಕಥೆಗಳನ್ನು ಹೆಣೆದ ಅನೇಕ ಲೇಖಕರಿಗೂ ಈ ಮಾತು ಅನ್ವಯಿಸುತ್ತದೆ. ಆದರೆ ವೈದೇಹಿಯವರು ಸೃಷ್ಟಿಸಿರುವ ಅನೇಕ ಪಾತ್ರಗಳು ಬಳಸುವ ಆಡುಮಾತುಗಳು ಸಹಜ ಗಮ್ಯದೊಂದಿಗೆ ಪಾತ್ರಕ್ಕೊಂದು ಘನತೆ ಹಾಗೂ ತಲ್ಲೀನತೆಯನ್ನು ತಂದುಕೊಟ್ಟು ಅವುಗಳನ್ನು ಬದುಕಿನಿಂದ ಬೇರ್ಪಡಿಸಲಾಗದ, ಕಥೆಯ ಸೀಮಿತ ಪರಿಧಿ ದಾಟಿ ಸಂಪೂರ್ಣವಾಗಿ ಆಚೆಗೆ ಸೆಳೆದುಕೊಳ್ಳುವಂತಹ ಪಾತ್ರಗಳಾಗಿ ಕಣ್ಣ ಮುಂದೆ ನಿಲ್ಲುವಂತೆ ಕಟ್ಟಿಕೊಡುವ ಕಲೆಗಾರಿಕೆ ನನ್ನನ್ನಂತೂ ಆನಂತರ ವಿಶೇಷವಾಗಿ ಆಕರ್ಷಿಸಿದ್ದು ನಿಜ.

ಬಾಲ್ಯದಲ್ಲಿ ಉದ್ದೇಶಪೂರ್ವಕವಾಗಿ ಆಡುಭಾಷೆಯನ್ನು ಬಿಟ್ಟು, ಶಿಷ್ಟ ಭಾಷೆಯ ಮೋಹಕ್ಕೆ ಒಳಗಾಗಿ, ಎಲ್ಲೋ ಒಂದು ರೀತಿಯ ಕೃತಕ ಭಾಷೆಯನ್ನು ನಾನು ಆಳವಡಿಸಿಕೊಂಡಿರುವೆನೇನೋ ಎಂದು ಎಷ್ಟೋ ಸಲ ನನಗೆ ಅನ್ನಿಸಿದ್ದಿದೆ. ಮಲೆನಾಡಿಗೇ ಸಹಜವಾದ ರಾಗ, ಆ ಏರಿಳಿತ, ಗ್ರಾಮ್ಯದ ಸೊಗಡು ನಮ್ಮ ಮಣ್ಣಿನ ಭಾಷೆಯಲ್ಲಿ ಕಟ್ಟಿಕೊಡಲು ಸಾಧ್ಯವಾಗದಿದ್ದರೆ ಕತೆಗೆ ಪೂರಕವಾದ ಮುಖ್ಯ ಓಘವೇ ಕುಂಟುತ್ತಿದ್ದರೆ, ಕತೆ ದಾಟಿಸುವಲ್ಲಿ ಅಸಫಲವಾದ ಹಾಗೆಯೇ. ವೈದೇಹಿಯವರ ಕತೆಯ ಆಳಕ್ಕೆ ಇಳಿಯುತ್ತಾ ನನಗೆ ಅರಿವಾಗುತ್ತಾ ಬಂದ ವಿಷಯವಿದು. ಹಾಗಾಗಿ ಆನಂತರ ಅವರ ಹೆಸರಿನ ಗೊಂದಲಕ್ಕಿಂತಾ ಈ ಗೊಂದಲವೇ ಹೆಚ್ಚಾಗಿ ನನ್ನನ್ನು ಕಾಡಿತ್ತೋ ಏನೋ?

ಮದರಾಸಿಗೆ ಹೋದ ಮೇಲೂ ವೈದೇಹಿಯವರೊಡನೆ ಸುಮಾರು ವರುಷ ಪತ್ರ ಸಂಪರ್ಕವಿತ್ತು. ಅವರ ಯಾವುದಾದರೂ ಕತೆ ಬಗ್ಗೆಯೋ, ಮತ್ತಾವುದೋ ವಿಷಯಗಳ ಕುರಿತೋ ಬರೆಯುತ್ತಿದ್ದೆನೇ ಹೊರತು ಈ ವಿಷಯ ಪ್ರಸ್ತಾಪಿಸಿರಲಿಲ್ಲ. ಕ್ರಮೇಣ ಅದು

ಕಡಿಮೆಯಾಗಿ ನಿಂತೇ ಹೋಯಿತೆನ್ನುವಷ್ಟರಲ್ಲಿ ಮದರಾಸು ಎಂಬ ಅಜ್ಞಾತವಾಸ ಮುಗಿಸಿಕೊಂಡು ನಾವೇ ಬೆಂಗಳೂರಿಗೆ ಬಂದುಬಿಟ್ಟಿದ್ದೆವು.

ನಾವು ಬೆಂಗಳೂರಿಗೆ ಬಂದು ಎರಡು ವರುಷಗಳ ನಂತರ, ಸುಚಿತ್ರಾದವರು ಏರ್ಪಡಿಸಿದ್ದ ಸರಸ್ವತಿಬಾಯಿ ರಾಜವಾಡೆ ನೂರರ ನೆನಪು ಕಾರ್ಯಕ್ರಮಕ್ಕೆ ಬೆಂಗಳೂರಿಗೆ ಬಂದ ವೈದೇಹಿಯವರು ನಮ್ಮ ಮನೆಗೂ ಬಂದಿದ್ದರು. ಅನೇಕ ವರುಷದ ನಂತರದ ಭೇಟಿ. ಅಷ್ಟು ವರುಷದ ನಂತರ ಅವರನ್ನು ಕಂಡು ನನಗೋ ಏನೇನೋ ನೆನಪು. ಸುಮಾರು ಇಪ್ಪತ್ತು ವರುಷದ ನಂತರ ಮತ್ತೊಮ್ಮೆ ಅವರನ್ನು ನೋಡುತ್ತಿದ್ದೆ. ಹೆಚ್ಚುಕಮ್ಮಿ ಐವತ್ತು ವರುಷಗಳ ಸುದೀರ್ಘ ಕಾಲದಿಂದ ಅವರನ್ನು ನೋಡುತ್ತಾ ಬಂದಿದ್ದರೂ ಒಂದಿನಿತೂ ಬದಲಾಗದವರಂತೆ ಕಂಡರವರು. ಅದೇ ತೆಳು, ಅದೇ ಕೋಲು ಮುಖ, ಅದೇ ಮಂದಹಾಸ. ಹೇಗೆ ಕೆಲ ವ್ಯಕ್ತಿಗಳು ವರುಷಗಳು ಸಂದರೂ ಬದಲಾಗುವುದಿಲ್ಲವೆಂಬ ಆಶ್ಚರ್ಯದೊಂದಿಗೆ, ಮುಂಚಿನ ನನ್ನವೇ ಬೆರಗಿನೊಂದಿಗೆ ಮತ್ತೊಮ್ಮೆ ಸಮೀಪದಿಂದ ಅವರನ್ನು ಕಂಡೆ.



# ಸರಳತೆಯ ಸಾಕಾರಮೂರ್ತಿ ವೈದೇಹಿ

✦ ಪಾರ್ವತಿ ಜಿ ಐತಾಳ್

ಸರಳತೆಯ ಸಾಕಾರ ಮೂರ್ತಿ ನನ್ನ ನೆಚ್ಚಿನ ಲೇಖಕಿ ವೈದೇಹಿ. ನಾನು ಕೇವಲ ಲೇಖಕಿಯಾಗಿ ಮಾತ್ರವಲ್ಲ, ಓರ್ವ ಸಾಮಾನ್ಯ ವ್ಯಕ್ತಿಯಾಗಿಯೂ ಅವರ ಸ್ನೇಹಪೂರ್ಣ ವ್ಯಕ್ತಿತ್ವವನ್ನು ಇಷ್ಟ ಪಡುತ್ತೇನೆ. ಸಾಹಿತ್ಯ ಕ್ಷೇತ್ರದಲ್ಲಿ ಅವರ ಎತ್ತರಕ್ಕೇರಿದ ಲೇಖಕಿಯರಿಗಿಂತ ಅವರ ಸ್ವಭಾವ ಭಿನ್ನವಾದುದು. ಅವರದೇನಿದ್ದರೂ ಬಿಚ್ಚು ಮನಸ್ಸಿನ ನೇರ ಮಾತು. ನಡುನಡುವೆ ಒಂದಿಷ್ಟು ತಿಳಿ ಹಾಸ್ಯ. ಕೆಲವೊಮ್ಮೆ ತಮ್ಮನ್ನೇ ಗುರಿಯಾಗಿಸಿ ಹಾಸ್ಯ ಮಾಡುವುದೂ ಇದೆ. ನಮ್ಮ ಕಷ್ಟ ಸುಖಗಳನ್ನು ತಮ್ಮದೇ ಎಂಬಂತೆ ಹಂಚಿಕೊಂಡು. ಸಮಸ್ಯೆಗಳಿಗೆ ಸಾಂತ್ವನ ಹೇಳುತ್ತ, ಸುಖದ ವಿಚಾರಗಳಿಗೆ ನಮಗಿಂತ ಹೆಚ್ಚು ಖುಷಿ ಪಡುತ್ತ ನಮ್ಮನ್ನು ತಂಗಿಯಂತೆ ಕಾಣುವ ಅವರನ್ನು ವೈದೇಹಿಯಕ್ಕಾ ಎಂದಲ್ಲದೆ ಬೇರೇನೆಂದು ಕರೆಯಲಿ?

ನಾನು ವೈದೇಹಿಯವರನ್ನು ಮೊದಲ ಬಾರಿ ಮುಖತಃ ಭೇಟಿಯಾಗಿದ್ದು ಅವರ ಹೀರಾಬಾಗ್‌ನ ಪುಟ್ಟ ಮನೆಯಲ್ಲಿ –1987ರಲ್ಲಿ. ಆಗಿನ್ನೂ ಅವರು ತಾರಾ ಪಟ್ಟದಲ್ಲಿದ್ದ ಲೇಖಕಿಯಾಗಿರಲಿಲ್ಲ. ನಾಡಿನ ಪ್ರಸಿದ್ಧ ಪತ್ರಿಕೆ–ನಿಯತಕಾಲಿಕಗಳಲ್ಲಿ ಅವರ ಕಥೆಗಳನ್ನು ಓದಿದ್ದೆ. ಅವರ ಮೊದಲ ಕಥಾ ಸಂಕಲನ, ಮತ್ತು ಒಂದು ಕವನ ಸಂಕಲನಗಳು ಮಾತ್ರ ಬಂದಿದ್ದವು. ನಾನು ಆಗಷ್ಟೇ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದ್ದೆ. ನನ್ನ ಕೆಲವು ಲೇಖನಗಳು ಮತ್ತು ಕಥೆಗಳು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಐದು ಭಾಷೆಗಳನ್ನ ಬಲ್ಲವಳಾಗಿದ್ದರಿಂದ ನನ್ನ ಕೆಲವು ಸಾಹಿತ್ಯಾಸಕ್ತ ಸಹೋದ್ಯೋಗಿ ಮಿತ್ರರು ಸಲಹೆ ನೀಡಿದರೆಂದು ನಾನು ಕಥೆಗಳನ್ನು ಇಂಗ್ಲಿಷ್, ಹಿಂದಿ ಮತ್ತು ಮಲಯಾಳಗಳಿಂದ ಕನ್ನಡಕ್ಕೆ ಅನುವಾದ ಮಾಡತೊಡಗಿದ್ದೆ. ಹಾಗೆ ಹಿಂದಿಯ ಉಪೇಂದ್ರನಾಥ ಅಶ್ಕ್ ಅವರ ಐದು ನೀಳ್ಗತೆಗಳನ್ನು ಅನುವಾದಿಸಿ 'ಅಶ್ಕರ ಕಥೆಗಳು' ಎಂಬ ಸಂಕಲನವನ್ನು ಹೊರತಂದಿದ್ದೆ. ಅದರ ಬಿಡುಗಡೆಗೆ ವೈದೇಹಿಯವರೇ ಸೂಕ್ತ ವ್ಯಕ್ತಿ ಎಂದು ನನಗನ್ನಿಸಿ ಅವರ ಹತ್ತಿರ ಕೇಳಲೆಂದು ಅವರ ಮನೆಗೆ ಹೋದೆ. ಆಗ ಮೊಬೈಲು ಬಿಡಿ, ಸ್ಥಿರ ದೂರವಾಣಿಯೂ ನಮಗೆ ಅನುಕೂಲವಾಗುವಂತೆ ಇರಲಿಲ್ಲ. ವೈದೇಹಿಯವರು ನಮ್ಮನ್ನು ಪ್ರೀತಿಯಿಂದ ಸ್ವಾಗತಿಸಿ

ಕಾಫಿ–ತಿಂಡಿಗಳನ್ನು ನೀಡಿ ಉಪಚರಿಸಿ, ಬಂದ ಕಾರಣವನ್ನು ಕೇಳಿದರು. ನಾನು ಹೇಳಿದಾಗ ಅವರು ಹೇಳಿದ ತೆರೆದ ಮನಸ್ಸಿನ ಮಾತುಗಳು ನನಗೆ ಇಂದೂ ಚೆನ್ನಾಗಿ ನೆನಪಿವೆ: 'ನೋಡಿ ಪಾರ್ವತಿ, ನಿಮ್ಮ ಪುಸ್ತಕ ಬಿಡುಗಡೆ ಮಾಡಲು ನನಗಿಂತ ದೊಡ್ಡ ವ್ಯಕ್ತಿಗಳು ಬೇಕಾದಷ್ಟು ಮಂದಿ ಇದ್ದಾರೆ. ನಾನು ಬರಲಾರೆ ಎಂದಲ್ಲ. ನೀವು ಪದ್ಮಾ ಶೆಣೈಯವರನ್ನು ಕೇಳಿ ನೋಡಿ. ಅವರು ತುಂಬ ಹಿರಿಯರು.' ಅಂದರು. ಹಾಗೆ ಪದ್ಮಾ ಶೆಣೈಯವರ ಮನೆಗೆ ಹೋಗಿ ಅವರನ್ನು ಕೇಳಿ, ಅವರು ಒಪ್ಪಿ ಆಮಂತ್ರಣ ಪತ್ರಿಕೆಯಲ್ಲಿ ಅವರ ಹೆಸರು ಹಾಕಿದ್ದೆ. ಜುಲೈ ತಿಂಗಳ ಒಂದು ಸಂಜೆಯದು. ಜೋರೋ ಎಂದು ಜಡಿ ಮಳೆ ಕುಟ್ಟಿತ್ತು. ಪದ್ಮಾ ಶೆಣೈಯವರಿಗಾಗಿ ಎಲ್ಲರೂ ಕಾಯುತ್ತಿದ್ದ ಹಾಗೆ 'ಅವರಿಗೆ ಹುಷಾರಿಲ್ಲವಂತೆ, ಅವರಿಗೆ ಬರಲಿಕ್ಕಾಗುವುದಿಲ್ಲವಂತೆ' ಎಂದು ಟೆಲಿಗ್ರಾಂ ಬಂತು. ಕೊನೆಗೆ ಪುಸ್ತಕದ ಬಗ್ಗೆ ಮಾತನಾಡಿ ಶುಭ ನುಡಿಗಳನ್ನಾಡಲು ಬಂದಿದ್ದ ಲೀಲಾವತಿ ಎಸ್.ರಾವ್ ಅವರೇ ಪುಸ್ತಕ ಬಿಡುಗಡೆ ನಡೆಸಿ ಕೊಟ್ಟಿದ್ದು ಇಂದು ಇತಿಹಾಸ.

ಮುಂದೆ ನಾನು ಕುಂದಾಪುರದ ಗಂಗಾಧರ ಐತಾಳ್‌ರನ್ನು ಮದುವೆಯಾಗಿ ಭಂಡಾರ್‌ಕಾರ್ಸ್ ಕಾಲೇಜಿಗೆ ವರ್ಗವಾಗಿ ಬಂದೆ. ಕುಂದಾಪುರ ವೈದೇಹಿಯವರ ತವರೂರು. ಅವರ ಅಣ್ಣ–ಪ್ರಸಿದ್ಧ ನ್ಯಾಯವಾದಿ, ಸಾಹಿತ್ಯ ಸೇನಾನಿ, ಮತ್ತು ಪ್ರಚಂಡ ವಾಗ್ಮಿ. ನಮ್ಮ ನೆಚ್ಚಿನ ಎ.ಎಸ್.ಎನ್. ಹೆಬ್ಬಾರ್ ಮನೆಗೆ ಆಗಾಗ ಹೋಗುವ ಪ್ರಸಂಗ ನನಗೂ ಒದಗಿ ಬರುತ್ತಿತ್ತು. ಅಲ್ಲದೆ ಅವರ ಪತ್ನಿ ಸುಧಾ, ಕಾಸರಗೋಡಿನಲ್ಲಿ ನನ್ನ ಸ್ನೇಹಿತೆಯಾಗಿದ್ದ ಶಶಿಯ ಅಕ್ಕ. ಹಾಗೆ ಅವರ ಮನೆಗೆ ಹೋದಾಗ ಕೆಲವೊಮ್ಮೆ ವೈದೇಹಿಯವರು ಭೇಟಿಗೆ ಸಿಗುತ್ತಿದ್ದರು. ನಮ್ಮ ಬಾಂಧವ್ಯ ಗಟ್ಟಿಯಾಗಲು ಈ ಅವಕಾಶಗಳೂ ಕಾರಣ.

ವೈದೇಹಿಯವರ ಕಥೆಗಳೆಂದರೆ ನನಗೆ ಜೀವ. ಕಥೆ ಹೇಳುವಾಗಿನ ಅವರ ವಿಶಿಷ್ಟ ಕಲೆಗಾರಿಕೆ, ಮೆಲುದನಿಯ ಅವರ ನಿರೂಪಣಾ ಶೈಲಿ, ಪಾತ್ರಗಳನ್ನು ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸುವ ಜಾಣ್ಮೆ ಯಾರಿಗಾದರೂ ಮೋಡಿ ಮಾಡುತ್ತಿತ್ತೆನ್ನಿ. 'ಅಕ್ಕು' ಕಥೆಯ ಅಕ್ಕು, 'ಅಮ್ಮಚ್ಚಿ ಎಂಬ ನೆನಪಿ'ನ ಅಮ್ಮಚ್ಚಿ, 'ಹಕ್ಕಿಲ್ಲದವರು' ಕಥೆಯ ಸಿರಿ ಮೊದಲಾದವರು ಓದುಗರ ಪಾಲಿಗೆ ಕೇವಲ ಕಥಾಪಾತ್ರಗಳಾಗಿ ಉಳಿಯುವುದೇ ಇಲ್ಲ. ಅವರು ನಮ್ಮ ಸ್ವಂತ ಜೀವನದಲ್ಲಿ ನಾವು ಕಂಡಿರುವ ಸಹಜ ವ್ಯಕ್ತಿಗಳೇನೋ ಅನ್ನಿಸುತ್ತದೆ. ಅವರ ಕಥಾಜಗತ್ತಿನಲಿ ಕಾಣುವ ಮಾನವ ಸಂಬಂಧಗಳು ನಮಗೆ ಚಿರಪರಿಚಿತವೆಂದು ಭಾಸವಾಗುತ್ತವೆ. ಗುಲಾಬಿ ಟಾಕೀಸ್, ಸೌಗಂಧಿಯ ಸ್ವಗತ, ಗೂಡಿನೊಳಗೆ ಒಂದು ಹಕ್ಕಿ, ಶಕುಂತಲೆಯೊಡನೆ ಒಂದು ಅಪರಾಹ್ನ, ಗುಲಾಬಿ ಮೃದು ಪಾದಗಳು, ಪುಟ್ಟಮ್ಮತ್ತೆ ಮತ್ತು ಮೊಮ್ಮಗಳು ಮೊದಲಾದ ಕಥೆಗಳು ನಮ್ಮ ಸ್ವಂತ ಅನುಭವಗಳಿಗೇ ಧ್ವನಿ ನೀಡುತ್ತಿವೆಯೇನೋ ಎಂಬಷ್ಟು ಆಪ್ತವಾಗಿ ಮರೆಯಲಾಗದ ರೀತಿಯಲ್ಲಿ ಮನಸ್ಸಿನಲ್ಲೇ ಉಳಿದು ಬಿಡುತ್ತವೆ. ಅವರ ಕವನಗಳೂ ಅಷ್ಟೇ. ಅಡುಗೆ ಮನೆಯ ಹುಡುಗಿ, ನೋಡಬಾರದು ಚೀಲದೊಳಗನು, ಶಿವನ ಮೀಸುವ ಹಾಡು ಸಾಹಿತ್ಯ ಚರಿತ್ರೆಯಲಿ ಶಾಶ್ವತ ಸ್ಥಾನ ಪಡೆದುಕೊಂಡ ಕವನಗಳು. ವೈದೇಹಿಯವರು ಏನೇ ಬರೆಯಲಿ– ಅದು ಕಥೆಯಾದರೂ,

ಪ್ರಬಂಧವಾದರೂ, ಕವನವಾದರೂ, ನಾಟಕವಾದರೂ, ಅನುವಾದವಾದರೂ ಅಲ್ಲಿ ಒಂದು ಆಪ್ತ ವಾತಾವರಣ ಸೃಷ್ಟಿಯಾಗುತ್ತದೆ ಎನ್ನುವುದು ವೈದೇಹಿಯವರ ಸಾಹಿತ್ಯದ ಬಗ್ಗೆ ನಾನು ಕಂಡುಕೊಂಡ ಸತ್ಯ

ಬಹುಶಃ 1997ನೇ ಇಸವಿಯಾಗಿರಬೇಕು. ಕುಂದಾಪುರ ಸಮುದಾಯದವರು ಏರ್ಪಡಿಸಿದ ಮಕ್ಕಳ ನಾಟಕೋತ್ಸವದ ಉದ್ಘಾಟನೆಗೆ ವೈದೇಹಿಯವರನ್ನು ಕರೆದಿದ್ದರು. ನಾನು ಅಲ್ಲಿ ವ್ಯವಸ್ಥಾಪಕರಲ್ಲೊಬ್ಬಳಾಗಿ ಓಡಾಡುತ್ತಿದ್ದೆ. ವೈದೇಹಿಯವರೊಂದಿಗೆ ಟೀ ಕುಡಿಯುತ್ತ ಕುಳಿತಿದ್ದೆ. 'ಏನು ಬರೆಯುತ್ತಿದ್ದೀರಿ, ಪಾರ್ವತಿ?' ಎಂದು ಅವರು ನನ್ನನ್ನು ಕೇಳಿದರು. ನಾನು ಆಗ ಪರ್ಲ್ ಎಸ್. ಬಕ್‌ಳ 'ಗುಡ್ ಅರ್ಥ್' ಕಾದಂಬರಿಯ ಅನುವಾದದ ಕೊನೆಯ ಹಂತಕ್ಕೆ ಬಂದಿದ್ದೆ. ನಾನು ವೈದೇಹಿಯವರಲ್ಲಿ ಅದನ್ನು ಹೇಳಿದಾಗ ಅವರು ತುಂಬಾ ಖುಷಿ ಪಟ್ಟರು. 'ನನ್ನದೇನೋ ಒಂದು ಸಣ್ಣ ಸಾಹಿತ್ಯ ಸೇವೆ' ಅಂತ ನಾನು ಸಂಕೋಚ ಪಟ್ಟುಕೊಂಡು ಹೇಳಿದಾಗ 'ನಮ್ಮೆಲ್ಲರದ್ದೂ ಸಣ್ಣ ಸೇವೆಯೇ. ಇಲ್ಲಿ ಯಾರೂ ದೊಡ್ಡವರಲ್ಲ ಪಾರ್ವತೀ. ನಾವೆಲ್ಲರೂ ಜತೆ ಜತೆಯಾಗಿಯೇ ಕೆಲಸ ಮಾಡುತ್ತ ಬೆಳೆಯಬೇಕಾದವರು' ಅಂದರು. 'ಅಬ್ಬ ಇವರ ಸರಳತೆಯೇ!' ಅಂದುಕೊಂಡೆ.

ಮಣಿಪಾಲದ ಅವರ ಮನೆಗೆ ಹೋದರೆ ಆತಿಥ್ಯದಲ್ಲೂ ಅವರದ್ದು ಎತ್ತಿದ ಕೈ. ಒಮ್ಮೆ ಗೆಳತಿ ಎಲ್.ಸಿ.ಸುಮಿತ್ರಾ ಅವರ ಜತೆಗೆ ವೈದೇಹಿಯವರ ಮನೆಗೆ ಹೋಗಿದ್ದೆ, ವೈದೇಹಿಯವರಿಗೆ ಅಡುಗೆಯಲ್ಲೂ ಎಲ್ಲಿಲ್ಲದ ಆಸಕ್ತಿ. ಅದೂ ಎಲ್ಲ ದೇಸಿ ತಿಂಡಿಗಳು ಮತ್ತು ಪದಾರ್ಥಗಳು. ಅಂದು ಅವರು ಊಟಕ್ಕೆ ನಮಗೆ ಬಡಿಸಿದ್ದರಲ್ಲಿ ತಂಬುಳಿ-ಗೊಜ್ಜುಗಳದ್ದೇ ಕಾರುಬಾರು. ನಗುನಗುತ್ತ, ತಿನ್ನಲು ಒತ್ತಾಯ ಮಾಡುತ್ತ ಅವರು ಬಡಿಸುತ್ತಿದ್ದಾಗ, ರಾಷ್ಟ್ರಮಟ್ಟದಲ್ಲಿ ಕಥೆಗಾರ್ತಿಯಾಗಿ ಹೆಸರು ಮಾಡಿರುವ ವೈದೇಹಿ ಇವರೇನಾ ಅನ್ನಿಸಿತ್ತು. ಅಡುಗೆಯಲ್ಲಿ ಅವರ ಇದೇ ಆಸಕ್ತಿಯೇ 2016ರಲ್ಲಿ ಮಣಿಪಾಲದ ಭಾರತೀಯ ಸಾಹಿತ್ಯ ಪೀಠದ ಅಧ್ಯಕ್ಷೆಯಾಗಿದ್ದ ಕಾಲದಲ್ಲಿ ಅವರು 'ಅಡುಗೆ ಮನೆ ಸಾಹಿತ್ಯ' ಎಂಬ, ಅದುವರೆಗೆ ಎಲ್ಲೂ ಯಾರೂ ಮಾಡದಿದ್ದ ಎರಡು ದಿನಗಳ ಒಂದು ವಿಶಿಷ್ಟ ವಿಚಾರ ಸಂಕಿರಣವನ್ನು ಏರ್ಪಡಿಸಿ ಅತ್ಯಂತ ಯಶಸ್ವಿಯಾಗಿ ಅದನ್ನು ನಿರ್ವಹಿಸಲು ಅವರಿಗೆ ಪ್ರೇರಣೆ ನೀಡಿರಬೇಕು. ಅದಕ್ಕೆ 'ನಿನ್ನ ಆಸಕ್ತ ವಿದ್ಯಾರ್ಥಿಗಳನ್ನೂ ಕರೆದುಕೊಂಡು ಬಾರೇ. ನಾನು ಅವರಿಗೆ ಇಲ್ಲಿ ಎಲ್ಲ ವ್ಯವಸ್ಥೆ ಮಾಡಿ ಕೊಡುತ್ತೇನೆ' ಎಂದು ವೈಯಕ್ತಿಕ ಆಮಂತ್ರಣವನ್ನೂ ನೀಡಿ. ನಾನು ನನ್ನ ಹತ್ತು ಮಂದಿ ವಿದ್ಯಾರ್ಥಿ-ವಿದ್ಯಾರ್ಥಿನಿಯರೊಂದಿಗೆ ಆ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸವಿ ಸವಿ ನೆನಪು ಇನ್ನೂ ಹಸಿರಾಗಿದೆ.

ನನ್ನ ಮೊದಲ ಅನುವಾದಿತ ಕಥಾ ಸಂಕಲನವನ್ನು ಬಿಡುಗಡೆ ಮಾಡದಿದ್ದರೂ ವೈದೇಹಿಯವರಿಂದ 2016ಲ್ಲಿ ನನ್ನ 'ಮಲಯಾಳದ ಪ್ರಸಿದ್ಧ ಪೆಣ್ ಕಥೆಗಳು' ಕೃತಿಯನ್ನು ಬಿಡುಗಡೆ ಮಾಡಿಸುವ ಅವಕಾಶ ದೊರಕಿದ್ದು ನನ್ನ ಅದೃಷ್ಟವೆಂದು ನಾನು ಭಾವಿಸುತ್ತೇನೆ. ತೀರಾ ಸರಳವಾಗಿದ್ದ ಆ ಕಾರ್ಯಕ್ರಮವು ಎ.ಎಸ್.ಎನ್.ಹೆಬ್ಬಾರ್ ಅವರ ಮನೆಯಲ್ಲೇ

ನಡೆಯಿತು. ನಾನು ಮಾಡಿದ ಅನುವಾದಗಳನ್ನೂ ನಾನು ಸ್ವತಂತ್ರವಾಗಿ ಬರೆದ 'ಅಚಲಾ' ಕಥಾ ಸಂಕಲನ, 'ಒಡಲ ಬೆಂಕಿ' ಕಾದಂಬರಿ, 'ತಂತ್ರಗಾರ್ತಿ' ಮಕ್ಕಳ ನಾಟಕ ಎಲ್ಲವನ್ನೂ ಮೆಚ್ಚಿ ಅವರಾಡಿದ ಪ್ರೋತ್ಸಾಹದ ನುಡಿಗಳು ನನಗೆ ಅವರ ಮೇಲಿನ ಪ್ರೀತಿ-ಗೌರವಗಳನ್ನು ಇನ್ನಷ್ಟು ಹೆಚ್ಚಾಗುವಂತೆ ಮಾಡಿವೆ.

ಮಲಯಾಳ ನನ್ನ ಮಾತೃಭಾಷೆಯಲ್ಲ. ನಾನು ಶಿಕ್ಷಣ ಪಡೆದ ಭಾಷೆಯೂ ಅಲ್ಲ. ನನ್ನ ಸ್ವಂತ ಆಸಕ್ತಿಯಿಂದ ಅಕ್ಷರಗಳನ್ನು ಕಲಿತು ನಿಧಾನವಾಗಿ ಎಡವುತ್ತ ತಡವುತ್ತ ರೂಢಿಸಿಕೊಂಡ ಭಾಷೆಯದು. ಆದ್ದರಿಂದ ಕನ್ನಡದಿಂದ ಮಲಯಾಳಕ್ಕೆ ಅನುವಾದ ಮಾಡಲು ಅಭ್ಯಾಸ ಮಾಡುವುದು ತುಂಬಾ ತಡವಾಯಿತು. ಆದರೂ ಮಾಡಲೇಬೇಕೆಂಬ ಛಲದಿಂದ ಕನ್ನಡದ ಹನ್ನೆರಡು ಮಂದಿ ಕಥೆಗಾರ್ತಿಯರ ಕಥೆಗಳನ್ನು ಅನುವಾದಿಸಿ 'ಕನ್ನಡ ಪೆಣ್ ಕಥಗಳ್' ಅನ್ನುವ ಕೃತಿಯನ್ನು ಪ್ರಕಟಿಸಿದ್ದೆ. ಅದರಲ್ಲಿ ವೈದೇಹಿಯವರ 'ಅಮ್ಮಚ್ಚಿ ಎನ್ನ ಓರ್ಮ' ಕೂಡಾ ಒಂದು. ವೈದೇಹಿಯವರ 'ಅಡುಗೆ ಮನೆಯ ಹುಡುಗಿ', 'ನೋಡಬಾರದು ಚೀಲದೊಳಗನು' ಮತ್ತು 'ಶಿವನ ಮೀಸುವ ಹಾಡು' ಕವಿತೆಗಳನ್ನು ಕೂಡಾ ಮಲಯಾಳಕ್ಕೆ ಅನುವಾದಿಸಿ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಿಸಿದ್ದೆ. ಕೇರಳದ ಸಾಹಿತ್ಯ ಪ್ರಿಯರಿಗೆ ವೈದೇಹಿ ಚಿರಪರಿಚಿತ ಹೆಸರು. ಅವರ 'ಅಕ್ಕು' ಕಥೆಯನ್ನು ತ್ರಿಶ್ಶೂರಿನ ಸಿ. ಕಮಲಾದೇವಿಯವರು ಅನುವಾದಿಸಿ ಕೇಂದ್ರ ಸಾಹಿತ್ಯ ಅಕಾಡೆಮಿಯವರ ಒಂದು ಸಂಕಲನದಲ್ಲಿ ಪ್ರಕಟಿಸಿದ್ದನ್ನು ನಾನು ನೋಡಿದೆ. ಇಂದು ನಾನು ಗಮನಿಸಿದ ಹಾಗೆ ಸಾಹಿತ್ಯ ಕ್ಷೇತ್ರದಲ್ಲಿ ಹೇಗೆ ಹೇಗೋ ನುಸುಳಿ ನುಗ್ಗಿ ಉನ್ನತ ಸ್ಥಾನದಲ್ಲಿ ರಾರಾಜಿಸುತ್ತಿರುವ ಕೆಲವು ಮಂದಿ ಸಾಹಿತಿಗಳು ತಮ್ಮ ಕೃತಿಗಳನ್ನು ಇತರ ಭಾಷೆಗಳಿಗೆ ಅನುವಾದಿಸಲು ಅನುವಾದಕರನ್ನು ಬೇಡಿ ಕಾಡಿ ಪೀಡಿಸುತ್ತಿರುವಾಗ ವೈದೇಹಿಯವರು ಯಾವ ಅನುವಾದಕರನ್ನೂ ಕೇಳದೆ ತಮ್ಮ ಕೃತಿಗಳ ಗುಣಮಟ್ಟದಿಂದಲೇ ಇತರ ಭಾಷೆಗಳ ಓದುಗರಿಗೆ ಲಭ್ಯವಾಗಿರುವುದು ಅವರ ಅಸಾಧಾರಣ ಕ್ಷಮತೆಗೆ ಸಾಕ್ಷಿ.

ವೈದೇಹಿಯವರು ತಮ್ಮ ಸಾಹಿತ್ಯ ಕೃತಿಗಳ ಉತ್ಕೃಷ್ಟ ಗುಣಗಳ ಮೂಲಕ ಮಾಡಿರುವ ಅದ್ಭುತ ಸಾಧನೆಗಳನ್ನು ಕಂಡು ಕರುಬುವವರು ಸಾಕಷ್ಟು ಮಂದಿ ಇದ್ದಾರೆ. ಆ ಕಾರಣದಿಂದ ಏನೇನೋ ಪೂರ್ವಗ್ರಹಗಳನ್ನು ಇಟ್ಟುಕೊಂಡು, ಯಾವ-ಯಾವುದೋ ಸಂದರ್ಭಗಳನ್ನು ಉದಾಹರಿಸಿ ಅವರ ಬಗ್ಗೆ ಇಲ್ಲಸಲ್ಲದ ಅಪಪ್ರಚಾರ ಮಾಡುವವರೂ ಇದ್ದಾರೆ. ಆದರೆ ಅವಾವುವೂ ನಿಜದ ಅಡಿಗಲ್ಲ ಮೇಲೆ ನಿಂತಿಲ್ಲವೆಂದು ತಿಳಿದಿರುವ ನನ್ನ ಪಾಲಿಗೆ ಅವರು ಯಾವಾಗಲೂ ಪ್ರೀತಿಯ ವೈದೇಹಿಯಕ್ಕ. ಅವರಿಗೆ 75 ವರ್ಷಗಳು ತುಂಬುತ್ತಿರುವ ಈ ಸಂದರ್ಭದಲ್ಲಿ ಅವರನ್ನು ಅಭಿನಂದಿಸಿ ಚಿರಕಾಲ ನೆನಪಿನಲಿ ಉಳಿಯುವಂತಹ ಒಂದು ಸಂಚಿಕೆಯನ್ನೂ ಹೊರ ತರುತ್ತಿರುವುದು ಅತ್ಯಂತ ಸಂತೋಷದ ವಿಚಾರ. ಅವರಿಗೆ ಒಳ್ಳೆಯ ಆರೋಗ್ಯ, ಆಯುಸ್ಸು, ನೆಮ್ಮದಿ ಮತ್ತು ಮನಶ್ಶಾಂತಿಗಳನ್ನು ದೇವರು ಕರುಣಿಸಲಿ ಎಂದು ನನ್ನ ಮನದಾಳದ ಹಾರೈಕೆಗಳೊಂದಿಗೆ ವಿರಮಿಸುತ್ತೇನೆ.



# ತಾಯಿಯಂತೆ... ಗೆಳತಿಯಂತೆ...

✦ ವಿದ್ಯಾ ಹೆಗಡೆ

ವೈದೇಹಿ ಎಂದ ಕೂಡಲೆ 'ವಿದೇಹರಾಜಪುತ್ರಿ' ಎಂಬ ಯೋಚನೆ ಬರುವುದು ಸಹಜ. ನಾನು ಹೇಳಹೊರಟಿರುವುದು ಅಂಥದ್ದೇ ಗಾಂಭೀರ್ಯ ಮತ್ತು ಅಂತಃಕರಣವುಳ್ಳ, ಕೆಲವೊಮ್ಮೆ ನನಗೆ ತಾಯಿಯಂತೆ, ಕೆಲವೊಮ್ಮೆ ಗೆಳತಿಯಂತೆ ದರ್ಶನ ಕೊಡುವ ಲೇಖಕಿ ವೈದೇಹಿಯವರ ಬಗ್ಗೆ.

ವೈದೇಹಿಯವರ ಪರಿಚಯ ನನಗಾದದ್ದು 1985ರಲ್ಲಿ; ನಾನು 'ನೀನಾಸಮ್' ಸೇರಿದ ಮೇಲೆ. ಅದರಲ್ಲೂ ಅಕ್ಷರನನ್ನು ಮದುವೆಯಾದ ಮೇಲೆ ಎಂದರೆ ತಪ್ಪಾಗಲಾರದು. ಕೆ.ವಿ.ಸುಬ್ಬಣ್ಣ ಮತ್ತು ಅಕ್ಷರ ಇವರಿಗೆ ಅತೀ ಆತ್ಮೀಯರಾಗಿದ್ದರಿಂದ ನನಗೂ ವೈದೇಹಿಯವರು ಆಪ್ತ ವ್ಯಕ್ತಿಯಾಗಲು ಹೆಚ್ಚು ಕಾಲವಾಗಲಿಲ್ಲ. ನಂತರದ ಎಷ್ಟೋ ವರುಷಗಳವರೆಗೂ ಅವರನ್ನ ನಾನು ತಿಳಿದಿದ್ದು ಕಡಿಮೆಯೇ ಆಗಿತ್ತು. ಆದರೆ ಒಮ್ಮೆ ಸಂಸ್ಕೃತಿ ಶಿಬಿರದಲ್ಲಿ ಅವರು ತಮ್ಮದೇ ಕಥೆಯನ್ನು ಓದಿದಾಗ, ಕವಿತೆಯನ್ನು ವಾಚಿಸಿದಾಗ ಅವರ ಬಗ್ಗೆ ಮತ್ತು ಅವರ ಎಲ್ಲ ಬರಹಗಳ ಬಗ್ಗೆ ಒಂದು ವಿಚಿತ್ರವಾದ ಆಸಕ್ತಿ ಹುಟ್ಟಿತು. ಜೊತೆಗೇ ಇಷ್ಟು ಹತ್ತಿರವಿದ್ದರೂ ಅವರನ್ನರಿಯಲು ಸಾಧ್ಯವಾಗದ ನನ್ನ ದಡ್ಡತನವೂ ಗೋಚರಿಸಿತು.

ಅವರ ಕಥೆ, ಕವಿತೆಗಳನ್ನ ಒಂದೊಂದಾಗಿ ಓದಲು ತೊಡಗಿದ ಸಂದರ್ಭದಲ್ಲಿ ನನ್ನ ಅದೃಷ್ಟವೋ ಎಂಬಂತೆ ಅಕಸ್ಮಾತ್ತಾಗಿ ಸಾಗರದ 'ಲಾಲ್‌ಬಹದ್ದೂರ್ ಶಾಸ್ತ್ರಿ' ಕಾಲೇಜಿನ ಪದವಿಯಲ್ಲಿ ಓದುತ್ತಿದ್ದ ಹುಡುಗಿಯರಿಗೆ ನಾಟಕ ನಿರ್ದೇಶಿಸುವ ಅವಕಾಶ ಒದಗಿಬಂತು. ಆಗ ವೈದೇಹಿಯವರ 'ಕ್ರೌಂಚಪಕ್ಷಿಗಳು' ಕಥೆಯನ್ನೇ ಆಯ್ಕೆ ಮಾಡಿಕೊಳ್ಳಬೇಕೆಂದು ನಿರ್ಧರಿಸಿದೆ. ನಿರ್ಧಾರ ಮಾಡಿದ ಮೇಲೆ ಗೊತ್ತಾಯಿತು– ಅದನ್ನು ರಂಗಪಠ್ಯವನ್ನಾಗಿಸಲು ನಾನೆಷ್ಟು ಶ್ರಮಪಡಬೇಕೆಂಬುದು. ಮತ್ತೆ ನನ್ನಲ್ಲಿದ್ದ ಇನ್ನೊಂದು ದೊಡ್ಡ ಕೊರತೆ – ನಮ್ಮ ದೇಶದ ವಿಭಜನೆಯ ದುರಂತವನ್ನು ನಾನಷ್ಟಾಗಿ ತಿಳಿಯದೇ ಇದ್ದಿದ್ದು. ಇಂಥ ಒಂದು ಸಂದರ್ಭವೇ ವೈದೇಹಿಯವರನ್ನು ಇನ್ನೂ ಹತ್ತಿರದಿಂದ ಅರ್ಥಮಾಡಿಕೊಳ್ಳಲು ಸಾಧ್ಯವಾಗಿಸಿದ್ದು ಮತ್ತೆ ಲೇಖಕಿಯಾಗಿ ಅವರಿಗಿದ್ದ ಬದ್ಧತೆಯನ್ನು ಅರಿವುಗೊಳಿಸಿದ್ದು.

ನಾಟಕದ ಎಲ್ಲ ಹೆಣ್ಣುಮಕ್ಕಳೂ ನನಗಿಂತಲೂ ಸಣ್ಣವರಾಗಿದ್ದರಿಂದ ವಿಭಜನೆಯ ದುರಂತವನ್ನು ವೈದೇಹಿಯವರಿಂದ ನಾನು ಮೊದಲು ಅರಿತು ಆಮೇಲೆ ಅವರಿಗೆಲ್ಲ ವಿವರಿಸುವುದು, ಅವರು ಕಮಲಾದೇವಿಯವರ ಸಂದರ್ಶನ ಮಾಡಿದ ಬಗೆಯನ್ನು ಹೇಳುವುದು ಅದನ್ನು ಅಲ್ಲಿನ ಹುಡುಗಿಯರಿಗೆ ತಿಳಿಸುವುದು – ಹೀಗೆ ನಾಟಕ ಕಟ್ಟಿ ನಿಲ್ಲಿಸಿದಾಗ ಕಥೆಯನ್ನೇನೋ ಒಂದು ಹಂತದಲ್ಲಿ ಅರ್ಥಮಾಡಿಕೊಂಡೆ ಎನ್ನಿಸಿತು. ಆದರೆ ಮುಂದೊಂದು ದಿನ ನಾನೇ ಸ್ವತಃ ಆ ಕಥೆಯಲ್ಲಿನ ಒಂದು ಪಾತ್ರವಾಗಿ ಅಭಿನಯಿಸಬೇಕಾಗಿ ಬಂದಾಗ ಇನ್ನೂ ಹೆಚ್ಚಿನ ರೀತಿಯಲ್ಲಿ ಚರ್ಚೆ ಪ್ರಾರಂಭಿಸಬೇಕಾಗಿ ಬಂತು.

ಸುಳ್ಳು-ಸತ್ಯ ಎನ್ನುವುದು ಯಾರ ಮೇಲೆ ಅಥವಾ ಯಾವುದರ ಮೇಲೆ ನಿಂತಿದೆ – ಎನ್ನುವ ಪ್ರಶ್ನೆ ನನ್ನನ್ನು ಯಾವಾಗಲೂ ಕಾಡುವಂತೆ ಈ ಕಥೆಯನ್ನು ಅಭಿನಯಿಸುವಾಗಲೂ ದಟ್ಟವಾಗಿ ಕಾಡಿತು. ಈ ಕಥೆಯ ತುದಿಯಲ್ಲಿ ಕಥೆಯನ್ನು ಕೇಳುತ್ತಾ ಕುಳಿತಿದ್ದ ಹೆಂಗಸರು ಕೇಳುವ ಪ್ರಶ್ನೆ 'ಅಶ್ವಾರ್ಣ ಭಟ್ಟರು ಹೇಳಿದ್ದು ಸುಳ್ಳೋ (ಸತ್ಯವೋ), ಲಕ್ಷ್ಮಮ್ಮ ಹೇಳಿದ್ದು ಸರಿಯೋ!?'. ಇದು ಏನನ್ನೋ ಬಚ್ಚಿಟ್ಟುಕೊಂಡಿದೆ ಎಂದು ವೈದೇಹಿಯವರಲ್ಲಿ ಕೇಳಿದಾಗ, 'ಅಯ್ಯೋ ನೋಡು, ಜನರಿಗೆ ಅವರಿಬ್ಬರ ನೋವಿಗಿಂತ ಯಾರು ಸತ್ಯ, ಯಾರು ಸುಳ್ಳು ಎಂದು ತೀರ್ಮಾನ ಕೊಡುವುದೇ ಮುಖ್ಯವಾಗಿಬಿಡುವ ದುರಂತ ಇದು' ಎಂದರು. ಈ ಮಾತಿನ ಹಿಂದಿರುವ ಸಂಕಟ ನನ್ನ ಅಂತರಂಗವನ್ನು ವ್ಯಾಪಿಸಿ, ಅದೇ ಸಂಕಟವೇ ನನ್ನ ಸುತ್ತಮುತ್ತಲಿನ ಸಮಾಜವನ್ನು ಅರಿಯುವುದಕ್ಕೆ ಮತ್ತು 'ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದ ಕಂಡು ನಗೆಯು ಬರುತಿದೆ' ಎಂದ ದಾಸವಾಣಿಯ ಮರ್ಮ ತಿಳಿಯುವುದಕ್ಕೆ ಸಾಧ್ಯವಾಯಿತೆಂದರೆ ತಪ್ಪಾಗಲಾರದು.

'ಪಾತ್ರದ' ಯೋಗ್ಯತೆ ದೊಡ್ಡದಿದ್ದು 'ಪಾತ್ರ ವಹಿಸುವವರ' ಯೋಗ್ಯತೆ ಕಡಿಮೆ ಇದ್ದರೆ ಏನಾಗುವುದೆಂಬುದು 'ಕ್ರೌಂಚಪಕ್ಷಿಗಳು' ಕಥೆಯಲ್ಲಿನ ಒಂದು ಪಾತ್ರ ಮಾಡುವಾಗ ನನ್ನ ಅರಿವಿಗೆ ಬರುವಂತೆ ಮಾಡಿದ್ದು ಕೂಡ ವೈದೇಹಿಯವರ ಒಡನಾಟವೇ. ಅದರಲ್ಲಿನ ಒಂದು ಪಾತ್ರ ಮಾಡುವಾಗ ವಿಭಜನೆಯ ದುರಂತವನ್ನು ವಿವರಿಸುವ ಸಂದರ್ಭದಲ್ಲಿ ನನ್ನ ಕಣ್ಣಲ್ಲಿ ನೀರು ಜಿನುಗಿತ್ತು, ಹತ್ತಿಕ್ಕಲಾರದಷ್ಟು ತಳಮಳ ನನ್ನಲ್ಲಿ ಹುಟ್ಟಿತ್ತು. ಅದನ್ನು ಎದುರಲ್ಲೇ ಕುಳಿತು ನೋಡುತ್ತಿದ್ದರು ವೈದೇಹಿ. ಯಾಕೋ ಸಮಾಧಾನವಾಗದೇ ನಂತರ ಅವರಲ್ಲಿ ಚರ್ಚಿಸಿದಾಗ 'ಇಲ್ಲ ಹಾಗಾಗಬಾರದು, ಯಾಕೆಂದರೆ ಆ ಪಾತ್ರ ಒಂದು ರೀತಿಯಲ್ಲಿ ಕಮಲಾದೇವಿಯವರೇ, ಅವರ ಗಟ್ಟಿತನವನ್ನು ನೀನು ನೆನಪಿಸಿಕೊಳ್ಳಬೇಕು' ಎಂದರು. ಇತಿಹಾಸದಲ್ಲಿ ಆಗಿ ಹೋದ ಒಂದು ಅದ್ಭುತ ವ್ಯಕ್ತಿಯನ್ನ ಒಂದು 'ಪಾತ್ರ'ವಾಗಿ ಅಭಿನಯಿಸುವ ಮೂಲಕವೇ 'ನಿನ್ನ ವ್ಯಕ್ತಿತ್ವವನ್ನ ರೂಪಿಸಿಕೊಳ್ಳಬೇಕು' ಎನ್ನುವ ಅರಿವನ್ನು

ಈ ಮಾತು ಹೇಳುವ ಮೂಲಕವೇ ಅವರು ನನಗೆ ತೋರಿಸಿಕೊಟ್ಟರೆ...? ಎನ್ನುವುದೊಂದು ಸ್ಮರಣೀಯ ಅನುಭವ.

ಅವರ ಇನ್ನೊಂದು ಕಥೆ 'ಗೂಡಿನೊಳಗೆ ಒಂದು ಹಕ್ಕಿ'. ನಾನು ಮಾಡಿದ ಆ ಕಥೆಯ ರಂಗಪ್ರಸ್ತುತಿಯು ನಾಟಕವಲ್ಲ, ಬದಲು ನನ್ನದೇ ಒಂದು ಏಕಾಂತದ ಸಂವಾದ ಎನ್ನುವಂತಹ ಅನುಭವವನ್ನು ಕೊಟ್ಟಿತು. ಹೀಗೆ ಹೇಳಲು ಒಂದು ಕಾರಣ ವೈದೇಹಿಯವರಾದರೆ, ಇನ್ನೊಂದು ಇದು ಹುಟ್ಟಿದ ಪ್ರಸಂಗ.

ಒಂದು ದಿನ ಅಕ್ಷರ ನನ್ನ ಬಳಿ ಬಂದು, ನೀನು ಈ ಕಥೆಯನ್ನು ಓದಿಕೊಂಡಿರು; ನಾನು ಅದರ ಬಗ್ಗೆ ಎಲ್.ಬಿ. ಕಾಲೇಜಿನಲ್ಲಿ ಮಾತಾಡಬೇಕಿದೆ ಎಂದರು. ಸರಿ, ಓದಲು ತೊಡಗಿದೆ, ಮೊದಲೇ ಓದಿದ್ದೆನಾದರೂ. ಕಾಲೇಜಿಗೆ ಹೋಗುವ ಹಿಂದಿನ ದಿನ 'ನೀನಾಸಮ್'ಗೆ ಹೊರಟವರು ರಾತ್ರಿ 8.30ಕ್ಕೆ ಬರುತ್ತೇನೆ, ಈ ಕಥೆಯನ್ನು ಯಾವುದಾದರೂ ಒಂದು ರೀತಿಯಲ್ಲಿ ಆಡಿ ತೋರಿಸು ಎಂದು ಹೇಳಿ ಹೋದರು. ನಾನಂತೂ ಅದೆಷ್ಟು ರೀತಿಯಲ್ಲಿ ಪ್ರಯತ್ನಪಟ್ಟೆನೆಂದರೆ ಒಂದೂ ದಕ್ಕಲಿಲ್ಲ. ಆದರೆ ಅದರ ಓದನ್ನು ನಡೆಸುತ್ತಿರುವ ಸಮಯದಲ್ಲಿ 'ತಾನ್ಪುರ'ವನ್ನು ಹಚ್ಚಿಟ್ಟು ಸಂಗೀತವನ್ನೂ ಅಭ್ಯಾಸ ಮಾಡುತ್ತಾ ಇದ್ದೆ. ಕಡೆಗೆ ಅಕ್ಷರ ಬಂದು ಕೇಳುವ ಹೊತ್ತಿಗೆ ಶ್ರುತಿಯೊಂದನ್ನು ಬಿಟ್ಟರೆ ತೋರಿಸಲು ನನ್ನಲ್ಲೇನೂ ಇದ್ದಿರಲಿಲ್ಲ. ಅಷ್ಟೂ ಹೊತ್ತು ಏಕಾಂತದಲ್ಲಿ ಅದರೊಳಗಿನ ಮಾತನ್ನು ನನ್ನದೇ ಎಂಬಂತೆ ಆಡಿದ್ದರೂ ಅದನ್ನೊಂದು ನಾಟಕದ ರೂಪದಲ್ಲಿ ತೋರಿಸಲು ನನಗಾಗಲೇ ಇಲ್ಲ. ಅಕ್ಷರನಿಗೆ ಏನನ್ನಿಸಿತೋ ಇದ್ದಕ್ಕಿದ್ದಂತೆ, 'ನೀನು ಒಂದು ಕೆಲಸ ಮಾಡು, ಹೀಗೇ ಸಂಗೀತವನ್ನು ಅಭ್ಯಾಸ ಮಾಡುವಾಗ ಕುಳಿತುಕೊಳ್ಳುತ್ತೀಯಲ್ಲ ಹಾಗೇ ಕುಳಿತು ಯಾವ ನಾಟಕೀಯ ಗುಣಗಳನ್ನೂ ತರದೆ ಈ ಕಥೆಯನ್ನ ಹೇಳಬೇಕು, ಬೇಕಾದರೆ ಮಧ್ಯೆ ಮಧ್ಯೆ ಪುಸ್ತಕವನ್ನ ತೆರೆದು ನೋಡಬಹುದು, 'ತಾನ್ಪುರ' ನುಡಿಯುತ್ತಿರಲಿ ಹೀಗೇ, ನಾನು ಸೂಚಿಸಿದ ಜಾಗದಲ್ಲಿ ಆಲಾಪ ಬರಲಿ' ಎಂದರು. ನನಗೆ ಒಂದು ಕ್ಷಣ ಇದು ಯಾವ ಬಗೆಯಲ್ಲಿ ಜರುಗಬಹುದು ಎಂಬುದರ ಕಲ್ಪನೆಯೂ ಸಿಗದೆ ಭಯ ಶುರುವಾಯಿತು. ಆ ಆತಂಕದ ಮಧ್ಯೆಯೇ ಆಲಾಪ ಮಾಡುತ್ತೇನೆ, ಆದರೆ ಆಲಾಪ ಬರುವ ಜಾಗವನ್ನು ಮಾತ್ರ ನೀನು ಸೂಚಿಸಬೇಕು ಹೀಗೇ ಬರಬೇಕು ಮತ್ತೆ ಇದೇ ರಾಗವೇ ಬರಬೇಕು ಎಂಬ ಕಟ್ಟನ್ನು ಮಾತ್ರ ಹಾಕಬೇಡ. ನಾಳೆ ಬೆಳಗ್ಗೆ ಯಾವ ರಾಗ ನನ್ನಿಂದ ಹೊರಡುತ್ತದೋ ಅದನ್ನೇ ಹಾಡುತ್ತೇನೆ ಎಂದು ಕೇಳಿಕೊಂಡೆ. ಅದಕ್ಕೆ ಒಪ್ಪಿಕೊಂಡರು.

ಮಾರನೆಯ ದಿನ ಪುಸ್ತಕ ಹಿಡಿದು ಹೊರಟೆ ಅಕ್ಷರನ ಜೊತೆ; ಜೊತೆಯಲ್ಲಿ ಒಂದು ಶ್ರುತಿ ಪೆಟ್ಟಿಗೆ. ಯಾವುದೇ ನಾಟಕವಿದ್ದರೂ ವಿಚಿತ್ರ ಮೌನ, ತಳಮಳ ನನ್ನಲ್ಲಿರುವುದು ಸಹಜ; ಯಾವ ಬೇರೆ ವಿಷಯಕ್ಕೂ ಗಮನ ಹರಿಸದೇ ಇರುವುದು ನನ್ನ ಎಂದಿನ ರೂಢಿ. ಆದರೆ ಆ ದಿನ ನನಗೆ ಕೊಟ್ಟ ಸಮಯ ಬೆಳಗ್ಗೆ 11.30ಕ್ಕೆ. ಮೊದಲು ಯಾರದೋ ಭಾಷಣ. ವಿಚಿತ್ರವೆಂದರೆ ಯಾವ ಆತಂಕವೂ ಇಲ್ಲವೇನೋ ಎನ್ನುವ ರೀತಿಯಲ್ಲಿ

ಕುಳಿತು ಕೇಳಿದೆ. ನಂತರ ನನ್ನ ಸರದಿ ಬಂದಾಗ ಒಂದು ಟೇಬಲ್ ಮೇಲೆ ಕುಳಿತು ಶ್ರುತಿ ಹಚ್ಚಿ ಓದಲು ಕುಳಿತೆ. ನನಗೇ ಗೊತ್ತಿಲ್ಲದಂತೆ ನನ್ನಿಂದ ಹೊರಟಿದ್ದು ಅಭೋಗಿ ರಾಗ. ಅದರ ಆಲಾಪಕ್ಕೆ ತೊಡಗಿ ಒಂದು ಹಂತದಲ್ಲಿ ಮಾತು (ಕಥೆ) ಶುರುಮಾಡಿದ್ದೆ. ಹಿಂದಿನ ದಿನದವರೆಗೂ ಇದನ್ನು ಈ ರೀತಿಯಲ್ಲಿ ಅಭ್ಯಾಸ ಮಾಡದವಳು ಅಂದು ಅಲ್ಲಿ ಹಾಗೆ ಹೇಳುತ್ತಾ ಹೊರಟಾಗ ಆ ಕಥೆಯ ಮಾಲತಿಯೇ ನಾನಾಗಿದ್ದೆ. ಅಮ್ಮನ ವಿಚಾರ ಬಂದಾಗ ಕಣ್ಣೀರು ಬಂತು. ಕೊನೆಯಲ್ಲಿ 'ಯಾರ ಅಡಚಣೆ ಇಲ್ಲದೆಯೂ ನಾನು ನನ್ನ ಸ್ವತಂತ್ರ ಗಳಿಗೆಗಳನ್ನು ಕತ್ತರಿಸಿಕೊಂಡಿದ್ದು ಯಾಕೆ...' ಎನ್ನುವ ಮಾತನ್ನಾಡುವಾಗ ಗಂಟಲು ಬಿಗಿದು ಬಂದಿತ್ತು. ಇದೆಂಥ ವಿಸ್ಮಯ. ವೈದೇಹಿ ಬರೆದ ಕಥೆಯನ್ನು ಆಡಲು ಹೊರಟಿದ್ದೋ ಅಥವಾ ಅವರೇ ನನ್ನೊಳಗೆ ಕುಳಿತು ನನ್ನಂಥ ಹಲವು ಹೆಣ್ಣುಗಳ ಹುಡುಕಾಟವನ್ನು ಈ ಮೂಲಕ ಕಾಣಿಸಿದ್ದೋ ಎನ್ನುವ ಪ್ರಶ್ನೆ ಹುಟ್ಟಿತ್ತು. ಯಾಕೆಂದರೆ ನಾನು, ನನ್ನದು, ನನಗಾಗಿ ಎಂದು ಹೊರಟಾಗ ಅದನ್ನೊಡೆದು ನಾವು ಎಂದು ಕಾಣಿಸುವ ಶಕ್ತಿ ಆ ಕಥೆಯಲ್ಲಿ ಮತ್ತೆ ಅದನ್ನು ಬರೆದ ವೈದೇಹಿಯವರಲ್ಲಿ ಕಂಡಿದ್ದರಿಂದ.

ಇನ್ನೊಂದು ಮುಖ್ಯ ಸಂಗತಿಯೆಂದರೆ, ಮುಂದೆ ಹಲವಾರು ಕಾಲೇಜುಗಳಲ್ಲಿ ವಿದ್ಯಾರ್ಥಿಗಳೆದುರು ಈ ಕಥೆಯನ್ನು ಪ್ರಸ್ತುತಪಡಿಸಿದಾಗ ಗಂಡಿನ ಸ್ವಾತಂತ್ರ್ಯ, ಹೆಣ್ಣಿನ ಸ್ವಾತಂತ್ರ್ಯದ ಬಗ್ಗೆ ಹೆಚ್ಚು ಚರ್ಚಿಸಲು ತೊಡಗಿ ನನ್ನೊಳಗೆ ನನ್ನಷ್ಟಕ್ಕೇ ಸೀಮಿತ ಪರಿಧಿಯಲ್ಲಿ ಅರ್ಥೈಸಿಕೊಂಡಿದ್ದ 'ಸ್ವಾತಂತ್ರ್ಯ' ಎನ್ನುವ ಶಬ್ದದ ಅರ್ಥವನ್ನು ಲೌಕಿಕದಲ್ಲಲ್ಲ ಬದಲು ತಾತ್ವಿಕವಾಗಿ, ಆಧ್ಯಾತ್ಮಿಕ ನೆಲೆಯಲ್ಲಿ ಹುಡುಕಬೇಕು ಎನ್ನುವ ಸೂಚನೆಯನ್ನು ಕಾಣಿಸಿಕೊಟ್ಟಿದ್ದೂ ಈ ಕಥೆಯೊಂದಿಗಿನ ಮತ್ತು ವೈದೇಹಿಯವರೊಂದಿಗಿನ ಅನುಸಂಧಾನವೇ.

ಒಮ್ಮೆ ಈ ಕಥೆಯನ್ನು ರಂಗದ ಮೇಲೆ ನಾನು ಪ್ರಸ್ತುತಪಡಿಸಿದ್ದನ್ನು ನೋಡಿದ ವೈದೇಹಿಯವರು 'ನಾನೇ ಬರೆದ ಶಬ್ದಗಳಿಗೆ ನಿನ್ನ ಜೀವ-ಭಾವವನ್ನ ಕೊಟ್ಟು ಅದು ನನಗೇ ಹೊಸತೆನ್ನುವಂತೆ, ಇದನ್ನು ನಾನು ಬರೆದೆನೆ ಎನ್ನುವ ವಿಸ್ಮಯ ಹುಟ್ಟುವಂತೆ ಮಾಡಿದೆಯಲ್ಲ' ಎಂದರು. ಇದರ ಜೊತೆಗೆ ಅವರ ಎರಡು ಅತ್ಯಮೂಲ್ಯ ಕಥೆಗಳನ್ನ ನನಗೆ ನೀಡಿ ಅದರ ಮೂಲಕ ನಾನು ಯಾರು, ಏನಾಗಿದ್ದೇನೆ, ಏನನ್ನು ಹೇಗೆ ಹುಡುಕಬೇಕು, ಹೇಗೆ ಅರ್ಥೈಸಬೇಕು ಎಂಬುದನ್ನು ಆಲೋಚಿಸಿ ಮುನ್ನಡೆಯುವಂತೆ ಮಾಡುತ್ತಿದ್ದಾರೆ.

ತಮ್ಮ ವಯಸ್ಸಿನ ಹಿರಿತನ ಮತ್ತು ಬೌದ್ಧಿಕ ಹಿರಿತನ ಇವೆರಡನ್ನೂ ಮಾತಿನ ಮೂಲಕ ತೋರಿಸದೇ ತಮ್ಮ ನಡಿಗೆಯೊಂದಿಗೆ ನನ್ನ ನಡಿಗೆಯನ್ನೂ ಬೆಸೆಯುವುದರ ಮೂಲಕ ಕಾಣಿಸಿಕೊಡುತ್ತಿರುವ ನಮ್ಮ ನಾಡಿನ ಅತ್ಯಮೂಲ್ಯ ಲೇಖಕಿ ವೈದೇಹಿಯವರು; ಆದಕಾರಣದಿಂದಲೇ ನನ್ನ ಪಾಲಿಗೆ ರಾಜಪುತ್ರಿ ವೈದೇಹಿಯಂತಹ ಅಂತಃಕರಣವುಳ್ಳ ತಾಯಿ ಮತ್ತು ಗೆಳತಿ.



# ವೈದೇಹಿ: ನಾನು ಕಂಡಂತೆ....

✦ ಕೆ ತಾರಾ ಭಟ್

ವೈದೇಹಿ ಹುಟ್ಟೂರು ಕುಂದಾಪುರ. ಅವರ ತಂದೆ ಎ.ವಿ.ಎಸ್ ಹೆಬ್ಬಾರ್. ಆ ಕಾಲದಲ್ಲೇ ಹೆಸರಾಂತ ವಕೀಲರು. ಐರೋಡಿ ಹೆಬ್ಬಾರ್ ಮನೆತನವೆಂದೇ ಖ್ಯಾತಿ ಪಡೆದಿದ್ದ ಮನೆತನ. ನಮ್ಮ ಹುಟ್ಟೂರು ಸಹಾ ಕುಂದಾಪುರ. ಆದರೆ ನಮ್ಮ ತಂದೆ ಪುರೋಹಿತರಾಗಿದ್ದ ಕಾರಣ ಬಾಲ್ಯದಲ್ಲಿ ಅಂದರೆ ನನಗೆ ನಾಲ್ಕು ವರುಷವಿದ್ದಾಗ ನಮ್ಮ ಇಡೀ ಕುಟುಂಬ ಕುಂದಾಪುರ ಪರಿಸರ ತೊರೆದು ಕೋಟೇಶ್ವರದಲ್ಲಿ ವಲಸೆ ಹೋಗಬೇಕಾಗಿ ಬಂದುದು ಮುಖ್ಯವಾಗಿ ಸಣ್ಣ ಮಕ್ಕಳಾದ ನಮಗೆ ತಲ್ಲಣ ತಂದ ಪರಿಸ್ಥಿತಿ. ಬಂದ ಮರು ವರ್ಷವೇ ನಮ್ಮ ಪ್ರೀತಿಯ ತಂದೆ ಕೋಟೇಶ್ವರ ರಥೋತ್ಸವ ಜಾತ್ರೆಯಲ್ಲಿ ಅಪಘಾತವಾಗಿ ಕೊನೆಯುಸಿರು ಎಳೆದುದೂ ಸಾವೆಂದರೆ ಏನೆಂದು ತಿಳಿಯದ ನಮಗೆ ದೊರಕಿದ ಇನ್ನೊಂದು ದುರಂತ. ಊರಿನ ಸಮಸ್ತರು ಸೇರಿ ವೈದಿಕರಾದ ಕಾರಣ ನಮ್ಮ ತಾಯಿ ಬಾಣಂತಿ ಹೊಲೆಯಿಂದ ಹೊರಬರಲಾರದ ಸ್ಥಿತಿಯಲ್ಲಿದ್ದರೂ ಅವಳ ಕೇಶಮುಂಡನ ಮಾಡಿ ವಿಧವೆಯನ್ನಾಗಿ ಮಾಡಿ ಕೆಂಪುಸೀರೆ ಉಡಿಸಿದುದು, ಇದೆಲ್ಲಾ ಸಣ್ಣವರಾದ ನಮ್ಮ ತಿಳುವಳಿಕೆಗೆ ನಿಲುಕದ ಸಂಗತಿಗಳು. ತಂದೆಯು ದೇವರ ಹತ್ತಿರ ಹೋಗಿದ್ದಾನೆ ಎಂದು ಎಲ್ಲರೂ ಹೇಳುತ್ತಿದ್ದುದು ನೋಡಿ ದೇವರು ಕರೆದ ಎಂದು ಇವರು ಯಾಕೆ ಹೋಗಬೇಕು ಎಂದು ತಂದೆ ಮೇಲೆ ಸಿಟ್ಟಾಗುತ್ತಿದ್ದೆ. ಕಾಲ ಕಳೆದ ಮೇಲೆ, ಅರ್ಥವಾದ ಹಾಗೆ ಯಾವುದೋ ಪರಕೀಯ ಭಾವ ಕಾಡತೊಡಗಿತ್ತು. ಇಂತಹ ಆಘಾತ ಆಗದೇ ಇದ್ದರೆ ಮಹಿಳಾ ಚಳುವಳಿಯನ್ನು ಎಡಕಣ್ಣಿನಿಂದಲೂ ನೋಡುತ್ತಿರಲಿಲ್ಲವೇನೋ. ಸ್ಥಾಪಿತ ಮೌಲ್ಯಗಳು ಅಸಹಾಯಕರ ಶೋಷಣೆಯನ್ನು ಯಾವ ಯಾವ ಮಟ್ಟದಲ್ಲಿ ವ್ಯವಸ್ಥಿತವಾಗಿ ಮಾಡುತ್ತವೆ ಎಂಬುದು ಅರ್ಥವಾಗತೊಡಗಿತ್ತು.

ವೈದೇಹಿಯವರ ಕತೆಗಳಲ್ಲಿ ಅಗೋಚರವಾಗಿಯೇ ನಡೆಯುತ್ತಿರುವ ಇಂತಹ ಕತ್ತಲ ಕೂಪಗಳನ್ನು ತಮ್ಮ ಬರವಣಿಗೆಯ ರೂಪಕಗಳ ಮೂಲಕ ಸಮರ್ಥವಾಗಿ ಅಭಿವ್ಯಕ್ತಿಗೊಳಿಸುತ್ತಾರೆ. ಅವರ ಕತೆಗಳು ಸರಳವಾಗಿ ಕಂಡರೂ ಅವು ನವ್ಯದ ದಾರಿಯಲ್ಲಿಯೇ ಒಂದು ಕತೆ ಹೇಳುತ್ತಾ ಇನ್ನೊಂದೇ ವಿಶದಪಡಿಸುತ್ತಾ ಪ್ರಜ್ಞೆಯ

ನೆಲೆಯಲ್ಲಿ ಶೋಧಿಸುವ ಪಾತ್ರಗಳು. ತೀರಾ ಲಘುವಾಗಿ ಹೇಳುವಾಗಲೂ ಅವರ ವಿಶಿಷ್ಟ ಶೈಲಿ ಸೋಗಿನ ವೈಚಾರಿಕತೆಯನ್ನು ನಿರಾಕರಿಸಿ ಅನುಭವದ ಗಟ್ಟಿತನವೇ ಅವರ ಬರವಣಿಗೆಯ ಹಿಂದಿದ್ದ ಬೆನ್ನೆಲುಬು. ಆಧುನಿಕ ಕನ್ನಡ ಸಾಹಿತ್ಯಕ್ಕೆ ಅಪೂರ್ವ ಧ್ವನಿಗಳನ್ನು ಕೊಟ್ಟ ವೈದೇಹಿ ವಿಮರ್ಶೆಯ ಸರಳ ವರ್ಗೀಕರಣಕ್ಕೆ ದಕ್ಕದ ಲೇಖಿಕಿ ಎಂದು ಪ್ರಶಂಸೆಗೆ ಒಳಗಾದವರು. ಅವರ ಎಲ್ಲಾ ಸಾಹಿತ್ಯ ಹಿಂದಿನವರ ಎಲ್ಲಾ ಸಾಹಿತ್ಯ ಪ್ರಯತ್ನಕ್ಕಿಂತ ಹೆಚ್ಚು ಪ್ರಚಲಿತವಾಗಿ ಹೆಚ್ಚೆಚ್ಚು ಚರ್ಚಿತವಾದವುಗಳು. ಕುಂದಾಪುರ ಭಾಷೆಯ ಸಾಮರ್ಥ್ಯ ಸಶಕ್ತವಾಗಿ ಬಳಸಿ ಕನ್ನಡ ಕಥನ ಸಾಹಿತ್ಯಕ್ಕೆ ಹೊಸಮಾದರಿಯನ್ನು ನೀಡಿದವರು. ಕನ್ನಡದ ಖ್ಯಾತ ವಿಮರ್ಶಕಿ ಡಾ.ಜಿ.ಎಸ್. ಸುಮಿತ್ರಾಬಾಯಿ ಹೇಳುವಂತೆ 'ಕನ್ನಡದ ನಾಡು ನುಡಿಗೆ ತುಂಬಾ ಮಹತ್ವದ ಕಾಣಿಕೆ ನೀಡಿರುವ ಕರಾವಳಿ ಪ್ರದೇಶದ ಕುಂದಾಪುರದ ಸಾಂಸ್ಕೃತಿಕ ಸುಗಂಧವನ್ನು ತಮ್ಮ ಬರಹದ ತುಂಬಾ ಚೀರುತ್ತಾ ಬಂದಿರುವ ಅಪರೂಪದ ಹಾಗೂ ಮಹತ್ವದ ಲೇಖಿಕಿ ವೈದೇಹಿ. ಅವರ ಕತೆಗಳು, ಕವಿತೆಗಳು, ಕಾದಂಬರಿ, ಹಾಗೂ ಅಂಕಣ ಬರಹಗಳು ಕರ್ನಾಟಕದ ಹೊರಗೆ ಭಾರತದ ನೆಲೆಯಲ್ಲೂ ಅಲ್ಲಿಂದಾಚೆಗಿನ ಜಗತ್ತಿನಲ್ಲೂ ಓದುಗರನ್ನು ಪಡೆದು ಖ್ಯಾತಿ ಪಡೆದಿವೆ. ಸಾಹಿತ್ಯದ ಬೇಸಾಯದಲ್ಲಿ ನಿರಂತರವಾಗಿ ತೊಡಗಿರುವ ವೈದೇಹಿ ಎಲ್ಲಾ ಪ್ರಕಾರಗಳಲ್ಲೂ ಕೃತಿ ರಚನೆ ಮಾಡುತ್ತಾ ಅದರಲ್ಲಿ ವೈಯಕ್ತಿಕ ತೀವ್ರತೆ, ಉತ್ಕಟತೆ ಹಾಗೂ ಸೃಷ್ಟಿಶೀಲ ಆರ್ದ್ರ ಭಾವವೊಂದು ಅಂತರ್‌ವಾಹಿನಿಯಾಗಿ ಸೇರಿರುತ್ತದೆ.' ಎಂದು ತಮ್ಮ ಪುಸ್ತಕ– 'ನೆಲದ ಸುರಭಿ: ಮನದ ಮಾರುತ–ವೈದೇಹಿ'ಯಲ್ಲಿ ಪ್ರಸ್ತಾಪಿಸಿದ್ದಾರೆ.

ನಮಗೆ ಕುಂದಾಪುರ ಕನ್ನಡದ ಬಗ್ಗೆ ಒಂದು ರೀತಿಯ ಕೀಳರಿಮೆ ಇತ್ತು. ಆದರೆ ವೈದೇಹಿ ಕುಂದಾಪುರ ಜನರ ನಿಜದನಿಯ ಸೊಗಡನ್ನು ತಮ್ಮ ಬರವಣಿಗೆ ಮೂಲಕ ಆ ಭಾಷೆಗೇ ಒಂದು ಅದ್ಭುತ ರಮ್ಯ ದೇಸಿಗುಣದಿಂದ ಕನ್ನಡ ಸಂಸ್ಕೃತಿ ಕಥನ ನಿರ್ಮಾಣದಲ್ಲಿ ಮಹತ್ವದ ಸ್ಥಾನ ದೊರಕಿಸಿಕೊಟ್ಟವರು. ತಮ್ಮ ಭಾಷೆ ಹಾಗೂ ಬರವಣಿಗೆ ಪ್ರವೃತ್ತಿಯನ್ನು ಅನನ್ಯ ತಾದಾತ್ಮ್ಯದಿಂದ ಪ್ರೀತಿಸಿದವರು ಹಾಗೂ ಅದನ್ನು ಜೀವನ ಪ್ರೀತಿಯ ಭಾಗವೆಂದೇ ಬಗೆದವರು. ಅವರ ಸೃಜನಶೀಲತೆಯ ಹರಹು ಸಣ್ಣ ಕಥಾ ಸಂಕಲನ, ಕಾದಂಬರಿ, ಮಕ್ಕಳ ನಾಟಕಗಳು, ಜೀವನ ಚರಿತ್ರೆ, ಸಂದರ್ಶನಗಳು, ಕವಿತೆಗಳು, ಅನುವಾದಗಳು ಹೀಗೆ ಬಹುಮುಖಿ ವ್ಯಾಪಿಸಿ ತಮ್ಮ ಪ್ರಜ್ಞೆಯ ವ್ಯಾಪ್ತಿ ಹಿಗ್ಗಿಸಿಕೊಂಡವರು. ಅದಕ್ಕೆ ತಕ್ಕಂತೆ ಅವರ ಪತಿ ಶ್ರೀನಿವಾಸಮೂರ್ತಿಯ ಸಹಕಾರವಿಲ್ಲದೇ ಇದ್ದರೆ ಅವರಿಗೆ ಅಷ್ಟೊಂದು ಸಾಧನೆ ಮಾಡಲು ಸಾಧ್ಯವಾಗುತ್ತಿರಲಿಲ್ಲವೇನೋ.

ಒಟ್ಟಿನಲ್ಲಿ ಅವರ ಒಡನಾಟದಲ್ಲಿ ನಾನು ಕಂಡಿದ್ದು ತಮ್ಮ ಸಾಹಿತ್ಯಿಕ ಸಾಧನೆಗಳ ನಡುವೆ ವೈಯಕ್ತಿಕ ಆತ್ಮೀಯತೆಗಳ ಕ್ಷಣಗಳನ್ನು ಕಡೆಗಣಿಸದೇ ಪರಸ್ಪರ ವ್ಯಕ್ತಿ ಸಂಬಂಧಗಳಿಗೂ ಅವರು ತೋರಿಸುವ ಕಾಳಜಿ, ಅದರಾಚೆ ಇರುವ ಮಾನವೀಯ ಸ್ಪರ್ಶಗಳಿಗೆ ಸ್ಪಂದಿಸುವ

ಆಪ್ತತೆ, ಅವರ ಬರಹಗಳಲ್ಲಿರುವ ಸೃಜನಶೀಲತೆಯ ತೀವ್ರತೆ, ಬದ್ಧತೆಯ ಹಾಗೇ ಮಾನವ ಸಂಬಂಧಗಳಲ್ಲಿಯೂ ಅನನ್ಯ ಆರ್ದ್ರತೆ, ಆಪ್ತತೆ ಇರುತ್ತಿತ್ತು. ಈ ಕಾರಣದಿಂದಲೇ ಅವರು ಅಪಾರ ಅಭಿಮಾನಿ ಬಳಗ ಹೊಂದಿರುತ್ತಾರೆ.

ಸಾಹಿತ್ಯದಲ್ಲಿ ಅನುವಾದದ ಪಾತ್ರ ಮಹತ್ವದ್ದು. ಕನ್ನಡ ಪ್ರಜ್ಞೆಯ ವಿಕಾಸಕ್ಕೆ ಇದು ಅಗತ್ಯವೂ ಹೌದು. ಬೇರೆ ಬೇರೆ ಭಾಷೆಗಳಲ್ಲಿರುವ ಉತ್ತಮವಾದದ್ದು ಕನ್ನಡಕ್ಕೆ ಸಿಗಬೇಕು ಎನ್ನುವ ಆಕಾಂಕ್ಷೆ ವೈದೇಹಿಯವರದು. ಅವರು ಯಶಸ್ವೀ ಅನುವಾದಕರೂ ಹೌದು. ಬೇರೆ ಭಾಷೆಯ ಉತ್ತಮ ಕೃತಿಗಳ ಪ್ರಾಮಾಣಿಕ ಓದಿನಿಂದ ಕನ್ನಡೀಕರಿಸಿ ಕೊಟ್ಟಿದ್ದಾರೆ. 'ಭಾರತೀಯ ಮಹಿಳೆಯರ ಸ್ವಾತಂತ್ರ ಹೋರಾಟ' (ಮೂಲ: ಕಮಲಾದೇವಿ ಚಟ್ಟೋಪಾಧ್ಯಾಯ), 'ಬೆಳ್ಳಿಯ ಸಂಕೋಲೆಗಳು'(ಮೂಲ:ಮೈತ್ರೇಯಿ ಮುಖ್ಯೋಪಾಧ್ಯಾಯ), 'ಅಕ್ಕತಂಗಿಯರು'(ಮೂಲ: ಆಂಟನ್ ಚೆಕಾಫ), 'ಸೂರ್ಯ ಕಿನ್ನರಿಯರು'(ಮೂಲ: ಸ್ವಪ್ನಾ ದತ್ತ) ಮಾತ್ರವಲ್ಲದೇ ಭಾಸ್ಕರ್ ಚಂದಾವರ್ಕರ್ ಅವರ ಸಂಗೀತ ಉಪನ್ಯಾಸಗಳ ಅನುವಾದ-'ಸಂಗೀತ ಸಂವಾದ' ಭಾರತದಲ್ಲೇ ಈ ಪ್ರಕಾರದ ಏಕೈಕ ಕೃತಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಅವರ ಯಾವುದೇ ಅನುವಾದ ಓದುವ ಭಾಗ್ಯ ನನಗೆ ದೊರಕಿಲ್ಲ. ಆದರೆ ಮೈತ್ರೇಯಿ ಮುಖ್ಯೋಪಾಧ್ಯಾಯ ಅವರ 'ಸಿಲ್ವರ್ ಶ್ಯಾಕಲ್ಸ್' ಕನ್ನಡಕ್ಕೆ ವೈದೇಹಿ ಅನುವಾದಿಸಿದ 'ಬೆಳ್ಳಿಯ ಸಂಕೋಲೆಗಳು' ನನ್ನ ಆಸಕ್ತಿಯ ವಿಷಯವಾದ ಕಾರಣ ಅವರಲ್ಲಿ ಕೇಳಿ ಪಡೆದುಕೊಂಡೆ.

ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ನೆಲೆಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ವಿಶೇಷವಾಗಿ ಗುರುತಿಸುವ ಪ್ರಯತ್ನ ಮಾಡುತ್ತಿರುವ ಮೈತ್ರೇಯಿ ಮುಖ್ಯೋಪಾಧ್ಯಾಯ, ಮಹಿಳೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಅನೇಕ ಕೃತಿಗಳನ್ನು ಇಂಗ್ಲಿಷಿನಲ್ಲಿ ರಚಿಸಿದ್ದಾರೆ. 'Silver Shackles (Women and Development)' ಪುಸ್ತಕದ ಅನುವಾದವನ್ನು ವೈದೇಹಿಯವರು ಕನ್ನಡಕ್ಕೆ 'ಬೆಳ್ಳಿಯ ಸಂಕೋಲೆಗಳು: ಭಾರತದಲ್ಲಿ ಹೆಂಗಸರ ಸ್ಥಿತಿಗತಿಯ ಅಧ್ಯಯನ' ಎಂದು ಅನುವಾದಿಸಿದ್ದಾರೆ.

ಭಾರತದಲ್ಲಿನ ಮಹಿಳೆಯರ ಸಂಕಥನವಾದ ಈ 'ಬೆಳ್ಳಿಯ ಸಂಕೋಲೆಗಳು' ಎನ್ನುವ ಸಂಶೋಧನಾ ಬರಹಗಳನ್ನು ಒಳಗೊಂಡ ಕೃತಿ. ಅಂತಾರಾಷ್ಟ್ರೀಯ ಮಹಿಳಾ ವರ್ಷ ಮತ್ತು ಮಹಿಳಾ ದಶಕಗಳು ಘೋಷಣೆಗೊಂಡು ಸ್ತ್ರೀವಾದೀ ಪ್ರಜ್ಞೆ ಹದಗೊಳ್ಳುತ್ತಿದ್ದ ಸಂದರ್ಭದಲ್ಲಿ ಮಹಿಳೆ ಎನ್ನುವುದು ಜೈವಿಕತೆ ಮಾತ್ರವಲ್ಲ, ಅದೊಂದು ಸಾಂಸ್ಕೃತಿಕ ಅಸ್ಮಿತೆ. ಮಹಿಳಾ ಸಮಸ್ಯೆಗಳು ದೇಶ, ಕಾಲ, ಜಾತಿ, ಧರ್ಮ, ವರ್ಗಗಳಿಂದ ಬೇರೆಯಾಗಿದ್ದರೂ ಅವುಗಳ ಮುಖ್ಯ ಕಾರಣ ಮಹಿಳೆ ಎನ್ನುವ ತಿರಸ್ಕಾರವೇ ಎಂಬ ಸ್ಪಷ್ಟತೆಯಲ್ಲಿ ನಿಜನೆಲೆಗಳ ಹುಡುಕಾಟದಲ್ಲಿ ತೊಡಗಿದ ಮಹತ್ವದ ಕೃತಿ. ಮುಖ್ಯವಾಗಿ ಗ್ರಾಮೀಣ ಮಹಿಳೆಯರಿಗೆ

ಸಂಬಂಧಿಸಿದಂತೆ ನಡೆದ ವಿದ್ಯಮಾನಗಳನ್ನು ಸಾಕ್ಷಿಪ್ರಜ್ಞೆಯಿಂದ ಗಮನಿಸಿದವರಾಗಿ ಈ ಸಂಬಂಧವಾಗಿ ಅವರ ಸ್ಪಂದನ ಗಮನಾರ್ಹವಾದುದು. ಅಭಿವೃದ್ಧಿ ಮತ್ತು ಆಧುನಿಕತೆಯು ಮಹಿಳಾ ವಿಷಯದಲ್ಲಿ ಹುಟ್ಟುಹಾಕಿದ ಭ್ರಮೆಯನ್ನು ತೀವ್ರವಾಗಿ ಮುಖಾಮುಖಿ ಯಾಗಿಸುತ್ತದೆ. ಮತ್ತು ಅಷ್ಟೇ ಗಾಢವಾಗಿ ಸ್ತ್ರೀವಾದವು ಗ್ರಾಮೀಣ ವಲಯದ ಮಹಿಳಾ ಬದುಕನ್ನು ಅಲಕ್ಷಿಸಿ ಮಧ್ಯಮವರ್ಗದ ಮಹಿಳಾ ಸಮಸ್ಯೆಗಳಿಗೆ ಆದ್ಯತೆ ಕೊಟ್ಟ ಕಾರಣಕ್ಕಾಗಿಯೇ ದುರ್ಬಲವಾಗಿದೆ ಎಂಬ ಅರಿವಿನ ಹಾದಿಯನ್ನು ತೆರೆಯುತ್ತದೆ. ಇವತ್ತು ನಮ್ಮ ದೇಶದ ಅನೇಕ ಮಹಿಳೆಯರ ಮುಂದಿರುವ ಸಮಸ್ಯೆ ಸಮಾನತೆಯದಲ್ಲ, ಅಸ್ತಿತ್ವದ್ದು- ಬದುಕಿ ಉಳಿಯುವುದು ಹೇಗೆ ಎಂಬುದು ಎನ್ನುವ ಮಹಿಳೆಯರ ಅಸ್ತಿತ್ವದ ಪ್ರಶ್ನೆಯನ್ನು, ಮಹಿಳಾ ಚಳುವಳಿಯ ಕೊರತೆಯನ್ನು ಮೈತ್ರೇಯಿ ಇಲ್ಲಿ ಪ್ರಶ್ನಿಸುತ್ತಾರೆ. ಪ್ರಾಚೀನ ಕಾಲದಿಂದಲೂ ಹೆಣ್ಣನ್ನು ವ್ಯವಸ್ಥಿತವಾಗಿ ಗಂಡು ತನಗೆ ಬೇಕಾದಂತೆ ಬಳಸಿಕೊಳ್ಳುವ ಹುನ್ನಾರವನ್ನು ಮಾಡುತ್ತಾ ತನ್ನ ಹಿತಾಸಕ್ತಿಗೇ ಬಗ್ಗಿಸಿದ ಚಾತುರ್ಯ ಯಾವ ಯಾವ ಮಟ್ಟದಲ್ಲಿ ವ್ಯವಸ್ಥಿತವಾಗಿ ನಡೆದಿದೆ ಎನ್ನುವ ಲಿಂಗಭೇದ ಶೋಷಣೆಗಳು ಹೆಂಗಸರನ್ನು ನಿಕೃಷ್ಟ ಸ್ಥಿತಿಗೆ ತಳ್ಳಿದೆ ಎನ್ನುವುದನ್ನು ಆಧಾರ ಸಮೇತ ಮೈತ್ರೇಯಿ ಪ್ರಸ್ತಾಪಿಸುತ್ತಾರೆ. ಶ್ರೇಣೀಕೃತ ವ್ಯವಸ್ಥೆಯಲ್ಲಿ ಪುರುಷನ ಶ್ರೇಷ್ಠತೆ ಪುರುಷರ ಪರಮಾಧಿಕಾರದ ಮೂಲಕ ಸೃಷ್ಟಿಯಾಗಿರುವ ಎಲ್ಲಾ ಬಗೆಯ ವಿಚಾರಧಾರೆಗಳು ಜ್ಞಾನಪ್ರಕಾರಗಳು ಸಾಂಸ್ಕೃತಿಕ ಅಭಿವ್ಯಕ್ತಿಗಳು ಪುರುಷಕೇಂದ್ರಿತ ದೃಷ್ಟಿಕೋನದಿಂದಲೇ ರೂಪುಗೊಂಡಿದ್ದು, ಮಾನವ ಮನೋಲೋಕದಲ್ಲಿ ಲಿಂಗ ಪೂರ್ವಾಗ್ರಹದ ನೆಲೆಗಳು ಬದಲಾಗದ ಹೊರತು ಸಮಾನತೆ ಸಾಧ್ಯವಿಲ್ಲ. ಈ ದಿಸೆಯಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಜ್ಞಾಪೂರ್ವಕವಾಗಿ ತೊಡಗಿಸಿಕೊಳ್ಳಬೇಕಾಗಿದೆ ಎಂದು ಅವರು ಅಭಿಪ್ರಾಯ ಪಡುತ್ತಾರೆ.

ಮೈತ್ರೇಯಿ ಮುಖ್ಯೋಪಾಧ್ಯಾಯರ ಈ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿ ವೈದೇಹಿ ಕನ್ನಡದ ಹಿರಿಮೆಗೆ ಗೌರವ ತಂದಿದ್ದಾರೆ. ಅವರ ಪ್ರಾಮಾಣಿಕ ಪರಿಶ್ರಮಕ್ಕೆ ಕೃತಜ್ಞತೆ ಸಲ್ಲಿಸುತ್ತೇನೆ.



# ಕೆನೆ ಹಾಲು ಮತ್ತು ವೈದೇಹಿ

✦ ಮೀನಾ ಮೈಸೂರು

ವೈದೇಹಿ ಹೆಸರು ಕೇಳಿದ ಕೂಡಲೇ ಮನದಲ್ಲಿ ಹಿತವಾದ ತಂಗಾಳಿ ಬೀಸಿದಂತಾಗುತ್ತದೆ. ಎದುರಿದ್ದರೆ ಜನ್ಮಾಂತರದ ಗೆಳತಿಯೊ ಎಂಬಂತೆ ಎಲ್ಲಾ ಸಂಗತಿಗಳನ್ನು ಅವಳಿಗೊಪ್ಪಿಸಿ ಅವಳ ಅನಿಸಿಕೆಗಾಗಿ ಕಾಯುತ್ತೇನೆ. ನನ್ನ ಸಂಕಷ್ಟಗಳು ಮನೆಯ ಸಾವು ನೋವುಗಳ ಬಗ್ಗೆ ನಾನು ಕುಸಿದು ಹೋಗಿದ್ದಾಗ ಅವಳ ಸಾಂತ್ವನದ ನುಡಿಗಳಿಂದ ಮತ್ತೆ ಜೀವನೋತ್ಸಾಹ ತುಂಬಿಕೊಂಡಿದ್ದೇನೆ. ಅಷ್ಟಕ್ಕೂ ಈ ವೈದೇಹಿ ನನ್ನ ಸಮಾನ ವಯಸ್ಕಳಲ್ಲ. ಎಷ್ಟೋ ವಿಷಯಗಳಲ್ಲಿ ಸಮಾನ ಮನಸ್ಕಳೂ ಅಲ್ಲ. ಅವಳೊಂದು ಸೂರ್ಯ ನಾನವಳ ಮುಂದೆ ಕಿರು ಸೊಡರು. ಆದರೂ ಅವರು ನನ್ನ ಪ್ರೀತಿಯ ಗೆಳತಿ ನನ್ನನ್ನು ಸಮಾನಳಂತೆ ಕಾಣುತ್ತಾ ಉಪಚರಿಸುವವಳು.

ನಾನು ವೈದೇಹಿಯನ್ನು ಮೊದಲು ನೋಡಿದ್ದು ಶಿವಮೊಗ್ಗ ಸಾಹಿತ್ಯ ಸಮ್ಮೇಳನದಲ್ಲಿ. ತೀರಾ ಸಮೂರಕ್ಕಿದ್ದ ಒಬ್ಬ ಹೆಣ್ಣು ಮಗಳು ಪೋಡಿಯಂ ಹಿಂದೆ ನಿಂತು ಮಾತನಾಡುತ್ತಾ ಕಾರ್ಯಕ್ರಮವೊಂದನ್ನು ನಡೆಸಿಕೊಡುತ್ತಿದ್ದರು. ಪ್ರೇಕ್ಷಕರ ಗ್ಯಾಲರಿಯಲ್ಲಿದ್ದ ನನಗೆ ಅವರ ಮುಖವೂ ಸ್ಪಷ್ಟವಾಗಿ ಕಾಣಲಿಲ್ಲ. ಆಗ ವೈದೇಹಿ ಅಷ್ಟು ಪರಿಚಿತರೇನೂ ಆಗಿರಲಿಲ್ಲ. ಆಮೇಲೆ ಜಾನಕಿ ವೈದೇಹಿಯಾಗಿ ಜಗತ್ ಪ್ರಸಿದ್ಧರಾದರು. ಶಿವಮೊಗ್ಗದಲ್ಲಿ ದೂರದಿಂದ ಅವರನ್ನು ಕಂಡ ನಂತರ ಅವರ ಬರಹಗಳ ಬಗ್ಗೆ ಕುತೂಹಲದಿಂದ ಓದತೊಡಗಿದೆ. ಸಾಹಿತ್ಯಕವಾಗಿ ಪರಿಚಯವಿದ್ದ ವೈದೇಹಿ ನನ್ನ ನೆಚ್ಚಿನ ಬರಹಗಾರರಲ್ಲೊಬ್ಬರು.

ನಾನು 1981 ರಲ್ಲಿ ಹೆಗ್ಗೋಡಿನಲ್ಲಿ ನಡೆಯುತ್ತಿದ್ದ 'ಚಲನಚಿತ್ರ ರಸಗ್ರಹಣ ಶಿಬಿರ'ದಲ್ಲಿ ಭಾಗವಹಿಸಿದ್ದೆ. ಆಗ ನಾನು ಯು.ಆರ್.ಅನಂತಮೂರ್ತಿಯವರ ರುಜುವಾತುವಿನಲ್ಲಿ ಕೆಲಸ ಮಾಡುತ್ತಿದ್ದೆ. ಶಿಬಿರ ಪ್ರಾರಂಭವಾದ ದಿನ ಬೆಳಗ್ಗೆ ಹೆಗ್ಗೋಡನ್ನು ತಲುಪಿದ ನಾನು ಲಗ್ಗೇಜನ್ನು ರೂಮಿನಲ್ಲಿಟ್ಟು ಸ್ನಾನ ತಿಂಡಿ ಮುಗಿಸಿ ತರಗತಿಗೆ ಹೋದೆ. ಅಲ್ಲಿ ಸಾಕಷ್ಟು ಹೆಸರು ಮಾಡಿದ್ದ ದಿಗ್ಗಜಗಳ ದಂಡೇ ಇತ್ತು. ಪೂನಾ ಫಿಲಂ ಇನ್ಸ್ಟಿಟ್ಯೂಟ್‌ನ ಅಂದಿನ ನಿರ್ದೇಶಕರಾಗಿದ್ದ ಶ್ರೀ ಸತೀಶ್ ಬಹದ್ದೂರ್, ಯುಆರ್‌ಎ, ಗಿರೀಶ್ ಕಾರ್ನಾಡ್,

ಗಿರೀಶ್ ಕಾಸರವಳ್ಳಿ, ಶಿವರಾಮ್ ಕಾರಂತ್, ಓಎಲ್‌ಎನ್..... ಹೀಗೆ ದಿಗ್ಗಜರ ದಂಡೇ ಅಲ್ಲಿ ನೆರೆದಿರುತ್ತಿತ್ತು.

ರಾತ್ರಿ ರೂಮಿಗೆ ಹಿಂದಿರುಗಿದೆ. ಆಗ ಉದ್ದನೆಯ ರೂಮಿನಲ್ಲಿ ಒಂದರ ಪಕ್ಕ ಒಂದು ಹಾಸಿಗೆಯನ್ನು ಹಾಸಿಕೊಂಡು ಮಲಗುತ್ತಿದ್ದೆವು. ಅತ್ತ ತಿರುಗಿದರೆ ಗೋಡೆ ಬದಿಯ ಹಾಸಿಗೆಯಲ್ಲಿ ವೈದೇಹಿ. ಅಲ್ಲಿಂದ ನಾನು ವೈದೇಹಿಯ ಗೆಳೆತನದ ಸವಿಯನ್ನು ಅನುಭವಿಸುತ್ತಾ ಇದ್ದೇನೆ. ಹೆಗ್ಗೋಡಿನ ಎಲ್ಲಾ ಕಾರ್ಯಕ್ರಮಗಳಿಗೂ ಬರುತ್ತಿದ್ದ ವೈದೇಹಿಯೊಂದಿಗೆ ಒಂದೆರಡು ದಿನ ಕಳೆದು ಬರುತ್ತಿದ್ದೆ. ತನ್ನ ಸ್ನೇಹ ವಲಯಕ್ಕೆ ಬರುವವರನ್ನೆಲ್ಲಾ ಆಪ್ತತೆಯಿಂದ ಕಾಣುವ, ಆತ್ಮೀಯವಾಗಿ ಮಿಡಿಯುವ ಅಂತಃಕರಣದ ವೈದೇಹಿಯನ್ನು ಮೊದಲ ಭೇಟಿಯಿಂದಲೇ ನಾನು ಬಹುವಚನದಲ್ಲಿ ಮಾತನಾಡಿಸಿದ್ದು ನೆನಪಿಲ್ಲ. ಹೆಗ್ಗೋಡಿಗೆ ಬರುವಾಗಲೆಲ್ಲಾ ಮಂಗಳೂರಿನ ಮಲ್ಲೆ ಮಾಲೆಯನ್ನು ತರುತ್ತಿದ್ದರು. ಮೈಸೂರಿನ ಮಲ್ಲಿಗೆಗೂ ಮಂಗಳೂರಿನ ಮಲ್ಲೆಗೂ ಪರಿಮಳದಲ್ಲಿ ಎಷ್ಟೊಂದು ವ್ಯತ್ಯಾಸವಿದೆ ನೋಡು ಎನ್ನುತ್ತಿದ್ದರು.

ವೃತ್ತಿ ಸಂಬಂಧ ಉಜಿರೆಯಲ್ಲಿ ಮೂರು ತಿಂಗಳು ತರಬೇತಿಯಲ್ಲಿದ್ದೆ. ಆಗ ಬಹುತೇಕ ಶನಿವಾರ ಭಾನುವಾರಗಳು ಉಡುಪಿಯ ವೈದೇಹಿ ಮನೆ ಅಥವಾ ಸುಬ್ರಮಣ್ಯದ ವಿದ್ಯಾಭೂಷಣ ಸ್ವಾಮೀಜಿಯವರನ್ನು ನೋಡಲು ಹೋಗುತ್ತಿದ್ದೆ. ಎರಡು ದಿನ ವೈದೇಹಿ ಕೈನ ರಸಗವಳ ಮೆದ್ದು (ಅವರ ಮನೆಯಲ್ಲಿ ತಿಂದಂತಹ ಪತ್ರೊಡೆಯನ್ನು ಮತ್ತೆ ನಾನು ತಿಂದೆ ಇಲ್ಲ) ಶ್ರೀನಿವಾಸ ಮೂರ್ತಿಯವರ ಸ್ಕೂಟರ್‌ನಲ್ಲಿ ಬಸ್ ಸ್ಟಾಂಡಿಗೆ ಬರುತ್ತಿದ್ದೆ. ವೈದೇಹಿಯನ್ನು ಅಕ್ಕ ಅಂತ ನಾನೆಂದೂ ಕರೆದಿಲ್ಲ. ಹಾಗೆ ಸಂಬಂಧ ವಾಚಕಗಳಲ್ಲಿ ಕರೆಯುವುದು ನನಗೆ ಮುಜುಗರದ ಸಂಗತಿ. ಆದರೆ ಶ್ರೀನಿವಾಸಮೂರ್ತಿಗಳನ್ನು ಸಲೀಸಾಗಿ ಭಾವ ಎಂದು ಕರೆದುಬಿಡುತ್ತೇನೆ.

ವೈದೇಹಿ ಮಕ್ಕಳಿಬ್ಬರು ಚಿಕ್ಕವರು. ಮೈಸೂರು ದಸರಾ ಕವಿ ಗೋಷ್ಠಿಯಲ್ಲೊಮ್ಮೆ ಪದ್ಯ ಓದಲು ಮೈಸೂರಿಗೆ ಬಂದಿದ್ದರು. ನಮ್ಮದು ಆಗ ಕೂಡು ಕುಟುಂಬ. ನನ್ನಮ್ಮ, ಅಪ್ಪ, ಅಕ್ಕ, ಭಾವ, ಅವರ ಮೂರು ಮಕ್ಕಳು, ಇಬ್ಬರು ಅಣ್ಣಂದಿರು ಅತ್ತಿಗೆಯರು ಅವರ ನಾಲ್ಕು ಮಕ್ಕಳು ನಾನು ನನ್ನ ತಂಗಿಯರಿಬ್ಬರು, ಜೊತೆಗೆ ದಸರಾ ನೋಡಲೆಂದು ಬಂದು ಹೋಗುವ ನೆಂಟರು ಇಷ್ಟರು. ಹೀಗೆ ಜನರಿಂದ ತುಂಬಿ ತುಳುಕುವ ಮನೆಗೆ ವೈದೇಹಿ ಸಂಸಾರ ಬಂದದ್ದು ಮನೆಯಲ್ಲಿ ಸಂಭ್ರಮದ ವಾತಾವರಣ ತಂದಿತು. ನಮ್ಮಪ್ಪನ ಮನೆ ತುಂಬಾ ದೊಡ್ಡದಲ್ಲ, ಕಿಷ್ಕಿಂದೆಯೂ ಅಲ್ಲ. ಅಷ್ಟು ಜನ ಒಟ್ಟಿಗಿರುವುದನ್ನು ಕಂಡು ವೈದೇಹಿ ಆಶ್ಚರ್ಯದೊಂದಿಗೆ ಸಂಸತ ಪಟ್ಟಳು. ವೈದೇಹಿ ನಮ್ಮ ಮನೆಗೆ ಬಂದದ್ದು, ಅವರುಗಳ ಸರಳ ಸಜ್ಜನಿಕೆಯ ಸ್ನೇಹಮಯಿ ಗುಣವನ್ನು ನಮ್ಮಪ್ಪ ಆಗಾಗ್ಗೆ ಪ್ರೀತಿಯಿಂದ

ನೆನೆಯುತ್ತಿದ್ದರು. ಅವರು ನಮ್ಮ ಮನೆಗೆ ಬಂದು ಹೋದ ಮೇಲೆ ಅವರ ಬರಹವನ್ನು ಓದಿದಾಗ ಅವಳಿಗೆ ಪ್ರಶಸ್ತಿ-ಪುರಸ್ಕಾರಗಳು ಬಂದಾಗಲೆಲ್ಲಾ ನಮ್ಮ ಮನೆಯವರೆಲ್ಲಾ ಸಂಭ್ರಮಿಸುತ್ತಾರೆ.

ನನ್ನ ಪ್ರವಾಸ ಕಥನ 'ಎತ್ತಣಿದೆಂದೆತ್ತ'ಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಾಗ 'ಪುಸ್ತಕ ಚಂದ ಬರೆದಿದ್ದೀಯೆ, ಪ್ರಶಸ್ತಿ ಬಂದದ್ದು ನಂಗಂತು ತುಂಬಾ ಸಂತೋಷ ಆಯ್ತು' ಎಂದು ಬೆನ್ನು ತಟ್ಟಿದಳು. ಅವಳ ಬಹು ದೊಡ್ಡ ಗುಣವೆಂದರೆ ಯಾರ ಬಗ್ಗೆಯೂ ಅಸಹನೆ, ಅಗೌರವ ತೋರದಿರುವುದು. ಗಾಸಿಪ್ ಅವಳಿಂದ ಬಹು ದೂರ. ಪೂರ್ಣಿಮಾ ನಿಧನರಾದಾಗ ಅವಳೆಷ್ಟು ನೊಂದುಕೊಂಡು ಅವರ ಬಗ್ಗೆ ಲೇಖನವೊಂದನ್ನು ಬರೆದಳು. ಅದು ನನ್ನನೆಷ್ಟು ಕಾಡಿತು, ನನ್ನಷ್ಟಕ್ಕೆ ನಾನು ಅದೆಷ್ಟು ದು:ಖಿಸಿದೆ. ಕೊನೆಗೊಮ್ಮೆ ವೈದೇಹಿಯನ್ನು 'ನಾನು ಸತ್ತರೂ ಹೀಗೆ ಬರೆಯುತ್ತೀಯಾ' ಎಂದು ಕೇಳಿ ಅವಳಿಂದ ಬೈಸಿಕೊಂಡೆ. ಅಂತಹ ಲೇಖನವೊಂದನ್ನು ಬರೆಸಿಕೊಂಡ ಪೂರ್ಣಿಮಾ ನಿಜಕ್ಕೂ ಧನ್ಯೆ ಎನಿಸಿತು. ಯಾರಿಗಾದರು ಕಷ್ಟವೆಂದರೆ 'ಪಾಪ ಕಣೆ ಅವಳಿಗೆಂತ ಆಯ್ತೊ ಏನೋ, ಜೀವ ಎಷ್ಟು ನೊಂದು ಕೊಂಡಿದೆಯೋ' ಅಂತ ತಾನೆ ನೊಂದುಕೊಳ್ಳುತ್ತಾಳೆ.

ನಾನು ಬೆಂಗಳೂರಿನಲ್ಲಿ ದೂರದರ್ಶನದಲ್ಲಿ ಕೆಲಸ ಮಾಡುತ್ತಿದ್ದಾಗ, ಕಲಾಕ್ಷೇತ್ರದಲ್ಲಿ ನಡೆದ ಸಮಾರಂಭಕ್ಕೆ ಬಂದಿದ್ದ ವೈದೇಹಿ 'ವೈಶಾಲಿ ಕಾಸರವಳ್ಳಿಗೆ ಹುಷಾರಿಲ್ಲ ಬಾ ಹೋಗಿ ನೋಡಿಕೊಂಡು ಬರೋಣ'ವೆಂದಳು. ಅಂದು ಮನೆಯಲ್ಲಿ ವೈಶಾಲಿ ಒಬ್ಬರೆ ಇದ್ದರು. ಸಹಾಯಕಿಯೊಬ್ಬರು ಕಾಫಿ ಮಾಡಿಕೊಟ್ಟರು. ಸುಮಾರು ಒಂದೂವರೆ ಗಂಟೆ ಅವರೊಂದಿಗೆ ಮಾತಾಡಿದೆವು. 'ವೈಶಾಲಿ ಅದೆಷ್ಟು ಚಂದ, ಚೆಂದ ಆಕ್ಟ್ ಮಾಡ್ತಾ ಇದ್ದಳು, ಪಾಪ ಕಣೆ ಇಷ್ಟು ಚಿಕ್ಕ ವಯಸ್ಸಿಗೆ ಅವಳ ಆರೋಗ್ಯ ಹಾಳಾಗಬಾರದಿತ್ತು, ದೇವರಿಗೆಂತ ಕಣ್ಣೇ ಕಾಣಿಸೋದಿಲ್ವ' ಮಮ್ಮಲ ಮರುಗಿದಳು.

ಇನ್ನೊಬ್ಬರಿಗೆ ಒಳ್ಳೆಯದಾದಾಗ ಸಂಭ್ರಮಿಸುವ ಗುಣವೂ ಅವಳಲ್ಲಿದೆ. ವಿನಯಾ ಪ್ರಸಾದ್ ಸಿನಿಮಾದಲ್ಲಿ ನಟಿಸಲು ಆರಂಭಿಸಿದಾಗ, 'ನಮ್ಮೂರ ಹುಡುಗಿ ಅವಳು ನಾಟಕದಲ್ಲಿ ಮಾಡ್ತಾ ಇದ್ದಳು, ಒಳ್ಳೆ ನಟಿ, ಸಿನಿಮಾದಲ್ಲಿ ಅವಕಾಶ ಸಿಕ್ಕಿದ್ದು ಒಳ್ಳೆಯದಾಯ್ತು' ಅಂತ ಸಂತಸ ಪಟ್ಟಿದ್ದಳು. ಹೀಗೆ ಎಲ್ಲರನ್ನು ಪ್ರೋತ್ಸಾಹಿಸುವ, ಬೆನ್ನು ತಟ್ಟಿ ಹುರಿದುಂಬಿಸುವ, ಕ್ರಿಯಾಶೀಲರನ್ನಾಗಿಸುವ ಗುಣ ಅವಳದು. ಅವಳನ್ನು ಭೇಟಿಯಾಗುವ ಯಾವ ಅವಕಾಶ ಸಿಕ್ಕರೂ ನಾನು ಬಿಡುವುದಿಲ್ಲ. ಸದಾ ನಾನು ಅವಳಿಗೆ ಫೋನ್ ಮಾಡುವುದಾಗಲಿ, ಅವರಲ್ಲಿಗೆ ಹೋಗುವುದಾಗಲಿ ಇಲ್ಲವಾದರೂ, ಅವಳು ನನ್ನೊಂದಿಗಿದ್ದಾಳೆಂಬ ಭಾವ ನನ್ನೊಳಗೆ.

ನನ್ನ ಕೌಟುಂಬಿಕ ಸಂಕಷ್ಟಗಳು, ಸಾವು-ನೋವುಗಳಲ್ಲಿ 'ನೀನು ಒಳ್ಳೇ ಹುಡುಗಿ, ನಿನಗೆ ಒಳ್ಳೇದೇ ಆಗ್ತದೆ. ಬೇಜಾರು ಮಾಡ್ಕೋಬೇಡ. ಒಂದೆರಡು ದಿನ ನಮ್ಮನೇಗೆ ಬಂದುಬಿಡು.' ಸಂತೈಸುತ್ತಾಳೆ. ವೈದೇಹಿ ಇತ್ತೀಚೆಗೆ ಮೈಸೂರಿನ ಜೆ ಎಸ್ ಎಸ್ ಕಾಲೇಜಿನ ಸಮಾರಂಭವೊಂದಕ್ಕೆ ಬಂದಿದ್ದಾಗ, ಅವರೊಂದಿಗೆ ನಾನು ಚ.ಸರ್ವಮಂಗಳಾ ನಂಜನಗೂಡಿಗೆ ಹೋಗಿ, ತಿರುಮಲಾಂಬರ ಮನೆಯೊಳಗೆಲ್ಲಾ ಸುತ್ತಾಡಿ ಧನ್ಯರಾದೆವು.

ನಾನು ಹಾಸನದಲ್ಲಿ ಕ್ಷೇತ್ರ ಪ್ರಚಾರಾಧಿಕಾರಿಯಗಿ ಕೆಲಸಕ್ಕೆ ಸೇರಿದೆ (ರಂಗಾಯಣ ಪ್ರಾರಂಭಕ್ಕೆ ಮುನ್ನ). ಹವ್ಯಾಸಿ ರಂಗಕರ್ಮಿಗಳಿಗೆ ಬಿ.ವಿ. ಕಾರಂತರು 'ಕಿಂಗ್ ಲಿಯರ್' ನಾಟಕ ಮಾಡಿಸಿದರು. ಅದರಲ್ಲಿ ಗಾನ್‌ರಿಲ್ ಪಾತ್ರ ಮಾಡಿದ್ದೆ. ನಂತರ ನೆಹರೂ ಶತಾಬ್ದಿಗಾಗಿ 'ಹಯವದನ' ಮಾಡಿಸಿದರು. ಪ್ರೇಮಾಕಾರಂತರು ಮಾಡಿದ ವಸ್ತ್ರವಿನ್ಯಾಸದಲ್ಲಿ ನಾನೂ ಸಹಾಯ ಮಾಡಿದ್ದೆ. ಸಂಪನ್ಮೂಲ ಕೇಂದ್ರಕ್ಕೆ ಸಾಕ್ಷರಗೀತೆ ಧ್ವನಿ ಮುದ್ರಣ ವಾಗುವಾಗಲೂ ಕೂಡ ನಮ್ಮ ಪಾತ್ರ ಏನೂ ಇಲ್ಲದಿದ್ದರೂ ಅವರೊಟ್ಟಿಗೆ ಸುಮ್ಮನೆ ಸುತ್ತುತ್ತಿದ್ದೆವು. ಅವರು ಸಂಯೋಜಿಸುತ್ತಿದ್ದ ಹಾಡು, ಅದರ ರಾಗ ನಮ್ಮ ಕಿವಿಯಲ್ಲಿ ಗೂಂಯ್ ಗುಟ್ಟುತ್ತಿರುವಾಗ ಅದರ ಗುಂಗಿನಲ್ಲೇ ನಾನು 'ಸೂರ್ಯನ ಸೆರೆ' ಎಂಬ ಮಕ್ಕಳ ನಾಟಕ ಬರೆದೆ. ಅದಕ್ಕೆ ಬೆಂಗಳೂರಿನ ಸುರಭಿ ಸಂಘದಿಂದ ಬಹುಮಾನ ಬಂದಿತು. ಅದಿನ್ನೂ ಪ್ರಕಟವಾಗಿಲ್ಲವೆಂಬುದು ಬೇರೆ ಮಾತು. ಬಹುಶಃ ಅದೇ ಸಮಯದಲ್ಲಿರಬೇಕು ಅದೇ ವಸ್ತುವನ್ನು ಕುರಿತು 'ಸೂರ್ಯ ಬಂದ' ಎಂಬ ಯಶಸ್ವೀ ನಾಟಕವನ್ನು ವೈದೇಹಿ ಬರೆದು ಮಕ್ಕಳ ನಾಟಕದಲ್ಲೂ ಸೈ ಎನಿಸಿಕೊಂಡರು. ತಮಾಷೆ ಎಂದರೆ ಇತ್ತೀಚೆಗೆ ನನ್ನ ಗಂಡನ ಧೂಮಲೀಲೆಯನ್ನು ನೀರೊಲೆಯ ಹೊಗೆ ಮತ್ತು ಕಿಟ್ಟಕ್ಕೆ ಹೊಲಿಸಿ ಪದ್ಯವೊಂದನ್ನು ಬರೆದಿದ್ದೆ. ಅದು ಎಂದಿನಂತೆ ಟೇಬಲ್ ಮೇಲೆ ಬಿದ್ದಿದೆ. ನೀರೊಲೆಯ ಹೊಗೆ ಕೊಳವೆ ಮತ್ತು ಅದರಲ್ಲಿ ಕಟ್ಟಿದ ಕಿಟ್ಟ ಕುರಿತು ವೈದೇಹಿ ಅದ್ಭುತವಾಗಿ ಬರೆದ ಪದ್ಯವೊಂದು ಕಂಡಿತು. ಖುಷಿಯಾಯಿತು. ಅವರಷ್ಟು ಚೆಂದ ಪದ್ಯ ಬರೆಯಲಾಗದಿದ್ದರೂ, ಆ ದಿಸೆಯಲ್ಲಿ ನಾನೂ ಯೋಚಿಸುತ್ತೇನಲ್ಲ ಅಂತ.

ಈಗ ಎರಡು ವರ್ಷಗಳ ಹಿಂದೆ ಮಣಿಪಾಲ್‌ನಲ್ಲಿ ನಡೆದ ಕಾರ್ಯಕ್ರಮಕ್ಕೆ ನನ್ನನ್ನು ಮತ್ತು ಚ.ಸರ್ವಮಂಗಳಾರನ್ನು ಆಹ್ವಾನಿಸಿದಾಗ ಮರುಮಾತಿಲ್ಲದೆ ನಾವಿಬ್ಬರೂ ಹೋಗಿ ಎರಡು ದಿನ ಅವರೊಂದಿಗೆ ಖುಷಿಯಾಗಿದ್ದು ಬಂದೆವು.

ಒಮ್ಮೆ ಮಣಿಪಾಲದ ಅವರ ಮನೆಯಲ್ಲಿ ಉಳಿದುಕೊಂಡಿದ್ದೆ. ಬೆಳಿಗ್ಗೆ ಅವರ ಅಡಿಗೆ ಮನೆಗೆ ಹೋದಾಗ, ವೈದೇಹಿ ಒಲೆಯ ಮೇಲಿದ್ದ ಹಾಲನ್ನು ಸೌಟಿನಿಂದ ಗೂರಾಡುತ್ತಿದ್ದರು. ನನಗೆ ಆಶ್ಚರ್ಯವಾಯಿತು. ಏಕೆಂದರೆ ಹೀಗೆ ಗುರಾಡಿದರೆ ಹಾಲು ಒಡೆದು ಹೋಗುತ್ತದೆಂದು ತಿಳಿದಿದ್ದವಳು ನಾನು. 'ಹೀಗೆ ಗೂರಾಡಿದರೆ ಹಾಲು ಚೆನ್ನಾಗಿ

ಕಂದಿ ಗಟ್ಟಿಯಾಗುತ್ತದೆ. ಕೆನೆಯೂ ದಪ್ಪಗೆ ಕಟ್ಟುತ್ತದೆ' ಎಂಬುದನ್ನು ಅವರಿಂದ ಕಲಿತಿದ್ದನ್ನು ಈಗಲೂ ರೂಢಿಯಲ್ಲಿಟ್ಟುಕೊಂಡಿದ್ದೇನೆ. ಅದರಿಂದಾಗಿಯೇ ನಮ್ಮ ಮನೆಯ ಮೊಸರು ಗಟ್ಟಿಯಾಗಿರುತ್ತದೆ, ನಮ್ಮ ಮನೆಯ ಮೊಸರು, ನೆಂಟರು ಇಷ್ಟರಿಗೆ, ಅದರಲ್ಲೂ ಫ್ರಾನ್ಸ್‌ನಿಂದ ಬರುವ ಅತಿಥಿಗಳು ತುಂಬಾ ಇಷ್ಟಪಟ್ಟು ಸೇವಿಸುತ್ತಾರೆ. ಆಗೆಲ್ಲಾ ವೈದೇಹಿಯನ್ನು ಮನದಲ್ಲೇ ಪ್ರೀತಿಯಿಂದ ನೆನೆಯುತ್ತೇನೆ.

ವೈದೇಹಿಯ ಬರಹಗಳ ಬಗ್ಗೆ ನಾನು ಬರೆಯಲು ಹೋಗುವುದಿಲ್ಲ. ಆದರೆ ಅವರ ಬರವಣಿಗೆಯನ್ನು ನಾನು ಬೆಚ್ಚಗೆ ಅಪ್ಪಿಕೊಂಡಿದ್ದೇನೆ. ಅವರ ಸೂಕ್ಷ್ಮಾತಿಸೂಕ್ಷ್ಮಗಳ ಸೂಕ್ಷ್ಮತೆ ಬಗ್ಗೆ ಬೆರಗುಗೊಂಡಿದ್ದೇನೆ. ಅವರ ಅಪಾರ ಸಾಹಿತ್ಯ ರಚನೆ ಕಂಡು ಅಚ್ಚರಿಗೊಂಡಿದ್ದೇನೆ. ಪ್ರಕೃತಿಯ ಅಣುರೇಣು ವಿವರಗಳನ್ನು ಅವರು ಪದ್ಯಗಳಲ್ಲಿ ಸುಲಲಿತವಾಗಿ ಹಿಡಿದಿಡುವ ಬಗೆ, ಅವರ ಸೊಗಸಾದ ಕಾವ್ಯಭಾಷೆ, ಜಲತತ್ವ, ಗಂಧತತ್ವ, ಸಾರತತ್ವಗಳು ಹದವಾಗಿ ಮೇಳೈಸಿ ನಮ್ಮೊಳಗೆ ಇಳಿದು ಬೆಚ್ಚಗಾಗಿಸುವ ಪರಿಗೆ ಮತ್ತಾವುದೂ ಸಮವಿಲ್ಲ. ಅವರ ಬರಹಗಳಿಂದ, ಸ್ನೇಹದಿಂದ ನನ್ನ ಅರಿವು ವಿಸ್ತಾರಗೊಂಡಿದೆ, ಸ್ನೇಹದ ಸುಖವೂ ದಕ್ಕಿದೆ. ವೈದೇಹಿ ನಿನಗಿದೋ ನನ್ನ ಸಲಾಂ.



# ವೈದೇಹಿ ಎಂಬ ಅಮ್ಮ

✦ ವೀಣಾ ಬನ್ನಂಜೆ

ನನ್ನ ಹುಡುಗಾಟದ ದಿನಗಳು. ಜಗತ್ತಿನ ಎಲ್ಲ ಜನರ ಜತೆಗೆ ಹಕ್ಕು ಸ್ಥಾಪನೆ ಮಾಡುವ ಸೊಕ್ಕು. ಇಲ್ಲಿ ಇರುವುದು ಸರಿಯಿಲ್ಲ ನಾವು ಮಾತ್ರ ಸರಿ ಎಂಬ ಭಾವ ಇದ್ದ ಕಾಲ. ನಾಟಕ, ಸಾಹಿತ್ಯ, ಭಾಷಣ ಮುಂತಾದ ಕ್ಷೇತ್ರದಲ್ಲೆಲ್ಲ ನಮ್ಮ ಮಾತು ನಡೆಸುವ ಹಠ ಬೇರೆ. ಮಾತು, ಯೋಚನೆ ಯಾವುದನ್ನೂ ಒಪ್ಪದ ಮನಸ್ಸು. ಹಾಗಾಗಿ ತೀರ ಒರಟೊರಟು ಸಿಡುಕು ಮತ್ತೆ ಕೆಲವೊಮ್ಮೆ ಆರ್ಭಟದ ಸ್ಪಂದನ. ಅಂಥ ದಿನಗಳಲ್ಲಿ ನಮ್ಮ ಕಾರ್ಯಕ್ರಮಗಳಿಗೆ ಹೋಗುವ ದಾರಿಯಲ್ಲಿ ವೈದೇಹಿ ಆಂಟಿಯ ಮನೆ. ಮುರಾರಿಯಣ್ಣ ಎಲ್ಲರಿಗೂ ನನ್ನನ್ನು ತೋರಿದಂತೆ ಅವರಿಗೂ ತೋರಿದ್ದರು. ನಾನು ಒಮ್ಮೆ ಯಾರನ್ನಾದರೂ ಕಂಡೆನೆಂದರೆ ಮತ್ತೆ ಕಳೆದುಕೊಳ್ಳುವುದು ಕಡಿಮೆ. ಹಾಗೆ ಅವರನ್ನು ಬಿಡದೆ ಸೇರಿಕೊಂಡೆ. ಅವರಿಗೆ ಪ್ರಿಯವೋ ಅಪ್ರಿಯವೋ ಗೊತ್ತಿಲ್ಲದಷ್ಟು ನಾನು ನನ್ನ ಲೋಕದಲ್ಲಿ ಮುಳುಗಿದವಳು. ಆ ದಿನಗಳಲ್ಲಿ ವೈದೇಹಿ ಆಂಟಿ ನನಗೆ ಇಷ್ಟ ಆದದ್ದು, ಅವರು ನನ್ನನ್ನು ಸುಮ್ಮನೆ ನೋಡುತ್ತಿದ್ದ ಬಗೆಯಿಂದ. ಅವರು ಒಂದು ದಿನವೂ ನನಗೆ ಹೀಗೆ ಮಾಡು, ಹೀಗೆ ಮಾಡಬೇಡ ಬೋಧಿಸಿದ್ದೇ ಗೊತ್ತಿಲ್ಲ. ಎಲ್ಲಕ್ಕಿಂತ ಮಿಗಿಲಾಗಿ ತನಗೆ ಇದು ಇಷ್ಟ, ಇದು ಅಲ್ಲ ಎಂಬುದನ್ನು ಹೇಳಿದ್ದೂ ಗೊತ್ತಿಲ್ಲ. ನಾನು ಆಗೆಲ್ಲ ಅವರ ಕಣ್ಣಿನಲ್ಲಿ ಕಂಡದ್ದು ಪ್ರತಿಯೊಂದು ಇದ್ದದ್ದನ್ನು ಇದ್ದ ಹಾಗೆ ಒಪ್ಪುವಂತೆ ಕಾಣುವ ಅವರ ಮುಗುಳ್ನಗು ಮತ್ತು ಅದನ್ನು ಬೆಂಬಲಿಸುವಂತೆ ಕಾಣುವ ಅವರ ಕಣ್ಣಿನ ಹೊಳಪು. ಹೀಗೆ ಮಾಡು ಮಗ, ಹೀಗೆ ಹೋಗು, ಇದು ಸರಿ, ಒಂದೇ ಒಂದು ದಿನ ಅವರು ಅಂದದ್ದು ಗೊತ್ತಿಲ್ಲ. ಹಾಗಂತ ನಮಗೇನು ಯಾರದೋ ಮನೆಯ ಹುಡುಗಿ ಹೇಗಿದ್ದರೆ ನನಗೇನು ಎಂಬ ಅನಾದರದ ಉದಾಸೀನವಲ್ಲ. ಅಪರೂಪಕ್ಕೆ ಯಾವುದಾದರೂ ಗದ್ದಲದಲ್ಲಿ ಸಿಕ್ಕು ತೊಂದರೆ ಅನುಭವಿಸುವ ಸಾಧ್ಯತೆ ಕಂಡರೆ ಥಟ್ಟನೆ ಸೆರಗಿನ ಮರೆಗೆ ಕರೆದು ರಕ್ಷಣೆ ಕೊಡುವ ಅಮ್ಮನ ಹಾಗೆ. ಜಾಗ್ರತೆ ವೀಣಾ, ಯೋಚಿಸಿ ಹೆಜ್ಜೆ ಇಡು ಅಂತ ತಾನು ಬೆನ್ನ ಹಿಂದೆ ಇರುವ ಭರವಸೆ ಕೊಟ್ಟು ಕಳುಹಿಸುವ ರೀತಿ. ನಾನು ಕಂಡದ್ದು ಇಂಥದೊಂದು ಸುಮನಸಿನ ಸ್ವತಂತ್ರ ಬೆಳೆಯುವ ಮಕ್ಕಳನ್ನು ಕಣ್ತುಂಬ ಕಾಣುವ ಪ್ರೀತಿಯ ಆಂಟಿಯನ್ನು.

ಅದು ನನ್ನ ಕಾಲೇಜಿನ ದಿನದ ಅನುಭವ. ಅದಾಗಿ ನಾನು ಎಷ್ಟೋ ವರ್ಷ ಆಂಟಿಯ ಸಂಪರ್ಕದಿಂದ ದೂರವಾಗಿದ್ದೆ. ಆಂಟಿಯ ಕಾರಣದಿಂದ ಹತ್ತಿರವಾಗಿದ್ದ ನಯನಾ ಮತ್ತು ಪಲ್ಲವಿ ಅವರವರ ವಿದ್ಯಾಭ್ಯಾಸಕ್ಕೆ ದೂರವಾದ ಕಾರಣವೂ ಇರಬಹುದು. ಹೀಗೆ ಕೆಲವು ವರ್ಷಗಳ ಕಾಲ ನಾನು ಆಂಟಿಯ ನಿಕಟ ಸಂಪರ್ಕ ಕಳೆದುಕೊಂಡಿದ್ದೆ. ಅದಾದ ಬಳಿಕ ನನ್ನ ಬದುಕಿನ ಒಂದು ತಿರುವು. ನಾನು ಸತ್ಯಕಾಮರ ಸೆಳೆತಕ್ಕೆ ಸಿಕ್ಕು ಉಡುಪಿ ಬಿಟ್ಟು ನಾಲ್ಕು ವರ್ಷ ಅವರ ಜತೆ ಕಳೆದು ಸಂಪೂರ್ಣ ಉಡುಪಿಯ ಎಲ್ಲರಿಂದಲೂ ದೂರವಿದ್ದೆ.

ಒಂದರ್ಥದಲ್ಲಿ ಆಂಟಿಯನ್ನು ಮರೆತೇ ಇದ್ದೆ. ಅದಾದ ಎಷ್ಟೋ ವರ್ಷಗಳ ನಂತರ ಒಮ್ಮೆ ಉಡುಪಿಗೆ ಬಂದಾಗ ಮನಸ್ಸು ಮತ್ತೆ ಅವರ ಕಡೆ ಸೆಳೆಯಿತು. ಯಾರಿಂದಲೋ ಫೋನ್ ನಂಬರ್ ಪಡೆದು ಅವರಿಗೆ ಫೋನಾಯಿಸಿದೆ. ಆಗ ಆ ಕಡೆಯಿಂದ ಅದೇ ಪ್ರೀತಿಯ ಅದೇ ಮನಸಿನ ಆಂಟಿ ತುಂಬ ಪ್ರೀತಿಯಿಂದ ಬಾ ನಿನ್ನನ್ನು ನೋಡಬೇಕು ಎಂದು ಕರೆದರು. ನನಗೆ ಅದು ಅವರ ಕುರಿತ ನನ್ನ ಪ್ರೀತಿಯನ್ನು ಮತ್ತೊಮ್ಮೆ ನೋಡುವಂತೆ, ನೆನೆಯುವಂತೆ ಮಾಡಿತು.

ಅದಕ್ಕೆ ಕಾರಣ ಉಡುಪಿ ಮತ್ತು ಉಡುಪಿಯ ನನ್ನ ಇಡೀ ಬಳಗ ನನ್ನನ್ನು ನೋಡುವ ಕಣ್ಣು ಬದಲಿಸಿತ್ತು. ಆಂಟಿಯ ದನಿಯಲ್ಲಿ ಅಂಥ ಯಾವ ಅಪಸ್ವರವೂ ನನಗೆ ಕೇಳಿಸಲಿಲ್ಲ. ಯಾರು ಹೇಗಿದ್ದಾರೋ ಹಾಗೆಯೇ ಅವರನ್ನು ನೋಡುತ್ತಿದ್ದ ಆಂಟಿಯ ಮೊದಲಿನ ಗುಣವೇ ಅವರ ದನಿಯಲ್ಲಿ ನನಗೆ ಕಾಣಿಸುತ್ತಿತ್ತು. ಹಾಗೆ ಅವರ ಕರೆಗೆ ನಾನು ಅದೇ ಎಳೆತದಿಂದ ಹೋದದ್ದು ಅವರ ಮಣಿಪಾಲದ ಮನೆಗೆ. ಮೊದಲಿನದೇ ಪ್ರೀತಿ, ಅದೇ ಅಕ್ಕರೆಯಿಂದ ನನ್ನನ್ನು ಬರಮಾಡಿಕೊಂಡ ಆಂಟಿ ಮಾತಿಗೆ ಮೊದಲು ನನ್ನನ್ನು ಮೈತುಂಬ ಕಣ್ಣಾಡಿಸಿ ಓದಿದ್ದರು. ಅದು ಗಂಡನ ಮನೆಗೆ ಕಳುಹಿಸಿದ ಮಗಳು ಎಷ್ಟೋ ದಿನಗಳ ಬಳಿಕ ಬಂದಾಗ ತಾಯಿ ಏನನ್ನೂ ಬಾಯ್ಬಿಟ್ಟು ಕೇಳದೆ ಮೈ ಮುಖ ಕಣ್ಣು ನೋಡಿ ಮಗಳು ಸುಖವಾಗಿ ಇರುವುದನ್ನು ತಿಳಿದು ತಿಳಿಯಾಗುವ ಭಾವದಷ್ಟು ಕಾಳಜಿಯಿಂದ ಕೂಡಿತ್ತು. ಆ ಬಳಿಕ ಒಂದು ನಿಟ್ಟುಸಿರು ಬಿಟ್ಟು 'ಅಬ್ಬ ಪರ್ವಾಗಿಲ್ಲವೇ ಹೆಣ್ಣೇ ನೀನು ಹಂಗೇ ಇದ್ದಿ ಮನಸ್ಸಿಗೆ ಅಯ್ಯಬ್ಬ ಆಯ್ತೆ' ಎಂದು ಪಕ್ಕ ಕೂತು ಮೈ ನೇವರಿಸಿದ್ದರು. ಹೊಟ್ಟೆ ತುಂಬ ತಿನಿಸಿ, ನನ್ನ ಈಗಿನ ದಿನಚರಿ ತಿಳಿದು ಅದರ ಬಗ್ಗೆಯೂ ಖುಷಿಪಟ್ಟು ಮೆತ್ತನೆ ಊರವರೆಲ್ಲರ ಮಾತಿನ ಪ್ರಭಾವಕ್ಕೆ ಸಿಕ್ಕ ತನ್ನ ಮನಸ್ಸಿನ ಒಳಗಿರುವ ಆ ಅನುಮಾನವನ್ನು ತುಂಬ ಅಳೆದು ತೂಗಿ ಯಾವ ಭಾವಕ್ಕೂ ನೋವಾಗದಂತೆ ಎಚ್ಚರ ವಹಿಸಿ 'ನೀನು ಹಂಗೆ ಹೆಂಗೆ ಹೋದಿಯೇ ವೀಣಾ ಎಂಥಾ ಬೋಲ್ಡ್ ಹುಡುಗಿ. ಯಾರಿಗೂ ಬಗ್ಗೋಳಲ್ಲ ಯಾರನ್ನು ಒಪ್ಪಿಕೋಳ್ಳೋಳಲ್ಲ, ಯಾರು ಕರೆದರೆ ಒಲಿಯೋಕೆ ಸಾಧ್ಯನೇ ಇಲ್ಲ. ಅಂಥ ಹೆಣ್ಣು ಹಾಂಗೆ ಅವರ ಹಿಂದೆ ಹೋದ್ದಂದ್ರೆ ಅದು ಸಾಮಾನ್ಯ

ಅನ್ನುತ್ತಾ ನಿಂಗೆ. ಅವರು ಯಾವುದೋ ಶಕ್ತಿ ಉಪಯೋಗ ಮಾಡಿದ್ದಾರೆ ಅನ್ಸಲ್ಲವಾ' ಎಂದವರೇ ಮತ್ತದೇ ಮುಗ್ಧ ಮನಸ್ಸು ತೆರೆದು ಉತ್ತರಕ್ಕೆ ಕಾದಿದ್ದರು. ಆಂಟಿ ಅದು ನೀವು ತಿಳಿದ ಶಕ್ತಿಯಲ್ಲ ಎಂಬುದಕ್ಕೆ ನಿಮಗೆ ವೈಜ್ಞಾನಿಕ ವಿವರಣೆ ಬೇಕಾದರೆ, ಯಾವುದೇ ಶಕ್ತಿ ಪ್ರಯೋಗಕ್ಕೆ ಒಂದು ಆಯುಸ್ಸಿದೆ. ಅದು ಹೀಗೆ ನಾಲ್ಕು ವರ್ಷ ನಡೆಸಲಾಗದು. ಒಂದು ನಿರ್ದಿಷ್ಟ ಸಮಯದ ಬಳಿಕ ಪ್ರಯೋಗಿಸಿದವನೂ ಪ್ರಯೋಗಕ್ಕೆ ಒಳಗಾದವರು ಇಬ್ಬರೂ ಹೊರಬರಲೇಬೇಕಾಗುತ್ತದೆ. ಇನ್ನು ಈ ಶಕ್ತಿಗೂ ಮೀರಿದ ಹೃದಯ ಸೆಳೆತದ ಬಗ್ಗೆ ನಿಮಗೆ ಸಂಜಿಕೆ ಇದ್ದರೆ ಅದು ಅತ್ಯಂತ ಬಲಿಷ್ಠವಾದದ್ದು, ಅದು ಯಾರ ಒಪ್ಪಿಗೆಯನ್ನು ಕಾಯುವುದಿಲ್ಲ, ಪರಮ ಸಮರ್ಪಣೆಯೇ ಅದರ ಶಕ್ತಿ, ಅದು ಈ ನಡೆಯ ಹಿಂದಿನ ಶಕ್ತಿ ಎಂದಾಕ್ಷಣ ಮತ್ತದೇ, ಇದ್ದದ್ದು ಇದ್ದ ಹಾಗೆ ಒಪ್ಪಿಕೊಳ್ಳುವ ಅಥವಾ ಗೌರವಿಸುವ ನಗು ನಕ್ಕು ಸುಮ್ಮನಾಗಿದ್ದರು. ಅಂದಿನಿಂದ ಇಂದಿನವರೆಗೂ ಉಡುಪಿಗೆ ಬಂದರೆ ನೋಡಲೇಬೇಕೆಂದೆನಿಸುವ ಸೆಳೆತ ಉಳಿಸಿಕೊಂಡವರು ಆಂಟಿ. ನಾನು ಬರಲಾ ಅಂತ ಮುಂಚಿತ ಕೇಳಿ ಹೋದಾಗಲೆಲ್ಲ ನನಗೆ ಉಡುಪಿಯ ಪತ್ರೊಡೆ, ಹಲಸಿನ ಹಣ್ಣಿನ ಯಾವುದಾದರೂ ವಿಶೇಷ ಪದಾರ್ಥ ಮಾಡಿ, ನಿಂಗೆ ಅಪರೂಪ ಅಲ್ವೇನೆ ಅಂತ ಪರಿಪರಿ ಬಡಿಸುವ ಮತ್ತು ಮುಕ್ತವಾಗಿ ನನ್ನ ಎಲ್ಲ ಮಾತುಗಳನ್ನು ಕೇಳಿ ನಕ್ಕು ತಾನು ಹಗುರಾಗಿ ನಮ್ಮನ್ನು ಹಗುರ ಮಾಡುವ ತಾಯಿಯಾಗಿ ಬರಬರುತ್ತಾ ನನ್ನ ಒಳಗೆ ಇಳಿದು ಬಿಟ್ಟಿದ್ದಾರೆ.

ಇತ್ತೀಚೆಗೆ ಬೆಂಗಳೂರಿನಲ್ಲಿ ಅವರಿಗೆ ಯಾವುದೋ ಸನ್ಮಾನ ನಡೆದ ಸುದ್ದಿಯನ್ನು– ನಾನು ಊರಲ್ಲಿ ಇರಲಿಲ್ಲ ಆದ್ದರಿಂದ– ಮರು ದಿವಸದ ಪತ್ರಿಕೆಯ ಸುದ್ದಿ ಓದಿ ಛೆ, ಅಮ್ಮಾ, ನಿನ್ನೆ ನಿಮಗೆ ಸನ್ಮಾನ ಎಂದು ಇಂದಿನ ಪತ್ರಿಕೆ ಹೇಳಿತು. ನಾನಿದ್ದಿದ್ದರೆ ನನ್ನ ಅಮ್ಮನಿಗೆ ಸನ್ಮಾನ ಎಂಬ ಸಂಭ್ರಮದಿಂದ ನಿಮ್ಮ ಸೆರಗಿನ ಕುಚ್ಚು ಹಿಡಿದು ಇಡೀ ಸಭಾಂಗಣ ಎಲ್ಲ ಖುಷಿಯಿಂದ ನಿಮ್ಮ ಸುತ್ತು ತಿರುಗುತ್ತಿದ್ದೆ ಎಂದು ಮೊಬೈಲ್ ಸಂದೇಶ ಕಳಿಸಿದರೆ, ಆ ತಾಯಿ ಅಷ್ಟೇ ಪ್ರೀತಿಯಿಂದ ನನ್ನ ಸೆರಗಿನ ಕುಚ್ಚು ಹಿಡಿದ ನಿನ್ನ ಕೈಬೆರಳು ಇನ್ನೂ ಸೆರಗಿನ ತುದಿಯಲ್ಲೇ ಇದೆ. ಯಾವಾಗ ಬರುತ್ತಿ ಉಡುಪಿಗೆ ಅಂತ ಕೇಳಿ ಉತ್ತರಿಸಿದ್ದ ಆ ಪ್ರೀತಿಗೆ ಕರುಳು ಹರಿದು, ಆಹಾ ಇಷ್ಟು ಪ್ರೀತಿಯಿಂದ ಕರೆದರೆ ಬರದೆ ಇರುವುದಾದರೂ ಹೇಗೆ ಅಮ್ಮಾ ಓಡಿ ಬರುತ್ತೇನೆ ಎಂದವಳು, ಮತ್ತೆ ಕೆಲ ದಿನಗಳಲ್ಲಿ ಅವರ ಬಳಿ ಕುಳಿತು ಕುಣಿದು ತಿಂದು ಖುಷಿಪಟ್ಟು ಬಂದಿದ್ದೆ. ಹೀಗೆ ಆಂಟಿಯಾಗಿದ್ದ ವೈದೇಹಿ ನನಗೆ ಅಮ್ಮನಾಗಿ ನನ್ನನ್ನು ಬೆಳೆಸಿದ್ದಾರೆ. ನಾನು ಅವರಲ್ಲಿ ಕಂಡ ಗುಣವೇ ಅವರ ಬರಹಗಳಲ್ಲೂ ಕಂಡಿದ್ದೇನೆ. ಯಾವುದೇ ಪಾತ್ರ ದೊಡ್ಡ ದನಿ ತೆರೆದು ಬಂದು ಇಳಿಯುವುದಿಲ್ಲ. ಅದು ಇರುವ ವ್ಯವಸ್ಥೆಯನ್ನು ಸುಮ್ಮನೆ ನೋಡುತ್ತಾ ಅದರೊಳಗಿನ ಎಲ್ಲಾ ತಪ್ಪು ಸರಿಗಳನ್ನು ನೋಡುನೋಡುತ್ತಾ ನಿಧಾನಕ್ಕೆ ಒಂದು ಬೆಳವಣಿಗೆಯನ್ನು ಕಾಣುವ ಪ್ರಬುದ್ಧ ರೀತಿಯದು. ಅಂದರೆ ಅದು ವೈದೇಹಿಯವರ ನೇತೃತ್ವದಲ್ಲಿ ಮೇಲಿಂದ

ಕೆಳಗೆ ಅವತರಿಸುವ ಪಾತ್ರವಲ್ಲ, ಬದಲಿಗೆ ಇಲ್ಲಿಯೇ ಇದರ ಒಳಗಿನಿಂದಲೇ ಅನುಭವದಿಂದ ಮಾಗಿ, ನಿಧಾನವಾಗಿ ಅರಳುತ್ತಾ ಎತ್ತರಕ್ಕೆ ಬೆಳೆಯುವ ಒಂದು ಅಪೂರ್ವ ಸೃಷ್ಟಿ. ಅಮ್ಮ ನಮ್ಮನ್ನು ನೋಡಿದ್ದೂ ಹಾಗೆಯೇ. ಆ ಅದು ಹೇಗೆ ಬೆಳೆಯುತ್ತದೋ ಹಾಗೆ ಬೆಳೆಯಲಿ ಎಂಬ ರೀತಿಯಲ್ಲಿ ಎಂಬುದನ್ನು ಈಗಲೇ ಹೇಳಿದ್ದೇನೆ. ಹಾಗಾಗಿಯೇ ನನಗೂ ವೈದೇಹಿ ಆಂಟಿಯಿದ್ದವರು ತಾಯಿಯಾಗುವಷ್ಟು ಹತ್ತಿರವಾದರು. ಈಗಲೂ ಉಡುಪಿಗೆ ಹೋಗುವ ಕೆಲವೇ ಆಕರ್ಷಣೆಗಳಲ್ಲಿ ಅವರು ಪ್ರಮುಖರು. ವೈದೇಹಿ ಎಂದಾಗೆಲ್ಲ ತವರು ಮನೆಯ ಭಾವ ಉಕ್ಕಿಸುವ ಅವರ ಬಾಂಧವ್ಯ ಅಂಥದ್ದು. ಆದ್ದರಿಂದಲೇ ಅವರಿಗೆ ಎಪ್ಪತ್ತಾಗಲಿ ನೂರಾಗಲಿ ನನಗವರು ಅಮ್ಮನೇ. ಹೆತ್ತವರ ಮನೆಯನ್ನು ನೆನೆಯದ ನನಗೆ ತವರು ಮನೆಯ ಭಾವ ಹುಟ್ಟಿಸಿ ಉಡುಪಿಗೆ ಸೆಳೆವ ಆ ತಾಯಿಗೆ ನಮನ.

ಹೀಗೊಂದು ತಾಯಿಯನ್ನು ಹೃದಯ ತುಂಬಿ ಕೊಂಡಾಡುವ ಅವಕಾಶ ಮಾಡಿಕೊಟ್ಟ ಸವಿತಾ ನಾಗಭೂಷಣ್‌ಗೆ ಸಪ್ರೇಮ ವಂದನೆಗಳು. ಅಮ್ಮ ಹೀಗೆ ತಾವು ನೀಡುವ ಪ್ರೀತಿಯಿಂದಲೂ ಹುಟ್ಟುತ್ತಾಳೆ, ಬರೇ ಹೆರುವುದರಿಂದ ಅಲ್ಲ ಎಂಬುದನ್ನು ನನಗೆ ಜೀವಂತ ತೋರಿದ ವೈದೇಹಿ ಎಂಬ ನನ್ನ ವಿರಕ್ತ ತಾಯಿಯ ಪಾದಕ್ಕೆ ಹಣೆಹಚ್ಚಿ ನಮನ.



# ನಾ ಕಂಡ ವೈದೇಹಿ

✦ ವಿಜಯಾ ಶ್ರೀಧರ್

'ಸುಧಾ'ದಲ್ಲಿ ಪ್ರಕಟವಾದ ವೈದೇಹಿ ಅವರ ಮೊದಲ ಲೇಖನ, ಅದರ ಕುರಿತಾಗಿ ವಾಚಕರ ವಾಣಿಯಲ್ಲಿ ಓದುಗರ ಸಂಶಯ, ಅದಕ್ಕೆ ಜಾನಕಿ ಹೆಬ್ಬಾರ 'ವೈದೇಹಿ'ಯಾದ ಕಾರಣ ಎಲ್ಲವನ್ನೂ ನನ್ನ ಕಾಲೇಜು ದಿನಗಳಲ್ಲಿ ಓದಿ, ವೈದೇಹಿ ಬಗ್ಗೆ ಕುತೂಹಲ ಮೂಡಿಬಿಟ್ಟಿತು. ಎಷ್ಟೋ ವರ್ಷಗಳ ನಂತರ ಶಿವಮೊಗ್ಗಾದ ಕಾಲೇಜಿನ ಕಾರ್ಯಕ್ರಮದಲ್ಲಿ ವಿದ್ಯಾರ್ಥಿಗಳ ಪರವಾಗಿ ನಾನೇ ವೈದೇಹಿಯವರಿಗೆ ಈ ಬಗ್ಗೆ ಪ್ರಶ್ನೆ ಕೇಳಿ ವಿವರಣೆ ಪಡೆದಿದ್ದೆ.

1982 ರಲ್ಲಿ ನಾವು ಶಿವಮೊಗ್ಗಾಕ್ಕೆ ಬಂದು ನೆಲೆಸಿದೆವು. ನಾನೂ ಲೇಖಕಿಯಾಗಿ ಗುರುತಿಸಿಕೊಳ್ಳಲು ಪ್ರಯತ್ನ ಪಡುತ್ತಿದ್ದ ಕಾಲ. ಇಲ್ಲಿಯ 'ಪ್ರಕೃತಿ' ಮಹಿಳಾ ಸಂಘದವರು ನನ್ನನ್ನು ಮುಖ್ಯ ಅತಿಥಿಯಾಗಿ ಕರೆದಿದ್ದರು. ಪ್ರಕೃತಿ ಎಂಬ ಹೆಸರು ಮಹಿಳಾ ಸಂಘಕ್ಕೆ ಎಷ್ಟು ಸೂಕ್ತ ಹೆಸರು! ಪ್ರಕೃತಿ–ಸ್ತ್ರೀ ಎರಡರ ಕುರಿತೂ ಮಾತನಾಡಿದೆ. ನಾನು ನಿಸರ್ಗ ಪ್ರಿಯೆ ಮುಂತಾಗಿ ಹೇಳಿದೆ. ಕಾರ್ಯಕ್ರಮದ ನಂತರ ಭೋಜನದ ಸಮಯದಲ್ಲಿ 'ಪ್ರಕೃತಿ'ಯ ಸದಸ್ಯೆಯರು 'ನಮ್ಮ ಸಂಘಕ್ಕೆ ಈ ಹೆಸರು ಇಟ್ಟವರು ವೈದೇಹಿ. ಅವರ ಪ್ರೇರಣೆಯಿಂದಲೇ ನಾವು ಈ ಸಂಘ ಕಟ್ಟಿದ್ದು' ಎಂದರು. 'ಅವರೆಲ್ಲಿ?' ಎಂದೆ. 'ಅವರು ಈಗ ಉಡುಪಿಯಲ್ಲಿ ನೆಲೆಸಿದ್ದಾರೆ' ಎಂದರು. ತುಂಬ ನಿರಾಶೆಯಾಯ್ತು.

ಕಾರಗಡಿಯ ದೇವಸ್ಥಾನದಲ್ಲಿ ನಮ್ಮಿಬ್ಬರಿಗೂ ಬಂಧುಗಳಾದವರ ಮನೆ ಮದುವೆ. ಅಲ್ಲಿ 'ವೈದೇಹಿ' ಯವರನ್ನು ನೋಡುವ ಅವಕಾಶ ಸಿಕ್ಕಿತು. ಕೃಶಕಾಯದ, ಹೊಳೆವ ಕಂಗಳ ವೈದೇಹಿಯವರ ಪರಿಚಯ ಮಾಡಿಕೊಂಡೆ. ತುಂಬ ಮಾತನಾಡಿದೆವು. 'ನಮಗೆಲ್ಲಾ ಹಳ್ಳಿಗಳಲ್ಲಿ ಬಾಲ್ಯ ಕಳೆದದ್ದೇ ನಮ್ಮ ಭಾಗ್ಯ. ನಮ್ಮ ಸಾಹಿತ್ಯದ ಬೇರುಗಳು ಹಳ್ಳಿಯಲ್ಲಿ' ಎಂದು ವೈದೇಹಿ ಸಂತಸಪಟ್ಟಿದ್ದರು.

ನಂತರದ ವರ್ಷಗಳಲ್ಲಿ ಶಿವಮೊಗ್ಗಾದ ಸಾಹಿತ್ಯಿಕ – ಸಾಂಸ್ಕೃತಿಕ ಬದುಕಿನಲ್ಲಿ ತೊಡಗಿಸಿಕೊಂಡೆ. ಶಿವಮೊಗ್ಗಾದ ಕರ್ನಾಟಕ ಸಂಘ 'ಎಂ.ಕೆ. ಇಂದಿರಾ' ಬಹುಮಾನವನ್ನು

ವೈದೇಹಿಯವರ 'ಅಸ್ಪೃಶ್ಯರು' ಕೃತಿಗೆ ನೀಡಿತು. ಆಗ ಕರ್ನಾಟಕ ಸಂಘ ಹೊರತರುತ್ತಿದ್ದ 'ಮಾಹಿತಿ' ಪತ್ರಿಕೆಗೆ ಆ ಕೃತಿ ಕುರಿತು ಬರೆಯಬೇಕು ಎಂದು ಅಂದು ಗೌರವ ಕಾರ್ಯದರ್ಶಿಯಾಗಿದ್ದ ಶ್ರೀ ಟಿ.ಆರ್. ಪಾಂಡುರಂಗ ಹೇಳಿದರು. ಬರೆದೆ. ಅದನ್ನು ಮೆಚ್ಚಿ ಸ್ಥಳೀಯ ದಿನಪತ್ರಿಕೆ 'ಉಷಾಮಹಿ' ಮರು ಪ್ರಕಟಿಸಿತು. ಇತ್ತೀಚೆಗೆ 'ವೈದೇಹಿ' ಜೀವನ ಮತ್ತು ಕೃತಿಗಳ ಸಮೂಹ ಶೋಧದಲ್ಲಿ (ಸಂ. ಮುರಳೀಧರ ಉಪಾಧ್ಯ ಹಿರಿಯಡಕ) ಆ ಲೇಖನ ಸೇರಿರುವುದು ಸಂತಸ ತಂದಿದೆ.

ಶಿವಮೊಗ್ಗಾದ ಕೆಲವು ಕಾರ್ಯಕ್ರಮಗಳಲ್ಲಿ, 'ನೀನಾಸಂ'ನಲ್ಲಿ ಆಗಾಗ ವೈದೇಹಿ ಭೇಟಿಯಾಗುತ್ತಿರುತ್ತಾರೆ. ಆ ಅನುಭವಗಳು ಬೇರೆ. ದೂರ ನಿಂತು ಅವರ ಕತೆ-ಕವಿತೆ, ಲೇಖನ ಓದುವ ಅನುಭೂತಿ ಬೇರೆಯೇ ಆಗಿದೆ. ನಮ್ಮ ಎದುರು ಸಿಗುವ ವೈದೇಹಿ ನಮ್ಮ -ನಿಮ್ಮ ಹಾಗಿನ ಸಾಮಾನ್ಯ ಮಹಿಳೆ! ಸಾಹಿತ್ಯ ಸೃಷ್ಟಿಸುವ ವೈದೇಹಿ ಅದ್ಭುತ ಚೇತನ !!

ಅವರ ಒಂದು ಕತೆ, ಒಂದು ಕವಿತೆ ನನ್ನನ್ನು ತಟ್ಟಿರುವ ರೀತಿಯನ್ನು ಮಾತ್ರ ಹೇಳುತ್ತೇನೆ. ವೈದೇಹಿಯವರ ಕುಂದಾಪುರದ ಕನ್ನಡ ಸೊಗಸು-ಸೊಗಡು ಬಹಳ ಪ್ರಸಿದ್ಧವಾದುದು. ಕೆಲವರು ಬಹುಕಾಲ ಅದನ್ನು 'ಹವಿಗನ್ನಡ' ಎಂದು ಭಾವಿಸಿದ್ದೂ ಇದೆ. ಆದರೆ ನನಗೆ ಬಹುಪ್ರಿಯವಾದ ಅವರ ಕಥೆ, ಭಾವಗೀತಾತ್ಮಕವಾದ ಸರಳ ಕನ್ನಡದಲ್ಲಿ ಬರೆದಿರುವ 'ಶಕುಂತಲೆಯೊಡನೆ ಕಳೆದ ಅಪರಾಹ್ನ' ನೀನಾಸಂನ 'ಲೋಕ ಶಾಕುಂತಲ' ನಾಟಕ ಪ್ರೇರಣೆಯಿಂದ ಬರೆದದ್ದು. ಕಾಳಿದಾಸನ ಅಭಿಜ್ಞಾನ ಶಾಕುಂತಲದಷ್ಟು ರಮ್ಯ ನಾಟಕ ಇನ್ನೊಂದಿರಲಾರದು. ಕನ್ನಡದಲ್ಲಿ ಅದು ನಾಟಕ, ಸಿನೇಮಾ, ರೂಪಕ-ನೃತ್ಯ ಹೀಗೆ ನಾನಾ ರೀತಿಯ ರೂಪಾಂತರವಾಗಿ ಜನಮನ ಸೆಳೆದಿದೆ.

'ಅಪರಾಹ್ನ'ವೆಂದರೆ ನಡು ಹಗಲಿನ ನಂತರ ಕಾಲ. ವೈದೇಹಿಯೊಡನೆ ತನ್ನ ಕತೆ ಹಂಚಿಕೊಳ್ಳುತ್ತಿರುವ ಶಕುಂತಲೆಯೂ ಮಧ್ಯ ವಯಸ್ಸು ದಾಟಿದವಳೇ. 'ಅಭಿಜ್ಞಾನ ಶಾಕುಂತಲ'ದ ಭ್ರಮರ ಪ್ರಸಂಗವನ್ನು ವೈದೇಹಿ ವರ್ಣಿಸುವುದು ಹೀಗೆ 'ಭ್ರಮರ ಸುತ್ತಿದ ಕ್ಷಣ.... ನನ್ನ ಸುತ್ತ ಭ್ರಮೆಯ ಬಲೆ ನೇಯಲೆಂದೇ? ...... ಆದರೆ ಭ್ರಮರದ ಸುತ್ತ ನಾ ತಿರುಗಿದೆನೇ ನನ್ನ ಸುತ್ತ ಭ್ರಮರವೇ? ಅಂತೂ ಬಲೆಯೊಳಗೆ ಸ್ವಯದಿಂದಲೇ ಸಿಕ್ಕಿಬಿದ್ದಿದ್ದೆ. ಇದು ವಾಸ್ತವ'. ವೈದೇಹಿ, ಪ್ರೇಮದ ಜಾಲದಲ್ಲಿ ಸಿಕ್ಕು ಮೋಸ ಹೋಗುವ ಆಧುನಿಕ ಶಕುಂತಲೆಯರ ಬಗ್ಗೆ ಏನನ್ನೂ ನೇರವಾಗಿ ಹೇಳದೆಯೂ ಬಹಳಷ್ಟು ಹೇಳುತ್ತಿದ್ದಾರೆ ಅನಿಸುವುದಿಲ್ಲವೆ?

ಶಕುಂತಲೆ, ದುಷ್ಯಂತನೊಡನೆ ಅಂಗಸುಖದಲ್ಲಿ ಮೈಮರೆತಾಗ 'ಹುಡುಗೀ, ನೀನು ಯಾರದೋ ಬದಲಿಗೆಂದು, ಯಾರನ್ನೋ ನಿನ್ನ ಮೇಲೆ ಆವಾಹಿಸಿಕೊಂಡಿರಬಾರದೇಕೆ ಈತ? ಶಕುಂತ ಪಕ್ಷಿಯೊಂದು ಪ್ರೀತಿಯಿಂದ ಕೇಳಿದಂತಾಯಿತು ಎಂದು ವೈದೇಹಿ

ಬರೆಯುತ್ತಾರೆ. ಗಮನಿಸಬೇಕಾದದ್ದು ತಾಯಿ ಮೇನಕೆಯಲ್ಲ, ಮೇನಕೆ ಪರಿತ್ಯಜಿಸಿದ ಮಗು ಶಕುಂತಲೆ, ಶಕುಂತ ಪಕ್ಷಿಗಳು ಬದುಕಿಸಿದ ಮಗು, ಅವೇ ಬುದ್ಧಿವಾದ ಹೇಳಬೇಕಲ್ಲವೆ? ಆದರೆ ಶಕುಂತಲೆ ಮಧುರಿಮೆಯ ಉತ್ತುಂಗವೇರಿದ್ದಳಂತೆ ಶಕುಂತಲೆ ಕತೆ ಮುಂದುವರಿಸುತ್ತಾ ಹೇಳುತ್ತಾಳೆ.

'ನಾ, ಮೇನಕೆಯ ಮಗಳಲ್ಲ, ರಾಜರ್ಷಿಯ ಕೂಸಲ್ಲ, ಕಣ್ವರ ಸಾಕು ಮಗಳೂ ಅಲ್ಲ, ಪೂರ್ಣ ಪ್ರಕೃತಿಯೇ ಆಗಿದ್ದೆ'.

ಮತ್ತೆ ಕತೆಯ ಮುಕ್ತಾಯದಲ್ಲೂ ವೈದೇಹಿ ಬರೆಯುತ್ತಾರೆ 'ಈಕೆ ಯಾರು? ಪ್ರೇಮಿಯೇ, ವಿರಹಿಣಿಯೇ, ತಪಸ್ವಿನಿಯೇ?

ಅಥವಾ ಎಲ್ಲವೂ ಆಗಿ ಎಲ್ಲವನ್ನೂ ಕಳೆದು ಚೊಕ್ಕವಾದ ಪ್ರಕೃತಿಯೇ?'

ಈ ಸಾಲುಗಳು ಹಿಡಿದಿಟ್ಟಿರುವ 'ಪ್ರಕೃತಿ'ಯ ಅರ್ಥಬಾಹುಳ್ಯವನ್ನು ಗಮನಿಸಬೇಕು. ಜೊತೆಗೆ ಶಿವಮೊಗ್ಗಾದಲ್ಲಿ ಅವರ ಪ್ರೇರಣೆಯಿಂದ ಕಟ್ಟಿದ ಮಹಿಳಾ ಸಂಘದ 'ಪ್ರಕೃತಿ' ಹೆಸರನ್ನೂ ನೆನಪಿಸಿಕೊಳ್ಳಬೇಕು.

ವೈದೇಹಿಯವರ ಕವನಗಳಲ್ಲಿ ನನಗೆ, ನಮ್ಮ ಮಕ್ಕಳಿಗೆ ಬಹು ಆಕರ್ಷಣೆ ತಂದಿರುವ ಕವನ 'ಶಿವನ ಮೀಸುವ ಹಾಡು'. ಮನೋವೈದ್ಯೆಯೂ, ಭರತನಾಟ್ಯ ಕಲಾವಿದೆಯೂ ಆದ ನಮ್ಮ ಮಗಳು ಡಾ॥ ಪವಿತ್ರಾ ತನ್ನ 'ಕಾವ್ಯ-ಕನ್ನಿಕೆ' ನಾಟ್ಯ ಪ್ರಸ್ತುತಿಗಾಗಿ ಸ್ತ್ರೀ ಸಂವೇದನೆಯುಳ್ಳ ಕವನಗಳನ್ನು ಆಯ್ದುಕೊಳ್ಳುವಾಗ ಅವಳಿಗೆ ಇಷ್ಟವಾದ ಕವನಗಳಲ್ಲಿ ಇದು ಅಗ್ರಸ್ಥಾನದಲ್ಲಿತ್ತು. ಅವರ ಅನುಮತಿಗಾಗಿ ದೂರವಾಣಿಯಲ್ಲಿ ಪವಿತ್ರಾ ಸಂಪರ್ಕಿಸಿದಾಗ 'ಅನುಮತಿಯಾ? ಸಂತೋಷವಾಗಿ' ಎಂದು ಉದ್ಗರಿಸಿದರು ಎಂದು ಪವಿತ್ರಾ ಹೇಳುತ್ತಿರುತ್ತಾಳೆ.

'ಅಭಿಷೇಕ ಮಾಡಿದಳು ಗೌರಿ' ಎಂದು ಮಗಳು ಪವಿತ್ರ ರಂಗದಲ್ಲಿ ಅಭಿನಯಿಸುತ್ತಿದ್ದರೆ ಆ ಗೌರಿ, ವೈದೇಹಿ, ಈ ಪವಿತ್ರ ಎಲ್ಲ ಒಂದಾಗಿ ಜಗತ್ತಿನ ಎಲ್ಲ ಹೆಣ್ಣುಗಳ ಸಂಕಟಗಳನ್ನು ಹೀಗೆ ವ್ಯಕ್ತಪಡಿಸುತ್ತಿದ್ದಾರೆ ಎಂಬ ಭಾವ ನನ್ನೊಳಗೆ !

ಇಡೀ ಕವನದ ಒಂದೊಂದು ಶಬ್ದವೂ ಹಲವು ಅರ್ಥ-ಆಯಾಮಗಳನ್ನು ಮುಚ್ಚಿಟ್ಟುಕೊಂಡಿದೆ. ತ್ರಿಲೋಕ ಸಂಚಾರಿ ಶಿವ ಎನ್ನುವಲ್ಲೇ ಅದೆಷ್ಟು ಸೂಚ್ಯಾರ್ಥಗಳಿವೆಯಲ್ಲವೆ? 'ನಗುವ ನಟರಾಜನನು ಕರೆವಳೋ ಸ್ನಾನಕ್ಕೆ ದುಃಖ ಹತ್ತಿಕ್ಕಿ, ಮುಗಿಯಿತೇ ಬೇಟೆ ಪ್ರಶ್ನೆ ಚುಚ್ಚಿ' ಇಲ್ಲಿ ನಟರಾಜ-ನಟಿಸುವವನು, ಬೇಟೆ-ಹೆಣ್ಣುಗಳ ಬೇಟೆ ಎಂಬರ್ಥದಿಂದ ಕಲಾವಿದೆಗೆ ಹೊಸ ಸವಾಲುಗಳನ್ನು ಒಡ್ಡುತ್ತವೆ. ಇಡೀ ಕವನಕ್ಕೆ ಕಳಸಪ್ರಾಯದಂತೆ ಇರುವ ಪದ್ಯ.

'ಶಿವನಿದ್ದೂ ಶಿವನಿಲ್ಲದಂಥ ಚೋದ್ಯಗಳೆಲ್ಲ
ಹೊಸತೇನು ಶಿವಕಾಮಿಗೆ?
ಮಿಸುಕಾಡದೇ ಕುಳಿತು ತಲ್ಲಣ ತಡೆಯುವ
ಆರ್ದ್ರಗರ್ವದ ಹುಡುಗಿ ನಮ್ಮ ಗೌರಿ'.

'ಆರ್ದ್ರಗರ್ವ' ಈ ಶಬ್ದವೇ ಅದ್ಭುತ. ಮಾರ್ದವತೆ ತುಂಬಿದ್ದೂ, ಅಭಿಮಾನಿಯಾಗಿರುವ ಹೆಣ್ಣುಮಕ್ಕಳ ಸಂಕೇತದಂತಿದ್ದಾಳೆ ಈ ಗೌರಿ. ಹಲವು ಹೆಣ್ಣು ಮಕ್ಕಳು ತಮ್ಮ ಸಂಕಟ ಹೇಳಿಕೊಂಡು ಅಳುತ್ತಾರೆ, ಕೂಗಾಡುತ್ತಾರೆ, ಕೆಲವು ಸ್ವಾಭಿಮಾನಿ ಹೆಣ್ಣು ಮಕ್ಕಳು ತಮ್ಮ ದುಃಖ-ದುಗುಡಗಳನ್ನು ತುಟಿ ಕಚ್ಚಿ ಸಹಿಸುತ್ತಾರೆ. ಆ ಆರ್ದ್ರತೆ, ಗರ್ವವಿರುವ ಸ್ತ್ರೀರೂಪವೇ ಗೌರಿ. ಆದ್ದರಿಂದಲೇ ವೈದೇಹಿಯವರ 'ಶಿವನ ಮೀಸುವ ಹಾಡು' ನನಗೆ ಪ್ರಿಯ.



# ಸ್ವಗತವಾಗಿ ಕಾಡುವ ಸೌಗಂಧಿ

✦ ಅಕ್ಷತಾ ಹುಂಚದಕಟ್ಟೆ

ವೈದೇಹಿ, ನಿಮ್ಮನ್ನು ಹಾಗೆ ಹೆಸರು ಹಿಡಿದು ಕರೆಯೋದೇ ಚಂದ. 'ಮೇಡಂ' ಅಂತ ಕರೀಬಹುದೇನೋ. ಆದರೆ ವೈದೇಹಿ ಅನ್ನುವಾಗ ಒಂದು ಭಾವ ಸ್ಫುರಿಸುತ್ತದಲ್ಲ, ಅದು ನಿಮ್ಮನ್ನು ಮೇಡಂ ಅಂತ ಕರೆದಾಗ ವ್ಯಕ್ತವಾಗುವುದೇ ಇಲ್ಲ. ಕೆಲವು ಹೆಸರುಗಳೇ ಹಾಗೆ ಮುಕ್ಕಾಗಿಸದೇ ಅರ್ಧ ಮಾಡದೆ ಅಥವಾ ಬೇರೆ ವಿಶೇಷಣ ಏನೂ ಸೇರಿಸದೆ ಕರೆದರೆ ಚೆನ್ನ. ಅಂಥವರ ಪಟ್ಟಿಯಲ್ಲಿ ನಿಮ್ಮ ಹೆಸರೇ ಮೊದಲು ವೈದೇಹಿ.

ನಾನು ಹುಟ್ಟುವ ಮೊದಲೇ ನಿಮ್ಮ ಮೊದಲ ಕಥಾಸಂಕಲನ 'ಗಿಡ ಮರ ಬಳ್ಳಿ' ಬಂದಾಗಿತ್ತು. ಸಾಹಿತ್ಯದ ಓದನ್ನು ಶುರುಮಾಡುವ ಹೊತ್ತಿಗೆ ನೀವು ಕತೆ–ಕವಿತೆ–ನಾಟಕ ಎಲ್ಲ ಪ್ರಕಾರದಲ್ಲೂ ಬರೆದು ಹೆಸರು ಮಾಡಿದ್ದಿರಿ. ನೀನಾಸಂನಲ್ಲಿ ನಿಮ್ಮನ್ನು ಮೊದಲು ಕಂಡಾಗ ನಾನು ಎರಡನೇ ಪಿಎ ಓದುತ್ತಿದ್ದೆ. ಜೊತೆಗೆ ಕವಿ–ಕಥೆಗಾರರೆಂದರೆ ನಮ್ಮಂಥವರು ನೋಡಲು ಸಾಧ್ಯವೇ ಇಲ್ಲದವರು, ಅವರೇನಿದ್ದರೂ ಪತ್ರಿಕೆ ಪುಸ್ತಕಗಳಲ್ಲಿ ಫೋಟೋ ಮೂಲಕವೇ ಕಾಣಿಸಿಕೊಳ್ಳುವಂಥವರು ಎಂಬ ನನ್ನ ಕಲ್ಪನೆ ನಿಧಾನಕ್ಕೆ ದೂರವಾಗುತ್ತಿದ್ದ ಹೊತ್ತದು. ಅದಾಗಲೇ ನಿಮ್ಮ ಮೊದಲ ಕಥಾ ಸಂಕಲನವು ಸೇರಿದಂತೆ ಅಂತರಂಗದ ಪುಟಗಳು, ಗೋಲ ಸಂಕಲನಗಳನ್ನು ಮತ್ತು 'ಲಂಕೇಶ್ ಪತ್ರಿಕೆ'ಯಲ್ಲಿ ಜಾತ್ರೆ ಕುರಿತ ಲೇಖನಗಳನ್ನು ಓದಿದ್ದೆ. ನಿಮ್ಮ 'ಅಡುಗೆಮನೆಯ ಹುಡುಗಿ' ನಮಗೆ ಪಿಯುಸಿಯಲ್ಲಿ ಪಠ್ಯವಾಗಿತ್ತು. 'ಮುರಿಯುತ್ತ ಮೆಣಸಿನ ಚೊಟ್ಟು, ಆಕಾಶದ ಸದ್ದಿಗೆ ಕಿವಿಯ ತೆರೆದಿಟ್ಟು, ಕಳೆಯುವಳು ಆಯುಷ್ಯ ಬೊಟ್ಟು ಬೊಟ್ಟು' ಅನ್ನುವ ಕೊನೆಯ ಸಾಲುಗಳಂತೂ ಸೈಯೇ ಸೈ. ಅವು ಸೇರಿದಂತೆ ಇಡೀ ಪದ್ಯವೇ ಬಾಯಿಪಾಠವಾಗಿ ಹೋಗಿತ್ತು. ಆ ಪದ್ಯವನ್ನು ಹಲವು ಸಾರಿ ಹೇಳಿಕೊಂಡೆವು. ಅದು ನಮ್ಮದೇ ಸ್ಥಿತಿ ಅಂತ ಮನದಟ್ಟಾಗಿತ್ತಾದರೂ ಅಡುಗೆಮನೆ ಹುಡುಗಿಯ ದುಸ್ಥಿತಿಗೆ ನಾವು ಮರುಗಿದೆವು. ಅವಳ ನೋವಿಗೆ ನಾವು ಕರಗಿದೆವು. ಅಂಥದೊಂದು ಪದ್ಯ ಬರೆದ ನಿಮ್ಮನ್ನು ನೀನಾಸಂನಲ್ಲಿ ನೋಡಿ ಕಣ್ತುಂಬಿಕೊಂಡೆ.

ಮೂರು ವರ್ಷದ ಹಿಂದೆ ಆಶಾದೇವಿ ಮೇಡಂ ಕರೆದು 'ವೈದೇಹಿ ನಾಳೆ ಶಿವಮೊಗ್ಗಕ್ಕೆ ಬರ್ತಾ ಇದ್ದಾರೆ. ನಾನು ಇರೋದಿಲ್ಲ, ನೀನು ಅವರ ಜೊತೆ ಹೋಗಿ ಬಾ' ಅಂದ್ರು. ಮರುದಿನ ನಾನು ಕುವೆಂಪು ರಂಗಮಂದಿರಕ್ಕೆ ನಿಮ್ಮನ್ನು ಕಾಣಲು ಹೋದೆ. ನೀವು ನಗೆಮೊಗದಲ್ಲೇ ರಂಗಮಂದಿರದ ಬಾಗಿಲ ಬಳಿ ಎದುರಾದಿರಿ. ನೆಹರೂ ರಸ್ತೆಯಲ್ಲಿ ಸುಮ್ಮನೆ ನಾವಿಬ್ಬರೂ ನಡೆದೇ ಹೊರಟೆವು. ನೀವು ಪ್ರತಿಯೊಂದು ಅಂಗಡಿ ಮುಂಗಟ್ಟುಗಳನ್ನು ಕಣ್ಣಲ್ಲಿ ತುಂಬಿಸಿಕೊಂಡು ನಡೆಯುತ್ತಿದ್ದಿರಿ. ಶಿವಮೊಗ್ಗೆಯ ಸೊಸೆ ನೀವು... 'ಇದೆಲ್ಲ ನಾನು ನಡೆದಾಡಿದ ರಸ್ತೆಯೇ. ದುರ್ಗಿಗುಡಿಗೇ ಏನಾರೂ ಬೇಕಂದ್ರೆ ನಾವು ಬರ್ತಾ ಇದ್ದದ್ದು' ಎಂದು ಸಂಭ್ರಮಿಸಿದಿರಿ.

ನೆಹರೂ ರಸ್ತೆಯಲ್ಲಿ ನಿಮ್ಮ ಕೆಲಸ ಮುಗಿದ ನಂತರ ಒತ್ತಾಯದಿಂದ ನಿಮ್ಮ ಗೆಳತಿಯ ಮನೆಗೆ 'ನಿನಗೊಬ್ಬ ಅಪೂರ್ವ ಸುಂದರಿಯನ್ನು ತೋರಿಸ್ತೇನೆ ಬಾ' ಅಂತ ಹೇಳಿ ಕರೆದುಕೊಂಡು ಹೋದ್ರಿ. ಒಳಗೊಂಚೂರು ಗುಮಾನಿನೂ ಇಟ್ಕಳದೇ ಎಷ್ಟು ಸರಳ-ಸುಲಲಿತವಾಗಿ ಪದ-ವಾಕ್ಯಗಳನ್ನು ಕಟ್ಟೋಕೆ ಸಾಧ್ಯವಾಗುತ್ತೆ ವೈದೇಹಿ ನಿಮಗೆ! ಬಂಗಲೆ ಮನೆ, ಚಂದದ ಕೈತೋಟ, ಮನೆಯೊಳಗೆ ನೀಟಾಗಿ ಜೋಡಿಸಿದ ಪೀಠೋಪಕರಣಗಳು ಎಲ್ಲದರ ನಡುವೆ ನಿಮ್ಮ ಗೆಳತಿ ಇದ್ದರು. ಮಕ್ಕಳು ವಿದೇಶದಲ್ಲಿದ್ದಾರೆ. ಗಂಡ ದೊಡ್ಡ ಉದ್ಯಮಿ. ಹೆಚ್ಚಾಗಿ ಕೆಲಸದ ನಿಮಿತ್ತ ಬೆಂಗಳೂರಿನಲ್ಲೆ ಇರುತ್ತಾರೆ ಎಂದರು. ನೀವು ಹೇಳಿದ ಹಾಗೆ ಆಕೆ ನಿಜಕ್ಕೂ ಸುಂದರಿಯಾಗಿದ್ದರು ಮತ್ತು ಅಂಥ ಏಕಾಕಿತನವನ್ನು ಅವರು ಗಾಢವಾದ ನಿರ್ಲಿಪ್ತತೆಯಿಂದ ಸಂಭಾಳಿಸುತ್ತಿರುವಂತೆ ಕಂಡಿತು. 'ನಡೆದಾಡುವ ಕಾವ್ಯ' ಎಂದು ಅವರನ್ನು ನೀವು ಬಣ್ಣಿಸಿದ್ದು ಅರ್ಥಪೂರ್ಣವಾಗಿತ್ತು. ಅವರ ಹೆಸರು ಸುಮಿತ್ರಾ. ನಿರ್ಲಿಪ್ತತೆಗೆ ಇನ್ನೊಂದು ಹೆಸರು ಸುಮಿತ್ರೆ... ಆ ನಿಮ್ಮ ಗೆಳತಿ ಸುಮಿತ್ರಾ ನನಗೆ ನಿಮ್ಮ ಯಾವುದೇ ಕಥೆಯ ಪಾತ್ರದಂತೆ ತೋರಲಿಲ್ಲ. ಬದಲಿಗೆ ರಬೀಂದ್ರನಾಥ ಟಾಗೋರರ ಗಾಢ ವಿಷಾದವೇ ಮೈವೆತ್ತಿದಂತ (ಅಂಥ ವಿಷಾದದಲ್ಲೂ ಆಕೆಯ ವ್ಯಕ್ತಿತ್ವವಿರಲಿ, ಸೌಂದರ್ಯ ಕೂಡ ಚೂರೂ ಮಸುಕಾಗದಂಥ) ನಾಯಕಿಯಂತೆ ಕಂಡರು. ನನ್ನನ್ನು ಮಧ್ಯೆ ಕೂರಿಸಿಕೊಂಡು ಅಕ್ಕ ಪಕ್ಕ ಕೂತು ಒತ್ತಾಯ ಮಾಡುತ್ತಾ ಸೇವಿಗೆ ಬಾತ್ ಕೊಟ್ಟು ಉಪಚರಿಸುವ ಹೊತ್ತಿನಲ್ಲಿ ಮಾತ್ರ ನೀವಿಬ್ಬರೂ ಗೆಳತಿಯರು ಒಂದೇ ಆಗಿ ಕಾಣುತ್ತಿದ್ದಿರಿ.

ಆಮೇಲೆ ನೀವು ನನ್ನ ಮೊದಲ ಕವನಸಂಕಲನಕ್ಕೆ ಬೆನ್ನುಡಿ ಬರೆದುಕೊಟ್ಟಿರಿ. ನನ್ನ ಕವನಗಳ ಬಗ್ಗೆ ಪತ್ರಿಕೆಗಳಲ್ಲಿ ಪ್ರಸ್ತಾಪವಾದಾಗ ಹಿರಿಯಕ್ಕನಂತೆ ಸಂಭ್ರಮಿಸಿದಿರಿ. ಒಂದೆರಡು ವಿಮರ್ಶೆಗಳಲ್ಲಿ 'ಕವಿಗಳ ಮೊದಲನೇ ಸಂಕಲನದಲ್ಲಿರುವ ಕ್ಲೀಶೆಗಳಿಂದ ಈ ಕವಿತೆಗಳು ಪಾರಾಗಿವೆ' ಎಂದು ಪ್ರಸ್ತಾಪವಾಗಿದ್ದನ್ನು ನೋಡಿದ ನಾನು 'ಮೊದಲ ಕೃತಿ ಆ ಕವಿ ಪಡೆದ, ನೋಡಿದ ಅನುಭವಗಳಿಂದ ಹೊರಟಿದ್ದರಿಂದ ಸಹಜವಾಗಿ ಫ್ರೆಶ್ ಆಗಿರುತ್ತೆ.

ಹೋಗ್ತಾ ಹೋಗ್ತಾ ಬರಹ ಕ್ಲೀಷೆ ಆಗ ತೊಡಗುತ್ತೆ. ಅಷ್ಟು ಅರ್ಥವಾಗಲ್ವಾ ಬರೆಯೋರಿಗೆ' ಎಂದು ನಿಮ್ಮ ಹತ್ತಿರ ಗೊಣಗಿದಾಗ, 'ಏಯ್, ಹಾಗೆಲ್ಲ ಎಂತ ಹೇಳಕ್ಕೋಗ್ಬೇಡ್ವೇ. ಅವರು ನಿನ್ನ ಪದ್ಯ ಗುರುತಿಸಿ ಬರೀತಿದಾರಲ್ಲ. ಉದ್ದೇಶಪೂರ್ವಕವಾಗಿ ಇದರ ಬಗ್ಗೆ ಬರಿಲೇಬಾರದು ಅಂತ ಬಿಟ್ಟಿಲ್ವಲ್ಲ. ಅವರು ಹೇಗೆ ಗ್ರಹಿಸ್ತಾರೋ ಹಾಗೆ ಬರಿಲಿ. ನೀನು ಸುಮ್ಮನೆ ಓದಿ ಖುಷಿ ಪಡೋದು ನೋಡು. ನಿನ್ನ ಪಾಡಿಗೆ ನೀನು ಬರವಣಿಗೆ ಮುಂದುವರೆಸು' ಎಂದು ಬುದ್ಧಿ ಮಾತು ಹೇಳಿದಿರಿ, ಥೇಟ್ ಹಿರಿಯಕ್ಕನ ಶೈಲಿಯಲ್ಲಿ. ಅದೂ ನಮ್ಮ ಕನ್ನಡ ಸಾಹಿತ್ಯ ಲೋಕದ ಜಾಣ ಹಿರಿಯಕ್ಕ....

ವೈದೇಹಿ, ನಿಮ್ಮ ದೊಡಮ, ಚಿಗಮ, ಅಕ್ಕು, ಲಿಲ್ಲಿಬಾಯಿ, ಪುಟ್ಟಮ್ಮತ್ತೆಯ ಮೊಮ್ಮಗಳು, ಮಾಂಕಾಳಿ, ಅಮ್ಮಚ್ಚಿ ಎಲ್ಲರನ್ನೂ ಓದುವಾಗಲೂ ಓದುಗರಾದ ನಮಗೆ ಒಂದು ಗಾಢ ವಿಷಾದ ಕವಿದುಕೊಳ್ಳುತ್ತದೆ. ಆದರೆ ಅಂಥದೊಂದು ವಿಷಾದವನ್ನು ನಮ್ಮಲ್ಲಿ ಹುಟ್ಟಿಸುವ ಆ ಜೀವಗಳು ತಮ್ಮ ಬಗ್ಗೆ ಎಲ್ಲೂ ವಿಷಾದದಿಂದ ಕೊರಗುವುದನ್ನು ನಾವು ನೋಡೋದೇ ಇಲ್ಲ ನಿಮ್ಮ ಕಥೆಗಳಲ್ಲಿ. ಬದಲಿಗೆ ಸಾಧ್ಯವಾದರೆ ಜಾಣತನದಲ್ಲಿ ಸಾಧ್ಯವಾಗದಿದ್ದರೆ ಒಂದು ಬಗೆಯ ಹುಚ್ಚುತನದಲ್ಲಾದರೂ ತಮ್ಮ ಆಸೆಗಳನ್ನು ಈಡೇರಿಸಿಕೊಳ್ಳುವ ಹೆಂಗಸರು ನಿಮ್ಮ ಕಥೆಯಲ್ಲಿ ರಾರಾಜಿಸುತ್ತಾರೆ.

ಜಾತ್ರೆಗೆ ಹೋದ್ರೆ ಕಾಲು ಮುರಿದು ಹಾಕ್ತೀನಿ ಎನ್ನುವ ಗಂಡನ ಮಾತನ್ನು ಮೀರಿ ಜಾತ್ರೆ ಮುಗಿಸಿ, ಬಂದ ಮೇಲೆ ಕಂಡ್ಕಂಡ್ರಾಯ್ತು ಎಂದು ಮಕ್ಕಳನ್ನು ಕರೆದುಕೊಂಡು ಜಾತ್ರೆ ಮಾಡಿ ಬರುವ ದೊಡಮ, ಸಿನಿಮಾಕ್ಕೆ ಹೋಗುವುದನ್ನು ತಡೆದ ಗಂಡಸರಿಗೆ 'ಒಳ್ಳೆ ಕಥೆ, ಒಂದು ಸಿನಿಮಾ ನೋಡಲು ನಾಲಾಯಕಾದೆವೇ? ನೀವು ಹೇಳಿದ ಹಾಗೆ ಕೇಳಿದರೆ ಹೇಗೂ ಕುಣಿಸೀರಿ' ಎಂದು ಉತ್ತರ ಕೊಟ್ಟು, ಸಿನಿಮಾ ನೋಡೇ ತೀರುವ ಹೆಂಗಸರು ತಮ್ಮ ತಮ್ಮ ಲೋಕದಲ್ಲೇ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಬಿಡುತ್ತಾರೆ. ಆದರೆ ಅಲ್ಲೂ ಕೂಡ ಒಳ ಎಚ್ಚರ ಅವರಿಗೆ ಯಾವಾಗಲೂ ಇರುತ್ತದೆ. ಲೋಕದ ಮಾತನ್ನು ಧಿಕ್ಕರಿಸಿದ ಸಂದರ್ಭದಲ್ಲಿ ಕೂಡ ಅವರು, ಒಳ ಎಚ್ಚರದ ಮಾತಿಗೆ ತುಂಬಾ ಬೆಲೆ ಕೊಡುವ ಘನತೆಯ ಹೆಣ್ಣುಗಳು. 'ಯಾಕೆ, ಮರ್ಯಾದೆ ಹೋಪುಕೆ ಬಿಡ್ಲಕಿತ್ತಲೇ' ಎಂದು ಪುಟ್ಟಮ್ಮತ್ತೆ ಕಮಲಾವತಿಗೆ ಹೇಳಿದಾಗ 'ಎಂಥವರಿಂದ ಅದು ಹೋಯ್ಕ್ ಅಂತ ನಂಗೊತ್ತಿತ್' ಎಂದು ಕಮಲಾವತಿ ಕೊಡುವ ಉತ್ತರ ಇಂಥ ಒಳ ಎಚ್ಚರದ ಪ್ರಜ್ಞೆಗೆ ಸಾಕ್ಷಿ.

ವೈದೇಹಿ, ಇಷ್ಟೆಲ್ಲದರ ನಂತರವೂ ನನ್ನದೊಂದು ಪ್ರಶ್ನೆ. ಇಷ್ಟೆಲ್ಲಾ ಜಾಣೆಯರಾದ ಗಟ್ಟಿಗಿತ್ತಿಯರಾದ, ಬದುಕನ್ನು ಕಟ್ಟಿಕೊಳ್ಳುವ ಕಲೆ ಅರಿತ ನಿಮ್ಮ ಹೆಣ್ಣುಗಳು ಅನಕ್ಷರಸ್ಥರು, ಹಳ್ಳಿಗರು, ಆರ್ಥಿಕ ಸ್ವಾತಂತ್ರ್ಯದ ಪರಿಕಲ್ಪನೆಯಿಂದಲೇ ಹೊರಗಿರುವವರು ಆಗಿದ್ದಾರೆ.

ಆದರೆ ನಿಮ್ಮ ಆ ಸೌಗಂಧಿ ವಿದ್ಯಾವಂತೆ, ನಗರ ಕಂಡವಳು. ತನ್ನ ಕಾಲ ಮೇಲೆ ತಾನು ನಿಂತಿರುವವಳು ಆಗಿದ್ದೂ ಅವಳಿಗ್ಯಾಕೆ ತನಗೆ ಸರಿ ಕಂಡಂತೆ, ತನ್ನ ಮನಸ್ಸು ಹಾತೊರೆದಂತೆ ಬದುಕು ರೂಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ? ಅಂಥದೊಂದು ಪ್ರಕ್ರಿಯೆಯನ್ನು ಸಮಾಜ ವಿರೋಧಿಸುತ್ತಲೇ ಬರುತ್ತಿರಬಹುದು. ಆದರೆ ಮನಸ್ಸಿನ ವಾಂಛೆ ಸಾಮಾಜಿಕ ವಿರೋಧಕ್ಕಿಂತ ಶಕ್ತಿಯುತವಾಗಿರಲಿಲ್ಲವೇ? ಅವಳ ಶಕ್ತಿಯನ್ನು ನಿರಾಸೆಯೇ ತಿಂದು ಹಾಕಿತ್ತೇ? ಈ ಎಲ್ಲ ಪ್ರಶ್ನೆಗಳು ಮತ್ತೆ ಮತ್ತೆ ಕಾಡುತ್ತಲೇ ಇರುತ್ತವೆ ವೈದೇಹಿ. ಸ್ವಗತಗಳಾಗಿ....

❖

## ಗೃಹಿಣೀ ಕವಯಿತ್ರಿಗೆ

ಕಳಶ ನೀಲಾಂಜನಗಳ ಉಜ್ಜಿ
ಕವಿತೆ ಶಬ್ದಗಳ ಬೆಳಗಿ

ಬಂದು ಕೂರಲು ಪೂಜೆಗೆ – ಹೂವು
ಪೂಜೆ ಕುಳಿತುದ ಕಂಡು ಪ್ರಾರ್ಥಿಸಿದೆನು

ಗಂಡ ಮಕ್ಕಳ ದೀಪಗಳ ಹಚ್ಚೆ
ಆರ್ತ ಅತಿಥಿಗಿನ್ನೊಂದು ದೀಪವಿರಿಸಿ

ಕಿರಣಗಳ ಗುಡಿ ಮಾಡಿ ಮನೆಯ
ಮಿಡಿಸಿಹಿರಿ ಕತ್ತಲೆಯ ಕವಿಯ

– ಜೀವಯಾನದ ಎಸ್ ಮಂಜುನಾಥ್

‘ಹೆಣ್ಣಿನ ಚೈತನ್ಯ ಮತ್ತು ಸಂಕಟಗಳನ್ನು ಒಟ್ಟು ವ್ಯವಸ್ಥೆಯ ಒಳಗೆ ಇಟ್ಟು, ಹಠ, ವಿರೋಧ, ಸಿನಿಕತೆಗಳಿಲ್ಲದೆ ಪ್ರಬುದ್ಧ ಸ್ವಾಭಿಮಾನ ಹಾಗೂ ತನ್ನತನದಿಂದ ನೋಡುವ ಹಂತವನ್ನು ಸಣ್ಣಕತೆ ಪಡೆದುಕೊಂಡದ್ದು ವೈದೇಹಿ ಅವರ ಮೂಲಕ. ವೈದೇಹಿ ಅವರ 'ಅಕ್ಕು', 'ಸೌಗಂಧಿಯ ಸ್ವಗತಗಳು' ಮುಂತಾದ ಕತೆಗಳು ಕನ್ನಡದ ವಿಶಿಷ್ಟ ಸಂವೇದನೆಯ ಕಲಾಕೃತಿಗಳಾಗಿರುವುದು, ಅವು ಸ್ತ್ರೀತನದ ಬಗೆಗೆ ವಿಮರ್ಶೆರಹಿತವಾದ ಅಹಂಕಾರವನ್ನಾಗಲೀ, ಶರಣಾಗತ ಕೀಳರಿಮೆಯನ್ನಾಗಲೀ ತೋರದ, ತಣ್ಣನೆಯ ಆತ್ಮವಿಶ್ವಾಸದಲ್ಲಿ ಚೈತನ್ಯಶೀಲತೆಯನ್ನು ಶೋಧಿಸುವುದರಿಂದ.’

- ರಹಮತ್ ತರೀಕೆರೆ

('ಸಣ್ಣಕತೆ ೧೯೭೫-೨೦೦೦' ಎಂಬ ಲೇಖನದಿಂದ)

# Vaidehi, my sister

✦ **Nabaneeta Dev Sen***

It is very rare to find a sister in the last phase of your life. And a sister whom you respect as much as you love. Vaidehi came into my life as a bright star; we met at the turn of the century, which was already late. And we write in two different languages and we live in two different parts of the country. Nevertheless we instantly recognized one another as sisters at heart. And the quiet love and respect has continued across the years and across the miles. We are not great letter writers, nor great phone persons but love continues in our heartbeats. We have met in Delhi, we have met in Hyderabad, we have met twice in Kolkata, and we have met in Manipal.

I am much honoured to write a few words on Vaidehi, one of our most powerful Indian writers today.

She came to Kolkata twice, as an honoured guest of SOI and enchanted her audience both times with her stories, her talk, and her personality. Vaidehi is a very special human being; her brilliance has not harmed her warmth. Kolkata fell in love with her.

She has said many times that she was proud of her mother tongue, and proud of her woman's voice. Vaidehi's huge body of

---

* Padma Shri award winning poet, Novelist, and academic –Kolkata)

literary works is a proof of this very precious pride. I have learnt from her writings that, Vaidehi grew up in her large, traditional family, in the countryside of Karnataka, in close contact with nature and domestic animals. And learned a lot about the mysteries and the beauties of life. This knowledge shows itself in the mature handling of life's problems in her stories. Her brilliance reminds me of another stunning writer , Ashapurna Debi, who wrote under very similar circumstances with her husband's full support in a traditional Bengali Hindu household, Just as Vaidehi (Janaki Hebbar) did in Karnataka, in a traditional, large family, with her husband's loving support. Both the writers are serious, but not without a sharp sense of humour.

Among her collections of short stories, Gulabi Talkies, alone is enough to make you a Vaidehi addict, she is so shining bright! The wide variety of her subject matter is amazing. Vaidehi's stories have an apparently straight forward approach, but very cleverly presented, so that a complex pattern emerges.

Let me mention here just one short story from Summaniralaagaddu, (It can't Remain Unsaid) that completely enchanted me and made me her fan forever. The cruelty and the tragedy of human situations unnerve you, as the story closes. It is not only the story, which is powerful enough in its gruesomeness and intense enough in its helplessness, it is the way she unfolds the story little by little in front of you. A chance encounter between two strangers in a train compartment leads to the revelation of an excruciating, tragic tale. Both the strangers are women, and a dark secret unfolds itself. Which began as a woman to woman talk, closes as a silently screaming tragic tale, a lost soul looking for help?. The weight of the moment becomes unbearable to both as the moment passes.

But the gruesome experience stays with the writer for ever. I can only think of Ashapurna Debi who could have handled such incredibly delicate moments of cruelty of human situations as created and presented by Vaidehi. .

When I went to Manipal I saw how much love and respect she enjoyed among her readers. She is their hero, and she deserves every bit of it. She is our hero, too. It is so, because she knows what 'hada' is. Unless you master the art of propriety you cannot win anywhere. This was her mother's advice and blessing.

Dear Vaidehi, my sister, let me wish you a dazzling 75th birthday and may god bless you with continued enjoyment of peoples' love and warmth, for as long as you breathe.

Yours
Nabaneeta.



# ವೈದೇಹಿ–ಕೇವಲ ಸ್ತ್ರೀಯರ ಅಲ್ಲ, ಮಾನವ ಪ್ರಪಂಚದ ಕಥೆಗಾರ್ತಿ

✦ ಡಾ. ಉಮಾ ವಿರೂಪಾಕ್ಷ ಕುಲಕರ್ಣಿ*

ಪ್ರಸಿದ್ಧ ಜಾನಪದ ವಿದ್ವಾಂಸರೂ ನಮ್ಮ ಕುಟುಂಬದ ಹಿರಿಯ ಸ್ನೇಹಿತರೂ ಆದ ಶ್ರೀ ಮುದೇನೂರ ಸಂಗಣ್ಣನವರಿಂದ ಮೊದಲ ಬಾರಿಗೆ ನಾವು ವೈದೇಹಿಯವರ ಹೆಸರನ್ನು ಕೇಳಿದೆವು. ಅವರು ಡಾ। ಕಾರಂತರ ಮನೆಯಂತೆಯೇ ವೈದೇಹಿಯವರ ಮನೆಗೂ ಹೋಗಿಬರುವವರು. 1987–88ರ ಸುಮಾರಿಗೆ ನಮ್ಮನ್ನೂ ಒಮ್ಮೆ ಅವರ ಮನೆಗೆ ಕರೆದೊಯ್ದರು. ಅಂದರೆ ವೈದೇಹಿ ಕಥೆ ಹಾಗೂ ಅವರ ಸಾಹಿತ್ಯದ ಪರಿಚಯ ಆಗುವುದಕ್ಕೆ ಮೊದಲೇ ವೈದೇಹಿ ಆಲಿಯಾಸ್ ಜಾನಕಿ ಶ್ರೀನಿವಾಸ ಮೂರ್ತಿಯವರ ಪರಿಚಯ ನಮಗಾಯ್ತು. ಅವರ ಕುಟುಂಬದೊಂದಿಗೆ ಕಳೆದ ಸಮಯದಲ್ಲಿ ವೈದೇಹಿಯವರ ವ್ಯಕ್ತಿತ್ವವು ಭರವಸೆದಾಯಕವಾಗಿ ಕಂಡಿತು. ತೆಳ್ಳನೆಯ ನಿಲುವು, ನಗುಮುಖ, ಪ್ರಸನ್ನತೆ, ಮಾತಿನಲ್ಲಿ ಅಲ್ಲಲ್ಲಿ ಇಣುಕುವ ಹಾಸ್ಯ. ಅವರೊಡನೆ ಮಾತಾಡುತಿದ್ದ ಹಾಗೆ ಅವರ ಸ್ವಭಾವವೂ ನನ್ನ ಗಮನಕ್ಕೆ ಬಂದಿತು. ಅಂದು ಆರಂಭವಾದ ನಮ್ಮ ಬಾಂಧವ್ಯ ಇಂದಿಗೂ ಅಂತೆಯೇ ಉಳಿದುಕೊಂಡಿದೆ.

ನಾವು ಅಂದು ಕಂಡ ಅವರ ವ್ಯಕ್ತಿತ್ವಕ್ಕೆ ಒಪ್ಪುವ ಅವರ ಕಥೆಗಳನ್ನು ಓದಿದ್ದು ಆ ಮೇಲೆಯೇ. ಅದೇ ಕಾಲಕ್ಕೆ ನಾನು ಮರಾಠಿ ಲೇಖಕಿಯರ ಸತ್ವಯುತವಾದ ಬರವಣಿಗೆಗಳನ್ನು ಓದುತ್ತಲಿದ್ದೆ. ನಗರಕೇಂದ್ರಿತ ಮಹಿಳೆಯರ ಹಲವು ಬಗೆಯ ಸಂವೇದನೆಗಳನ್ನು ಕುರಿತು ಓದುವಾಗ ಆಘಾತಕ್ಕೆ ಒಳಗಾಗುತ್ತಿದ್ದೆ. ಹಲವು ಸಲ ಬೆರಗಾಗುತ್ತಿದ್ದೆ. ಪ್ರಭಾವಿತಳೂ ಆಗುತಿದ್ದೆ. ಸುತ್ತಲ ಮಹಿಳಾ ಚಳವಳಿಯ ವಾತಾವರಣ ದಿಂದಾಗಿ ನನ್ನ ಅರಿವು ಬಹಳಷ್ಟು ಮಟ್ಟಿಗೆ ಆಳವಾಯಿತು. ಇದೇ ಹೊತ್ತಿಗೆ ಇನ್ನೊಂದು ಬದಿಯಲ್ಲಿ ಕನ್ನಡದ ಕೆಲ ಉತ್ತಮ ಕಾದಂಬರಿಗಳನ್ನು ಮರಾಠಿಗೆ ಅನುವಾದಿಸುತ್ತ ಸಂತಸ ಪಡುತಿದ್ದೆ.

---

* ಹೆಸರಾಂತ ಮರಾಠೀ ಅನುವಾದಕರು, ಪುಣೆ

ಇಂಥ ಕಾಲಕ್ಕೆ ವೈದೇಹಿ ಕಥೆಗಳು ನನ್ನೆದುರು ಬಂದವು. ಅವನ್ನು ಓದುವಾಗ ಮಾತ್ರ ಕೇವಲ 'ಚಕಿತ'ಳಾಗದೆ ಬೇರೆಯೇ ಆದೊಂದು ಭಾವನೆಯಲ್ಲಿ ಮುಳುಗಿದೆ. ಅವುಗಳಲ್ಲಿನ ಭಾವನೆ, ಸಮಸ್ಯೆ, ಸುಖದುಃಖ, ವೇದನೆ, ರಾಗ, ಲೋಭ, ದ್ವೇಷ ತಿರಸ್ಕಾರಗಳು ಎಲ್ಲೋ ನನ್ನೊಂದಿಗೆ ನೇರವಾದ ಸಂಬಂಧವುಳ್ಳವು ಅಂತನಿಸತೊಡಗಿತು. ಸ್ವಲ್ಪದರಲ್ಲಿ ಹೇಳಬೇಕೆಂದರೆ ಈ ಕಥೆಗಳು 'ನಮ್ಮವು' ಎಂದೆನ್ನಿಸಿದವು. ಹೀಗಾಗಿ ಅವರ ಕಥೆಗಳ ಮೂಲಕ ವೈದೇಹಿಯವರೊಂದಿಗೆ ನನ್ನ ಇನ್ನೊಂದೇ ಬಾಂಧವ್ಯ ತಯಾರಾಯಿತು!

ಅವರ ಕಥೆಗಳನ್ನು ಅನುವಾದಕ್ಕೆ ಎತ್ತಿಕೊಂಡಾಗ ನನಗೆ ಕೆಲವು ಅಡಚಣೆಗಳು ತಲೆದೋರಿದವು.

1. ವೈದೇಹಿ ಅವರ ಭಾಷೆಯು ಅವರ ಕಥೆಗಳ ಒಂದು ಮಹತ್ವದ ವೈಶಿಷ್ಟ್ಯ. ಅವರು ಗದ್ಯದ ಜೊತೆಗೆ ಪದ್ಯವನ್ನೂ ಬರೆಯುವರಾಗಿ ಅವರ ಗದ್ಯಕ್ಕೂ ಒಂದು ಬಗೆಯ ಕಾವ್ಯಾತ್ಮಕ ಲಯವಿದೆ. ಅದನ್ನು ಅನುವಾದದಲ್ಲಿ ಹಿಡಿಯುವುದು ಬಹಳ ಮುಖ್ಯ.
2 ಅವರ ಭಾಷೆಯ ಇನ್ನೊಂದು ವೈಶಿಷ್ಟ್ಯ ಎಂದರೆ ಅವರು ಯಾವುದೇ ಕೀಳರಿಮೆ ಮೇಲರಿಮೆ ಇಲ್ಲದೆ 'ಸ್ತ್ರೀಭಾಷೆ'ಯನ್ನು ಬಳಸಿರುವುದು.
3. ಮೂರನೆಯ ವೈಶಿಷ್ಟ್ಯವೆಂದರೆ ಅವುಗಳಲ್ಲಿ ಕಾಣುವ ದಟ್ಟವಾದ ಪ್ರಾದೇಶಿಕತೆ. ಅದನ್ನು ಅವರು ವ್ಯಕ್ತಪಡಿಸಲು ಬಳಸುವ ಕೋಟಗನ್ನಡ ನುಡಿ. ಅಲ್ಲಿನ ಸಂಸ್ಕೃತಿಸಂಬಂಧೀ ಪದಗಳ ಬಳಕೆ.

ನನ್ನ ಪತಿ ಶ್ರೀ ವಿರೂಪಾಕ್ಷ ಕುಲಕರ್ಣಿಯವರ ನೆರವಿನಿಂದ ಮತ್ತು ವೈದೇಹಿಯವರೊಡನೆ ನಿರಂತರ ಸಂಪರ್ಕದಿಂದ ಭಾಷೆ ಕುರಿತ ಮೇಲಿನ ಮೂರೂ ಕ್ಲಿಷ್ಟತೆಗಳನ್ನು ನಿವಾರಿಸಿಕೊಳ್ಳುತ್ತ ಅವರ ಅಂದಿನ ಪ್ರಕಟಿತ ಕತೆಗಳಲ್ಲಿ ಆಯ್ದ ಕೆಲ ಕತೆಗಳನ್ನು ಮರಾಠಿಗೆ ಅನುವಾದಿಸಿ 'ವೈದೇಹಿಯಾಂಚಾ ನಿವಡಕ್ ಕಥಾ' ಎಂಬ ಸಂಕಲನವನ್ನು ಹೊರತಂದೆ.

ನಾನು ಅರಿತಂತೆ, ವೈದೇಹಿ ಸುತ್ತಲೂ ಕಣ್ಣು ಹಾಯಿಸಿ ತನ್ನ ವಿಚಾರಧಾರೆಯನ್ನು ಕಟ್ಟಿದವರು. ಸಾಂಪ್ರದಾಯಿಕ ವಾತಾವರಣದಲ್ಲಿ ಬದುಕುವ ಮಹಿಳೆಯರ ಅನುಭವಗಳ ಮೂಲಕ ಸ್ತ್ರೀಯೊಬ್ಬಳ ಅರಳುವ ಹಾಗೂ ಮುದುಡುವ ಬಗೆ ಹೇಗೆ ಎಂಬುದನ್ನು ಕಂಡುಕೊಳ್ಳ ಹೊರಟವರು. ವೈಚಾರಿಕ ಇಲ್ಲವೆ ಸೈದ್ಧಾಂತಿಕ ಸ್ವರೂಪದಲ್ಲಲ್ಲ. ಸ್ತ್ರೀ ಜೀವನ, ಪರಿಸರ ಹಾಗೂ ಸ್ವಭಾವಗಳ ಮೂಲಕ ಸಹಜವಾಗಿ ಅದನ್ನು ಅರಿಯತೊಡಗಿದರು. ಮಹಿಳೆಯರ ಕುರಿತಾದ ಅವರ ವಿಶಿಷ್ಟ ದೃಷ್ಟಿಕೋನದಿಂದಾಗಿ ಅವರ ಕಥೆಗಳಿಗೆ ಬೇರೊಂದು ಬಗೆಯ ಆಯಾಮ ಲಭಿಸಿದೆ. ಅವುಗಳಲ್ಲಿ ಕಪ್ಪು-ಬಿಳುಪು ಚಿತ್ರಣಗಳಿಲ್ಲ. ಅವುಗಳಲ್ಲಿ ವಿಡಂಬನೆ, ಕೋಪ, ಸೇಡು, ಆಕ್ರೋಶ, ತಾತ್ಸಾರದಂಥ ಸಂಗತಿಗಳೆಲ್ಲ ಮುಖ್ಯರಸವಾಗಿ ಬಾರದೆ ಅವು ವ್ಯಕ್ತಿ ಮತ್ತು ಸನ್ನಿವೇಶಗಳಿಗೆ ತಕ್ಕಂತೆ

ಬರುತ್ತವೆ. ಕಥೆಯ ಅಂತಃಪ್ರವಾಹದ ಭಾಗವಾಗಿ ಬರುತ್ತವೆ. ನಿರೂಪಣೆಯಲ್ಲಿ ತೀವ್ರ ಭಾವನಾಶೀಲತೆ ಹಾಗೂ ಆಪ್ತತೆ ಇರುತ್ತ ಸ್ಫೋಟಕಗುಣವನ್ನೂ ಹೊಂದಿವೆ. ಒಬ್ಬ ಸ್ತ್ರೀಯು ಸ್ತ್ರೀಯರನ್ನು ಕುರಿತು ಬರೆದ ಬರಹಗಳಾದರೂ ಅವುಗಳಲ್ಲಿ ಅಳುಬುರುಕುತನ ವಾಗಲೀ ಡಾಂಭಿಕತೆಯಾಗಲೀ ಇಲ್ಲವೇ ಇಲ್ಲ. ಹಾಗೆಂತ ಭಾವನಾರಾಹಿತ್ಯವೂ ಅಲ್ಲ. ಎಂತಲೇ ಅವು ಒಬ್ಬ 'ಸ್ತ್ರೀಯು ಸ್ತ್ರೀಯರಿಗಾಗಿ ಬರೆದ ಬರಹ'ಗಳಾಗಿ ಉಳಿಯದೆ ಇಡಿಯ ಮಾನವ ಪ್ರಪಂಚದ ಕಥೆಗಳಾಗಿ ಅವುಗಳ ಮೇಲೆ ವೈದೇಹಿಯವರ ಸ್ವಂತದ ಮುದ್ರೆಯೊತ್ತುತ್ತವೆ.

ಮುಂದೆ ನಾನವರ ನಾಯಿಮರಿ ನಾಟಕ ಎಂಬ ಮಕ್ಕಳ ನಾಟಕವನ್ನು ಅನುವಾದಕ್ಕೆ ಎತ್ತಿಕೊಂಡೆ. ಅನುವಾದಿಸಬೇಕೆಂಬ ನಿರ್ಣಯವೇನೋ ಆಯಿತು. ಆದರೆ ಹೇಗೆ? ನನ್ನಿಂದ ಆಗಲಿಕ್ಕಿಲ್ಲ. ದೊಡ್ಡವರ ಸಾಹಿತ್ಯವನ್ನೇ ಅನುವಾದ ಮಾಡುತ್ತಿರುವ ನನಗೆ ಇದು ಕಷ್ಟವಾಗಬಹುದು ಅಂತೆಲ್ಲ ಅನಿಸತೊಡಗಿತು. ಒಂದು ದಿನ ವೈದೇಹಿ ಯವರೊಡನೆಯೇ ಇದನ್ನು ಹೇಳಿಕೊಂಡು ಪ್ರಶ್ನಿಸಿದೆ. 'ನೀವು ಈ ನಾಟಕವನ್ನು ಹೇಗೆ ಬರೆದಿರಿ? ಕಣ್ಣ ಮುಂದೆ ಯಾರಿದ್ದರು? ಮಕ್ಕಳೋ ಮೊಮ್ಮಕ್ಕಳೋ? ನಿಮಗೆ ಕಷ್ಟವಾಗಲಿಲ್ಲವೋ?'

ಅವರೆಂದರು 'ಇಲ್ಲ, ಕಷ್ಟವಾಗಲಿಲ್ಲ. ಯಾಕೆಂದರೆ ಎಲ್ಲರಂತೆ ನನ್ನಲ್ಲಿಯೂ ಬಾಲ್ಯದ ಆ ಸಣ್ಣಹುಡುಗಿ ಮರೆಯಾಗಿಯೇ ಇಲ್ಲ. ಬಾಲಸಾಹಿತ್ಯ ರಚಿಸುವ ಹೊತ್ತಿನಲ್ಲಿ ನಾನು ಅವಳಾಗುವೆ, ಆಗ ಬರೆಯುವುದು ಕಷ್ಟವಾಗುವುದಿಲ್ಲ. ನೋಡಿ ಬೇಕಾದರೆ, ನಿಮ್ಮೊಳಗೂ ಈಗಲೂ ಒಬ್ಬ ಪುಟ್ಟ ಹುಡುಗಿ ಇದ್ದೇ ಇದ್ದಾಳೆ. ಮಾಯವಾಗಿಲ್ಲ. ಬರೆಯುವಾಗ ಅವಳು ಎದ್ದು ಬರುತ್ತಾಳೆ' ಎಂದರು. ಅವರ ಮಾತನ್ನು ಕೇಳಿ ನನಗೆ ನನ್ನಲ್ಲಿ ವಿಶ್ವಾಸ ಬಂತು. ಅನುವಾದಕ್ಕೆ ಕೈ ಹಚ್ಚಿದೆ. ಹೌದು. ಅವರೆಂದಂತೆ, ಬರೆಯುತ್ತ ಬರೆಯುತ್ತ ನನ್ನೊಳಗಿನ ಆ ಪುಟ್ಟ ಹುಡುಗಿಯ ಮನಸ್ಸಿಗೆ ದಾಟಿಕೊಂಡೆ. ಬರವಣಿಗೆ ಸುಲಲಿತವಾಗಿ ಮುಗಿಯಿತು. ಅಚ್ಚಾಗಿ ಪ್ರಕಟವೂ ಆಯಿತು. ಅವರ ಸಾಹಿತ್ಯ ಅಕಾಡೆಮಿ ಪುರಸ್ಕೃತ ಕೃತಿ 'ಕ್ರೌಂಚಪಕ್ಷಿಗಳು' ಸಂಕಲನದ ನನ್ನ ಮರಾಠೀ ಅನುವಾದವನ್ನು ಅಕಾಡೆಮಿ ಪ್ರಕಟಿಸಿದೆ. ಅವರ 'ಮುಂತಾದ ಕೆಲ ಪುಟಗಳು' ಎಂಬ ಪುಟ್ಟ ಆದರೆ ಮಹತ್ವದ ಕೃತಿಯನ್ನೂ ಇತ್ತೀಚೆಗೆ ಅನುವಾದ ಮಾಡಿ ಪ್ರಕಟಿಸಿರುವೆ.

ಪಿಂಪ್ರಿ –ಚಿಂಚ್ವಾಡ್‌ನಲ್ಲಿ ನಡೆದ ರಾಜ್ಯ ಮರಾಠೀ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಗೆ ಆಹ್ವಾನಿತರಾಗಿ ಅವರು ಬಂದಾಗ ಅವರು ಓದಿದ ಕನ್ನಡ ಕವಿತೆಗಳನ್ನು, ನಾನು ಮರಾಠಿಯಲ್ಲಿ ಓದುತಿದ್ದಂತೆ, ಜನ ಪ್ರತಿಕ್ರಿಯಿಸಿದ ಉದ್ಗರಿಸಿದ ಬಗೆ ನನ್ನ ಮರೆಯದ ಕ್ಷಣಗಳಲ್ಲಿ ಒಂದು.

ಆ ದಂಪತಿಗಳ ಜೊತೆಗೆ ನಾವು ಸಂತ ಜ್ಞಾನದೇವನ ಸಮಾಧಿ ತಾಣವಾದ ಆಳಂದಿಗೆ ಹೋದೆವು. ಸಂತ ತುಕಾರಾಮನ ಊರು 'ದೇಹು' ನಲ್ಲಿ ನಾವು ಹೋದ ಹೊತ್ತಿಗೆ ದೇವಾಲಯದ ಎದುರು ಹೆಂಗಸರೆಲ್ಲ ಘುಗುಡಿ ಆಡುತಿದ್ದರು. ಅವರನ್ನು ನೋಡಿ ಉತ್ಸಾಹ ಬಂದು ನಾವೂ ಆಡೋಣ ಎಂದೆ. ಮೊದಮೊದಲು ತುಸು ಹೆದರಿದ ವೈದೇಹಿ ಬಳಿಕ ಧೈರ್ಯ ತಾಳಿದರು. ಸರಿ, ನಾವು ಕೈಕೈ ಕ್ರಾಸ್ ಆಗಿ ಹಿಡಿದು ವೃತ್ತಾಕಾರವಾಗಿ ಗಿರಗಿರನೆ ತಿರುಗುತ್ತ ಘುಗುಡಿ ಆಡಿದ್ದೇ ಆಡಿದ್ದು. ಆ ಖುಶಿ ಏನೆನ್ನಲಿ! ಮಹಾಬಲೇಶ್ವರ, ತುಳಜಾಪುರ, ಪಂಢರಾಪುರ ಭೇಟಿ; ಚಂದ್ರಭಾಗಾ ನದಿಯಲ್ಲಿ 'ಮಾಝೆ ಮಾಹೆರ ಪಂಢರೀ. . .' ಹಾಡಿನ ನನ್ನ ಗುನುಗಿನೊಂದಿಗೆ ದೋಣಿಯಲ್ಲಿ ವಿಹರಿಸಿದ್ದು, ಮಗಳು ಪಲ್ಲವಿಯನ್ನೂ ಕೂಡಿ ಪುಣೆಯಲ್ಲಿ ತಿರುಗಾಡಿ ಹುಡಿಪುಡಿ ಮಾಡಿದ್ದು, ಅವರ ಮಣಿಪಾಲದ ಮನೆಗೆ ನಾವು ಬಂದು ಉಳಿದುಕೊಂಡದ್ದು, ಹೆರಿಟೇಜ್ ವಿಲೇಜ್ ಮುಂತಾದ್ದಕ್ಕೆ ಭೇಟಿ ನೀಡಿದ್ದು, ಎಲ್ಲ ಒಮ್ಮೆಗೇ ನೆನಪಾಗಿ ಮನಸ್ಸನ್ನು ಮಧುರವಾಗಿ ಮುದಗೊಳಿಸುತ್ತಿವೆ.

ಒಟ್ಟಿನಲ್ಲಿ ನಾವೀಗ ಅನುವಾದಕಿ ಮತ್ತು ಲೇಖಕಿ ಸಂಬಂಧ ಮೀರಿ ಒಳ್ಳೆಯ ಗೆಳತಿಯರಾಗಿ ಬಿಟ್ಟಿರುವೆವು. ಕುಟುಂಬದ ಆಪ್ತಸ್ನೇಹಿತರ ಮಟ್ಟಕ್ಕೆ ಬಂದು ಮುಟ್ಟಿರುವೆವು. ಯಾವುದೇ ಸಾಹಿತ್ಯದ ಉದ್ದೇಶ ಅಂತಿಮವಾಗಿ ಹೀಗೆ ಮನಸ್ಸು ಮನಸ್ಸುಗಳ ಸ್ನೇಹ ಬೆಸುಗೆಯೇ ಅಲ್ಲವೇನು?

('ವೈದೇಹಿಯಾಂಚಾ ನಿವಡಕ್ ಕಥಾ' ಎಂಬ ಮರಾಠೀ ಅನುವಾದ ಸಂಕಲನಕ್ಕೆ ಬರೆದ ಪ್ರಸ್ತಾವನೆಯ ಪರಿಷ್ಕೃತ ಮತ್ತು ಆಯ್ದ ಭಾಗ. ಕನ್ನಡಕ್ಕೆ: ಶ್ರೀ ವಿರೂಪಾಕ್ಷ ಕುಲಕರ್ಣಿ)



# Reading Vaidehi Through the Lens of Translation

+ **Tejaswini Niranjana***

In the many years since I have known Vaidehi, I have never left Manipal without carrying a packet of happala and sandige in my bag, or without tasting Vaidehi's pineapple gojju and tambuli. Nestling alongside the packet in my bag would be Vaidehi's latest book – poetry, biography, a novella, essays, fiction…What I say here about Vaidehi is influenced by two factors: that I have known this brilliant and prolific writer as a friend (first of my mother's and then my own), and only then known her as a writer I wanted to translate into English.

Both as a friend and a translator, I have been a devoted reader of Vaidehi's writing, especially her fiction. I can well imagine someone who hasn't met Vaidehi asking me the question: Is the writerly persona anything like the housewifely woman who lives in Manipal? I can only answer this question by saying that both are deceptively 'simple', but that to work with simplicities in understanding Vaidehi as writer is problematic. For example, in her essay 'About my writing', she talks about her interest in 'the beautiful and innocent lives of small children'. On the face of it, this sounds like an almost sentimental statement. But nothing in the fiction is innocent – every

---

* Well known writer and translator, Bengaluru

character, every gesture, every narrative turn is laden with a mysterious pain. The seeming simplicity is deceptive, as I said. Something explosive lurks within each of Vaidehi's statements. At a certain point in the story, there are actual explosions, and the shrapnel flies far and wide, with devastating impact.

Often it seems as though there is nothing visibly dramatic happening in Vaidehi's stories. She writes at length of women's labour: involving tasks that take a lot of time and a lot of patience, like smoothening the clay, making happala, cooking elaborate dishes for weddings, cleaning and scrubbing the house, rocking an infant to sleep, looking after and humouring the elderly. The grinding stone and the churning stick are apt metaphors for this continuous labour, with tasks that seem circular and never-ending.

The women who perform these tasks, however, are not always properly domesticated. In fact, their very existence outside the conventional bonds of marriage and family often help produce the stability and routine of domestic life. In Vaidehi's words:

'And so I grew up, watching women like Kamala, Krishni, Seethu and others, those without husbands, those whose husbands were barely there, husbands who had gone away over the ghats and started another family, husbands who had descended from the heavens to join the family but who could disappear at any moment. All these women lived amidst sorrow and poverty, but with great strength. They overcame their helplessness in their own ways and took heart so that they could live.'

Just as Vaidehi is deeply sensitive to how these women manage to survive, she also writes perceptively about more privileged women like the doctor's wife, in her starched sari and lipsticked lips, who spoke English and helped in the clinic with the compound-

ing: 'She has remained clearly etched in my memory, maybe because I saw in her so many years ago the awakening of women to a new world of equality and because she seemed to embody some of its confusions and transformations. In stories like 'Abha', and in others like 'Saugandhiya Swagatagalu', Vaidehi explores the situation of women in a rapidly transforming world. However, she is keenly aware of her generation's specific perspective on what such transformation means for female subjectivity:

'For me, the world of women is one of 'Zen'. We are not a group that can run away to the Himalayas. We continue living amidst the confusions and quarrels, the love and trust, of daily life. What is important to us is not whether the world is truth or lie. But work, work and more work. We are a generation that reads and writes and sings and thinks and meditates, in the midst of work.'

Invoking the example of her own mother's life, Vaidehi writes about the importance of 'hada', or balance – of ingredients in a dish, or in life choices. It is hugely interesting, then, that so many of her characters live their lives out of balance, and the ending of each story is so bleak in terms of what the future holds.

Another aspect of Vaidehi's fiction that's fascinated me is her wicked sense of humour, manifested especially in stories like 'Gulabi Talkies mathhu Sanna Alegalu'. In this justly celebrated story, Vaidehi writes about how 'talking films' came to the new theatre in town, and its consequences for the everyday life of the townspeople:

'Day by day the bangle-shop began to stock various kinds of face powder and other cosmetics as its business began to soar; the seamstress struggled to tune her skills to the new fashions, and her creations were passed off as fashionable, causing a commotion in the world of clothing which crossed over into the speech and gait of

women; the ornaments of brides and the other women at weddings were touched by the breeze of the cinema; the cook in Rangarao's house started to be possessed by the ghost in the dhoopa tree, which would go away only when the price of a cinema ticket was placed before the creature; women waited to get their period so that they could be relieved from their daily duties and go off to the talkies, thus creating a problem for rules of pollution; they all put on the airs of playback singers and began to sing whenever they felt like it; in the School Day a competition for film songs was introduced; in bhajans too film tunes and styles crept in; even in love-making, words from the cinema came in, making all that was word-less seem worthless; and above all, mothers who used to compose little lullabies as they swung their infants to sleep now began to hum cinema lullabies.'

In this humorous description of the changes inspired by the talking movies, Vaidehi is never nostalgic. Never does she produce a simple lament for times past. On the contrary – she is emphatic that the waves which have arisen can only grow bigger. In different ways, this attitude imbues Vaidehi's fiction from the 1980s and 90s, which my friends and I collected and translated in Gulabi Talkies and Other Stories (published by Penguin Books in 2006).

Walking along with Vaidehi on Malpe beach or through the streets of Udupi, one can hear the same quirky observations that fill her pages. Her observant gaze falls on all the things left unsaid as women of different ages search for a way in which to speak. The characters of Ahalya of 'Avalambitaru'; Akku, Abha and Chandale in the stories named after them; Achala of 'Antarangada Putagalu'; Bachhi of 'Ondu Kalla Vritaantha'; Saugandhi of 'Saughandhiya Swagatagalu'; Babuli of 'Babuli, thaayi matthu Naseebu'; the two half-mad girls alluded to in 'Hagalu Geechida Nenta'; Parvati in

'Bhoota' – Vaidehi presents them all to us in a pitiless exposition of how they are caught in various kinds of complicated social arrangements, implicating the reader as much as those responsible for subjugating the women. 'Saugandhi's sorrow never boiled over. It always simmered. Grew and grew, then hardened into stone. In this one sentence, Vaidehi is able to show both the contained nature of women's rage and its enormity.

I have suggested in the Preface to the translated stories that their multiple ambiguities make them difficult both to translate and analyse. More often than not, Kannada literary critics have tried to make Vaidehi and her writing familiar by referring to her grihini or housewife persona, even as her stories constantly elude description. Both modernist and feminist critics have hailed this elusiveness, with the latter in particular emphasizing Vaidehi's representation of daily female experience. Critics also celebrate Vaidehi's 'naturalness' as a writer, an insistence that tends not to address how sophisticated the creation of that effect of naturalness and spontaneity is. I had argued in that Preface that this 'lack of acknowledgment of the layers of mediation of women's worlds her writing undertakes' may make it appear far simpler than it actually is.

Through the act of translating Vaidehi's stories, my friends and I came up against the dominant frames of interpretation which only allowed for specific kinds of interpretation. But in that act of bringing the Kundapur dialect into Kannada and Indian English (a process described in my Preface), we translators felt we were able to foreground questions not yet asked in the critical tradition.

Let me quote a passage from that Preface to show how the 'confusions and transformations' observed by Vaidehi in the worlds of women in the 20th century are also part of the lives of the translators:

what bearing it has on womanhood – I am thinking how I can get an integral picture.

**Who are the writers who influenced you immensely? And why?**

Don't laugh. I am not a student of literature. Whatever literature I could lay my hands on, is what I've read. I am not very familiar with English literature. As I said, Triveni, Anupama, Vani, M.K. Jayalakshmi, MK Indira were writers I read. I read Karanth and decided that I too would write about the people around me. I gained confidence. Later I read the Navya writers. Most importantly, my writings have been influenced by the songs that women sang. Just for once, enter the world of women that you see in marriage songs – you get goose bumps! They are songs written and composed by women, and they have travelled orally. We have lost hundreds of them because they were not written. In those songs, men are placed in such high esteem. But what followed in marriage after all that love and glory! Literature showed me the way. Marriage is more than just man and woman. We describe them as Lord Shiva and his divine consort Parvati, what an exalted place. This revealed to me the true nature of human relationships. The jealousies, complexes, arrogance, domination… what not. Scientists, singers, writers… all these are mere social identities, finally it leads us to huge chasms and it is but inevitable we fall into it. The society becomes a witness to this tragedy. Yet, nothing changes.

I always tell people, visit Dasa literature once. That has also cast a spell on me. They have said everything. Yet, we need to retell all the waywardness, meanness, inhumaneness, love and joy of our times -- ourselves. Small springs are bound to feel shy where huge waterfalls exist. It's natural. But is there condescension, no.

**Do you feel that being a writer in contemporary world is more difficult than any time in the past? What are the pressures of these times?**

Is it a difficulty or a challenge? It is not just difficult to be a writer, there are obstacles for artistic expression, speech... everything. But how do you not say what you want to say? It is not today's problem, it was there in the past, it will be there in the future too. This is a disease that has no cure. Groupism and political affiliations are like the tidal forces of the moon -- it keeps rising and dipping. This is something that has existed from the times of the kings. We had read this in history books. Now we are witnessing it. Art and literature has blossomed amidst these thorns.

If we think the world is made up of human beings, then the world perceives literature. It is born within this world. But perception is always relative. It is one thing to read and appreciate, but it is an altogether different thing to absorb it. This ability to absorb is connected to the politics of an individual. Therefore it is not possible to generalise understanding.



'ವೈದೇಹಿ ಈ ಕವಿತೆಯನ್ನು ಬರೆಯಲು ಇದನ್ನು ಹಾಡಾಗಿಸಲು ಸಾಧ್ಯವಾದದ್ದರ ಹಿನ್ನೆಲೆಯಲ್ಲಿ ಅವರು ಜನಪದ ಹಾಡುಗಳೊಂದಿಗೆ ತಾದಾತ್ಮ್ಯವನ್ನು ಸಾಧಿಸಿರುವುದು, ಧಾರ್ಮಿಕತೆಯನ್ನು ಒಪ್ಪಿಯೂ ಧಾರ್ಮಿಕ ಹಿಂಸೆಯನ್ನು ವಿರೋಧಿಸುವ ತಾತ್ವಿಕತೆ ಹೊಂದಿರುವುದು. ಸನಾತನವಾದ ಧಾರ್ಮಿಕ ಚಿಂತನೆಗಳೊಂದಿಗೆ ಬದುಕಿನ ಒಡಲಲ್ಲಿಯೇ ಪ್ರೀತಿಯ ಸಂಬಂಧ ಹೊಂದಿರುವುದು, ಶಿಷ್ಟ ಮತ್ತು ಜಾನಪದಗಳೆರಡರಿಂದಲೂ ಪ್ರಭಾವಿತಗೊಂಡು ರೂಪ ತಾಳುವ ಜನಸಮುದಾಯದ ಸಾಮಾನ್ಯ ಜ್ಞಾನದೊಂದಿಗೆ ಅನುಸಂಧಾನವನ್ನು ಏರ್ಪಡಿಸಿಕೊಂಡಿರುವದು ವೈದಿಕ ಚಿಂತನಾ ಪರಿಕಲ್ಪನೆಗಳೊಂದಿಗೆ ಸಹಜವಾಗಿ ನಂಟನ್ನು ಹೊಂದಿರುವುದು. ಕರಾವಳಿಯ ಪರಿಸರದಲ್ಲಿ ನಡೆಯುತ್ತಿರುವ ಹಿಂಸಾತ್ಮಕ ಚಟುವಟಿಕೆಗಳಿಂದ ಆಳದಲ್ಲಿ ನೊಂದಿರುವದು.... ಏನೆಲ್ಲ ಕಾರಣಗಳನ್ನು ಗುರುತಿಸಬಹುದು. ಒಂದು ಹಾಡಿನ ಹಿಂದೆ ಎಷ್ಟೆಲ್ಲ ಸಂಗತಿಗಳು ಕೆಲಸ ಮಾಡಿರುತ್ತವೆ.'

- **ಎಂ.ಡಿ.ವಕ್ಕುಂದ**

(ವೈದೇಹಿಯವರ 'ಒಂದು ಕತ್ತಲ ಹಾಡು' ಕುರಿತು, ಮಾನಸ ಪತ್ರಿಕೆಯಲ್ಲಿ)

# ಕಾದಂಬರಿ ಸಾಹಿತ್ಯ ಮಹಿಳೆಯರ ಕೊಡುಗೆ– ಒಂದು ಹಿನ್ನೋಟ

✦ ವಿಜಯಶ್ರೀ ಸಬರದ

ಇಪ್ಪತ್ತನೇ ಶತಮಾನದ ಆರಂಭದಲ್ಲಿ ಮಹಿಳೆ ಓದು ಬರೆಯಲು ಕಲಿತಾಗ ಅವಳ ಗಮನ ಸೆಳೆದದ್ದು ಕಥೆ, ಕಾದಂಬರಿಗಳು. ಏಕೆಂದರೆ ಓದಿ ಅರ್ಥ ಮಾಡಿಕೊಳ್ಳಲು ಸುಲಭವಾದ ಸಾಹಿತ್ಯ ಪ್ರಕಾರವೆಂದರೆ ಕಥೆ ಮತ್ತು ಕಾದಂಬರಿ ಪ್ರಕಾರವಾಗಿತ್ತು. 'ಕಾದಂಬರಿ ಪ್ರಕಾರ ಹೆಚ್ಚು ಜನಪ್ರಿಯವಾಗಲು ಹೆಂಗಸರೇ ಕಾರಣ. ಯಾವಾಗಲೂ ಯಾವ ಬಗೆಯ ಸ್ವಾತಂತ್ರ್ಯವನ್ನು ಪಡೆಯದೇ ತಾನು ತನ್ನ ಆಚರಣೆಯಲ್ಲಿಯೇ ಮುಳುಗಿ, ಕಾಲಹರಣಕ್ಕಾಗಿಯೇ ಉಳಿದ ಹೆಂಗಸರೊಂದಿಗೆ ಹರಟೆ ಹೊಡೆಯುತ್ತಿದ್ದವಳಿಗೆ ಹೆಚ್ಚು ವ್ಯಾಸಂಗ ಬೇಡದ, ಚಿಂತನೆಯಿಲ್ಲದ, ಆಳವಾದ ಬದುಕಿನ ಅರಿವು ಕಾಣದ, ಮಾನಸಿಕ ಪರಿಶ್ರಮವಿಲ್ಲದೆ ತಿಳಿಯಬಹುದಾದ ಕಾದಂಬರಿಗಳನ್ನು ಓದುವುದು ಬರೆಯುವುದು ಸುಲಭವಾಯಿತು. ಕೂತಲ್ಲೇ ಕನಸು ಕಾಣುವ, ಊರಸುದ್ದಿಗಳ ಬಗ್ಗೆ ಆಸಕ್ತಿಯಿದ್ದ ಹೆಂಗಸರಿಗೆ ಕಾದಂಬರಿ ತೋಡಿಕೊಳ್ಳಲು ಉತ್ತಮ ಮಾಧ್ಯಮವಾಯಿತು.'* (* ಮಹಿಳೆ ಮತ್ತು ಕನ್ನಡ ಸಾಹಿತ್ಯ– ಪುಟ:78, ಚ.ಸರ್ವಮಂಗಳ, ಬೆಂ.ವಿ.ವಿ., ಬೆಂಗಳೂರು)

ಹೀಗಾಗಿ ಸಾಂಪ್ರದಾಯಿಕ ಮೌಲ್ಯಗಳ ಬಗ್ಗೆ ಹೆಚ್ಚಿನ ಒಲವಿರುವುದರಿಂದ ಅಡಿಗೆ ಮನೆಯನ್ನು ದಾಟಿ ಅವರ ಸಾಹಿತ್ಯ ರೂಪಗೊಳ್ಳಲಿಲ್ಲ. ಆದರೆ ಇಂದಿನ ಸಾಹಿತ್ಯಕ ಸಂದರ್ಭದಲ್ಲಿ ಮಹಿಳೆಯರ ಬರವಣಿಗೆಯಲ್ಲಿ ಹೊಸ ಹೆಜ್ಜೆಗಳನ್ನು ಗುರುತಿಸಬಹುದಾಗಿದೆ. 1913 ರಿಂದ 1950ರ ವರೆಗಿನ ಅವಧಿ ಹೊಸಗನ್ನಡ ಸಾಹಿತ್ಯದ ಲೇಖಕಿಯರ ಮೊದಲ ಹಂತವಾದರೆ, ಎರಡನೆಯ ಹಂತ 1950 ರಿಂದ 1975ರ ವರೆಗೆ. ಕೊನೆಯದಾಗಿ 80ರ ದಶಕ. ಮೊದಲನೆಯ ಹಂತದಲ್ಲಿ ಸ್ತ್ರೀ ಶಿಕ್ಷಣದ ಅಗತ್ಯವನ್ನು ಲೇಖಕಿಯರು ತಮ್ಮ ಕೃತಿಗಳಲ್ಲಿ ಪ್ರತಿಪಾದಿಸಿದರು. ವಿಧವಾವಿವಾಹದ ಬಗ್ಗೆ ತಮ್ಮ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರು. ಅವಕಾಶ ಸಿಕ್ಕರೆ ಅಡಿಗೆ ಮನೆಯ ಆಚೆಗಿರುವ ಸಾಹಿತ್ಯವನ್ನು ರಚಿಸಬಲ್ಲೆವು ಎಂಬುದನ್ನು ಸ್ವಲ್ಪಮಟ್ಟಿಗಾದರೂ ಸಾಧಿಸಿ ತೋರಿಸಿದವರಲ್ಲಿ ಪ್ರಮುಖರಾದವರು ನಂಜನಗೂಡು ತಿರುಮಲಾಂಬಾ, ಆರ್ ಕಲ್ಯಾಣಮ್ಮ, ಎಚ್.ವಿ.ಸಾವಿತ್ರಮ್ಮ. ಪ್ರಪ್ರಥಮ ಕಾದಂಬರಿಗಾರ್ತಿ ನಂಜನಗೂಡು ತಿರುಮಲಾಂಬಾ ಅವರು 1913 ರಲ್ಲಿ ಪ್ರಾರಂಭಿಸಿದ 'ಸತಿ ಹಿತೈಷಿಣಿ

ಗ್ರಂಥಮಾಲೆ'ಯಲ್ಲಿ ಪ್ರಕಟಗೊಂಡ ಮೊದಲ ಕಾದಂಬರಿ 'ಸುಶೀಲೆ' ಹಾಗೂ ನಂತರದ 'ನಭಾ', 'ವಿರಾಗಿಣಿ', 'ವಿದ್ಯುಲ್ಲತಾ', 'ಗಿರಿಜಾಬಾಯಿ', 'ಪೂರ್ಣಕಲಾ' ಈ ಎಲ್ಲಾ ಕಾದಂಬರಿಗಳಲ್ಲಿ ಅಂದು ಸ್ತ್ರೀಯನ್ನು ಸಮಾಜ ಕಂಡ ಬಗೆಯನ್ನು ಚಿತ್ರಿಸಲಾಗಿದೆ. ಮಹಿಳೆಯ ಹಕ್ಕಿನ ಬಗ್ಗೆ ಪ್ರಶ್ನಿಸುವ, ಹಕ್ಕಿನ ಅರಿವನ್ನು ಮೂಡಿಸುವ ವಿಚಾರ ಅವರ ಕಾದಂಬರಿಗಳಲ್ಲಿವೆ. ಅಂದಿನ ಜ್ವಲಂತ ಸಮಸ್ಯೆ ಕುರಿತು ಚಿಂತನವಿದೆ. ತಲೆ ಬೋಳಿಸಿಕೊಳ್ಳುವುದರ ವಿರುದ್ಧ ಪ್ರತಿಭಟಿಸುವ ವಿಚಾರ 'ನಭಾ' ಕಾದಂಬರಿಯಲ್ಲಿ ವ್ಯಕ್ತವಾಗಿದೆ; 'ತಲೆ ಬೋಳಿಸಿಕೊಂಡ ಮಾತ್ರಕ್ಕೆ ಪವಿತ್ರರಾಗುವರೋ?...... ಹೆಣ್ಣುಮಕ್ಕಳೇನು ಬೀದಿಯಲ್ಲಿ ಬಿದ್ದಿರುವರೇ? ಗಂಡ ಸತ್ತ ಮಾತ್ರಕ್ಕೆ ಅವರೇನು ಮನುಷ್ಯ ಜಾತಿಯನ್ನು ಬಿಟ್ಟಂತೆಯೇ?' –ಈ ಮಾತಿನಲ್ಲಿ ಸುಧಾರಣಾ ಪರ ಕಾಳಜಿಯಿದೆ. ವಿಧವೆಯರು ಮಾನಸಿಕವಾಗಿ ಪಡುವ ಯಾತನೆ ಮತ್ತು ಸಮಾಜದೃಷ್ಟಿಯಲ್ಲಿ ನಿಕೃಷ್ಟಳಾಗಿ ಕಾಣುವ ಸ್ಥಿತಿ ಸ್ವತಃ ತಿರುಮಲಾಂಬಾ ಅನುಭವಿಸಿದ್ದರಿಂದ ನಿರ್ಭಿಡೆಯಿಂದ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸಿದ್ದಾರೆ. ಆದರೆ ಇನ್ನೊಂದೆಡೆ ಮಹಿಳೆ ಎಂದಿಗೂ ಅಬಲೆ ಎಂಬ ನಿಲುವಿಗೆ ತಟಸ್ಥರಾಗುವರು. 'ಹೆಂಗಸರಿಗೆ ಎಂದೂ ಹೆದರಿಕೆಯಿದ್ದೇ ಇರಬೇಕು. ಏಕೆಂಬೆಯೋ ಅವರೆಂದೂ ಅಬಲೆಯರು. ದುಷ್ಟರು, ಕುಡುಕರು, ಹುಚ್ಚರು, ಮೊದಲಾದ ಪೋಲಿಗಳೇನಾದರೂ ಅತ್ಯಾಚಾರವನ್ನು ನಡೆಯಿಸಲು ಪ್ರಯತ್ನಪಟ್ಟರೆ ಅವರೇನು ಮಾಡಬಲ್ಲರು? ಇದಕ್ಕಾಗಿಯೇ ಹೆಂಗಸು ಒಂಟಿಯಾಗಿ ಹೊರಗೆ ಹೋಗಬಾರದೆನ್ನುವರು.'– ಎಂದು 'ಸುಶೀಲೆ' ಕಾದಂಬರಿಯಲ್ಲಿ ವ್ಯಕ್ತವಾದ ಬಗೆಯನ್ನು ನೋಡಿದಾಗ ಲೇಖಕಿಯ ದ್ವಂದ್ವ ವಿಚಾರ ಗಮನಕ್ಕೆ ಬರುವುದು. ಹಳೇ ಮೌಲ್ಯಗಳನ್ನು ವಿರೋಧಿಸುವ ಮನೋಭಾವನೆಯಿದ್ದರೂ ಅದರಿಂದ ಪರಿಪೂರ್ಣವಾಗಿ ಮುಕ್ತರಾಗದ ಅಸಹಾಯಕತೆ ಮತ್ತು ಸೈದ್ಧಾಂತಿಕ ಸಿದ್ಧತೆ ಇಲ್ಲದೆ ದ್ವಂದ್ವಕ್ಕೆ ಸಿಲುಕಿಕೊಳ್ಳುವ ಮನಃಸ್ಥಿತಿ, ಒದ್ದಾಟ ಅವರ ಕೃತಿಗಳಲ್ಲಿ ಕಂಡುಬರುವುವು. ಈ ತರಹದ ಮಿತಿಗಳನ್ನು ಇವರ ಸಮಕಾಲೀನ ಕಾದಂಬರಿಕಾರ್ತಿಯರಲ್ಲೂ ಕಾಣಬಹುದು. ತಿರುಮಲಾಂಬಾ ಅವರ ಬರಹದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ವಿಚಾರಗಳನ್ನು ಕುರಿತು ಆಳವಾಗಿ, ಸಮಗ್ರವಾಗಿ ಚಿಂತಿಸುವ ಕ್ರಮವನ್ನು ಕಾಣಬಹುದು. ತಿರುಮಲಾಂಬಾ ಅವರ ಕಾದಂಬರಿಗಳ ರಚನೆಯ ಪ್ರಯತ್ನ ಮುಂಬರುವ ಮಹಿಳೆಯರ ಬರಹಕ್ಕೆ ದಿಕ್ಸೂಚಿಯಾಯಿತು ಎಂದೇ ಹೇಳಬಹುದು.

ತಿರುಮಲಾಂಬಾ ಅವರ ನಂತರದ ಪ್ರಮುಖ ಬರಹಗಾರ್ತಿ ಆರ್.ಕಲ್ಯಾಣಮ್ಮ. 1927 ರಲ್ಲಿ ಪ್ರಕಟಗೊಂಡ ಕಾದಂಬರಿ 'ಸುಖಲತಾ'. ಇನ್ನುಳಿದ ಕಾದಂಬರಿಗಳೆಂದರೆ 'ಭಕ್ತಮೀರಾ', 'ಸತಿ ಪದ್ಮಿನಿ', 'ಷಹಜಹಾನ್', ಸ್ನೇಹಲತಾ', 'ಮಾಧವಿ', 'ನಿರ್ಮಲೆ', 'ನೀರದಾ', 'ರಣಕೇಸರಿ', 'ಇಂದಿರೆ ಹಾಗೂ 'ಪ್ರಿಯಂವದೆ'. ಇವರು ತಮ್ಮ ಕಾದಂಬರಿಗಳ ಮೂಲಕ ಸ್ತ್ರೀ ಶಿಕ್ಷಣದ ಅಗತ್ಯ, ಪುರುಷನಿಗೆ ಸರಿಸಮಾನಳಾಗಿ, ಸ್ವಾವಲಂಬಿಯಾಗಿ, ಬುದ್ಧಿವಂತಳಾಗಿ ಬದುಕಬೇಕೆಂಬ ಧೈರ್ಯ, ಆತ್ಮವಿಶ್ವಾಸವನ್ನು ತುಂಬುವ ವಿಚಾರವನ್ನು

ಪ್ರತಿಪಾದಿಸುತ್ತಾರೆ. ಮಹಿಳೆಯರು ಕೀಳರಿಮೆಯಿಂದ ಹೊರಬರಬೇಕೆಂದು ಎಚ್ಚರಿಸುವ ವಿಚಾರ ಅವರ 'ಸುಖಲತಾ' ಕಾದಂಬರಿಯಲ್ಲಿ ಕಂಡುಬರುವುದು. ಮಹಿಳೆಯರಿಗೂ ವ್ಯಕ್ತಿತ್ವವಿದೆ ಎಂಬ ಭಾವವನ್ನು ಒಡಮೂಡಿಸಿದ್ದು ಕೇವಲ ಸಂಸಾರದ ಒಳಗೆ ಮಾತ್ರ. 'ಕಲ್ಯಾಣಮ್ಮನವರ ಸುಧಾರಣಾ ದೃಷ್ಟಿ ಹೆಣ್ಣಿನ ಬಾಳನ್ನು ಸುಗಮಗೊಳಿಸುವುದಾಗಿತ್ತೇ ವಿನಃ ಅವಳನ್ನು ಸಂಸಾರದಿಂದ ಹೊರಗಡೆ ಬೆಳೆಸುವುದಾಗಿರಲಿಲ್ಲ. ಆದ್ದರಿಂದ ಕೆಲವೊಮ್ಮೆ ಇವರ ಪಾತ್ರಗಳು ಸಂಪ್ರದಾಯದ ಗಡಿಯನ್ನು ದಾಟಿದಂತೆ ತೋರಿದರೂ ಸ್ತ್ರೀಗೆ 'ಗೃಹರಾಜ್ಯ ಪರಿಪಾಲನೆ ಮುಖ್ಯ ಕರ್ತವ್ಯ' ಎಂಬ ಬುದ್ಧಿವಾದವನ್ನು ಹೇಳಿದವು'*.(*ಕನ್ನಡ ಲೇಖಕಿಯರ ನೆಲೆ-ಬೆಲೆ, ಪುಟ:59, ಜಿ.ಎಸ್.ವೆಂಕಟಲಕ್ಷ್ಮಿ.) ಮಹಿಳೆ ತನ್ನ ಗೃಹಿಣೀ ಧರ್ಮದ ಪರಿಪಾಲನೆಯ ಜೊತೆಯಲ್ಲಿ ಸಾಮಾಜಿಕವಾಗಿಯೂ ಆಕೆ ತನ್ನ ಕರುಣೆ-ವಾತ್ಸಲ್ಯಗಳನ್ನು ವಿಸ್ತರಿಸಬೇಕೆನ್ನುವ ಆದರ್ಶ ಸ್ತ್ರೀಯನ್ನು ಚಿತ್ರಿಸಿದ್ದಾರೆ.

1980 ರಲ್ಲಿ ಬಂದ ಎಚ್.ವಿ. ಸಾವಿತ್ರಮ್ಮ ಅವರ ಕಾದಂಬರಿ 'ಸೀತೆ-ರಾಮ-ರಾವಣ'ದಲ್ಲಿ ಹೆಣ್ಣಿನ ಮಾನಸಿಕ ವೇದನೆಗಳ ವಿಶ್ಲೇಷಣೆಯಿದೆ. ಪ್ರತಿಭಟನೆಯಿದೆ. ಪುರುಷಪ್ರಾಧಾನ್ಯದ ದಬ್ಬಾಳಿಕೆಯ ಅಡಿ ಸಿಕ್ಕಿ ನರಳುವ ಸ್ತ್ರೀಪಾತ್ರಗಳು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನವಿದೆ. ಸ್ತ್ರೀ ವಿಮೋಚನೆಯ ಹಂಬಲ ಪ್ರತಿ ಸ್ತ್ರೀ ಪಾತ್ರದಲ್ಲಿ ಎದ್ದು ಕಾಣುತ್ತದೆ. ಮಹಿಳಾ ದೃಷ್ಟಿಕೋನದಿಂದ ರಾಮಾಯಣವನ್ನು ನೋಡುವ ಸಾವಿತ್ರಮ್ಮ ಅವರ ಪ್ರಯತ್ನ ಶ್ಲಾಘನೀಯವಾದದ್ದು. ಆದರೆ 'ಹೆಣ್ಣಿನ ಸಮಸ್ಯೆಗಿರುವ ಸಾಮಾಜಿಕ ಬೇರುಗಳು ತೆಗೆದುಹಾಕಬಹುದಾದವು ಎಂಬುದರಲ್ಲಿ ಈ ಕಾದಂಬರಿ ವಿಶ್ವಾಸ ತೋರಿಲ್ಲ. ಹೆಣ್ಣಿಗೆ ಈ ಎಲ್ಲ ಕಷ್ಟಗಳು ಅನಿವಾರ್ಯವೆಂಬುದು ಕೃತಿಯ ವಿಚಾರದ ಮಿತಿಯಾಗಿ ಸಾಮೂಹಿಕ ಪ್ರತಿಭಟನೆಯ ಅಗತ್ಯದ ಅರಿವಿಗೆ ಅಡ್ಡಿಯಾಗಿದೆ.'* ಇವರೆಲ್ಲರ ಬರಹಕ್ಕೆ ಸತ್ವದ ದೃಷ್ಟಿಯಿಂದ ಅಲ್ಲದಿದ್ದರೂ ಚಾರಿತ್ರಿಕ ದೃಷ್ಟಿಯಿಂದ ಮಹತ್ವವಿದೆ. ಸಾಹಿತ್ಯಕ್ಕೆ ಇವರ ಕೊಡುಗೆ ಕಡಿಮೆ ಎಂದು ನಿಸ್ಸಂಕೋಚವಾಗಿ ಒಪ್ಪಿಕೊಂಡರೂ ಚಾರಿತ್ರಿಕವಾಗಿ ಇವರ ಕೊಡುಗೆ ಅಪಾರ. ಎಚ್.ಎಸ್. ಕಾತ್ಯಾಯಿನಿ ಯವರು ಆಧುನಿಕ ಕನ್ನಡ ಸಾಹಿತ್ಯದ ಪ್ರಾರಂಭ ಹಂತದ ಬರಹಗಾರ್ತಿಯರ ಸಮಕಾಲೀನರಾಗಿದ್ದು, 1986 ರಲ್ಲಿ 'ಗಂಗಾತರಂಗ' ಎಂಬ ಕಾದಂಬರಿ ಬರೆದಿದ್ದಾರೆ. ಬರವಣಿಗೆ ಮತ್ತು ವಸ್ತುವಿನ ದೃಷ್ಟಿಯಿಂದ ಕಾದಂಬರಿ ತಾಜಾತನವನ್ನು ಕಳೆದುಕೊಂಡ ಹಳೇಜಾಡಿನಲ್ಲೇ ಸಾರ್ಥಕತೆ ಕಂಡುಕೊಳ್ಳುತ್ತದೆ. ಕಾದಂಬರಿ ಸಾಹಿತ್ಯದಲ್ಲಿ ಇವರ ಕಾದಂಬರಿ ಹೊರೆಯಾಗಿ ಉಳಿಯುತ್ತದೆ. ಸುಶೀಲಾ ಜೋಷಿಯವರ 'ಬೀಳದ ತೆರೆ' ಕಾದಂಬರಿಯಲ್ಲಿ ಸಮಾಜದ ಸಂಶಯಪ್ರವೃತ್ತಿ, ಇದರಿಂದ ವ್ಯಕ್ತಿಗಳ ಜೀವನಕ್ಕೆ ಉಂಟಾಗಬಹುದಾದ ಹಾನಿಯನ್ನು ಕುರಿತು ಹೇಳಲಾಗಿದೆ. ಈ ಕಾದಂಬರಿ ಸಹಾ ಸಾಹಿತ್ಯದಲ್ಲಿ ಗಟ್ಟಿಯಾಗಿ ನಿಲ್ಲಲು ಅಸಮರ್ಥವಾಗಿದೆ. ಕನ್ನಡದಲ್ಲಿ ಬರೆಯತೊಡಗಿದ ಪ್ರಾರಂಭಹಂತದ ಲೇಖಕಿಯರಲ್ಲಿ ಕಾದಂಬರಿಕಾರ್ತಿಯರ ಸಂಖ್ಯೆ ಬಹಳ ಕಡಿಮೆ ಆದರೂ ತಮ್ಮ ಸಂಕುಚಿತ ಪರಿಸರದಲ್ಲಿಯೂ ಸ್ತ್ರೀಪರ ಕಾಳಜಿಯನ್ನು

ವ್ಯಕ್ತಪಡಿಸಿದ್ದಾರೆ. ಸ್ತ್ರೀಶಿಕ್ಷಣ, ವಿಧವಾವಿವಾಹ, ಆಧುನಿಕ ಜೀವನ ಪದ್ಧತಿಯ ಅಗತ್ಯ ಕುರಿತು ಚಿಂತಿಸಿದ್ದಾರೆ. 'ಹೆಣ್ಣು ಒಮ್ಮೆ ಅಡುಗೆಮನೆ, ಮಲಗುವ ಮನೆಗಳ ಸೀಮಿತ ಚೌಕಟ್ಟುಗಳಿಂದ ಆಚೆ ಬರಲು ಸಾಧ್ಯವಾದರೆ, ಹೊರಪ್ರಪಂಚದಲ್ಲಿ ಪುರುಷರಷ್ಟೇ ಯಶಸ್ವಿಯಾಗಬಲ್ಲರೆಂಬುದನ್ನು ಈ ಕೃತಿಗಳು ತೊದಲ್ನುಡಿಗಳಲ್ಲಿ ಹೇಳುವಂತಿದೆ. ಸಾಹಿತ್ಯ ಕೃತಿಗಳಾಗಿ ಈ ಬಹಳಷ್ಟು ಕೃತಿಗಳು ಆಸಕ್ತಿ ಹುಟ್ಟಿಸದೇ ಹೋಗಬಹುದು. ವಾದ, ಪ್ರಚಾರ, ಅಭಿಪ್ರಾಯ ಮಂಡನೆಗಳಿಗೆ ಪ್ರಕಾರ ಕೇವಲ ವಾಹಕವಾಗಿದೆ ಎಂದೂ ಅನ್ನಿಸಬಹುದು. ಆದರೆ ಬರವಣಿಗೆಯೇ ಒಂದು ಬಗೆಯ ವಿಮೋಚನೆ ಎನಿಸಿದ್ದಂತೆ ಚಾರಿತ್ರಿಕ ಸಂದರ್ಭವೊಂದರಲ್ಲಿ ಈ ಲೇಖಕಿಯರು ಕೃತಿ ರಚನೆ ಮಾಡಿದರು ಎಂಬುದನ್ನು ಮರೆಯುವಂತಿಲ್ಲ.''(*'ಸಂಯುಕ್ತ ಕರ್ನಾಟಕ' ಪತ್ರಿಕೆ, ದಿನಾಂಕ 6.12.1992, ಪುಟ 5, ಟಿ.ಪಿ.ಅಶೋಕ.)

1950 ರಿಂದ 1975 ರ ಮಹಿಳಾ ಸಾಹಿತ್ಯದ ಎರಡನೇ ಹಂತ. ಈ ಸಂದರ್ಭದ ಸಾಹಿತ್ಯದಲ್ಲಿ ಹೆಣ್ಣಿನ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಸೈದ್ಧಾಂತಿಕ ಹಿನ್ನೆಲೆಯಲ್ಲಿ ಪ್ರತಿಪಾದಿಸುವಲ್ಲಿ ಪ್ರಗತಿಶೀಲತೆಯ ಪ್ರಾರಂಭದ ಹೆಜ್ಜೆಗಳು ಕಾಣಬಹುದು. ಈ ಹಂತದ ಪ್ರಮುಖ ಲೇಖಕಿಯರೆಂದರೆ ವಾಣಿ, ತ್ರಿವೇಣಿ, ಅನುಪಮಾ ನಿರಂಜನ, ಎಂ.ಕೆ.ಇಂದಿರಾ. ವಾಣಿಯವರ ಕಾದಂಬರಿಗಳು ಸಾಂಸಾರಿಕ ಚೌಕಟ್ಟಿನಲ್ಲೇ ಸಾರ್ಥಕತೆ ಕಾಣುತ್ತವೆ. ತಾವು ಬದುಕಿದ ಕಾಲದ ಪರಿಸರ ವ್ಯಕ್ತಿಗಳ ಸ್ವಭಾವ ಚಿತ್ರಣ, ಅವರ ಆಚಾರ–ವಿಚಾರ ಸುಂದರವಾಗಿ ನಿರೂಪಿಸಿದ್ದಾರೆ. ವಾಣಿಯವರ ಅತ್ಯಂತ ಜನಪ್ರಿಯ ಕಾದಂಬರಿಗಳು 'ಶುಭಮಂಗಳ', 'ಎರಡು ಕನಸು', 'ಹೊಸ ಬೆಳಕು', ಚಿನ್ನದ ಪಂಜರ', 'ಪ್ರೇಮ ಸೇತು' ಮುಂತಾದವು ಪ್ರೇಮ ಕಥೆಯ ಪ್ರಮುಖ ವಸ್ತುಗಳಿಂದ ಕೂಡಿದೆ. ಇವರ ಕಾದಂಬರಿಯ ಹೆಣ್ಣುಪಾತ್ರಗಳು ಸ್ವಾವಲಂಬಿಯಾಗಿ ಬೆಳೆಯುವುದೇ ಇಲ್ಲ. ಕೆಲವು ಕಾದಂಬರಿಗಳಲ್ಲಿ ಬಡತನದ ಚಿತ್ರಣವಿದೆ. ಬಡತನದ ಬಗ್ಗೆ ವಸ್ತುನಿಷ್ಠವಾಗಿ ನಿಖರವಾಗಿ ಹೇಳುವುದಾಗಲೀ ಬಡತನವನ್ನು ನಿವಾರಿಸುವತ್ತ ಆಲೋಚಿಸುವ ಪಾತ್ರಗಳು ಸೃಷ್ಟಿಗೊಂಡಿಲ್ಲ. ಕೆಲವು ಕಾದಂಬರಿಗಳಲ್ಲಿ ಸ್ತ್ರೀಪರ ಮತ್ತು ಪುರುಷವಿರೋಧಿ ದೃಷ್ಟಿಯಿದೆ. ಇದಕ್ಕೆ ಅಪವಾದ ಅವರ ಕಾದಂಬರಿ 'ಶಿಶಿರ ಗಾನ'. ವಾಣಿಯವರ ಹೆಚ್ಚಿನ ಕಾದಂಬರಿಗಳು ಓದುಗರಿಗೆ ಮನರಂಜನೆಯನ್ನೀಯುವ ಉದ್ದೇಶದಿಂದ ರಚಿತಗೊಂಡಂತೆ ತೋರುತ್ತವೆ. 'ಮನೆಮಗಳು' ಮತ್ತು 'ಅಂಜಲಿ' ಕಾದಂಬರಿಗಳಲ್ಲಿ ಹೊಸತನದ ಛಾಯೆಯಿದೆ. ಸಾಮಾಜಿಕ ಜೀವನದಲ್ಲಿ ಉಂಟಾಗುವ ಬದಲಾವಣೆಗಳತ್ತ ಮತ್ತು ವ್ಯಕ್ತಿಗತ ಮೌಲ್ಯಗಳ ಕುರಿತಾಗಲೀ ವಾಣಿಯವರು ಗಮನಹರಿಸದೆ, ಕೇವಲ ಸಾಂಪ್ರದಾಯಿಕ ಶೈಲಿಯಲ್ಲಿ ವಸ್ತುವನ್ನು ನಿರೂಪಿಸುವಲ್ಲಿ ತೃಪ್ತಿ ಹೊಂದಿದ್ದಾರೆ. ವಾಣಿಯವರ ಸಮಕಾಲೀನರಾಗಿ ತಮ್ಮ ಕೆಲವು ಮೌಲಿಕ ಕಾದಂಬರಿಗಳಿಂದ ಗಮನ ಸೆಳೆದ ಲೇಖಕಿ ಎಂ.ಕೆ.ಇಂದಿರಾ ಅವರ 'ಫಣಿಯಮ್ಮ' ಕಾದಂಬರಿಯಲ್ಲಿ, ಅನಿಷ್ಟ ಸಂಪ್ರದಾಯಗಳ ಮತ್ತು ಹಳೆ ಕಂದಾಚಾರಗಳಿಗೆ ಬಲಿಯಾಗುವ ಹೆಣ್ಣಿನ ನೋವಿನ

ಚಿತ್ರಣವಿದೆ. ವಿಧವಾ ಜೀವನದ ಸಮಸ್ಯೆಗಳನ್ನು ಕುರಿತು ವಿವೇಚಿಸಲಾಗಿದೆ. 'ಗೆಜ್ಜೆಪೂಜೆ' ಕಾದಂಬರಿಯಲ್ಲಿ ವೇಶ್ಯಾಸಮಸ್ಯೆಯ ವಸ್ತು ಪ್ರಧಾನವಾಗಿದೆ. 'ಸದಾನಂದ' ಕಾದಂಬರಿ ಪ್ರೇಮ ವಿವಾಹ, ವಿಧವಾ ವಿವಾಹದ ಪ್ರಮುಖ ವಸ್ತುವಿನಿಂದ ಕೂಡಿದೆ. ಇಂದಿರಾ ಅವರ ಕಾದಂಬರಿಗಳಲ್ಲಿ ಸ್ತ್ರೀಯರ ಉನ್ನತಿ ಮತ್ತು ಸಮಾಜ ಸುಧಾರಣೆಯ ವಿಚಾರಗಳಿವೆ. ವಾಣಿಯವರ ಆಲೋಚನಾಕ್ರಮಕ್ಕಿಂತಲೂ ಇಂದಿರಾ ಅವರ ಆಲೋಚನಾ ಕ್ರಮದಲ್ಲಿ ಸುಧಾರಣಾಪರ ಕಾಳಜಿ ಇದೆ. ಹೀಗಾಗಿ ವಾಣಿಯವರ ಬರಹಕ್ಕಿಂತಲೂ ಇಂದಿರಾ ಅವರ ಬರಹ ಸಾಹಿತ್ಯದಲ್ಲಿ ಭರವಸೆ ಮೂಡಿಸುವಂತಹುದು.

ವಾಣಿ ಮತ್ತು ಎಂ.ಕೆ.ಇಂದಿರಾ ಅವರ ತರುವಾಯ ಕಾದಂಬರಿ ಸಾಹಿತ್ಯದಲ್ಲಿ ಗಮನ ಸೆಳೆದ ತ್ರಿವೇಣಿ ಮತ್ತು ಅನುಪಮಾ ನಿರಂಜನ ಅವರು ವಿಚಾರವಂತ ಲೇಖಕರಿಂದ, ಸಹೃದಯರಿಂದ ಹಾಗೂ ವಿಮರ್ಶಕರಿಂದ ಸೈ ಎನಿಸಿಕೊಂಡು ಸಾಹಿತ್ಯಿಕ ಗುಣಮಟ್ಟದ ಕೃತಿಗಳನ್ನು ರಚನೆ ಮಾಡುವುದರ ಮೂಲಕ ಕನ್ನಡ ಸಾಹಿತ್ಯಕ್ಕೆ ಅಪರೂಪದ ಕೊಡುಗೆಗಳನ್ನು ನೀಡಿದ್ದಾರೆ. ತ್ರಿವೇಣಿಯವರ ಕಾದಂಬರಿಗಳಿಗೆ ಮಧ್ಯಮ ವರ್ಗದ ಸ್ತ್ರೀ ಸಮಸ್ಯೆ ವಸ್ತುವಾಗಿದ್ದರೆ ಅನುಪಮಾ ಅವರ ಕಾದಂಬರಿಗಳ ವಸ್ತು, ಮಧ್ಯಮ, ಕೆಳವರ್ಗದ ಸಮಸ್ಯೆಗಳು. ತ್ರಿವೇಣಿಯವರು ಸಾಮಾಜಿಕ ಕಾದಂಬರಿಗಳನ್ನು ಬರೆಯುವುದರ ಜೊತೆಯಲ್ಲಿ ಮನೋವೈಜ್ಞಾನಿಕ ವಸ್ತುಗಳನ್ನುಳ್ಳ ಕಾದಂಬರಿಗಳನ್ನು ಬರೆದಿದ್ದಾರೆ. ಅವರ ಕಾದಂಬರಿಗಳ ವಸ್ತುವಿನಲ್ಲಿ ವೈವಿಧ್ಯತೆ ಇದೆ. ಆದರೆ ಆಳವಿಲ್ಲ. ಮಹಿಳೆ ಆರ್ಥಿಕ ಸ್ವಾತಂತ್ರ್ಯ ಪಡೆದು ಸ್ವಾವಲಂಬಿಯಾಗಿ ಬದುಕಬೇಕೆಂಬ ತುಡಿತ ಕಾದಂಬರಿಗಳಲ್ಲಿ ವ್ಯಕ್ತವಾಗದಿರುವುದಕ್ಕೆ ಕಾರಣ ಬಹುಶಃ ಮಧ್ಯಮ ವರ್ಗದ ಸ್ತ್ರೀಯರನ್ನು ದೃಷ್ಟಿಯಲ್ಲಿಟ್ಟುಕೊಂಡು ಚಿತ್ರಿಸಿದ್ದೇ ಇರಬಹುದು. ಅಥವಾ ಸ್ತ್ರೀ ಶಿಕ್ಷಣ ಪಡೆದು ಮದುವೆ ಮಾಡಿಕೊಂಡು ಮಕ್ಕಳು ಪಡೆದು ಸುಖವಾಗಿದ್ದರೇ ಸಾಕೆಂಬ ಅಲ್ಪತೃಪ್ತಿ ಕಾಣಬಹುದಾಗುತ್ತೆ ಹೊರತು ಅದರಾಚೆಗೆ ಸ್ತ್ರೀಯ ಉದ್ಯೋಗದ ಅವಶ್ಯಕತೆ ಅಷ್ಟಾಗಿ ಅವರಿಗೆ ಕಾಡಲಿಲ್ಲವೆಂದೆನಿಸುತ್ತದೆ. ಭಾರತೀಯ ಸಂಸ್ಕೃತಿಯ ದೌರ್ಬಲ್ಯಗಳನ್ನು ಬೆರಳಿಟ್ಟು ತೋರಿಸಿದ್ದು ತ್ರಿವೇಣಿಯವರ ವೈಶಿಷ್ಟ್ಯಗಳಲ್ಲೊಂದಾಗಿದೆ ಎಂಬುದಕ್ಕೆ 'ಸೋತು ಗೆದ್ದವಳು' ಕಾದಂಬರಿ ನೋಡಬಹುದು. ಮನೆ ಒಡತಿಯಾಗುವುದಷ್ಟೇ ಹೆಣ್ಣಿನ ಜೀವನದ ಪರಮಾದರ್ಶ ಎಂಬುದನ್ನು ತಮ್ಮ ಕಾದಂಬರಿಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಮನೋವೈಜ್ಞಾನಿಕ ಕಾದಂಬರಿಗಳಾದ 'ಶರಪಂಜರ' ಹಾಗೂ 'ಬೆಕ್ಕಿನ ಕಣ್ಣು' ಕಲಾತ್ಮಕತೆಯ ದೃಷ್ಟಿಯಿಂದ ಉತ್ತಮ ಕೃತಿಗಳಾಗಿವೆ. ತ್ರಿವೇಣಿಯವರ ಕಾದಂಬರಿಯ ಭಾಷೆ, ನಿರೂಪಣೆ ಸುಂದರ ಮತ್ತು ಆಕರ್ಷಕವಾಗಿದೆ. 'ಹೂವು ಹಣ್ಣು' ಕಾದಂಬರಿಯಲ್ಲಿ ಅಂದಿನ ಸಮಾಜಕ್ಕೆ ಬಾಹಿರವಾದ ವೇಶ್ಯಾ ಸಮಸ್ಯೆಯನ್ನು ಬಹಿರಂಗವಾಗಿ ವಿಶ್ಲೇಷಣೆ ಮಾಡುವ ಎದೆಗಾರಿಕೆಯನ್ನುಳ್ಳವರಾಗಿದ್ದರು. 'ಪ್ರತಿಭಟನೆಯ ನೆಲೆಗಳಿಲ್ಲದೆಯೇ ತ್ರಿವೇಣಿಯವರ ಚಿತ್ರಣಗಳು ಓದುಗರಲ್ಲಿ ಪಾಪಪ್ರಜ್ಞೆ ಹುಟ್ಟಿಸಬಲ್ಲಷ್ಟು subtle ಆಗಿವೆ. ಆಧುನಿಕ ಹೆಣ್ಣಿನ ಹಲವು ಬಗೆಯ ತುಮುಲಗಳನ್ನು ಚಿತ್ರಿಸುವ

'ಕಂಕಣ', ಈ ಬಗೆಯ ವಸ್ತುವನ್ನು ಕೇಂದ್ರವಾಗುಳ್ಳ ಎಸ್.ಎಲ್.ಭೈರಪ್ಪ, ಶಿವರಾಮ ಕಾರಂತ, ವಿ.ಎಂ.ಇನಾಂದಾರ್ ಮುಂತಾದವರ ಅನೇಕ ಕಾದಂಬರಿಗಳೊಂದಿಗೆ, ಅರ್ಥಪೂರ್ಣವಾಗಿ ಹೋಲಿಸ ಬಹುದಾದ ಕೃತಿ.'* 'ಶರಪಂಜರ', 'ಬೆಳ್ಳಿಮೋಡ', 'ಸೋತುಗೆದ್ದವಳು' ಮೊದಲಾದ ಕಾದಂಬರಿಗಳಲ್ಲಿ ಸ್ತ್ರೀಪರ ಧೋರಣೆಗಳ ಅಭಿವ್ಯಕ್ತಿಯಿದೆ.

ಅನುಪಮ ಅವರ ಮೊದಲನೆಯ ಘಟ್ಟದ ಕೃತಿಗಳನ್ನು ಬಿಟ್ಟರೆ ಎರಡನೇ ಘಟ್ಟದ ಕೃತಿಗಳು ಸಾಹಿತ್ಯಿಕ ಬೆಳವಣಿಗೆಯ ದೃಷ್ಟಿಯಿಂದ ಗಮನಾರ್ಹ. ಅನುಪಮಾ ಅವರು ತಮ್ಮ ಪ್ರಾರಂಭದ ನೆಲೆಯನ್ನು ಮೀರಿ ತಮ್ಮ ಇತ್ತೀಚಿನ ಕೃತಿಗಳಾದ 'ಕೊಳಚೆಕೊಂಪೆ ದಾನಿಗಳು' 'ಘೋಷ', 'ಮಾಧವಿ', 'ಅಳ' ಕಾದಂಬರಿಗಳ ಮೂಲಕ ಬೆಳೆದದ್ದನ್ನು ಕಾಣಬಹುದು. ಸಾಮಾಜಿಕ ಪ್ರಜ್ಞೆಯನ್ನು ಜಾಗ್ರತಗೊಳಿಸುತ್ತಾ, ಬಂಡಾಯದ ಆಶಯಗಳನ್ನು ಹುಟ್ಟುಹಾಕುತ್ತಾ, ಕಲಾತ್ಮಕವಾಗಿ ಅರಳುವ ಬದುಕಿನ ಅನೇಕ ನೋವು- ನಲಿವಿನ ಸಂಗತಿಗಳು ಶೋಷಣೆಯ ವಿವಿಧ ಮುಖಗಳು, ಮೌಢ್ಯತೆಯ ವಿವರಗಳು ಅವರ ಕಾದಂಬರಿಗಳಲ್ಲಿ ಸ್ಫೋಟಗೊಳ್ಳುವುದರಿಂದ ಅನುಪಮಾ ಪ್ರಮುಖ ಲೇಖಕಿಯಾಗಿ ಗಮನ ಸೆಳೆಯುತ್ತಾರೆ. ವಾಣಿ-ತ್ರಿವೇಣಿಯವರ ಕೃತಿಗಳಲ್ಲಿ ಮಹಿಳೆಯರ ಬದುಕನ್ನು ಕುರಿತು ವಿಶ್ಲೇಷಿಸುವ, ಮಾನಸಿಕ ಯಾತನೆಯಿಂದ ನರಳುತ್ತಿರುವ ಮಹಿಳೆಯರ ಬಗೆಗೆ ಆಲೋಚಿಸಹಚ್ಚುವ ರೀತಿ ಕಂಡು ಬಂದರೆ; ಅನುಪಮಾ ಅವರ ಕಾದಂಬರಿಗಳಲ್ಲಿ ಮಹಿಳೆ ಸಮಾನತೆಗಾಗಿ ಹೋರಾಡುವ, ವೈಜ್ಞಾನಿಕವಾಗಿ ಬಾಳುವ ಹೊಸ ಆಶಯಗಳಿವೆ. ಲೇಖಕಿಯ ಮೊದಲ ಕೃತಿಗಳಲ್ಲಿ ಮಹಿಳೆಯರ ಬದುಕನ್ನು ಕಟ್ಟುವ ಕಾರ್ಯ ನಡೆದಿದ್ದರೆ, ನಂತರದ ಕೃತಿಗಳಲ್ಲಿ ಅಸಮಾನತೆಯನ್ನು ಕೆದಕುವುದರಿಂದ, ಅನ್ಯಾಯವನ್ನು ಪ್ರತಿಭಟಿಸುವುದರಿಂದ ಅನುಪಮಾ ವಿಶಿಷ್ಟವಾಗಿ ಕಾಣುತ್ತಾರೆ. ಅನುಪಮಾ ಅವರ 'ಮಾಧವಿ' ಪೌರಾಣಿಕ ಕಾದಂಬರಿಯನ್ನೊಂದು ಹೊರತುಪಡಿಸಿದರೆ ಉಳಿದವುಗಳೆಲ್ಲಾ ಸಾಮಾಜಿಕ ಕಾದಂಬರಿಗಳು. ಅನುಪಮಾ ಅವರ ಸಾಮಾಜಿಕ ಕಾದಂಬರಿಗಳಲ್ಲಿ ಶ್ರೇಣೀಕೃತ ಸಮಾಜದ ಚೌಕಟ್ಟುಗಳನ್ನು ಮುರಿದು ಮುಂದೆ ಸಾಗಬಲ್ಲ ಹೊಸ ಆಶಯಗಳ ಸೃಷ್ಟಿಯಿದೆ. ಕನ್ನಡ ಕಾದಂಬರಿ ಕ್ಷೇತ್ರ ಬರೀ ನಾಯಕ ಪ್ರಧಾನ ಕಾದಂಬರಿಗಳನ್ನೇ ಹೊಂದಿದ್ದಾಗ, ಅನುಪಮಾ ಅವರಂತಹ ಲೇಖಕಿಯರ ಪ್ರವೇಶದಿಂದ ನಾಯಕಿ ಪ್ರಧಾನ ಕಾದಂಬರಿಗಳು ಹೊರಬರಲು ಸಾಧ್ಯವಾಯಿತು. 'ಮಾಧವಿ' ಕಾದಂಬರಿಯಲ್ಲಿ 'ಮಾಧವಿ' ಎಲ್ಲಾ ಕಾಲದ ಶೋಷಿತ ಸ್ತ್ರೀಯರ ಪ್ರತಿನಿಧಿಯಂತಿದ್ದಾಳೆ. ಈ ಕಾದಂಬರಿಯ ಕೇಂದ್ರವಸ್ತುವಾಗುತ್ತಲೇ ಇಡೀ ಮಹಿಳಾ ವಿಮೋಚನೆಯ ಪರಂಪರೆಯೊಂದನ್ನು ಮಾಧವಿ ಕಟ್ಟಿಕೊಡುತ್ತಾಳೆ. 'ಕೊಳಪೆ ಕೊಂಪೆ ದಾನಿಗಳು' ದಲಿತರ ಚಿತ್ರಣ ಒಳಗೊಂಡಿದ್ದರೆ, 'ಘೋಷ' ಕಾದಂಬರಿಯಲ್ಲಿ ಪ್ರಜಾಸತ್ತಾತ್ಮಕವಾದ ಹೋರಾಟವಿದೆ. ತಾಯ್ತನ ಮೌಲ್ಯದ ಪರಿವರ್ತನೆಯನ್ನು 'ಆಳ' ಕಾದಂಬರಿಯಲ್ಲಿ ಕಾಣಬಹುದಾಗಿದೆ. ಅನುಪಮಾ ಅವರ 'ಮೂಲ ಮುಖ', 'ಆಳ', 'ಮಾಧವಿ' ಕಾದಂಬರಿಗಳಲ್ಲಿ ಮಹಿಳಾಪರ ದೃಷ್ಟಿಯಿದೆ.

ಅನುಪಮಾ ಅವರ ಕಾದಂಬರಿಗಳಲ್ಲಿ ಸ್ತ್ರೀಪಾತ್ರಗಳು ಕೇವಲ ಅಡುಗೆಮನೆಯ ಗೌರಮ್ಮಗಳಾಗದೆ ಶತಮಾನಗಳ ಮೌನವೊಡೆದು ಮಾತನಾಡುತ್ತಾರೆ. ಸಮಾನತೆಯ ಬದುಕಿಗಾಗಿ ಹಾತೊರೆಯುತ್ತಾರೆ. ಅನುಪಮಾ ಅವರ ಬರವಣಿಗೆ ವೈವಿಧ್ಯತೆಯೊಂದಿಗೆ ವಸ್ತುನಿಷ್ಠವಾಗಿದೆ. ಸಂಕೀರ್ಣತೆಯೊಂದಿಗೆ ಸತ್ವಪೂರ್ಣವಾಗಿದೆ.

ನವ್ಯ ಮತ್ತು ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಮಹಿಳೆಯರು ತಮ್ಮ ಬರಹದ ಮೂಲಕ ಹೊಸ ಭರವಸೆಗಳನ್ನು ಮೂಡಿಸುತ್ತಾ ಪ್ರಗತಿ ಪಥದಲ್ಲಿ ನಡೆದು ವೈಚಾರಿಕ ಪ್ರಜ್ಞೆಯ ಜಾಗೃತಿಯನ್ನು ದಲಿತ-ಬಂಡಾಯ ಚಳುವಳಿಯ ಸಂದರ್ಭದಲ್ಲಿ ದಟ್ಟವಾಗಿ ಕಂಡುಕೊಂಡಿದ್ದಾರೆ. ಈ ಎರಡು ಸಾಹಿತ್ಯಕ ಹಂತದಲ್ಲಿ ಕೆಲವು ಲೇಖಕಿಯರು ಮಾತ್ರ ಸ್ತ್ರೀ ಅಸ್ತಿತ್ವದ ಸ್ವರೂಪವನ್ನು ಅರಿತು ಅದನ್ನು ಮೀರಲು ಪ್ರಯತ್ನಿಸುವ, ಎದುರಾಗುವ ಸಮಸ್ಯೆಗಳನ್ನು ಎದುರಿಸುವ ಮನೋಬಲವನ್ನು ಗಟ್ಟಿಗೊಳಿಸುವ, ತಮ್ಮ ವ್ಯಕ್ತಿತ್ವಕ್ಕೆ ಕಂಟಕವಾಗಿರುವ ಸಾಂಪ್ರದಾಯಿಕ ಮೌಲ್ಯಗಳನ್ನು ಪ್ರಶ್ನಿಸಿ ಪ್ರತಿಭಟಿಸುವ, ಪುರುಷಪ್ರಧಾನ ವ್ಯವಸ್ಥೆಯ ಒಮ್ಮುಖ ನೀತಿಯನ್ನು ಖಂಡಿಸುವ, ಶೈಕ್ಷಣಿಕ-ಸಾಮಾಜಿಕ-ರಾಜಕೀಯ-ಆರ್ಥಿಕವಾಗಿ ಸಮಾನತೆಯನ್ನು ಬಯಸುವ ಪ್ರಯತ್ನಗಳನ್ನು ಮತ್ತು ದಿಟ್ಟ ನಿಲುವುಗಳನ್ನು ಹಾಗೂ ಸಾಮೂಹಿಕ ವಿಮೋಚನೆಯ ಮಾದರಿಗಳ ಅಭಿವ್ಯಕ್ತಿಯನ್ನು ಕಾಣಬಹುದು. ಇಂದಿನ ಸಾಹಿತ್ಯ ಸಂದರ್ಭದಲ್ಲಿ ಲೇಖಕಿಯರು ತಮ್ಮ ಸ್ಥಾನವನ್ನು ಉಳಿಸಿಕೊಳ್ಳುವ ಯಶಸ್ವಿ ಲಕ್ಷಣವಿದೆ. ಆದರೆ ಖೇದದ ಸಂಗತಿಯೆಂದರೆ ಹೆಚ್ಚಿನ ಸಂಖ್ಯೆಯ ಲೇಖಕಿಯರು ಬೌದ್ಧಿಕ ಮತ್ತು ಮಾನಸಿಕ ಲಕ್ಷ್ಮಣರೇಖೆಯನ್ನು ದಾಟದೆ ಬದುಕಿನ ಜಟಿಲಸಮಸ್ಯೆಗಳನ್ನು ವೈಚಾರಿಕವಾಗಿ ವಿಶ್ಲೇಷಣೆ ಮಾಡದೆ ಇವತ್ತಿಗೂ ಕೂಪಮಂಡೂಕಗಳಂತೆ ಉಳಿಯುವುದರಲ್ಲೇ ತೃಪ್ತಿಗೊಂಡಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದ ಪ್ರಾರಂಭದ ಹಂತವನ್ನು ಬಿಟ್ಟರೆ ಮುಂದಿನ ಹಂತದ ಸಾಹಿತ್ಯದಲ್ಲಿ ಹೆಣ್ಣನ್ನು ಹೆಣ್ಣಾಗಿ ಕಾಣುವ ಪ್ರಯತ್ನದಲ್ಲಿ ಮಹಿಳಾ ಸಾಹಿತ್ಯದ ಬೆಳವಣಿಗೆ ಹಂತವನ್ನು ಗುರುತಿಸಬಹುದು. ಸಮಾನ ಸ್ವಾತಂತ್ರ್ಯವನ್ನು ಬಯಸುವ ವೀಣಾ ಅವರ ಕೃತಿ 'ಗಂಡಸರು' ಗಮನಾರ್ಹವಾದದ್ದು. ಈ ಕಾದಂಬರಿಯ ನಾಯಕಿ ಲೈಂಗಿಕ ಕಟ್ಟನ್ನು ಮೀರುವುದರ ಮೂಲಕ ಲೈಂಗಿಕ ಸಮಾನತೆಯನ್ನು ಪಡೆಯಲು ಪ್ರಯತ್ನಿಸುತ್ತಾಳೆ. ಮಹಿಳೆ ವೈವಾಹಿಕ ಚೌಕಟ್ಟು ಇಲ್ಲದೆಯೂ ಬದುಕಬಹುದೆಂಬ ಭರವಸೆಯನ್ನು 'ಗಂಡಸರು' ಕಾದಂಬರಿಯಲ್ಲಿ ಮೂಡಿಸುವರು. ವಿವಾಹ ಬಂಧನವಿಲ್ಲದೆ ಮಹಿಳೆಗೆ ಸಮಾಜದಲ್ಲಿ ಸ್ಥಾನಮಾನಗಳಿಲ್ಲವೆಂಬ ಸಾಂಪ್ರದಾಯಿಕ ಮೌಲ್ಯದ ವಿರುದ್ಧ ಪ್ರತಿಕ್ರಿಯಿಸುವ ಪಾತ್ರವನ್ನು ಸೃಷ್ಟಿಸುವ ಎದೆಗಾರಿಕೆಯನ್ನು ತೋರಿಸಿದ್ದಾರೆ. ಈ ಪ್ರಕ್ರಿಯೆಯನ್ನು ಕುರಿತು ವಿಜಯಾ ದಬ್ಬೆ ಅವರು ಹೀಗೆ ಪ್ರಶ್ನಿಸುತ್ತಾರೆ.-'ಗಂಡಸರು ಕಾದಂಬರಿಯ ನಾಯಕಿ ಪಾತ್ರದ ವ್ಯಕ್ತಿತ್ವದ ಇತರ ಮುಖಗಳ ಎಚ್ಚರವೇನು? ಪ್ರತಿಭಟನೆಯೇನು ಎಂಬ ಬಗ್ಗೆ ಕಾದಂಬರಿ

ಉಳಿಸಿರುವ ಕತ್ತಲು ವಿಸ್ಮಯಕಾರಿಯಾದದ್ದು.' ವೀಣಾ ಅವರ ಮತ್ತೊಂದು ಕೃತಿ 'ಬಂಡಾಯ-ಶೋಷಣೆ ಇತ್ಯಾದಿ'. ಶೋಷಣೆಗೆ ಒಳಗಾದ ಮಹಿಳೆ ಪ್ರತಿಭಟಿಸುತ್ತಲೇ ಬಂಡಾಯ ಕ್ರಿಯೆಯಲ್ಲಿ ತೊಡಗಬೇಕೆಂಬ ಇಚ್ಛೆ ಲೇಖಕಿಯದಾಗಿದೆ. ಆದರೆ ಕಾದಂಬರಿಯ ಪಾತ್ರ ಶಶಿ, ಎಂಥಾ ಬಂಡಾಯವನ್ನು ಪ್ರತಿನಿಧಿಸುತ್ತಿದ್ದಾಳೆ ಎಂಬ ಸ್ಪಷ್ಟತೆ ಇಲ್ಲ. ಆದರೂ ಜಾಗೃತ ಪ್ರಜ್ಞೆಯನ್ನು ಮೂಡಿಸುವ, ವಿಮೋಚನೆ ಪಡೆಯಬೇಕೆಂಬ ಕಾಳಜಿಯನ್ನೇ ಬೆಳೆಸುವ ಪ್ರಯತ್ನ ಅವರ ಕಾದಂಬರಿಯಲ್ಲಿ ಪಡೆಯಬಹುದು. ಈ ದಶಕದಲ್ಲಿ ಹೆಚ್ಚಿನ ರೀತಿಯಲ್ಲಿ ಸಾಹಿತ್ಯಿಕ ಮೌಲ್ಯವುಳ್ಳ ಕೃತಿಗಳು ಬರಲಿಲ್ಲ.

80ರ ದಶಕದಲ್ಲಿ ಲೇಖಕಿಯರು ಆಮೆ ಚಿಪ್ಪಿನಿಂದ ಕತ್ತು ಹೊರಚಾಚಿದಂತೆ ತಮ್ಮ ಮನೋವೃತ್ತಿಯಿಂದ ಹೊರಬಂದು ಮುಕ್ತವಾಗಿ ಆಲೋಚಿಸಿ ಬರೆಯಲು ಪ್ರಯತ್ನಿಸಿದ್ದಾರೆ. ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಶೋಷಿತಳಾದ ಮಹಿಳೆ ಇಂದಿನ ಸಾಹಿತ್ಯಿಕ ಸಂದರ್ಭದ ಸೈದ್ಧಾಂತಿಕ ನಿಲುವುಗಳ ಪ್ರತಿಪಾದನೆಯಲ್ಲಿ ಪ್ರಾಮಾಣಿಕ ಪ್ರಯತ್ನ ಕಾಣಬಹುದು. ಇಡೀ ವ್ಯವಸ್ಥೆಯನ್ನೇ ಪ್ರಶ್ನಿಸುವ ಮತ್ತು ವೈಚಾರಿಕ ನೆಲೆಯಲ್ಲಿ ಆಲೋಚಿಸುವ ಕ್ರಮ ಇಂದಿನ ಬರಹಗಾರ್ತಿಯರ ಬರಹದಲ್ಲಿ ಕಾಣಬಹುದು. ಅವರಲ್ಲಿ ಪ್ರಮುಖರು ಸಾರಾ ಅಬೂಬಕರ್, ಬಿ.ಟಿ.ಲಲಿತಾನಾಯಕ್, ಗೀತಾ ನಾಗಭೂಷಣ. ಸಾರಾ ಅಬೂಬಕರ್ ಅವರ 'ಚಂದ್ರಗಿರಿಯ ತೀರದಲ್ಲಿ', 'ಸಹನಾ', 'ವಜ್ರಗಳು'- ಈ ಕಾದಂಬರಿಗಳು ಮುಸ್ಲಿಂ ಸಂಸ್ಕೃತಿಯ ಸಂವೇದನೆಗಳಿಂದ ಕೂಡಿವೆ. ಮುಸ್ಲಿಂ ಜನಾಂಗದ ಕೌಟುಂಬಿಕ ಸಾಮಾಜಿಕ ಧಾರ್ಮಿಕ ಮೌಲ್ಯಗಳ ವಸ್ತುನಿಷ್ಠ ವಿಶ್ಲೇಷಣೆ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಈ ತರಹದ ಅಭಿವ್ಯಕ್ತಿ ಮುಸ್ಲಿಂ ಜನಾಂಗದಿಂದ ಬಂದ ಲೇಖಕರ ಕೃತಿಗಳಲ್ಲಿಯೂ ಕಾಣಬಹುದು. ಅವರು ತಮ್ಮ ಕೃತಿಗಳಲ್ಲಿ ಪುರುಷಪ್ರಧಾನ ವ್ಯವಸ್ಥೆಯ ಚೌಕಟ್ಟಿನಲ್ಲೇ ಮಹಿಳೆಯರನ್ನು ಚಿತ್ರಿಸಿದ್ದಾರೆ. ಆದರೆ ಮಹಿಳೆಯ ಸಂವೇದನೆಗಳನ್ನು ಪ್ರಭಾವಪೂರ್ಣವಾಗಿ ತಮ್ಮ ಕೃತಿಗಳಲ್ಲಿ ಚಿತ್ರಿಸಲಿಲ್ಲ. ಈ ಹಿಂದೆ ಅನೇಕ ಲೇಖಕಿಯರು ಸ್ತ್ರೀಪರ ದೃಷ್ಟಿಯ ಕೃತಿಗಳನ್ನು ರಚಿಸಿದ್ದಾರೆ. ಕೆಲವರು ಯಜಮಾನ ಸಂಸ್ಕೃತಿಯನ್ನು ಒಪ್ಪಿಕೊಳ್ಳದೆ ಕೇವಲ ಗಂಡಸರನ್ನು ದೂಷಿಸುವುದೇ ಪ್ರಮುಖ ಉದ್ದೇಶ ಎನ್ನುವಂತೆ ಬರೆದರು. ದೇಶದ ಮೂಲಭೂತ ಸಮಸ್ಯೆಗಳ ಕುರಿತು ಚಿಂತಿಸದೆ ಕುಟುಂಬದ ತೀರ ಸಾಮಾನ್ಯ ವಿಚಾರಗಳನ್ನು ಕುರಿತು ಬರೆದರು. ಮುಂದೆ ಈ ಮಾದರಿಯ ವಿಷಯವನ್ನು ಒಳಗೊಂಡ ಬರಹದಲ್ಲಿ ಪರಿವರ್ತನೆಯಾಯಿತು. ಶತಮಾನಗಳ ಸ್ತ್ರೀ ಶೋಷಣೆಗೆ ಕಾರಣವಾಗಿರುವ ವ್ಯವಸ್ಥೆಯನ್ನು ಪ್ರಶ್ನಿಸುವ ಜಾಗೃತ ಪ್ರಜ್ಞೆಯನ್ನು ಮೂಡಿಸುವ ಕೃತಿಗಳು ರಚನೆಗೊಂಡವು. ಸಾರಾ ಅವರು ತಮ್ಮ ಕೃತಿಗಳಲ್ಲಿ ವ್ಯವಸ್ಥೆಯ ಅಡಿಯಲ್ಲಿ ಸಿಕ್ಕು ವ್ಯಕ್ತಿತ್ವವನ್ನು ಕಳೆದುಕೊಂಡು ಬದುಕುವ ಅಬಲೆಯರ ಚಿತ್ರಣವನ್ನು ಯಾವ ಮುಲಾಜಿಲ್ಲದೆ ನಿರ್ಭಿಡೆಯಿಂದ ದಿಟ್ಟತನದಿಂದ ಚಿತ್ರಿಸಿದ್ದಾರೆ. ತಮ್ಮ ಜನಾಂಗದ ಸಂಸ್ಕೃತಿಯ ಮುಖವಾಡವನ್ನು ಕಳಚುತ್ತಾ ವಸ್ತುಸ್ಥಿತಿಯ ಪರಿಚಯವನ್ನು ಸಾಹಿತ್ಯಕ್ಕೆ ಸಮಾಜಕ್ಕೆ ಮಾಡಿಕೊಟ್ಟಿರುವ ಪ್ರಕ್ರಿಯೆ ಕನ್ನಡ ಕಾದಂಬರಿ ಸಾಹಿತ್ಯಕ್ಕೆ ವಿಶಿಷ್ಟ

ಕೊಡುಗೆಯಾಗಿದೆ. ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ' ಮತ್ತು 'ಸಹನಾ' ಕಾದಂಬರಿಗಳಲ್ಲಿ ಮುಸ್ಲಿಂ ಜನಾಂಗದ ದುಡಿವ ವರ್ಗದವರ ಬದುಕಿನ ಚಿತ್ರಣವಿದೆ. ಗೊಡ್ಡು ಸಂಪ್ರದಾಯಗಳ ಮತ್ತು ಧಾರ್ಮಿಕ ಮೌಢ್ಯ ಆಚಾರ ವಿಚಾರಗಳಿಗೆ ಬಲಿಯಾದ ಅಮಾಯಕ ಮುಗ್ಧ ಜನರ ಪ್ರತಿನಿಧಿಯಾಗಿ ನಾದಿರಾ ಮಸೀದಿಯ ಕೊಳಕ್ಕೆ ಹಾರಿ ಸಾಯುವುದರ ಮೂಲಕ ಬದುಕಿನಿಂದ ಮುಕ್ತಳಾಗುವಳು. ಪುರುಷನು ತನ್ನ ಸ್ವಾರ್ಥಕ್ಕಾಗಿ ನಿರ್ಮಿಸುವ 'ತಲಾಕ್' ದಂತಹ ಪದ್ಧತಿಗಳಿಗೆ ನಾದಿರಾಳಂತಹ ಅನೇಕ ಮುಗ್ಧ ಸ್ತ್ರೀಯರು ಬಲಿಯಾಗುವ ಅಸಹಾಯಕತೆಯನ್ನು ಎತ್ತಿ ತೋರಿಸಿದ್ದಾರೆ. 'ತಲಾಕ್' ಸಮಸ್ಯೆಯನ್ನು ಎತ್ತಿಕೊಂಡು ಬರೆದಿರುವ ಕಾದಂಬರಿ 'ಚಂದ್ರಗಿರಿಯ ತೀರದಲ್ಲಿ' ಇಂದಿನ ಸಾಹಿತ್ಯಿಕ ಮತ್ತು ಸಾಮಾಜಿಕ ಸಂದರ್ಭದಲ್ಲಿ ಪ್ರಮುಖವಾಗಿದೆ. ಈ ಕೃತಿಯಲ್ಲಿ ವ್ಯವಸ್ಥೆಯ ಮೌಲ್ಯೀಕರಣ ಅದೇ ಜನಾಂಗದಿಂದ ಬಂದ ಮಹಿಳೆಯಿಂದ ನಡೆದದ್ದು ಅಭಿವ್ಯಕ್ತಿಯ ದೃಷ್ಟಿಯಿಂದ ಔಚಿತ್ಯಪೂರ್ಣವಾಗಿದೆ. 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿ 'ತಲಾಕ್' ಸಮಸ್ಯೆಯನ್ನು ಬಗೆಹರಿಸುವಲ್ಲಿ ಅಸಫಲಗೊಂಡರೆ, 'ಸಹನಾ' ಕಾದಂಬರಿಯಲ್ಲಿ ಆ ಸಮಸ್ಯೆಯನ್ನು ಎದುರಿಸಿ ನಿಲ್ಲುವ ಬದುಕಿನ ಹೋರಾಟವಿದೆ. 'ಸಹನಾ' ಕನ್ನಡದ ಗಮನಾರ್ಹ ಕೃತಿ. ಸಾರಾ ಅವರ ಕೃತಿಗಳಿಂದ ಕನ್ನಡ ಮಹಿಳಾ ಕಾದಂಬರಿ ಸಾಹಿತ್ಯಕ್ಕೆ ಭಿನ್ನ ಸಂಸ್ಕೃತಿಯ ಆಯಾಮಗಳ ಪರಿಚಯದೊಂದಿಗೆ ಹೊಸತನದ ಕಳೆ ಬಂದಿದೆ. ಮುಸ್ಲಿಂ ಜನಾಂಗದ ನೋವು–ನಲಿವುಗಳು, ಬದುಕಿನ ಏರಿಳಿತಗಳು, ಅದಕ್ಕೆ ಕಾರಣವಾಗುವ ಮನುಷ್ಯನ ಸ್ವಭಾವಗಳು, ಮೂಢನಂಬಿಕೆಗಳು ಹಾಗೂ ಸಾಂಪ್ರದಾಯಿಕ ಮೌಲ್ಯಗಳನ್ನು ಸಾರಾ ಅವರು ತಮ್ಮ ಕೃತಿಗಳ ಮೂಲಕ ಕಟ್ಟಿಕೊಡುತ್ತಲೇ, ಬದಲಾವಣೆಗೆ ಹಾತೊರೆಯುವ ಅವರ ತಣ್ಣನೆಯ ಬಂಡಾಯ ಮನೋಭಾವ ಕನ್ನಡ ಕಾದಂಬರಿ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಗಿದೆ. ನವ್ಯೋತ್ತರ ಸಾಹಿತ್ಯ ಸಂದರ್ಭದಲ್ಲಿ ಕೆಲವು ಲೇಖಕಿಯರ ಕೃತಿಗಳಲ್ಲಿ ಸಾಮಾಜಿಕ ಮೌಲ್ಯಗಳ ಪುನರ್ ಸೃಷ್ಟಿಯಿದೆ. ಬಿ.ಟಿ.ಲಲಿತಾ ನಾಯಕ್ ಅವರು 'ನೆಲೆ–ಬೆಲೆ' ಕಾದಂಬರಿ ಮೂಲಕ ಲಂಬಾಣಿ ಸಂಸ್ಕೃತಿಯನ್ನು ಪರಿಚಯಿಸಿದ್ದಾರೆ. ಗೀತಾ ನಾಗಭೂಷಣ ಅವರ 'ಹಸಿಮಾಂಸ ಮತ್ತು ಹದ್ದುಗಳು' ಹಾಗೂ 'ನೀಲಗಂಗಾ' ಕಾದಂಬರಿಗಳು ದಲಿತ ಸಂಸ್ಕೃತಿಯ ಸಂವೇದನೆಗಳನ್ನು ಹೇಳುತ್ತವೆ.

ಎನ್.ಮಂಗಳಾ ಸತ್ಯನ್, ಆರ್ಯಾಂಬಾ ಪಟ್ಟಾಭಿ, ಕೆ.ಸರೋಜಾ ರಾವ್, ಸಾಯಿಸುತೆ, ಅಶ್ವಿನಿ, ಎಚ್.ಜಿ. ರಾಧಾ ರವಿ ಮುಂತಾದವರು ಸಾಹಿತ್ಯಿಕವಾಗಿ ಗಟ್ಟಿಯಾಗಿ ನಿಲ್ಲುವಂತಹ ಕೃತಿಗಳನ್ನು ಕೊಡದೆ 'ಜನಪ್ರಿಯತೆ'ಗೆ ಮಾತ್ರ ಹೆಸರುವಾಸಿಯಾಗಿದ್ದಾರೆ. ಗಂಭೀರ ಮತ್ತು ಸಂಕೀರ್ಣತೆಯಿಂದ ಕೃತಿಗಳ ರಚನೆ ಮಾಡದೆ ತೀರಾ ಹಗುರವಾಗಿ ಪರಿಗಣಿಸಿ ಸುಲಭೀಕರಣದ ತಂತ್ರವನ್ನು ಅನುಸರಿಸಿ ರಚಿಸಿರುವ ಕೃತಿಗಳು ಸತ್ವದ ದೃಷ್ಟಿಯಿಂದ ಅಸಫಲಗೊಂಡಿವೆ. ಹಿಂದಿನ ಮೌಲ್ಯಗಳು ಇಂದಿನ ಸಂದರ್ಭದಲ್ಲಿ ಸವಕಲುಗೊಳ್ಳುತ್ತಿರುವ ವಿಚಾರವನ್ನು ಗಮನಕ್ಕೆ ತೆಗೆದುಕೊಳ್ಳದೆ, ಎಚ್ಚೆತ್ತ ಧೋರಣೆಗಳಿಂದ ದೂರವಿದ್ದು,

ಸಾಂಪ್ರದಾಯಿಕ ನಿಲುವನ್ನು ಬದಲಾಯಿಸಿಕೊಳ್ಳದೆ, ಸಾಮಾಜಿಕ ಆಯಾಮಗಳನ್ನು ಕೆದಕದೆ ತಮ್ಮ ಕೃತಿಗಳಲ್ಲಿ ಸ್ತ್ರೀಯನ್ನು ಆದರ್ಶನಾರಿಯನ್ನಾಗಿ ಚಿತ್ರಿಸುತ್ತಿರುವುದು ಶೋಚನೀಯವಾಗಿದೆ. ಕೇವಲ ಜನಪ್ರಿಯತೆಗೆ, ಚಲನಚಿತ್ರಗಳಿಗೆ ಮತ್ತು ಧಾರಾವಾಹಿಗೆ ಮಾತ್ರ ಸೀಮಿತಗೊಂಡ ಬರಹ ಲೇಖಕಿಯರ ಮಿತಿಯನ್ನು ತೋರಿಸುತ್ತದೆ. 'ಕನ್ನಡ ಮಹಿಳೆ ಇನ್ನು ಕನ್ನಡ ಜನತೆಗೆ 'pride and prejudice' ನಂಥ ಕೃತಿಯನ್ನಾಗಲಿ, `good earth' ನಂಥ ಕಾದಂಬರಿಯನ್ನಾಗಲಿ `Jane Eyre' ನಂಥ ಸಾಹಿತ್ಯವನ್ನಾಗಲಿ, 'silas marner' ನಂಥ ಬರಹವನ್ನಾಗಲಿ, 'The light house' ನಂಥ ವಿಶ್ಲೇಷಣೆಯನ್ನಾಗಲಿ ನೀಡಿಲ್ಲವೆಂಬುದು ಸತ್ಯ'* (* ಚಿ.ನ.ಮಂಗಳಾ, 'ಮಹಿಳೆ ಮತ್ತು ಕನ್ನಡ ಸಾಹಿತ್ಯ', ಪುಟ 23)

ಇಂದು ಲೇಖಕಿಯರು ತಮ್ಮ ಮಿತಿಗಳನ್ನು ಕಂಡುಕೊಂಡು ಮತ್ತು ತಿದ್ದಿಕೊಂಡು ಬರಹದಲ್ಲಿ ವೈಚಾರಿಕವಾಗಿ ತೊಡಗಿಸಿಕೊಂಡಾಗ ಮಾತ್ರ ನೆರೆ ಭಾಷೆಯ ಬರಹಗಾರ್ತಿಯರಂತೆ ಬೆಳೆಯಲು ಸಾಧ್ಯವಿದೆ. ಅಕ್ಕಮಹಾದೇವಿ ಮತ್ತು ಮುಕ್ತಾಯಕ್ಕನ ಹಾಗೆ ಅನುಭವದ ಗಟ್ಟಿತನದಿಂದ ದಿಟ್ಟ ನಿಲುವುಗಳಿಂದ ಅಭಿವ್ಯಕ್ತಿಸುವ ಲೇಖಕಿಯರ ಸಂಖ್ಯೆ ಹೆಚ್ಚಾಗಬೇಕಾಗಿದೆ. ಲತಾ ರಾಜಶೇಖರ, ಗುಡಿಬಂಡೆ ಪೂರ್ಣಿಮಾ, ಎಂ.ಪಿ.ಉಮಾದೇವಿ ಮೊದಲಾದ ಇಂದಿನ ಲೇಖಕಿಯರಲ್ಲಿ ಕೆಲವು ಮಿತಿಗಳು ಇದ್ದರೂ ಮಹಿಳೆಯ ಮೂಲಭೂತ ಸಮಸ್ಯೆಗಳ ಬಗ್ಗೆ ಅರ್ಥಪೂರ್ಣವಾಗಿ ಆಲೋಚಿಸುತ್ತಿರುವುದು ಮಹಿಳಾ ಸಾಹಿತ್ಯದ ಆರೋಗ್ಯಕರ ಬೆಳವಣಿಗೆಯಾಗಿದೆ. ಭಾರತೀಯ ಕೌಟುಂಬಿಕ ಚೌಕಟ್ಟನ್ನು ವರ್ಣಿಸಿ ಬರೆಯುವ ಅಂದಿನ ಬರಹದಲ್ಲಿ ಲೇಖಕಿಯರ ಇತಿಮಿತಿಗಳಿವೆ. ಆದರೆ ಆ ಮಿತಿಯನ್ನು ಮೀರಿ ಇಂದಿನ ಲೇಖಕಿಯರು ಭಾರತೀಯ ಕೌಟುಂಬಿಕ ಚೌಕಟ್ಟನ್ನು ಪ್ರಶ್ನಿಸುವುದರ ಮೂಲಕ ಇಲ್ಲಿಯವರೆಗೆ ಮಹಿಳಾ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ದಲಿತ ಮತ್ತು ಮುಸ್ಲಿಂ ಸಂಸ್ಕೃತಿಯ ಸಂವೇದನೆಗಳನ್ನು ಅಭಿವ್ಯಕ್ತಿಗೊಳಿಸುವಲ್ಲಿ ಮಹಿಳಾ ಕಾದಂಬರಿ ಸಾಹಿತ್ಯದ ಪ್ರಗತಿಯ ಹೆಜ್ಜೆಗಳನ್ನು ಕಾಣಬಹುದಾಗಿದೆ.



# ಮಹಿಳಾ ಕಾದಂಬರಿಗಳು: 'ದುಃಖಕ್ಕೆ ಹೆಗಲು ಸುಖಕ್ಕೆ ಸಂಗಾತಿ'

✦ ಡಾ. ಸಬಿತಾ ಬನ್ನಾಡಿ

ಕಾದಂಬರೀ ಜಗತ್ತಿನೊಂದಿಗೆ ಮಹಿಳೆಯರ ಒಡನಾಟ ಯಾವ ರೀತಿಯದು ಎಂಬ ಹುಡುಕಾಟ ಕುತೂಹಲದಾಯಕವಾದುದು. ಕನ್ನಡದಲ್ಲಿ ಮಹಿಳೆಯರು ಬರೆದ ಅಸಂಖ್ಯ ಕಾದಂಬರಿಗಳಿವೆ. ಇವೆಲ್ಲವೂ ಒಂದಲ್ಲಾ ಒಂದು ರೀತಿಯಲ್ಲಿ ಆಧುನಿಕ ಮಹಿಳೆ ಎದುರಿಸಿದ/ಅನುಭವಿಸಿದ ಇಕ್ಕಟ್ಟು ಬಿಕ್ಕಟ್ಟುಗಳನ್ನು, ಹಾಗೆಯೇ ನಡೆದ ಹಾದಿಗಳನ್ನು ತಮ್ಮೊಡಲೊಳಗೆ ಹುದುಗಿಸಿಕೊಂಡಿವೆ. ಮೊದಲಿಗೇ ಒಂದು ಸಾಲಿನಲ್ಲಿ ಹೇಳಿ ಮುಗಿಸುವುದಾದರೆ, 'ಜನಪ್ರಿಯ' ಎಂಬ ಹಣೆಪಟ್ಟಿಯಲ್ಲಿ ಅಂದಿನ ಮಾಧ್ಯಮಗಳ ಮೂಲಕ ಪ್ರಕಾಶಿತವಾದ ಕಾದಂಬರಿಗಳು ಮಹಿಳೆಯನ್ನು ಆಧುನಿಕ ಲೋಕವೂ ಹೇಗೆಲ್ಲಾ ನಯ ನಾಜೂಕಿನಿಂದ ಕಟ್ಟಿಹಾಕಬೇಕೆಂದು ಬಯಸಿತ್ತೋ ಹಾಗೆ ಕಟ್ಟಿ ಹಾಕಲು ಹೆಂಗಸರೇ ಗಂಡಾಳ್ವಿಕೆಗೆ ಕೊಟ್ಟ ಹಗ್ಗದಂತೆ ಕೆಲಸ ಮಾಡಿದವು. ಅವರಿಗೆ ವಿದ್ಯೆ ಸಿಕ್ಕಿತ್ತು ನಿಜ. ಆ ವಿದ್ಯೆಯು ಆಧುನಿಕ ವಿಧೇಯ ಪತ್ನಿಯರನ್ನು, ಭಿನ್ನ ಭಿನ್ನ ಪಾತ್ರಧಾರಿಗಳನ್ನು ಅವರ ಮುಂದೆ ಇಟ್ಟು ತರಬೇತಿ ಪಡೆಯುವಂತೆ ನಯವಾಗಿ ಆದೇಶಿಸಿತು. ಅವರು ಅದನ್ನು ಮುಗ್ಧ ನಂಬಿಕೆಯಿಂದ ಪಾಲಿಸಿದರು. ಆದರೂ ಇದೇ ವಿದ್ಯೆ ಕ್ರಮೇಣ ತಿಳಿವಿನ ಬೇರೆ ಲೋಕಕ್ಕೆ ಕೀಲಿಕೈಯಾಗಿ ಒದಗಿ ಬಂದಿದ್ದರಿಂದ ಅದುವರೆಗೂ ಹೆಣ್ಣುಮಕ್ಕಳಿಂದ ಏನನ್ನೆಲ್ಲಾ ಮರೆಮಾಚಲಾಗಿತ್ತೋ ಅದೆಲ್ಲಾ ತೆರೆದುಕೊಂಡು ಅವರು 'ವಿಚಾರ' ಮಾಡುವಂತೆ ಆಯಿತು.

ಕನ್ನಡ ಕಾದಂಬರೀ ಲೋಕವನ್ನು ತಿರುಮಲಾಂಬಾ ತಲೆಮಾರಿನವರು ಬೇಗನೇ ಪ್ರವೇಶಿಸಿದ್ದರು. ಆವರದು ಮನ್ನಣೆಯನ್ನು ಪಡೆದುಕೊಳ್ಳಲಿಲ್ಲ ಎಂಬುದು ಬೇರೆ ಮಾತು. ಚಿಕ್ಕದೇ ಆದರೂ ಪಕ್ಕಿನ ಪ್ರಶ್ನೆಗಳನ್ನು ಅವರು ಎತ್ತ ತೊಡಗಿದ್ದರು. ಕಾದಂಬರಿಯೆಂಬುದು ಅವರಿಗೆ ಹೆಣ್ಣಿನ ಪ್ರತಿನಿಧೀಕರಣವಾಗಿತ್ತು. ಅವರ ಕಾಲದಲ್ಲಿ ಬರೆಯುತ್ತಿದ್ದ ಪುರುಷರಿಗೆ ಕಾದಂಬರಿಯು ಕಾಲ ಪಲ್ಲಟದ ಅಭಿವ್ಯಕ್ತಿಯ ಕಲಾಕೃತಿಯಾಗಿ ಕಂಡರೆ, ಮಹಿಳೆಯರಿಗೆ ತಮ್ಮ ನಿಟ್ಟುಸಿರುಗಳನ್ನು ಲೋಕಕ್ಕೆ ತಿಳಿಯುವಂತೆ ಹೇಳುವ ಅವಕಾಶವಾಗಿ ಕಾಣಿಸಿತು. ಇಲ್ಲೇ ಮಹಿಳೆ ಮತ್ತು ಪುರುಷ ಕಾದಂಬರಿ ಪ್ರಕಾರವನ್ನು ಪರಿಗಣಿಸಿರುವ ಮೂಲಭೂತ

ವ್ಯತ್ಯಾಸ ಇರುವುದು. ಈ ಕಾರಣದಿಂದಲೇ ಮುಂದೆ ದಶಕಗಳ ಕಾಲ ಸ್ತ್ರೀಯರ ಕಥನಗಳು 'ಕಲಾಕೃತಿ'ಗಳಾಗಿ ಕಾಣದ್ದರಿಂದ ಅವಜ್ಞೆಗೆ ಒಳಗಾದುದು. ಬದಲಾದ ಕಾಲಘಟ್ಟದಲ್ಲಿ ಸಾಹಿತ್ಯದ ವ್ಯಾಖ್ಯಾನಗಳೂ ಬದಲಾದ ಕಾರಣದಿಂದ ಹಿಂದೆ ಬರೆದ ಹೆಣ್ಣುಮಕ್ಕಳ ಬರಹಗಳಿಗೆ ವಾಪಾಸ್ಸು ಹೋಗಿ ಅಧ್ಯಯನ ಮಾಡುವ ಪ್ರಕ್ರಿಯೆಗಳು ಶುರುವಿಟ್ಟುಕೊಂಡವು.

ಒಂದು ಸ್ವಯಂ ಎಚ್ಚರದ ಭಾಗವಾಗಿ ಹೆಣ್ಣುಮಕ್ಕಳಿಗೆ ಕಾಣಿಸಿಕೊಂಡಿದ್ದ ಕಾದಂಬರಿ ಪ್ರಕಾರವು ಅವಜ್ಞೆಯ ಕಾರಣಕ್ಕೆ ಹಿಂದೆ ಸರಿದು, ಮನರಂಜನೆಯ ಸರಕಾಗಿ ಮನ್ನಣೆ ಪಡೆದು ಹೆಣ್ಣುಮಕ್ಕಳ ಕಾದಂಬರಿಯೆಂದರೆ 'ಇಷ್ಟೇ' ಎಂಬ ತಾತ್ಸಾರಕ್ಕೆ ಒಳಗಾಗಿ ಮತ್ತೆ ತನ್ನ ಪಥ ಕಂಡುಕೊಳ್ಳುವ ತನಕ ಕಾಲದ ದೊಡ್ಡ ಅಂತರವೊಂದು ಕಣ್ಣಿಗೆ ರಾಚುವಂತೆ ಕಾಣುತ್ತದೆ. ತಿರುಮಲಾಂಬಾ, ಕಲ್ಯಾಣಮ್ಮ, ಕೊಡಗಿನ ಗೌರಮ್ಮ, ಶ್ಯಾಮಲಾಬಾಯಿ ಮೊದಲಾದವರು ತಮ್ಮ ಕತೆ, ಕಾದಂಬರಿಗಳಲ್ಲಿ ಎತ್ತಿದ ಮಹತ್ವದ ಪ್ರಶ್ನೆಗಳನ್ನು ಪುನಃ ಎತ್ತಿಕೊಳ್ಳುವುದರ ನಡುವೆ ಒಂದು ತಲೆಮಾರು ಮೌನವಾಗಿತ್ತು. ಅನುಪಮಾ ನಿರಂಜನ ಕೂಡ ತಮ್ಮ ಎರಡನೆಯ ಹಂತದ ಬರವಣಿಗೆಯಲ್ಲಿ ಪ್ರಗತಿಪರ ಆಶಯಗಳನ್ನು ಕಂಡುಕೊಂಡರೇ ಹೊರತು ಆರಂಭದ ಬರವಣಿಗೆಗಳಲ್ಲಲ್ಲ ಎಂಬುದನ್ನು ನಾವು ಗಂಭೀರವಾಗಿ ಗಮನಿಸಬೇಕಾಗಿದೆ. ಅಂದರೆ, ಬಹಳ ಮೆಲುದನಿಯಲ್ಲಿ ಕಲ್ಯಾಣಮ್ಮ 'ನಿರ್ಭಾಗ್ಯ ವನಿತೆ' ಮೊದಲಾದ ಕಾದಂಬರಿಯಲ್ಲಿ, ತಿರುಮಲಾಂಬಾ ತಮ್ಮ ನಭಾ ಇತ್ಯಾದಿ ಕಾದಂಬರಿಗಳಲ್ಲಿ – ಸೀಮಿತ ನೆಲೆಯಲ್ಲಿ – ಬ್ರಾಹ್ಮಣ ವಿಧವೆಯರ ಬವಣೆಗಳನ್ನು ಮುನ್ನೆಲೆಗೆ ತಂದು ಅವರಿಗೆ ಶಿಕ್ಷಣದ ಅವಕಾಶ, ವಿಧವಾ ವಿವಾಹ ಇತ್ಯಾದಿಗಳನ್ನು ಕೇಳಿದ್ದನ್ನು 'ಕೇಳಿಸಿಕೊಳ್ಳುವ' ಸ್ಥೈರಣೆ ಅಂದಿನ ಸಾಹಿತ್ಯಕ ಮತ್ತು ಸಾಮಾಜಿಕ ವಲಯದಲ್ಲಿ ಇರಲಿಲ್ಲ ಎನ್ನುವುದನ್ನು ಗಮನಿಸಬೇಕು. ಅದೇ ಮಾತುಗಳನ್ನು ಪುರುಷರು ತಮ್ಮ ಕಾದಂಬರಿಯಲ್ಲಿ ಹೇಳಿದರೆ ಅದು ಕೇಳಿಸಿಕೊಳ್ಳಬೇಕಾದ ಮಾತಾಗಿತ್ತು. ಇವರ 'ಪರ' ಅವರು ಮಾತಾಡುವುದು ಮಹತ್ವದ್ದು (ಖಂಡಿತಕ್ಕೂ ಹೌದು), ಆದರೆ ಅವಳೇ ಮಾತಾಡುವುದು 'ಅಧಿಕ ಪ್ರಸಂಗಿತನ'ದ್ದೇ? ತಿರುಮಲಾಂಬಾ ಅನುಭವಿಸಿದ ನೋವು, ಅವಮಾನ ಹೇಳುವುದೇನನ್ನು? ಇಷ್ಟಾಗಿಯೂ ಎಪ್ಪತ್ತರ ದಶಕದ ನಂತರದಲ್ಲಿ ಹೆಣ್ಣುಮಕ್ಕಳು ತಮ್ಮದೇ ಧ್ವನಿಯಲ್ಲಿ ಖಚಿತವಾಗಿ ಮಾತಾಡತೊಡಗಿದರು. ಈ ಎಲ್ಲ ಬೆಳವಣಿಗೆಗಳ ಚಾರಿತ್ರಿಕ ದಾಖಲೆಯಾಗಿಯೂ ಮಹಿಳೆಯರು ಬರೆದ ಕಾದಂಬರಿಗಳು ಒದಗಿ ಬರುತ್ತವೆ.

ಆರಂಭದಲ್ಲಿ ಮಹಿಳಾ ಕಾದಂಬರಿಗಳು ಸುಧಾರಣೆಯ ಅಂಗವಾಗಿ ಮಹಿಳೆಯ ಪ್ರಶ್ನೆಗಳನ್ನು ಎತ್ತಿದುವು. ಹೀಗೆ ಎತ್ತುವಾಗಲೂ ಅದರ ಹಿಂದಿರುವ ಧ್ವನಿ ಒಂದೇ ರೀತಿಯಲ್ಲಿ ಇತ್ತು ಎನ್ನಲಾಗುವುದಿಲ್ಲ. ಕಾದಂಬರಿ ಕ್ಷೇತ್ರದಲ್ಲಿ ಜನಪ್ರಿಯರಾಗಿದ್ದ ತ್ರಿವೇಣಿ ಮತ್ತು ಎಂ.ಕೆ.ಇಂದಿರಾ ಅವರನ್ನು ಗಮನಿಸಿದರೆ ಇದು ಸ್ಪಷ್ಟವಾಗುತ್ತದೆ. ತ್ರಿವೇಣಿಯವರ ಹೆಚ್ಚಿನ ಕಾದಂಬರಿಗಳಲ್ಲಿ ಗಂಡು ಕೇಂದ್ರವನ್ನು ಒಪ್ಪಿ 'ಪೂರಕ ಸತಿ'ಯಾಗಿಯೂ.

ಮಾನವೀಯತೆಯ ದ್ಯೋತಕವಾಗಿ – ಪುರುಷ ರಕ್ಷಣೆಯ ಕೊಡೆಯನ್ನು ಅಪೇಕ್ಷಿಸುವ, ಮತ್ತದನ್ನು ಪುರುಷನ ಹೊಣೆಗಾರಿಕೆ ಎಂದು ನೆನಪಿಸುವ, ಭಾವಿಸುವ ಧೋರಣೆಯನ್ನು ಕಾಣಬಹುದು. ಇಂತಹ ಧೋರಣೆಯ ಕಾದಂಬರಿಗಳು ಇತರರಲ್ಲೂ ಧಂಡಿಯಾಗಿ ಇವೆ. ಬೆಳ್ಳಿಮೋಡದಲ್ಲಿ ಹೆಣ್ಣಿಗೆ ಆಸ್ತಿ ಹಕ್ಕು ಇಲ್ಲದೇ ಇರುವುದರಿಂದ ಅವಳೆಡೆಗೆ ಇರುವ ನಿರ್ಲಕ್ಷ್ಯದ ಮನೋಭಾವದ ಚಿತ್ರಣ ಇದೆಯಾದರೂ ಅದನ್ನು ಅವಳ ಹಕ್ಕು ಎಂಬಂತೆ ಬಿಂಬಿಸುವ ಉದ್ದೇಶವೇನೂ ಇಲ್ಲಿ ಇಲ್ಲ. ಬದಲಿಗೆ ಗಂಡಿನ ಸ್ವಾರ್ಥ ಮನೋವೃತ್ತಿಯನ್ನು ಅನಾವರಣ ಮಾಡುವುದರ ಕಡೆ ಗಮನ ಇದೆ. ಯಾಕೆಂದರೆ, ಹೆಣ್ಣಿನ ಬದುಕು ಹಸನಾಗಬೇಕೆಂದರೆ ಗಂಡು ಸ್ವಾರ್ಥ ತೊರೆದು ಹೆಣ್ಣನ್ನು ಹೆಣ್ಣಾಗಿ ಸ್ವೀಕರಿಸಿ ಪ್ರೀತಿಸಬೇಕು ಎಂಬುದನ್ನೇ ಲೇಖಕಿ ಗಾಢವಾಗಿ ನಂಬಿದ್ದಾರೆ. ಅಂದರೆ, ಹೆಣ್ಣು ಮರವನ್ನಪ್ಪಿಕೊಂಡಿರುವ ಬಳ್ಳಿ ಎಂದೇ ತಿಳಿದುಕೊಳ್ಳಲಾಗಿದೆ. ಆದ್ದರಿಂದಲೇ ಇವರ ಕಾಲದಷ್ಟೊತ್ತಿಗೆ ಹೆಣ್ಣಿಗೆ ಉನ್ನತ ಶಿಕ್ಷಣದೆಡೆಗೆ ಮನಸ್ಸು ಮಾಡಿದ್ದರಾದರೂ ಹೆಣ್ಣಿಗೆ ಉದ್ಯೋಗ ಬೇಕು ಎಂಬೆಡೆಗೆ ಗಮನವಿರಲಿಲ್ಲ. ಆಕೆ ವಿಧವೆಯಾಗಿದ್ದರೆ ಆಗ ಉದ್ಯೋಗ ಅನಿವಾರ್ಯ ಎಂದು ಭಾವಿಸಲಾಗುತ್ತಿತ್ತು. ಈ ರೀತಿಯ ಚಿಂತನೆಗಳು ಒಟ್ಟು ಸಾಮಾಜಿಕ ರಚನೆಯನ್ನು ಬುಡಮೇಲಾಗಿಸುವುದಿಲ್ಲ. ಹೀಗಾಗಿಯೇ ಇದು ಬಹಳ ಬೇಗ ಸಾಮಾಜಿಕ ಸಮ್ಮತಿಯನ್ನು ಪಡೆದುಕೊಳ್ಳುತ್ತದೆ. ಭಾವುಕ ನೆಲೆಯಲ್ಲಿ 'ಕರುಣೆ'ಯನ್ನು ಉದ್ದೀಪಿಸಿ, ಪುರುಷಾಹಂಕಾರವನ್ನು ಸಂತೃಪ್ತಿ ಪಡಿಸುತ್ತದೆ.

ಆದರೆ ಇದೇ ಮಾತನ್ನು ಎಂ.ಕೆ. ಇಂದಿರಾ ರ ಬರಹಗಳಿಗೆ ಹೇಳಲಾಗುವುದಿಲ್ಲ. ಅದರಲ್ಲೂ ಅವರ ಫಣಿಯಮ್ಮ ತೆರೆದು ತೋರುವ ದಾರಿ – ಹೆಣ್ಣಿನದೇ ದಾರಿಯ ಆತ್ಮವಿಶ್ವಾಸದ ನಡಿಗೆಯದು. ಇದರಲ್ಲಿ ಅವರು ವೈಧವ್ಯ ಎಂಬ ಹೇರಿಕೆಯನ್ನು ಹೆಣ್ಣು ಎದುರಿಸುವ ಭಿನ್ನ ಬಗೆಗಳನ್ನು ಹೇಳುತ್ತಲೇ, ಹೆಣ್ಣಿನೆಡೆಗಿನ ತರತಮವನ್ನು ದಿಟ್ಟವಾಗಿ ನಿರಾಕರಿಸುತ್ತಾರೆ. ಫಣಿಯಮ್ಮನ ಬದುಕೇ – ಸಮಾಜಕ್ಕೆ ಎಸೆದ ಪ್ರಶ್ನೆಯಾದರೆ, ದಾಕ್ಷಾಯಿಣಿಯು ಮೈದುನನನ್ನು 'ಗಂಡ'ನನ್ನಾಗಿಸಿಕೊಳ್ಳುವುದಕ್ಕಾಗಿ ಶಾಸ್ತ್ರ, ಸಂಪ್ರದಾಯ, ರೂಢಿಗಳನ್ನು ಧಿಕ್ಕರಿಸುವುದನ್ನು ಉತ್ತರವಾಗಿಸಿದ್ದಾರೆ. ಇಲ್ಲದೇ ಹೋದಲ್ಲಿ ಸುಬ್ಬಿಯ 'ಅನೈತಿಕ' ಹಾದಿ ಸಮಾಜದ ಅಣಕವಾಗುತ್ತದೆ ಎಂಬುದನ್ನು ಕಾಣಿಸಿದ್ದಾರೆ. ಹೆಣ್ಣುದಾರಿ, ಹೆಣ್ಣುದನಿಯನ್ನು ಒಟ್ಟು ಸಾಮಾಜಿಕ ಸಂರಚನೆಯೇ ಬದಲಾಗಬೇಕೆಂಬುದನ್ನು ಇಂದಿರಾ ಇಲ್ಲಿ ಹಾಗೂ 'ತಗ್ಗಿನ ಮನೆ ಸೀತೆ'ಯಲ್ಲಿ ಮಂಡಿಸಿದ್ದಾರೆ.

ತನಗೆ ಕೊಡಮಾಡಲಾಗಿರುವ 'ಜಾಗ' ಯಾವುದು? ಮತ್ತು ಅದನ್ನು ಹೇಗೆಲ್ಲಾ ಆಗಿಸಲಾಗಿದೆ ಎಂಬ ಜಿಜ್ಞಾಸೆಯೂ ಕೂಡ ಮಹಿಳಾ ಕಾದಂಬರಿಕಾರರನ್ನು ಕಾಡಿದೆ. ಇದನ್ನವರು ಪುರಾಣ ಮತ್ತು ಪರಂಪರೆಯು ಹೆಣ್ಣನ್ನು ರೂಪಿಸಿರುವುದರ ಔಚಿತ್ಯದ ಪ್ರಶ್ನೆಯಾಗಿ ನೋಡಿದ್ದಾರೆ. ಅನುಪಮಾ ನಿರಂಜನ 'ಮಾಧವಿ'ಯಲ್ಲಿ ಹೆಣ್ಣನ್ನು

ಬುಗುರಿಯಾಡಿಸುವ ಪರಂಪರೆಯನ್ನು ಭಂಜಿಸುವ ಪ್ರಯತ್ನ ಮಾಡುತ್ತಾರೆ. ಮಾಧವಿಯು ಗಂಡಸರಿಗೆ ಸುಖದ ಸಾಧನವಾಗಿ ನಿರೂಪಿತವಾಗುವಾಗ ಅವಳ ಮನದ ಮಾತುಗಳನ್ನು ಎಲ್ಲಿಯೂ ಆಲಿಸದ ಕಿವುಡುತನವನ್ನು ಅನುಪಮಾ ಎತ್ತಿ ತೋರುತ್ತಾರೆ. ಮಾತ್ರವಲ್ಲ ಅವಳು ತನ್ನ ನಿರೂಪಣೆಗಳನ್ನೇ ಧಿಕ್ಕರಿಸುತ್ತಾಳೆ. ಎಚ್.ವಿ. ಸಾವಿತ್ರಮ್ಮ 'ಸೀತೆ ರಾಮ ರಾವಣ'ದಲ್ಲಿ ಇದನ್ನು ಇನ್ನಷ್ಟು ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುತ್ತಾರೆ. ಕೌಸಲ್ಯೆಯಿಂದಲೇ ಆರಂಭವಾಗಿ ಸೀತೆಯು ರಾಮನನ್ನು ಪ್ರಶ್ನಿಸುವ, ಧಿಕ್ಕರಿಸುವ ನಡೆಗಳಲ್ಲಿ ಹೆಣ್ಣು ಮುನ್ನಡೆಯಬೇಕಾದ ಹಾದಿಗಳ ಸೂಚನೆಗಳನ್ನು ಕೊಡುತ್ತಾರೆ. ಈ ನೋಟ ಆ ಕಾಲದಲ್ಲಿ ಒಂದು ಹೊಸ ದಾರಿಯನ್ನೇ ಹುಟ್ಟು ಹಾಕಿ, ಮುಂದಿನವರನ್ನೂ ಪ್ರೇರೇಪಿಸಿತು. ಎಂ.ಎಸ್.ವೇದಾ, ಎಸ್.ವಿ. ಪ್ರಭಾವತಿಯರು ಇಂತಹ ಹಲವು ಕೃತಿಗಳನ್ನು ನೀಡಿದರು. ಇಷ್ಟಾಗಿಯೂ ಇಂತಹ ಕೃತಿಗಳು ಕಾರಣಗಳನ್ನು ಪರಿಶೀಲಿಸುವುದಿಲ್ಲ. ಕಾರ್ಯವನ್ನು ಖಂಡಿಸುತ್ತದೆ. ಇದು ಸರಿಯೇ? ಎಂದು ಪುರುಷ ಸಮಾಜವನ್ನು ತಿದ್ದುವ ಹಂಬಲದಿಂದ ಈ ಕಥನಗಳನ್ನು ಮರು ರಚಿಸುತ್ತವೆ. ಇಲ್ಲಿ ಗಂಡಸು ಹೆಂಗಸನ್ನು ನಡೆಸಿಕೊಂಡಿರುವ ರೀತಿಯ ಕುರಿತು, ಅವಳ ಭಾವನೆಗಳನ್ನು ಅರಿತುಕೊಳ್ಳದ ಜಡತೆಯ ಕುರಿತು ಸಿಟ್ಟು ಇದೆ. ಆದರೆ ಇದರ ಹಿಂದಿರುವ 'ಅಧಿಕಾರ'ದ ಸಂಕೀರ್ಣ ಸ್ವರೂಪದ ಕುರಿತು ಮೌನ ಇದೆ. ಒಂದು ರೀತಿಯಲ್ಲಿ ಇದನ್ನು ನಿಂತ ನೆಲೆಯನ್ನು ಮೊದಲು ಸರಿ ಪಡಿಸಿಕೊಳ್ಳುವ ಎಚ್ಚರದ ನಡೆ ಎಂದು ಪರಿಗಣಿಸಬಹುದು.

ಧರ್ಮದ ಮೂಲಕ ನಡೆಯುವ ಹೆಣ್ಣಿನ ಶೋಷಣೆಯನ್ನು ತೆರೆದು ತೋರುವ ಕಾದಂಬರಿಗಳೂ ಕೂಡ ಇಂತಹದೇ ಇನ್ನೊಂದು ಹೆಜ್ಜೆ ಎನ್ನಬಹುದು. ಮುಖ್ಯವಾಗಿ ಕನ್ನಡದಲ್ಲಿ ಮುಸ್ಲಿಂ ಲೇಖಕಿ/ಕ ರ ಬರಹಗಳಲ್ಲಿ ಇದನ್ನು ಗುರುತಿಸಬಹುದು. ಸಾರಾ ಅಬೂಬಕರ್ ಅವರ 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿ ಕನ್ನಡದಲ್ಲಿ ಹೊಸ ಸಂಚಲನವನ್ನೇ ಹುಟ್ಟಿಸಿತು. ಅದರ ಬರವಣಿಗೆಯಲ್ಲಿನ ಹೊಸತನಕ್ಕಾಗಿ ಹಾಗೂ ಅದರ ವಸ್ತುವಿನಲ್ಲಿನ ಹೊಸತನಕ್ಕಾಗಿ. ಹೆಣ್ಣನ್ನು ಗಂಡಿನ ಅಧೀನದ ವಸ್ತುವನ್ನಾಗಿಸಲು ಧರ್ಮ ಕೂಡ ಅಧಿಕಾರ ಕೇಂದ್ರವಾಗಿ ಕೆಲಸ ಮಾಡುತ್ತದೆ. ಅದನ್ನು ತಮ್ಮ ಮೂಗಿನ ನೇರಕ್ಕೆ ವ್ಯಾಖ್ಯಾನಿಸುವುದರ ಮೂಲಕ ಹೆಣ್ಣಿನ ಅಸ್ತಿತ್ವವನ್ನೇ ನಿರಾಕರಿಸುತ್ತದೆ. ಸಾರಾ ಧರ್ಮದ ಆಚರಣೆಯಲ್ಲಿರುವ ಅಧರ್ಮವನ್ನು ಖಂಡಿಸುವುದರ ಜೊತೆ ಜೊತೆಗೇ ಮುಸ್ಲಿಂ ಹೆಣ್ಣುಮಕ್ಕಳ ದಾರುಣ ಸ್ಥಿತಿಗಳನ್ನು ಅನಾವರಣ ಮಾಡಿದರು. ಒಟ್ಟು ವ್ಯವಸ್ಥೆಯೇ ದೋಷಪೂರ್ಣವಾಗಿದ್ದಾಗ, ಗಂಡ ಒಳ್ಳೆಯವನಾದ ಮಾತ್ರಕ್ಕೆ ಹೆಣ್ಣಿಗೆ (ಮತ್ತು ಗಂಡಿಗೂ ಕೂಡ) ನ್ಯಾಯ ಸಿಗಲಾರದು ಎಂಬ ವಾಸ್ತವದೆಡೆಗೆ ಬೆರಳು ಮಾಡುವ ರೀತಿಯಲ್ಲಿ ಇವರ ಕಾದಂಬರಿಗಳಿವೆ. (ಆದರೆ ಕಾದಂಬರಿ ಕ್ಷೇತ್ರದಲ್ಲಿ ನಂತರದ ತಲೆಮಾರಿನ ಒಬ್ಬಳೂ ಮುಸ್ಲಿಂ ಹೆಣ್ಣುಮಗಳು ಕಾಣದೇ ಇರುವುದು ಅಚ್ಚರಿಯ ಸಂಗತಿ.)

ಧರ್ಮದ ಹೆಸರಿನಲ್ಲಿ ಹೆಣ್ಣಿನ ದೇಹದ ಮೇಲೆ ಹಕ್ಕು ಸಾಧಿಸುವ ಅನಾಚಾರವನ್ನು ಗೀತಾ ನಾಗಭೂಷಣ ತಮ್ಮ ಕಾದಂಬರಿಗಳಲ್ಲಿ ನೇರವಾಗಿ ಖಂಡಿಸುತ್ತಾರೆ. ದಲಿತ ಹೆಣ್ಣುಮಕ್ಕಳನ್ನು ಜೋಗತಿಯರಾಗಿಸುವುದರ ಹಿಂದಿರುವ ಕುತಂತ್ರಗಳನ್ನು ತಮ್ಮ 'ಮಾಪುರ ತಾಯಿಯ ಮಕ್ಕಳು' ಹಾಗೂ 'ಬದುಕು' ಕಾದಂಬರಿಗಳಲ್ಲಿ ತೆರೆದಿಡುತ್ತಾರೆ. ಪೂಜಾರಿ ಮತ್ತು ಊರಗೌಡರುಗಳು ಸೇರಿಕೊಂಡು ಮಾಡುವ ಮಸಲತ್ತುಗಳು, ತಳಜಾತಿಯ ಹೆಣ್ಣುಮಕ್ಕಳಿಗೆ ಮಾತ್ರ ಇಂತಹ ಹರಕೆ ಜಾರಿಯಲ್ಲಿರುವುದು-ಒಂದೆಡೆ ಬಡತನವನ್ನೂ, ಇನ್ನೊಂದೆಡೆ ಹೆಣ್ಣನ್ನು ವಸ್ತುವಾಗಿಸುವುದನ್ನೂ ಕಾಪಿಡುವ ಸಂಸ್ಥೆಯಾಗಿ ಧರ್ಮವನ್ನು ಬಳಸಿಕೊಳ್ಳುವುದರ ಪ್ರತೀಕವಾಗಿದೆ. ಸಾಮಾಜಿಕ ಸಂರಚನೆಯೇ ಹೆಣ್ಣನ್ನು ಸಾರ್ವಜನಿಕ ಸೊತ್ತಾಗಿಸುವುದಕ್ಕೆ ಸಾಮುದಾಯಿಕ ಸಮ್ಮತಿಯನ್ನು ಉತ್ಪಾದಿಸುವುದನ್ನು ಇಲ್ಲಿ ಗಮನಿಸಬಹುದು.. ಬದುಕು ಕಾದಂಬರಿಯಲ್ಲಿ ಬಲವಂತದಿಂದ ಜೋಗಿಣಿಯಾದ ನೀಲವ್ವ ಆ ಬದುಕನ್ನು ಧಿಕ್ಕರಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಮುಂದೆ ಹೀಗೆಯೇ ಬಲವಂತಕ್ಕೆ ಜೋಗಿಣಿಯಾದ ತುಳಜವ್ವ ತನ್ನನ್ನು ಮದುವೆಯಾಗಲು ಮುಂದೆ ಬಂದ ಹುಸನಪ್ಪನನ್ನು ವರಿಸಿ ಮುಂಬಯಿಯಲ್ಲಿ ಬದುಕು ಕಟ್ಟಿಕೊಳ್ಳುತ್ತಾಳೆ. ಊರಿಗೆ ಬಂದಾಗ ಅವಳನ್ನು ಕರೆಸಿ ಮದುವೆಯಾಗಿ ಸಂಪ್ರದಾಯ, ಆಚಾರ ಮುರಿದ ತಪ್ಪಿಗೆ ಪಂಚಾಯಿತಿ ಸೇರಿಸಿ ಶಿಕ್ಷೆ ವಿಧಿಸಿದ ಪಂಚರನ್ನೇ ಧಿಕ್ಕರಿಸಿ ಆಕೆ ಮುಂಬಯಿಗೆ ತನ್ನ ತಂದೆಯನ್ನೂ ಕರೆದುಕೊಂಡು ಹೊರಟು ಹೋಗುತ್ತಾಳೆ. ಹೀಗೆ, ಬದಲಾವಣೆಯಾಗಬೇಕೆಂದರೆ ಈ ಎಲ್ಲ ಅಧಿಕಾರ ರಚನೆಗಳಲ್ಲಿಯೂ ಬದಲಾವಣೆಗಳಾಗಬೇಕು ಎನ್ನುವುದನ್ನು ಗೀತಾ ಧ್ವನಿಸುತ್ತಾರೆ. ಇದು ಜಾತಿಯ ವಿಷಯದಲ್ಲೂ ನಿಜ. ತಳಜಾತಿಯ ಹೆಣ್ಣುಮಕ್ಕಳಿಗೆ ಮೇಲ್ಜಾತಿಯವರಿಗಿಂತ ಹೆಚ್ಚು ಸ್ವಾತಂತ್ರ್ಯವಿದೆ ಎಂಬ ಕಲ್ಪಿತ ಮಾತು ಚಲಾವಣೆಯಲ್ಲಿದೆ. ಅದು ಸ್ವಾತಂತ್ರ್ಯವಲ್ಲ. ಬದಲಿಗೆ ಆ ಹೆಣ್ಣುಮಕ್ಕಳು ಮನೆತನದ ಗೌರವದ ಭಾರದ ಹೊರೆಯನ್ನು ಹೊತ್ತಿಲ್ಲ. ಯಾಕೆಂದರೆ ಅವರಿಗೆ ಆಸ್ತಿಯೇ ಇಲ್ಲ. ನೋವಾದಾಗ ಕಿರುಚಿ ಹೇಳುವ, ಗಂಡ ಬಿಟ್ಟರೂ ದುಡಿದು ಬದುಕುವ ಅವರ ಛಲವನ್ನೇ ಸ್ವಾತಂತ್ರ್ಯ ಎಂದು ಭಾವಿಸಲಾಗಿದೆ. ಬಿ.ಟಿ.ಲಲಿತಾ ನಾಯಕ್‌ರ 'ಗತಿ' ಕಾದಂಬರಿಯನ್ನು ಓದಿದಾಗ ಇದು ಚೆನ್ನಾಗಿ ಮನದಟ್ಟಾಗುತ್ತದೆ.

ಕಣ್ಣಿಗೆ ಕಾಣುವ, ಕೆಲವೊಮ್ಮೆ ಕಾಣದಿದ್ದರೂ ಕಾಣಿಸಲು ಸಾಧ್ಯವಾಗುವ ಮೇಲಿನ ಕೆಲವು ಅಂಶಗಳನ್ನು ಎದುರುಗೊಂಡ ನಂತರದ ಕಾಲಘಟ್ಟದಲ್ಲಿ ಹೆಣ್ಣುಮಕ್ಕಳು ತಮ್ಮ ಕಾದಂಬರಿಗಳನ್ನು ಇನ್ನೊಂದು ಮಜಲಿನಲ್ಲಿ ಮುನ್ನಡೆಸಿದರು. ಇದನ್ನು ಒಂದು ರೀತಿಯಲ್ಲಿ ಕಣ್ಣಿಗೆ ಕಾಣದ ಶತ್ರುಗಳ ಅನ್ವೇಷಣೆ ಎನ್ನಬಹುದು. ಯಾಕೆಂದರೆ, ಈ ಶತ್ರುಗಳನ್ನು ಶತ್ರುಗಳು ಎಂದು ಹಿಡಿದು ತೋರುವುದೂ ಕಷ್ಟವೇ. ದಾಂಪತ್ಯದಲ್ಲಿ, ಗಂಡಿನ ಜೊತೆಗಿನ ಗೆಳೆತನದಲ್ಲಿ ಹೆಣ್ಣು ಅನುಭವಿಸುವ ಒಳಪೆಟ್ಟುಗಳನ್ನು ಅವಳು ನಿರೂಪಿಸಿ ತೋರಬೇಕಿತ್ತು. ಈ ಹಂತದಲ್ಲಿ ಬರವಣಿಗೆಯ ಕಲಾತ್ಮಕತೆಯನ್ನು ಸಾಧಿಸುವೆಡೆಗೂ ಇವರು

ಗಂಭೀರವಾಗಿದ್ದರು. ಹೆಣ್ಣು ಶಿಕ್ಷಣ, ಉದ್ಯೋಗ ಇತ್ಯಾದಿಗಳನ್ನು ಗಳಿಸಿದ ನಂತರದಲ್ಲೂ ಅವಳ ಸಮಸ್ಯೆಗಳು ಮಾಯವಾಗಿಲ್ಲ ಎಂಬ ಅರಿವಿನೊಂದಿಗೆ ಹುಟ್ಟಿಕೊಳ್ಳುವ ತಳಮಳದ ಬೆನ್ನುಹತ್ತಿ ಬರೆದವರು 'ಗಂಡಸರು'ವಿನ ವೀಣಾ ಶಾಂತೇಶ್ವರ, 'ಶಿವಗಂಗಾ'ದ ಚಂಪಾವತಿ, 'ನೂರುಸ್ವರ'ದ ಉಮಾರಾವ್, 'ಅರ್ಥವಾಗದವರು ಮತ್ತು ಮನವಿಲ್ಲದವರು'ವಿನ ರೇಖಾರಾಣಿ, 'ಲೋಟಸ್ ಪಾಂಡ್'ನ ತಾರಾಭಟ್ ಮೊದಲಾದವರು. ವೀಣಾ ಎಪ್ಪತ್ತರ ದಶಕದ ಆರಂಭದಲ್ಲೇ ಗಂಡು ಹೆಣ್ಣಿನ ನಡುವಿನ ಸಂಬಂಧದ ಸಂಕೀರ್ಣತೆಯ ಬೆನ್ನು ಹತ್ತಿದವರು. ಆಗಿನ್ನೂ ಹೆಣ್ಣುಮಕ್ಕಳು ಕೇಳಲು ಹಿಂಜರಿಯುತ್ತಿದ್ದ ಪ್ರಶ್ನೆಗಳನ್ನು ಧೈರ್ಯವಾಗಿ ಕೇಳಿದವರು. ವ್ಯವಸ್ಥೆ ಬದಲಾದ ಮೇಲೂ ಯಾಕೆ ಗಂಡು ಬದಲಾಗುವುದಿಲ್ಲ? ಅಲ್ಲಲ್ಲಿ ಕೆಲವರು ಗಂಡಸರು ಬದಲಾದರೂ, ಗಂಡು ಯಜಮಾನಿಕೆಯ ಪರವಾಗಿ ವಕೀಲಿ ನಡೆಸುವ ಹೆಣ್ಣುಮಕ್ಕಳೇಕೆ ನಮ್ಮ ಸುತ್ತ ಇದ್ದಾರೆ? ಹಾಗಾದರೆ ನಿಜವಾಗಿಯೂ ವ್ಯವಸ್ಥೆ ಬದಲಾಗಿದೆಯೇ? ಅಥವಾ ವೇಷವನ್ನು ಮರೆಮಾಚಿಕೊಂಡಿದೆಯೇ? ಎಂಬುದನ್ನು ಪುನರ್ ಪರಿಶೀಲಿಸಬೇಕಾದ ಜರೂರತ್ತನ್ನು ಇವರುಗಳ ಕಾದಂಬರಿಗಳು ಒತ್ತಾಯಿಸುತ್ತವೆ. ವ್ಯವಸ್ಥೆಯ ಮೂಲಭೂತ ರಚನೆಗಳು ಹಾಗೆಯೇ ಇವೆ. ಹಳ್ಳಿ ನಗರವಾಗಿದೆ. ಶಿಕ್ಷಣದ ಹೆಸರಿನಲ್ಲಿ ಪದವಿ ಹಲವರಿಗೆ ಲಭಿಸಿದೆ. ಕೈತುಂಬಾ ಸಂಬಳವೂ ಇದೆ. ಹೆಂಗಸರೂ ಸಂಬಳ ಪಡೆವ ಉದ್ಯೋಗದಲ್ಲಿದ್ದಾರೆ. ಆದರೆ ಅವರ ಹೊಣೆಗಾರಿಕೆ ಹೆಚ್ಚಿದೆಯೇ ಹೊರತು ಅವರು ಕನಸಿದ ಬಿಡುಗಡೆ ಮಾತ್ರ ಸಿಗುತ್ತಿಲ್ಲ. 'ಗಂಡಸರು' ಕಾದಂಬರಿಯ ಶಾಂತಿ ತನ್ನ ಬದುಕಿನಲ್ಲಿ ಬಂದು ಹೋದ ಗಂಡಸರ ಗೋಸುಂಬೆತನವನ್ನು ಕಂಡವಳು. ಸ್ವತಃ ಆಧುನಿಕ ಮನಸ್ಥಿತಿ, ವಿದ್ಯೆ, ದಿಟ್ಟತನ, ಪ್ರತಿಭೆ, ಸ್ವಂತ ಆದಾಯ ಎಲ್ಲ ಇದ್ದರೂ ಅವಳಿಗೆ ತನ್ನ ಮನಸ್ಸು ಮೆಚ್ಚಬಲ್ಲ ಸಂಗಾತಿಯೊಬ್ಬ ಸಿಗುವುದೇ ಇಲ್ಲ. ಇವಳ ಈ ಎಲ್ಲ ಅರ್ಹತೆಗಳು ಆ ಗಂಡಸರಿಗೆ ಅವಳ ದೇಹವನ್ನು ಅನುಭವಿಸುವ ಪರ್ಮಿಟ್‌ಗಳಂತೆ ಭಾಸವಾಗುವುದು ದುರಂತ. ವಿಧೇಯ, ಮುಗ್ಧ, ಅವಲಂಬಿತ ಹೆಣ್ಣುಗಳಾದರೆ ಹೆಂಡತಿಯರಾಗಲು ಲಾಯಕ್ಕು ಎಂಬ ಸ್ಥಿತಿಯಿಂದ ಹೊರಬರಲಾಗದಿರುವುದನ್ನು ಶಾಂತಿ ಕಂಡುಕೊಳ್ಳುತ್ತಾಳೆ. ಮದುವೆ ಎಂಬುದೇ ನಿಯಂತ್ರಣದ ಮೊದಲ ಅಂಕುಶವಾಗುವುದು ಅವಳಲ್ಲಿ ನಿರಾಸೆ ಹುಟ್ಟಿಸುತ್ತದೆ. ಫೆಮಿನಿಸ್ಟ್ ಅನ್ನಿಸಿಕೊಂಡವ, ಬಹಳ ಆಧುನಿಕ ಅನ್ನಿಸಿಕೊಂಡವ ಎಲ್ಲರೂ ಹೆಣ್ಣಿನ ವಿಷಯಕ್ಕೆ ಬಂದಾಗ ಇದ್ದಕ್ಕಿದ್ದಂತೆ ಸಾಂಪ್ರದಾಯಿಕರಾಗಿ ವರ್ತಿಸುವ ಪರಿ ತರ್ಕಕ್ಕೆ ಸಿಗದೇ ಹೋಗುತ್ತದೆ. ಈ ಕಾದಂಬರಿ ಹೇಳದೆಯೂ ಹೇಳುವ ಅಂಶ ಹಲವು. ಆಧುನಿಕತೆ ಎಂಬುದು ಬಿಡುಗಡೆಯಾಗದೆ ಸಾಮುದಾಯಿಕ ಬದುಕಿನ ವಿಘಟನೆ ಮಾತ್ರ ಆಗುವ ವಿಪರ್ಯಾಸವನ್ನು ಇದು ಹೇಳುತ್ತದೆ. ವ್ಯಕ್ತಿ ಸ್ವಾತಂತ್ರ್ಯ ಎಂಬುದೇ ಹುಸಿ ಎಂಬಂತೆ ಸಾಮಾಜಿಕ ವಾಸ್ತವಗಳಿರುತ್ತವೆ. ಶಾಂತಿ ಕೊನೆಗೂ ಒಂಟಿಯಾಗಿಯೇ ಉಳಿಯಬೇಕಾದ, ಅವಳು ತನ್ನ ಅನ್ವೇಷಣೆಯನ್ನೇ ಕೈಚೆಲ್ಲಬೇಕಾದ ಸ್ಥಿತಿ ಗಂಡು ಹೆಣ್ಣಿನ ನಡುವೆ ಏರ್ಪಡಬೇಕಾದ ಸಂಬಂಧದ ಸಾಧ್ಯತೆಗಳ ನಿಜನೆಲೆಯನ್ನು ಹುಡುಕಬೇಕಾದ

ಅನಿವಾರ್ಯತೆಯನ್ನು ಹೇಳುತ್ತದೆ. ಗಂಡು ಮತ್ತು ಹೆಣ್ಣಿನ ನಡುವಿನ ತರತಮದ ಮೂಲಬೇರು 'ಆಳುವ ಹಂಬಲ'ದಲ್ಲಿದೆ. ಅದಕ್ಕೆ ಬೇಕಾದ ಚೌಕಟ್ಟನ್ನು ಸಮಾಜದಲ್ಲಿ ಹಾಕಲಾಗಿದೆ. ಹೆಣ್ಣು ಸಂಬಳ ಬರುವ ದುಡಿಮೆ ಮಾಡಿದಾಗಲೂ ಆ ಸಂಬಳದ ಮೇಲೆ ಅವಳಿಗೆ ಹಕ್ಕಿಲ್ಲದಂತೆ ಹೆಣೆಯಲಾದ ಜಾಲದಲ್ಲಿ ಅವಳಿಗೆ ಅವಳ ದೇಹದ ಮೇಲೂ ಹಕ್ಕಿಲ್ಲದಂತಾಗಿದೆ. ಗಂಡಿನ ಕೊನೆಯಿಲ್ಲದ ದಾಹಕ್ಕೆ ಹೆಣ್ಣು ಬಲಿಯಾಗುತ್ತಿರುವಂತೆಯೇ ಸ್ವತಃ ಗಂಡೂ ಬಲಿಯಾಗುತ್ತಿರುವುದು ಆತನಿಗೇ ತಿಳಿಯದ ವ್ಯೂಹವೊಂದರಲ್ಲಿ ನಾವಿದ್ದೇವೆ. ಇದೇ ವ್ಯೂಹದೊಳಗೆ ಹೆಣ್ಣೂ ಸಿಲುಕುವ ಅಪಾಯ ಇದ್ದೇ ಇದೆ. ಹೀಗಾಗಿ ಯಾಜಮಾನ್ಯದ ಕೇಂದ್ರ ಬದಲಾಗುವುದಲ್ಲ, ಯಾಜಮಾನ್ಯವೇ ನಾಶವಾಗಬೇಕು. ಅಲ್ಲಿಯ ತನಕ ಹೆಣ್ಣು ದಾಂಪತ್ಯದ ಕತ್ತಿಯಂಚಿನ ನಡಿಗೆ ಮಾಡುತ್ತಲೇ ಇರಬೇಕು. ಮೇಲೆ ಉಲ್ಲೇಖಿಸಲಾದ ಹೆಚ್ಚಿನ ಎಲ್ಲ ಕಾದಂಬರಿಗಳಲ್ಲೂ ಹೆಣ್ಣು ಕೊನೆಗೆ ಒಂಟಿಯಾಗಿ ತನ್ನದೇ ದಾರಿಯೊಂದನ್ನು ಗುರುತಿಸಿಕೊಂಡು ಬಾಳುವ ನಿರ್ಧಾರಕ್ಕೆ ಬರುವವಳಾಗಿರುವುದನ್ನು ಕಾಣಬಹುದು. ಆದರೆ ಇದು ಗಮನವಷ್ಟೇ, ಗಮ್ಯ ಖಂಡಿತಾ ಅಲ್ಲ.

ಬಹುಶಃ ಈ ಕಾರಣಕ್ಕೇ ಇರಬೇಕು. ಮಹಿಳೆ ಮತ್ತೆ ಅನ್ವೇಷಣೆಗೆ ತೊಡಗಿದಳು. ಕನ್ನಡದಲ್ಲಿ ಸ್ತ್ರೀವಾದವು ಚಿಂತನಾ ಕ್ರಮದ ಮೂಲಭಿತ್ತಿಯಾದ ನಂತರದಲ್ಲಿ ಈ ಅನ್ವೇಷಣೆ ಬೇರೆ ಬೇರೆ ದಾರಿಯಲ್ಲಿ ಸಾಗಿದೆ. ಕೆಲವೊಮ್ಮೆ ಇದು ಮೇಲ್ನೋಟಕ್ಕೆ ಕಾಣುವಂತಿದ್ದರೆ ಇನ್ನು ಕೆಲವೊಮ್ಮೆ ಅಂತರಂಗದ ಒಳ ಹರಿವಾಗಿ ನೆರವಾಗಿದೆ. ಅದರಲ್ಲಿ ಒಂದು ದಾರಿಯೆಂದರೆ, ಹೆಣ್ಣು ತನ್ನೆಲ್ಲಾ ಕಷ್ಟಗಳ ನಡುವೆ ಕೇವಲ ಬಲಿಪಶುವಾಗಿಯೇ ಬದುಕಿದ್ದಾಳಾ? ಅವಳು ತನ್ನನ್ನು ತಾನು ನಿರ್ವಹಿಸಿಕೊಂಡ ಬಗೆ ಯಾವುದು? ಎಂಬುದರ ಹುಡುಕಾಟ. ಎಲ್ಲ ಬಳಲಿಕೆಗಳ ನಡುವೆಯೂ ಅವಳ ನಗು ಇನ್ನೂ ಮಾಸಿಲ್ಲವೆಂದರೆ ಅದರ ಹಿಂದಿರುವ ಚೈತನ್ಯದ ಸೆಲೆ ಯಾವುದು ಎಂಬ ಕುತೂಹಲ ಇಲ್ಲಿದೆ. ಸ. ಉಷಾರ 'ಕಸೂತಿ' ಬದಲಾದ ಕಾಲದ ಜೊತೆಗೆ ಹೆಣ್ಣಿನ ಬದುಕಿನಲ್ಲೂ ಆಗುತ್ತಾ ಬಂದ ಸಣ್ಣ ಪಲ್ಲಟಗಳನ್ನು ಹಿಡಿದಿಡುತ್ತದೆ. ಬಾಲಕಿಯಾಗಿದ್ದಾಗಲೇ ಗೃಹಿಣಿಯಾಗುತ್ತಿದ್ದ ಹೆಣ್ಣಿನಿಂದ, ಯುವತಿಯಾಗಿ ತಾನೇ ಕೆಲವು ಆಯ್ಕೆಗಳನ್ನೂ, ಬದುಕಿನ ಸವಿಗಳನ್ನು ಅನುಭವಿಸುವುದನ್ನೂ ಆಧುನಿಕತೆಯು ಒದಗಿಸಿಕೊಡುವುದನ್ನು ಗುರುತಿಸುತ್ತಾರೆ. ಸವಿತಾ ನಾಗಭೂಷಣರ 'ಸ್ತ್ರೀ ಲೋಕ' ಹೆಣ್ಣಿನ ದೈನಂದಿನ ಬದುಕಿನೊಳಗಿಂದಲೇ ದಾರಿಯೊಂದನ್ನು ಹುಡುಕುವ ಪ್ರಯತ್ನ ಮಾಡುತ್ತದೆ. ಇಲ್ಲಿ ನಮ್ಮ ಸುತ್ತ ಮುತ್ತಲಿನ ಹತ್ತು ಹಲವು ಹೆಂಗಸರು ಇದ್ದಾರೆ. ಅತ್ಯಂತ ಸಾಮಾನ್ಯರೆನಿಸಿಕೊಂಡಿರುವ ಇವರು ಅಸಾಮಾನ್ಯ ಸಮಸ್ಯೆಗಳನ್ನೂ 'ನಿಭಾಯಿಸುವವರು'. ಚಾಪೆ ಕೆಳಗೆ, ರಂಗೋಲಿ ಕೆಳಗೆ ತೂರಿ ತಮ್ಮ ಅಸ್ತಿತ್ವವನ್ನು ಬಿಟ್ಟುಕೊಡದವರು. ಕಾದಂಬರಿಯ ಆರಂಭದಲ್ಲೇ ಬರುವ ಅಜ್ಜಿ ಗಾಂಧಿಯಿಂದ ಪ್ರೇರಿತಳಾಗಿ ಆ ಆದರ್ಶಗಳನ್ನು ಬಾಳಿದವಳು. ಸಾಮಾಜಿಕ ರಚನೆಯಲ್ಲಿ ಅಂತಸ್ಥವಾಗಿರುವ ಆಳುವ ಅದಮ್ಯ ಆಸೆ, ಅಧಿಕಾರದ ದಾಹ, ವೈಭವದ ಜೀವನದ ಮಮಕಾರಗಳೇ ಮನುಷ್ಯನ ಶತ್ರುಗಳು. ಗಾಂಧಿ 'ಬಿಟ್ಟುಕೊಡುವುದರಲ್ಲಿ'

ನಂಬಿಕೆ ಇರುವವರು. ಇದನ್ನು ಅವರು ತಮ್ಮ ತಾಯಿಯಿಂದ ಆರಂಭವಾಗಿ ಹೆಣ್ಣುಮಕ್ಕಳಲ್ಲಿನ ಗುಣದಿಂದಲೇ ಕಲಿತವರು. ಹೀಗೆ ಬಿಟ್ಟುಕೊಡುವುದು ಮತ್ತು ಒಬ್ಬರಿಗೊಬ್ಬರು ಆಗುವುದು– ಸಹೋದರಿತ್ವದ ತತ್ವವನ್ನು ಅಳವಡಿಸಿಕೊಳ್ಳುವುದು ಹೆಣ್ಣು ಗಂಡುಗಳಿಬ್ಬರ ಬಿಡುಗಡೆಯನ್ನೂ ಮಾಡಬಲ್ಲದು ಎಂಬ ನಂಬಿಕೆಯಿಂದ ಸಹಮತದ ದಾರಿಯನ್ನು ಹುಡುಕಲು ಈ ಕಾದಂಬರಿ ಪ್ರಯತ್ನಿಸುತ್ತದೆ.

ಗಾಂಧಿ ಹೀಗೆ ಪರಿಹಾರ ರೂಪದಲ್ಲಿ ಕಾಣಿಸುವುದು ಕುತೂಹಲಕಾರಿಯಾದುದು. ಎಚ್.ನಾಗವೇಣಿಯವರ 'ಗಾಂಧಿ ಬಂದ' ಕನ್ನಡದ ಮಹತ್ವದ ಕಾದಂಬರಿ. ಜಡ್ಡುಗಟ್ಟಿದ, ಆದರೆ ಉಳ್ಳವರಿಗೆ ಸಾಂಸ್ಕೃತಿಕವಾಗಿ ಶ್ರೀಮಂತವಾದ, ತರತಮದಲ್ಲಿ ಅದ್ದಿ ಮುಳುಗಿ ಹೋಗಿರುವ, ಗಂಡಿನ ಅವಶ್ಯಕತೆಗೆ ಒದಗಿ ಬರುವುದಕ್ಕೆ ಸೀಮಿತವಾದ ಪಾತ್ರಧಾರಿಣಿಯಾಗಿರುವ ಹೆಂಗಸರ ಲೋಕದ ಪರಿಸರದಲ್ಲಿ ಗಾಂಧಿಯ ಆಗಮನ ಜೀವಂತಿಕೆಯನ್ನು, ಹಲವರಿಗೆ ಬಿಡುಗಡೆಯ ಭಾವವನ್ನು ಒದಗಿಸುವ ಜೀವದ್ರವ್ಯವಾಗುವುದು ಒಂದು ರೂಪಕದಂತೆ ಈ ಕಾದಂಬರಿಯಲ್ಲಿ ರೂಪು ಪಡೆದಿದೆ. ಅಂದರೆ ಎಲ್ಲ ತರತಮಗಳೂ ನಾಶವಾಗಬೇಕು. ಆದರದು ಎಲ್ಲರನ್ನೂ ಒಳಗೊಳ್ಳುವ ಸಂಜೀವಿನಿಯೂ ಆಗಬೇಕು. ಬದಲಾವಣೆಯೆಂಬುದು ಬದುಕನ್ನು ಇನ್ನಷ್ಟು ಎತ್ತರಕ್ಕೇರಿಸುವಂತದಿರಬೇಕೇ ಹೊರತು ಹೊಸ ಮೂಗುಬ್ಬಸವನ್ನು ಆವಾಹಿಸುವುದಾಗ ಬಾರದು. ಇದು ಈ ನೆಲದ ವಿವೇಕದಲ್ಲೇ ಇದೆಯಾದರೂ ಅದನ್ನು ಕಂಡುಕೊಳ್ಳುವುದು ನಮಗಾಗುತ್ತಿಲ್ಲ. ಹೆಣ್ಣು ಗಂಡಿನ ಸಂಬಂಧದ ವಿಷಯದಲ್ಲೂ ಇದು ನಿಜ. ಹೆಣ್ಣನ್ನು ಆಳುವುದು ಗಂಡಿಗೊಂದು ಪ್ರತಿಷ್ಠೆಯ ಸಂಗತಿ. ಆಳಲೇ ಬೇಕು ಎಂಬುದು ಒತ್ತಾಯದ ಒತ್ತಡ. ಆಳಿಸಿಕೊಳ್ಳುವುದೇ ಧರ್ಮ ಎಂಬ ಮುಗ್ಧರೂ, ಕರ್ಮ ಎಂಬ ವಿಚಾರಿಗಳೂ ಸದಾ ಘರ್ಷಣೆಯಲ್ಲೇ ಜೀವನವಿಡೀ ಸವೆಸಬೇಕಾದ ಅನಿವಾರ್ಯತೆಯನ್ನು ಸೃಷ್ಟಿಸುವ ವ್ಯವಸ್ಥೆಯು ಯಾರನ್ನೂ ಸುಖದಲ್ಲಿರಲು ಬಿಡುವುದಿಲ್ಲ. ಹೆಣ್ಣು ವಿಚಾರವನ್ನೇ ಮಾಡದಂತೆ ತಡೆಯುವ ಪ್ರಯತ್ನಗಳು ಸೋತ ಮೇಲೆ ಅವಳಿಂದ ವಿಚಾರಗಳನ್ನು ಸ್ವೀಕರಿಸುವ ಮನೋಭಾವ ಇನ್ನೂ ಪೂರ್ತಿಯಾಗಿ ಬೆಳೆಯದ ಸನ್ನಿವೇಶದಲ್ಲಿ ಗಂಡು ಹೆಣ್ಣುಗಳಿಬ್ಬರೂ ಸಮತೆಯ ಸಹಬಾಳ್ವೆಯನ್ನು ಹುಡುಕಿಕೊಳ್ಳಬೇಕಾಗಿದೆ. ಗಾಂಧಿ ಬಂದ ಕಾದಂಬರಿ ನೇರವಾಗಿ ಇದನ್ನು ಹೇಳದೇ ಇದ್ದರೂ ವ್ಯಕ್ತಿಯೊಬ್ಬನ ವಿಚಾರಧಾರೆಯಿಂದ ಪ್ರೇರಿತವಾಗುವ ಸಮುದಾಯಗಳು ಎಲ್ಲರನ್ನೂ ಒಳಗೊಳ್ಳುವ ಪ್ರಕ್ರಿಯೆಗೆ ಮನಸ್ಸು ಮಾಡುವೆಡೆಗೆ ಚಲಿಸುವುದು ಇದನ್ನೇ ಹೇಳುತ್ತದೆ. ಈ ಕಾದಂಬರಿಯ ಸೂರಕ್ಕೆ, ದ್ರೌಪದಿ, ದಾರು, ಅದ್ರಾಮ ಮೊದಲಾದವರು ಇಂತಹ ನಡೆಯ ಸಾಧನಗಳಾಗುವುದನ್ನು ಗಮನಿಸಬಹುದು.

ಹೀಗೆ ವಿಚಾರವೆಂಬುದು ಕೊಳೆತು ಹೋಗುತ್ತಿರುವ ಸಮಾಜಕ್ಕೆ ಔಷಧಿಯಾಗಿ ಒದಗಿ ಬರಬಲ್ಲುದು, ಬರಬೇಕು ಎಂಬ ಆಶಯವನ್ನು ಆರ್.ಸುನಂದಮ್ಮನವರ 'ದ್ವಿತ್ವ' ಕಾದಂಬರಿಯೂ ನಂಬುತ್ತದೆ. ಗಾಂಧಿ ಆರಂಭದ ಕಾಲದಲ್ಲಿ ಬರಹಗಾರರಿಗೆ ಚೈತನ್ಯವಾಗಿ

ಬಂದರೆ, ಅಂಬೇಡ್ಕರ್ ತೊಂಬತ್ತರ ದಶಕದ ನಂತರ ಹೆಚ್ಚು ಪ್ರಭಾವಶಾಲಿಯಾಗಿ ಕಂಡು ಬರುತ್ತಾರೆ. ಈ ಕಾದಂಬರಿಯು ಎರಡು ಸಮುದಾಯಗಳ ನಡುವಿನ ಘರ್ಷಣೆ, ಜಾತಿ ತಾರತಮ್ಯ ಇತ್ಯಾದಿಗಳನ್ನು ಕೇಂದ್ರವಾಗಿಟ್ಟುಕೊಂಡಿದೆ. ಇದರ ನಡುವೆಯೂ ಹೆಣ್ಣು ಗಂಡಿನಿಂದ ಬಯಸುವುದೇನು ಎಂಬುದನ್ನು ಕಂಪಿಯ ಪಾತ್ರದ ಮೂಲಕ ಪೋಷಿಸಲಾಗಿದೆ. ಗಂಡು ಮತ್ತು ಹೆಣ್ಣುಗಳ ನಡುವಿನ ಸಂಬಂಧ ಎಂಬುದು ಕೇವಲ ದೈಹಿಕ ವ್ಯಾಪಾರವೂ ಅಲ್ಲ. ಮಾನಸಿಕ ಅವಲಂಬನೆಯೂ ಅಲ್ಲ. ಅದು ಪರಸ್ಪರತೆ. ದುಃಖಕ್ಕೊಂದು ಹೆಗಲು. ಸುಖಕ್ಕೊಂದು ಸಂಗಾತಿ.

ಕನ್ನಡ ಮಹಿಳಾ ಕಾದಂಬರಿ ಲೋಕ ಹಲವು ಬಗೆಯಲ್ಲಿ ಅರಳಿ ನಿಂತಿದೆ. ಒಂದು ಸೂತ್ರದಲ್ಲಿ ಅದನ್ನು ಪೋಣಿಸಲು ಸಾಧ್ಯವಿಲ್ಲ. ಇಷ್ಟಾಗಿಯೂ ಹೆಣ್ಣು ತನ್ನನ್ನು ತಾನು ವಿವರಿಸಿಕೊಂಡಿದ್ದು ಹೇಗೆ ಎಂಬುದನ್ನು ಇದುವರೆಗೂ ನೋಡಲು ಪ್ರಯತ್ನಿಸಲಾಗಿದೆ. ಇದರಾಚೆಗೂ ಮಹಿಳೆಯರು ತಮ್ಮ ಕಾದಂಬರಿಗಳನ್ನು ಬೆಳೆಸಿದ್ದಾರೆ. ತಮ್ಮ ಕತೆಗಳಲ್ಲಿ ಸೂಕ್ಷ್ಮವಾಗಿ ಮತ್ತು ಆಳವಾಗಿ ಸ್ತ್ರೀಮನವನ್ನು ಗಮನಿಸುವ ವೈದೇಹಿಯವರು ಬರೆದಿದ್ದು 'ಅಸ್ಪೃಶ್ಯರು' ಎಂಬ ಒಂದೇ ಕಾದಂಬರಿ. ಇದು ಜಾತಿ ತಾರತಮ್ಯವನ್ನು ಪ್ರಶ್ನಿಸುವ ನೆಲೆಯಲ್ಲಿ ರೂಪುಗೊಂಡ ಕಾದಂಬರಿ. ಮೇಲ್ಜಾತಿಯವರು ತಳ ಜಾತಿಯವರನ್ನು ಕೀಳಾಗಿ ನಡೆಸಿಕೊಳ್ಳುವ ರೀತಿ ನೀತಿ, ಜಾತಿ ಜಾತಿಗಳ ನಡುವೆಯೇ ಇರುವ ಒಳಶ್ರೇಣೀಕರಣ ಮತ್ತು ಅವುಗಳನ್ನು ಮೀರಬೇಕು ಎಂಬ ಆಶಯವನ್ನು ಇದು ಹೊಂದಿದೆ. ಮತ್ತೆ ಕಾದಂಬರಿ ಬರವಣಿಗೆಗೆ ಮನಸ್ಸು ಮಾಡದಿರುವುದನ್ನು ನೋಡಿದರೆ ಕಾದಂಬರಿಯ ವಿಸ್ತಾರಕ್ಕಿಂತ ಕತೆಯ ಸಾಂದ್ರತೆಗೇ ವೈದೇಹಿ ಒಲಿದಂತೆ ಕಾಣುತ್ತದೆ. ಮಿತ್ರಾ ವೆಂಕಟ್ರಾಜರ 'ಪಾಚಿ ಕಟ್ಟಿದ ಪಾಗಾರ' ಬ್ರಾಹ್ಮಣ ಕುಟುಂಬವೊಂದರ ಕಥೆಯೊಂದಿಗೆ ಅದು ತನ್ನದೇ ಪರಂಪರೆಗೆ ಉಸಿರುಕಟ್ಟಿ ನಲುಗುವ ಚಿತ್ರಣವನ್ನು ಒಳಗೊಂಡಿದೆ. ನೇಮಿಚಂದ್ರ ತಮ್ಮ 'ಯಾದ್ ವಶೇಮ್'ನಲ್ಲಿ ಯಹೂದಿಗಳ ಕತೆಯನ್ನು ಅವರ ಬೆಂಗಳೂರು ನೆಲೆಯಿಂದ ಇಸ್ರೇಲಿನ ನೆಲೆಯ ತನಕ ಹುಡುಕಿಕೊಂಡು ಹೋಗಿ ಬರೆದಿದ್ದಾರೆ. ಭಾಗೀರಥಿ ಹೆಗಡೆ ಉತ್ತರ ಕನ್ನಡದ ಹೆಣ್ಣುಮಕ್ಕಳ ಬವಣೆಯ ಬದುಕನ್ನು ತೆರೆದಿಡುತ್ತಾರೆ. ಅವರ 'ಹೊಳೆಮಗಳು'ಪರಿಸರದ ಮೇಲಿನ ಆಕ್ರಮಣವನ್ನೂ, ಹೆಣ್ಣಿನ ಮೇಲಿನ ಆಕ್ರಮಣವನ್ನೂ ದಾಖಲಿಸುತ್ತದೆ. ಗಂಗಾ ಪಾದೇಕಲ್ ಆಧುನಿಕತೆಯು ಗಂಡು ಹೆಣ್ಣುಗಳಲ್ಲಿ ಮಾನವೀಯತೆಯನ್ನು ನಾಶಮಾಡುವ ಸಾಧನವಾಗುವುದನ್ನು ಕತೆಯಾಗಿಸುತ್ತಾರೆ. 'ಚಿನ್ನದ ಸೂಜಿ' ಮೊದಲಾದ ಕಾದಂಬರಿಗಳಲ್ಲಿ ಇದನ್ನು ಗಮನಿಸಬಹುದು. ಹೆಣ್ಣುಮಕ್ಕಳಿಗೂ ಕತೆ ಹೇಳುವುದಕ್ಕೂ ಬಹು ಹತ್ತಿರದ ಸಂಬಂಧವಿದೆ. ಅಜ್ಜಿ ಕತೆಯ ಪರಂಪರೆ ಅವಳಿಗಿದೆ. ಈ ಪರಂಪರೆ ಇಂದಿಗೂ ಮುಂದುವರಿದಿದೆಯಾದರು ಕಾದಂಬರಿಯ ಜಾಗವನ್ನು ಈಗಿನ ಬದಲಾದ ಸನ್ನಿವೇಶದಲ್ಲಿ ಬೇರೆ ಬೇರೆ ಪ್ರಕಾರಗಳು ಆಕ್ರಮಿಸುತ್ತಿದೆ ಎಂಬುದೂ ನಿಜವೇ. ಹೀಗಾಗಿ. ಈಗೀಗ ಕಾದಂಬರಿಯ ಸಂಖ್ಯೆ ಕಡಿಮೆಯಾಗುತ್ತಿದೆ. ರೇಖಾ

ಕಾಖಂಡಿಕಿಯವರು ಈಚೆಗೆ ಬರೆದ 'ವೈವಸ್ವತ' ಹಲವರ ಗಮನ ಸೆಳೆದಿದೆ. ಈ ಎಲ್ಲರೂ ಹಿರಿಯರ ಸಾಲಿಗೆ ಸೇರಿದವರು. ಕಿರಿಯರು ಈ ಗುಂಪನ್ನು ಸೇರಿಕೊಳ್ಳುತ್ತಿದ್ದಾರೆಯೇ ಎಂದು ಗಮನಿಸಿದರೆ ಈಚೆಗೆ 'ಕೃಷ್ಣ ಮುದ್ರಿಕೆ' ಬರೆದ ಸಿ.ಮಂಗಳಾ, 'ಪುನರಪಿ' ಬರೆದ ಕಾವ್ಯಾ ಕಡಮೆ ಕಣ್ಣೆದುರು ಬರುತ್ತಾರೆ. ಹೆಣ್ಣಿನ ಚರಿತ್ರೆಯು ಏಕರೂಪಿಯಲ್ಲ ಎಂಬುದು ಸಾಬೀತಾಗುವಂತೆ ಇವೆರಡು ಕೃತಿಗಳಿವೆ. ಆಧುನಿಕತೆಯ ಸವಲತ್ತುಗಳನ್ನು ಬಳಸಿಕೊಂಡು ಹೊಸ ಕಾಲದ, ಸ್ವ-ಆಯ್ಕೆಯನ್ನು ಮಾಡಿಕೊಳ್ಳುವ ಯುವತಿಯರು ಪುನರಪಿಯಲ್ಲಿದ್ದರೆ, ಗೊಲ್ಲ ಕುಲದ ಕಷ್ಟ ಪರಂಪರೆಯಿಂದ ಈಗಷ್ಟೇ ಹೊರಬಂದಿರುವ ಹೆಂಗಳೆಯರಿಗೆ ಮುಟ್ಟಿನ ಮನೆಯಿಂದ ಸಿಗುವ ಬಿಡುಗಡೆಯೇ ದೊಡ್ಡದು ಎಂಬ ನಿಟ್ಟುಸಿರು, ತಮ್ಮ ಆಯ್ಕೆಯ ಮದುವೆಯ ಹೊಂಗನಸೇ ದುಬಾರಿಯಾಗಿರುವ ಸ್ಥಿತಿಗಳ ಕಟು ವಾಸ್ತವಗಳನ್ನು ಕೃಷ್ಣಮುದ್ರಿಕೆ ತೆರೆದಿಡುತ್ತದೆ. ಈ ಪಯಣ ಹೀಗೇ ಮುಂದುವರಿಯುತ್ತಿದೆ. ಹೊಸ ಭರವಸೆಗಳನ್ನು ಹುಟ್ಟಿಸುತ್ತಿದೆ.



# ಕನ್ನಡದಲ್ಲಿ ಮಹಿಳಾ ಕಾವ್ಯ: ಜಲಪಾತದ ತ್ರಾಣ

✦ ಡಾ. ವಿನಯಾ

ಪಿತೃತ್ವದ ಸಂರಚನೆಯನ್ನು ಪೋಷಿಸುವ ಸಂಗೋಪನಾ ವೃತ್ತಿಗೆ ಹೆಣ್ಣು ಬದುಕನ್ನು ಲಗತ್ತಿಸಿದ್ದರಿಂದ ಅಭಿವ್ಯಕ್ತಿಯ ಸಹಜ ಹಕ್ಕುದಾರಿಕೆಯು ಸಾಧ್ಯವಾಗಲಿಲ್ಲ. ಹೆಣ್ಣಿಗೆ ಸಂಬಂಧಿಸಿದ ಲೋಕವೊಂದು ಬೇರೆಯೇ ಎಂಬ ಪ್ರತ್ಯೇಕತೆಯಲ್ಲಿ, ಕೀಳರಿಮೆಯಲ್ಲಿ ಅಭಿವ್ಯಕ್ತಿಯು ಸೊಗಸುಗಾರಿಕೆಯಾಗುವುದು ಕಠಿಣವಾಗಿತ್ತು. ಸಾಮಾಜಿಕ ನೀತಿ, ಮೌಲ್ಯಗಳು ಹೆಣ್ಣಿನ ವಿಚಾರ–ಕ್ರಿಯೆ–ಅಭಿವ್ಯಕ್ತಿಗಳನ್ನು ನಿಯಂತ್ರಣದಲ್ಲಿರಿಸಿದ್ದವು. ಇಂತಹ ಬಾಳುವಿಕೆಯಲ್ಲಿಯೂ ಹೆಣ್ಣುಗಳು ಸ್ವತ್ವದ ಶೋಧನೆಯ ಅನಿವಾರ್ಯತೆಯಲ್ಲಿ ರೂಪಿಸಿಕೊಂಡ ಅಡಿಗೆ, ಹಸೆ, ಹಬ್ಬ–ಹರಿದಿನ, ರಂಗೋಲಿ–ಹೆಣಿಗೆ ಮುಂತಾದವುಗಳು ಅಭಿವ್ಯಕ್ತಿಯ ಪ್ರಧಾನ ನೆಲೆಗಳೆಂದು ಪರಿಗಣಿತವಾಗಲಿಲ್ಲ. ಸಾಹಿತ್ಯ–ಸಂಸ್ಕೃತಿ–ಕಲೆಗಳಿಗೆ ಸಂಬಂಧಿಸಿ ಹೆಣ್ಣಿನ ಪಾಲುದಾರಿಕೆಯನ್ನು ಪಿತೃತ್ವ ಚಿಂತನೆಯ ಪೋಷಕ ಹಾಗೂ ಮನೋಲ್ಲಾಸಕ ನೆಲೆಯಲ್ಲಿ ನಿರ್ವಚಿಸಲಾಗಿತ್ತು. ಸಾಹಿತ್ಯ ನಿರ್ಮಿತಿಯು ಅಕ್ಷರಾಭ್ಯಾಸಕ್ಕೆ ಅವಲಂಬಿ ಯಾಗಿದ್ದರಿಂದ, ಆ ಅವಕಾಶ ವಂಚಿತವಾಗಿದ್ದ ಹೆಣ್ಣು ಸಂವೇದನೆಯು ಸಾಹಿತ್ಯ ಪರಂಪರೆಯಲ್ಲಿ ಸೇರಿಕೊಳ್ಳುವುದು ಸುಲಭವಾಗಿರಲಿಲ್ಲ. ಪ್ರಾಚೀನ ಸಾಹಿತ್ಯದಲ್ಲಿ ಹೆಣ್ಣು ಬಹುತೇಕ ದಾಖಲಾಗಿದ್ದು ದೇಹವಾಗಿ, ಸೌಂದರ್ಯದ ಪರಿಕರವಾಗಿ, ಗಂಡುಬಾಳಿನ ತಾತ್ವಿಕತೆಯನ್ನು ಶೋಧಿಸಲು ಒದಗುವ ಮಾನದಂಡವಾಗಿ. ಹೆಣ್ಣಿನ ಸಂವೇದನೆಯ ನಿಯಂತ್ರಣವನ್ನೇ ಸಾಮಾಜಿಕ ಸರಿತನವಾಗಿಸಲಾಗಿತ್ತು.

ಆದರೆ... ಹರಿವ ಹೊಳೆಯೆದುರು ಕಂದಕ ಎದುರಾದಾಗಲೇ ಜಲಪಾತದ ತ್ರಾಣ ಹೊಮ್ಮುವಂತೆ, ಮಹಿಳಾ ಅಭಿವ್ಯಕ್ತಿಯ ಗುರುತುಗೆರೆಗಳು ಮೂಡಿವೆ. ಬೆಟ್ಟದಂಚಿನ ಸಸಿ, ಬೆಳೆಯುತ್ತ ಮರವಾಗುತ್ತ, ಬೆಟ್ಟದ ಸವಕಳಿಯನ್ನು ತಡೆವ ಆಧಾರವಾಗುವಂತೆ, ಮಹಿಳಾ ಸಾಹಿತ್ಯದ ವಿರಳ ದಾಖಲೆಗಳೂ ಹೆಣ್ಣು ಸಂವೇದನೆಯ ಚಹರೆಯನ್ನು ರೂಪಿಸಿದವು. ಜನಪದ ಹೆಣ್ಣು–

ಹಾದೀಲಿ ಹೋಗೋರೆ ಹಾಡೆಂದು ಕೇಳ್ಬೇಡಿ
ಹಾಡಲ್ಲ ನನ್ನ ಎದೆಯುರಿ । ದ್ಯಾವರೆ
ಜೆವರಲ್ಲ ನನ್ನ ಕಣ್ಣೀರು

ಎನ್ನುವಾಗ– ಆಡದ, ಆಡದಿರಲಾಗದ, ಆಡಿಯೂ ಮುಟ್ಟಿಸಲಾಗದ ದಿಗ್ಬಂಧನಗಳ ಸೂಚಕತೆಯಿದೆ. ನಾಜಿ ಕ್ಯಾಂಪಿನಲ್ಲಿದ್ದ ಆನ್‌ಫ್ರಾಂಕ್ ಬಚ್ಚಿಟ್ಟುಕೊಂಡು ಬರೆದ ದಿನಚರಿಯ ಪುಟಗಳು ಒಟ್ಟಾರೆ ಮಹಿಳಾ ಬರವಣಿಗೆಯ ರೂಪಕವಾಗಿದೆ. ಜಗತ್ತಿನಾದ್ಯಂತ ಭಾಷೆ-ಸಂಸ್ಕೃತಿಗಳ ಏನೆಂಥ ವ್ಯತ್ಯಾಸದಲ್ಲಿಯೂ ಹೆಣ್ಣಿನ ಅಭಿವ್ಯಕ್ತಿಯ ದಾರಿ ಇಕ್ಕಟ್ಟಿನದೇ ಆಗಿದೆ. ದಕ್ಷಿಣ ಆಫ್ರಿಕಾದ ಬರಹಗಾರ್ತಿ ಜ್ಹೀನಾ ಮಹ್ಲೋಪೆಯ ಮಿಜ ಣಬುಟಜಣ ಕಥೆ ಇದೇ ದಿಗ್ಬಂಧನದ ಕುರಿತದ್ದು. ಪಾಕಿಸ್ತಾನದ ಕವಿಯಿತ್ರಿ ಸಾರಾ ಶಗುಫ್ತಾ ಬಗ್ಗೆ ಬರೆಯುತ್ತ ಅಮೃತಾ ಪ್ರೀತಂ– ಎದೆಹಾಲು ಹಿಂಡಿ ಕಾಯಲಿಟ್ಟು ಕವಿತೆ ಬರೆದವಳು– ಎನ್ನುವುದು ಈ ಚಿಕ್ಕಟ್ಟಿನದೇ ಇನ್ನೊಂದು ಅವತರಣಿಕೆ.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಆಧುನಿಕ ಕಾಲಘಟ್ಟವು ಮಹಿಳೆಯ ಅಭಿವ್ಯಕ್ತಿಯ ಬೆಳ್ಳಿಗೆರೆಗಳನ್ನು ಮೂಡಿಸಿತ್ತು. ಆದರೆ, ಹೊಳೆದ ಬೆಳ್ಳಿಗೆರೆಗಳು ಮುಂದಿನ ದಾರಿಯನ್ನು ನಿರ್ದೇಶಿಸಿದವು ಕೂಡ. ಸ್ವಾತಂತ್ರ್ಯ ಹೋರಾಟದೊಂದಿಗೆ ಪ್ರಾರಂಭವಾದ ರಾಷ್ಟ್ರೀಯವಾದಿ ಸಂಕಥನ, ಪುನರುತ್ಥಾನವಾದೀ ಚಳುವಳಿಗಳು ಆದರ್ಶ ಆರ್ಯನಾರೀ ಪರಿಕಲ್ಪನೆಯನ್ನು ಚಾಲ್ತಿಗೆ ತಂದಿತು. ಹೆಣ್ಣಿನ ತಾಯ್ತನ ಮತ್ತು ಸಂಗೋಪನಾ ಶಕ್ತಿಗಳು ವೈಭವೀಕರಣಕ್ಕೆ ಒಳಗಾದವು. ಈ ಅವಧಿಯಲ್ಲಿ ಸಂಪಾದಿತಗೊಂಡ ಜನಪದ ಮಹಿಳಾ ಅಭಿವ್ಯಕ್ತಿಯನ್ನು ಗಮನಿಸಿದರೆ, ಅಪ್ರಜ್ಞಾಪೂರ್ವಕವಾಗಿಯಾದರೂ ಅಭಿವ್ಯಕ್ತಿಯ ಯಾಜಮಾನ್ಯವು ಲಿಂಗರಾಜಕಾರಣದಿಂದ ಕೂಡಿತ್ತು. ಯಾವುದು ಮಹಿಳಾ ಸಂವೇದನೆಯ ನಿರ್ಭೀತ ದಾಖಲೆಯಾಗಬಹುದಿತ್ತೋ ಅದು ಪಿತೃತ್ವದ ಸೆನ್ಸಾರ್‌ಗೆ ಒಳಗಾಯಿತು. ಹೆಣ್ಣು ಭಾವನೆಯನ್ನು ಗರತಿಯ ವಲಯವಾಗಿ ಆಯ್ದುಕಟ್ಟುವ, ಪ್ರತಿರೋಧಕ್ಕಿಂತಲೂ ಅನುಸಂಧಾನವೇ ಮುಖ್ಯವಾದ ಚೌಕಟ್ಟುಗಳು ನಿರ್ದೇಶಿತಗೊಂಡವು. ಮಹಿಳಾ ಅಭಿವ್ಯಕ್ತಿಯ ಚರಿತ್ರೆಯು ಜನಪದ ಸಾಹಿತ್ಯ ಮತ್ತು ಭಕ್ತಿಸಾಹಿತ್ಯದ ಎರಡು ಪ್ರಧಾನ ಧಾರೆಗಳಲ್ಲಿ ಸಾಗಿಬಂದಿದೆ. ಭಕ್ತಿಚಳುವಳಿಯ ಕಾವ್ಯ ಪರಂಪರೆಯಲ್ಲಿಯೂ ಹೆಣ್ಣು ತನ್ನ ಸಹಜತೆಯನ್ನು ಉಳಿಸಿಕೊಳ್ಳಲು ನಡೆಯಿಸಿದ ಸಂಘರ್ಷದ ಕಥನವಿದೆ. ಗಂಡು ತನ್ನ ಗಂಡುಗರ್ವವನ್ನು ಅಳಿದು ಭಕ್ತನಾಗುವುದಕ್ಕೂ, ಹೆಣ್ಣು ತನ್ನ ಹೆಣ್ತನದ ಕಟ್ಟುಪಾಡುಗಳೊಂದಿಗೆ ಭಕ್ತೆಯಾಗುವುದಕ್ಕೂ ಇರುವ ಸಂಘರ್ಷವಿದು. ದೇಹವನ್ನು ದೇವಾಲಯವಾಗಿ ಉನ್ನತೀಕರಿಸಿಕೊಳ್ಳುವುದು ಬಸವಣ್ಣನಿಗೆ ಸಹಜ ಸಾಧ್ಯತೆಯಾಗುತ್ತದೆ. ದೇಹವನ್ನು ತುಚ್ಛೀಕರಿಸಿ, ಜಗವು ಇಕ್ಕಿದ ತೊಡಕನ್ನು ಹಾಯುವುದು ಅಕ್ಕನಿಗೆ ಅನಿವಾರ್ಯವಾಗುತ್ತದೆ. ಭಕ್ತ ಗಂಡಾಗಿದ್ದಾಗ ಲೋಕನಿಯತಿಗಳು ಬರಿಯ ಉಪಾಧಿಗಳಾಗುತ್ತವೆ. ಭಕ್ತಳು ಹೆಣ್ಣಾಗಿದ್ದಾಗ ಲೋಕನಿಯತಿಯ ಕೊಂಡಹಾದೇ ಭಕ್ತಿಯ ಹಾದಿಯನ್ನು ಹತ್ತಬೇಕಾಗುತ್ತದೆ. ದುಗ್ಗಳೆಯ ತಂದು

ಧನ್ಯನಾದೆನೆಂದು ಜೇಡರ ದಾಸಿಮಯ್ಯ ಉದ್ಗರಿಸುತ್ತಾನೆ. 'ಇಂತಿವರ ಕಾರುಣ್ಯ ಪ್ರಸಾದವ ಕೊಂಡು ಸತ್ತಹಾಗಿರಬೇಕಲ್ಲದೆ ತತ್ವದ ಮಾತು ಎನಗೇಕಯ್ಯ'- ಎನ್ನುತ್ತಾಳೆ ದುಗ್ಗಳೆ. ಭಕ್ತಿಯೆಂಬ ಜಗತ್ತಿನಲ್ಲಿಯೂ ಹೆಣ್ಣು-ಗಂಡುಗಳ ಸಂವೇದನಾ ವಲಯಕ್ಕಿರುವ ಈ ವ್ಯತ್ಯಾಸವು ಹೆಣ್ಣಿನ ಅಭಿವ್ಯಕ್ತಿಯ ಬಿಕ್ಕಟ್ಟನ್ನು ಕಾಣಿಸುತ್ತದೆ. ಹೆಣ್ಣುಗಳಿಗೆ ಸಾಮಾಜಿಕ ಸಂಕೋಚದ ಅಡಚಣೆಯನ್ನು ಮೀರುವುದು ಕಷ್ಟವೆನಿಸಿದೆ. ಹೆಳವನಕಟ್ಟೆ ಗಿರಿಯಮ್ಮ-

ಅರಿಯೆನು ಕವಿತಾ ಚಾತುರ್ಯದ
ಮಹಿಮೆಯ । ಗುರುಮುಖದಲಿ ಕೇಳಲಿಲ್ಲ- ಎನ್ನುತ್ತಾಳೆ.

ಚಂದ್ರಹಾಸ ಕಥೆಯ ಪ್ರಸ್ತಾವನೆಯಲ್ಲಿ ಸಾವಂತ್ರಾದೇವಿ-

ಹಲಗೆಯ ಹಿಡಿದಿಲ್ಲ
ಬಳಪದಿ ಬರೆದಿಲ್ಲ
ಶ್ರೀಗುರು ನಮಗೆ ಬರೆಸಿಲ್ಲ
ಕೇಳಿರವ್ವ, ಲೆಕ್ಕಣಿಕೆ ನಮಗೆ ಗೊತ್ತಿಲ್ಲ

ಎನ್ನುತ್ತಾಳೆ. ಹಲಗೆ-ಬಳಪವ ಪಿಡಿಯದ ಅಗ್ಗಳಿಕೆಯ ನಾರಣಪ್ಪನ ಉಕ್ತಿಗೂ ಸಾವಂತ್ರಾದೇವಿಯ ಉಕ್ತಿಗೂ ಇರುವ ಧ್ವನಿ ವ್ಯತ್ಯಾಸವನ್ನು ಗಮನಿಸಬೇಕು.

ಈ ಸ್ಥಿತಿ, ಆಧುನಿಕ ಕಾಲಕ್ಕೆ ಪೂರ್ತಿಯಾಗೇನೂ ಬದಲಾಗಲಿಲ್ಲ. ಹೆಳವನಕಟ್ಟೆ ಗಿರಿಯಮ್ಮ ಎದುರಿಸಿದ ಸಮಸ್ಯೆಗಳಿಗಿಂತ, ಬೆಳಗೆರೆ ಜಾನಕಮ್ಮ ಎಂಬ ಆಧುನಿಕ ಕವಯಿತ್ರಿ ಎದುರಿಸಿದ ಸಂಕಟಗಳು ಕಡಿಮೆ ಎನ್ನಲು ಬರುವಂತಿಲ್ಲ. ಅವುಗಳ ಸ್ವರೂಪದಲ್ಲಿ ವ್ಯತ್ಯಾಸವಿದೆ. ಆದರೆ ದಮನದ ಆಳದಲ್ಲಿ ಹೆಣ್ಣಿನ ಅಭಿವ್ಯಕ್ತಿಯನ್ನು ನಿಯಂತ್ರಿಸುವ ಆಶಯವೇ ಇದೆ. ಆಧುನಿಕ ಕಾಲಘಟ್ಟವು ದೇಶದ ಸ್ವಾತಂತ್ರ್ಯ ಚಳುವಳಿಯ ಭಾಗೀದಾರಿಕೆಯ ಜವಾಬ್ದಾರಿ ಮತ್ತು ವಿಸ್ತರಣೆಯನ್ನು ಮಹಿಳಾ ಲೋಕಕ್ಕೆ ಒದಗಿಸಿತು. ಅಕ್ಷರಸ್ಥ-ಅನಕ್ಷರಸ್ಥ ಎಂಬ ಬೇಧವಿಲ್ಲದೆ ಬಹುದೊಡ್ಡ ಪ್ರಮಾಣದಲ್ಲಿ ಈ ಚಳುವಳಿಯು ಮಹಿಳಾ ಸಶಕ್ತತೆಯನ್ನು ಒಳಗೊಂಡಿತು. ಸ್ವಾತಂತ್ರ್ಯ ಹೋರಾಟದ ಫಲಪ್ರದತೆಗೆ ಮಹಿಳಾ ಕ್ಷಮತೆಯು ಕಾರಣವಾಗಿದೆ. ಆದರೆ ಅಷ್ಟೇ ವಿಸ್ತೃತವಾಗಿ ಅದು ಮಹಿಳಾ ಬದುಕಿಗೆ ಪರಿವರ್ತಿತ ಆಯಾಮವನ್ನೇನೂ ಒದಗಿಸಲಿಲ್ಲ. ಸ್ವಾತಂತ್ರ್ಯ ಚಳುವಳಿಯಲ್ಲಿ ಪಾಲುದಾರರಾಗಿದ್ದ ಮಹಿಳೆಯರು, ಸ್ವಾತಂತ್ರ್ಯಾನಂತರ ಮತ್ತದೇ ಸಾಂಪ್ರದಾಯಿಕ ಸಂರಚನೆಯೊಳಗೆ ಸೇರಿಹೋದರು. ಈ ಸಂಕ್ರಮಣ ಸ್ಥಿತಿಯಲ್ಲಿ ಪ್ರಾರಂಭವಾದ ಆಧುನಿಕ ಕನ್ನಡ ಮಹಿಳಾ ಅಭಿವ್ಯಕ್ತಿಯು ತನ್ನ ಒಡಲೊಳಗೆ ಈ ಬಿಕ್ಕಟ್ಟನ್ನು ನೇಯ್ದುಕೊಂಡೇ ರೂಪ ತಾಳಿತು. ಕನ್ನಡದ ಮೊದಲ ಮಹಿಳಾ ಕಾದಂಬರಿ ಎನಿಸಿಕೊಂಡ ಶಾಂತೂಬಾಯಿ ನೀಲಗಾರರ 'ಸದ್ಗುಣಿ ಕೃಷ್ಣಾಬಾಯಿ'ಯು ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡವು ಮನುಧರ್ಮಶಾಸ್ತ್ರದ 'ಆದರ್ಶ ಆರ್ಯನಾರೀ' ಎಂಬ ವಾಕ್ಯೋಕ್ತಿಯ ವಿಷಯದಲ್ಲಿ ನಡೆಸಿದ್ದ ಪ್ರಬಂಧ

ಸ್ಪರ್ಧೆಗೆ ಬರೆದದ್ದು ಎನ್ನುವುದು ಆಕಸ್ಮಿಕವಾಗಿರಲಿಲ್ಲ. ತಿರುಮಲಾಂಬಾ, ಕಲ್ಯಾಣಮ್ಮ ಮೊದಲಾದ ಮೊದಲ ತಲೆಮಾರಿನ ಬರಹಗಾರ್ತಿಯರು ಸಾಂಪ್ರದಾಯಿಕತೆಯನ್ನು ಒಪ್ಪಿಕೊಳ್ಳುತ್ತಲೇ ಒಂದಿಷ್ಟು ಉಸಿರ್ ದಾಣಗಳ ಹುಡುಕಾಟದಲ್ಲಿ ನಿರತರಾದವರಂತೆ ಬರೆದದ್ದು ಇದೇ ಚಾರಿತ್ರಿಕತೆಯ ಫಲಿತವಾಗಿತ್ತು.

ಆಧುನಿಕ ಕನ್ನಡ ಮಹಿಳಾ ಕಾವ್ಯ ಪರಂಪರೆಯ ಮೊದಲ ಧ್ವನಿ ಬೆಳಗೆರೆ ಜಾನಕಮ್ಮನವರದು. ಅಂದಿನಿಂದ ಇಂದಿನತನಕದ ಮಹಿಳಾ ಕಾವ್ಯದ ಧ್ವನಿಯನ್ನು 4 ಪ್ರಮೇಯಗಳಲ್ಲಿ ವಿಶ್ಲೇಷಿಸಿಕೊಳ್ಳುವುದು ಸಾಧ್ಯ.

ಅನುಸಂಧಾನದ ನೆಲೆ : ಪಿತೃಪ್ರಧಾನ ವ್ಯವಸ್ಥೆಯ ಬಗ್ಗೆ ತಕರಾರುಗಳಿಲ್ಲದಿದ್ದಾಗಲೂ, ಆ ಸ್ಥಿತಿಯು ಹೆಣ್ಣಿನ ಜೀವಶಕ್ತಿಯನ್ನು ಮುರುಟಿಸುವ ನೋವನ್ನು ಮುಚ್ಚಿಡಲಾಗದ ಹಂತವಿದು. ಈ ಮೊದಲ ಕಾಲಘಟ್ಟವನ್ನು ಸ್ತ್ರೀವಾದಿ ಚಿಂತನೆಯ ಪ್ರವೇಶಪೂರ್ವದ ಅವಧಿಯಾಗಿಯೂ ಕಾಣಬೇಕು. ಸಂಚಿ ಹೊನ್ನಮ್ಮನ ಅನುನಯದ ಪ್ರಶ್ನೆಯ ಧಾಟಿಯನ್ನು ಎರವಲು ತೆಗೆದುಕೊಂಡ ರೀತಿಯಾಗಿಯೂ ಇದನ್ನು ನೋಡಬಹುದು. ಜನಪದ ಮಹಿಳಾ ಸಂವೇದನೆಯಲ್ಲಿ ಸೇರಿಕೊಂಡಿರುವ, ತನ್ನ ನೋವಿನ ಅನುಭವದ ಅಭಿವ್ಯಕ್ತಿಯು ಬೆಳಗೆರೆ ಜಾನಕಮ್ಮನಲ್ಲಿಯೂ ಮುಂದುವರೆದಿದೆ. ಪುರುಷ ಹಿತಾಸಕ್ತ ಜೀವನಮೌಲ್ಯಗಳು ಆರೋಪಿಸಿರುವ ವೈಭವೀಕೃತ–ತುಚ್ಛೀಕೃತ ಸಿದ್ಧ ಮಾದರಿಗಳಿಗೆ ಹೊರತಾದ ವಿಧಾನವಿದು. ಈ ಹಂತದಲ್ಲಿ ಹೆಣ್ಣು ಬಾಳಿನ ಸೂಕ್ಷ್ಮ ಅವಲೋಕನ ಸಾಧ್ಯವಾಗಿದೆ.

ಗಂಡನ ಮನೆ ಸಗ್ಗ ನಿನಗೆ
ಮುನಿಯೆ ಗಂಡನೆ ಯಮರಾಯ ಕೊನೆಗೆ
ನಿನ್ನ ಮುಳುಗಿಪ ತೇಲಿಪ ಶಕ್ತಿಯುಂಟಾತಂಗೆ
ನೀನೊಂದು ವಿಕ್ರಯದೊಸ್ತುವು ಪುರುಷಗೆ (ಜಾನಕಮ್ಮ)

ಹೆಣ್ಣು ಬದುಕಿನ ಇತಿವೃತ್ತವನ್ನು ನಿಯಂತ್ರಿಸುವ ಅಧಿಕಾರ ಕೇಂದ್ರವು ಗಂಡಿನ ತಾಬೆಯಲ್ಲಿರುವುದನ್ನು ಪ್ರಶ್ನಿಸುತ್ತಾರೆ. ಒಂದು ಕುಟುಂಬಕ್ಕೆ ಇಬ್ಬರು ಯಜಮಾನರು ಇರುವುದು ಸಲ್ಲ ಎಂಬ ಬಗ್ಗೆ ಮಹಿಳಾ ಸಂವೇದನೆಗೆ ತಕರಾರುಗಳಿರಲಿಲ್ಲ. ಆದರೆ, ಹೆಂಡತಿಯ ಇರುವಿಕೆಗೆ ಬೆಲೆಯೇ ಇಲ್ಲವೆ ಎಂಬ ಯಾತನೆಯನ್ನು ಉತ್ತರಿಸಿಕೊಳ್ಳಬೇಕಿತ್ತು.

ಕುದಿಯುವುದು ಒಳಗೊಳಗೆ
ಸ್ವಾತಂತ್ರ್ಯವಿಲ್ಲೆನುತ
ದುಡಿಯುವುದು ಹಗಲಿರುಳು
ಉಸಿರಿರುವ ತನಕ (ಜಾನಕಮ್ಮ)

ಪುರುಷ ಒಪ್ಪಿತ ಮೌಲ್ಯಗಳಿಂದ ತನ್ನನ್ನು ಬಿಡುಗಡೆಗೊಳಿಸಿಕೊಂಡು ಸ್ವಂತಿಕೆಯ ಅರಿವನ್ನು ಪಡೆಯುವುದು ಚಾರಿತ್ರಿಕವಾಗಿಯೂ ಮಹತ್ವದ್ದಾಗಿತ್ತು. ಹೆಣ್ಣು, ತನ್ನ

ಚಾಲುವಿಕೆಯನ್ನು ಒತ್ತುವರಿ ಮಾಡಿದ ಚಿಂತನೆಗಳನ್ನು ಪ್ರಶ್ನಿಸುವುದು ಎಂದರೆ, ತನ್ನನ್ನು ತಾನು ಅರಿವಿನ ಬೆಳಕಿನಲ್ಲಿಟ್ಟುಕೊಳ್ಳುವುದಾಗಿತ್ತು. ಮಹಿಳಾ ಅಭಿವ್ಯಕ್ತಿಯ ಮೊದಲ ಹಂತದಲ್ಲಿಯೇ ಪ್ರಶ್ನೆ, ನಿಟ್ಟುಸಿರು, ಸ್ವ ಮಥನದ ಕಾಲುದಾರಿಯ ನಡಿಗೆ ಪ್ರಾರಂಭವಾಯಿತು. ಜಾನಕಮ್ಮ–

ಹೆಣ್ಣೆ ನೀ ಗಂಡನ ಕೂಡಿಕೊಂಡ್ಯ
ನೋಡು ಮಂಡೂಕ ಸರ್ಪನ ನೆಳಲಿಗೆ ಹೋದಂತೆ
ಬಂಡಿಗೆ ಬಸವನು ಶೀರಬಾಗಿಕೊಂಡಂತೆ

ಎಂದು ಬರೆದರು. ಕನ್ನಡ ನವೋದಯ ಸಾಹಿತ್ಯವು ಅದರಲ್ಲೂ ಬೇಂದ್ರೆ–ಕುವೆಂಪು ಮೊದಲಾದ ಕವಿಗಳ ಕಾವ್ಯವು ಪ್ರೇಮದ ದಾಂಪತ್ಯದ ಸಾತತ್ಯವನ್ನು ಸಾರುತ್ತಿರುವಾಗ ಜಾನಕಮ್ಮ ಹೆಣ್ಣಿನ ಅನುಭವ ಪ್ರಾಮಾಣ್ಯವನ್ನು ಮುಂದಿಡುತ್ತಾರೆ. ಇದೇ ಅವಧಿಯಲ್ಲಿ ಮಹಿಳಾ ಸಂವೇದನೆಯು ತನ್ನ ರಕ್ಷಣಾ ತಂತ್ರವಾಗಿ ಭಕ್ತಿಯ ಪರ್ಯಾವರಣವನ್ನು ಬಳಸಿಕೊಂಡಿದೆ. ವಚನಕಾರ್ತಿಯರ ನಿಲುವು ಮತ್ತು ನಿರ್ಭೀತಿಯನ್ನು ಆರಾಧನಾ ಪೂರ್ವಕವಾಗಿ ಆವಾಹಿಸಿಕೊಂಡು ತಮ್ಮ ಕಾಲದ ಬಿಕ್ಕಟ್ಟುಗಳಿಗೆ ಉತ್ತರವನ್ನು ಹುಡುಕಲು ಜಯದೇವಿತಾಯಿ ಲಿಗಾಡೆ, ಶಾಂತಾದೇವಿ ಮಾಳವಾಡ, ಶೈಲಜಾ ಉಡಚಣ ಮೊದಲಾದವರ ಕಾವ್ಯ ಪ್ರಯತ್ನಿಸಿದೆ. ಸಾಮಾಜಿಕತೆಯ ಕುರಿತಾಗಲಿ, ಜೀವನ ಮೌಲ್ಯಗಳ ಕುರಿತಾಗಲಿ ಭಿನ್ನಮತ ವ್ಯಕ್ತಪಡಿಸದಿರುವ ಮಹಿಳಾ ಸಂವೇದನೆಯು; ಹೆಣ್ಣು ಅನುಭವಿಸುವ ತಾರತಮ್ಯಗಳ ಬಗ್ಗೆ ಮಾತ್ರ ತೀವ್ರ ಭಿನ್ನಾಭಿಪ್ರಾಯವನ್ನು ದಾಖಲಿಸಿದೆ. ಯಾವುದೇ ಅವಸರದ, ವಿವರಣೆಯ ಗೋಜಲುಗಳಿಗೆ ಹೋಗದೆ, ಅತೀವ ವ್ಯವಧಾನದಿಂದ ಅಭಿವ್ಯಕ್ತಿಸಿರುವುದು ಈ ಕಾಲಘಟ್ಟದ ಮಹಿಳಾ ಸಂವೇದನೆಯ ಗುಣವಾಗಿದೆ.

ಪ್ರತಿರೋಧದ ನೆಲೆ : ಕನ್ನಡ ಸಾಹಿತ್ಯ ಸಂದರ್ಭಕ್ಕೆ ಸಂಕರಗೊಂಡ ಎರಡು ವಿಚಾರಧಾರೆಗಳು ಮತ್ತು ರೂಪುಗೊಂಡ ಚಳುವಳಿಗಳ ಪರಿಣಾಮವಾಗಿ ಮಹಿಳಾ ಅಭಿವ್ಯಕ್ತಿಯಲ್ಲಿ ಚಾರಿತ್ರಿಕ ತಿರುವು ಸಂಭವಿಸಿದೆ. 70–80ರ ದಶಕ ಶಿಕ್ಷಣ ಹಾಗೂ ಉದ್ಯೋಗದ ಕಾರಣದಿಂದ ಸಾಮಾಜಿಕ ಪಲ್ಲಟಕ್ಕೆ ಕಾರಣವಾಗಿತ್ತು. ದಲಿತ–ಬಂಡಾಯ ಸಾಹಿತ್ಯ ಚಳುವಳಿಯು, ಬರವಣಿಗೆಯ ಸಾಮಾಜಿಕ ಸ್ತರವನ್ನು ಮುನ್ನೆಲೆಗೆ ತಂದಿತ್ತು ಮತ್ತು ಮಹಿಳೆಯನ್ನು ಸಹಜೀವಿಯಾಗಿ ಪರಿಗಣಿಸಬೇಕಾದ ಹೊಸ ಅರಿವನ್ನು ಪ್ರತಿಪಾದಿಸಿತು. ದಮನಿತ ಸಂವೇದನೆಯು ತನ್ನ ನೋವಿಗೆ ದನಿಯಾಗಲು ಹೆಣ್ಣು ಸಂಕಥನವನ್ನು ಮಾಧ್ಯಮವಾಗಿಸಿಕೊಂಡಿತು. ಇದೇ ಅವಧಿಯಲ್ಲಿ ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯು ಅಧ್ಯಯನ ವಿಧಾನವಾಗಿ ಜೀವನ ಮೀಮಾಂಸೆಯ ನೋಟಕ್ರಮವಾಗಿ ಪ್ರವೇಶಿಸಿತು. ನೆರೆನುಡಿಗಳಲ್ಲಿ ಮತ್ತು ಜಗತ್ತಿನ ಚರಿತ್ರೆಯಲ್ಲಿ ದಾಖಲಾದ ದಮನಿತರ ನೋವಿನ ಕುರಿತ ವ್ಯಾಖ್ಯಾನಗಳಿಗೆ ಕಥನಗಳಿಗೆ ಕನ್ನಡವು ಕಿವಿಯಾಯಿತು. ಈ ಇಂಥ ಸಾಂಸ್ಕೃತಿಕ ತಿಳಿವಿನ ವಿಸ್ತರಣೆಯು ಲಭಿಸತೊಡಗಿದಂತೆ, ಒಟ್ಟಾರೆ ಕನ್ನಡ ಚಿಂತನೆಯ ಒಲವು ನಿಲುವುಗಳು

ಸಂಕರರೂಪೀ ಮರುನಿರ್ಮಿತಿಯನ್ನು ಪಡೆದವು. ಕನ್ನಡದ ಅಭಿವ್ಯಕ್ತಿಗೊಂದು ಹೊಸ ಕಸುವು ಒದಗಿತು. ಮಹಿಳಾ ಅಭಿವ್ಯಕ್ತಿಯಲ್ಲೊಂದು ಉತ್ಥಾನ ಕಂಡುಬಂದಿತು. ಈ ಕಾಲಘಟ್ಟದಲ್ಲಿ ಹೆಣ್ಣು ಸಂವೇದನೆಯು ಪ್ರವಾಹ ರೂಪದಲ್ಲಿ ಧುಮ್ಮಿಕ್ಕಿದ್ದಕ್ಕೆ ಚರಿತ್ರ ಸಾಕ್ಷಿಯಾಗಿದೆ. ಸಹಜವಾಗಿಯೇ ಹಲವಾರು ವೈವಿಧ್ಯಮಯ ಆಯಾಮಗಳನ್ನೂ ಕಾಣಬಹುದಾಗಿದೆ. (i) ಶೋಷಿತ ನೆಲೆಯ ಕುರಿತ ತಾತ್ತ್ವಿಕ ಅರಿವು - ಹೆಣ್ಣು, ಹೆಣ್ಣಾಗಿರುವುದರಿಂದಲೇ ಬೇರೆ ಬೇರೆ ದೇಶ-ಕಾಲ-ಸಂದರ್ಭ-ವಯೋಮಾನಗಳಲ್ಲಿ ಅನುಭವಿಸುವ ಬಿಕ್ಕಟ್ಟುಗಳಿಗಿರುವ ತಾತ್ವಿಕ ಕಾರಣವನ್ನು ಸ್ತ್ರೀವಾದ ಸ್ಪಷ್ಟೀಕರಿಸಿತ್ತು. ಈ ತಿಳಿವು ಹೆಣ್ಣಿನ ಸಂವೇದನೆಯನ್ನು ಏಕಾಂತದಿಂದ ಲೋಕಾಂತಕ್ಕೆ ವಿಸ್ತರಿಸಿತು. ವೈಯಕ್ತಿಕವಾದ, ಕೌಟುಂಬಿಕವಾದ, ಸಾಮಾಜಿಕವಾದ ಅಪಮಾನಗಳಿಗೆ ಜವಾಬ್ದಾರವಾದ ಒಪ್ಪಿತ ನೆಲೆಯೊಂದಿದೆ ಎಂಬ ಅರಿವೇ, ತನ್ನ ಸುತ್ತಲನ್ನು ವ್ಯವಧಾನದಿಂದ ಅರ್ಥೈಸಿಕೊಳ್ಳುವ ತಾಕತ್ತನ್ನು ನೀಡಿತು. ತನ್ನ ಯಾತನೆಗೆ ತಾನು ಕಾರಣವಲ್ಲ ಎನ್ನುವಷ್ಟೇ ಬೆರಗು, ಯಾತನಾ ವಲಯಗಳೂ ಕಾರಣವಲ್ಲ ಎನ್ನುವುದಾಗಿತ್ತು. ಸಾಮಾಜಿಕ ಮೌಲ್ಯ ನಿಷ್ಕರ್ಷೆಯಲ್ಲಾದ ಅಪರಿಮಿತ ತಪ್ಪುಗಳು ಸಾಮಾಜಿಕ ಸ್ಥಿತ್ಯಂತರಗಳೊಂದಿಗೇ ರೂಪಾಂತರಗೊಂಡು ಮರುಹುಟ್ಟು ಪಡೆಯುತ್ತಿವೆ ಎಂಬ ತಿಳಿವು ಅರಳಿದ ಕಾಲವಿದು. ಜಾತಿವ್ಯವಸ್ಥೆ ಮತ್ತು ವರ್ಗವ್ಯವಸ್ಥೆಗಳು ಲಿಂಗತಾರತಮ್ಯದ ಹೆಗಲ ಮೇಲೆ ತಮ್ಮ ಭಾರವನ್ನು ಇಳಿಬಿಟ್ಟಿವೆ-ಎಂಬೆಲ್ಲ ತಾತ್ತ್ವಿಕ ಜಟಿಲತೆಗಳು ಅನಾವರಣವಾದಂತೆಲ್ಲ, ಮಹಿಳಾ ಸಂವೇದನೆಯು ತನ್ನ ಮೇಲೆ ಹೇರಿಕೆಯಾಗಿರುವ ಶೋಷಣೆಯ ಪದರುಗಳನ್ನು ವಿವರಿಸಿಕೊಂಡಿತು. ಈ ಹಂತದ ಬಲುಮುಖ್ಯ ಹೆಜ್ಜೆಯೆಂದರೆ, ಶೋಷಕನ ಪಾತ್ರದಲ್ಲಿರುವ ಪುರುಷನನ್ನು ಶೋಷಕನಲ್ಲವೆಂದು, ಜೀವಯಾನದ ಸಹವರ್ತಿಯೆಂದು ಮನವರಿಕೆ ಮಾಡಿಕೊಂಡಿದ್ದು ಮತ್ತು ಅವನಿಗೂ ಮನವರಿಕೆ ಮಾಡಿಸುವ, ಜವಾಬ್ದಾರಿಕೆಯನ್ನು ನೆನಪಿಸುವ ತಾತ್ವಿಕ ಖಚಿತತೆಯನ್ನು ತೋರಿದ್ದು-

ಹುಟ್ಟೆಂಬುದು ಉರಿಕೊಳ್ಳಿ
ಬಾಲ್ಯವೊಂದು ಅಗ್ನಿಕುಂಡ
ಯೌವನವು ಕಾಳ್ಗಿಚ್ಚಾದ ನನಗೆ
ಬೆಳಕಿನ ಸುಖ ಗೊತ್ತಿಲ್ಲ ಸಖ (ಸುಕನ್ಯಾ ಮಾರುತಿ)

ಈ ತಾತ್ವಿಕ ತಿಳಿವು ಪ್ರತಿರೋಧದ ವ್ಯಾಕರಣವನ್ನೇ ಬದಲಿಸಿತು. ವಿರೋಧ ಎಂದರೆ ದಟ್ಟವಾದ ರೆಟೊರಿಕ್ ಆದ ನಿರಾಕರಣೆ ಮಾತ್ರವೇ ಅಲ್ಲ. ತುಳಿದ ಕಾಲುಗಳನ್ನು ಕ್ಷಮಿಸಿ, ಸಹಯಾನದ ಹೊಸ ಪರಿಭಾಷೆಗೆ ಸನ್ನದ್ಧಗೊಳಿಸುವುದು ಎನ್ನುವಲ್ಲಿ ಮಹಿಳಾ ಕಾವ್ಯದ ಸೊಗಸುಗಾರಿಕೆಯ ಹೊಡೆಹಿರಿಯತೊಡಗಿತು.

**(ii)** ಅರಿವೆಂಬ ಪ್ರತಿಭಟನೆ : ಅರಿವು ಸಂಚಯಿತವಾಗುವ ಹಂತ, ಸಂವೇದನೆಯ ಜೀವ-ಸಾವಿನ ಅನೂಹ್ಯ ಗಳಿಗೆಯಾಗಿರುತ್ತದೆ. ಸಿದ್ಧ ಸಾಮಾಜಿಕ ನಡೆ-ನೀತಿಗಳು ಪುರುಷ

ಲೋಕವನ್ನು ಮಾತ್ರ ಮಂಪರಿಗೆ ತಳ್ಳಿಲ್ಲ. ಅದು ಮುಖ್ಯವಾಗಿ ಹೆಣ್ಣನ್ನು ದುರ್ಬಲ, ಪರಾವಲಂಬಿ, ಸ್ವತ್ವದ ಎಚ್ಚರವಿಲ್ಲದ ಬಂದಳಿಕೆಯಾಗಿಸುತ್ತದೆ. ಹೆಣ್ಣು, ತನ್ನೊಳಗೆ ಬೆರೆತ, ತನ್ನ ಸುತ್ತ ನೇಯ್ದ 'ತನ್ನ ನೂಲ ತಾನೇ ಸುತ್ತಿ ಸಾವ ಪರಿ'ಯಿಂದ ಬಿಡುಗಡೆಯನ್ನು ಪಡೆಯಬೇಕಾಗಿದೆ. ಪ್ರತಿಭಟನೆಯೆಂಬುದು ತನ್ನೊಂದಿಗೆ ತಾನೇ ನಡೆಸುವ ಒಳಬಂಡಾಯವಾಗಬೇಕು. ಬದಲಾವಣೆ ತನ್ನೊಳಗೆ ಸಂಭವಿಸಬೇಕು. ಇದುವರೆಗೂ ತಾನು ನಂಬಿದ ಲೋಕವೊಂದು ತನ್ನೊಳಗೇ ಹತ್ಯೆಗೊಳ್ಳಬೇಕು. ಈ ಸ್ವಹತ್ಯೆ ಮತ್ತು ಹೊಸ ಹುಟ್ಟುಗಳು ಲೋಕವೇ ಪ್ರಳಯಗೊಂಡು, ಕೆಡುಕು ಕೊಚ್ಚಿಹೋಗಿ ಒಳಿತು ಮರುಜನಿಸಲಿ ಎಂಬ ನಿರೀಕ್ಷೆಗಿಂತಲೂ ಕಠಿಣವಿದ್ದೀತು. ಇರಲಿ, ಎಂಬ ವಿಸ್ತರಣೆಯನ್ನು ಮಹಿಳಾ ಅಭಿವ್ಯಕ್ತಿಯು ಸಾಧಿಸಿತು. ಆಗ–

(i) ನಾವು ಹುಡುಗಿಯರೇ ಹೀಗೆ
ಏನೇನೋ ವಟಗುಟ್ಟಿದರೂ
ಹೇಳಬೇಕಾದ್ದನ್ನು ಹೇಳಲಾಗದೆ
ಏನೇನೆಲ್ಲ ಅನುಭವಿಸಿ ಸಾಯುತ್ತೇವೆ (ಪ್ರತಿಭಾ ನಂದಕುಮಾರ್)

(ii) ನಾವು ಪತಿವ್ರತೆಯರಲ್ಲ
ನಿಮ್ಮ ಕಾಮಾಗ್ನಿಕುಂಡಕ್ಕೆ
ಶೀಲವನು ಬಲಿಗೊಟ್ಟು
ಪ್ರಾತಃಕಾಲದ ಸ್ಮರಣೆಯಲಿ
ಸಿಕ್ಕಿ ನರಳುವವರು
ನಾವು ಪತಿವ್ರತೆಯರಲ್ಲ (ಎಚ್.ಎಸ್. ಮುಕ್ತಾಯಕ್ಕ)

(iii) ಸೂರ್ಯ ಮುಳುಗಿದನೆಂದರೆ
ಪೃಥ್ವಿಯೇಕೆ ಕತ್ತಲಾಗಬೇಕು?
ಅರ್ಥವಿಲ್ಲ (ವೈದೇಹಿ)

ಹೆಣ್ಣಿನ ಸ್ವಯಂಭೂ ನೆಲೆಯ ಶೋಧನೆಯ ಹಂತದಲ್ಲಿ ಹೀಗೆ ಅಭಿವ್ಯಕ್ತಿಯು ಅಗಣಿತ ಚೆಲುವು ಹೊರಹೊಮ್ಮಿದವು. ಅಭಿವ್ಯಕ್ತಿಯ ಈ ಗೆಲುವು ಬದುಕಿನ ಗೆಲುವಿನ ಸಂಕಥನವೂ ಆಗಿತ್ತು. ಅಕ್ಷತಾ ಹುಂಚದಕಟ್ಟೆ ಕವನ ಸಂಕಲನಕ್ಕೆ ಮುನ್ನುಡಿಯನ್ನು ಬರೆಯುತ್ತ ಪ್ರತಿಭಾ ನಂದಕುಮಾರ್– 'ಹಳೆಯ ಕಾಲದ ಹೆಂಗಸರಿಗೆ ಸಾಹಿತ್ಯ ರಚನೆ ಬರೀ ಬರೆಯುವ ಕ್ರಿಯೆ ಆಗಿರಲಿಲ್ಲ. ಅನೇಕ ಇತರ ಸಂಗತಿಗಳೊಂದಿಗದು ತಳಕು ಹಾಕಿಕೊಂಡಿತ್ತು' ಎನ್ನುವುದು ಈ ಕಾರಣಕ್ಕಾಗಿಯೇ. ಪರಂಪರೆಯು ನಿಗದಿಗೊಳಿಸಿ ಚಾಲ್ತಿಯಲ್ಲಿಟ್ಟ ಎಲ್ಲ ಮಿಥ್‌ಗಳನ್ನು ಮರುಮೌಲ್ಯಮಾಪನಕ್ಕೆ ಒಡ್ಡುವ ಮತ್ತು ಆಯ್ದು ಕಟ್ಟುವ, ನಿರಾಕರಿಸುವ ಹಕ್ಕುದಾರಿಕೆಯ ಬಿಡುಬೀಸುಗಳೂ ಮಹಿಳಾ ಭಾಷೆಯಲ್ಲಿ ಸೇರ್ಪಡೆಗೊಂಡ ಹಂತವಿದು.

**(iii) ಸ್ವ ಶೋಧನೆಯ ನೆಲೆ :** ಪರಂಪರೆಯು ವಹಿಸಿದ ಪಾತ್ರಗಾರಿಕೆಯ ಭಾರವನ್ನು ಇಳುಹಿದ ಮೇಲೆ, ತಾನು ಏನು? ತನ್ನ ಬೇಕು ಬೇಡಗಳೇನು? ತನ್ನ ಇತಿಮಿತಿಗಳೇನು? ಸಾಧ್ಯತೆಗಳೇನು? ಎಂಬ ಬಲುಭಾರದ ಹೆಜ್ಜೆಗಳನ್ನು ಊರಿ ಮುನ್ನಡೆಯುವುದು ಅನಿವಾರ್ಯವಾಗಿತ್ತು. ಈ ಸ್ವ ಸೋಧನೆಯ ನೆಲೆಯಲ್ಲಿ ಪರಂಪರೆಯ ಶೋಧ ಮತ್ತು ಸ್ವ ಮಾದರಿಗಳ ನಿರ್ಮಿತಿಯ ಹಾದಿ ತೆರೆಯಿತು. ಪಿತೃ ವ್ಯವಸ್ಥೆಯು ರೂಪಣಗೊಳಿಸಿದ್ದ ಪುರಾಣಗಳ ಸ್ತ್ರೀ ಮಾತೃಕೆಗಳನ್ನು ಮರುನಿರ್ವಚನಕ್ಕೆ ಒಳಗುಮಾಡುವುದು, ಹೆಣ್ಣಿನ ಸಾಧನೆಯ ಇತಿಹಾಸವನ್ನು ಅಲಕ್ಷ್ಯಗೊಳಿಸಿದ ಅಥವಾ ತಪ್ಪು ವ್ಯಾಖ್ಯಾನಕ್ಕೆ ಒಳಗುಪಡಿಸಿದ್ದನ್ನು ಪ್ರಶ್ನಿಸುವುದು, ಹೆಣ್ಣನ್ನು ಹದ್ದುಬಸ್ತಿನಲ್ಲಿಡಲು ನಿರ್ಮಿತಗೊಂಡ ಪುರಾಣ–ಮಹಾಕಾವ್ಯಗಳ ಸ್ತ್ರೀಪಾತ್ರಗಳನ್ನು ಮರುಶೋಧನೆಗೆ ಒಡ್ಡುವುದು–ಮಹಿಳಾ ಅಭಿವ್ಯಕ್ತಿಯ ಸಂದರ್ಭದ ಮಹತ್ವದ ನಿಲುವಾಗಿದೆ. ಈ ಶೋಧನೆಯು ವರ್ತಮಾನವನ್ನು ಸ್ಪಷ್ಟೀಕರಿಸಿಕೊಳ್ಳುವ ವಿಧಾನವೂ ಆಗಿತ್ತು. ಇದನ್ನು ಡಿ.ಆರ್. ನಾಗರಾಜ್– ಶೋಷಿತ ಸಂವೇದನೆಯು ಸ್ವ ರಕ್ಷಣೆಗಾಗಿ ಸೃಷ್ಟಿಸಿಕೊಳ್ಳುವ ಅಡಗುದಾಣ ಎಂದು ಕರೆದರು. ಈ ಅಡಗುದಾಣಗಳು ಪರಂಪರೆಯ ಪುನರ್ ವ್ಯಾಖ್ಯಾನವಷ್ಟೇ ಆಗಿರಲಿಲ್ಲ. ವರ್ತಮಾನದ ಉಸಿರ್‌ದಾಣಗಳೂ ಆಗಿದ್ದವು. ಸೀತೆ, ದ್ರೌಪದಿ, ಮಂಡೋದರಿ, ಅಮೃತಮತಿ, ಮೋದಾಳಿ, ಅಕ್ಕ, ನೀಲಾಂಬಿಕೆ ಹೀಗೆ ಅಸಂಖ್ಯೆ ಮುಖಾಮುಖಿಗಳು ನಡೆದವು. ಪಿತೃ ಪ್ರಾಧಾನ್ಯತೆಯು ಮೌಲ್ಯ, ಆದರ್ಶ, ತ್ಯಾಗಗಳ ಉರುಳಿನಲ್ಲಿ ಬಿಡಿಸಿಕೊಳ್ಳಲಾಗದ ಜಂಜಾವಾತವನ್ನು ಸೃಷ್ಟಿಸಿತ್ತು. ಅದನ್ನು ನಿರಾಕರಿಸುವುದು ಅಸಾಧ್ಯವಾಗಿತ್ತು. ಅಂತಹ ಇಕ್ಕಟ್ಟಿನಲ್ಲಿಯೂ, ಬೆಳಕು ಕೊಡುವ ಜಾಜ ಹೊತ್ತ ದೀಪವು ಮೈ ಸುಡುತ್ತದೆ ಎಂದಷ್ಟೇ ಹಾಸ್ಯಾಸ್ಪದವಾಗಿ ಕೇಳಿಬರಬಲ್ಲದಾದರೂ ಅದನ್ನು ನಿರೂಪಿಸುವ ಅಗತ್ಯವನ್ನು ನಿರ್ವಹಿಸಲಾಯಿತು. ಶಕುಂತಲೆಯ ಬಾಳಿನಲ್ಲಿ ಆಸೆ ಕನಸು ಕಲ್ಪನೆಗಳೆಲ್ಲ ದಹಿಸಿಯೇ ಬಂದ ಸರ್ವದಮನ (ಎಂ.ಆರ್. ಕಮಲ) ಕಂಡಿದ್ದು ಈ ಹಂತದಲ್ಲಿ. ವಡ್ಡಾರಾಧನೆಯಲ್ಲಿ ಪಿತೃವ್ಯವಸ್ಥೆಯ ಸೀಮೆಯನ್ನು ಉಲ್ಲಂಘಿಸಿ ಅನೀತಿಯ ರೂಪಕವಾದ ಮೋದಾಳಿಯ ಪಾತ್ರವನ್ನು ಸ. ಉಷಾ ಅವರು, ಪ್ರೀತಿಸುವ ಹಕ್ಕಿಲ್ಲದ ಹೆಣ್ಣಿನ ತಣ್ಣನೆಯ ಯಾತನೆಯ ಸುದೀರ್ಘ ಕಥನ ಕವಿತೆಯಾಗಿಸಿದರು. ಲೈಂಗಿಕ ಮೋಹದ ನೈಚ್ಯಾನುಸಂಧಾನಕ್ಕೆ ಹೆಸರಾದ ಅಮೃತಮತಿಯ ಪಾತ್ರವು ಎಚ್.ಎಲ್. ಪುಷ್ಪಾ ಅವರಲ್ಲಿ– ಹೆಣ್ಣಿನ ಆಯ್ಕೆಯ ಅನಿವಾರ್ಯತೆ ಮತ್ತು ಅಧಿಕಾರವಲಯವನ್ನು ಪ್ರತಿಪಾದಿಸುವ ಎಲ್ಲ ಹೆಣ್ಣುಗಳ ಅಂತರಂಗದ ಧ್ವನಿಯಾದ 'ಅಮೃತಮತಿಯ ಸ್ವಗತ'ವಾಯಿತು.

ಪರಂಪರೆಯ ನಿಲುವುಗಳನ್ನು ನಿರಾಕರಿಸುವುದು ಎಂದರೆ ಎದುರಿರುವ ಖಾಲಿತನವನ್ನು ಸ್ವ ಮಾದರಿಯ ಮೂಲಕ ತುಂಬುವ ಸವಾಲನ್ನು ಎದುರಿಸುವುದೂ ಆಗಿದೆ. ಈ ಹಂತದಲ್ಲಿ ನಾನೊಂದು ಗುಬ್ಬಿ, ಇಣಚಿ, ಮೊಲ... ಎಂಬ, 'ನಾನೊಂದು ಪುಟ್ಟ ಹುಲ್ಲುಗರಿಕೆ. ಹುಲ್ಲುಗರಿಕೆಯಾಗಿಯೂ ನನ್ನ ಬೇರನ್ನು ನಾನೇ ಕಚ್ಚಿ ನಿಲ್ಲುತ್ತೇನೆ'– ಎಂಬ ಅಲ್ಪತ್ರಾಣದ ತೃಪ್ತಿಯನ್ನು ರೂಪಿಸಬೇಕಾಯಿತು.

ಹೆಣ್ಣಿನ ಬೇಕು-ಬೇಡಗಳನ್ನು, ಮಿತಿ-ಸಾಧ್ಯತೆಗಳನ್ನು ಪಿತೃಪ್ರಧಾನ ವ್ಯವಸ್ಥೆಯು ವ್ಯಾಖ್ಯಾನಿಸಿತ್ತು. ಅದನ್ನು ವಿಮರ್ಶಿಸುವ ಸಂದರ್ಭದಲ್ಲಿ ಹೆಣ್ಣು ಬಾಳನ್ನು ಆವರಿಸಿಕೊಂಡಿರುವ ಸಂಬಂಧಗಳನ್ನು ನಿಕಷಕ್ಕೆ ಒಡ್ಡಲಾಯಿತು. ಆಗ ಅತಿಹೆಚ್ಚು ಮರುಶೋಧನೆಗೆ ಒಳಗಾಗಿದ್ದು ದಾಂಪತ್ಯ ಸಂಬಂಧ.

ಅದುವರೆಗಿನ ದಾಂಪತ್ಯದ ನಿರ್ವಚನ ಹೆಣ್ಣಿನ ಆಯ್ಕೆ-ಆದ್ಯತೆಗಳ ಪ್ರಶ್ನೆಯೇ ಇಲ್ಲದೆ ಬರಿಯ ಹೊಂದಾಣಿಕೆಯಾಗಿ, ಒಳಗುದಿಯನ್ನು ಸೃಷ್ಟಿಸಿತ್ತು. ಸಾಮಾಜಿಕ ಬದುಕಿನ ಹೊರ ಆವರಣ ಬದಲಾದರೂ, ಸಂಸ್ಕೃತಿ ನಿಷ್ಠತೆಯ ಭ್ರಮೆಯಲ್ಲಿ ಹಳೆಯ ಆಚರಣೆಗಳೇ ಮುಂದುವರಿಯತೊಡಗಿದವು. ಪಕ್ಕದಲ್ಲೇ ಅಂಗಾತ ಮಲಗಿದ ಅಪರಿಚಿತ. ಬೆರಳು ಸೋಕಿಸದೆ ನೆರಳು ಹಾಯಿಸದೆ ಹತ್ತಿರವಾದವ- ಎಂಬ ದುಗುಡದ ಅಭಿವ್ಯಕ್ತಿ ಕಾಣುತ್ತದೆ. ನಿಜಕ್ಕೂ ಹೆಣ್ಣಿಗೆ ಬೇಕಿರುವುದೇನು? ಸಾಂಗತ್ಯದ ಯಾವ ಪಲಕನ್ನವಳು ಬಯಸುತ್ತಾಳೆ? ಎಂಬ ಶೋಧನೆ, ಎದುರಿರುವವರಿಗೆಲ್ಲ ಸ್ವತಃ ಅವಳಿಗೂ ಹೊಸದೆನ್ನಿಸುವ ಹುಡುಕಾಟ ನಡೆಯಿತು.

> ಗಂಡ ಸಿಗಬಹುದು, ಗಂಡು
> ಸಿಗಬಹುದು, ಗಂಡನೊಳಗಿನ
> ಗಂಡು ಹುಡುಗ ಬೇಕೆನಗೆ (ಹೇಮಾ ಪಟ್ಟಣಶೆಟ್ಟಿ)

ಈ ಶೋಧನೆಗೆ, ಈ ಭಾವತೀವ್ರತೆಗೆ ಅಪರೂಪಕ್ಕೆ 'ಮೊಣಕಾಲ ಗಂಟಿಗೆ ಆಧಾರಕೊಟ್ಟು ಸಂಭಾಳಿಸಿದ ಅವನು' ದೊರೆಯುತ್ತಾನೆ. ಆದರೆ ಬಹುಪಾಲು ದಕ್ಕಿದ್ದು-

> ಸಂಸಾರವೆಂಬ ಮುಳ್ಳುಕಂಟಿ ಹೆಗಲಮೇಲೆ
> ಎತ್ತ ವಾಲಿದರೂ ಗೀರುತ್ತದೆ (ಎಚ್.ಎಲ್ ಪುಷ್ಪಾ)

ಎಂಬ ಬಿಸುಸುಯ್ಲು. ಸಾಮಾಜಿಕ ವ್ಯವಸ್ಥೆಯ ಪಲ್ಲಟಗಳೊಂದಿಗೆ ಕೌಟುಂಬಿಕ ವ್ಯವಸ್ಥೆಯೂ ಮರಮರಳಿ ಸರಿಪಡಿಸುವಿಕೆಗೆ ಒಳಗಾಯಿತು. ಆದರದು ಹೆಣ್ಣಿಗೆ ಹಿತಕಾರಿಯಾಗಲು ಸಾಧ್ಯವಾಯಿತೇ? ಎಂಬ ಪ್ರಶ್ನೆಯಿದು. ವ್ಯವಸ್ಥೆಯ ಸ್ಥಾಪಕ ಗುಣಧರ್ಮದಲ್ಲಿಯೇ ಪದರುಗಟ್ಟಿ ಹೋಗಿರುವ ಅಸಮಾನತೆಯನ್ನು ಸ್ವ ಚಾಲಾಕಿತನದ ಮೂಲಕ ಸ್ವ ನಿರ್ಣಯದ ಮೂಲಕ ನೀಗಿಸಿಕೊಳ್ಳಬೇಕಾದ ಅನಿವಾರ್ಯತೆಯ ಜರೂರನ್ನು ಈ ಹಂತದ ಮಹಿಳಾ ಅಭಿವ್ಯಕ್ತಿ ಸಾಬೀತುಗೊಳಿಸಿದೆ.

**(iv) ಲೋಕ ಮೀಮಾಂಸೆಯ ನೆಲೆ :** ಜಗತ್ತಿನ ಕಣ್ಣಿನಲ್ಲಿ ತಾನು ಏನು, ಏನಾಗಿರಬೇಕು ಎಂಬುದನ್ನೇ ನಿರಂತರವಾಗಿ ಕೇಳಿಸಿಕೊಂಡವಳು ತನ್ನ ಕಣ್ಣಲ್ಲಿ ಕಾಣುವ ಪ್ರಪಂಚವನ್ನು ದಾಖಲಿಸುವುದು ವಿಸ್ಮಿತ ಸ್ಥಿತಿಯೇ ಆಗಿತ್ತು. ಹೆಣ್ಣಿನ ಸಂವೇದನೆಯು ಅಭಿವ್ಯಕ್ತಿಯ ಸುದೀರ್ಘ ಪಯಣವನ್ನು ಪೂರೈಸಿ, ಲೋಕಸಂಗತಿಗಳೊಂದಿಗೆ ನೇರ ಸಂಘರ್ಷಕ್ಕಿಳಿಯಲೇಬೇಕಾದ ಒತ್ತಡವನ್ನು, ಮುಕ್ತ ಮಾರುಕಟ್ಟೆ ನೀತಿಯನ್ನು ಒಪ್ಪಿದ

ಸಮಾಜವು ತಂದೊಡ್ಡಿತು. ಬದಲಾವಣೆ ಬಯಸುತ್ತ, ತಾನೂ ಯಾಜಮಾನ್ಯದ ಸೋಂಕುರೋಗಕ್ಕೆ ಬಲಿಯಾಗುವ, ವ್ಯವಸ್ಥೆಯ ಸಿದ್ಧ ಮಾದರಿಗಳಲ್ಲಿಯೇ ಬಿಡುಬೀಸಾಗಿ ನಡೆದುಬಿಡುವ, ತನ್ನೊಳಗಿನ ಮಾರ್ದವತೆ ಇಂಗಿ ಮನಸ್ಸು ಮರುಭೂಮಿಯಾಗಬಹುದಾದ, ಮನಸ್ಸು ಗೋಳಿನ ಕೀಳುರೋಗಕ್ಕೆ ಬಲಿಯಾಗಬಹುದಾದ ಅಪಾಯದ ಬಗ್ಗೆ ಮಹಿಳಾ ಸಂವೇದನೆ ಎಚ್ಚರ ವಹಿಸಿದೆ.

ಇಷ್ಟು ವರ್ಷ ಅವರೆಲ್ಲರ
ಬದುಕನ್ನು ಸಲೀಸುಗೊಳಿಸಲು
ಬದುಕನ್ನೇ ತೇಯುತ್ತಿದ್ದೇನೆಂಬ
ಭ್ರಮೆಯಿತ್ತಲ್ಲ ಅದನ್ನು ಬಿಡು
. . . . ಪಡೆಲ್ ಒತ್ತು
ಸೂರ್ಯನಿನ್ನೂ ಪೂರ್ಣ ಮರೆಯಾಗಿಲ್ಲ (ಅಕ್ಷತಾ ಹುಂಚದಕಟ್ಟೆ)

ಹೆಣ್ತನದ ಹರಲಿಯನ್ನೇ ಹರವಿಡುತ್ತಿದ್ದರೆ, ಸೂರ್ಯನೂ ಕರಗಿ ಬಿಸಿಲೂ ಕಂತುಹೋಗಿ ಆಯವೇ ಸಂದುಹೋದೀತು ಎಂಬ ನೈತಿಕ ಎಚ್ಚರವಿದು. ಕುರುಕ್ಷೇತ್ರ ಯುದ್ಧ ಭೂಮಿಯಲ್ಲಿ ನಿಂತು, 'ಮಗನೇ ಸತ್ತ ಮಗಂದಿರ್ ಸತ್ತರ್, ನೀನೆಮಗುಳ್ಳೊಡೆ ಉಂಟು ರಾಜ್ಯಂ' ಎಂದು ದುರ್ಯೋಧನನನ್ನು ಬೇಡಿಕೊಳ್ಳುವ ಗಾಂಧಾರಿಯ ತಾಯಪ್ರಜ್ಞೆಯ ಜಿಗುಟುತನವನ್ನು ಮಹಿಳಾ ಪ್ರಜ್ಞೆ ಪ್ರಕಟಿಸಿದೆ. ಮಗುವಿನ ಹೇಲು-ಉಚ್ಚೆ ಬಳಿದಷ್ಟೇ ಸಲೀಸಾಗಿ; ಸುತ್ತಲ ಬದುಕಿನ ಕತ್ತಲನ್ನು ಸರಿಸುವ ಅದಮ್ಯ ಆತ್ಮತ್ರಾಣವನ್ನು ಪ್ರಕಟಿಸಿದೆ. ಜೀವಕಾಯುವ ಗುಟ್ಟುಗಳನ್ನು ಮುಂದಿನ ತಲೆಮಾರಿಗೆ ಕೈದಾಟಿಸುತ್ತಲೇ ಇದೆ. ಅಡಿಗೆಯನ್ನು ಕಲಿಸುವಷ್ಟೇ ನಿಸೂರಾಗಿ, ಒಂದು ಚಿಗುರು ಚಿವುಟಿದರೆ ಒಂದಕ್ಕೆ ಎರಡಾಗಿ, ಹತ್ತಾಗಿ, ನೂರಾಗಿ ಹಬ್ಬುತ್ತೇನೆ- ಎಂಬ ವಿಶ್ವಾಸದಲ್ಲಿ. ತನ್ನದು ಕಿರುದಾರಿ, ಕಾಲುದಾರಿ; ಪುರುಷ ಪ್ರಧಾನ ಚಿಂತನೆಯದ್ದು ಹೆದ್ದಾರಿಯ ನಡೆ- ಎಂಬ ಗೋಣಗಾಟವನ್ನು ಮುಕ್ತಾಯಗೊಳಿಸಿ, ಲೋಕವನ್ನು ಸಾಂತ್ವನದಿಂದ ಸ್ಪರ್ಶಿಸುವ ಧೀರ ನಡೆಯಿದು. ತಾಯ್ತನದ ಕುರಿತ ಹುಸಿ ವೈಭವೀಕರಣವನ್ನು ನಿಷ್ಠುರವಾಗಿ ನಿರಾಕರಿಸುವ 'ಗುಡ್ ಮದರ್ ಸಿಂಡ್ರೋಮಾ'ವನ್ನು ವ್ಯಂಗ್ಯದಿಂದ ನೋಡುವ ಸ್ತ್ರೀವಾದ ತಾಯ್ತನವನ್ನು ಘನತೆಯಿಂದ ನೋಡುವ ವಿವೇಕವನ್ನು ಅಲ್ಲಗಳೆಯುವುದಿಲ್ಲ.

ದೇವರೇ
ನಾವು ನಿನ್ನನ್ನು ಅನುವಾದಿಸುತ್ತಿದ್ದೇವೆ
ಕ್ಷಣಕ್ಷಣವೂ ನೀನು ಅನುವಾದಗೊಳ್ಳುತ್ತೀಯ
ಭೂಮಂಡಲದ ಮೇಲಿರುವ ಅಷ್ಟೂ ಭಾಷೆಗಳಲ್ಲಿ
ಏಕಕಾಲಕ್ಕೆ ಎಲ್ಲೆಡೆಯಲ್ಲಿ
ಎಲ್ಲ ತಾಯಂದಿರ ಅಪ್ರಕಟಿತ ಸಾಹಿತ್ಯದಲ್ಲಿ (ಲಲಿತಾ ಸಿದ್ಧಬಸವಯ್ಯ)

ಹೆಣ್ಣು ಬರೆಯುತ್ತಲೇ ಇರುವ ಅಲಿಖಿತ ಚರಿತ್ರೆಯನ್ನು ಇನ್ನಾದರೂ ಓದಲು ಕಲಿಯಬೇಕು ಎಂಬ ಎಚ್ಚರವಿದು. ಮೃದುವಾಗಿಯೂ ಖಚಿತವಾಗಿರುವ, ಹೆಣ್ಣಾಗಿರುವುದು ಎಂದರೆ ತನ್ನನ್ನು ತಾನು ವೈಭವೀಕರಿಸಿಕೊಳ್ಳುವುದಲ್ಲ. ಉನ್ನತೀಕರಿಸಿಕೊಳ್ಳುವುದು ಎಂಬ ಎಚ್ಚರದ ಅಗ್ನಿದಿವ್ಯವಿದು.

ಈ ಸ್ಥಿತಿಯಲ್ಲಿ, ಜಾಗತೀಕರಣದ ಪಲ್ಲಟವು ಅಸಹಾಯಕ ವರ್ಗಗಳನ್ನು ಕಾಲಕೆಳಗಿನ ಚಿಮ್ಮು ಹಲಗೆಯಾಗಿಸಿಕೊಂಡಿತ್ತು. ಆರ್ಥಿಕ ದಬ್ಬಾಳಿಕೆಯು ಸಾಂಸ್ಕೃತಿಕ ದಬ್ಬಾಳಿಕೆಯನ್ನು ಒಳಗೊಂಡೇ ಇರುತ್ತದೆ. ಸಮಾಜ ಕೊಳ್ಳುವವರು-ಮಾರುವವರು ಎಂಬ ಹೊಸ ತಾರತಮ್ಯದಲ್ಲಿ ವಿಭಜಿತವಾಗತೊಡಗಿದಂತೆ ಹೆಣ್ಣು ಈ ಎರಡೂ ವಲಯಗಳಲ್ಲಿ ಸಕ್ರಿಯವಾಗಿರಬೇಕಾದ ಪದಾರ್ಥವಾದಳು. ಬಂಡವಾಳೋದ್ಯಮವು ಮಹಿಳೆಗೆ ಸಂಬಂಧಿಸಿದ ಎಲ್ಲವನ್ನೂ ತನ್ನ ಹಿತಾಸಕ್ತಿಗೆ ಬಳಸತೊಡಗಿತು. ಮಹಿಳೆ ಗ್ರಾಹಕ ಜಗತ್ತಿನ ಸರಕಾದಳು. ಜಾಗತೀಕರಣವು ಸಾಮಾಜಿಕ ನ್ಯಾಯದ ಪರಿಕಲ್ಪನೆಯನ್ನೇ ಅಪಮೌಲ್ಯಗೊಳಿಸಿತು. ಎರಡು ಬಗೆಯ ಹೊಸ ಸವಾಲುಗಳಿಗೆ ಅವಳು ಒಳಗಾಗತೊಡಗಿದಳು. (i) ಆಧುನಿಕತೆಯ ವೇಷದ ಜಾಗತೀಕರಣವು ಒಪ್ಪಿಸುತ್ತಿರುವ ಮೌಲ್ಯಗಳೊಂದಿಗೆ ನೇರ ಹಣಾಹಣಿಗೆ ಸಿದ್ಧವಾಗುವುದು, (ii) ಇದರಿಂದ ಪಾರುಗಾಣಿಸಲು ಮರಳಿ ಸತೀತ್ವದ-ಮಾತೃತ್ವದ ನೆಲೆಗೆ ಅಂಟಿಸುವುದು. ಇಂದು ದಬಾವಣೆಯು ಅವಳ ಸ್ವಾತಂತ್ರ್ಯ-ಸಮಾನತೆಯ ಹೆಸರಲ್ಲಿ ನಡೆಯುತ್ತಿದೆ.

ಇಂತಹ ಸ್ಥಿತಿಯು ಸಾಂಸ್ಕೃತಿಕ ತುರ್ತು ಪರಿಸ್ಥಿತಿಯನ್ನು ಘೋಷಿಸುವಂತೆ ಇತ್ತು. ಹೆಣ್ಣು, ಸಮಾಜದ ವ್ಯಕ್ತಿಯಾಗಿ ಬದಲಾಗುತ್ತಿರುವ ವಿದ್ಯಮಾನಗಳನ್ನು ಪರೀಕ್ಷಿಸುವ ಅಗತ್ಯ ಬಿತ್ತು. ಹೆಣ್ಣಿನ ತಾಯ್ತನ, ಕೇವಲ ಜೈವಿಕ ಕ್ರಿಯೆಯಾಗಿ; ತಾಯಿ-ಮಗುವಿನ ಸಂಬಂಧವೂ ಹಳಸಿ, ಮಗು ಅನಾಥ ಪ್ರಜ್ಞೆಯಲ್ಲಿ ಬಳಲುವುದನ್ನು- ಮಾನವ ಸಂಪನ್ಮೂಲದ ನಾಶದ ಅನಾಚಾರ ಎಂಬ ತೀವ್ರತೆಯಲ್ಲಿ ಮಹಿಳಾ ಅಭಿವ್ಯಕ್ತಿ ರೂಪಿಸಿದೆ. ಧರ್ಮ ಮತ್ತು ಧಾರ್ಮಿಕ ನಂಬಿಕೆಗಳು ಹೆಣ್ಣಿನ ಬದುಕನ್ನು ಪುರುಷ ನಿಯಂತ್ರಣಕ್ಕೆ ಒಪ್ಪಿಸಲಿಕ್ಕಾಗಿಯೇ ಮಾಡಿಕೊಂಡ ಸೌಲಭ್ಯಗಳು. ಅವು ಎಂದೂ ಹೆಣ್ಣಿನ ಹಿತ ಕಾದಿಲ್ಲ. ಜೀವಸಂಬಂಧದ ಸೊಗಸು ಸೋತು, ಜಲದ ಮಂಪಟದ ಮೇಲೆ ಉರಿಯ ಚಪ್ಪರವನ್ನಿಕ್ಕಿದ-ಸ್ಥಿತಿಯೇ ನಿರ್ಮಾಣವಾಗುತ್ತದೆ. ಶಶಿಕಲಾ ವೀರಯ್ಯಸ್ವಾಮಿ ಉಡುಪಿಯ ಕೃಷ್ಣನ ಬಗ್ಗೆ, ಸುಕನ್ಯಾ ಮಾರುತಿ ಅಹಲ್ಯೆಯ ಬಗ್ಗೆ, ಲಲಿತಾ ಸಿದ್ಧಬಸಯ್ಯಾ ಇರುಮುಡಿಯ ಬಗ್ಗೆ ಬರೆದ ಪದ್ಯಗಳು-ಹೀಗೆ ಧರ್ಮಕಾರಣವನ್ನು ಎದುರಿಸಿದ ಒಂದು ಪರಂಪರೆಯೇ ಇದೆ. ಸವಿತಾ ನಾಗಭೂಷಣರ 'ಸಮಯವಿದೆಯೇ ಪಪ್ಪಾ?' ಸಜಿತಾ ಬನ್ನಾಡಿಯವರ 'ಗಾರ್ಮೆಂಟ್ ಹುಡುಗಿ' ಅಕ್ಷತಾ ಹುಂಚದಕಟ್ಟೆ ಬರೆದ 'ಸರ್ಕಸ್ಸಿನ ಹುಡುಗಿ' ವೈದೇಹಿಯವರ 'ಬೆರಣಿ ತಟ್ಟುವ ಹುಡುಗಿ ಮತ್ತು ಚಂದ್ರಾಮ ದೇವರು' ಇಂತಹ ಹಲವಾರು ರಚನೆಗಳು ಕಾಡುತ್ತವೆ. ಬಂಡವಾಳವಾದದ ಸಹಜಾತವಾದ ಕೋಮುವಾದ-ಮತೀಯವಾದಗಳು

ಹೆಣ್ಣನ್ನು ಖಾಸಗಿ ಆಸ್ತಿಯಾಗಿಸುತ್ತವೆ. ದೌರ್ಜನ್ಯವು ಧರ್ಮಕಾರಣದ ಉನ್ಮಾದವನ್ನು ಅಂಟಿಸಿಕೊಳ್ಳುತ್ತದೆ. ಹೆಣ್ಣಿನ ಗರ್ಭಕ್ಕೂ ಧರ್ಮದ-ಜಾತಿಯ ಮೊಹರು ಹಾಕಲಾಗುತ್ತದೆ. ಹೆಣ್ಣಿಗೆ ಸಂಬಂಧಿಸಿದ ಎಲ್ಲವನ್ನೂ ತಪಶೀಲು ನಡೆಸುವ ಧರ್ಮದ ಚೆಕ್‌ಪೋಸ್ಟ್‌ಗಳು ತಲೆಯೆತ್ತುತ್ತವೆ. ಈ ದಿಗ್ಬಂಧನ ಬೆಳೆಯುತ್ತಿದ್ದಂತೆ ಅದನ್ನು ಕಟುವಾಗಿ ತಡೆವ, ಸ್ತ್ರೀವಾದಿ ಸಂಕಥನದ ಆತ್ಮಪ್ರತ್ಯಯದ ಹೊಡೆ ಬಿರಿಯಿತು. ಜಾತಿ-ಧರ್ಮಗಳನ್ನು ಬಳಸಿಕೊಳ್ಳುವ ಅಧಿಕಾರ ರಾಜಕಾರಣದ ಮೇಲದ ಲಿಂಗತಾರತಮ್ಯವನ್ನು ಸೀಳಿ ಸೀಳಿ ನರಳಿಸುವಾಗ ಸವಿತಾ ನಾಗಭೂಷಣರ 'ಮಹಮ್ಮದನಿಗೊಂದು ಪ್ರೇಮಪತ್ರ' ದಂತಹ ಕವಿತೆ ಹುಟ್ಟಿತು. ಕನ್ನಡ ಬರವಣಿಗೆಯೇ ಇಡಿಯಾಗಿ ಜೀವವಿರೋಧಿಯಾದ ಕೋಮುವಾದಿ ರಾಜಕಾರಣಕ್ಕೆ ಪರ್ಯಾಯವಾದ ಜೀವಧ್ವನಿಯಾಗಿ ತನ್ನನ್ನು ಸ್ಥಾಪಿಸಿಕೊಳ್ಳುತ್ತಿರುವ ಸಂದರ್ಭವಿದು. ಕಾವ್ಯ ಅದರಲ್ಲೂ ಮಹಿಳಾ ಕಾವ್ಯ ಲೋಕಮೀಮಾಂಸೆಯ ತನ್ನ ನೋಟವನ್ನು ಮೂಡಿಸಿತು. ಬಲಿಯುತ್ತಿರುವ ಹಿಂಸಾರತಿಯನ್ನು ತಣಿಸಲು ಹೆಣ್ತನದ ಜೀವದಾಯಿನಿಯನ್ನು ಸಮರ್ಪಿಸುವ ಬಗೆಯಿದು. 'ಕವಿಮೂಲ' ಎಂಬ ಕವಿತೆಯಲ್ಲಿ ಸವಿತಾ ನಾಗಭೂಷಣ ಬರೆದರು-

> ನನ್ನ ತಾಯಿ ಪರಾಶಕ್ತಿ, ನನ್ನ ತಂದೆ ಅಲ್ಲಾಹು
> ಏನು ಬೇಕಾದರೂ ತಿಳಿದುಕೊಳ್ಳಿ
> ನಾನು ಹಿಂದೂ ನಾನು ಮುಸ್ಲಿಂ
> ಹೇಗೆ ಬೇಕಾದರೂ ಕರೆದುಕೊಳ್ಳಿ.

ಮನುಷ್ಯತ್ವವನ್ನು ಹಲ್ಲೆಗೀಡು ಮಾಡುವವರನ್ನು ಪ್ರತಿಭಟಿಸುವ ಕೇಂದ್ರಪ್ರಜ್ಞೆ ಇದಾಗಿದೆ. ಸಮಕಾಲೀನ ಸಂಕಟಗಳು ಮನುಷ್ಯನನ್ನು ಅಸ್ವಸ್ಥನಾಗಿಸುತ್ತ ಹತಾಶೆಗೆ ತಳ್ಳುತ್ತಿರುವ ಸಂದರ್ಭದಲ್ಲಿ, ಸಾಹಿತ್ಯ ಅದನ್ನು ಉದಾಸಗೊಳಿಸುವುದು. ಕೃತಕ ಉತ್ಸಾಹವನ್ನು ಹೊದ್ದುಕೊಳ್ಳುವುದು ಸಾಧ್ಯವಿಲ್ಲ. ಮಹಿಳಾ ಕಾವ್ಯವು ಹೆಣ್ಣಿನ ಗರ್ಭಶಕ್ತಿಯನ್ನು ಅಪಮಾನಿಸುವ ಈ ಅಮಾನುಷತೆಯನ್ನು ವಿರೋಧಿಸುವ ಆಂತರಿಕ ದಂಗೆಯಂತಿದೆ. ಈ ಕಾಲಘಟ್ಟದಲ್ಲಿ ಬರೆಯುತ್ತಿರುವ ಎಲ್ಲ ತಲೆಮಾರಿನ ಲೇಖಕಿಯರೂ ಹಿಂಸಾಕಾಂಡವನ್ನು ಒಂದಲ್ಲ ಒಂದು ಬಗೆಯಲ್ಲಿ ಎದುರಾಗಿಸಿಕೊಂಡವರೇ. ಕೋಮುವಾದದ ಅಗಣಿತ ಸ್ತರಗಳನ್ನು ಹಿಡಿದಿಡಲು ಪ್ರಯತ್ನಿಸಿದವರೇ. ಮನುಷ್ಯ ಹೀಗಿದ್ದಾನೆ ಎಂದು ಕಾಣಿಸುವುದೋ ಅಥವಾ ಮನುಷ್ಯ ಹೀಗೇಕೆ ಇದ್ದಾನೆ ಎಂದು ಶೋಧಿಸುವುದೋ-ಕಲೆಯ ಕೆಲಸ ಯಾವುದು? ಎಂಬ ಬ್ರೆಕ್ಟನ ಪ್ರಶ್ನೆಯನ್ನು ಮಹಿಳಾ ಕಾವ್ಯ ಎತ್ತಿಕೊಂಡಿದೆ. ಬರಹಗಾರರಿಗೆ ಸಾಮಾಜಿಕತೆಯ ಗೊಡವೆಯೇಕೆ? ಎಂಬ ಪ್ರಶ್ನೆ, ಅಪೊಲಿಟಿಕಲ್ ಆಗಿ ಬರೆಯಬೇಕು ಎನ್ನುವುದೇ ಪೊಲಿಟಿಕಲ್ ಆದ ಸಂಗತಿ ಎಂಬುದನ್ನು ಮಹಿಳಾ ಅಭಿವ್ಯಕ್ತಿಯು ಅರಗಿಸಿಕೊಂಡಿದೆ. ಸಂವಹನಕ್ಕೆ ಹಲವು ಮಾಧ್ಯಮಗಳಿದ್ದಾಗಲೂ, ಪರಿಣಾಮಕಾರಿಯಾದ ದೃಶ್ಯಮಾಧ್ಯಮವೂ ಸೋಲೊಪ್ಪಿ ಕೊಳ್ಳಬಹುದಾದ ಸ್ಥಿತಿಯಲ್ಲಿ ಕಾವ್ಯವು ಗೆಲ್ಲುವುದು ಈ

ಕಾರಣಕ್ಕಾಗಿ. ಸಾಮಾಜಿಕ ಸಹಸ್ಪಂದನವೊಂದೇ ಕವಿತೆಯ ಮೇಲ್ಮೆ ಆಗದು. ಆದರೆ ತನ್ನ ಕಾಲಕ್ಕೆ ಬೆನ್ನು ಹಾಕುವ ಸೋಗಲಾಡಿತನವೂ ಕಾವ್ಯಧರ್ಮ ಆಗದು- ಎಂಬ ವಿಚಿತ್ರತೆಯಿದು. ಈ ಹೊತ್ತು ಹಲವು ಹೊಣೆಗಾರಿಕೆಯನ್ನು ತಂದು ಇಳುಹಿದೆ. ಅವುಗಳನ್ನು ನಿಭಾಯಿಸುವ ಸವಾಲನ್ನೂ ಎದುರಿಟ್ಟಿದೆ. ಹಾಗಾಗಿ ಪರಂಪರೆಯ ಮಾನವೀಯತೆಯ ಎಳೆಗಳನ್ನು ಹೊಯ್ದು ಕೌದಿಯ ಹಾಗೆ ಮಹಿಳಾ ಅಭಿವ್ಯಕ್ತಿಯ ಚಹರೆಯಿದೆ.

ಕನ್ನಡ ಸಂವೇದನೆಯೇ 'ತಾನು ಹೆಣ್ಣಾಗಬೇಕು' ಎಂಬ ಹೊಸ ನಿರ್ವಚನದತ್ತ, ಭಕ್ತಿ ಪರಂಪರೆಯ ಕಾಲದ ಕಣ್ಣೋಟವನ್ನು ಪಡೆಯಲೆತ್ನಿಸುತ್ತಿರುವ ಸಂದರ್ಭವಿದು. ಸಾಮಾಜಿಕವಾಗಿ ಸುಶಿಕ್ಷಿತ ಮಧ್ಯಮ ವರ್ಗದ ಮಹಿಳಾ ಬದುಕು ಬಂಡವಾಳವಾದ ಮತ್ತು ಕೋಮುವಾದಗಳ ಒಪ್ಪಿತಗಳನ್ನೇ ತನ್ನದೆಂದು ಗೃಹೀತವಾಗಿಸಿಕೊಂಡ ದುರಂತವಿದೆ. ಈ ಇಮ್ಮುಖಿ ಚಲನೆಯನ್ನು ಸಂಭಾಳಿಸಿಕೊಳ್ಳಬೇಕಾದ ಜವಾಬ್ದಾರಿಯೂ ಮಹಿಳಾ ಸಂವೇದನೆಯ ಸವಾಲಾಗಿದೆ. ಮಹಿಳಾ ಅಭಿವ್ಯಕ್ತಿ ಅಂದು ಹಾದು ಬಂದ ದಿವ್ಯಗಳು ಇಂದಿಲ್ಲ; ಅಭಿವ್ಯಕ್ತಿಯು ನಿಷೇಧವಾಗುವ, ಬರಹಕ್ಕಾಗಿ ಬದುಕನ್ನು ಅಡವಿಡಬೇಕಾದ ತುರ್ತುಗಳಿಲ್ಲ. ಆದರೆ, ಇಂದಿನ ಸ್ಥಿತಿ ಅರಿವಿಗೆ ಒದಗದಷ್ಟು ಸೂಕ್ಷ್ಮವಾಗಿದೆ. ಹೇರಳವಾದ ಅವಕಾಶ, ಪ್ರಸಿದ್ಧಿ, ಜನಪ್ರೀತಿ, ಸಂವಹನ ಮಾಧ್ಯಮಗಳ ಜಾಲತಾಣಗಳ ಸ್ಪೇಸ್‌ಗಳು, ತನ್ನ ಕವಿತೆಯನ್ನು ತಾನೇ ಪ್ರಕಟಿಸಕೊಳ್ಳಬಹುದಾದ ಹಂಗಿಲ್ಲದ ಅರಮನೆ, ಬೇರೆ ಬೇರೆ ಭಾಷೆಗಳ ಸಂಪರ್ಕ, ವಿದ್ಯುನ್ಮಾನ ಅವಕಾಶಗಳ ಸಹಾಯದಿಂದ ದಿಢೀರನೆ ಅನ್ಯಭಾಷಾ ರಚನೆಗಳೊಂದಿಗೆ ಹೊಕ್ಕು ಬಳಕೆ ಸಾಧ್ಯವಾಗುವುದು ಹೀಗೆ... ಈ ಹೆಚ್ಚಳವೇ ಸಂವೇದನಾಶೀಲತೆಯನ್ನು ಕೊಳೆಯಿಸುವ ಜವುಗು ಆಗಬಲ್ಲದು. ಭಾಷಿಕ ರಚನೆಗಳ ಕಳುವಲ್ಲದೆ, ಸಂವೇದನೆಯ ಕಳುವೇ ನಡೆಯಬಲ್ಲದು. ಮತ್ತು 'ಇ' ರಾಬರಿಯ ಹಾಗೆ ನಾಜೂಕಾಗಿ ನಡೆವ ಈ ಕಳುವು ಭಯಾನಕ ಪರಿಣಾಮಗಳನ್ನು ಉಂಟುಮಾಡಬಲ್ಲದು. ಹೊಸದನ್ನು, ಥ್ರಿಲ್ಲನ್ನು ಹೇಳುವ ಉಮೇದಿ ಮತ್ತು ತಾತ್ವಿಕ ಸ್ಪಷ್ಟತೆಯೇ ಇಲ್ಲದೆ ಸ್ತ್ರೀವಾದದ ಜನಪ್ರಿಯ ಪ್ರಯೋಗಗಳು ಅಪಾಯಕಾರಿ ನಿಲುವಿಗೆ ತಲುಪಿಸಬಹುದು. ಮಹಿಳಾ ಅಭಿವ್ಯಕ್ತಿ ಮರಳಿ ದೇಹಬದ್ಧತೆ, ದೇಹ ಪ್ರಮಾಣದೆಡೆ ಸರಿಯುತ್ತಿರುವುದು; ಒಟ್ಟಾರೆ ಅಭಿವ್ಯಕ್ತಿಯ ಪರಂಪರೆಯಲ್ಲಿಯೂ ಹೆಣ್ಣುದೇಹ ಸೃಜನಶೀಲ ಮೀರುವಿಕೆಯಲ್ಲದೆ ಕೇವಲ ಲೈಂಗಿಕ ಆಸೆ-ನಿರಾಸೆಗಳ ಅಹವಾಲುಗಳ ಸಂದಾಯಕ್ಕೆ ರೂಪಣಗೊಳ್ಳುವುದು ಆತಂಕಕಾರಿಯಾಗಿದೆ. ಸೃಜನಶೀಲತೆ ಎಂದರೆ, ಮನುಷ್ಯ ಸಮುದಾಯವು ಬದುಕಿನ ಯಾವೆಲ್ಲ ಸಂಗತಿಗಳಲ್ಲಿ ಎಂತಹ ಘನತೆಯನ್ನು ತಲುಪಬಲ್ಲದು ಎಂಬ ಆದರ್ಶದ ನಂಬಿಕೆಯನ್ನು ಮೂಡಿಸುವುದೇ ಆಗಿದೆ. ಅ ಎತ್ತರವು ದಿನದಿನದ ಜಂಜಾಟಗಳನ್ನು ಮಾನವೀಯವಾಗಿ ದಾಟಲು, ತನ್ನ ಸುತ್ತಲ ಮತ್ತು ತನ್ನೊಳಗಿನ ಹಾಹಾಕಾರವನ್ನು ಶಾಂತಗೊಳಿಸಲು ಅನುವು ಮಾಡಿಕೊಡುವಂತೆ ಇರಬೇಕು. ಈ ಎಚ್ಚರದ ಹಂಗು ಮಹಿಳಾ ಕಾವ್ಯಕ್ಕೂ ಅಗತ್ಯವಿದೆ.

**ಕಡೆಗೆ :** ಒಂದೊಂದು ಕವಿತೆಯೂ ಇನ್ನೊಂದರಿಂದ ವಿಭಿನ್ನ. ಒಬ್ಬ ಕವಿಯ ಕಾವ್ಯದ ಕುರಿತೇ 'ಇಕಾ ಹೀಗೆ' ಎಂದು ಕಾಣಿಸುವುದು ಆಗದ್ದು. ಹಾಗಿರುವಾಗ ಮಹಿಳಾ ಕಾವ್ಯವೆಂಬ ನಿರಂತರ ಪ್ರವಹನಶೀಲವಾದ ಅನೂಹ್ಯ ಬಣ್ಣ-ವಾಸನೆಗಳಿಂದ ಇಡಿಕಿರಿದ, ಅಗಣಿತ ಚಹರೆಗಳನ್ನು ಒಂದ್ನಾಲ್ಕು ಚೌಕಟ್ಟುಗಳಲ್ಲಿ ಇಟ್ಟು ಹೇಳುವುದು ದುಸ್ಸಾಹಸವೇ. ಹಾಗಾಗಿ ಈ ಓದು ಮಹಿಳಾ ಕಾವ್ಯದ ಮುಖ್ಯಧಾರೆಯನ್ನು ಪರಿಚಯಿಸುವ ಸಣ್ಣ ಪ್ರಯತ್ನ ಮಾತ್ರ. ಕಾವ್ಯವನ್ನು ಆಶಯಪ್ರಧಾನವಾಗಿ ಮಾತ್ರ ನೋಡುವ ಎಡಚು ಇಂಥ 'ಇಡಿಯನ್ನು ಓಡಿಯಾಗಿಸುವ' ಪ್ರಯತ್ನದಲ್ಲಿರುತ್ತದೆ. ಆದರೆ, ಯಾವ ಕವಿತೆ ತನ್ನ ಆಶಯವನ್ನು ಕಾಲಾವಧಿಯಾಚೆ ಮರುಓದುಗಳೊಂದಿಗೆ ಮಿನುಗಿಸುತ್ತದೋ ಅದು ನಿಜಕ್ಕೂ ಕವಿತೆಯ ಆಕೃತಿಯ ಯಶಸ್ವಿ ಮಾಪನವಾಗಿರುತ್ತದೆ. ಕವಿತೆಯೊಂದರ ಕೆಲ ಸಾಲುಗಳನ್ನು ಉಲ್ಲೇಖಿಸಿ ಒಟ್ಟು ಕಾವ್ಯದ ಬಗ್ಗೆ ಮಾತನಾಡಬಹುದೇ? ಎಂಬ ಪ್ರಶ್ನೆಯಿದೆ. ಆದರೆ, ಯಾವುದೇ ಸೃಜನಶೀಲ ಪ್ರಕಾರದೊಂದಿಗೆ ನಡೆಸುವ ಅನುಸಂಧಾನ ಈ ಸಂಕ್ಷೇಪೀಕರಣಕ್ಕೆ ಒಳಗಾಗಲೇಬೇಕಾಗುತ್ತದೆ. ದೇವರನ್ನು ಕಾಣಹೊರಡುವವರು ಗುಡಿಯ ದಾರಿಯನ್ನು ಕೇಳಿಯೇ ಮುನ್ನಡೆಯುವಂತೆ.



# ಕತೆಗಾರ್ತಿಯರು ಕಟ್ಟಿದ ಕಥನಗಳು: ಕಳೆದ ಇಪ್ಪತ್ತೈದು ವರ್ಷಗಳ ಹಿನ್ನೋಟ

+ ತಾರಿಣಿ ಶುಭದಾಯಿನಿ

ಸಣ್ಣಕತೆ ಎನ್ನುವುದು ಕಿಟಕಿಯೊಳಗಿಂದ ಆಕಾಶ ನೋಡಿದಂತೆ ಎಂದು ಓಕೊನರಿ ಎಂಬ ಕತೆಗಾರ್ತಿ ಹೇಳುತ್ತಾಳೆ. ಈ ಮಾತು ಕತೆಗಾರ್ತಿಯರಿಗೆ ಅಕ್ಷರಶಃ ಒಪ್ಪುವಂತದ್ದು. ಮನೆಯ ಕೋಣೆಗಳಲ್ಲಿ ನಿಂತು ಹೊರಜಗತ್ತನ್ನು ಒಂದು ಕಿಂಡಿಯ ಮೂಲಕವೇ ನಿಜಗಾಣಿಸಿಕೊಳ್ಳಬೇಕಾಗಿದ್ದ ಬರಹಗಾರ್ತಿಯರಿಗೆ ಕತೆ ಎನ್ನುವುದು ಪರಂಪರೆಯ ಸೀಮೆಯೊಳಗೇ ನಿಂತು ಬಯಲನ್ನು ನೋಡುವುದಕ್ಕೆ ಇರುವ ಜಾಗ. ಒಂದು ಶತಮಾನದ ಇತಿಹಾಸ ಇರುವ ಕನ್ನಡದ ಕತೆಗಳಲ್ಲಿ ಲೇಖಕಿಯರ ಕತೆಗಳು ಒಂದು ಸಣ್ಣ ಧಾರೆಯಾಗಿ ಆನಂತರ ಶತಮಾನದ ಕೊನೆಯಲ್ಲಿ ತಮ್ಮದೇ ಅನನ್ಯತೆಯಿಂದ ಕತೆಗಾರಿಕೆಯ ಉತ್ತಮಿಕೆಯ ಮಾದರಿಯಾಗಿ ನಿಂತಿದ್ದು ಒಂದು ಸುದೀರ್ಘ ಪಯಣದ ಯಶಸ್ವಿ ಲ್ಯಾಂಡಿಂಗ್‌ನಂತೆ ಕಾಣುತ್ತಿದೆ. ಕೊಡಗಿನ ಗೌರಮ್ಮ, ಸರಸ್ವತಿ ರಾಜವಾಡೆ, ಶ್ಯಾಮಲಾ ಮುಂತಾದವರು ಕಟ್ಟಿದ ಮಾಲೆಯನ್ನು ಈ ಹೊತ್ತಿನ ಕನ್ನಡದ ಕತೆಗಾರ್ತಿಯರು ಕೈ ಹಾಕಿ ಕಟ್ಟುತ್ತಾ ಇದ್ದಾರೆ. ಈ ಕಟ್ಟುವಿಕೆಯ ಕೌಶಲ, ಸೃಜನಶೀಲತೆಯ ಹೊಳಹುಗಳು ಕಳೆದೆರಡು ಮೂರು ದಶಕಗಳಲ್ಲಿ ಎಂದು ನೋಡುವ ಕುತೂಹಲದ ಯತ್ನವೇ ಈ ಲೇಖನ.

ಕನ್ನಡದ ಕತೆಗಾರ್ತಿಯರ ಕತೆಗಳನ್ನು ಹೆಣ್ಣುದನಿಯ ಕತೆಗಳೆಂದು ಗುರುತಿಸುವುದಾದರೆ ಅವರು ಎತ್ತಿಕೊಳ್ಳುವ ವಸ್ತು ಮತ್ತು ನಿರ್ವಹಿಸುವ ನಿರೂಪಣಾ ಕ್ರಮಗಳಲ್ಲಿ ಅನನ್ಯತೆಯನ್ನು ಸಾಧಿಸುವ ಪ್ರಯತ್ನ ಎನ್ನಬಹುದು. ಮಹಿಳಾ ಕತೆಗಳ ಧಾರೆ ಎನ್ನುವುದನ್ನು ಪ್ರತ್ಯೇಕವಾಗಿ ಕಲ್ಪಿಸಿಕೊಂಡರೆ ಅದು ಸ್ತ್ರೀ ವಿಶಿಷ್ಟ ಲೋಕವಾಗಿ ಕಾಣುತ್ತದೆ. ಆದರೆ ವಾಸ್ತವವಾಗಿ ಸ್ತ್ರೀ ವೈಶಿಷ್ಟ್ಯ ಎನ್ನುವುದು ಪೆಡುಸಾದ ಅಸ್ಮಿತೆಯೇನೂ ಅಲ್ಲ. ಬರಿಯ ಹೆರಿಗೆ ಮುಟ್ಟುಗಳ ಲೋಕವೂ ಅಲ್ಲ. ಅದರಾಚೆಗೆ ಇರುವ ಜೀವದ ಇರುವಿಕೆ ಮತ್ತು ಸಾಮಾಜಿಕವಾಗಿ ಸಾಧಿಸಬಹುದಾದ ಅಸ್ತಿತ್ವಗಳು ಸಹ ಅದರೊಳಗೆ ಅಡಕಗೊಳ್ಳುತ್ತಿರುತ್ತವೆ. ಆದುದರಿಂದ ಇದು ಹೆಣ್ಣು ಕಟ್ಟಿದ ಹೆಣ್ಣಿನ ಜಗತ್ತಿನ ಕತೆಗಳೇ ಆದರೂ ಅವು ಅಷ್ಟಕ್ಕೇ ಸೀಮಿತಗೊಳ್ಳುವುದಿಲ್ಲ; ಅದರಾಚೆ ಇರುವ ಅನುಭವ ಲೋಕಗಳನ್ನು ಶೋಧಿಸಿಕೊಳ್ಳುತ್ತಾ ಇರುತ್ತವೆ. ಒಂದು

ಅನ್ಯತೆಯ ಮೂಲಕ ಅನನ್ಯತೆಯನ್ನು ದಾಖಲಿಸುವ ಕ್ರಿಯೆಯ ಜೊತೆ ಒಂದು ಮಾನವಾನುಭವದ ಜೊತೆಯೂ ಅದು ಒಡನಾಡುತ್ತಿರುತ್ತದೆ. ಇದು ಸಮಕಾಲೀನ ಕನ್ನಡ ಕತೆಗಾರ್ತಿಯರ ಕತೆಗಳಲ್ಲಿ ಕಾಣುವ ಸೂಕ್ಷ್ಮ ಹೊರಳುಗಳು. ಸ್ತ್ರೀ ಸಂವೇದನೆಯೆಂಬ ಚಳವಳಿ ಬೆಂಬಲಿತ ನೋಟಕ್ರಮವನ್ನು ಬಿಟ್ಟುಕೊಟ್ಟು ಹೊಸದರತ್ತ ಕಣ್ಣು ನೆಡುವ ಕುತೂಹಲದ ಪ್ರಕ್ರಿಯೆ ಕನ್ನಡದ ಇಂದಿನ ಕತೆಗಾರ್ತಿಯರಲ್ಲಿ ಕಾಣುವ ಅಂಶ.

ಕತೆಗಾರ್ತಿಯರ ಕತೆಗಳು ಏಕೆ ಬೇರೆ ಬಗೆಯ ಓದನ್ನು ಬಯಸುತ್ತದೆ ಎಂದರೆ ಸ್ತ್ರೀ ಸಂವೇದನೆಯು ತನ್ನದೇ ಆದ ಕಾಲದಲ್ಲಿ ಮೈದಳೆಯುತ್ತಾ ಬಂದಿದ್ದು. ಮುಖ್ಯವಾಹಿನಿಯೆನ್ನಿಸಿಕೊಂಡ ಸಾಹಿತ್ಯವು ತನ್ನದೇ ಆದ ಸಂವೇದನೆಗಳನ್ನು ಚಳವಳಿಗಳ ಮೂಲಕ ರೂಪಿಸಿಕೊಳ್ಳುತ್ತಿದ್ದ ಸಮಯದಲ್ಲಿ ಕನ್ನಡದ ಬರಹಗಾರ್ತಿಯರು ಪರ್ಯಾಯ ಮಾದರಿಗಳಲ್ಲಿ ಬರೆಯುತ್ತಿದ್ದರು. ಉದಾಹರಣೆಗೆ ನವ್ಯದ ಕಾಲದಲ್ಲಿ ಸ್ತ್ರೀಯರ ಸಂವೇದನೆ ಪ್ರಗತಿಶೀಲವಾದ ನೆಲೆಗಟ್ಟಿನಲ್ಲಿ ಪ್ರಕಟವಾಗುತ್ತಿತ್ತು. ಸಾಂಪ್ರದಾಯಿಕ ಪ್ರಕಾರಗಳನ್ನು ಆರಿಸಿಕೊಂಡು ಬರೆಯುವಾಗ ಇದ್ದ ಸವಾಲುಗಳನ್ನು ಸ್ತ್ರೀ ಚಳವಳಿಯ ಅರಿವು ಮತ್ತು ವಿಸ್ತರಣೆಯಿಂದ ಎದುರಿಸುತ್ತಲೇ ಸಣ್ಣ ಕತೆ ಉಂಟು ಮಾಡಬಹುದಾದ ಮಾನವೀಯ ಪರಿಸರ, ಉಕ್ಕಿಸಬಹುದಾದ ವಿಷಾದಗಳನ್ನು ಹೇಳಲು ಸಾಧ್ಯ ಮಾಡಿಕೊಂಡಿರುವುದು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಕಾಣುವ ಹೊರಳು.

ಎಂಬತ್ತರ ದಶಕ ಕಳೆದ ನಂತರ ಕಾಲಮಾನವು ಹೊಸ ಯುಗಧರ್ಮವನ್ನು ಕಟ್ಟಿಕೊಳ್ಳುವ ಸವಾಲನ್ನು ಮುಂದಿಟ್ಟಿತು. ಅದಕ್ಕೆ ಸಾಹಿತ್ಯವೂ ಸ್ಪಂದಿಸಿತು. ಜಾಗತೀಕರಣ, ಖಾಸಗೀಕರಣದ ವ್ಯಾಖ್ಯಾನಗಳು ಹೊಸ ಮೌಲ್ಯಗಳ ಅಗತ್ಯವನ್ನು ಹೇಳಿದರೆ, ಇನ್ನೊಂದೆಡೆ ಸಾಂಪ್ರದಾಯಿಕವಾಗಿ ಚಲಾವಣೆಯಲ್ಲಿದ್ದ ಸಾಹಿತ್ಯದ ಪರಿಭಾಷೆಗಳು ಬದಲಾಗಬೇಕಾದ ಅನಿವಾರ್ಯತೆಯನ್ನು ಎದುರಿಸಿದವು. ಈ ಯುಗಧರ್ಮವು ಕನ್ನಡದ ಕತೆಗಾರ್ತಿಯರ ಕಥನ ಕ್ರಮ ತೊಂಬತ್ತರ ದಶಕದ ಹೊತ್ತಿಗೆ ಒಂದು ನಿರ್ದಿಷ್ಟ ಘಟ್ಟ ಮುಟ್ಟಿ ಇನ್ನೊಂದು ಹೊರಳಿಗೆ ಸಿದ್ಧಗೊಂಡಿತ್ತು ಎನ್ನುವದಕ್ಕೆ ಸೂಚಕವಾಗಿದೆ.

ಸ್ತ್ರೀವಾದ ಮತ್ತು ಸಾಮಾಜಿಕತೆಯ ಅಂಶಗಳು ಕತೆಗಾರ್ತಿಯರಲ್ಲಿ ಸಾಮಾನ್ಯವಾದ ಅಂಶಗಳು. ಆದರೆ ಅವು ಹೆಚ್ಚು ನಿಖರವಾಗುತ್ತಾ ಬಂದಂತೆ ಹೆಣ್ಣಿನ ಸಂವೇದನೆಯನ್ನು ಸಾಮಾಜಿಕ ಪಾತಳಿಗಳಲ್ಲಿರಿಸಿ ನೋಡುವ ದೃಷ್ಟಿಕೋನವು ಮುನ್ನೆಲೆಗೆ ಬಂದಿತು. ಸ್ತ್ರೀ ಎನ್ನುವ ಜೈವಿಕ ಅಂಶವನ್ನು ಸಾಮಾನ್ಯೀಕರಿಸಿದ ಹಂತದಿಂದ ಅದನ್ನು ಸಾಮಾಜಿಕ ನಿಶ್ಚಿತತೆಗಳೊಂದಿಗೆ ಸೇರಿಸಿ ನೋಡುವ ಮೂಲಕ ಹೆಣ್ಣಿನ ಸಂವೇದನೆಯನ್ನು ನಿರ್ಣಾಯಕವಾಗಿಸಿದವು. ಏಕಮುಖಿಯಾಗಿದ್ದ ಜೈವಿಕ ಅಸ್ಮಿತೆಯು ಸಾಮಾಜಿಕತೆಯನ್ನು ಮೈಗೂಡಿಸಿಕೊಂಡಿದ್ದರಿಂದ ಅನೇಕ ಅನುಭವಗಳು ಸ್ತ್ರೀ ವಿಶಿಷ್ಟತೆಯಲ್ಲಿ ವ್ಯಕ್ತವಾದವು. ಮುಸ್ಲಿಂ–ಹೆಣ್ಣು, ದಲಿತ–ಹೆಣ್ಣು, ಶೋಷಿತ ಹೆಣ್ಣು ಹೀಗೆ ಹಲವು ಬಗೆ–ಉಪಸಂಸ್ಕೃತಿಗಳಲ್ಲಿ ಹೆಣ್ಣಿನ ಅನುಭವ ಶೋಧಗಳು ಕಾಣಿಸುತ್ತವೆ. ತೊಂಬತ್ತರ ದಶಕದಲ್ಲಿ ಮುನ್ನೆಲೆಗೆ ಬಂದ

ಉಪರಾಷ್ಟ್ರೀಯತೆಯ ಸಂಗತಿ ಕತೆಗಾರ್ತಿಯರನ್ನು ಮುಟ್ಟಿದೆ. ಸ್ತ್ರೀವಾದ ಮತ್ತು ದಲಿತವಾದ ಎನ್ನುವ ಎರಡು ಧಾರೆಗಳು ಸಾಂಪ್ರದಾಯಿಕ ಚಿಂತನಾಕ್ರಮವನ್ನು ಮುರಿದು ಕಟ್ಟಿಕೊಳ್ಳುವ ಕ್ರಿಯಾಶೀಲ ಪ್ರತಿಕ್ರಿಯೆಯನ್ನು ತೋರಿದವು. ಇವುಗಳ ಹಿನ್ನೆಲೆಯಲ್ಲಿ ಕನ್ನಡದ ಕತೆಗಳು ಕತೆ ಹೇಳುವ ಧಾಟಿಯನ್ನು ಬದಲಾಯಿಸಿಕೊಂಡಿರುವುದನ್ನು ಗುರುತಿಸಬಹುದು. ಹೆಣ್ಣ ಅಸ್ಮಿತೆಯು ಸಾಮಾಜಿಕ ಅಸ್ಮಿತೆಯ ಜೊತೆಗೂಡಿ ಬಂದಾಗ ಕತೆಗಳ ಲೋಕದೃಷ್ಟಿಯಲ್ಲಿ ಸೂಕ್ಷ್ಮವಾದ ಅಂಶಗಳು ಹೊಳೆಯುತ್ತವೆ. ಹೆಣ್ಣುತನವೆಂಬ ಜೈವಿಕ ಅಸ್ತಿತ್ವವನ್ನು ಹೀಗೆ ಬೇರೆ ಬೇರೆ ಸಾಮಾಜಿಕ ಪಾತಳಿಗಳಲ್ಲಿ ಇಟ್ಟು ನೋಡುವಾಗ ಹಲವಾರು ಹೆಣ್ತನದ ವ್ಯಾಖ್ಯಾನಗಳು ಕಾಣುತ್ತವೆ. ಆದುದರಿಂದಲೇ ಸಾರಾ ಅಬೂಬಕರ್ ಹಾಗು ಬಾನು ಮುಷ್ತಾಕ್ ಅವರ ಕತೆಗಳಲ್ಲಿ ಮುಸ್ಲಿಂ ಹೆಣ್ಣಿನ ಜೀವನದ ಆಯಾಮವು ತಲಾಕ್‌ನಿಂದ, ನಿರಾಶ್ರಿತರಾಗಿರುವವರ, ಪಿತೃಪ್ರಧಾನತೆಯಲ್ಲಿ ಸಿಕ್ಕು ನರಳುತ್ತಿರುವ ಸ್ತ್ರೀಸಮುದಾಯವನ್ನು ಕಾಣಲು ಸಾಧ್ಯವಾಯಿತು. ಸಾರಾ ಅವರ 'ಚಪ್ಪಲಿಗಳು' ಕತೆ ಢಾಳಾಗಿಯೇ ಪಿತೃಪ್ರಧಾನ ಧೋರಣೆಗಳನ್ನು ತೋರಿಸುತ್ತದೆ. ಸಾರಾ ಅವರ 'ಚಪ್ಪಲಿಗಳು', ಲಲಿತಾ ನಾಯಕ್ ಅವರ 'ಸಾಕೀಬಾಯಿ', ಬಾನು ಮುಷ್ತಾಕ್ ಅವರ 'ಸರಿದ ಮೋಡ', ಜಾಹ್ನವಿ ಅವರ 'ಕಳಕೊಂಡವಳು ಮತ್ತು ಇತರ ಕತೆಗಳು' ಮುಂತಾದ ಕಥಾ ಸಂಕಲನಗಳು ತೊಂಬತ್ತರ ದಶಕದ ಹೊಸ್ತಿಲಲ್ಲಿ ಬಂದವು. ಇವು ಏಕಕಾಲಕ್ಕೆ ಹೆಣ್ಣಿನ ಜಗತ್ತನ್ನು ಕಾಣಿಸುವ, ಅದರ ಮೂಲಕ ಸಾಮಾಜಿಕ ಸಮಸ್ಯೆಗಳಲ್ಲಿ ಹೆಣ್ಣಿನ ಜಗತ್ತಿನ ಅನುಭವಗಳು ಮುಖ್ಯ ವಾಹಿನಿಯ ಅನುಭವಗಳಿಗಿಂತ ಬೇರೆಯಾಗಿರುವುದನ್ನು ತೋರಿಸಿದ ಕತೆಗಳನ್ನು ಕನ್ನಡಕ್ಕೆ ನೀಡಿದ್ದವು. ಸಾರಾ, ಬಾನು ಮುಷ್ತಾಕ್, ಮುಮ್ತಾಜ್, ಇರ್ಷಾದ್ ಮುಂತಾದವರ ಕತೆಗಳು ಮುಸ್ಲಿಂ ಸಮುದಾಯದ ಹೆಣ್ಣುಗಳ ಶೋಷಣೆಯನ್ನು ಗುರುತಿಸಿಕೊಟ್ಟವು. ಜಾಹ್ನವಿ ಅವರ ಕತೆಗಳು ದಲಿತ ಲೋಕದ ಅನುಭವಗಳನ್ನು ಹೆಣ್ಣಿನ ಕಣ್ಣಿಂದ ನೋಡುವ ಪ್ರಯತ್ನ ಮಾಡಿದವು. ಬಿ.ಟಿ.ಜಾಹ್ನವಿ ಅವರ ಕತೆಗಳು ದಲಿತ ಲೋಕದ ಶೋಷಣೆಗಳನ್ನು ಇನ್ನೊಂದಿಷ್ಟು ಮುಂದಕ್ಕೊಯ್ಯುತ್ತವೆ. ದಲಿತವರ್ಗವೇ ಕೆನೆಪದರವಾಗಿ ದಲಿತರನ್ನು ಶೋಷಿಸುವ 'ಕಳ್ಳುಬಳ್ಳಿ' ಕತೆಯನ್ನು ಒತ್ತಾಯಪೂರ್ವಕವೆನಿಸದ ದನಿಯಲ್ಲಿ ಜಾಹ್ನವಿ ನಿರೂಪಿಸುತ್ತಾರೆ. ಆದರೆ ಜಾಹ್ನವಿ ಅವರಲ್ಲಿ ಸಾಮಾಜಿಕತೆ ಎನ್ನುವುದು ಹೆಣ್ಣಿನ ಲೈಂಗಿಕತೆಯ ಸಮಸ್ಯೆಯನ್ನೂ ಒಳಗೊಂಡಿದೆ. ಆದುದರಿಂದ ಅವರ ಅನೇಕ ಕತೆಗಳು ಹೆಣ್ಣಿನ ಲೈಂಗಿಕ ಅಭಿವ್ಯಕ್ತಿಯ ವಸ್ತುವನ್ನು ಎತ್ತಿಕೊಳ್ಳುತ್ತವೆ.

ನವ್ಯದ ಕಾಲದಲ್ಲಿ ವೀಣಾ ಶಾಂತೇಶ್ವರ ಅವರ ಕತೆಗಳು ಗಂಡು ಹೆಣ್ಣಿನ ನಡುವಿನ ಸಂಬಂಧಗಳಲ್ಲಿರುವ ಸಂಘರ್ಷ ಹಾಗು ಖಾಲಿತನಗಳನ್ನು ಬಿಂಬಿಸಿದವು. ಲೈಂಗಿಕ ಅನುಭವಗಳ ಮೂಲಕ ಸ್ವಾತಂತ್ರ್ಯದ ಪ್ರಶ್ನೆ ಎತ್ತುವ ಮೂಲಕ ಸ್ತ್ರೀ ಅಸ್ಮಿತೆಗೆ ಆಧುನಿಕತೆಯ ರೂಪ ದೊರೆತರೆ, ನೇಮಿಚಂದ್ರ ಅವರ ಕತೆಗಳಲ್ಲಿ ಸ್ತ್ರೀಪ್ರಶ್ನೆ ಎನ್ನುವುದು ಅಸ್ತಿತ್ವವಾದಿ ನೆಲೆಗಟ್ಟಿನದಾಗುತ್ತದೆ. ನೇಮಿಚಂದ್ರರ ಅವರ ಎಲ್ಲ ಕತೆಗಳ ಸಂಗ್ರಹ ಇಪ್ಪತ್ತನೆಯ ಶತಮಾನದ

ಕೊನೆಯಲ್ಲಿ ಬಂದಿತು. ಸ್ತ್ರೀವಾದವನ್ನು ಅಸ್ತಿತ್ವವಾದಿ ನೆಲೆಯಲ್ಲಿ ಎತ್ತರಿಸಿದವರು ನೇಮಿಚಂದ್ರ. ಹೆಣ್ಣನ್ನು ಸಾಂಪ್ರದಾಯಿಕ ಕಟ್ಟುಪಾಡುಗಳಲ್ಲಿ ಇರುವುದಕ್ಕಿಂತ ಆಕೆ ಭಿನ್ನವಾಗಿದ್ದಾಳೆ. ಅವಳಿಗೆ ಒಂದು ಆಲೋಚಿಸಬಲ್ಲ ಶಕ್ತಿಯಿದೆ ಎನ್ನುವುದನ್ನು ತೋರಿಸಲು ಇಚ್ಛಿಸುತ್ತಾರೆ. ಸ್ತ್ರೀವಾದದ ಹಿನ್ನೆಲೆಯುಳ್ಳ ಕಥನಗಳು ಖಚಿತಗೊಳ್ಳುತ್ತಾ ಬಂದಂತೆ ವೈದೇಹಿಯವರಲ್ಲಿ ಅವು ಸ್ತ್ರೀ ಅನನ್ಯತೆಯ ಉತ್ಕೃಷ್ಟತೆಯನ್ನು ಪಡೆದುಕೊಳ್ಳುತ್ತವೆ. ಒಳದನಿಗಳು, ಕೆಳದನಿಗಳಲ್ಲಿ ಹೆಣ್ಣಿನ ಶೋಷಣೆಗಳನ್ನು ದಾಖಲಿಸುತ್ತಲೇ ಹೆಣ್ತನಕ್ಕಿರುವ ಬದುಕಿನ ಘನತೆಯನ್ನು ಎತ್ತಿಹಿಡಿಯುವ ಅಸ್ತಿತ್ವವಾದಿ ನೆಲೆಯನ್ನು ವೈದೇಹಿಯವರ ಕತೆಗಳು ವಿಸ್ತರಿಸಿಕೊಡುತ್ತವೆ.

ಇದೇ ಹೊತ್ತಿಗೆ ಬರೆಯಲಾರಂಭಿಸಿದ ಮಿತ್ರಾ ವೆಂಕಟ್ರಾಜ್ ಅವರ ಕತೆಗಳು ಸ್ತ್ರೀ ಜಗತ್ತು ಹಾಗು ಇನ್ನೊಂದು ಪ್ರಾದೇಶಿಕ ಜಗತ್ತುಗಳನ್ನು ಕೇಂದ್ರಗಳ ಸುತ್ತ ಸುತ್ತುತ್ತವೆ. ಮಿತ್ರಾ ಅವರ 'ಹಕ್ಕಿ ಮತ್ತು ಅವಳು' ಸಂಕಲನದಲ್ಲಿ ಅವರು ಸ್ತ್ರೀನಿರೂಪಣೆಯನ್ನು ಅನುಸರಿಸಿ ಬರೆದ ಕತೆಗಳಿರುವಂತೆಯೇ ಅವರು ಚಿತ್ತಾಲ, ಜಯಂತ ಕಾಯ್ಕಿಣಿ ಅವರಂತೆ ಡಯಾಸ್ಪೊರಿಕ್ ಆದ ಅನುಭವಗಳನ್ನು ಹೇಳುವ ಕತೆಗಳಿವೆ. ಈ ಹಂತದಲ್ಲಿ ಮಿತ್ರಾ ಅವರ ಕತೆಗಳು ವಿಶಿಷ್ಟ ಎನ್ನಿಸುವುದು ಹೀಗೆ ಅವರು ಬೇರೆ ದೇಶದಲ್ಲಿ ನಿಂತು ಬರೆಯುತ್ತಿರುವಾಗಲೇ. ವೈದೇಹಿಯವರು ಬಂದ ಕುಂದಾಪುರದ ನೆಲದಿಂದಲೇ ಬಂದ ಈ ಲೇಖಕಿ ತನ್ನ ಅನುಭವಗಳನ್ನು ಒರೆಹಚ್ಚುವುದು ಪ್ರಾದೇಶಿಕತೆಯನ್ನು ಬೇರೆ ನೆಲದಲ್ಲಿ ನಿಂತು ಎದುರಿಸುವ ರೀತಿಯಲ್ಲಿ. ಸ್ತ್ರೀತ್ವದ ಅನುಭವಗಳನ್ನು ಹೀಗೆ ವಿಸ್ತರಿಸಿದ ಸಣ್ಣ ಹೊರಳುಗಳು ಇಲ್ಲಿ ಮುಖ್ಯ ಎನಿಸುತ್ತವೆ.

ಇದೇ ಪರಂಪರೆಯನ್ನು ಇನ್ನಷ್ಟು ವಿಸ್ತರಿಸಿ ಕತೆಯ ಜಗತ್ತನ್ನು ಮಾನವೀಯ ಗೊಳಿಸುವ ನಿಟ್ಟಿನಲ್ಲಿ ಎಚ್. ನಾಗವೇಣಿ ಅವರ ಕತೆಗಳು ಬರುತ್ತವೆ. ಅವರ 'ಮೀಯುವ ಆಟ' ಸಂಕಲನದ ಕತೆಗಳು ಸ್ತ್ರೀತ್ವವನ್ನು ಮಾನವೀಯ ನೆಲೆಗೆ ಒಯ್ಯುವ ಸಣ್ಣಕತೆಯ ರೀತಿಯನ್ನು ತೋರುತ್ತವೆ. ನಾಗವೇಣಿ ಅವರ ಕತೆಗಳು ಅಪ್ಪಟ ಮಾನವೀಯ ನೆಲೆಯನ್ನು ಹುಡುಕಾಟ ಮಾಡುವಂತವು. ಅವರ 'ಮೀಯುವ ಆಟ' ಸಂಕಲನದ ಕತೆಗಳು ಒಳಗೊಳ್ಳುವ ಸಾಬರು, ಕೊರಗರು ಮುಂತಾದವರು ಸಮಾಜದಲ್ಲಿ ಅಂಚಿನಲ್ಲಿರುವವರು. ನಾಗವೇಣಿ ಅವರ ತಳಮೂಲದ ಜೀವನಗಳ ಚಿತ್ರಣ ಕಲಾತ್ಮಕವಾಗಿ ಶೋಷಣೆಯ ಪರಿಯನ್ನು ಬಿಚ್ಚಿಡುತ್ತದೆ. ನಾಗವೇಣಿಯವರು ತಮ್ಮ ತವರು ಜಿಲ್ಲೆಯ ಕೋಮುವಾದಕ್ಕೆ ಮುಲಾಮು ಹಚ್ಚುವಂತಹ ಸಾಬರು ಹಿಂದೂಗಳ ಕಥೆಗಳನ್ನು ಮಾನವೀಯಗೊಳಿಸಲು ಹೊರಡುವಾಗಲೂ ಅವರ ಕಥನದ ಚೌಕಟ್ಟು ದಟ್ಟವಾದ ಪ್ರಾದೇಶಿಕ ನೆಲೆಯಿಂದ ಹೊರಡುವುದರಿಂದ ಅವು ಕೃತಕವಾಗಿ ಕಟ್ಟಿದ ಪರಿಸರದ ಕತೆಗಳೆನ್ನಿಸುವುದಿಲ್ಲ.

ಕನ್ನಡದ ಕತೆಗಳಲ್ಲಿ ಸ್ತ್ರೀ ಜಗತ್ತು ಅನಾವರಣಗೊಳ್ಳುತ್ತಿದ್ದ ಸಂದರ್ಭದಲ್ಲಿಯೇ ಪ್ರಾದೇಶಿಕತೆ ಮತ್ತು ಭಾಷೆಯ ಪ್ರಶ್ನೆಗಳು ಕಥಾಜಗತ್ತಿನೊಂದಿಗೆ ಮಿಳಿತಗೊಂಡವು. ಹೆಣ್ಣಿನ ಜಗತ್ತನ್ನು ಸಾರ್ವತ್ರಿಕಗೊಳಿಸಬಹುದಾದ ಅನುಭವಗಳು ಪುಷ್ಟಿಗೊಳ್ಳುವುದು

ಪ್ರಾದೇಶಿಕತೆಯ ವಿವರಗಳಿಂದಲೇ. ಕಥೆ ಎನ್ನುವುದು ಹೆಣ್ಣಿನ ಅನುಭವ ತಾವುಗಳಾದ ಹಿತ್ತಿಲು, ಅಡುಗೆಕೋಣೆಗಳಲ್ಲಿಯೇ ಜೀವ ತಳೆಯುವುದು ಎನ್ನುವ ತಿಳಿವಳಿಕೆಗೆ ಪೂರಕವಾಗಿ ಸ್ತ್ರೀ ಜಗತ್ತನ್ನು ಕಂಡುಕೊಳ್ಳುವ ಯತ್ನವನ್ನು ಕತೆಗಾರ್ತಿಯರು ಈ ಹಂತದಲ್ಲಿ ಮಾಡುತ್ತಾರೆ. ಕತೆಗಾರ್ತಿಯರಲ್ಲಿ ಕಥನವನ್ನು ಕಟ್ಟಿಕೊಳ್ಳುವುದಕ್ಕೆ ಬೇಕಾದ ಒಂದು ಚೌಕಟ್ಟು ದೊರೆಯುವುದು ಪ್ರಾದೇಶಿಕತೆಯ ಸೊಗಡಿನ ಭಾಷೆ ಮತ್ತು ಪರಿಸರವನ್ನು ಬಳಸುವುದರಲ್ಲಿ. ಹೀಗೆ ಪ್ರಾದೇಶಿಕತೆಯ ಒಂದು ಹದವನ್ನು ನಿರ್ಮಿಸಿಕೊಟ್ಟವರಲ್ಲಿ ವೈದೇಹಿಯವರ ಹೆಸರು ಮೊದಲು ಕಾಣುತ್ತದೆ. ಕುಂದಾಪುರದ ಕನ್ನಡದಲ್ಲಿ ಕತೆ ಕಟ್ಟುವ ಮೂಲಕ ಒಂದು ಉಪಭಾಷೆಯಲ್ಲಿ ಹೆಣ್ಣು ಜಗತ್ತಿನ ಕಥೆಗಳನ್ನು ಅನಾವರಣಗೊಳಿಸಿದ ರೀತಿ. ಗೀತಾ ನಾಗಭೂಷಣ ಅವರ 'ಮಾಪುರ ತಾಯಿಯ ಮಕ್ಕಳು', 'ದುಮ್ಮಸು' ಮುಂತಾದ ಕತೆಗಳಲ್ಲಿ ಅನಾವರಣಗೊಂಡ ಲೋಕವು ದಟ್ಟವಾದ ಪ್ರಾದೇಶಿಕತೆಯಿಂದ ರೂಪುಗೊಂಡಿರುವಂತವೇ. ಈ ದಿಸೆಯಲ್ಲಿ ಇನ್ನಷ್ಟು ಕ್ರಿಯಾಶೀಲ ಪ್ರಯತ್ನಗಳೆಂದರೆ ನಾಗವೇಣಿ, ಮಿತ್ರಾ ವೆಂಕಟ್ರಾಜ್, ಎಂ.ಎಸ್.ವೇದಾ ಅವರುಗಳು. ಈ ಉದಾಹರಣೆಗಳನ್ನು ನಿರ್ಮಿಸುವುದು ಒಂದು ಸವಾಲೇ ಸರಿ. ವೇದಾ ಅವರ 'ಕುರ್‌ಕ್ ಸೇತ್ರವ್ವೂ ಕುಂಯ್ಯನೆಂಬ ಬಾಲನ ಕತ್ತಲ ಲೋಕವೂ' ಕತೆ ತನ್ನ ಪ್ರಾದೇಶಿಕ ವಿವರ ಹಾಗು ಭಾಷೆಯಿಂದಲೇ ಗಮನ ಸೆಳೆದ ಕತೆ. ಅವರ 'ಪ್ರೀತಿ ಮತ್ತು ಸಾವು' ಸಂಕಲನದ ಕತೆಗಳು ನೆಲದ ಕತೆಗಳನ್ನು ಹೇಳಲು ತೊಡಗುವುದು ವಿಶೇಷ. ತಳವರ್ಗದ ಕತೆಗಳನ್ನು ಹೇಳುವ ಉದ್ದೇಶವು ವೇದಾ ಅವರ ಕತೆಗಳಿಗೆ ಭಿನ್ನವಾದ ಚೌಕಟ್ಟನ್ನು ಹೊಂದಿಸಿಕೊಡುತ್ತವೆ.

ಹೀಗೆ ತಳವರ್ಗದ ಭಾಷೆಯನ್ನು ಬಳಸಿ ಅಲ್ಲಿನ ಜೀವನ ಚಿತ್ರಣ ಮಾಡುವ ಪ್ರಜ್ಞಾಪೂರ್ವಕತೆ ಜಾಹ್ನವಿ ಅವರನ್ನೂ ಒಳಗೊಂಡಂತೆ ಅನೇಕ ಲೇಖಕಿಯರನ್ನು ಕಾಡಿದೆ. ಗೀತಾ ನಾಗಭೂಷಣ ಅವರ 'ದುಮ್ಮಸು', 'ಮಾಪುರ ತಾಯಿಯ ಮಕ್ಕಳು', ಲಲಿತಾ ನಾಯಕ್ ಅವರ 'ಸಾಕೀಬಾಯಿ' ಕತೆಗಳು ಸಹಜವಾಗಿ ಎಂಬಂತೆ ಎತ್ತಿಕೊಂಡ ಪರಿಸರ ನಿರ್ಮಾಣದ ಸಂಗತಿ ಮಹಿಳಾ ಕತೆಗಳಿಗೆ ಸ್ಫೂರ್ತಿಯಾದಂತೆ ತೋರುತ್ತದೆ. ಜಾಹ್ನವಿ ಅವರು ದಲಿತರ ಕತೆಗಳನ್ನು ಹೇಳುವಾಗ ತಮ್ಮ ಸೀಮೆಯ ಭಾಷೆಯನ್ನು ಬಳಸುವುದು ಇತರೆ ಕಥಾವಸ್ತುಗಳನ್ನು ನಿರ್ವಹಿಸುವಾಗ ಬೇರೆ ಬಗೆಯ ಕನ್ನಡ ಬಳಸುವುದನ್ನು ಗಮನಿಸಬಹುದು. ಕುಂದಾಪುರದ ಭಾಷೆ ಬಳಸಿ ಬರೆಯುವ ವೈದೇಹಿ ಹೆಣ್ಣುಗಳನ್ನು ಸಾರ್ವತ್ರಿಕವಾಗಿಸುತ್ತಲೇ ಅವರ ವಿಶಿಷ್ಟತೆಯನ್ನು ಕಾಣಿಸುವುದು ಇದೇ ಪಾತಳಿಯನ್ನು ಬಳಸಿ.

ಕತೆಗಾರ್ತಿಯರಲ್ಲಿ ಸ್ತ್ರೀಲೋಕವು ಸದಾಕಾಲ ಆದ್ಯತೆಯ ವಿಷಯವೇ. ಅದು ಶೋಷಣೆಯ ನೆಲೆಯಿಂದ ಹೊರಟು ಪ್ರಗತಿಶೀಲತೆಯ ಮಾದರಿಯಲ್ಲಿ ಸುಧಾರಣೆಯನ್ನು ಒಳಗೊಂಡಿದ್ದು ಒಂದು ನಡೆಯಾದರೆ, ಮುಂದುವರೆದ ಭಾಗವಾಗಿ ಹೆಣ್ತನದ

ದೃಷ್ಟಿಕೋನದಿಂದ ಕಟ್ಟಿದ ಕತೆಗಳು ಒಳಮುಖಿಯಾಗುತ್ತಾ ಬಂದಿದ್ದು ಇನ್ನೊಂದು ಬಗೆ. ಇಪ್ಪತ್ತೊಂದನೇ ಶತಮಾನದ ವೇಳೆಗೆ ಕತೆಗಳ ಹರಿವು, ಪಾತ್ರಗಳು ಸ್ತ್ರೀವಾದವನ್ನು ಪ್ರಸ್ತುತಪಡಿಸಿಕೊಳ್ಳುವ ನಿಟ್ಟಿನಲ್ಲಿ ಕ್ರಿಯಾಶೀಲವಾದವು. ವಿನಯಾ, ಸುಮಂಗಲಾ, ನಾಗವೇಣಿ, ಸುನಂದಾ ಕಡಮೆ, ಜಾಹ್ನವಿ, ನೀಲಾ, ಸುಮಿತ್ರ, ಅನುಪಮಾ ಇವರುಗಳು ಕಟ್ಟಿಲೆತ್ನಿಸಿದ ಕಥನಗಳಲ್ಲಿ ಪ್ರಾದೇಶಿಕತೆ ಮತ್ತು ಸ್ತ್ರೀ ಅರಿವುಗಳೇ ಹೆಚ್ಚಿನ ಜಾಗ ಪಡೆದವು. ಸುಮಂಗಲಾ ಅವರ 'ಜುಮುರು ಮಳೆ', ಸುನಂದಾ ಕಡಮೆ ಅವರ 'ಪುಟ್ಟಪಾದದ ಗುರುತು' ಮತ್ತು 'ಗಾಂಧಿ ಚಿತ್ರದ ನೋಟು', ವಿನಯಾ ಅವರ 'ಊರ ಒಳಗಣ ಬಯಲು', ಜಾಹ್ನವಿ ಅವರ 'ಹುಡುಕಾಟ', ಎಲ್.ಸಿ.ಸುಮಿತ್ರಾ ಅವರ 'ಗುಬ್ಬಿಹಳ್ಳದ ಸಾಕ್ಷಿಯಲ್ಲಿ', ಅನುಪಮಾ ಅವರ 'ಹೂವರಳಿದ್ದಕ್ಕೆ ಯಾರು ಸಾಕ್ಷಿ?', ಕೆ.ನೀಲಾ ಅವರ 'ಜ್ಯೋತಿಯೊಳಗಣ ಕಾಂತಿ', ಉಮಾರಾವ್ ಅವರ 'ಸಿಲೋನ್ ಸುಶೀಲ ಮತ್ತು ಇತರ ಕತೆಗಳು', ಇವು ಒಟ್ಟಿಗಿಟ್ಟು ನೋಡುವುದಾದರೆ ಸ್ತ್ರೀ ದೃಷ್ಟಿಕೋನವನ್ನು ಒಂದು ಮುಖ್ಯ ನೋಟಕ್ರಮವಾಗಿ ಬಳಸಿಕೊಂಡು ಬರೆದ ಕತೆಗಳು ಎನ್ನಬಹುದು. ಇಲ್ಲಿ ಸ್ತ್ರೀಲೋಕ ಎನ್ನುವುದು ಸ್ತ್ರೀಯರ ಬದುಕುಗಳು ಮಾತ್ರವಲ್ಲ, ಬದಲಾಗುತ್ತಿರುವ ಸಾಮಾಜಿಕ ಪರಿಸರ ಹೇರುವ ಯುಗಧರ್ಮದ ಒತ್ತಡಗಳನ್ನು ತಂತಮ್ಮ ಪ್ರಾದೇಶಿಕ ಪರಿಸರದ ಚೌಕಟ್ಟಿನಲ್ಲಿಡುವುದಾಗಿದೆ. ಇದರಿಂದ ಲೇಖಕಿಯರ ಕತೆಗಳು ಸ್ತ್ರೀವಾದ ಮತ್ತು ಪ್ರಗತಿಶೀಲತೆ ಎರಡನ್ನೂ ಒಟ್ಟಿಗೇ ನಿಭಾಯಿಸುವಂತೆ ಕಾಣುತ್ತದೆ. ಮೇಲೆ ಹೇಳಿದ ಕತೆಗಾರ್ತಿಯರನ್ನು ಅನುಸರಿಸಿದಂತೆ ಕೋಡಿಬೆಟ್ಟು ರಾಜಲಕ್ಷ್ಮೀ ಅವರ 'ಒಂದು ಮುಷ್ಟಿ ನಕ್ಷತ್ರ', ಪಿ.ಚಂದ್ರಿಕಾ ಅವರ 'ನನ್ನೊಳಗಿನ ನಿನ್ನ ಕತೆಗಳು' ಇನ್ನೂ ಮುಂತಾದ ಸಂಕಲನಗಳು ಬಂದಿವೆ. ಜೊತೆಗೆ ಪತ್ರಿಕೆಗಳಲ್ಲಿ ಬರೆಯುವ ಅನೇಕ ಬಿಡಿ ಕತೆಗಳಲ್ಲಿ ಕೆಲವು ಗಂಭೀರ ಪ್ರಯತ್ನಗಳಾಗಿವೆ. ಅನೇಕ ಬಾರಿ ಜನಪ್ರಿಯ ಶೈಲಿಯನ್ನು ಅನುಸರಿಸಿ ಬರೆದ ಕತೆಗಳು ಇಲ್ಲಿ ಕಾಣುತ್ತವೆ.

ವಿನಯಾ ಒಕ್ಕುಂದ ಅವರ ಕತೆಗಳು ಸ್ತ್ರೀವಾದದ ಚೈತನ್ಯವನ್ನು ಪಡೆದುಕೊಂಡು ಬೆಳೆಯುವ ಕತೆಗಳು. ವಿನಯಾ ಅವರ ಕತೆಗಳು ತೀವ್ರವಾದ ವಿಷಾದವನ್ನು ಉಕ್ಕಿಸುವಂತಹ ಕತೆಗಳು. ಇದಕ್ಕೆ ಮುಖ್ಯಭಿತ್ತಿಯಾಗಿ ಸಾಮಾಜಿಕ ಶೋಷಣೆ ಮಾತ್ರವೇ ಅಲ್ಲ ಅದೊಂದು ಧೋರಣೆಯ ಸಮಸ್ಯೆ ಎನ್ನುವುದನ್ನು ವಿನಯಾ ಗುರುತಿಸುತ್ತಾರೆ. ಅವರ ಕತೆಗಳಲ್ಲಿ ಬರುವ ಹೆಣ್ಣುಗಳು ಅನುಭವಿಸುವ ನೋವು ಅಂತರಂಗದಲ್ಲಿ ಮಡುಗಟ್ಟಿರುವಂತದ್ದು. ವಿನಾಕಾರಣ ಒಬ್ಬ ಹೆಣ್ಣಿನ ಮನಸ್ಸಿನ ಮೇಲೆ ದಾಳಿ ನಡೆಸುವ ಗಂಡಸು ಹೇಗೆ ಸಮಾಜವನ್ನು ಸುಲಭವಾಗಿ ವಿಶ್ವಾಸಕ್ಕೆ ತೆಗೆದುಕೊಂಡವನಂತೆ ಆಡಬಲ್ಲ ಎನ್ನುವುದನ್ನು ಹೇಳುವ 'ಒಂದು ಖಾಸಗಿ ಪತ್ರ' ಕತೆ ವಿನಯಾ ಅವರ ಇತರೆ ಕತೆಗಳಲ್ಲಿಯೂ ಇಣುಕುವಂತದ್ದು. ಮನಸ್ಸಿನ ಸೂಕ್ಷ್ಮ ತಳಮಳಗಳನ್ನು ಅವರು ಸಮೀಕರಿಸುವುದು ಸಾಮಾಜಿಕ ಪಲ್ಲಟಗಳ ಜೊತೆ. ಪ್ರೀತಿಸಿ ಮದುವೆಯಾಗುವ

ಯುವಕ ಆಧುನಿಕನಂತೆ ತೋರಿದರೂ ತನ್ನ ಹಳೆಯ ಸಂಸ್ಕೃತಿಯ ನೆನಪುಗಳೊಂದಿಗೆ ಹಿಂಸೆ ಅಡಗಿರುವುದನ್ನು ಕಾಣಬಲ್ಲ. ಅದರಿಂದಾಗಿಯೇ ವಿಷಾದ ವಿನಯಾ ಅವರ ಕತೆಗಳ ಮೂಲಸ್ಥಾಯಿ. ಅದು ಅವರ ಎರಡನೇ ಸಂಕಲನ 'ಉರಿ'ಯಲ್ಲಿಯೂ ಮುಂದುವರೆದಿದೆ.

ಸುನಂದಾ ಕಡಮೆ ಅವರ ಕತೆಗಳ ಜಗತ್ತು 'ಕಿಚನ್ ಪ್ಯಾರಾಡೈಸ್'ನ ವ್ಯಂಗ್ಯವನ್ನು ನವಿರಾಗಿ ಹೇಳುತ್ತವೆ. ಸುನಂದ ಅವರ ಕತೆಗಳಲ್ಲಿ ಬದಲಾವಣೆಯ ಕಸಿವಿಸಿ, ಸಂಬಂಧಗಳಲ್ಲಿನ ಬಿರುಕು ಮೂಡಿಸುವ ವಿಷಾದವು ಆಧುನಿಕತೆಯ ಅನುಸಂಧಾನದಿಂದಲೇ ಹುಟ್ಟುವಂತವು. ಪತ್ರೊಡೆ ತಿನ್ನಬಯಸುವ ತಲೆಮಾರು, ಮೀನು ತಿನ್ನುವ ಮುಜುಗರದ ಬ್ರಾಹ್ಮಣ ಗೃಹಿಣಿಯರು ಸುನಂದ ಅವರ ಕತೆಗಳಲ್ಲಿ ಕ್ರಾಂತಿಯನ್ನು ಮೂಡಿಸುವಂತಹ ಪಾತ್ರಗಳಾಗದಿದ್ದರೂ ಅಂತರ್ಜಾಲಕ್ಕೆ ತೆರೆದುಕೊಂಡ ಗಂಡ ಹೆಂಡತಿಯರ ನಡುವೆ ಸೃಷ್ಟಿಯಾಗುವ ಅನ್ಯತೆಯ ಭಾವ ಅವರಿಗೆ ತಮ್ಮ ನಡುವೆ ಯಾವುದೋ ಅಪರಿಚಿತ ಜಗತ್ತು ಓಡಿಯಾಡುತ್ತಿದೆ ಎನ್ನುವುದನ್ನು ಮನವರಿಕೆ ಮಾಡಿಕೊಡುತ್ತದೆ. ಸುನಂದ ಜಾಗತೀಕರಣದ ಆಧುನಿಕತೆಯನ್ನು ಸಂಸಾರದೊಳಗೆ ಆಗುವ ಬದಲಾವಣೆಗಳ ಮೂಲಕ ಹೆಚ್ಚಾಗಿ ಗುರುತಿಸಲೆತ್ನಿಸುತ್ತಾರೆ. ಎರಡು ದಶಕಗಳಲ್ಲಿ ಬರೆದ ಅವರ ಕತೆಗಳು ಇದೇ ಬಗೆಯ ಅನುಸಂಧಾನವನ್ನು ವಿವಿಧ ಕಥಾಪಾತ್ರಗಳ ಮೂಲಕ ಮಾಡುತ್ತಾ ಬಂದಿವೆ ಎನ್ನಬಹುದು. ದೈನಿಕ ವಿವರಗಳನ್ನೇ ಕಿಂಡಿಯನ್ನಾಗಿಸಿಕೊಂಡು ಅನುಭವಗಳನ್ನು ಕಾಣುವ ರೀತಿ ಅವರ ಕಥನಕ್ರಮ.

ಸೂಕ್ಷ್ಮ ವಿವರಗಳೊಂದಿಗೆ ಕತೆಗಳನ್ನು ಹೇಳುತ್ತಾ ಆಧುನಿಕ ಜಗತ್ತಿನ ಧೋರಣೆ ಮನೋಭಾವವಾಗಿ ಹೊರಹೊಮ್ಮುವುದನ್ನು ಸುಮಂಗಲಾ ಅವರ ಕತೆಗಳಲ್ಲಿ ಕಾಣಬಹುದು. ಅವರ 'ಜುಮುರು ಮಳೆ' ಸಂಕಲನದ ಕತೆಗಳು ಆಧುನಿಕ ಸಮಾಜವನ್ನು ಭಿತ್ತಿಯಾಗಿಸಿಕೊಂಡು ಮನುಷ್ಯ ಸಂಬಂಧಗಳ ಹುಡುಕಾಟಕ್ಕೆ ತೊಡಗುತ್ತವೆ. ಕೆಲಸದ ಹೆಣ್ಣುಗಳು, ಹೊರಗೆ ಪ್ರತಿಷ್ಠಿತ ಕಂಪನಿಗಳಲ್ಲಿ ಕೆಲಸ ಮಾಡುವ ಹೆಂಗಸರು, ಮನೆಯಲ್ಲಿರುವ ಅಪ್ಪಂದಿರು ಇವರಲ್ಲೆಲ್ಲಾ ಸುಮಂಗಲಾ ಅವರು ಬದುಕನ್ನು ಸ್ವೀಕರಿಸುವ ಧೋರಣೆಗಳನ್ನು ಗುರುತಿಸಿಕೊಳ್ಳಲೆತ್ನಿಸುತ್ತಾರೆ. ಇದೇ ಸೂಕ್ಷ್ಮತೆಯನ್ನು ಉಮಾರಾವ್ ಅವರ ಕತೆಗಳಲ್ಲಿ ಸಹ ಕಾಣಬಹುದು. ಆದರೆ ಉಮಾರಾವ್ ಅವರ ಕತೆಗಳು ಆಳವಾಗಿ ವಿಸ್ತಾರಕ್ಕೆ ಹೋಗುವುದಿಲ್ಲ. ಅವು ವಿಷಾದ ಚಿಮುಕಿಸಿ ಮೌನವಾಗುವಂತೆ ಕಾಣುತ್ತವೆ.

ಈ ದಶಕದಲ್ಲಿ ಆಧುನಿಕತೆಯ ಪ್ರಶ್ನೆ ಹೆಣ್ಣಿನ ಕಥನಗಳಲ್ಲಿ ಕಾಣಿಸಿಕೊಂಡಿತು. ಈ ಶತಮಾನದಲ್ಲಿ ಆಧುನಿಕತೆ ಎನ್ನುವುದರ ಸ್ವರೂಪವು ಇನ್ನಷ್ಟು ಸಂಕೀರ್ಣವಾಗಿದೆ. ಇಲ್ಲಿ ಆಧುನಿಕತೆ ಎನ್ನುವುದು ಆಧುನಿಕೋತ್ತರತೆ ಎಂದು ಹೇಳಬಹುದಾದ ಸ್ವರೂಪದ್ದು. ಆಧುನಿಕತೆ ಎನ್ನುವುದು ಒಂದರ್ಥದಲ್ಲಿ ಹೆಣ್ಣಿನ ಅಸ್ತಿತ್ವವನ್ನು ನಿರೂಪಿಸಿಕೊಳ್ಳಲು ಅನುವು ಮಾಡಿಕೊಟ್ಟಿದೆ. ಆಧುನಿಕ ಹೆಣ್ಣು ತನ್ನ ಲೈಂಗಿಕತೆಯನ್ನು ತಾನೇ ವಿಶ್ಲೇಷಣೆ ಮಾಡಬಲ್ಲವಳಾಗಿ

ಸಮಾಜದ ಪಿತೃಪ್ರಧಾನತೆಯನ್ನು ಪ್ರಶ್ನಿಸುವ ಮೂಲಕ ತನ್ನ ಅಸ್ಮಿತೆಯ ನೆಲೆಗಳನ್ನು ಶೋಧಿಸಿಕೊಳ್ಳುತ್ತಾಳೆ. ವೀಣಾ ಶಾಂತೇಶ್ವರ ಅವರ 'ಮುಳ್ಳುಗಳು' ಸಂಕಲನದ ಕತೆಗಳು ಆಧುನಿಕ ಸಮಾಜದಲ್ಲಿ ಹೆಣ್ಣಿನ ಅಸ್ಮಿತೆಯನ್ನು ವಿವರಿಸಿಕೊಳ್ಳುವುದು ಹೇಗೆಂಬ ಜಿಜ್ಞಾಸೆಯನ್ನು ಕಥನ ರೂಪದಲ್ಲಿ ಅಭಿವ್ಯಕ್ತಿ ಮಾಡುತ್ತವೆ. ಬಿಡುಗಡೆ ಎನ್ನುವುದು ಒಂದು ಕ್ರೈಸಿಸಿನಂತೆ ಕಾಣುವ ಸಂದರ್ಭವನ್ನು ಆ ಶತಮಾನದ ಆಧುನಿಕತೆಯನ್ನು ವಿವರಿಸಿಕೊಳ್ಳುವುದಕ್ಕೆ ಸಹಾಯ ಮಾಡಿದವು. ಅದಾಗಲೇ ಕಾವ್ಯದಲ್ಲಿ ನಾನು ಯಾರು? ಎನ್ನುವ ಪ್ರಶ್ನೆಯನ್ನು ಎತ್ತಿಕೊಂಡು ಇತಿಹಾಸ, ಪುರಾಣಗಳ ಹೆಣ್ಣಿನ ಅಸ್ಮಿತೆಯನ್ನು ನಿರಾಕರಿಸುವ ಮೂಲಕ ತಮ್ಮದೇ ಆದ ಸ್ವತಂತ್ರ ಅಸ್ತಿತ್ವ ಇದೆ ಎನ್ನುವುದನ್ನು ಢಾಳಾಗಿಯೇ ವಿವರಿಸಿಕೊಳ್ಳಲೆತ್ನಿಸಿದ ಕನ್ನಡದ ಕವಯಿತ್ರಿಯರ ಕವಿತೆಗಳಂತೆಯೇ ಕತೆಗಳು ಆಧುನಿಕತೆಯ ವಿವೇಚನೆಯಲ್ಲಿ ತೊಡಗಿಕೊಂಡವಾದರೂ ಕಥನದಲ್ಲಿ ಅವು ಹೆಚ್ಚು ಸಾಮಾಜಿಕಗೊಳ್ಳಬೇಕಾಯಿತು. ಆದರೆ ಆಧುನಿಕತೆಯೆನ್ನುವುದು ಈ ದಶಕದಲ್ಲಿ ಬಿಡುಗಡೆಗೊಳಿಸಿಕೊಡುವ ಒಂದು ಸಾಧ್ಯತೆ ಮಾತ್ರವಲ್ಲ ಆ ಅಸ್ಮಿತೆಯನ್ನು ಅಧಿಕಾರದ ನೆಲೆಗಟ್ಟಿನಲ್ಲಿ ಮರುವಿವರಿಸಿಕೊಳ್ಳಬೇಕಾದ ಒತ್ತಡಕ್ಕೆ ಸಿಲುಕಿದವು. ಅಂದರೆ ಆಧುನಿಕತೆಯ ಚರ್ಚೆಯನ್ನು ಇವು ಇನ್ನಷ್ಟು ಮುಂದಕ್ಕೆ ಒಯ್ದವು ಎನ್ನಬಹುದು. ವೀಣಾ ಶಾಂತೇಶ್ವರ ಎತ್ತಿದ ಲೈಂಗಿಕ ಆಸೆ, ಅಭಿವ್ಯಕ್ತಿಗಳ ಅಂಶವನ್ನೇ ಎತ್ತಿ ಇಲ್ಲಿ ಚರ್ಚಿಸುವುದಾದರೆ ವೈದೇಹಿಯವರ 'ಸೌಗಂಧಿಯ ಸ್ವಗತಗಳು' ಕತೆಯಲ್ಲಿ ಹೆಣ್ಣೊಬ್ಬಳ ಸುಪ್ತ ಆಸೆ, ಕಾಮನೆಗಳು ಎಲ್ಲಿಯೂ ಬೇಲಿ ಹಾರುವುದಿಲ್ಲ. ಆದರೆ ಅಲ್ಲಿನ ಸೂಕ್ಷ್ಮ ಚಡಪಡಿಕೆ, ಆಸೆಗಳು ಸೌಗಂಧಿ ಹೊಂದಬಯಸುವ ಅನುಭವದ ಕಾತುರತೆಯನ್ನು ಹೇಳುತ್ತವೆ. ಇದೇ ಬಗೆಯ ಸನ್ನಿವೇಶವನ್ನು ಶಾಂತಿ ಅಪ್ಪಣ್ಣ ಎಂಬ ಈ ತಲೆಮಾರಿನ ಲೇಖಕಿ ತಮ್ಮ 'ಪಯಣ' ಕತೆಯಲ್ಲಿ ನಿರ್ವಹಿಸುವಾಗ ಹೊಸ ಅನುಭವವೊಂದರ ಬಗ್ಗೆ ಸುಪ್ತಭಯದ ಜೊತೆಗೆ ನಿರೀಕ್ಷೆ ಕೂಡ ಇರುವುದನ್ನು ಗುರುತಿಸುತ್ತಾರೆ. ಪಯಣದ ಕೊನೆಯಲ್ಲಿ ಕುಟುಂಬದ ಮಧ್ಯೆ ನಿಂತಾಗಲೂ ತನ್ನ ಆಸೆಗಳು ಜೀವಂತವಾಗಿರುವುದನ್ನು ಕತೆಯೊಳಗಿನ ಹೆಣ್ಣು ಗುರುತಿಸಿಕೊಳ್ಳುತ್ತಾಳೆ. ಆದರೆ ಸೌಗಂಧಿಯ ಮನಸ್ಥಿತಿಯ ಅಸಹಾಯಕತೆ ಇಲ್ಲಿ ಸಂದರ್ಭವನ್ನು ವಿಶ್ಲೇಷಿಸಬಲ್ಲ ಛಾತಿಯಾಗಿ ಪರಿವರ್ತಿತವಾಗುತ್ತದೆ. ಈ ಪಲ್ಲಟವನ್ನೇ ಯುಗಧರ್ಮದ ಸಂವೇದನೆ ಎಂದು ಗುರುತಿಸಲು ಒತ್ತಾಯಿಸುತ್ತಿರುವುದು.

ಈ ದಶಕದಲ್ಲಿ ಕ್ರಿಯಾಶೀಲರಾಗಿ ಬರೆಯುತ್ತಿರುವ ಇಬ್ಬರು ಹೊಸ ಲೇಖಕಿಯರೆಂದರೆ ಶಾಂತಿ ಅಪ್ಪಣ್ಣ ಹಾಗು ಅನುಪಮಾ ಪ್ರಸಾದ್. ಈ ಲೇಖಕಿಯರ ಕತೆಗಳು ಅನಾವರಣಗೊಳಿಸುವ ಹೊಸ ಹೆಣ್ಣಿನ ಅನುಭವ, ಸಂವೇದನೆಗಳು ಪಿತೃಪ್ರಧಾನತೆಯ ಚರ್ಚೆಯನ್ನು ಇನ್ನಷ್ಟು ಸೂಕ್ಷ್ಮಗೊಳಿಸುತ್ತವೆ. ಅನುಪಮಾ ಪ್ರಸಾದ್ ಅವರ 'ಬಣ್ಣ' ಕತೆಯು ಕಪ್ಪು ಬಿಳುಪಿನಲ್ಲಿ ಪಿತೃಪ್ರಧಾನತೆಯನ್ನು ಎತ್ತಿ ತೋರುವುದಕ್ಕಿಂತ ವಿಭಿನ್ನವಾಗಿದೆ. ತಂದೆ ತನ್ನ ಚಿತ್ರಾರ್ಥಿ ಮಗಳನ್ನು ಕಲಾವಿದೆ ಎಂದು ಗುರುತಿಸದೇ ಹೋಗುವ

ನೋವು ಅಲ್ಲಿದೆ. ಸ್ತ್ರೀತ್ವದ ಶಕ್ತಿ ಸಾಮರ್ಥ್ಯಗಳು ಗಂಡಸಿನ ದರ್ಪದೆದುರು ಅಸಹಾಯಕವಾಗಿಬಿಡುತ್ತವೆ ಎನ್ನುವ ಅಂಶವನ್ನು ಅನುಪಮಾ ತಮ್ಮ ಕತೆಗಳಲ್ಲಿ ಸೂಕ್ಷ್ಮವಾಗಿ ಬಿಚ್ಚಿಡುತ್ತಾರೆ. ಅಷ್ಟೇ ಅಲ್ಲ ಸಮಕಾಲೀನ ಬದುಕಿನ ತಲ್ಲಣಗಳನ್ನು ಅವರು ಸ್ತ್ರೀತ್ವದ ನೆಲೆಯಿಂದ ನೋಡುವ ಕಾರಣದಿಂದ ಆ ಸಮಸ್ಯೆಗಳ ಆಯಾಮ ಇನ್ನೊಂದು ಬಗೆಯದಾಗಿ ಕಾಣುತ್ತದೆ. ಶಾಂತಿ ಅವರಲ್ಲಿಯೂ ಈ ಬಗೆಯ ನಿಲುವನ್ನು ಕಾಣಬಹುದು. ಹೊರಜಗತ್ತಿನ ಹಿಂಸೆಗೆ ಮುಖಾಮುಖಿಯಾಗುವ ಮೂಲಕ ಸಮಾಜದ ದುರಂತವನ್ನು ಕಾಣಿಸುವುದು ಸಣ್ಣಕತೆಯ ಚೌಕಟ್ಟಿನಲ್ಲಿ ಸಾಧ್ಯವಾಗಿಸಿಕೊಳ್ಳುವುದು ಈ ಸೂಕ್ಷ್ಮ ಕತೆಗಾರ್ತಿಯರಲ್ಲಿ ಕಾಣುತ್ತದೆ. ಅಂದರೆ ಮೌಲ್ಯಗಳು ಬದಲಾಗುತ್ತಾ ಇರುವ ಸಂಕ್ರಮಣದ ಕಾಲದಲ್ಲಿ ಹೊಸ ಮೌಲ್ಯಗಳನ್ನು ಗುರುತಿಸಿಕೊಳ್ಳುವುದು ಕಠಿಣ. ಆದರೆ ಆ ಪ್ರಯತ್ನಗಳು ನಮ್ಮನ್ನು ಮಾನವೀಯ ನೆಲೆ ಎನ್ನುವ ಅಮೂರ್ತತೆಗೆ ಈಡು ಮಾಡುತ್ತವೆ ಎನ್ನುವುದು ಸಹ ಇದೇ ಸಂದರ್ಭದಲ್ಲಿ ಆಲೋಚಿಸಬೇಕಾದ ಸಂಗತಿ. ಈ ಹೊತ್ತಿನ ಇಬ್ಬರು ಮುಖ್ಯ ಕತೆಗಾರ್ತಿಯರ ಕತೆಗಳಲ್ಲಿ ಈ ರೀ ಅಡ್ಜಸ್ಟ್‌ಮೆಂಟ್ ಧೋರಣೆ ಇನ್ನೂ ಹದಗೊಳ್ಳುತ್ತಲಿದೆ ಎನ್ನಬಹುದು. ಕಲೆಗಾರಿಕೆಯನ್ನು ಮರೆಯದೇ ಶೋಷಣೆಯನ್ನು ಸೂಕ್ಷ್ಮವಾಗಿ ಅರ್ಥೈಸುವ ನೆಲೆಯಲ್ಲಿ ಅನುಪಮಾ ಪ್ರಸಾದ್ ಹಾಗು ಶಾಂತಿ ಅಪ್ಪಣ್ಣ ಅವರ ಕತೆಗಳು ಇವೆ. ಅದಕ್ಕೆ ಅನುಪಮಾ ಅವರ 'ದೂರತೀರ', ಶಾಂತಿ ಅವರ 'ಮನಸು ಅಭಿಸಾರಿಕೆ'ಯ ಅನೇಕ ಕತೆಗಳನ್ನು ಗಮನಿಸಬಹುದು.

ಜಯಶ್ರೀ ಕಾಸವರಳ್ಳಿ ಅವರ ಕತೆಗಳು ಆಧನಿಕತೆಯನ್ನು ಬಿಚ್ಚಿಡುವ ಕತೆಗಳು. ಹಳೆಯ ಸಮಾಜವೊಂದು ತನ್ನ ಪೊರೆ ಕಳಚುತ್ತಾ ಆಧುನಿಕತೆಯನ್ನು ಹೊಂದುವಾಗ ಆಗುವ ಸ್ಥಿತ್ಯಂತರಗಳನ್ನು ಹೇಳುವ 'ಕೊಪ್ಪರಿಕೆ', 'ದಿನಚರಿಯ ಕಡೇಪುಟದಿಂದ' ದಂತಹ ಕತೆಗಳು ತೋರುತ್ತವೆ. ವೈದೇಹಿಯವರ 'ಕ್ರೌಂಚ ಪಕ್ಷಿಗಳು' ಕಥಾ ಸಂಕಲನದ ಕತೆಗಳು ಸಹ ಅತಿಯಾಗಿ ಸಾಮಾಜಿಕೀಕರಣಗೊಳ್ಳುತ್ತಿರುವ ಬದುಕುಗಳು ಆಧುನಿಕೋತ್ತರದ ಬಗೆಯನ್ನು ಹೇಳುತ್ತವೆ. 'ಮನೆಯವರೆಗಿನ ಹಾದಿ' ರಸ್ತೆಯಾಗಿರುವುದು ದೇವನೂರರ 'ಡಾಂಬರು ಬಂದುದು' ಕತೆಯಂತೆಯೇ ಒಂದು ಬದಲಾವಣೆ ಹೇಗೆ ಸಾಮಾಜಿಕ ಪರಿಸರವನ್ನು ಬದಲಾಯಿಸುತ್ತದೆ ಎನ್ನುವುದನ್ನು ನಿರೂಪಿಸುತ್ತದೆ. ಈ ಹಿಂದೆಯಾದರೂ 'ಗುಲಾಬಿ ಟಾಕೀಸು' ಕತೆಯಲ್ಲಿ ಒಟ್ಟಾರೆ ಸಾಮಾಜಿಕ ಜೀವನದಲ್ಲಿ ಹಾಗು ಹೆಣ್ಣುಜಗತ್ತಿನಲ್ಲಿ ಆಧುನಿಕತೆಯ ಪ್ರವೇಶ ಉಂಟು ಮಾಡುವ 'ಚಹಾಕಪ್ಪಿನೊಳಗಿನ ಬಿರುಗಾಳಿ' ಸೂಚ್ಯವಾಗಿ ಹೆಣ್ಣುಜಗತ್ತು ಹೊರಬಾಳಿಗೆ ಒಡ್ಡಿಕೊಳ್ಳುವ ಮೂಲಕ ಬದಲಾವಣೆಯನ್ನು ಹೊಂದುವ ಪ್ರಕ್ರಿಯೆಯಲ್ಲಿದೆ ಎನ್ನುವುದನ್ನು ಹೇಳಿದೆ. ಒಂದು ತಲೆಮಾರು ಎತ್ತಿದ ಸಂದಿಗ್ಧದ ಸಮಸ್ಯೆಯನ್ನು ಹೊಸ ತಲೆಮಾರು ಕೂಡ ಕಂಡಿದೆ. ಆದರೆ ಆ ಕಾಣ್ಕೆಯಲ್ಲಿ ಕಾಣುವ ಸಣ್ಣ ಸಣ್ಣ ಹೊರಳುಗಳು, ಗ್ರಹಿಕೆಯ ಕ್ರಮಗಳು ಲೇಖಕಿಯರ ಕಥೆ ಕಟ್ಟುವಿಕೆಯಲ್ಲಿ ಒಂದು ಬದಲಾವಣೆಯನ್ನು ಸೂಚಿಸುತ್ತಿದೆ.

ಹೊಸ ತಲೆಮಾರಿನ ಲೇಖಕಿ ದೀಪ್ತಿ ಭದ್ರಾವತಿ ಅವರ ಕತೆಗಳು ಜಾಗತೀಕರಣದ ಸಂದರ್ಭದಲ್ಲಿ ರೂಪುಗೊಳ್ಳುತ್ತಿರುವ ಸಮಾಜವನ್ನು ಆಧುನಿಕತೆಯಾಗಿ ಪರಿಭಾವಿಸುತ್ತವೆ. ಆಧುನಿಕತೆಯನ್ನು ಸಾಮಾಜಿಕ ಪರಿಸರದಲ್ಲಿಟ್ಟು ನೋಡುವುದನ್ನು ಮುಖ್ಯ ಕಾಳಜಿ ಎಂದು ಅನೇಕ ಲೇಖಕಿಯರು ಭಾವಿಸಿರುವಂತೆ ತೋರುತ್ತದೆ. ದೀಪ್ತಿ ಭದ್ರಾವತಿ ಅವರು ಕೈಗಾರಿಕೀಕರಣ ಹಾಗು ಜಾಗತೀಕರಣದ ಪರಿಣಾಮಗಳ ವಸ್ತುಗಳನ್ನಿಟ್ಟುಕೊಂಡು ಕತೆಗಳನ್ನು ಬರೆದಿದ್ದಾರೆ. ಅವರ 'ಆ ಬದಿಯ ಹೂವು' ಸಂಕಲನದಲ್ಲಿ 'ನೀಲಾಂಬರ' ಹಾಗು 'ತಿಮ್ಮಯ್ಯ ಮಾರ್ಕೆಟ್' ಮುಂತಾದ ಕತೆಗಳಲ್ಲಿ ಬದಲಾಗುತ್ತಿರುವ ಊರಿನ ಪರಿಸರವನ್ನು ವರ್ಣಿಸುತ್ತಲೇ ನಗರದ ಕುರೂಪಗಳನ್ನು ಕಾಣಿಸಲು ಯತ್ನಿಸುತ್ತಾರೆ. ವಿದೇಶೀ ಕಂಪೆನಿಗಳು ಬಂದು ಒಂದು ಊರಿನ ಚಿತ್ರಣವನ್ನು ಬದಲಾಯಿಸುವ ವಸಾಹತುಶಾಹಿ ಧೋರಣೆಯ ಕತೆಯೂ ಇಲ್ಲಿದೆ(ಬೆವರ ಸಂತೆ). ಸಮಾಜಶಾಸ್ತ್ರೀಯ ವಿವರಗಳಿಂದ ಕಥೆ ಕಟ್ಟುವುದು ಸಾಧುವೇ? ಹೀಗೆಂದು ಕೇಳಿಕೊಂಡರೆ ಅದು ಸಾಲದು ಎನ್ನಬೇಕಾಗುತ್ತದೆ. ಮಾನವೀಯ ನೆಲೆಗಟ್ಟನ್ನು ವಿಸ್ತರಿಸಿಕೊಳ್ಳುವ ಆಶಯವನ್ನೇ ಪ್ರಧಾನವಾಗಿರಿಸಿಕೊಂಡು ಕತೆ ಹೇಳಲು ಹೊರಡುವ ಕತೆಗಳೆಲ್ಲ ಕೃತಕವಾದ ಸಂವೇದನೆಯನ್ನು ಕಟ್ಟಿಕೊಂಡು ಬಂದಿರುವಂತೆ ತೋರುತ್ತವೆ. ಈ ಮಿತಿ ಹೊಸ ತಲೆಮಾರಿನ ಕತೆಗಾರ್ತಿಯರಲ್ಲಿ ಇಣುಕಿದೆ. ಎಚ್.ಎಸ್. ಅನುಪಮಾ ಅವರ 'ಹೂವರಳಿದ್ದಕ್ಕೆ ಯಾರು ಸಾಕ್ಷಿ?' ಕತೆಗಳ ಸಂಕಲನವು ಕತೆ ಹೇಳುವ ಪ್ರಯತ್ನವನ್ನಂತೂ ಮಾಡುತ್ತವೆ ಆದರೆ ಅವುಗಳ ಹಿಂದಿನ ಆಶಯಗಳೇ ಕತೆಗಳನ್ನು ಮುನ್ನಡೆಸುತ್ತವೆ.

ಗೀತಾ ವಸಂತ ಅವರ 'ಚೌಕಟ್ಟಿನಾಚೆಯವರು' ಕಥಾ ಸಂಕಲನವು ಉತ್ತರ ಕನ್ನಡದ ಪ್ರಾದೇಶಿಕ ಪರಿಸರದಲ್ಲಿ ಬದುಕುವ ಹೆಣ್ಣುಗಳ ಜೀವನವನ್ನು ಚಿತ್ರಿಸುವ ಕತೆಗಳನ್ನು ಒಳಗೊಂಡಿದೆ. ಈ ಸಂಕಲನದಲ್ಲಿ ದೊಡ್ಡ ಜಿಗಿತಗಳು ಕಾಣದಿದ್ದರೂ ಆಧುನಿಕತೆಯ ಸಂಗತಿಯನ್ನು ಅವು ಪರೋಕ್ಷವಾಗಿ ನಿರ್ವಹಿಸುತ್ತವೆ ಎನ್ನಿಸುತ್ತದೆ. ಸುಶೀಲಾ ಡೋಣೂರ ಅವರ 'ಕಾಲನ ಕೈಯೊಳಗೆ' ಸಂಕಲನದ ಕತೆಗಳಲ್ಲಿ ಸಹ ಅಂಚಿನಲ್ಲಿರುವ ಹೆಣ್ಣಿನ ಬದುಕುಗಳೇ ಕೇಂದ್ರದಲ್ಲಿವೆ. ಈ ಬಗೆಯ ವಸ್ತುವಿನ ಆಯ್ಕೆ ಶಕ್ತಿಯಾಗಿರುವಂತೆ ಮಿತಿಯೂ ಕೂಡ ಆಗಿದೆ. ಮಹಿಳಾ ವಸ್ತುವನ್ನು ಎತ್ತಿಕೊಳ್ಳುತ್ತಲೇ ಮಾನವೀಯ ಜಗತ್ತನ್ನು ಮುಖಾಮುಖಿಯಾಗಬೇಕಾದ ಅನಿವಾರ್ಯತೆ ಇಂದು ಎಲ್ಲಾ ಸ್ತ್ರೀ ಬರಹಗಳಿಗಿವೆ. ಮಹಿಳಾ ವಸ್ತು, ಮಹಿಳಾ ನಿರೂಪಣೆ, ಮಹಿಳಾ ಜಗತ್ತುಗಳನ್ನು ತಮ್ಮ ಅನನ್ಯತೆಗಳೆಂದು ಭಾವಿಸುವ ಲೇಖಕಿಯರಿಗೆ ಮಹಿಳಾ ಪ್ರತಿನಿಧೀಕರಣದ ಅವಕಾಶ ಸಿಗುತ್ತದೆಯಾದರೂ ಅದು ಒಂದು ಹಂತಕ್ಕೆ ಸೀಮಿತವಾಗುವ ಅಪಾಯವನ್ನೂ ವಿಧಿಸುತ್ತಿರುತ್ತದೆ ಎನ್ನುವುದನ್ನು ಗಮನಿಸಬೇಕು.

ಕೆಲವು ಮಿತಿಗಳನ್ನು ದಾಟಿ ನೋಡುವುದಾದರೆ ಆಧುನಿಕತೆಯ ಉತ್ತರವು ಹೊಸ ಶತಮಾನದ ಬರಹಗಾರ್ತಿಯರು ಉರಿಯುವ ಸಮಸ್ಯೆಗಳಾದ ಜಾತಿ, ಲಿಂಗವಂತಹ

ವಿಷಯಗಳನ್ನು ಬರವಣಿಗೆಯಲ್ಲಿ ಎದುರಿಸುವಾಗ ಹಿಂದಿನ ತಲೆಮಾರಿನವರಿಗಿಂತ ಭಿನ್ನವಾಗಿರುವಂತೆ ಮಾಡುತ್ತದೆ. ಸ್ತ್ರೀಶೋಷಣೆಯೆನ್ನುವುದು ಗಂಡು ಹೆಣ್ಣಿನ ಭೇದದ ಕಹಿ ಬಿಂಬ ಮಾತ್ರವಲ್ಲದೆ ಅದೊಂದು ಸಾಮಾಜಿಕವಾಗಿ ಹಿಂಸಾತ್ಮಕವಾದ ಧೋರಣೆ ಎನ್ನುವುದನ್ನು ಕತೆಗಾರ್ತಿಯರು ತಮ್ಮ ಕಥನಗಳಲ್ಲಿ ಗಮನಿಸುತ್ತಾರೆ. ಇದರಿಂದ ಜೆಂಡರ್ ಭೇದ ಎನ್ನುವುದು ಕಪ್ಪು ಬಿಳುಪಿನದ್ದಾಗಿರುವುದಿಲ್ಲ.

ದಲಿತ ಎನ್ನುವ ಅನುಭವ ಲೋಕವು ಈ ಹಿಂದೆ ದಕ್ಕಿದ್ದು ಪುರುಷಾನುಭವಗಳ ಕಥನಗಳ ಮೂಲಕವೇ. ಆದರೆ ದು.ಸರಸ್ವತಿ ಅವರ ಕತೆಗಳು ಇನ್ನೊಂದು ಹಂತಕ್ಕೆ ಒಯ್ಯುತ್ತವೆ. ಈಗಿನ ದಲಿತ ಲೋಕವು ಅನುಭವಿಸುವ ಶೋಷಣೆಯು ಆಧುನಿಕತೆಯ ಸಾಂದರ್ಭಿಕ ಚೌಕಟ್ಟಿನಲ್ಲಿ ಹೊಸ ರೂಪ ಪಡೆದುಕೊಂಡಿರುವುದನ್ನು ಸರಸ್ವತಿ ಅವರ ಕತೆಗಳು ತೋರಿಸುತ್ತವೆ. ಶೋಷಣೆ ಇಲ್ಲಿ ಅಬ್ಬರದ, ಅಥವಾ ಹಸಿಹಸಿ ಕಥನಗಳಾಗಿ ಬರುವುದಿಲ್ಲ. ದಲಿತರು ಎದುರಿಸುವ ಸಮಸ್ಯೆ ಬ್ರಾಹ್ಮಣ ಶೂದ್ರ ಎನ್ನುವ ಕಪ್ಪು ಬಿಳುಪಿನ ಸಂಗತಿಯಾಗಿ ಮಾತ್ರ ಉಳಿದಿಲ್ಲ. ಅದು ಆಧುನಿಕ ವ್ಯವಸ್ಥೆಯಲ್ಲಿ ಜಾತಿ ವ್ಯವಸ್ಥೆಯ ಅಲಗುಗಳು ಇನ್ನಷ್ಟು ಹರಿತವಾಗಿ ಸೂಕ್ಷ್ಮವಾಗಿ ಕೊಯ್ಯುತ್ತಲಿವೆ. ಸರಸ್ವತಿ ಅವರ 'ಬಚ್ಚೀಸು' ಸಂಕಲನದಲ್ಲಿ ಈ ಹೊರಳುಗಳು ಸೂಕ್ಷ್ಮವಾಗಿ ಕಾಣುತ್ತವೆ. ಆಧುನಿಕತೆ ದಲಿತರಿಗೆ ಬಿಡುಗಡೆಯನ್ನು ತಂದುಕೊಟ್ಟರೂ ಆಳದಲ್ಲಿ ನಗರಗಳಲ್ಲಿಯೂ ಆ ಬಿಡುಗಡೆ ಇನ್ನೂ ಪೂರ್ಣವಾಗಿ ಸಾಕಾರಗೊಂಡಿದ್ದಲ್ಲ. ಅದು ವಸ್ತುಶಃ ಅನುಭವಗಳಾಗಿ ಇನ್ನಷ್ಟು ಕ್ರೂರವಾಗಿ ಇರಿಯುತ್ತಾ ಜಾತಿಯನ್ನು ಹೊಸ ವಿನ್ಯಾಸದಲ್ಲಿ ಪ್ರಕಟಿಸುತ್ತಲಿದೆ. ಇನ್ನೊಂದೆಡೆ ಆಧುನಿಕತೆ ದಲಿತರಿಗೆ ವಿದ್ಯೆಯನ್ನು ತಂದುಕೊಟ್ಟರೂ ಅದರಿಂದ ಭೇದಿಸಲಾಗದ ಅನೇಕ ತೊಡಕುಗಳಿವೆ. ಸರಸ್ವತಿ ಅವರ 'ಬಚ್ಚೀಸು' ಕತೆ' ಕಾರ್ಪೊರೇಶನ್ನಿನಲ್ಲಿ ಕೆಲಸ ಮಾಡುವ ದಲಿತರ ಹೆಣ್ಣಿನ ಶೋಷಣೆಯನ್ನು ಬಿಚ್ಚಿಡುತ್ತಲೇ ವಿದ್ಯೆಯ ಬಗ್ಗೆ ಆಶಾದಾಯಕವಾಗಿದೆ. ಮಗಳಿಗೆ ಹುಟ್ಟುವ ಎರಡು ಬೆರಳಿನ ಕೂಸು ಮುಂದೆ ಕಸಬರಿಕೆ ಹಿಡಿಯದೆ ಎರಡು ಕೈಗಳಲ್ಲಿ ಪೆನ್ನು ಹಿಡಿಯುವುದಕ್ಕೆ ತಕ್ಕನಾಗಿದೆ ಎಂದು ತಾಯಿ ಕನಸು ಕಾಣುತ್ತಾಳೆ. ವಿಷಾದ ಎನ್ನುವುದು ಸಹ ಹೇಗೆ ಆಶೆಯಾಗುತ್ತದೆ ಎನ್ನುವುದನ್ನು ಸರಸ್ವತಿ ಅವರ ಕತೆಗಳು ತೋರುತ್ತವೆ. ಗೌಡರ ಹುಡುಗನನ್ನು ಮದುವೆಯಾಗುವ ದಲಿತ ಹೆಣ್ಣುಮಗಳು ಯಲ್ಲಮ್ಮ ತನ್ನ ಬಿಡುಗಡೆಯಲ್ಲಿಯೂ ಅನುಭವಿಸುವ ತಳಮಳ ಅವಳ ಗಂಡನ ಬಳಿಯೂ ಹಂಚಿಕೊಳ್ಳಲಾಗದ ಜಾತಿಯ ನೋವು ಇವು ಹೆಣ್ಣಿನ ಸಂವೇದನೆಯಲ್ಲಿ ದಲಿತತ್ವದ ಅನುಭವಗಳನ್ನು ಇನ್ನಷ್ಟು ಸೂಕ್ಷ್ಮ ಹಂತಕ್ಕೆ ಒಯ್ಯುತ್ತವೆ. ಈ ದಿಸೆಯಲ್ಲಿ ಹೆಣ್ಣು ಬರೆಯಬಹುದಾದ ಕತೆಗಳು ಹೀಗೆ ಸೂಕ್ಷ್ಮವೂ ಸಂವೇದನಾಶೀಲವೂ ಆದ ಅನುಭವಗಳಿಗೆ ಮಾಧ್ಯಮವಾಗಿವೆ ಎನಿಸುತ್ತದೆ. ಇದೇ ಸಂದರ್ಭದಲ್ಲಿ ಗಮನಿಸಬಹುದಾದ ಕತೆಗಳನ್ನು ವಿಜಯಾ ಮೋಹನ್ ಅವರ 'ಜಾತಿ' ಸಂಕಲನದಲ್ಲಿಯೂ ಕಾಣುತ್ತವೆ.

ಆಧುನಿಕತೆಯ ಹೊಸ ಹೊರಳು ಎಂದರೆ ಹೊಸ ಅನುಭವಗಳ ಹುಡುಕಾಟ. ಹೆಣ್ತನದ ಹೊಸ ವ್ಯಾಖ್ಯಾನವು ಬೇಕೆಂಬ ಹಂಬಲದಿಂದ ಅನೇಕ ಹೊಸ ಅನುಭವ ಲೋಕಗಳನ್ನು ಕೆದಕುವ ನಿಟ್ಟಿನಲ್ಲಿ ಕೆಲವು ಪ್ರಯತ್ನಗಳು ನಡೆದಿವೆ. ಈ ಕತೆಗಳ ವಸ್ತುವಿನ ಆಯ್ಕೆ ಪ್ರಜ್ಞಾಪೂರ್ವಕವೆನ್ನಿಸಿದರೂ ಅವುಗಳ ಪ್ರಯತ್ನ ಒಂದು ಜಿಗಿತ ಎಂದೇ ಹೇಳಬಹುದು. ಇಲ್ಲಿ ಮೂರನೇ ಲಿಂಗದ, ಹೆರಲಿಂಗಿಗಳ ಅನುಭವದತ್ತ ಕೈಚಾಚುವುದನ್ನು ಕಾಣಬಹುದು. ಹೆಣ್ತನದ ಪರಿಧಿಯನ್ನು ಇನ್ನಷ್ಟು ಹಿಗ್ಗಿಸಿ ನೋಡುವ ಪ್ರಯತ್ನಗಳಂತೆಯೇ ಕಾಣುತ್ತವೆ. ಸಂಧ್ಯಾ ಹೊನಗುಂಟಿಕರ್ ಅವರ 'ಹಾರಲಾಗದ ಸೋಣ' ಸಂಕಲನದ 'ಕ್ಯಾಕ್ಟಸ್ ಮತ್ತು ಒಂದು ರೂಪಾಂತರ' ಕತೆಯು ಒಬ್ಬ ಹುಡುಗ ಹುಡುಗಿಯಾಗುವ ರೂಪಾಂತರದಲ್ಲಿ ಸಮಾಜದ ಒತ್ತಡವನ್ನು ವಿಷಾದದಿಂದ ಚಿತ್ರಿಸುತ್ತದೆ. ಕವಿತಾ ರೈ ಅವರ 'ನಾಟಿ ಓಟಿ' ಸಂಕಲನದಲ್ಲಿರುವ 'ಪಾದ್ರಿ, ಅವಳು ಮತ್ತು ಗಾಂಧಿ' ಕತೆ ತೃತೀಯ ಲಿಂಗಿಯ ಚಿತ್ರಣವಾದರೆ, ಸುಶೀಲ ಡೋಣೂರ ಅವರ 'ಕಾಲನ ಕೈಯೊಳಗೆ' ಸಂಕಲನದ 'ತೂಫಾನ್' ಕತೆ ಲಿಂಗತ್ವದ ಬಗೆಗೆ ಸಮಾಜ ಹೊಂದಿರುವ ಪೂರ್ವಾಗ್ರಹದ ಭಾವನೆಯನ್ನು ತೋರುತ್ತದೆ. ಹೀಗೆ ಅನೇಕ ಕತೆಗಾರ್ತಿಯರ ಕಥನಗಳು ಮೂರನೇ ಲಿಂಗದ ಬದುಕುಗಳನ್ನು ಚಿತ್ರಿಸುವುದಕ್ಕೆ ಪ್ರೇರಣೆ ಆಧುನಿಕೋತ್ತರ ಸಮಾಜದಲ್ಲಿ ಹೊರಬರಲು ಯತ್ನಿಸುತ್ತಿರುವ ಲಿಂಗತ್ವದ ವಿವೇಚನೆಯ ತಾಕಲಾಟಗಳೇ ಎನ್ನಿಸುತ್ತದೆ. ಇಂತಹ ಕತೆಗಳು ಗುರುತಿಸುವ ಲಿಂಗತ್ವದ ಅನುಭವವನ್ನು ಶೋಧಿಸಲೆತ್ನಿಸುತ್ತವೆ. ಇಲ್ಲಿ ಸ್ತ್ರೀತ್ವದ ಅಸ್ಪಷ್ಟ ಚಹರೆ ಒಂದೆಡೆ ಇದ್ದರೆ ಪುರುಷತ್ವದ ಗಸಿಯೂ ಉಳಿದಿರುವುದನ್ನು ಗುರುತಿಸುವುದು ಮುಖ್ಯವಾಗುತ್ತದೆ. ಈ ಸಂದಿಗ್ಧವನ್ನು ಕಥಾ ವಸ್ತುವನ್ನಾಗಿಸಿಕೊಳ್ಳುವ ಹಂಬಲವು ಆಧುನಿಕೋತ್ತರದ ಮನೋಭಾವವನ್ನು ತೋರುತ್ತದೆ. ಈ ಮನೋಭಾವವು ಇನ್ನೂ ಹರಳುಗಟ್ಟಿ ಬೆಳೆದಿಲ್ಲವಾದರೂ ಇವನ್ನು ಉತ್ತಮ ಪ್ರಯತ್ನಗಳೆಂದು ಕರೆಯಬಹುದಾಗಿದೆ.

ವರ್ತಮಾನದಲ್ಲಿನ ಸಾಹಿತ್ಯವು ಸಾಮಾಜಿಕವಾಗಿ ತನ್ನನ್ನು ತಾನು ಪರಿಭಾವಿಸಿಕೊಳ್ಳಬೇಕಾದ ಒತ್ತಡವನ್ನು ಎದುರಿಸುತ್ತಲಿದೆ. ಸಾಮಾಜಿಕವಾಗಿ ತಮಗಿರುವ ಕಾಳಜಿಗಳನ್ನು ವ್ಯಕ್ತಪಡಿಸದಿದ್ದರೆ ತಾವು ಔಟ್‌ಡೇಟ್ ಆಗುವ ಭಯ ಇಂದಿನ ಬರಹಗಾರರಿಗಿದೆ. ಈ ಕಾರಣದಿಂದ ಅವರ ಕತೆ, ಕಾವ್ಯಗಳ ವಸ್ತುಗಳನ್ನು ಅವರು ಆಯ್ಕೆ ಮಾಡಿಕೊಳ್ಳುವಾಗ ಪೊಲಿಟಿಕಲಿ ಕರೆಕ್ಟಾದ ಧೋರಣೆಯನ್ನು ಅನುಸರಿಸುವ ಆಯ್ಕೆ ಮಾಡಿಕೊಳ್ಳುತ್ತಾರೆ. ಇದಕ್ಕೆ ಪೂರಕವಾಗಿ ಅವರ ಬೆನ್ನಹಿಂದೆ ಇರುವ ಚಳವಳಿ, ಪ್ರಾದೇಶಿಕ ಅಸಮಾನತೆ, ಲಿಂಗಭೇದ, ಜಾತಿ ಭೇದಗಳು ಅವರನ್ನು ಈ ಒತ್ತಡಕ್ಕೆ ನೂಕುವ ಸಾಧ್ಯತೆ ಹೆಚ್ಚಾಗಿರುತ್ತದೆ. ಕತೆಗಳನ್ನು ಬರೆಯುವ ಹೊಸ ತಲೆಮಾರಿನ ಅನೇಕರಲ್ಲಿ ಇದು ನಿಚ್ಚಳವಾಗಿ ಕಾಣುತ್ತದೆ. ಲೇಖಕಿಯರ ಕತೆಗಳು ಎಲ್ಲಿ ಭಿನ್ನವೆನಿಸುತ್ತವೆ ಎಂದರೆ ಅವರ ಕತೆಗಳು ಸಾಮಾಜಿಕತೆಯನ್ನು ಪರಿಭಾವಿಸುವ ರೀತಿಯಲ್ಲಿ. ಅವರು ತಮ್ಮ ಸಂವೇದನೆಯನ್ನು ಹದಗೊಳಿಸಿಕೊಳ್ಳುವುದು ಸಂಯಮದಲ್ಲಿ. ಕೆಳದನಿಯಲ್ಲಿ ಮತ್ತು ಒಳದನಿಯಲ್ಲಿ ಕತೆ ಹೇಳುವ ವಿಧಾನದಲ್ಲಿ

ಅವರ ಕತೆಗಳು ಯಶಸ್ಸು ಕಾಣುತ್ತವೆ. ಆದರೆ ಹಾಗೆಂದು ಇವರ ಕತೆಗಳಲ್ಲಿ ಸೆಂಟಿಮೆಂಟಲ್ ಗುಣವೂ ಇಣುಕುತ್ತದೆ ಎನ್ನುವುದನ್ನು ತಳ್ಳಿಹಾಕುವಂತಿಲ್ಲ. ಆದರೆ ಕಥೆ ಹೇಳುವಾಗಿನ ಪ್ರಾಮಾಣಿಕತೆಯು ಕತೆಗಳಲ್ಲಿ ವ್ಯಕ್ತವಾಗುತ್ತ ಇರುವುದನ್ನು ಓದುಗರು ಗಮನಿಸಬಹುದು. ಆಧುನಿಕೋತ್ತರ ಜಗತ್ತು ತಂದೊಡ್ಡಿರುವ ಸವಾಲುಗಳನ್ನು ಎದುರಿಸುತ್ತಲೇ ಭಾವನೆಗಳನ್ನು ಮುಕ್ಕಾಗದಂತೆ ನೋಡಿಕೊಳ್ಳುವ ಕತೆಗಾರ್ತಿಯರ ಕತೆಗಳು ಪ್ರಾಯಶಃ ಅದೇ ಕಾರಣದಿಂದಲೇ ಜೀವಂತಿಕೆಯಿಂದ ಕೂಡಿವೆ. ಫೇಸ್‌ಬುಕ್ ಮೂಲಕ ಜಗತ್ತು ನೋಡುವ, ವಿದೇಶಗಳಲ್ಲಿ ವಾಸಿಸುವುದನ್ನು ಜೀವನ ಮೌಲ್ಯವನ್ನಾಗಿ ಸ್ವೀಕರಿಸಿದ ತಲೆಮಾರುಗಳು ಜೀವನದ ಸತ್ಯವನ್ನು ಅರಿತುಕೊಳ್ಳುವುದರಲ್ಲಿ ಸೋತಿದೆಯೇ ಎನ್ನುವ ಪ್ರಶ್ನೆಯನ್ನು ಅನೇಕ ಕತೆಗಾರ್ತಿಯರು ಎತ್ತಿಕೊಂಡಿದ್ದಾರೆ. ಜೀವನ ಮೌಲ್ಯಗಳ ಬಗ್ಗೆ ಸಣ್ಣಕತೆಯ ಚೌಕಟ್ಟಿನಲ್ಲಿ ಸಿನಿಕರಾಗದೆ ಜೀವನ್ಮುಖಿಯಾಗಿ ಮಂಡಿಸುವುದು ಹೇಗೆ ಎನ್ನುವ ಸವಾಲನ್ನು ಪ್ರಾಯಶಃ ಇಲ್ಲಿನ ಕತೆಗಾರ್ತಿಯರು ಸಮರ್ಥವಾಗಿ ಎದುರಿಸಿದ್ದಾರೆ ಎನ್ನಿಸುತ್ತದೆ. ಆಧುನಿಕೋತ್ತರ ಜಗತ್ತಿನಲ್ಲಿ ಹೊರ ಜಗತ್ತು ಒಳಗೆ ಬಂದು ಬಹಳ ಕಾಲವಾಗಿದೆ. ಒಳಬಂದ ಮಾರಿಯನ್ನು ಎದುರಿಸುವುದು ಹೇಗೆ ಎನ್ನುವುದರ ನವಿರಾದ ಚಿತ್ರಣವನ್ನು ಇಲ್ಲಿನ ಕೆಲವು ಕತೆಗಳಾದರೂ ಎತ್ತಿಕೊಂಡಿವೆ.

ಹೊಸಯುಗದ ತಲ್ಲಣಗಳನ್ನು ಸ್ತ್ರೀವಾದ, ಆಧುನಿಕತೆ, ಸಾಮಾಜಿಕ ಅಸ್ಮಿತೆಗಳಿಂದ ಹಿಡಿಯಲು ಯತ್ನಿಸುತ್ತಿರುವ ಕತೆಗಾರ್ತಿಯರ ಕತೆಗಳು ಕನ್ನಡ ಕಥನದ ಸಾಧ್ಯತೆಯನ್ನು ವಿಸ್ತರಿಸುತ್ತಲಿವೆ. ವೈದೇಹಿ, ನಾಗವೇಣಿ, ವಿನಯಾ, ಮಿತ್ರಾ ವೆಂಕಟ್ರಾಜ್, ಸುಮಂಗಲಾ, ಸುನಂದಾ ಇವರ ಜೊತೆ ಅಲಕಾ ಕೆ, ತೇಜಸ್ವಿನೀ ಹೆಗಡೆ, ಆಶಾ ಜಗದೀಶ್, ಸಿಂಧುಚಂದ್ರ ಹೆಗಡೆ, ಕುಸುಮಬಾಲೆ, ಕಾವ್ಯಶ್ರೀ ನಾಯ್ಕ, ಭವ್ಯಶ್ರೀ, ರಶ್ಮಿ ಎಸ್, ಚೈತ್ರಾ ಕೋಟೂರು ಮೊದಲಾದ ಯುವ ಬರಹಗಾರ್ತಿಯರು ಕಟ್ಟುತ್ತಿರುವ ಕಥೆಗಳು ಹೊಸಗಾಲದ ಕಥನದ ಬಗ್ಗೆ ಕುತೂಹಲವನ್ನು ಉಂಟುಮಾಡುತ್ತಲಿವೆ. ಕನ್ನಡದಲ್ಲಿ ಇಂದು ಬರೆಯುತ್ತಿರುವ ಕತೆಗಾರ್ತಿಯರು ವೈಯಕ್ತಿಕ ಧೋರಣೆಗಳಿಗನುಸಾರಿಯಾಗಿ ಬರೆಯುತ್ತಲಿದ್ದಾರೆ. ಅವರ ಕತೆಗಳನ್ನು ಒಂದು ತಾತ್ವಿಕ ಚೌಕಟ್ಟಿಗೆ ಒಳಪಡಿಸಿ ಚರ್ಚಿಸುವುದು ಅಸಾಧ್ಯ. ಆದರೆ ಇಲ್ಲಿ ಕಳೆದ ಒಂದೆರಡು ದಶಕಗಳಲ್ಲಿ ಬಂದ ಲೇಖಕಿಯರ ಕತೆಗಳ ಚಹರೆಗಳನ್ನು ಗುರುತಿಸುವ ಪ್ರಯತ್ನವನ್ನಷ್ಟೆ ಇಲ್ಲಿ ಮಾಡಿದೆ. ನಿಜ ಹೇಳುವುದಾದರೆ ಇದಿನ್ನೂ ಹೊಸ ಹೊರಳುಗಳ ಶುರುವಾತ್!

❖

# ಮಹಿಳಾ ಆತ್ಮಕತೆಗಳು: ಆತ್ಮಕಥೆಗಳೆಂಬ ಅಂತರಂಗದ ಚರಿತೆ

✦ ಡಾ. ಗೀತಾ ವಸಂತ

'ಅಮೆಜಾನ್ ದಾಟಬಹುದು, ಈ ಅನುದಿನ ಅಂತರಗಂಗೆಯನ್ನು ದಾಟುವುದು ಹೇಗೆ?' ಎಂಬ ಎ.ಕೆ.ರಾಮಾನುಜನ್ ಅವರ ಪ್ರಶ್ನೆ ನಮ್ಮೆಲ್ಲರ ಒಡಲ ಪ್ರಶ್ನೆಯೂ ಹೌದು. ದೈಹಿಕ ಸಾಹಸ, ಬೌದ್ಧಿಕ ವಿಸ್ತಾರಗಳಲ್ಲಿ ತೊಡಗುವುದಕ್ಕಿಂತ ಅಂತರಗಂಗೆಯಂಥ ಒಳಹರಿವನ್ನು ಅರಿಯುವುದು ದೊಡ್ಡ ಸವಾಲು. ಮೇಲ್ಪದರದ ಎಲ್ಲ ಕಣ್ಕಟ್ಟುಗಳನ್ನು ಕಳಚಿಕೊಂಡು ಒಳಗೆ ತಿಳಿಯಾಗುವ 'ತಿಳಿ'ವನ್ನು 'ಕಾಣು'ವದು ನಿಜಕ್ಕೂ ಸಾಹಸ. ಎಷ್ಟೋ ದಾಖಲಾಗದ ಮಾತುಗಳು ಚರಿತ್ರೆಯಲ್ಲಿ ಹೂತು ಹೋಗಿರುವಾಗ ಅವಕ್ಕೆಲ್ಲ ಧ್ವನಿಯಾಗುವ, ಅಕ್ಷರಗಳಲ್ಲಿ ಮೂಡಿಸುವ ಕಲ್ಪನೆಯೇ ಹೆಣ್ಣಿನ ಪಾಲಿಗೆ ಒಂದು ಅದ್ಭುತ ಸಾಧ್ಯತೆ. ಆದರೆ ಹೊರಗಣ ಬೆಳಕಿಗೆ ಒಳಗನ್ನು ತೆರೆದಿಟ್ಟು ಬೆತ್ತಲಾಗುವುದು ಅಷ್ಟು ಸುಲಭದ ಕೆಲಸವಲ್ಲ. ತನ್ನ ಪ್ರತಿಮೆಯನ್ನು ತಾನೇ ಭಂಜಿಸಿ ಹೊರನಡೆಯುವ ಈ ನಡೆ ಅತ್ಯಂತ ದಿಟ್ಟವಾಗಿರಬೇಕಾಗುತ್ತದೆ. ಅದಕ್ಕಾಗಿಯೇ ಮಹಿಳಾ ಆತ್ಮಕಥನಗಳ ಸಂಖ್ಯೆ ಯಾವಾಗಲೂ ಬೆರಳೆಣಿಕೆಯದ್ದಾಗಿರುತ್ತದೆ. ಅದರಲ್ಲೂ ಬರೆಯದ ಎಷ್ಟೋ ಉಮ್ಮಳಗಳು, ಪ್ರಶ್ನೆಗಳು, ಕನವರಿಕೆಗಳು ಸಾಲುಗಳ ಮೌನದಲ್ಲಿ ಅವಿತುಕೊಂಡಿರುತ್ತವೆ.

ಆತ್ಮಕಥನಗಳು ಅನುಭವನಿಷ್ಠವಾದವು. ಅವು ತೀರ ವೈಯಕ್ತಿಕವೇ ಆದರೂ ಹೆಣ್ಣಿನ ಅನುಭವಗಳಲ್ಲಿ ಒಂದು ಸಾರ್ವತ್ರಿಕ ಧ್ವನಿ ತನಗೇ ಅರಿವಿಲ್ಲದೇ ಬಿಚ್ಚಿಕೊಳ್ಳುತ್ತದೆ. ಅಲ್ಲಿ ತಲೆಮಾರುಗಳು ಏಕೀಭವಿಸುತ್ತವೆ. ಹೆಣ್ಣಿನ ಅನುಭವ ಎಂದಾಗ ಅದು ಏಕರೂಪದ್ದಲ್ಲ. ಆದಾಗ್ಯೂ ತಾಯ್ತನದ ಜೀವಪೋಷಕ ಮೌಲ್ಯಗಳ ಅಭಿವ್ಯಕ್ತಿಯಲ್ಲಿ ಒಂದು ಸಾಮಾನ್ಯ ವಿನ್ಯಾಸವೇರ್ಪಡುತ್ತದೆ. ಇಂಥ ಹಲವು ಆತ್ಮಕಥನಗಳ ಒಟ್ಟಂದ ಓದು ಮಹಿಳಾಚರಿತ್ರೆಯ ಬಿಡಿಪುಟಗಳಂತೆ ಭಾಸವಾಗುತ್ತದೆ. ಹೆಚ್ಚಾಗಿ ಆತ್ಮಕಥನಗಳನ್ನು ಬರೆದವರು ಸಮಾಜದ ವಿವಿಧ ರಂಗಗಳಿಗೆ ತೆರೆದುಕೊಂಡ ಹೆಂಗಳೆಯರು. ಇಂಥವರಲ್ಲಿ ಒಂದು ದಿಟ್ಟ ಆತ್ಮಾವಲೋಕನದ ಕ್ರಮ ಹಾಗೂ ಅಭಿವ್ಯಕ್ತಿ ಕ್ರಮವೊಂದು ರೂಪುಗೊಂಡಿರುತ್ತದೆ. ಲೇಖಕಿಯರು, ರಂಗಭೂಮಿ ಕಲಾವಿದೆಯರು, ಚಿತ್ರನಟಿಯರು, ಸಂಗೀತ-ನೃತ್ಯ

ಕಲಾವಿದೆಯರು, ಚಳವಳಿಗಳಲ್ಲಿ ತೊಡಗಿಕೊಂಡಿರುವವರೇ ಹೆಚ್ಚಾಗಿ ಆತ್ಮಕಥನಗಳನ್ನು ಬರೆದಿದ್ದಾರೆ. ಅಭಿವ್ಯಕ್ತಿ ಕಾಣದ ಲೋಕವೂ ಇಲ್ಲಿ ದಾಖಲಾದಾಗ ಮತ್ತಷ್ಟು ಸಮಗ್ರತೆಯೊದಗಬಹುದು. ಹೆಣ್ಣಿನ ಪಾತ್ರಗಳು ಬದಲಾಗುತ್ತಿರುವ ಇಂದಿನ ಸಂದರ್ಭದಲ್ಲಿ ವಿಜ್ಞಾನ, ತಂತ್ರಜ್ಞಾನ ಉದ್ದಿಮೆ, ಕೃಷಿ, ಸೈನ್ಯ, ಆಡಳಿತ, ರಾಜಕಾರಣ ಮುಂತಾದ ರಂಗಗಳಲ್ಲಿ ದುಡಿಯುವ ಮಹಿಳೆಯರ ಒಳಗಿನ ಸಂಕಥನಗಳು ನಮ್ಮ ಜ್ಞಾನ-ಅನುಭವ ವಲಯಗಳನ್ನೇ ಹಿಗ್ಗಿಸಿ ನಿಲ್ಲಿಸಬಹುದು. ಇಂಥ ಸಂಧಿಕಾಲದಲ್ಲಿ ನಿಂತು ಮಹಿಳಾ ಆತ್ಮಕಥನಗಳ ಕೆಲವು ಮಾದರಿಗಳನ್ನು ಇಲ್ಲಿ ತೆರೆಯುತ್ತ ಹೋಗುತ್ತೇನೆ. ಇದು ಸಮಗ್ರ ಇತಿಹಾಸವಾಲೀ, ಸರ್ವೆಯಾಗಲೀ ಅಲ್ಲ ಎಂಬುದನ್ನು ಮೊದಲಿಗೇ ಸ್ಪಷ್ಟಗೊಳಿಸಿಕೊಳ್ಳುತ್ತೇನೆ.

ತನ್ನ ಕತೆಯನ್ನು ತಾನೇ ಹೆಣೆಯುತ್ತ ಹೋಗುವಾಗ ಅದರಲ್ಲೊಂದು ಅಂತರ ಕಾಯ್ದುಕೊಂಡು ಹೇಳುತ್ತ ಹೋಗುವ ವಿನ್ಯಾಸ ಒಂದಾದರೆ, ಆ ಕಥನದಲ್ಲಿ ತೀವ್ರವಾಗಿ ಕರಗುತ್ತ ತನ್ನ ದಟ್ಟಛಾಯೆಯನ್ನು ಮೂಡಿಸುವ ವಿನ್ಯಾಸ ಇನ್ನೊಂದು. ಇದು ಸ್ವಭಾವದ ಭಿನ್ನತೆಯಿರಬಹುದಾದಂತೆ, ಸನ್ನಿವೇಶ, ಸಂದರ್ಭಗಳ ಭಿನ್ನತೆಯೂ ಇರಬಹುದು. ಯಾವಾಗಲೂ ಏನನ್ನು ಹೇಳಬೇಕು, ಏನನ್ನು ಹೇಳಬಾರದು? ಎಂಬ ಒಂದು ಚೌಕಟ್ಟನ್ನು ವ್ಯಕ್ತಿ ತನಗೆ ತಾನೇ ಹಾಕಿಕೊಂಡಿರುತ್ತಾನೆ/ಳೆ. ಅದರಲ್ಲೂ ಹೆಣ್ಣು 'ಹೆಣ್ಣಾಗಿ' ರೂಪಿಸಲ್ಪಟ್ಟವಳು. ಅವಳ ದೇಹ-ಮನಸ್ಸುಗಳ ಜೊತೆ ಹೆಣ್ತನದ ಸಿದ್ಧಪಡಿಯಚ್ಚುಗಳು ಭೇದಿಸಲಾಗದಂತೆ ಸುತ್ತುವರೆದುಬಿಟ್ಟಿವೆ. ಭಯ, ಲಜ್ಜೆಗಳನ್ನು ಮೀರಿ ಅಭಿವ್ಯಕ್ತಿಸುವುದೇ ಅವಳಿಗೆ ಒಂದು ಹೋರಾಟ. ತನ್ನದಲ್ಲದ ಪಾತ್ರವನ್ನು ಬದುಕುತ್ತಿದ್ದವಳು ಏಕಾಏಕಿ ಚಿಪ್ಪೊಡೆದು ಹೊರಬಂದಾಗ ಉಂಟಾಗುವ ದಿಗ್ಭ್ರಾಂತಿಗೆ ಭಾಷೆಯೊಂದನ್ನು ಕಟ್ಟಿಕೊಳ್ಳುವುದೂ ಕೂಡ ಅವಳಿಗೆ ಸವಾಲು. ಅಧಿಕಾರ ಸಂಬಂಧಗಳಲ್ಲಿ ಅಧೀನ ನೆಲೆಯಲ್ಲಿ ಬದುಕುತ್ತಿರುವ ಅವಳ ಅವಲಂಬಿತ ಬದುಕು ಕೂಡ ಎಷ್ಟೋ ಸಲ ಅವಳ ಅಭಿವ್ಯಕ್ತಿಯನ್ನು ನಿಯಂತ್ರಿಸುತ್ತಿರುತ್ತದೆ. ತನ್ನ ಅಭಿವ್ಯಕ್ತಿಗೆ ಬೇಕಾದ ಸ್ಪೇಸ್‌ಅನ್ನು ನಿರ್ಮಿಸಿಕೊಳ್ಳುವುದು ಕೂಡ ಅವಳಿಗೆ ಸುಲಭವಲ್ಲ. ವರ್ಜೀನಿಯಾ ವುಲ್ಫ್ ಹೇಳುವಂತೆ 'ತನ್ನದೇ ಸಮಯ' ಹಾಗೂ 'ತನ್ನದೇ ಸ್ಥಳ' ಎಂಬುದು ಅವಳಿಗೆ ಮರೀಚಿಕೆಯೇ. ತನ್ನ ಗೃಹಿಣಿತ್ವ, ತಾಯ್ತನದ ಜವಾಬ್ದಾರಿಗಳ ಆಚೆ ಅವಳದೇ ಆದ ಕಾಲ-ದೇಶಗಳ ಕನವರಿಕೆ ಇಂದಿಗೂ ಅಷ್ಟೇ ಸತ್ಯವಾಗಿ ಉಳಿದುಕೊಂಡುಬಿಟ್ಟಿದೆ. ಆಧುನಿಕ ಸಂದರ್ಭದ 'ದುಡಿಯುವ ಹೆಣ್ಣು' ಸಹ ಆರ್ಥಿಕ ಸ್ವಾವಲಂಬನೆಯಾಚೆಯೂ ತನ್ನ ವ್ಯಕ್ತಿತ್ವ ಬಿಡುಗಡೆಯನ್ನು ಪಡೆದು ಸ್ವತಂತ್ರ ಪ್ರಜ್ಞೆಯಿಂದ ಬದುಕಲು ಪೂರ್ತಿ ಸಾಧ್ಯವಾಗಿಲ್ಲ. ಆದ್ದರಿಂದ ಬದುಕನ್ನು ಬರೆಯುವ ಚಿಕ್ಕಟ್ಟನ್ನು ನಮ್ಮ ಮಹಿಳೆಯರು ಹಲವು ರೀತಿಯಲ್ಲಿ ನಿಭಾಯಿಸುತ್ತಲೇ ಬಂದಿದ್ದಾರೆ.

ಆತ್ಮಕತೆ ಬರೆಯುವಾಗ ಇನ್ನೊಂದು ಸವಾಲಿದೆ ಅದು ಪ್ರಾಮಾಣಿಕತೆಯನ್ನು ಉಳಿಸಿಕೊಂಡು ಬರೆಯುವ ವಸ್ತುನಿಷ್ಠತೆಯ ಸವಾಲು. ಅಲ್ಲದೇ ಹಾಗೆ ಬರೆದ ಮೇಲೆ

ಮತ್ತೆ ಕುಟುಂಬ, ಸಮಾಜಗಳನ್ನು ಎದುರಿಸಬೇಕಾದ ವಾಸ್ತವದ ಸವಾಲು. ಏಕೆಂದರೆ ಬದುಕು ಎಂಬುದು ಸಂಬಂಧಗಳ ಸಂಕೀರ್ಣ ಹೆಣಿಗೆ ಇಲ್ಲಿ 'ಅವಳ ಬದುಕು' ಅವಳೊಬ್ಬಳದೇ ಅಲ್ಲ. ಅದು ಹಲವರೊಂದಿಗೆ, ಹಲವು ಸಂಗತಿಗಳೊಂದಿಗೆ ತಳಕು ಹಾಕಿಕೊಂಡಿರುತ್ತದೆ. ಬೇರೆಯವರಿಗೆ ನೋವಾಗದಂತೆ, ಅಪಾಯವಾಗದಂತೆ ನಿಭಾಯಿಸುವ ಸವಾಲು ಬಲುದೊಡ್ಡದು. ಕತೆ, ಕವಿತೆಗಳಂತೆ ರೂಪಕಗಳಲ್ಲಿ ಮಾತನಾಡುವ ತಂತ್ರದ ಗೂಡಿನಿಂದ ಹೊರಬಂದು ಬಯಲಾಗುವ ಅನಿವಾರ್ಯತೆಯಲ್ಲಿ ಬಹುದೊಡ್ಡ ಧೀಶಕ್ತಿಯನ್ನು ಧಾರಣೆ ಮಾಡಬೇಕಾಗಿ ಬರುತ್ತದೆ. ಅಂಥ ಶಕ್ತಿ ಸಾಧ್ಯವಾಗಿರುವುದು ಕೆಲವರಿಗೆ ಮಾತ್ರ.

ಆತ್ಮಕಥನವೆಂಬ ವಿಶಿಷ್ಟ ಸಾಹಿತ್ಯ ಪ್ರಕಾರವು ಪರಿಚಯವಾಗುವುದರ ಮೊದಲೇ ಆತ್ಮನಿವೇದನೆಯ ಹಲವು ಉತ್ಕಟ ಮಾದರಿಗಳು ನಮ್ಮ ಚರಿತ್ರೆಯಲ್ಲಿ ದಾಖಲಾಗಿ ಹೋಗಿವೆ. 'ನೊಂದ ನೋವ ನೋಯದವರೆತ್ತ ಬಲ್ಲರು'? ಎಂದು ಪ್ರಶ್ನಿಸುವ ಅಕ್ಕನ ಮಾತಿನ ಹಿಂದೆ ಹಲವು ಗತ ಕಥನಗಳಿವೆ. 'ಸೂತಕ'ವೆಂದು ನಿರಾಕರಿಸಲ್ಪಟ್ಟ ದೇಹದ ಘನತೆಯನ್ನು ಎತ್ತರಿಸಿದ ಮಹಿಳೆ ಆಕೆ. ಶಬ್ದಲಜ್ಜೆಯನ್ನು ಮೀರಿ 'ಕೂಟ'ದ ಅನುಭವಗಳನ್ನೇ ಹಸಿಹಸಿಯಾಗಿ ಕಟ್ಟಿ ಯೌಗಿಕ ಐಕ್ಯದ ಸ್ಥಿತಿಯನ್ನು ಕಟ್ಟಿಕೊಟ್ಟ ದಿಟ್ಟೆ ಆಕೆ. ಅಂಥ ಅನೇಕ ವಚನಕಾರ್ತಿಯರ ಅಭಿವ್ಯಕ್ತಿಯಿಂದ ಕನ್ನಡದ ಪ್ರಜ್ಞೆ ವಿಸ್ತಾರಗೊಂಡದ್ದು ಸುಳ್ಳಲ್ಲ. ಮುಂದೆ ಭಕ್ತಿಪಂಥವು ಕೂಡ ಆತ್ಮನಿವೇದನೆಯ ಉತ್ಕಟ ಮಾದರಿಯೊಂದನ್ನು ಒದಗಿಸಿತು. ಹೆಣ್ಣು ತನ್ನ ಒಳಗನ್ನು ಹುಡುಕಿಕೊಳ್ಳುವುದು ಒಂದು ಬಗೆಯಾದರೆ, ಅವಳು ತನ್ನ ಒಳಗಣ್ಣಿನಿಂದ ಹೊರಗನ್ನು ನೋಡುವುದು ಇನ್ನೊಂದು ಬಗೆ. ಒಂದು ಆತ್ಮಶೋಧವಾದರೆ, ಇನ್ನೊಂದು ಲೋಕಮೀಮಾಂಸೆ. ಹೆಣ್ಣು ಕಣ್ಣಿನ ಮೀಮಾಂಸೆ ಅದು. ಹೆಣ್ಣಿನ ನಿರೂಪಣೆಗಳಲ್ಲಿ ಈ ಅಂಶ ಕೂಡ ಪ್ರಧಾನವಾಗಿ ಗಮನಿಸುವಂತಹುದು. ಲೋಕ ಒಪ್ಪುವ 'ಹದಿಬದೆಯಧರ್ಮ' ವನ್ನು ಉಪದೇಶಿಸುತ್ತಲೇ ಹೆಣ್ಣಿನ ಅಸ್ಮಿತೆಯ ಕುರಿತಾದ ಪ್ರಶ್ನೆಗಳನ್ನು ಸಂಚಿಹೊನ್ನಮ್ಮನಂಥವಳಿಗೆ ಕೇಳುವುದು ಸಾಧ್ಯ ಎಂಬುದು ಹೆಣ್ಣು ಅರಿವಿನ ಹೊಸಮುಖಗಳನ್ನು ತೋರಿಸುತ್ತದೆ. ಹಾಗೇ ಸಾಗಿಬಂದ ಧಾರೆ ನವೋದಯ ಸಾಹಿತ್ಯದ ಸಂದರ್ಭದಲ್ಲಿ ಕೆಲವು ಪ್ರಖರ ಧ್ವನಿಗಳನ್ನು ಕೇಳಿಸಿತು. ಆದರೆ ಅವರ್ಯಾರೂ ನೇರವಾಗಿ ಆತ್ಮಕತೆಗಳನ್ನು ಬರೆಯುವುದು ಸಾಧ್ಯವಾಗಲಿಲ್ಲ.

ಕನ್ನಡದಲ್ಲಿ ಹೆಣ್ಣಿನ ಆತ್ಮಕಥನಗಳು ಬರಲು ಎಪ್ಪತ್ತರ ದಶಕದವರೆಗೆ ಕಾಯಬೇಕಾಯಿತು. ಸ್ತ್ರೀವಾದಿ ಆಲೋಚನಾ ಕ್ರಮವೊಂದು ರೂಪುಗೊಳ್ಳುವ ಮೂಲಕ 'ಸ್ತ್ರೀ ಸಂವೇದನೆ'ಯ ಆಂತರಿಕ ಹುಡುಕಾಟ ಹಾಗೂ ಸ್ವಾತಂತ್ರ್ಯ – ಸಮಾನತೆಗಾಗಿ ಬಾಹ್ಯ ಹೋರಾಟಗಳೆರಡೂ ಮೇಳೈಸುವುದು ಸಾಧ್ಯವಾಯಿತು. 'ವಾಸಂತಿ ಪಡುಕೋಣೆಯವರ 'ಜೀವನ ಹೋರಾಟ' (1977) ಎನ್ನುವ ಆತ್ಮಕತೆ ಕನ್ನಡದ ಮೊದಲ

ಮಹಿಳಾ ಆತ್ಮಕತೆ ಎನಿಸುತ್ತದೆ' (ಪು.94 ಕನ್ನಡದಲ್ಲಿ ಮಹಿಳಾ ಆತ್ಮಕತೆ..) 2008ರಲ್ಲಿ ಪ್ರಕಟವಾದ 'ಮುಂತಾದ ಕೆಲ ಪುಟಗಳು' ಎಂಬುದು ಸರಸ್ವತಿಬಾಯಿ ರಾಜವಾಡೆಯವರ ಆತ್ಮಕತೆಯ ನಿರೂಪಣೆ. ಲೇಖಕಿ ವೈದೇಹಿ ಇದನ್ನು ನಿರೂಪಿಸಿದ್ದಾರೆ. ನವೋದಯದ ಆರಂಭದ ಲೇಖಕಿಯರಲ್ಲಿ ಒಬ್ಬರಾದ ಸರಸ್ವತಿಬಾಯಿಯವರ ಈ ಕಥನ ಅವರ ಬದುಕಿನ ಕಾಲದ ದೃಷ್ಟಿಯಿಂದ ನೋಡಿದರೆ ಹಳೆಯದು. ವೈದ್ಯೆಯಾಗಿ ಅದರಲ್ಲೂ ಸ್ತ್ರೀರೋಗ ತಜ್ಞೆಯಾಗಿ. ಚಳವಳಿಗಳಲ್ಲೂ ಸಾಹಿತ್ಯ ರಚನೆಯಲ್ಲೂ ಪೂರ್ಣವಾಗಿ ತೊಡಗಿಕೊಂಡ ಡಾ.ಅನುಪಮಾ ನಿರಂಜನರ 'ನೆನಪು ಸಿಹಿ–ಕಹಿ' ಹೊಸಕಾಲದ ಮಹಿಳೆಯನ್ನು ದರ್ಶನ ಮಾಡಿಸುವ ಗಮನಾರ್ಹ ಕೃತಿ. 'ಹೆಣ್ಣಿನ ದೃಷ್ಟಿಯಲ್ಲಿ ಈ ಶತಮಾನ' ಪಾರ್ವತಮ್ಮ ಮಹಲಿಂಗಶೆಟ್ಟಿಯವರ ಆತ್ಮಕತೆ. (ಆಕೆ ಮಾಜಿ ಮುಖ್ಯಮಂತ್ರಿ ನಿಜಲಿಂಗಪ್ಪನವರ ಮಗಳು) ಇಪ್ಪತ್ತನೆಯ ಶತಮಾನದ ಮಹಿಳೆಯರ ಕೌಟುಂಬಿಕ, ಸಾಮಾಜಿಕ, ಆರ್ಥಿಕ ಪರಿಸ್ಥಿತಿಗಳನ್ನು ವಿವರವಾಗಿ ದಾಖಲಿಸುವ ಈ ಕೃತಿ ಒಂದು ದೃಷ್ಟಿಕೋನ ನಿರ್ಮಾಣಮಾಡುವ ಪ್ರಯತ್ನಕ್ಕಾಗಿ ಗಮನಾರ್ಹವೆನಿಸುತ್ತದೆ.

ಇನ್ನು ಅಕ್ಷರ ಸಂಸ್ಕೃತಿಯ ಅರಿವಿಲ್ಲದ ಜಾಜಿ ತಿಮ್ಮಯ್ಯ ಎಂಬ ಜೇನುಕುರುಬ ಆದಿವಾಸಿ ಮಹಿಳೆಯ ಆತ್ಮಕತೆ ಹೆಣ್ಣುಬದುಕಿನ ಹೊಸದೊಂದು ಮಗ್ಗಲನ್ನು ಪರಿಚಯಿಸಿದ ಕೃತಿ. ಇದನ್ನು ರವೀಂದ್ರ ಭಟ್ಟ ಐನಕೈ ಅವರು ನಿರೂಪಿಸಿದ್ದಾರೆ. ಹೆಣ್ಣಿನ ಅಬಲತ್ವದ ಸಾಂಸ್ಕೃತಿಕ ಸಿದ್ಧ ಪರಿಭಾಷೆಯನ್ನು ನಿರಾಕರಿಸಿ ನೆಲದ ಸಂಸ್ಕೃತಿಯು ಸಬಲ ಹೆಣ್ಣಿನ ಸಂಕೇತವಾಗಿ ನಮ್ಮ ಮುಂದೆ ಬಂದದ್ದು ಈ ಕಥನದ ವೈಶಿಷ್ಟ್ಯ. ಜೇನುಕುರುಬರಲ್ಲಿ ಮಹಿಳೆ ಅಬಲೆಯಲ್ಲ. ಆದಿವಾಸಿಗಳಿಗೆ ಪುನರ್ವಸತಿ ಭೂಮಿ ಪಡೆಯುವ ಹೋರಾಟದಲ್ಲಿ ಆಕೆ ತೋರಿದ ನಾಯಕತ್ವದ ಗುಣ ಬರೀ 'ರಾಜಕೀಯ' ವಹಿವಾಟಲ್ಲ. ಅದು ಪರಿಸರದೊಂದಿಗೆ ತನ್ನನ್ನು ತಾದಾತ್ಮ್ಯಗೊಳಿಸಿಕೊಂಡ ಪ್ರಾಕೃತಿಕ ಗುಣವಾಗಿಯೂ ಕಾಣುತ್ತದೆ. ದು.ಸರಸ್ವತಿಯವರ 'ಈಗೇನ್ಮಾಡೀರಿ?' ಎಂಬ ಅನುಭವ ಕಥನ ಚಿವುಟಿದಷ್ಟೂ ಚಿಗುರುವ ಹೆಣ್ಣಿನ ಆತ್ಮಶಕ್ತಿಯ ಸೂಕ್ಷ್ಮತೆಯನ್ನು ಪರಿಚಯಿಸುವಂತಹುದು. ಮಹಿಳಾ ಚಳುವಳಿಗಳ ಭಾಗವಾಗಿ ಬೆಳೆದ ದು.ಸರಸ್ವತಿಯವರ ಬರಹ ಸಮಾಜದ ಕಾಣದ ಮುಖಗಳನ್ನು ಅನಾವರಣಗೊಳಿಸುವ ಕೃತಿ. ವ್ಯಕ್ತಿಯಾಗಿ ವಿಷಮ ಪರಿಸ್ಥಿತಿಗಳನ್ನು ದಿಟ್ಟವಾಗಿ ಎದುರಿಸುವ ಕ್ರಮವೊಂದನ್ನು ಇದು ಕಟ್ಟಿಕೊಡುತ್ತದೆ. ಇಂಥ ವಿಭಿನ್ನ ಹಿನ್ನೆಲೆ ಹಾಗೂ ಮನೋಧರ್ಮಗಳ ಆತ್ಮಕಥನಗಳು ಮಹಿಳಾ ಪ್ರಜ್ಞೆಯ ಹಿಗ್ಗುವಿಕೆಯನ್ನು ಸಾಕ್ಷೀಕರಿಸುತ್ತವೆ.

ಕರ್ನಾಟಕ ಲೇಖಕಿಯರ ಸಂಘವು ಹೊರತಂದ 'ಲೇಖ–ಲೋಕ' ಮಾಲಿಕೆ ಮಹಿಳಾ ಆತ್ಮಕಥನಗಳಿಗೆ ಪ್ರೇರಣೆ ನೀಡಿದ ವಿನೂತನ ಪ್ರಯತ್ನ. ಇದರಲ್ಲಿ ಅನೇಕ ಲೇಖಕಿಯರು ತಮ್ಮ ಆತ್ಮಕಥನದ ಭಾಗಗಳನ್ನು ಬಗೆದಿಟ್ಟರು. 'ಚೌಕಟ್ಟನ್ನು ಅಲುಗಿಸಿ ಬದುಕಲು ಹೊರಟಾಗ ಉಂಟಾಗುವ ತಳಮಳ, ಉದ್ವಿಗ್ನತೆ, ಉಭಯ ಸಂಕಟಗಳು ತಾಕಲಾಟಗಳನ್ನು ನನ್ನ

ತಲೆಮಾರಿನ ಹಲವು ಲೇಖಕಿಯರು ಅನುಭವಿಸಿದ್ದೇವೆ. ಈ ದಿಕ್ಕಿನಲ್ಲಿ ಎದುರಾಗುವ ಸಮಸ್ಯಾ ಪ್ರವಾಹ ಹತ್ತೂ ದಿಕ್ಕಿನಿಂದ ಮುತ್ತುವ ಸಾವಿರ ಪ್ರಶ್ನೆಗಳು, ಜೀವಸತ್ವವನ್ನು ಅರೆದು ನೋಡುವ ಸಂದರ್ಭಗಳು, ಒಮ್ಮೊಮ್ಮೆ ಉತ್ತರವೇ ಕಾಣದ ಹತಾಶೆಗಳು, ಸುಳಿಗಳು ಇವೆಲ್ಲ ಮಹಿಳಾ ಸಾಹಿತ್ಯದ ಆತ್ಮಕಥಾನಕಗಳಲ್ಲಿ ಸಶಕ್ತವಾಗಿ ಹೊಕ್ಕಾಗ ಕನ್ನಡ ಸಾಹಿತ್ಯದ ಆಯಾಮಗಳು ನಿಶ್ಚಯವಾಗಿ ಹಿಗ್ಗುತ್ತವೆ' (ವಿಜಯಾದಬ್ಬೆ . . ) ಎಂದು ವಿಜಯಾ ದಬ್ಬೆಯವರು ಅದರ ಆಶಯದಲ್ಲಿ ಪ್ರಸ್ತಾಪಿಸಿದ್ದರು. ಅನೇಕ ಲೇಖಕಿಯರ ಬದುಕಿನ ಹೋರಾಟದ, ಸಂವೇದನೆಯ ದ್ರವ್ಯ ಇಲ್ಲಿ ದಾಖಲಾಗಿದೆ. ಕರ್ನಾಟಕ ಲೇಖಕಿಯರ ಸಂಘ ಈ ಮಹತ್ವದ ಕಾರ್ಯವನ್ನು ಕೈಗೊಂಡಿದೆ.

ಪಕ್ಕದ ಮರಾಠಿ ಭಾಷೆಗೆ ಹೋಲಿಸಿದರೆ ಕನ್ನಡದಲ್ಲಿ ಮಹಿಳಾ ಆತ್ಮಕಥನಗಳು ಸಂಖ್ಯೆಯಲ್ಲಿ ಹಾಗೂ ಮುಕ್ತ ಅಭಿವ್ಯಕ್ತಿಯಲ್ಲಿ ಕಡಿಮೆ ಎಂಬ ಅಭಿಪ್ರಾಯವನ್ನು ಕೊಂಚ ಬದಲಿಸುವಂತೆ ಈ ಶತಮಾನದಲ್ಲಿ ಆತ್ಮಕಥನಗಳ ಸಂಖ್ಯೆ ಹೆಚ್ಚುತ್ತ ಹೋಗಿದ್ದು ಗಮನಾರ್ಹ. ಇಲ್ಲಿ ಪ್ರತಿಭಾ ನಂದಕುಮಾರ್‌ರವರ 'ಅನುದಿನದ ಅಂತರಗಂಗೆ', ಉಮಾಶ್ರೀ ಅವರ 'ಬೆಂಕಿ ಬೆಡಗು', ಶಶಿಕಲಾ ವಸ್ತ್ರದ ಅವರ 'ಇದ್ದೇನಯ್ಯಾ ಇಲ್ಲದಂತೆ', ಭಾರ್ಗವಿಯವರ 'ನಾನು ಭಾರ್ಗವಿ', ವಿಜಯಾರವರ 'ಕುದಿ ಎಸರು', ಬಿ.ಜಯಶ್ರೀ ಅವರ 'ಕಣ್ಣಾ ಮುಚ್ಚೇ.... ಕಾಡೇ ಗೂಡೇ..', ಇಂದಿರಾ ಲಂಕೇಶ್ ಅವರ 'ಹುಳಿಮಾವಿನ ಮರ ಮತ್ತು ನಾನು...',

ಇವು ನನ್ನ ಓದಿಗೆ ಸಿಕ್ಕವು. ಸ್ವತಂತ್ರ ಬರಹಗಳಿರುವಂತೆ ಇತರರು ನಿರೂಪಿಸಿದ ಬರಹಗಳೂ ಇಲ್ಲಿವೆ.

ಮುಂತಾದ ಕೆಲಪುಟಗಳು: ಕನ್ನಡ ನವೋದಯದ ಸಂದರ್ಭದಲ್ಲಿ ಮಹಿಳೆಯರಿಗೆ ಒಲಿದದ್ದು ಕಥನ. ತಮ್ಮ ಒಡಲ ಸಂಕಟವನ್ನು, ಉರಿಪ್ರಶ್ನೆಗಳನ್ನು ಯಾವುದೋ ಪಾತ್ರದಲ್ಲಿರಿಸಿ ಹೇಳುವ ಒಂದು ಮಾಯಾದಂಡದಂತೆ ಕತೆಗಳು ಆವರಿಸಿದ್ದ ಕಾಲ. ಆ ಕಥೆಗಾರ್ತಿಯರ ಬದುಕು ಹೇಗಿತ್ತು ಎಂಬುದು ದಾಖಲಾಗದೇ ಉಳಿದು ಹೋಗಿರುವಾಗ ಲೇಖಕಿ ವೈದೇಹಿಯವರು ಸರಸ್ವತಿಬಾಯಿ ರಾಜವಾಡೆಯವರ ಇಳಿಗಾಲದಲ್ಲಿ ಅವರನ್ನು ಭೇಟಿಯಾಗಿ ಬೆರೆತು ಅರಿತು ಕಟ್ಟಿದ ಕಥನ ಮಹಿಳಾ ಆತ್ಮಕಥನಗಳ ಮಟ್ಟಿಗೆ ಒಂದು ಮೈಲುಗಲ್ಲಿನಂತೆ ಭಾಸವಾಗುತ್ತದೆ.

ಪುರುಷರದೇ ಪಾರಮ್ಯವಿದ್ದ ಅಂದಿನ ಸಾಹಿತ್ಯ ಲೋಕವು ಹೆಣ್ಣುಮಕ್ಕಳನ್ನು ಬರೆಯಲು ಪ್ರೋತ್ಸಾಹಿಸಿತಾದರೂ ಅವರ ಸ್ವತಂತ್ರ, ಪ್ರಗಲ್ಭ ವ್ಯಕ್ತಿತ್ವವನ್ನು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಸರಸ್ವತಿಬಾಯಿ ರಾಜವಾಡೆಯಾದರೋ ಬೆಂಕಿಯಲ್ಲಿ ಅರಳಿದ ಹೂವು. ಕಸದಲ್ಲಿ ಕಸುವುಗೊಂಡ ಚಿನ್ನ. ಸ್ವಂತಿಕೆಯೇ ತಾನಾದ ಸಹಜ ಗಾಂಭೀರ್ಯದ ವ್ಯಕ್ತಿತ್ವ. ಅವಳನ್ನು ಕುರಿತು ಆ ಕಾಲದ ಪ್ರಮುಖ ಸಾಹಿತಿಗಳೊಬ್ಬರು 'ಆ ಹೆಂಗಸು ಇನ್ನೂ

ಇದೆಯೇ?' ಎಂದು ಕೇಳಿದಂತೆ, 'ಆ ಗಂಡಸು ಇನ್ನೂ ಇದೆಯೇ'? ಎಂದು ನಾವು ಕೇಳಲು ಸಾಧ್ಯವೇ? ಎಂದು ತಪ್ತಧ್ವನಿಯಲ್ಲಿ 'ಗಿರಿಬಾಲೆ' (ಕಾವ್ಯನಾಮ) ಪ್ರಶ್ನಿಸುತ್ತಾರೆ. ಆ ಕಾಲದ ಪ್ರಸಿದ್ಧ ಲೇಖಕರು, ವಿಮರ್ಶಕರೆನಿಸಿಕೊಂಡವರು ಮಹಿಳೆಯರ ಬರಹಗಳನ್ನು ಸಮಗ್ರಸಾಹಿತ್ಯ ನಿರ್ಮಿತಿಯ ಭಾಗವೆಂಬಂತೆ ಗ್ರಹಿಸಿ ಒಪ್ಪಿಕೊಳ್ಳಲಿಲ್ಲ. ಅಲ್ಲೊಂದು ಇಲ್ಲೊಂದು ಸಹಾನುಭೂತಿಯ ಮಾತಿಗೇ ಅವರ ಬೆಂಬಲ ಪರಿಮಿತವಾಗಿತ್ತು. ತಮ್ಮ ಕಾಲದ ಸಂಗತಿಗಳ ಬಗೆಗೆ ವಸ್ತುನಿಷ್ಠವಾಗಿ, ನಿರ್ಭಯವಾಗಿ ಬರೆದ ರಾಜವಾಡೆ ಮಠದ ಸ್ವಾಮಿಗಳ ಕುರಿತೂ ವಿಡಂಬಿಸುತ್ತಾರೆ. ಆ ಕಾಲದಲ್ಲಿ ಇದು ಸಾಂಪ್ರದಾಯಿಕ ಆವರಣದಲ್ಲಿ ಬದುಕುವ ಸ್ತ್ರೀ ಎತ್ತಿಟ್ಟ ಅಪ್ಪಟ ಕ್ರಾಂತಿಕಾರಕ ಹೆಜ್ಜೆ. ಸಮಾಜದ 'ಸಂಕುಚಿತ ನಡೆ'ಗಳನ್ನು ಅಂಜಿಕೆ ಹಿಂಜರಿಕೆಗಳ ಎಗ್ಗಿಲ್ಲದೆ ಅನಾವರಣ ಗೊಳಿಸಿದರು. ಆ ಅರ್ಥದಲ್ಲಿ ಅವರೊಬ್ಬ ಪ್ರಗತಿಶೀಲ ಮಹಿಳೆ. 'ಎರಡು ದಶಕಗಳ ಕಾಲ ಕನ್ನಡ ಸಾಹಿತ್ಯಕ್ಕೆ ಸ್ತ್ರೀ ಧ್ವನಿ ಕೂಡಿಸಿದಾಕೆ ಸ್ತ್ರೀಯರ ಪ್ರಗತಿಗಾಗಿಯೇ ಒಂದು ಪತ್ರಿಕೆಯನ್ನು ಹೊರಡಿಸಿದಾಕೆ, ಆಶು ರಚನೆಕಾರ್ತಿ, ಮಕ್ಕಳಿಗಾಗಿ ಬರೆದರು, ಕಾಲಂ ಬರೆದರು, ಹರಿಕಥೆ ಮಾಡಿ, ಹಾಡಿ, ಹಾಡಿಸಿ, ವೀಣೆ ನುಡಿಸಿ, ನಾಟಕ ರಚಿಸಿ, ಆಡಿಸಿ, ನಟಿಸಿ ಒಟ್ಟಿನಲ್ಲಿ ಕಲೆ ಹಾಗೂ ಸಾಹಿತ್ಯ ಲೋಕದಲ್ಲಿ ಮಿಂಚಿದಾಕೆ' (ಪು.13 ಮುಂತಾದ ಕೆಲಪುಟಗಳು) ಎಂಬ ಮಾತುಗಳು ಅವರ ವ್ಯಕ್ತಿತ್ವದ ಬಹುಸಾಧ್ಯತೆಗಳನ್ನು ವಿಸ್ಮಯದಿಂದ ಕಟ್ಟಿಕೊಡುತ್ತವೆ.

ದಾರಿದ್ರ್ಯವನ್ನೇ ಹೊತ್ತು ಬಂದು ಹಸಿವು, ಅವಮಾನಗಳಲ್ಲಿ ತಾಯಿಯ ಹೊಡೆತ ಅನಾದರಗಳಲ್ಲಿ, ಬಾಲ್ಯ ಕಳೆದರೂ ಒಳಗಿನ ಆದಮ್ಯ ಹೊಳಪನ್ನು ಕಳೆದುಕೊಳ್ಳುವ ಹೆಣ್ಣು ಚೈತನ್ಯವೊಂದರ ಕಥನವಾಗಿ ಇದು ಬಹುಕಾಲ ಕಾಡುತ್ತದೆ. ಬಡತನದ ಅವಮಾನ, ಒಂಟಿತನವೊಂದನ್ನು ಅನಿವಾರ್ಯವಾಗಿಸುತ್ತದೆ. ಆ ಒಂಟಿತನವೇ ಒಳಗೊಳಗೇ ಗಟ್ಟಿಯಾಗುವ ಛಲವನ್ನೂ, ಅಪಾರವಾದ ಆಂತರಿಕ ಕಲ್ಪನಾ ಶಕ್ತಿಯನ್ನು ಚಿವುಟಿದಷ್ಟೂ ಚಿಗುರುವ ಧೈರ್ಯವನ್ನೂ ಕೊಟ್ಟುಬಿಡುತ್ತದೆ. ಇದು ಅನೇಕ ಆತ್ಮಕಥನಗಳಲ್ಲಿ ಕಾಣುವ ಸಾಮಾನ್ಯ ಅಂಶ. ತಂದೆಯಿಲ್ಲದೆ ಅಜ್ಜಿ, ತಾಯಿಯ ಜೊತೆ ಬೆಳೆದ ಗಿರಿಬಾಲೆ ಹೊಟ್ಟೆಪಾಡಿಗಾಗಿ ನಾಟಕ ಕಂಪನಿಗಳಲ್ಲಿ ನಟಿಸುತ್ತಾ ಆರ್ಕೆಸ್ಟ್ರಾಗಳಲ್ಲಿ ಹಾಡುತ್ತಾ, ಮೂಕಿ ಸಿನಿಮಾಗಳಲ್ಲಿ ನಟಿಸುತ್ತಾ ಪುನಃ ಬರಿಗೈಯಾಗಿಯೇ ಹಿಂದಿರುಗುತ್ತಾರೆ. ಅದೇ ಬಡತನದ ದೆಸೆಯಿಂದಾಗಿ ತನಗಿಂತ ಮೂವತ್ತೇಳು ವರ್ಷ ದೊಡ್ಡವನಾದ ಪುರುಷನನ್ನು ಮದುವೆಯಾಗಬೇಕಾಗುತ್ತದೆ. ಡೆಪ್ಯೂಟಿ ಕಮಿಷನರ್ ಆಗಿದ್ದ ಅಂಬಿಕಾಪತಿ ರಾಯ್‌ಶಾಸ್ತ್ರೀ ರಾಜವಾಡೆ, ಅಪ್ಪ ಅನ್ನುವುದಕ್ಕಿಂತ ಅಜ್ಜ ಅನಿಸುತ್ತಿದ್ದರು!. ಈ ಮುದುಕನಿಗೆ ಯಾರೂ ಸಿಗಲಿಲ್ಲವೆಂದು ನನ್ನನ್ನು ಬಲಿಕೊಟ್ಟರು ಎಂಬ ಮಾತುಗಳು ಹಲವು ಧ್ವನಿಗಳನ್ನು ತಾವೇ ಹೊರಸೂಸುತ್ತವೆ. 'ಗಂಡ ಎಂದರೆ ಹೂವು ಚಿನ್ನ ತಂದುಕೊಡವವನು' ಎಂದು ತಿಳಿದಿದ್ದ ಎಳೆ ಹುಡುಗಿ 'ದಾಂಪತ್ಯ'ವೆಂಬ ಮಧುರ ಭಾವವನ್ನು ಮುಂದೆಂದೂ ಕಾಣುವುದು ಸಾಧ್ಯವಾಗುವುದಿಲ್ಲ. ಕರ್ತವ್ಯಕ್ಕೆ ಹೋಗುವಾಗ ಮನೆಯ ಹೊರಗಿನಿಂದ ಬೀಗಹಾಕಿ

'ನಾಟ್ ಎಟ್ ಹೋಮ್' ಎಂದು ಬೋರ್ಡು ಹಾಕುತ್ತಿದ್ದ ಗಂಡ ಹತ್ತಿರ ಬಂದರೇ ಅಸಹ್ಯವೆನಿಸುತ್ತಿತ್ತು'. ಮನೆಯೆಂಬ ಶ್ರೀಮಂತ ಜೈಲಿನಲ್ಲಿ ಬಂಧಿಯಾದ ಸರಸ್ವತಿ ಗಂಡನ ಸಂಗ್ರಹದಲ್ಲಿದ್ದ ಪುಸ್ತಕಗಳಲ್ಲಿ ಬಿಡುಗಡೆ ಅರಸಿದ್ದೇ ಅವರ ಜೀವನದ ತಿರುವಿಗೆ ಕಾರಣವಾಯ್ತು. ಸಾಹಿತ್ಯ ಸರಸ್ವತಿಯ ಹುಟ್ಟು ಅಲ್ಲಿ ಕಾದಿತ್ತು. ಹೆಂಡತಿಯನ್ನು ಯಾರೊಂದಿಗೂ ಮಾತನಾಡಲು ಬಿಡದ ಗಂಡನ ಕ್ರೌರ್ಯದ ಹಿಂದಿನ ಅಸಹಾಯಕತೆಯನ್ನು ಅವರು ಸೂಕ್ಷ್ಮವಾಗಿ ವಿವರಿಸುತ್ತಾರೆ. 'ನಿನ್ನ ಗಂಡ ಮುದುಕ' ಎಂದು ಅವರು ಅಂದರೆ? ಎಂದು ಕೇಳುವಲ್ಲಿ 'ಪಾಪಕ್ಕೆ ಬಲಿಯಾಗಬೇಡ' ಎಂದು ಅಂಗಲಾಚುವಲ್ಲಿ ಸುಂದರಿಯಾದ ಉಜ್ವಲ ವ್ಯಕ್ತಿತ್ವದ ಹೆಂಡತಿಯನ್ನು ಗೆರೆದಾಟದಂತೆ ಕಟ್ಟಿಹಾಕುವ ಗಂಡಸಿನ ಅಸಹಾಯ ತಳಮಳ ವ್ಯಕ್ತವಾಗುತ್ತದೆ. ಡೆಪ್ಯುಟಿ ಕಮಿಷನರ್ ಆಗಿ ಅತ್ಯುನ್ನತ ಹುದ್ದೆಯಲ್ಲಿದ್ದು, ಅಪಾರವಾಗಿ ಓದಿಕೊಂಡಿದ್ದ ಗಂಡನೇ ಈ ಭಾವಕ್ಕೆ ಬಲಿಯಾಗುವುದನ್ನು ತಣ್ಣಗೆ ಗಮನಿಸುವ ಸರಸ್ವತಿ 'ನಿಮ್ಮ ವಿದ್ಯೆಗೆ ಧಿಕ್ಕಾರ' ಎಂದು ಪ್ರತಿಭಟಿಸಲೂ ಮರೆಯುವುದಿಲ್ಲ. ಇದನ್ನೆಲ್ಲ ಹೇಳುವಾಗ ಒಂದು ತಣ್ಣನೆಯ ಆತ್ಮವಿಮರ್ಶೆಯ ಧ್ವನಿ ಅವರಲ್ಲಿದೆ. ಗಂಡನ ಮರಣಾನಂತರ ಬರವಣಿಗೆಯಲ್ಲಿ ತೊಡಗಿ ತಮ್ಮ ಪ್ರಭಾವವನ್ನು ಆ ಕಾಲದ ಮೇಲೆ ಛಾಪಿಸಿದ, ಸುಪ್ರಭಾತ ಎಂಬ ಮಹಿಳಾ ಪ್ರಧಾನ ಪತ್ರಿಕೆಯನ್ನೂ ನಡೆಸಿ ಮೈಲುಗಲ್ಲು ಸ್ಥಾಪಿಸಿದ ಸರಸ್ವತಿಯವರು ಕೊನೆಗೆ 'ಇದೆಲ್ಲ ಹುಡುಗಾಟವೆಂದೇ ತೋರುತ್ತದೆ' ಎಂದು ತಮ್ಮ ಪಕ್ವತೆಯ ಕೊನೆದಿನಗಳಲ್ಲಿ ನುಡಿಯುತ್ತಾರೆ. ತಮ್ಮ ಮನೆತನಕ್ಕೆ ಕೊಡುಗೆಯಾಗಿ ಬಂದಿದ್ದ ಶಾರದಾ ವಿಗ್ರಹವನ್ನು ಸ್ಥಾಪಿಸಿ ಆ ತಾಯಿಯ ಹೃದಯದಲ್ಲಿ ತಾದಾತ್ಮ್ಯಗೊಂಡಂತೆ ಬದುಕಿ ತೆರಳುತ್ತಾರೆ. ಅವರ ಈ ರೂಪಾಂತರ, ಆಧ್ಯಾತ್ಮಿಕ ಮನೋಧರ್ಮದ ಪ್ರಕಾಶ ಎಲ್ಲವನ್ನೂ ವೈದೇಹಿಯವರು ನಿರೂಪಿಸಿದ ರೀತಿ ಗಹನವಾದುದು. 'ಸ್ತ್ರೀಪರ ದೃಷ್ಟಿ' ಗೆ ಇರಬಹುದಾದ ಹಲವು ಆಯಾಮಗಳನ್ನು ನಿರೂಪಿಸುವ ಈ ಆತ್ಮಕಥನದ ನಿರೂಪಣೆ ಹೃದ್ಯವಾಗಿದೆ.

**ನೆನಪು ಸಿಹಿ ಕಹಿ**

ವೃತ್ತಿ-ಪ್ರವೃತ್ತಿಗಳಿಂದ ಕಟ್ಟಿಕೊಂಡ ಸಾಮಾಜಿಕ ವ್ಯಕ್ತಿತ್ವ ಸ್ತ್ರೀಯರ ಪಾಲಿಗೂ ಸಾಧ್ಯವಾಗುತ್ತ ಹೋದಂತೆ ವೃತ್ತಿ ಹಾಗೂ ಸಂಸಾರ ಎರಡನ್ನೂ ನಿಭಾಯಿಸುವ ತೀವ್ರ ಒತ್ತಡ ತೊಳಲಾಟಗಳ ಹೊಸ ಸವಾಲುಗಳು ಹೆಣ್ಣು ಮಕ್ಕಳನ್ನೂ ಆವರಿಸತೊಡಗಿದವು. ಅದನ್ನು ಛಲದಿಂದ ಗೆದ್ದ ಹುಟ್ಟು-ಹೋರಾಟಗಾರ್ತಿ ಡಾ. ಅನುಪಮಾ ನಿರಂಜನರ ವ್ಯಕ್ತಿತ್ವದ ಹಲವು ಕವಲುಗಳು 'ನೆನಪು ಸಿಹಿ ಕಹಿ' ಯಲ್ಲಿ ಹರಡಿಕೊಂಡಿವೆ. '1982ರಲ್ಲಿ ಎರಡನೆಯ ಬಾರಿಗೆ ಕ್ಯಾನ್ಸರ್‌ಗೆಂದು ನನಗೆ ಶಸ್ತ್ರಚಿಕಿತ್ಸೆಯಾದಾಗ ನೋವು, ದುಗುಡಗಳಿಂದ ನಾನು ಬಸವಳಿದಿದ್ದೆ. ಹೆಚ್ಚುದಿನ ಬದುಕುವುದಿಲ್ಲ ಎಂಬ ಗ್ರಹಿಕೆಯಿತ್ತು. ಜೀವನದುದ್ದಕ್ಕೂ ಹೆಜ್ಜೆ-ಹೆಜ್ಜೆಗೂ ಹೋರಾಟವೇ ನನಗೆದುರಾಗಿತ್ತು. ವೈದ್ಯೆಯಾಗಿ, ಸಾಹಿತಿಯಾಗಿ, ಪತ್ನಿಯಾಗಿ ಮಾತೆಯಾಗಿ ನಾನು ಉಂಡ ಸಿಹಿಕಹಿಗಳನ್ನು ನಾಲ್ಕು ಜನರ ಜೊತೆ ಹಂಚಿಕೊಂಡರೆ ನನ್ನ ಉಳಿದ ಬಾಳು ಸಹ್ಯವಾಗಬಹುದೇನೋ ಎಂದು ತೋರಿತು..'(4 ನೆನಪು ಸಿಹಿಕಹಿ)

ಎಂದು ಕೃತಿಯ ಆರಂಭದಲ್ಲಿ ಅನುಪಮಾ ಬರೆದುಕೊಳ್ಳುತ್ತಾರೆ. ಬಾಲ್ಯದ ಬಡತನ, ಓದಿನಗೀಳು, ಯೌವನದ ಜಾತಿ ಮೀರಿದ ಪ್ರೇಮ, ತುಂಬ ಬದ್ಧತೆಯಿಂದ ಮಾಡಿದ ವೈದ್ಯಕೀಯ ವಿದ್ಯಾಭ್ಯಾಸ ಎಲ್ಲದರಲ್ಲೂ ತೀವ್ರವಾಗಿದ್ದರು ಅನುಪಮಾ. ಹೊಸಹೆಣ್ಣಿನ ಆಗಮನವಾಗುವುದು ಅಷ್ಟು ಸುಲಭವಲ್ಲ. ಕೋಶವೊಡೆದು ಬಂದ ಕಂಬಳಿ ಹುಳುವಿನಂತೆ ಅಗಾಧ ಹೋರಾಟ, ಸೈರಣೆಗಳ ಬದುಕು ಅವರದು. ನಿರಂಜನರ ಅದ್ಭುತ ಸಾಂಗತ್ಯ ಅವರ ಚಿಂತನೆಗಳ ದಿಕ್ಕನ್ನು ವಿಸ್ತರಿಸುತ್ತಾ ಹೋಯಿತು. ಆ ಸಾಂಗತ್ಯದ ಬದ್ಧತೆ ಕೊನೆಯವರೆಗೂ ಉಳಿದುಕೊಳ್ಳುವ ರೀತಿ ಒಂದು ಮಾದರಿಯಾಗಿ ಕಾಣುತ್ತದೆ. ಸಾಮಾಜಿಕ ಕಳಕಳಿಯ ಸಂಘಟಕಿ, ಹೋರಾಟಗಾರ್ತಿಯ ವಿಕಾಸಕ್ಕೆ ಕೂಡ ನಿರಂಜನರು ಪ್ರೇರಣೆಯಾಗುತ್ತಾರೆ. ಆದರೆ, ಬರವಣಿಗೆಯ ವಿಷಯಕ್ಕೆ ಬಂದಾಗ ಪುರುಷನಿಗೆ ಸಿಗುವ 'ಬಿಡುವು' ಆ ತಾದಾತ್ಮ್ಯ ಗೃಹಿಣಿತ್ವದಲ್ಲಿ ಹೂತ ಹೆಣ್ಣಿಗೆ ಅಸಾಧ್ಯ. ಅಧ್ಯಯನದ ಸಿದ್ಧತೆಗೆ ಬೇಕಾದ ಕಾಲ ನಿರಂಜನರಿಗೆ ಒದಗಿದಂತೆ ತನಗೆ ಒದಗಲಿಲ್ಲ ಎಂದು ಅನುಪಮಾ ಗುರುತಿಸಿಕೊಳ್ಳುತ್ತಾರೆ. ವೈದ್ಯೆಯಾಗಿ, ಗೃಹಿಣಿಯಾಗಿ, ತಾಯಿಯಾಗಿ, ಸಾಮಾಜಿಕ ಕಳಕಳಿಯುಳ್ಳ ಮಹಿಳೆಯಾಗಿ ಹಲವು ಅವತಾರಗಳನ್ನು ಒಂದೇ ಬದುಕಿನಲ್ಲಿ ನಿಭಾಯಿಸುವ ಅಗಾಧ ಒತ್ತಡಕ್ಕೆ ಅವರು ಒಳಗಾಗುತ್ತಾರೆ. ಈ ಮಧ್ಯೆ ತಮ್ಮ ಬರವಣಿಗೆ ಸೊರಗಿತು ಎಂಬ ಹಳಹಳಿಕೆಯೊಂದು ಉಳಿದುಹೋಗುತ್ತದೆ. ನಿರಂಜನರ ಮಾರ್ಕ್ಸ್‌ವಾದೀ ತಿಳುವಳಿಕೆ ಪ್ರಗತಿಶೀಲ ಆಲೋಚನೆಗಳೊಂದಿಗೆ ಎಪ್ಪತ್ತರ ದಶಕದ ಸ್ತ್ರೀವಾದಿ ಚಿಂತನೆಗಳು ತಮ್ಮ ಬರವಣಿಗೆಯ ದಿಕ್ಕನ್ನು ಬದಲಾಯಿಸಿದ ಹಂತಗಳನ್ನು ಈ ಆತ್ಮಕಥನ ದಾಖಲಿಸಿರುವುದು ಮಹಿಳಾ ವೈಚಾರಿಕತೆಯ ವಿಕಾಸದ ಕಥನದಂತೆಯೂ ಭಾಸವಾಗುತ್ತದೆ. ಸಮಾಜಶಾಸ್ತ್ರೀಯ ಒಳನೋಟಗಳು, ಸಂಸ್ಕೃತಿ ರಾಜಕಾರಣದ ಭಂಜನೆ ಇವೆಲ್ಲವನ್ನು ಅವರು ಸಾಧ್ಯವಾಗಿಸಿಕೊಳ್ಳುತ್ತ ನಡೆಯುತ್ತಾರೆ. ಪುರಾಣ ಲೋಕದ ಮೊದಲ ಬಂಡಾಯಗಾರ್ತಿ 'ಮಾಧವಿ'ಯನ್ನು ಕಾದಂಬರಿಯ ವಸುವಾಗಿಸಿಕೊಳ್ಳುವ ಮೂಲಕ ಸ್ತ್ರೀವಾದದೆಡೆ ಅವರು ನಡೆದು ಬರುತ್ತಾರೆ. ಚಿಕ್ಕಂದಿನಿಂದಲೂ ಲಿಂಗತಾರತಮ್ಯವನ್ನು ಪ್ರತಿರೋಧಿಸುತ್ತಲೇ ಬಂದ ಅವರ ಪ್ರವೃತ್ತಿಗೆ ವೈಚಾರಿಕ ಖಾಚಿತ್ಯ ದೊರಕುತ್ತ ಹೋಗುತ್ತದೆ. ತನ್ನ ಹೆಣ್ಣುಮಕ್ಕಳನ್ನು ಮೇಧಾವಿಗಳಾಗಿ, ಸ್ವತಂತ್ರ ಪ್ರವೃತ್ತಿಯ ತರುಣಿಯರನ್ನಾಗಿ ರೂಪಿಸುವಲ್ಲೂ ಹೊಸ ಕಾಲದ ತಾಯಿಯಾಗಿ ಅವರು ಹೊರಹೊಮ್ಮಿರುವುದು ಈ ಕಥನದ ಪ್ರೇರಣಾದಾಯಕ ಅಂಶ. ಅವರ ವೃತ್ತಿಕೂಡ ಅವರಿಗೆ ವಿವಿಧ ಹಿನ್ನೆಲೆಯ ಹೆಣ್ಣುಗಳ ಬವಣೆಗಳನ್ನು ಪರಿಚಯಿಸುತ್ತ ಅವರ ಗ್ರಹಿಕೆಗಳನ್ನು ಹಿಗ್ಗಿಸುತ್ತಲೇ ಹೋಗುತ್ತದೆ.

'ನೆನಪು ಸಿಹಿ ಕಹಿ'ಯ ಇನ್ನೊಂದು ವಿಶೇಷತೆಯೆಂದರೆ, ಅದು ಆ ಕಾಲದ ಸಾಮಾಜಿಕ, ಸಾಂಸ್ಕೃತಿಕ ಸಾಹಿತ್ಯಕ ಚಿತ್ರಣಗಳನ್ನು ನೀಡುವ ರೀತಿ. ತಮ್ಮ ಒಡನಾಟಕ್ಕೆ ಬಂದ ಎಲ್ಲವನ್ನೂ ಸಮಗ್ರವಾಗಿ ಕಟ್ಟಿಕೊಡುವ ಈ ಕಥನ ಆ ಕಾಲದ ಚಳವಳಿಗಳು, ಸಾಹಿತ್ಯ ವಾತಾವರಣದ ಒಳಸುಳಿಗಳನ್ನು ಪರಿಚಯಿಸುತ್ತದೆ. ತಮ್ಮ ಬದುಕಿನ ಬಹುದೊಡ್ಡ

ಕ್ಯಾನ್‌ವಾಸಿನಲ್ಲಿ ನೆನಪುಗಳನ್ನು ಪುನರ್‌ರಚಿಸಲು ಹೊರಟ ಅನುಪಮಾ ನಿರಂಜನ ಎಲ್ಲೋ ತಮ್ಮ ಆಳದ ಮರ್ಮರಗಳನ್ನು ದಾಖಲಿಸಲಾಗದೇ ಹೋಗುತ್ತಾರೆಯೆ? 'ಬರಹಗಾರ್ತಿಯ, ಸಮಚಿತ್ತದ ನಡೆಯನ್ನು ಮಾತ್ರ ದಾಖಲಿಸುತ್ತಾರೆಯೆ? ಎಂಬ ಅನಿಸಿಕೆಯೊಂದು ಈ ಓದಿನಲ್ಲಿ ಹಾಯ್ದುಹೋಗುತ್ತದೆ. ಸ್ವತಃ ಕ್ಯಾನ್ಸರ್‌ಗೆ ಬಲಿಯಾಗಿ ಕಿಮೋಥೆರಪಿಯ ನೋವು ನುಂಗಿಕೊಳ್ಳಬೇಕಾದ ಅನಿವಾರ್ಯತೆಯಲ್ಲೂ ತಮ್ಮ ಸಮಚಿತ್ತದ ವ್ಯಕ್ತಿತ್ವವನ್ನು ಅವರು ಕಳೆದುಕೊಳ್ಳುವುದಿಲ್ಲ. ಬದ್ಧತೆಗಳನ್ನು ಕೈಬಿಡುವುದಿಲ್ಲ ದಾಂಪತ್ಯ ದೀಪಿಕೆ, ಶಿಶುವೈದ್ಯ ದೀಪಿಕೆ, ಸ್ತ್ರೀಯರ ಲೈಂಗಿಕತೆಯ ಕುರಿತಾದ ವೈಜ್ಞಾನಿಕ ಮಾಹಿತಿಯುಕ್ತ ಬರಹಗಳ ಮೂಲಕ ಹೊಸ ದಾರಿಗಳನ್ನೇ ನಿರ್ಮಾಣ ಮಾಡಿದ ದಿಟ್ಟ ಮಹಿಳೆ ಅನುಪಮಾ 'ಅಡುಗೆ, ಮನೆಗೆಲಸದ ಜೊತೆಗೆ ಬೆಳಗ್ಗೆ ಸಂಜೆ ಕ್ಲಿನಿಕ್‌ನಲ್ಲಿ ಕೆಲಸ ಮಧ್ಯಾಹ್ನ – ರಾತ್ರಿ ಒಂದೆರಡು ಗಂಟೆಗಳು ಕಾದಂಬರಿ ಬರವಣಿಗೆಗೆ ಸಿಗುತ್ತಿದ್ದವು. ಈ ಸಮಯದಲ್ಲಿ ನಾನು ಅತ್ಯಂತ ಸುಖಿ ಎಂದುಕೊಂಡಿದ್ದೆ. ಆಗ ನನಗೆ ಬೇಕಾದುದೆಲ್ಲವೂ ಇತ್ತು. ಅನನ್ಯವಾಗಿ ಪ್ರೀತಿಸುವ ಗಂಡ, ಮೇಧಾವಿ ಮಕ್ಕಳು, ಒಳ್ಳೆಯ ವೈದ್ಯಕೀಯ ಪ್ರಾಕ್ಟೀಸ್, ಜೊತೆಗೆ ಸಾಹಿತ್ಯದಲ್ಲಿ ಸಾಕಷ್ಟು ಹೆಸರು ಹೆಂಗಸೊಬ್ಬಳಿಗೆ ಇನ್ನೇನು ತಾನೆ ಬೇಕು? (ಪು.253 ನೆನೆಪು ಸಿಹಿ ಕಹಿ) ಎಂಬ ತಮ್ಮ ಸಂತೃಪ್ತ ಬದುಕಿನ ಬಗ್ಗೆ ಅವರು ಬರೆದುಕೊಳ್ಳುತ್ತಾರೆ. ಆದರೆ, ಇದ್ಯಾವುದೂ ತಂತಾನೇ ಯಾವುದೇ ಹೆಣ್ಣಿಗೆ ಒಲಿದುಬರುವುದಿಲ್ಲ. ತನಗೆ ಬೇಕಾದ ಬದುಕನ್ನು ನಿರ್ಮಿಸಿಕೊಳ್ಳಲು ಅಪಾರ ತತ್ಪರತೆ ಛಲದ ದುಡಿಮೆ, ಸಣ್ಣಪುಟ್ಟ ರಾಜಿಗಳು, ಎಲ್ಲವೂ ಬೇಕು. ಅದನ್ನೆಲ್ಲ ಅರಿತು ಬದುಕಿನ ಹದ ಕಂಡುಕೊಂಡ ಅನನ್ಯ ದರ್ಶನವಾಗಿ ನಮ್ಮ ನಡುವೆ ನೆನಪು ಸಿಹಿ–ಕಹಿ ಇದೆ.

**ಕುದಿ ಎಸರು:** ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ... ಸುಖವಿಲ್ಲದೆ ಧಾವತಿಗೊಂಡೆನವ್ವಾ, ಎಂದ ಅಕ್ಕಮಹಾದೇವಿಯ ಅಳಲು ಮರದೊಳಗಣ ಕಿಚ್ಚಿನಂತೆ ಹೆಣ್ಣು ಜೀವಗಳನ್ನು ಸುಡುತ್ತಲೇ ಬಂದಿರುವುದು ಒಡಲ ಸತ್ಯ. ಎಷ್ಟೋ ಮಹಿಳೆಯರು ಇಂಥ ಕೆಂಡದುಂಡೆಗಳನ್ನು ಒಳಗೇ ಬಚ್ಚಿಟ್ಟು ಹೊರಗಿನ ಕಥನವನ್ನಷ್ಟೇ ಹೇಳಲು ಸಾಧ್ಯವಾಗಿದೆ. ಹಾಗೆ ಹೇಳದಿರಲು ನೂರು ಕಾರಣಗಳಿರುತ್ತವೆ. ವಿಜಯಮ್ಮ ಅವರ ಆತ್ಮಕಥೆ 'ಕುದಿ ಎಸರು' ಹಾಗೂ ಪ್ರತಿಭಾ ನಂದಕುಮಾರ್ ಅವರ ಆತ್ಮಕಥೆ 'ಅನುದಿನದ ಅಂತರಗಂಗೆ' ಕೃತಿಗಳು ಒಳಗಿನ ಸತ್ಯಗಳನ್ನು ಹೇಳುವ ದಿಟ್ಟತನದಿಂದಾಗಿ ಅನನ್ಯವೆನಿಸುತ್ತವೆ. ಇದಕ್ಕೆ ಇನ್ನೊಂದು ಸೇರ್ಪಡೆ ಶಶಿಕಲಾ ವಸ್ತ್ರದ ಅವರ 'ಇದ್ದೇನಯ್ಯಾ ಇಲ್ಲದಂತೆ' ಎಂಬ ಆತ್ಮಕಥನ. ಇವರೆಲ್ಲ ಬದುಕಿನಲ್ಲಿ ಘಾಸಿಗೊಂಡ ಮಹಿಳೆಯರು. ತಮ್ಮ ಗಾಯಗಳಿಗೆ ತಾವೇ ಮದ್ದು ಕಟ್ಟಿಕೊಂಡವರು. ತಮ್ಮ ಅದಮನೀಯ ಚೈತನ್ಯವನ್ನು ಕಾಪಿಟ್ಟುಕೊಂಡು ದಮನಿಸುವ ಒಳ–ಹೊರಗಿನ ಲೋಕದ ಜತೆ ಸೆಣಸಿದವರು. ಸಿದ್ಧ ನೈತಿಕ ಚೌಕಟ್ಟುಗಳನ್ನು ದಾಟಿ ಎದೆಯದನಿಗೆ ಕಿವಿಯಾಗಿ ಬದುಕಿದವರು. ತಮ್ಮ ಬದುಕಿನ ಪರಧಿಗಳನ್ನು ವಿಸ್ತರಿಸಿಕೊಂಡ ಛಲಗಾರ್ತಿಯರು. ಇವೆಲ್ಲ ಅವರ ಹೊರಗಿನ ರೇಖಾಚಿತ್ರವಾದರೆ ಒಳಗಿನ ರಕ್ತ, ಮಾಂಸ

ತುಂಬಿದ ಅನುಭವ ಲೋಕವಿದೆಯಲ್ಲ! ಅದು ಖಂಡಿತ ನಮ್ಮನ್ನು ಕಲಕಿ ಬಿಡುತ್ತದೆ. ಎದೆ ಝಲ್ಲೆನ್ನುವಂತೆ ಮಾಡುತ್ತದೆ. ಹೆಣ್ಣು ದೇಹ, ಅದಕ್ಕಂಟಿದ ತಾಯ್ತನ, ದೇಹ ಮನಸ್ಸಿನ ವಿಚಿತ್ರ ಸಿಕ್ಕುಗಳು, ಎಲ್ಲವನ್ನೂ ದಾಟುವಲ್ಲಿ ಅವರು ತೋರಿದ ಸಾಹಸ, ಅದರ ಒಳಗೆಲ್ಲೋ ಮರ್ಮರಿಸುವ ಭಾಷೆಯಿಲ್ಲದ ಸಂಕಟ, ಎಲ್ಲವನ್ನೂ ಅನುಭವಗಳ ಹಸಿತನದಲ್ಲಿ ಕಟ್ಟುವ ಸೃಜನಶೀಲತೆಯಿಂದಾಗಿ ಇವು ಭಿನ್ನವಾಗಿ ನಿಲ್ಲುತ್ತವೆ. ಹೆಣ್ಣಿನ ಬದುಕಿನ ಬಂಧನ ಹಾಗೂ ಬಿಡುಗಡೆ ಈ ಎರಡೂ ಅಂಚುಗಳ ನಡುವೆ ಅವರ ಬದುಕಲ್ಲಿ ಬರುವ ಪುರುಷರ ಪಾತ್ರ ದೊಡ್ಡದು. ಗಂಡು–ಹೆಣ್ಣಿನ ಸಂಬಂಧದ ವಿನ್ಯಾಸಗಳು ಅವರ ಭಾವನಾತ್ಮಕ ಬದುಕನ್ನು ಕಟ್ಟಿನಿಲ್ಲಿಸುತ್ತವೆ. ಅಲ್ಲಿನ ಅಧಿಕಾರ ಸಂಬಂಧಗಳ ಮೂಲಕ ಹುಟ್ಟುವ ಹಿಂಸೆ ಅವರ ಮನೋಲೋಕವನ್ನು ಧ್ವಂಸಗೊಳಿಸುತ್ತದೆ. ಯಾಕೆಂದರೆ ಹೆಣ್ಣಿನ ಪಾಲಿಗೆ ಸಂಬಂಧಗಳು ನಿಜಕ್ಕೂ ದೊಡ್ಡವು. ಪ್ರೀತಿಯ ಹುಡುಕಾಟದಲ್ಲಿ, ಸಿಕ್ಕ ಪ್ರೀತಿಯನ್ನು ಗಾಢವಾಗಿ ಅನುಭವಿಸುವಲ್ಲಿ, ಪ್ರೀತಿಯೇ ತಾನಾಗಿ ಧಗಧಗಿಸುವಲ್ಲಿ ಅವಳ ಪ್ರಾಣಶಕ್ತಿ ಮಿಳಿತವಾಗಿರುತ್ತದೆ. ಇಂಥ ಉತ್ಕಟ ಕಥನಗಳು ಮೂಡಿಸುವ ಹೆಣ್ಣಿನ ಬಿಂಬ ಬೇರೆಯದೇ ಬರೆಯದು ಏಕೆಂದು 'ಹೆಣ್ಣು' ಎಂಬ ಅಸ್ಮಿತೆ ಪ್ರಧಾನವಾಗಿ ಅವಳ ದೇಹದಿಂದ ದೊರಕಿದ್ದು ಮಹಿಳಾ ಆತ್ಮಕಥೆಗಳ ಈ ಒಳಚಲನೆ ಹಾಗೂ ಒಳಗಿನ ಗೂಢಗಳನ್ನು ಬಗೆದು ಬಯಲಾಗಿ ಮತ್ತೆ ಹೊರಗೆ ಹರಿಯುವುದು ಬಹುದೊಡ್ಡ ಅನುಭವ ಲೋಕವೊಂದನ್ನು ಕಟ್ಟಿಕೊಡುತ್ತದೆ. ಪಾವಿತ್ರ್ಯ, ಪಾತಿವ್ರತ್ಯಗಳ ಹಂಗು ಹರಿದು ತನ್ನೊಳಗಿನ ಮೊರೆತಗಳಿಗೆ ದನಿಯಾಗುವ ಹೊಸ ದಾರಿಗಳನ್ನು ನಿರ್ಮಿಸಿಕೊಂಡು ಮುಂಚಲಿಸುತ್ತದೆ.

ಅನುಭವದ ಸಂಕೀರ್ಣತೆ ಹಾಗೂ ಸಮಗ್ರತೆಗಳ ಅರಿವಿಲ್ಲದಿದ್ದರೆ ಆತ್ಮಕಥಾನಕ ಒಂದೋ ಗೋಳು ತೋಡಿಕೊಳ್ಳುವಿಕೆಯಾಗುತ್ತದೆ. ಅಥವಾ ಪಾರ್ಶ್ವಿಕ ನೋಟದ ಪೂರ್ವಗ್ರಹಗಳ ನಿರೂಪಣೆಯಾಗಿಬಿಡುತ್ತದೆ. ವಿಜಯಮ್ಮ ತಮ್ಮ 'ಕುದಿಎಸರಿ'ನಲ್ಲಿ ಅಂಥ ಎಚ್ಚರವನ್ನು ಇರಿಸಿಕೊಂಡಿದ್ದಾರೆ. ಗಂಡನ ಹಿಂಸೆಯನ್ನು ತಣ್ಣಗಿನ ಧ್ವನಿಯಲ್ಲಿ ನಿರೂಪಿಸುವಾಗಲೂ ವ್ಯಕ್ತಿ ಏಕೆ ಕ್ರೂರಿಯಾಗುತ್ತಾನೆ? ಅವನಲ್ಲಿ ಹಿಂಸೆ ಹೇಗೆ ಮೊಳೆಯುತ್ತದೆ? ಎಂಬ ಪ್ರಶ್ನೆಗಳನ್ನು ಆಳವಾಗಿ ಎದುರಿಸಲು ಬಯಸುತ್ತಾರೆ. ಅಂದಿನ ಘಟನೆಗಳನ್ನು ತಾನು ಇನ್ನೂ ಸರಿಯಾಗಿ ಅರ್ಥಮಾಡಿಕೊಂಡು ನಿರ್ವಹಿಸಬಹುದಿತ್ತೇನೋ ಎಂಬ ಪ್ರಾಮಾಣಿಕ ಆತ್ಮವಿಮರ್ಶೆ ಅವರ ಬರಹದ ಸ್ಥಾಯಿಯಾಗಿದೆ. ಸಂಬಂಧಗಳು ವಿಕಾಸಗೊಳ್ಳುವಾಗ ಸಂಘರ್ಷವೂ ಅನಿವಾರ್ಯವೇನೋ! ಭಿನ್ನ ಕೌಟುಂಬಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಸರದಲ್ಲಿ ಬೆಳೆದ ಗಂಡು–ಹೆಣ್ಣುಗಳು ಸಾಮರಸ್ಯದ ಹದವರಿತು ಕರಗುವುದು ಅಷ್ಟು ಸುಲಭವಲ್ಲ. ಒಣ ಪ್ರತಿಷ್ಠೆ, ಪಿತೃಪ್ರಧಾನ ಮೌಲ್ಯಗಳ ಅಧಿಕಾರ ರಚನೆ, ಅದರಿಂದ ಒದಗಿದ ಪುರುಷ ಅಹಂ ಎಲ್ಲ ಸೇರಿ ಸಂಬಂಧದಲ್ಲಿ ಹಿಂಸೆಯ ಆಯಾಮ ಪ್ರವೇಶಿಸಿ ಬಿಡುತ್ತದೆ. 'ಪೌರುಷ'ದ ಸಿದ್ಧ ಕಲ್ಪನೆಯನ್ನೇ ಬದುಕಬೇಕಾದ ಪುರುಷ ಕೂಡ ಅದನ್ನು ಸ್ಥಾಪಿಸಲಾಗದ ಹತಾಶಸ್ಥಿತಿಯಲ್ಲಿ

ಹಿಂಸ್ರಮೃಗದಂತಾಗುತ್ತಾನೆ. ಈ ಎಲ್ಲವನ್ನೂ ಮಾನವೀಯವಾಗಿ ಗ್ರಹಿಸುವ ಕಣ್ಣು 'ಕುದಿ ಎಸರಿ' ನಲ್ಲಿದೆ. ಬೌದ್ಧಿಕತೆ, ಸಿದ್ಧಾಂತಗಳ ಪರಿಚಯವಿದ್ದರೂ ವಿಜಯಮ್ಮ ಅದರಾಚೆ ಬದುಕನ್ನು 'ಕಾಣುವ' ಪರಿ ಪಕ್ವವಾದುದು.

ಗಂಡ ಬಿಟ್ಟವಳು ಎಂಬ ಪಟ್ಟಹೊರಲು ಹೆದರಿ ಎಷ್ಟೋ ಮಹಿಳೆಯರು ಕೌಟುಂಬಿಕ ಹಿಂಸೆಯಲ್ಲಿ ಕರಗಿ ಇಲ್ಲವಾಗುತ್ತಾರೆ. ಆದರೆ ಮದುವೆಯ ಚೌಕಟ್ಟಿನಿಂದ ಹೊರಬಂದ ವಿಜಯಮ್ಮ ಅವರ ಒಳಗಿನ ಪ್ರತಿಭೆ ಪ್ರಕಾಶಗೊಳ್ಳುವುದೇ ಆಮೇಲಿನಿಂದ. ನಾಶವಾಗಿ ಹೋಗಬಹುದಾಗಿದ್ದ ಬದುಕನ್ನು ಅತ್ಯಂತ ಕ್ರಿಯಾಶೀಲವಾಗಿ ಕಟ್ಟಿಕೊಂಡಿದ್ದು ಅವರ ಬದುಕಿನ ಘನತೆಯನ್ನು ಹೆಚ್ಚಿಸಿತು. ಆರ್ಥಿಕ ಅವಲಂಬನೆಯೆಂಬ ಸೆರೆಮನೆಯನ್ನು ಒಂದು ಸಲ ದಾಟಿದರೆ ನೂರು ದಾರಿಗಳು, ನೂರು ಸಾಧ್ಯತೆಗಳು ತೆರೆದುಕೊಳ್ಳಬಲ್ಲವು ಎಂಬುದಕ್ಕೆ ವಿಜಯಮ್ಮ ನಿದರ್ಶನ. ಸ್ವತಂತ್ರ, ದುಡಿಯುವ ಹೆಣ್ಣನ್ನು, ವಿವಾಹದಾಚೆಯೂ ಘನತೆಯಿಂದ ಬದುಕುವ ಅವಳ ಸಾಧ್ಯತೆಯನ್ನು ಒಪ್ಪಿಕೊಳ್ಳಲು ಅಂದಿನ ಸಮಾಜದ ಮನಸ್ಥಿತಿ ಪಕ್ವವಾಗಿರಲಿಲ್ಲ. ಆದರೆ, ವಿಜಯಮ್ಮನಂಥವರ ಹೋರಾಟ ಇಂದು ಅಂಥ ಮನಸ್ಥಿತಿಯ ನಿರ್ಮಾಣಕ್ಕೆ ಅಡಿಗಲ್ಲಾಗಿರುವುದು ಸುಳ್ಳಲ್ಲ. ರಂಗಭೂಮಿ, ಸಾಹಿತ್ಯ, ಸಿನಿಮಾ, ಪತ್ರಿಕೋದ್ಯಮ ಹೀಗೆ ಹಲವು ರಂಗಗಳಲ್ಲಿ ವಿಸ್ತರಿಸಿಕೊಂಡಿರುವ ವಿಜಯಮ್ಮನ ಅನುಭವ ಕಥನ 'ಸ್ವಯಂ ವಿಕಾಸದ' ಒಂದು ಮಾದರಿ. ಕುದಿಯುವುದು ನೋವಿನ ಅನುಭವವಾದರೂ ಕುದಿಯದೇ ಅನ್ನವಾಗಲಾಗದು ಎಂಬುದೂ ಸತ್ಯ ಇಂಥ ಸತ್ಯದರ್ಶನಕ್ಕಾಗಿ ಕುದಿ ಎಸರು ಗಮನಾರ್ಹವಾದ ಆತ್ಮಕಥನ.

**ಇದ್ದೇನಯ್ಯಾ ಇಲ್ಲದಂತೆ** : ನಾವೇ ಕಟ್ಟಿಕೊಂಡ ಸೊಕಾಲ್ಡ್ ಸಂಸ್ಕೃತಿಯಲ್ಲಿ ವಿವಾಹದ ಭಾಗವಾಗಿ ಮಾತ್ರ ತಾಯ್ತನವು ಸ್ವೀಕಾರಾರ್ಹವೂ ಪವಿತ್ರವೂ ಎನಿಸುತ್ತದೆ. ತಾಯಿಯಾಗಬೇಕೆಂಬ ಜೀವದ, ದೇಹದ ಹಂಬಲ ಮತ್ತೆ ಮತ್ತೆ ವಿಷಮವಿವಾಹಗಳ ಸುಳಿಯಲ್ಲಿ ತೊಳಲಾಡಿಸುವ ಕಥನ ಶಶಿಕಲಾ ಅವರ 'ಇದ್ದೇನಯ್ಯಾ ಇಲ್ಲದಂತೆ'. 'ಬರವಣಿಗಿ ಅನ್ನೋದು ಹ್ಯಾಂಗ ಬೌದ್ಧಿಕ – ಮಾನಸಿಕ ಸೃಷ್ಟಿನೊ ಹಂಗೇ ತಾಯ್ತನ ಕೂಡ ದೈಹಿಕ ಪರಿಪೂರ್ಣತೆಯ ಪಕ್ವ ಸೃಜನಶೀಲತೆಗೆ ಸಾಕ್ಷಿ ಅಲ್ಲೇನು? ಪರಿಪೂರ್ಣ ಹೆಣ್ತನ ಆದ ತನಗಿ ಅದು ತಾಯ್ತನದಿಂದ ಯಾಕ ಧನ್ಯ ಅಗ್ಬಾರ್ದು?' (179, ಇದ್ದೇನಯ್ಯಾ...) ತಾಯಿಯಾಗಿ ಇಡೀ ಜೀವ ಅರಳುವ, ಮಗುವಿನ ಗುಲಾಬಿ ಮೃದು ಪಾದಗಳ ಸ್ಪರ್ಷದಲ್ಲಿ ಭಾವ ಅರಳುವ ಕ್ಷಣಗಳನ್ನು ಉತ್ಕಟವಾಗಿ ಹಂಬಲಿಸಿದವರು ಶಶಿಕಲಾ. ತಾಯ್ತನವೊಂದೇ ಹೆಣ್ತನದ ಅಂತಿಮ ಗುರಿಯೇನು? ತಾಯ್ತನದ ಭಾವಕ್ಕೆ ಸ್ವಂತ ಮಕ್ಕಳೇ ಆಗಬೇಕೇನು? ಅದು ಮನಸ್ಸಿನ ಬಯಕೆಯಾ? ದೇಹದ್ದಾ? ಹಲವು ಪ್ರಶ್ನೆಗಳನ್ನು ಇಲ್ಲಿ ಲೌಕಿಕವಾಗಿ ಕೇಳಲು ಅವಕಾಶವಿದೆ. ಆದರೆ ನಮ್ಮ ವಿಮರ್ಶಾಪ್ರಜ್ಞೆ ವ್ಯಕ್ತಿಯ ಅನುಭವದ ಅಧಿಕೃತತೆಯನ್ನು ನಿರಾಕರಿಸಲಾಗದು. ತರ್ಕ ಮೀರಿ ಹರಿವ ಸೆಳೆತಗಳನ್ನು ನಿರುದ್ವಿಗ್ನವಾಗಿ ಶಶಿಕಲಾ ತಮ್ಮ

ಆತ್ಮಕಥನದಲ್ಲಿ ಕಟ್ಟಿಕೊಡುತ್ತಾರೆ. ಆದರೆ ಅವರು ಇದನ್ನು ಕಾದಂಬರಿಯೆಂದು ಕರೆದಿದ್ದಾರೆ. ತಮ್ಮನ್ನು ಅದರಲ್ಲಿ ಒಂದು ಪಾತ್ರವಾಗಿಸಿ, ಆ ಪಾತ್ರದ ಕಣ್ಣಲ್ಲಿ ತಮ್ಮ ಲೋಕವನ್ನು ಕಾಣಿಸುತ್ತಾರೆ. ನೀಲಕ್ಕನೆಂಬ ನಿರೂಪಕಿಯಲ್ಲಿ ತಮ್ಮನ್ನು ಹುದುಗಿಸಿಟ್ಟುಕೊಂಡದ್ದು ಒಂದು ತಂತ್ರವಿರಲಿಕ್ಕೂ ಸಾಕು. ತನ್ನ ಕುರಿತು ಹೇಳುವಾಗ ತಾನೇ ಭಾರವಾಗದಂತೆ ಆತ್ಮಸಮರ್ಥನೆ, ಹಳಹಳಿಕೆ, ನುಸುಳದ ನಿರ್ಲಿಪ್ತತೆಯನ್ನು ಈ ತಂತ್ರ ಸಾಧ್ಯವಾಗಿಸಿದೆ. ಇದು ಒಂದು ರೀತಿ ತನ್ನಿಂದ ತನ್ನನ್ನು ಬಿಡುಗಡೆಗೊಳಿಸಿಕೊಳ್ಳುವ ಕ್ರಿಯೆ!.

ಆತ್ಮಸಂಗಾತಕ್ಕೆ ನೀನೆನಗುಂಟು ಎಂದು ಹಲುಬುವ ಅಕ್ಕನ ಸಾಂಗತ್ಯದ ತಹತಹ ಹೆಣ್ಣು ಜೀವಕ್ಕೆ ಸಹಜವೇನೋ ಎಂಬಂತೆ ಶಶಿಕಲಾರ ಬರಹದಲ್ಲಿ ಪೂರ್ಣ ಪ್ರೇಮದ ಹುಡುಕಾಟವಿದೆ. ವಿವಾಹದಲ್ಲಿ ಎಂದೂ ಅರಳದ ಹೆಣ್ತನ, ಜೀವಕ್ಕೆ ಹತ್ತಿರಾಗುವ ಗೆಳೆತನದ ಭಾವವಿಲ್ಲದ ವ್ಯವಹಾರಿಕ ಸಂಬಂಧ, ಹಿಂಸೆಗೆ ತಿರುಗುವ ಅಧಿಕಾರ ಸಂಬಂಧಗಳಲ್ಲಿ ಘಾಸಿಯಾಗುವ ನಾಜೂಕು ಮನಸಿನ ಕಥನವಿದು. ಮದುವೆಯ ನಾಜೂಕು ಮೋಸ, ಒರಟು ತಿರಸ್ಕಾರ, ಬಳಸಿಕೊಂಡು ಬಿಸಾಡಿದರೆಂಬ ತಳಮಳದ ಪ್ರಭಾವದಲ್ಲಿ ನರಳುವ ಸೆರಗಿನ ಕೆಂಡದಂಥ ದುಃಖದ ಕಥನವಿದು. 'ಸಾಸಿವಿಯಷ್ಟು ಸುಖಕ್ಕ ಸಾಗರದಷ್ಟು ದುಃಖಾ ಅನುಭವಿಸೂದು' (ಪು.173, ಇದ್ದೇನಯ್ಯಾ...) ನಿತ್ಯಸತ್ಯವೇ ಆಗಿಬಿಡುತ್ತದೆ. ಪದೇ ಪದೇ ಪ್ರೀತಿಯ ಭ್ರಮೆಗಳು, ವಂಚನೆಗೊಳಗಾದೆ ಎಂಬ ಭಾವದ ಹಿಂದೆ ವಿವಾಹದ ಹಿಂದಿನ ಹುಸಿಭ್ರಮೆಗಳು ಬಯಲಾಗುತ್ತಾ ಹೋಗುತ್ತವೆ. ಗಂಡನನ್ನು 'ಅರೆಗಂಡ' ಎಂದು ಸಂಬೋಧಿಸುವಲ್ಲಿ ಶಶಿಕಲಾ ಅವರ ಹಲವು ಭಾವಗಳು ಹೆಪ್ಪುಗಟ್ಟಿದಂತಿವೆ. ಹೆಂಡತಿಗೆ ಪ್ರತಿಭೆ, ಸ್ವತಂತ್ರ ವ್ಯಕ್ತಿತ್ವ ಗಳಿರುವುದು ಗಂಡಸಿನ ಅಹಂ ಅನ್ನು ಮಗ್ಗಲುಮುಳ್ಳಾಗಿ ಚುಚ್ಚುತ್ತಿರುತ್ತದೆ. ಅವಳನ್ನು ನಿಯಂತ್ರಿಸುವುದರಲ್ಲಿಯೇ ಅವನ ಪುರುಷತ್ವ ತೃಪ್ತವಾಗುತ್ತದೆ. ಗಂಡಸಿನ ಈ ಪೊಗರನ್ನು ಎಳಸುತನವನ್ನಾಗಿ ಕಾಣುವ ತಾಯ್ತನದ ಪಕ್ವನೋಟ ಈ ಆತ್ಮಕಥನದಲ್ಲಿ ನುಡಿಯಾಗಿದೆ. 'ಪ್ರತಿಭಾವಂತ, ಸ್ವಾಭಿಮಾನಿ ಹೆಣ್ಣನ್ನು ಬಾಳಿಸುವ ಧಾರಣ ಶಕ್ತಿಯೇ ಅವನಲ್ಲಿರಲಿಲ್ಲ ಅವನದೇನು ತಪ್ಪು?' (ಪು–240 ಇದ್ದೇನಯ್ಯಾ...) ಎಂದು 'ಅರೆಗಂಡನ' ಅರೆಬರೆತನವನ್ನು ಅಳೆಯುವ ಹೆಣ್ಣು ದೃಷ್ಟಿ ಇಲ್ಲಿ ಮೂಡಿದೆ. ಗಂಡು ಎಂದೆಂದೂ ಅಪೂರ್ಣ ತಳಮಳದ ಮುದ್ದೆ ಅವನಿಂದ ಪೂರ್ಣ ಪ್ರೇಮದ ಸ್ಥಿತಿ ಸಿಗಲಾರದೆಂಬ ಅರಿವಿನಲ್ಲೂ ನೀಲಕ್ಕ ತಾಯ್ತನದಲ್ಲಿ ಅದನ್ನು ಪಡೆಯುವ ಗೀಳಿಗೆ ಒಳಗಾಗುತ್ತಾಳೆ. ಮಗು ಒಡಲಲ್ಲಿ ಮಿಸುಕುವ, ಅದರ ಗುಲಾಬಿ ಮೈಯನ್ನು ಸ್ಪರ್ಶಿಸುವ ಐಂದ್ರಿಕ ಬಯಕೆ ದೇಹ ಪ್ರಜ್ಞೆಗಳ ಭಾಗವಾಗಿ ತರ್ಕಮೀರಿದ ಸಂಗತಿಯಾಗಿ ಬಿಡುತ್ತದೆ. ಇದನ್ನು ಎಲ್ಲ ಹೆಣ್ಣುಗಳಿಗೂ ಸಾಮಾನ್ಯೀಕರಿಸಲಾಗದಿದ್ದರೂ ಇದು ಆ ಕ್ಷಣದ, ಆ ಮೈಯ ಉತ್ಕಟ ತುಡಿತ. ಕೊನೆಗೂ ಈ ಅರೆಗಂಡರಿಂದ ತನ್ನನ್ನು ಕಳಚಿಕೊಂಡು ಮುಕ್ತವಾದ ಪ್ರಜ್ಞೆಯಲ್ಲಿ ಶಶಿಕಲಾ ಅವರು 'ಇದ್ದೇನಯ್ಯಾ ಇಲ್ಲದಂತೆ' ಎಂಬ ನಿಲುವಲ್ಲಿ ವಿರಮಿಸುತ್ತಾರೆ.

ಈ ಭಾವನಾತ್ಮಕ ತಳಮಳಗಳ ಆಚೆ ಅವರು ಕಟ್ಟಿಕೊಂಡ ಬದುಕಿನ ಚಿತ್ರಗಳು ಲೇಖಕಿಯೊಬ್ಬರ ವಿಕಾಸದ ಕಥನವಾಗಿಯೂ ಮಹತ್ವದ್ದೆನಿಸುತ್ತವೆ. ತಮ್ಮ ಸಾಮಾಜಿಕ, ಬೌದ್ಧಿಕ ವ್ಯಕ್ತಿತ್ವವನ್ನು ವಿವಾಹಕ್ಕೆ ಬಲಿಕೊಡದೆ ಕಾಪಿಟ್ಟುಕೊಂಡ ಬಗೆಗೆ ಲೇಖಕಿಗೆ ಹೆಮ್ಮೆಯಿದೆ. 'ನ ಹನ್ಯತೆ'– 'ಹೆಣ್ಣಿನ ಅಸ್ಮಿತೆಯನ್ನು ಎಂದೂ ಹತ್ಯೆ ಮಾಡಲಾರಿರಿ ಹೆಣ್ಣನ್ನು ಹಣಿಯುವ ಶಕ್ತಿ ಜಗತ್ತಿನ ಯಾವ ಅಸ್ತ್ರಕ್ಕೂ ಕತ್ತರಿಸಿದಷ್ಟೂ ನಳನಳಿಸುತ್ತ ಹುಲ್ಲುಗರಿಕೆ ಬೆಳೆಯುತ್ತಾ ಹೆಣ್ಣೂ ಹಾಗೆಯೇ..' (ಪು–297, ಇದ್ದೇನಯ್ಯಾ..) ಎನ್ನುವ ಶಶಿಕಲಾ ತಾಯ್ತನದ ಭಾವವನ್ನು ಇಡೀ ಬದುಕಿಗೆ ವಿಸ್ತರಿಸಿಕೊಳ್ಳುತ್ತಾ, ಅಕ್ಕ ತಂಗಿಯರ ಮೊಮ್ಮಕ್ಕಳೊಂದಿಗೆ ಮಗುವಾಗುತ್ತಾ, ತನ್ನನ್ನು ಅಂತಃಕರಣಿಯಾಗಿ ಉಳಿಸಿದ ಪುಸ್ತಕಗಳ ಸಾಂಗತ್ಯದಲ್ಲಿ, ಮಾನವೀಯ ಸಂಬಂಧಗಳಲ್ಲಿ ಬದುಕಿನ ಸಾರ್ಥಕತೆ ಕಾಣಲು ಸಂಕಲ್ಪಿಸುತ್ತಾರೆ. ಇದೂ ಕೂಡ ತನ್ನನ್ನು ಉಳಿಸಿಕೊಳ್ಳುವ ಒಂದು ರೀತಿಯೇ... ಇಲ್ಲದಂತೆ ಇರುವುದು ವೈರಾಗ್ಯವಲ್ಲ, ಇರುವಷ್ಟೂ ದಿನ ಇರುವನ್ನು ಸಂಭ್ರಮಿಸುವುದು. ಕಳಚಿಕೊಳ್ಳಲು ಒದ್ದಾಡದಂತೆ ನಿರ್ಮೋಹಿಯಾಗಿರುವುದು ಇದೊಂದು ಬಗೆಯ ಮುಕ್ತ ವ್ಯಕ್ತಿತ್ವದ ಅಭಿವ್ಯಕ್ತಿ.

ಪ್ರತಿಭಾ ನಂದಕುಮಾರ್ ಅವರ 'ಅನುದಿನದ ಅಂತರಗಂಗೆ' ಕನ್ನಡ ಮಹಿಳಾ ಆತ್ಮಕಥನಗಳಿಗೆ ಲವಲವಿಕೆಯ, ದಿಟ್ಟತನದ ಹೊರಳನ್ನು ಒಂದು ಚೈತನ್ಯದ ಜಿಗಿತವನ್ನು ತಂದುಕೊಟ್ಟಿತು. ಪ್ರತಿಭಾ ತಮಗೊಂದು ಸ್ಪೇಸ್‌ಬೇಕು ಎಂದು ಹೋರಾಡುವುದಿಲ್ಲ. ಅವರ ವ್ಯಕ್ತಿತ್ವವೇ ಲಿಬರೇಟೆಡ್ ಆದುದು. ಅಡೆತಡೆಗಳನ್ನೆಲ್ಲ ಕೊಚ್ಚಿ ಧುಮಿಕಿ ಹರಿಯುವ ನೀರಿನಂಥದ್ದು, ನವನವೋನ್ಮೇಶಶಾಲಿತ್ವಕ್ಕೆ ಭಾಷ್ಯ ಬರೆವಂತೆ ಬದುಕಿದ ಪ್ರತಿಭಾ, ಅದಕ್ಕಾಗಿ ಅಪಾರ ನೋವುಂಡರೂ ಸ್ವಾತಂತ್ರ್ಯದ ಒರತೆಯನ್ನು ಬತ್ತಲು ಬಿಡದವರು. ಈ ಅನುದಿನದ ಅಂತರಗಂಗೆಯ ಹರಿವು ಕನ್ನಡಮಟ್ಟಿಗೆ ಹೊಸತು ದೇಹ–ಆತ್ಮ, ಪ್ರೇಮ–ಕಾಮ, ಒಳಗೆ–ಹೊರಗೆ ಎಂಬ ವಿಭಜನೆಯಿಲ್ಲದಂತೆ ಅಖಂಡ ಸಂಭ್ರಮ – ಸಂಕಟಗಳನ್ನು ದಾಟಿಸುವ ಬಗೆಯಿಂದಾಗಿ ಇದು ನವನವೋನ್ಮೇಶಶಾಲಿಯಾಗಿ ತೋರುತ್ತದೆ. 'ಪ್ರೀತಿಯೆಂಬುದು ನಡುಹೊಕ್ಕಳ ನಾಭಿ ಮೂಲದಿಂದ ಹೊರಳಿ ಬಂದು ಹುಟ್ಟುತ್ತದೆ'ಯೆಂಬ ಮಾರ್ಕ್ವೆಜ್‌ನ ನುಡಿಯನ್ನು ಅನುರಣಿಸುವಂತೆ ಈ ಕೃತಿಯಲ್ಲಿ ಒಂದು ಕಂಪನವಿದೆ. ಇಡೀ ಬದುಕು ಪ್ರೀತಿಯ ಹುಡುಕಾಟದ ಒಂದು ಪಯಣದಂತಿದೆ. ಪ್ರೀತಿಗಾಗಿ ತಹತಹ, ಪ್ರೀತಿಯ ನಿರಾಕರಣೆಯ ತಲ್ಲಣ, ತೀರ ಫಿಸಿಕಲ್ ಆದ ಸಂಭ್ರಮ ಇವೆಲ್ಲ ಹಸಿಯಾಗಿ ಉಕ್ಕುವ ಹಸಿರಿನಷ್ಟೇ ನೈಜವಾಗಿವೆ. ಹೆಣ್ಣುಗಂಡಿನ ಅಖಂಡ ಐಕ್ಯದ ಹಂಬಲ ಯಾವಾಗಲೂ ಒಂದು ತಪನೆಯ ಸ್ಥಿತಿ. ಆಧ್ಯಾತ್ಮದಲ್ಲೂ ಸರಿಯೇ ಲೌಕಿಕದಲ್ಲೂ ಸರಿಯೇ. ಆದರೆ ಗಂಡಸು ಅದನ್ನು 'ತನಗೆ ಬೇಕಾದ ಹಾಗೆ ಮಾತ್ರ' ಪಡೆಯುವ ಲೌಕಿಕನಾಗಿ ಬಿಟ್ಟಾಗ ಅಪೂರ್ಣತೆಯ ಭಾವದಲ್ಲಿ ಹೆಣ್ಣು ತಳಮಳಗೊಳ್ಳುತ್ತಾ ಹೋಗುತ್ತಾಳೆ. ಅಂಥ ಭಾವತೀವ್ರತೆಯಲ್ಲಿ ಅದ್ದಿದ ಬರಹ ಬೌದ್ಧಿಕ ವಾದಗಳನ್ನು ಮರೆಮಾಡುತ್ತದೆ. ಪ್ರೀತಿಗಾಗಿ ಬೇಡುವ, ಸೋಲುವ ಘಳಿಗೆಗಳಲ್ಲಿ ಆ ಕ್ಷಣದ ಕಾವು ಅವರಿಗೆ ಮುಖ್ಯವಾಗುತ್ತದೆಯೇ

ಹೊರತೂ ತಾನು 'ಬಾಗಬಾರದು' ಎಂದು ಹಠವಲ್ಲ. ಪ್ರೇಮದ ಪರಿಭಾಷೆ ಬೌದ್ಧಿಕ ಪರಿಭಾಷೆಗಿಂತ ಭಿನ್ನ ಎಂಬ ಅರಿವು ಈ ಆತ್ಮ ಕಥಾನಕದ ತುಂಬ ನಿನದಿಸುತ್ತದೆ. ದೇಹದ ಮಿಡಿತ, ರೋಮಾಂಚನಗಳು ಪ್ರಜ್ಞೆಯ ಭಾಗವೂ ಆಗಿ ಇಡೀ ವ್ಯಕ್ತಿತ್ವವನ್ನು ಆವರಿಸಿ ಜ್ವಲಿಸುವ ತೀವ್ರಾನುಭವ ಇಲ್ಲಿನ ವಿಶೇಷ.

ಪ್ರತಿಭಾರ ಬರವಣಿಗೆಯಲ್ಲಿ ಒಂದು ತುಂಟತನವಿದೆ. ಅದು ಅರಾಜಕವಾದ ತುಂಟತನ. ಪ್ರೀತಿ ಎಂಬ ಉತ್ಕಟಭಾವ ಶಾಶ್ವತ ಸ್ಥಿತಿಯಲ್ಲ. ಕಾಲೂರಿದ ನೆಲದಲ್ಲೇ ಸಂಭವಿಸುವ ಆ ಸ್ವರ್ಗೀಯ ಭಾವ ಸಿಕ್ಕಿತು ಎನಿಸಿದ ಕ್ಷಣಗಳನ್ನು ಚಿಟ್ಟೆ ಹಿಡಿಯುವ ಓಡುವ ಮುಗ್ಧ ಹುಡುಗಿಯಂತೆ ಹಿಡಿಯಲು ಸಂಭ್ರಮಿಸುವ ವ್ಯಕ್ತಿತ್ವವೊಂದು ಇಲ್ಲಿ ಮಾತಾಡಿದಂತಿದೆ. ಕ್ಷಣಭಂಗುರತೆಯಲ್ಲಿಯೇ ಬದುಕಿನ ಸೌಂದರ್ಯವಿದೆ ಎಂಬ ಫಿಲಾಸಫಿಯನ್ನು ಮೆಲ್ಲನೆ ಉಸುರುವ ಈ ಕಥನ ಆ ಕಾರಣಕ್ಕಾಗಿಯೇ ಚಲನಶೀಲವೂ ತಾಜಾ ಸಂವೇದನೆಯದೂ ಆಗಿ ಕಾಣುತ್ತದೆ. ವಿವಾಹದ ಚೌಕಟ್ಟಿನಲ್ಲಿ ಬದುಕುತ್ತಲೇ ಅದರಾಚೆಗೂ ಪ್ರೀತಿಗಾಗಿ ಹಂಬಲಿಸುವ ಜೀವ, ನಿಷ್ಠೆ, ಪಾತಿವ್ರತ್ಯದ ಗೆರೆಗಳನ್ನು ತೀರ ಸಹಜವಾಗಿ ದಾಟಿ ಬಿಡುತ್ತದೆ. ಆದರೆ ಈ ಹಂಬಲ ಬರಿಯ ದೈಹಿಕ ವಾಂಛೆಯಲ್ಲ ಎಂಬ ಅರಿವನ್ನು ಸಮಾಜಕ್ಕೆ ಕಾಣಿಸಲಾಗುವುದಿಲ್ಲ. 'ಹೆಣ್ಣಿನ ಪ್ರೀತಿ ಎಂದರೆ ಸಂಭೋಗ ಎಂದು ತಿಳಿಯುವ ಇವರ ಮುಂದೆ ಏನು ಹೇಳುವುದು? ನನ್ನ ಪ್ರೀತಿಯ ಪರಿಕಲ್ಪನೆಯನ್ನು ಇವರಿಗೆ ಅರ್ಥಮಾಡಿಸುವುದು ಹೇಗೆ? ಮೂವತ್ತು ವರ್ಷದ ನಾನು ನನಗಿಂತ ಡಬಲ್ ವಯಸ್ಸಾದ ಅವರನ್ನು ಇಷ್ಟಪಟ್ಟಿದ್ದು ಸೆಕ್ಸ್‌ಗಾಗಿ ಎಂದು ತಿಳಿಯುವವರಿಗೆ ಹೇಗೆ ಅರ್ಥವಾಗುತ್ತದೆ?' (ಪು–198, ಅನುದಿನದ..) 'ದಾಟುವ ಮಾತಿರಲಿ ನನ್ನ ಅಂತರಗಂಗೆಯಲ್ಲಿ ಸದಾ ಅಲ್ಲೋಲ ಕಲ್ಲೋಲ..ತೇಲಲೂ ಆಗದ ಮುಳುಗಲೂ ಆಗದ ಕಳವಳ. ಪಾತಾಳಗರಡಿ ಹಾಕಿದರೂ ಸಿಗದ ಸಾವಿರಾರು ಅವಶೇಷಗಳು...' (ಪು–20, ಅನುದಿನದ...) ಇಂಥ ತೀವ್ರಸ್ಪಂದನೆ ಹೆಣ್ಣಿನ ಮನದ ನಿಗೂಢ ಆಳಗಳನ್ನು ಅದರ ಬಯಕೆಗಳನ್ನು ಶೋಧಿಸುವ ಕ್ರಮದಿಂದಾಗಿ ಪ್ರಖರವಾಗಿದೆ.

ತಾಯ್ತನವನ್ನು ಸ್ವೀಕರಿಸುವ ರೀತಿಯಲ್ಲಿ ಕೂಡ ಪ್ರತಿಭಾರ ಅನುಭವಗಳು ಸಿದ್ಧ ಮಾನದಂಡಗಳನ್ನು ನಿರಾಕರಿಸುತ್ತವೆ. ಅದು ಅಪ್ಪಟ ದೈಹಿಕ ಅನುಭವ. ಅದರಾಚೆಗೆ ವಿಜೃಂಭಿಸುವುದೇನು ಇಲ್ಲವೆಂಬ ಸಹಜತೆ ಸೋಕುವಂತೆ ಅದನ್ನವರು ನಿರೂಪಿಸುತ್ತಾರೆ. 'ನಾನೆಂದೆ ಒಂದು ಮಗುವನ್ನು ಹೆರುವುದು Most thrilling experience. ಕಿರುಚುವುದು ಅಗತ್ಯವೇ ಇಲ್ಲ. ನನ್ನ ದೇಹದಲ್ಲಿ ಆಗುತ್ತಿದ್ದ ಪ್ರಕ್ರಿಯೆಗಳು ನನಗೆ ಗೊತ್ತಾಗುತ್ತಿತ್ತು Wonderful ಇದನ್ನು ನಾನೇ ಸೃಷ್ಟಿಸಿದೆನಾ? ಎಂಬ ಅಚ್ಚರಿ!. ಹೊಲಿಗೆ ಹಾಕುವಾಗ 'ಎಂಬ್ರಾಯಡರಿ ಮಾಡುತ್ತಿದ್ದೇವೆ' ಎಂಬ ವೈದ್ಯರ ತಮಾಷೆಗೆ 'ಒಳ್ಳೆ ಡಿಸೈನ್ ಮಾಡಿ' ಎಂಬ ತುಂಟತನದ ಅಲೆ ಅಲೆ ನಗು ಇವೆಲ್ಲ ಲೇಬರ್ ವಾರ್ಡಿನ ಹುಟ್ಟು–ಸಾವಿನ

ನಿಗೂಢ ಮೌನವನ್ನು ತುಂಬ ಸಹಜವಾಗಿ ಸ್ವೀಕರಿಸುವ ಮಾದರಿಯದು. ಇದೇ ಸಹಜತೆ ಪ್ರತಿಭಾರನ್ನು ಪಾಪಪ್ರಜ್ಞೆ, ಕೀಳರಿಮೆಗಳಿಂದ ಸದಾ ಹೊರಗೆ ಉಳಿಸುತ್ತದೆ.

'ತನ್ನ ಕವನಗಳೇ ತನ್ನ ಆತ್ಮಕತೆ' ಎಂದುಕೊಂಡಿದ್ದ ಪ್ರತಿಭಾ ಬರಹದಷ್ಟೇ ತೀವ್ರವಾಗಿ ಬದುಕಿದವರು ಸತ್ಯವನ್ನು ಮುಚ್ಚಿಟ್ಟು ಸುಳ್ಳುಗಳ ಮೇಲೆ ಬರೆವ ಅಲಂಕಾರಿಕ ಬರಹ ಆತ್ಮಕಥನದಲ್ಲಿ ಸಾಧ್ಯವಿಲ್ಲ. 'ಸುಳ್ಳು ಹೇಳುವುದಾದರೂ ಯಾರಿಗೆ? ನನಗೆ ನಾನೇ ಸುಳ್ಳು ಹೇಳಿಕೊಳ್ಳುವುದು ಸಾಧ್ಯವೇ? ಎಂದು ಪ್ರಶ್ನಿಸಿಕೊಳ್ಳುವ ಪ್ರತಿಭಾ ಪೊರೆಕಳಚಿಕೊಳ್ಳುತ್ತ ಸತ್ಯಾನ್ವೇಷಣೆಗೆ ತೊಡಗುತ್ತಾರೆ. ನನ್ನನ್ನು ಅಳೆಯುವ ಮಾನದಂಡಗಳೇ ಚಿಕ್ಕದಾಗಿದ್ದರೆ ಅದು ನನ್ನ ಸಮಸ್ಯೆಯೇ? ಎಂದು ಕೇಳಿಕೊಳ್ಳುವಲ್ಲಿ ಸದಾ ಚೌಕಟ್ಟಿನಾಚೆ ಚಿಗುರುವ ಅವರ ಬದುಕಿನ ದಾಹ ತೆರೆದುಕೊಳ್ಳುತ್ತದೆ. ಇಷ್ಟೆಲ್ಲಾ ವಿಶೃಂಖಲವಾಗಿ ಬದುಕಿ ಬರೆಯುವಾಗಲೂ ಪ್ರತಿಭಾ ಅದೇ ಸಾಂಸಾರಿಕ ಚೌಕಟ್ಟಿನೊಳಗೇ ವಾಸ್ತವವಾಗಿ ಇದ್ದರು ಎಂಬುದೇ ಸೋಜಿಗ, ಅದೇ ಅಡಿಗೆ, ಪೂಜೆ, ಒಳಹೊರಗಿನ ಕತ್ತೆ ದುಡಿತ, ಮಕ್ಕಳ ಪೋಷಣೆ, ಗಂಡನ ಪೊಸೆಸಿವ್‌ನೆಸ್, ಹಿಂಸೆ, ಕ್ರೌರ್ಯ, ಪ್ರೇಮ ಕಾಮಗಳ ಸುಳಿಯಲ್ಲಿ ಇದ್ದೂ ಅದನ್ನು ದಾಟುವ ಚೈತನ್ಯವನ್ನು ಪ್ರೇಮದ ಉನ್ಮಾದದಲ್ಲಿಯೇ ಪಡೆಯುತ್ತಾರೆ. ಪೆಟ್ಟುತಿಂದು ನರಳುವ, ರಾತ್ರಿಗಳನ್ನು ಮನೆಹೊರಗೆ ಒಂಟಿಯಾಗಿ ಕಳೆಯುವ ಪ್ರೀತಿ-ಹಿಂಸೆಗಳ ದ್ವಂದ್ವಾತ್ಮಕ ಸಂಬಂಧಗಳನ್ನು ನಿಭಾಯಿಸುತ್ತ ಸಾಗುವ ಆಂತರಿಕ ಹೋರಾಟ ದಿಟ್ಟವಾಗಿದೆ. ಆದರೆ ಲೋಕಕ್ಕೆ 'ಗಟ್ಟಿಹೆಂಗಸು' ಎಂದು ಕಾಣುವವಳ ಒಳಗಿನ ಏಕಾಂತ, ನಿಟ್ಟುಸಿರುಗಳನ್ನು ಸೂಕ್ಷ್ಮವಾಗಿ ಕೇಳಿಸುವ ಪರಿಯಿಂದಾಗಿ ಅನುದಿನದ ಅಂತರಗಂಗೆ ಹೆಣ್ಣಿನ ಅಂತರಂಗದ ಅನೂಹ್ಯ ಹರಿವಿನ ದಾಖಲೆಯಾಗಿದೆ.

ಅಕ್ಷರಗಳು ಹೆಣ್ಣಿಗೆ ಧ್ವನಿ ನೀಡಿದಂತೆಯೇ ರಂಗಭೂಮಿ ಮಾಧ್ಯಮವು ಅವಳಿಗೆ ಅಭಿವ್ಯಕ್ತಿ ಶಕ್ತಿಯನ್ನು ನೀಡಿತು. ಮನೆಯ ಹೊಸ್ತಿಲಿಂದಾಚೆ ಸಾರ್ವಜನಿಕವಾಗಿ ರಂಗದ ಮೇಲೆ ಕಾಣಿಸಿಕೊಳ್ಳುವ ಅನುಭವವೇ ಅವಳ ಪಾಲಿಗೆ ರೋಚಕವಾದುದು. ಪ್ರದರ್ಶನ ಕಲೆಗಳಲ್ಲಿ ಇರುವ ಮುಕ್ತತೆ ದೇಹಭಾಷೆಯ ಅಭಿವ್ಯಕ್ತಿ, ಮಾತಿನ ಪ್ರಖರತೆ, ನೃತ್ಯ-ಸಂಗೀತಗಳ ವ್ಯಕ್ತಿತ್ವಕ್ಕೆ ಒಂದು ಸ್ಪಷ್ಟತೆ, ಗಟ್ಟಿತನವನ್ನು ತಂದುಕೊಡುವಲ್ಲಿ ಸಹಕಾರಿಯಾಗುತ್ತವೆ. ಮುಂದುವರೆದು ಸಿನಿಮಾ ಕ್ಷೇತ್ರಕ್ಕೂ ಇದನ್ನು ಅನ್ವಯಿಸಬಹುದು. ಆದರೂ ಏಕಕಾಲಕ್ಕೆ ಈ ರಂಗದಲ್ಲಿರುವ ಹಣ, ಜನಪ್ರಿಯತೆ, ಅತಿರಂಜಿತ ಭ್ರಮಾಧೀನ ಪರಿಸರದ ಸೃಷ್ಟಿಯಿಂದಾಗಿ ಅಲ್ಲೊಂದು ಶೋಷಕ ವ್ಯವಸ್ಥೆ ಹುಟ್ಟಿಕೊಂಡು ಹೆಣ್ಣು ಅದಕ್ಕೆ ಬಲಿಯಾಗುವುದೂ ಇಲ್ಲದಿಲ್ಲ. ಅಲ್ಲಿಯೂ ಹೆಣ್ಣು ದೇಹವನ್ನು 'ಸರಕಾ'ಗಿಯೇ ನೋಡುವ ಬಂಡವಾಳಶಾಹಿ ದೃಷ್ಟಿಕೋನ ಹೆಣ್ಣಿನ ಘನತೆಯನ್ನೂ, ಅಸ್ಮಿತೆಯನ್ನೂ ನಿರಾಕರಿಸಬಹುದಾದ ಅಪಾಯ ಇದ್ದೇ ಇದೆ. ಈ ಎಲ್ಲವುಗಳ ಮಧ್ಯೆ ರಂಗದಲ್ಲಿ ಮಿನುಗುತಾರೆಗಳೆನಿಸುವ ಹೆಣ್ಣುಗಳ ಖಾಸಗಿ ಬದುಕು ಅಲ್ಲಿನ ಬವಣೆಗಳು. ಅವಮಾನ ಹೋರಾಟಗಳು ನೇಪಥ್ಯದ ಕರಾಳ

ಮುಖಗಳನ್ನು ದರ್ಶನ ಮಾಡಿಸುತ್ತವೆ. ಈ ಹಿನ್ನೆಲೆಯಲ್ಲಿ ಉಮಾಶ್ರೀಯವರ 'ಬೆಂಕಿ ಬೆಡಗು' ಆತ್ಮಕಥನ ಗಮನಾರ್ಹವಾದುದು. ಇತ್ತೀಚೆಗೆ ಬಂದ ಬಿ.ಜಯಶ್ರೀಯವರ 'ಕಣ್ಣಾಮುಚ್ಚೆ ಕಾಡೇಗೂಡೆ' ಸಹ ಪ್ರಖರವಾದುದು. ಉಮಾಶ್ರೀ ಆತ್ಮಕಥನವನ್ನು ಜಿ.ಗಣಪತಿಯವರು ನಿರೂಪಿಸಿದ್ದಾರೆ. ಈ ಇಬ್ಬರೂ ಮಹಿಳೆಯರು ನಟನೆಯಲ್ಲಿ ಸಾಧಿಸಿದ ಉತ್ಕೃಷ್ಟತೆಯ ಜೊತೆಗೆ ಸಾಮಾಜಿಕ ವ್ಯಕ್ತಿತ್ವವನ್ನು ಬೆಳೆಸಿಕೊಂಡವರು. ರಾಜಕಾರಣಕ್ಕೂ ಪ್ರವೇಶಿಸಿ ತಮ್ಮನ್ನು ಸಂಘಟನೆ – ಆಡಳಿತದ ನೆಲೆಗಳಲ್ಲಿ ವಿಸ್ತರಿಸಿಕೊಂಡವರು. ವೃತ್ತಿ ಬದುಕು, ಕುಟುಂಬ, ಮದುವೆ, ತಾಯ್ತನಗಳ ಸಿಕ್ಕುಗಳಲ್ಲಿ ತೊಳಲಾಡುತ್ತಲೇ ಅದನ್ನು ದಾಟಿ ತಮ್ಮನ್ನು ಕಟ್ಟಿಕೊಂಡವರು.

ಗಂಡಸರ ಬದುಕಿನಲ್ಲೂ ಬದುಕಿಗಾಗಿ ಹೋರಾಡುವ ಸಂಕಷ್ಟಗಳು ಬರುತ್ತವೆ. ಆದರೆ ಹೋರಾಡುವ ಹೆಣ್ಣು ಕ್ಷಣ ಕ್ಷಣಕ್ಕೂ ಸಮಾಜ, ಕುಟುಂಬವನ್ನು ಒಪ್ಪಿಸುತ್ತ, ಅವರ ಮುಂದೆ ತನ್ನ ಸಾಚಾತನವನ್ನೂ ಪಾವಿತ್ರ್ಯವನ್ನೂ ದೃಢೀಕರಿಸುತ್ತ ಅಗ್ನಿದಿವ್ಯಗಳನ್ನು ಹಾಯಬೇಕಾಗುತ್ತದೆ. ಅವರ ಸಾಧನೆಗಳಿಗಿಂತ ಚಾರಿತ್ರ್ಯದ ಪ್ರಶ್ನೆ ಮುಖ್ಯವಾಗುತ್ತದೆ. ಬದುಕಿನ ಅನಿವಾರ್ಯತೆಗಾಗಿ ರಂಗಭೂಮಿಯನ್ನು ವೃತ್ತಿಯಾಗಿಸಿಕೊಂಡ ಉಮಾಶ್ರೀ ಶ್ರೇಷ್ಠ ಅಭಿನೇತ್ರಿಯಾಗಿ ಬೆಳೆಯುವ ದಾರಿಯಿದೆಯಲ್ಲ ಅದು ಕೆಂಡದ ಹಾದಿಯೇ ಸರಿ.

'ನನ್ನ ಕಣ್ಣೆದುರು ಇದ್ದುದು ಎರಡೇ – ಒಂದು ಬದುಕು ಇನ್ನೊಂದು ನನ್ನ ನಿಶ್ಚಿತ ಗುರಿ ಮುಟ್ಟೋದು. ಅದಕ್ಕೆ ನಾನು ರುಜುಮಾರ್ಗದಲ್ಲಿ ಸಾಗಿದ್ದೇನೆ ಎಂಬ ದೃಢವಿಶ್ವಾಸ, ಒಬ್ಬ ಹೆಣ್ಣುಮಗಳು ದುಡಿದು ಕಷ್ಟಪಟ್ಟು ಬದುಕುವ ಹಠದಿಂದ ಮುನ್ನುಗ್ಗಿದಾಗಲೂ ಈ ಸಮಾಜ ಸಂಶಯದಿಂದ ನೋಡಿ ವ್ಯಭಿಚಾರಿ, ಸೂಳೆ ಅನ್ನೋ ಪಟ್ಟಕಟ್ಟೋ ನಿಷ್ಕರುಣಿ ಸಮಾಜವಿದು. ಈ ಸಮಾಜಕ್ಕೆ ಹೃದಯವಂತಿಕೆಗಿಂತ ಹೃದಯ ಶೂನ್ಯತೆಯೇ ಹೆಚ್ಚು ಆವರಿಸಿಕೊಂಡಿದೆ' (ಪು–62, ಬೆಂಕಿ ಬೆಡಗು).

ಗೃಹಿಣಿ, ಸೂಳೆ ಎಂಬ ಕಪ್ಪು ಬಿಳುಪಿನ ವಿಭಜನೆಯ ನಡುವೆ ಬದುಕಿಗಾಗಿ ಹೊಸ್ತಿಲು ದಾಟಿದ ಹೆಣ್ಣುಗಳ ನಿಜ ಬದುಕು ಸಂಕಟಕಗಳ ಬೆಂಕಿಯಲ್ಲಿ ಸುಟ್ಟು ಸುಟ್ಟೇ ಗಟ್ಟಿ ಮಡಕೆಯಾಗುತ್ತದೆ. ತಂದೆತಾಯಿಯಿಲ್ಲದ ತಬ್ಬಲಿ ಉಮಾಶ್ರೀ ಸಾಕು ತಾಯಿಯೂ ಶತ್ರುವಿನಂತಾಗಿ ಹೋದಾಗ ಉಂಟಾದ ದಿಗ್ಭ್ರಮೆಯಲ್ಲಿ ಸ್ತಬ್ಧಳಾಗುತ್ತಾಳೆ. ದುಡಿಯದ ಕುಡುಕ ಗಂಡ, ಆರ್ದ್ರತೆಯೇ ಇಲ್ಲದ ಶುಷ್ಕ ಸಂಬಂಧ, ಬಸಿರು ಬಾಣಂತನಗಳ ದಿಕ್ಕೇಡಿತನ, ಕಾಡುವ ಅಪಾರ ಹಸಿವು ಮಕ್ಕಳ ಭವಿಷ್ಯ.. ಇದಕ್ಕೆಲ್ಲ ಒಂಟಿಯಾಗಿ ಎದೆಕೊಟ್ಟು ನಿಲ್ಲಲ್ಲೇಬೇಕಾದ ಅನಿವಾರ್ಯ ಪರಿಸ್ಥಿತಿಯಲ್ಲಿ ಮುಗ್ಧೆ ಗಯ್ಯಾಳಿಯಾಗಿ ಬದಲಾಗುತ್ತಾಳೆ. ಉಳಿವಿನ ಪ್ರಶ್ನೆ ಎದುರಾದಾಗ ತನ್ನೊಳಗೇ ಅರಿವಿಗೆ ಬಾರದಂತೆ ಗುಪ್ತವಾಗಿದ್ದ ದೈತ್ಯಶಕ್ತಿ ಛಕ್ಕನೆ ಎದ್ದು ಬರುತ್ತದೆ. ಹಸಿವಿನಿಂದ ಅಲೆದ, ಯಾರ್ಯಾರದೋ ಮನೆಗಳಲ್ಲಿ ಆಶ್ರಯಪಡೆದ ಉಮಾಶ್ರೀ ಹೊಟ್ಟೆ ತುಂಬಿಸುವ ಏಕೈಕ ಉದ್ದೇಶದಿಂದ

ರಂಗನಟಿಯಾದವರು. ತಮ್ಮ ನೈತಿಕತೆಯ ಕುರಿತು ತೇಲಿಬರುವ ಮಾತುಗಳನ್ನು ಕೇಳದಂತೆ ಅವಡುಗಚ್ಚಿ ನಿಂತು ಸಂಸಾರದ ಹೊಟ್ಟೆಹೊರೆದವರು. ತಮ್ಮನ್ನು ತಾವು ಕಾಪಾಡಿಕೊಳ್ಳುವ 'ಬಜಾರಿ'ಯ ಅವತಾರ ತಾಳಿದವರು. ಆಯ್ಕೆಗಳೇ ಇಲ್ಲದ ಬದುಕಿನಲ್ಲಿ ಸಿಕ್ಕ ಆಸರೆ ಭದ್ರಮಾಡಿಕೊಳ್ಳುವುದಷ್ಟೇ ಗುರಿಯಾಗಿರುತ್ತದೆ. ಹಾಗೆ ಚಿತ್ರರಂಗಕ್ಕೂ ಪಾದಾರ್ಪಣೆ ಮಾಡಿದ ಉಮಾಶ್ರೀಯ ಕಣ್ಣ ಮುಂದೆ ಇದ್ದದ್ದು ತನ್ನ ಅಸ್ತಿತ್ವದ ಭಾಗಗಳೇ ಆದ ಮಕ್ಕಳ ಶಿಕ್ಷಣ ಹಾಗೂ ಭವಿಷ್ಯ. ಆದ್ದರಿಂದ ತನ್ನ 'ಇಮೇಜ್' ಕುರಿತು ಯೋಚಿಸುವ ಅವಕಾಶಗಳು ಆಕೆಯ ಮುಂದೆ ಇರಲೇ ಇಲ್ಲ. 'ಚಿತ್ರರಂಗದ ಅಭಿರುಚಿಯನ್ನೇ ಕೆಡಿಸಿದ ನಟಿ' ಎಂಬ ನೆಗೆಟೀವ್ ಇಮೇಜಿನ ಭಾರ ಹೊರುವಾಗಲೂ ತಾಯ್ತನದ ಹೊಣೆಗಾರಿಕೆಯನ್ನು ನುಣುಚಿಕೊಳ್ಳಲಾಗದ ಅನಿವಾರ್ಯತೆ. ಗಂಡಬಿಟ್ಟವಳು ಎಂಬ ಅವಮಾನ, ತಿರಸ್ಕಾರಗಳಲ್ಲಿ ಖಾಸಗಿ ಬದುಕು ಪ್ರೀತಿಯಿಲ್ಲದೇ ನರಳುತ್ತಿರುವಾಗ ಸೇಫರ್ ಸೈಡಿನಲ್ಲಿ ಕುಳಿತವರು ಮಾಡುವ ಟೀಕೆಗಳಿಗೆ ಕಿವಿಗೊಡುವ ಸಾಧ್ಯತೆಗಳೇ ಉಮಾಶ್ರೀಯವರಿಗೆ ಇರಲಿಲ್ಲ. 'ನನ್ನ ಬಾಳ್ವೆಯ ಕಟುವಾಸ್ತವದ ಝಳದ ಮಧ್ಯೆ ಆ ದಿನಗಳಲ್ಲಿ ನನ್ನ ಅಭಿನಯದ ಅಪೇಕ್ಷೆ- ನಿರಪೇಕ್ಷೆಗಳ ಮಧ್ಯೆ ಗೆರೆ ಎಳೆದುಕೊಳ್ಳಲಾರದಷ್ಟು ಅಸಹಾಯಕಳಾಗಿಬಿಟ್ಟಿದ್ದೆ. ನಾನಂದು ಒಪ್ಪಿಮಾಡುತ್ತಿದ್ದ ಪಾತ್ರಗಳ ತೂಕ, ಅದರ ಭಾಷೆ, ಭಾವಗಳ ಸಾಮಾಜಿಕ ಪರಿಣಾಮ ಯಾವುದನ್ನೂ ಯೋಚಿಸದಷ್ಟು ಮುಗ್ಧೆಯಾಗಿದ್ದೆ. ಇನ್ನೊಂದು ಪಾತ್ರ ಬಿಟ್ಟುಕೊಟ್ಟರೆ ಬೀದಿಪಾಲಾಗಿ ಬಿಡುತ್ತೇನೇನೋ ಎಂಬ ಗಾಢ ಭಯದಲ್ಲಿದ್ದೆ. ಹೀಗಾಗಿ ಬಂದ ಅವಕಾಶಗಳಿಗೆಲ್ಲಾ ಪಾತ್ರಗಳಾಗುತ್ತಾ ಹೋದೆ'(ಪು-13 ಬೆಂಕಿ ಬೆಡಗು) ದ್ವಂದ್ವಾರ್ಥದ ಸಂಭಾಷಣೆ, ಅಂಗಾಂಗ ಪ್ರದರ್ಶನ, ಅಶ್ಲೀಲ ದೇಹ ಭಾಷೆಗಳಿಗೆ ಸೀಮಿತವಾದ ನಟಿ ಎಂಬ ಇಮೇಜಿನ ಹಿಂದೆ ಧಗಧಗಿಸುವ ಹಸಿವು ಅತಂತ್ರತೆಯ ಸಂಕಟಹೊತ್ತ ಸ್ವಾಭಿಮಾನೀ ಜೀವ ಇರುವುದು ಲೋಕಕ್ಕೆ ಕಾಣುವುದಿಲ್ಲ. ಇಂಥ ಆತ್ಮಕಥನಗಳು ಮಾತ್ರ ನಿಗಿನಿಗಿ ಸತ್ಯವನ್ನು ಲೋಕಕ್ಕೆ ಅರುಹಬಲ್ಲವು ಗಂಡನ ವಿಷಯದಲ್ಲಿ ರಸಿಕತೆಯಾಗಬಹುದಾದದ್ದು ಹೆಣ್ಣಿನ ವಿಷಯದಲ್ಲಿ ಅಶ್ಲೀಲತೆ, ಅಪವಿತ್ರತೆಯಾಗಿಬಿಡುತ್ತದೆ. ಅಂಥ ಅಶ್ಲೀಲತೆಯನ್ನು ಬಯಸುವ 'ಗಂಡು ಅಭಿರುಚಿ' ಹೆಣ್ಣನ್ನು ಅದಕ್ಕೆ ದೂಡಿ ತನ್ನನ್ನು ಸಂಭಾವಿತರ ಸ್ಥಾನದಲ್ಲಿ ಪ್ರತಿಷ್ಠಾಪಿಸಿಕೊಂಡು ಬಿಡುತ್ತದೆ.

ಇಂಥ ಅತಂತ್ರ ಬದುಕಿನಲ್ಲೂ ಒಡಲಾಳದ ಸಾಕವ್ವ, ಗುಲಾಬಿ, ಪುಟ್ಟಂಜಿ ಎಲ್ಲರೂ ಉಮಾಶ್ರೀಯೊಳಗೆ ಇದ್ದರು!. ಅದ್ಭುತ ಪಾತ್ರಗಳಿಗೆ ಕಸುವು ತುಂಬಬಲ್ಲ ವ್ಯಕ್ತಿತ್ವ ಉಮಾಶ್ರೀಯ ಒಳಗೆ ಸುಪ್ತವಾಗಿತ್ತು. ಅವಕಾಶ ಒದಗಿದಾಗ ಥಕ್ಕನೆ ಪ್ರಕಾಶಿಸಿತು. ಶ್ರೇಷ್ಠನಟಿಯಾಗಿ ರಾಷ್ಟ್ರ ಪ್ರಶಸ್ತಿ ಪಡೆಯುವವರೆಗೆ ಅವಳ ಬದುಕಿನ ಘಟನೆಗಳು ಹಾಗೂ ಆ ಅನುಭವಗಳಲ್ಲಿಯೇ ಗಟ್ಟಿಯಾದ ವ್ಯಕ್ತಿತ್ವದ ನಿಜ ವಿಕಾಸ ನಿಜಕ್ಕೂ ಅಚ್ಚರಿ ಹುಟ್ಟಿಸುತ್ತದೆ. ಅಕ್ಷರಶಃ ಬೀದಿಪಾಲಾಗಿದ್ದ ಬದುಕನ್ನು ಎತ್ತಿನಿಲ್ಲಿಸಿ ಉಮಾಶ್ರೀ ಬೆಳೆದ ಬಗೆ ನಿಜಕ್ಕೂ ಒಂದು ಮಾದರಿ. ಅದಮ್ಯ ಜೀವನಪ್ರೀತಿಯೇ ಇಂಥ ಮಹಿಳೆಯರ ಜೀವನದ ಛಲದ

ಹಿಂದಿನ ಗುಟ್ಟು. ದಿಟ್ಟೆಯೊಳಗಿನ ಅಳಲು, ಭಯ, ಗೆದ್ದವಳ ಹಿಂದಿನ ಸೋಲು ದಿಗಿಲು ಹೀಗೆ ಆಸೆ–ನಿರಾಸೆಗಳ ನೆರಳು ಬೆಳಕಿನ ಚಿತ್ರವನ್ನು ಮೂಡಿಸುವ 'ಬೆಂಕಿ – ಬೆಡಗು' ಬಣ್ಣದ ಲೋಕದ ಮಹಿಳೆಯ ಬದುಕಿನ ಝಳವನ್ನು ಅನುಭವವಾಗಿ ತಾಕಿಸುವ ಬರಹ.

ರಂಗಭೂಮಿಯಲ್ಲಿ ಅರಳಿದ ಭಾರ್ಗವಿ ನಾರಾಯಣರವರ 'ನಾನು ಭಾರ್ಗವಿ' ಎಂಬ ಶೀರ್ಷಿಕೆಯೇ ಆತ್ಮವಿಶ್ವಾಸದ ಧ್ವನಿಯಾಗಿದೆ. ಸುಶಿಕ್ಷಿತ ಮಧ್ಯಮವರ್ಗದ ಮಹಿಳೆಯೊಬ್ಬಳು ಕುಟುಂಬದ ಪರಧಿಯೊಳಗಿದ್ದುಕೊಂಡೇ ತನ್ನ ವ್ಯಕ್ತಿತ್ವವನ್ನೂ, ಅನುಭವ ಲೋಕವನ್ನೂ ಛಲದಿಂದ ಹಿಗ್ಗಿಸಿಕೊಂಡ ಕಥನವಿದು. ಕಾಲೇಜು ಶಿಕ್ಷಣ ಹಾಗೂ ರಂಗಭೂಮಿಯ ಒಡನಾಟಗಳು ಯೋಚನಾಶಕ್ತಿಯನ್ನು ವಿಸ್ತರಿಸಿ ವ್ಯಕ್ತಿತ್ವದೊಳಗೇ ಬೆಸೆದಿದ್ದ ಪ್ರೌಢ–ಸ್ವತಂತ್ರ ಪ್ರವೃತ್ತಿ ಬದುಕಿಗೆ ಖಚಿತತೆಯನ್ನು ತಂದುಕೊಟ್ಟಿತು. ಅರ್ಧಶತಮಾನಗಳಷ್ಟು ಹಿಂದೆಯೇ I Connot handle marriage ಎಂದು ಭಾವಿಸಬಲ್ಲ ಪ್ರಬುದ್ಧೆಯೂ, ಪ್ರಗತಿಪರಳೂ ಆಗಿದ್ದವರು ಭಾರ್ಗವಿ. ಮದುವೆಗೆ ಅನಿವಾರ್ಯವಾದ ಸಮರ್ಪಣಾ ಭಾವ, ಖಾಸಗಿ ಸ್ಪೇಸ್ ಅನ್ನು ಧಾರೆಯೆರೆದು ಬಿಡಬೇಕಾದ ಅನಿವಾರ್ಯತೆ ಎರಡೂ ಸ್ವಂತಿಕೆಯಿಂದ ಜ್ವಲಿಸುವ ಹೆಣ್ಣು ಮಕ್ಕಳಿಗೆ ಸಾಧ್ಯವಾಗುವುದಿಲ್ಲ. ಹೆಣ್ಣಿಗಿರಬೇಕೆಂದು ಅಪೇಕ್ಷಿಸುವ ಲಜ್ಜೆ, ವಿಧೇಯತೆ, ನಾಜೂಕು, ಸೌಂದರ್ಯಪ್ರಜ್ಞೆ ಇವುಗಳು ತನ್ನಲ್ಲಿಲ್ಲ ಎಂದು ಗುರುತಿಸಿಕೊಂಡ ಭಾರ್ಗವಿ ಈ ಎಲ್ಲ 'ಮಿತಿ'ಗಳೊಂದಿಗೆ ಒಪ್ಪಿಕೊಂಡ ನಾಣಿಯವರ ಪ್ರೇಮವನ್ನು ನಿರಾಕರಿಸಲಾಗದೆ ಮದುವೆಯೆಂಬ ವ್ಯವಸ್ಥೆಯೊಳಗೆ ಪ್ರವೇಶಿಸಿದರು. ಆದರೆ ತಮ್ಮ ಸ್ವಂತಿಕೆಯನ್ನು ಖಾಸಗಿ ಸ್ಪೇಸ್ ಅನ್ನು ಅದಕ್ಕೆ ಬಲಿಕೊಡದಂತೆ ಸಂಸಾರವನ್ನು ನಿಭಾಯಿಸಿ ಗೆದ್ದರು. ಮದುವೆ ಎಂಬುದೇ ಹೆಣ್ಣಿನ ಪಾಲಿಗೆ ಒಂದು ವೇಗ ನಿಯಂತ್ರಕವಿದ್ದಂತೆ. ಎಷ್ಟೋ ಸಲ ಗೃಹಿಣಿತ್ವದ ಏಕತಾನತೆ ಸೃಜನಶೀಲತೆಯನ್ನು ಕೊಲ್ಲುವುದಿದೆ. ಎಲ್ಲವನ್ನೂ ಎಲ್ಲರನ್ನೂ ಒಪ್ಪಿಸಿ, ಮೆಚ್ಚಿಸಿ ಬದುಕಬೇಕಾದ ಅವಲಂಬನೆಯ ಅನಿವಾರ್ಯತೆ ಉಗುಳಲಾಗದೆ ನುಂಗಲೂ ಆಗದೆ ಬದುಕನ್ನು ತಳಮಳದ ಪಾತ್ರೆಯಾಗಿಸಿ ಬಿಡುವುದಿದೆ. ಬಯಸಿ ಪಡೆದ ಸಾಂಗತ್ಯದಲ್ಲೂ ಕಸಿವಿಸಿಗಳಿರುತ್ತವೆ. ಅಲ್ಲಿಯೂ ಪುರುಷ ಗೊತ್ತಿದ್ದೋ ಗೊತ್ತಿಲ್ಲದೆಯೋ ಅಸೂಕ್ಷ್ಮವಾಗಿ ನಡೆದುಕೊಂಡು ಬಿಡುತ್ತಾನೆ. ತೀರ ಮನಸ್ಸು ಹಂಬಲಿಸುವಾಗ ಸಾಂತ್ವನ ಪ್ರೀತಿಯೆಂಬುದು ಮರೀಚಿಕೆಯಾಗಿ ಬಿಡುತ್ತದೆ. ಹೇಳಿಕೊಳ್ಳಲು ದೊಡ್ಡದಲ್ಲ ಆದರೆ ನುಂಗಿಕೊಳ್ಳಲು ಚಿಕ್ಕದೂ ಅಲ್ಲ ಎಂಬಂಥ ಕರಕರೆಗಳು. ಇದನ್ನೆಲ್ಲ ಸೂಕ್ಷ್ಮವಾಗಿ ನೋಡುವ ಸೂಜಿಯಂಥ ನೋಟ ಆ ಆತ್ಮಕಥನಕ್ಕೆ ದಕ್ಕಿದೆ. ಇಂಥ ಅನುದಿನದ ಕಲರವವನ್ನು ಯಾವ ಕಹಿಯಿಲ್ಲದೆ ಭಾರ್ಗವಿ ಬರೆದು ದಾಟುತ್ತಾರೆ. ಕೆಲವೊಮ್ಮೆ ತಮಾಷೆಯಲ್ಲೋ ವ್ಯಂಗ್ಯದಲ್ಲೋ ದಾಟಿಸುತ್ತಾರೆ. ಅದರೆ ಅಂಥ ಕ್ಷಣಗಳನ್ನು ಅಲ್ಲಿಯೇ ನಿಂತು ಹಿಗ್ಗಿಸಿ ನೋಡಿದರೆ ಒಂದು ವಿಷಾದದ ಮಂದ್ರ ಆಲಾಪ ಕೇಳಿಸದೇ ಹೋಗದು.!

ನೌಕರಸ್ಥ ಹೆಣ್ಣು ಆಗಷ್ಟೇ ಹುಟ್ಟಿಕೊಳ್ಳುತ್ತಲಿದ್ದ ಕಾಲವದು. ಭಾರ್ಗವಿಯವರಿಗೆ ಸಣ್ಣ ಸರ್ಕಾರಿ ಕೆಲಸ. ದುಡಿಯುವುದು ಜೀವನಕ್ಕೆ ಅನಿವಾರ್ಯ ಎಂಬ ಸಾಮಾನ್ಯ ಮಧ್ಯಮವರ್ಗದ ಬಿಗಿಯಾದ ಬದುಕು ಅಡಿಗೆ ಮನೆ, ಹಬ್ಬ ಹರಿದಿನ, ಪೂಜೆ, ನೆಂಟರಿಷ್ಟರು, ಅತ್ತೆ, ಮಾವ ಹೀಗೆ ಎಲ್ಲವಕ್ಕೂ ಸೈಯೆನಿಸಿಕೊಂಡು ಹೊರಗೂ ಸೈಯೆನಿಸಿಕೊಳ್ಳುತ್ತ ಬದುಕಬೇಕಾದ ಅನಿವಾರ್ಯತೆ. ಈ ನಡುವೆ ನಾಟಕದ ಗೀಳು, ತಾಲೀಮು. ಇಷ್ಟೆಲ್ಲ ಜಂಜಡಗಳ ಮಧ್ಯೆ ಬರುವ ಬಸಿರು! ಹೆಣ್ಣಿನ ದೇಹವು ನಿರಾಕರಿಸಲಾಗದ ಅನಿವಾರ್ಯತೆ ಪದೇ ಪದೇ ಗರ್ಭ ನಿವಾರಿಸಿಕೊಂಡು ಬರುವುದು, ಹೆರಿಗೆಗಾಗಿ ಆಸ್ಪತ್ರೆಗೆ ದಾಖಲಾಗುವುದು ಮಾಮೂಲಿಯಾಗಿಬಿಡುತ್ತದೆ. ಗಂಡ ಈ ವಿಷಯದಲ್ಲಿ ನಿರ್ಲಿಪ್ತ. ಇವೆಲ್ಲ ಹೆಂಗಸರ ಜುಜುಬಿ ಸಂಗತಿಗಳು ಎಂಬಂತೆ. ಒಂದು ಸಲವಂತೂ ತಾನೇ ಆಸ್ಪತ್ರೆಗೆ ದಾಖಲಾಗಿ ಹೆತ್ತಾಗಲೂ ಯಾರೂ ನೋಡಲು ಬರಲಾಗದಂಥ ಅನಿವಾರ್ಯ ಪರಿಸ್ಥಿತಿ. ಹಸಿವು, ತಬ್ಬಲಿತನದಲ್ಲಿ ತಳಮಳಿಸುವ ಹೆಣ್ಣು ಜೀವ ಅದನ್ನೆಲ್ಲ ನುಂಗಿ ಮುಂದಡಿಯಿಡಲೇಬೇಕು.

'ಯಜಮಾನರು ಯಾವ ಆಸ್ಪತ್ರೆಗೆ ಹೋಗುತ್ತೀಯಾ' ಎಂದು ಕೂಡ ಕೇಳಿರಲಿಲ್ಲ. ಹೇಗೂ ಬರುವ ಇರಾದೆ ಇಲ್ಲ ಎಂದು ಮೊದಲ ಹೆರಿಗೆಯಲ್ಲೇ ಹೇಳಿ ಆಗಿತ್ತು. ಇನ್ನು ಹೆರಿಗೆ ನೋವು, ನಲಿವು, ಖರ್ಚು, ವೆಚ್ಚ ಭರಿಸಬೇಕಾದ ಸೌಭಾಗ್ಯ ನನ್ನೊಬ್ಬಳದೆ. ಯಾರಿಗೆ ಹೇಳಿ ಏನು ಲಾಭ. ನಾನಿದ್ದೆ ಆಸ್ಪತ್ರೆ ಇತ್ತು. ಅಲ್ಲಿನ ಸಿಬ್ಬಂದಿ ಇದ್ದರು. ಇಷ್ಟು ಸಾಲದೇ ಒಂದು ಹೆರಿಗೆಗೆ' (ಪು 145 ನಾನು ಭಾರ್ಗವಿ) ಎಂಬ ಪ್ರಶ್ನೆಯಲ್ಲಿರುವ ತಾಟಸ್ಥ್ಯದ ಹಿಂದೆ ಹಲವು ಮರ್ಮರಗಳು ಅಡಗಿವೆ. ಆದರೆ ರಾಡಿ-ರಂಪ ಮಾಡಿಕೊಂಡು ಬದುಕನ್ನು ಅಸಹನೀಯಗೊಳಿಸಿಕೊಳ್ಳದೇ ಜಾಣ್ಮೆಯಿಂದ ಸಂಸಾರದ ನೊಗ ಹೊರುತ್ತಾರೆ. ಭಾರ್ಗವಿ. ರಂಗಭೂಮಿಯಲ್ಲಿ ಕೆಲಸಮಾಡಲು ಪತಿಯ ಬೆಂಬಲವಿರುವುದು ಧನಾತ್ಮಕ ಅಂಶವೇ ಆಗಿದ್ದು, ಆ ದಿಶೆಯ ಚಲನಶೀಲತೆ ಅವರನ್ನು ನಿರಾಳವಾಗಿರಿಸುತ್ತದೆ. 'ಮನುಷ್ಯನಿಗೆ ಎಲ್ಲ ಸಮಸ್ಯೆಗಳಿಂದ ಸ್ವಲ್ಪ ಹೊತ್ತಾದರೂ ಮುಕ್ತಿ ಬೇಕಿದ್ದರೆ ಒಂದಲ್ಲ ಒಂದು ಹವ್ಯಾಸದ ಅವಶ್ಯಕತೆ ಇದೆ. ಓದು-ಕ್ರೀಡೆ-ಬರವಣಿಗೆ, ನಾಟ್ಯ, ನಾಟಕ ಎಂಥದ್ದೋ ಒಂದು ಮನಸ್ಸು ಸಮಚಿತ್ತವಾಗಿ ಸಂತೋಷವಾಗಿ ಇರಬೇಕಾದ್ರೆ ತನಗಾಗಿ ತನ್ನ ಸಂತೋಷಕ್ಕಾಗಿ ಸ್ವಲ್ಪ ಸಮಯವನ್ನು ಕಾದಿರಿಸಲೇಬೇಕು' (ಪು-316 ನಾನು ಭಾರ್ಗವಿ) ಹೆಣ್ಣು ತನ್ನನ್ನು ತಾನೇ ಸಾಕ್ಷಾತ್ಕರಿಸಿಕೊಳ್ಳುವ ಕ್ಷಣಗಳಿಗಾಗಿ ಹಂಬಲಿಸುವ ಅಮೂರ್ತ ಹಂಬಲಕ್ಕೆ ಈ ಮಾತುಗಳು ಸಾಕ್ಷಿಯಾಗುತ್ತವೆ. ಇದು ಸ್ವಾರ್ಥವಲ್ಲ ಬದಲಿಗೆ 'ಹೇರಿದ' ವ್ಯಕ್ತಿತ್ವದಿಂದ ಬಿಡುಗಡೆ ಪಡೆವ ಜೀವದ ಸಹಜ ಬಯಕೆ. ಇದನ್ನೆಲ್ಲ ಯಾವ ಬೌದ್ಧಿಕ ಭಾರವಿಲ್ಲದೆ ಭಾವನಾತ್ಮಕ ಆವೇಶವಿಲ್ಲದೆ ಹರಟೆ ಹೊಡೆದಷ್ಟೇ ಸಲೀಸಾಗಿ ಭಾರ್ಗವಿ ನಿರೂಪಿಸುತ್ತಾ ಹೋಗುತ್ತಾರೆ. ತುಂಬು ಕುಟುಂಬ, ಉದ್ಯೋಗ, ಮಕ್ಕಳ ಪಾಲನೆ, ಗೃಹಿಣಿತ್ವದ ಜವಾಬ್ದಾರಿಗಳೊಂದಿಗೇ ನಡುವೆ ತನ್ನನ್ನು ಕಂಡುಕೊಳ್ಳುವ, ತನ್ನೊಡನೆ ತಾದಾತ್ಮ್ಯಗೊಳ್ಳುವ

ಕ್ಷಣಗಳನ್ನು ಉಳಿಸಿಕೊಳ್ಳುವ ಮಧ್ಯಮವರ್ಗದ ಮಹಿಳೆಯ ಆತ್ಮನಿವೇದನೆಯಾಗಿ 'ನಾನು ಭಾರ್ಗವಿ' ಗೆಲ್ಲುತ್ತದೆ.

ಪ್ರಸಿದ್ಧ ಲೇಖಕರ ಪತ್ನಿಯರಾಗಿ ತಮ್ಮ ಸಂಗಾತಿಯ ಕುರಿತು ಮಾತನಾಡುತ್ತಲೇ ತಮ್ಮ ಬದುಕಿನ ಮೌನವನ್ನು ಮಾತಿಗಿಳಿಸಿದವರು ಇಂದಿರಾ ಲಂಕೇಶ್ ಮತ್ತು ರಾಜೇಶ್ವರಿ ತೇಜಸ್ವಿ. 'ಹುಳಿಮಾವಿನಮರ ಮತ್ತು ನಾನು' ಹಾಗೂ 'ನನ್ನ ತೇಜಸ್ವಿ, ಕನ್ನಡಕ್ಕೆ ಬಂದ ಅಪರೂಪದ ಬರಹಗಳು. ಸೃಜನಶೀಲ ತಳಮಳಗಳುಳ್ಳ ಪ್ರಸಿದ್ಧರ ಪತ್ನಿಯರಿಗೆ, ಅವರು ನಿಭಾಯಿಸದೆ ಬಿಟ್ಟ ಲೌಕಿಕ ಸಂಗತಿಗಳನ್ನು ನಿಭಾಯಿಸುವ ಅನಿವಾರ್ಯತೆ ಯಿರುತ್ತದೆ. ವ್ಯಾವಹಾರಿಕ ಜಾಣ್ಮೆ ಮಕ್ಕಳ ಜವಾಬ್ದಾರಿ, ಹೆಚ್ಚೇ ಹೊರಬೇಕಾಗುತ್ತದೆ. ಎರಡೂ ಭಿನ್ನ ಮನೋಧರ್ಮದ ಕಥನಗಳಾದರೂ ಹಲವು ಸಮಾನಾಂತರ ಎಳೆಗಳು ಇಲ್ಲಿವೆ. ಗಂಡಸರು ಬರೆದ ಆತ್ಮಕಥನಗಳಲ್ಲಿ ಹೆಂಡತಿ, ಮಕ್ಕಳ ಉಲ್ಲೇಖ ಅನುಷಂಗಿಕವಾಗಿ ಮಾತ್ರ ಬಂದರೆ, ಹೆಂಗಸರ ಆತ್ಮಕಥನಗಳಲ್ಲಿ ಕುಟುಂಬ, ಗಂಡ, ಮಕ್ಕಳ ಜಗತ್ತು ಬಹುಪಾಲು ಆವರಿಸಿಕೊಂಡಿರುತ್ತದೆ. ವಿವಾಹದಾಚೆಯ ಸಂಬಂಧಗಳು ಗಂಡಸಿನ ಅನುಭವದ ವಿಸ್ತರಣೆಯಂತೆ ಕಂಡುಬಂದರೆ, ಹೆಂಗಸಿನ ಅಪರಾಧವಾಗಿ ಗ್ರಹಿಸಲ್ಪಡುತ್ತವೆ. ಇವೆಲ್ಲ ಇಂದಿಗೂ ಮಹಿಳೆಯರು ಮುಕ್ತವಾಗಿ ತಮ್ಮ ಒಳಗನ್ನು ಬಿಚ್ಚಿಡಲಾರರೇನೋ ಎಂಬ ಅನಿಸಿಕೆ ಉಳಿದುಬಿಡುತ್ತದೆ.

'ಮಹಿಳೆ' ಎಂಬುದು ಏಕಸ್ವರವಲ್ಲ. ಅದು ಬಹುಸ್ವರಗಳ ಮೇಳಧ್ವನಿ. ಭಿನ್ನ ಅನುಭವ, ಭಿನ್ನ ಪರಿಸರಗಳ ಹಿನ್ನೆಲೆಯಲ್ಲಿ ಅವರ ಸಂಕಟ– ಸಂಭ್ರಮಗಳ ಲೋಕವೂ ಭಿನ್ನವೇ ಈ ಎಲ್ಲ ಆತ್ಮಕಥನಗಳಲ್ಲಿ ಅವರ ಸಾಂಸ್ಕೃತಿಕ – ಸಾಮಾಜಿಕ ಲೋಕವೂ ತನ್ನೆಲ್ಲ ವಿವರಗಳೊಂದಿಗೆ ಬಿಚ್ಚಿಕೊಂಡಿರುವುದು ಅಧ್ಯಯನ ಯೋಗ್ಯ. ಅಡಿಗೆ, ಉಡುಗೆ, ತೊಡುಗೆ ಎಲ್ಲವನ್ನೂ ಸಂಭ್ರಮಿಸುವ ಮಹಿಳೆಯರು ಬದುಕಿಗಂಟಿದವರು. ವಿಷಮ ಪರಿಸ್ಥಿತಿಯಲ್ಲೂ ಬದುಕನ್ನು ಉತ್ಕಟವಾಗಿ ಪ್ರೀತಿಸಬಲ್ಲವರು. ಬದುಕಿನ ಸೂತ್ರ ಸಂಬಂಧಗಳ ಹೆಣಿಗೆ ಹರಿದು ಹೋಗದಂತೆ ಬಿಗಿದು ಕಟ್ಟುವ ತಾದಾತ್ಮ್ಯವುಳ್ಳವರು. ಚಿವುಟಿದಷ್ಟು ಚಿಗುರುವ ಕಸುವುಳ್ಳವರು ತಾವು ಮುರಿದುಹೋಗುತ್ತಿರುವಾಗಲೂ ಹೆತ್ತ ಮಕ್ಕಳನ್ನು ಎತ್ತಿನಿಲ್ಲಿಸುವ ಜೀವಪರರು. ಕೊನೆಗೂ ಇದೆಲ್ಲದರ ಆಚೆ, ನಾವು ಅವರ ಕುರಿತು ಬರೆಯಬಲ್ಲ ಭಾಷ್ಯಗಳ ಆಚೆ ಅವರು ರಕ್ತ, ಮಾಂಸ ತುಂಬಿರುವ ಅಪ್ಪಟ ಮನುಷ್ಯರು. ಕನ್ನಡದಲ್ಲಿ ಪ್ರಕಟಗೊಂಡ ಮಹಿಳಾ ಆತ್ಮಕಥನಗಳು ಇವೆಲ್ಲ ಸಂಗತಿಗಳನ್ನೂ ನಿರೂಪಿಸಿವೆ. ಇನ್ನೂ ಪ್ರಕಟಗೊಳ್ಳದ ಎಷ್ಟೋ ಆತ್ಮಕಥನಗಳು ಎದೆಯೊಳಗೇ ಹೊರಳುತ್ತಿರಬಹುದು. ಅವು ಧ್ವನಿ ಪಡೆಯೋ ಹಾಗೆ ಸಾಕಾರಗೊಳ್ಳಲಿ ಎಂಬುದು ಆಶಯ.



# ಸ್ತ್ರೀ ಕಾವ್ಯ ಕುರಿತಂತೆ ಕೆಲವು ಟಿಪ್ಪಣಿಗಳು: 'ಆರ್ದ್ರಗರ್ವದ ಹುಡುಗಿ ನಮ್ಮ ಗೌರಿ'

✦ ಲಕ್ಷ್ಮೀಶ ತೋಳ್ಪಾಡಿ

1970 ರಲ್ಲಿ 'ಅಕ್ಷರ ಹೊಸ ಕಾವ್ಯ' ಪ್ರಕಟವಾದಾಗ ಅದರಲ್ಲಿ ನಳಿನೀ ದೇಶಪಾಂಡೆ ಎಂಬುವರ ಎರಡು ಪದ್ಯಗಳಿದ್ದವು. 'ತುಂಟ ಹುಡುಗನ ಸೊಂಟಾ ಸುತ್ತಿ' ಮತ್ತು 'ನನ್ನಂತೆ ವಾರೆ ಬೈತಲೆ ತೆಗೆದ ನೀನು ಯಾರೆ' ಎಂದು ಮೊದಲಾಗುವ ವಿಶಿಷ್ಟ ಪದಗಳು. ಅವುಗಳನ್ನು ಓದಿ ಅನುಭವಿಸುವ ಪುಲಕ ಈಗಲೂ ನನ್ನಲ್ಲಿ ಹಸುರಾಗಿದೆ. ನವ್ಯತೆಗೆ ಕೃತಕೃತ್ಯತೆಯನ್ನು ಒದಗಿಸಿದಂತ ಪದ್ಯಗಳು. ಈ ರಚನೆಗಳಲ್ಲಿ ಗ್ರಹಿಕೆ ಮತ್ತು ಲಯಗಳ ಅನ್ಯೋನ್ಯ ಹೇಗಿತ್ತೆಂದರೆ ಗ್ರಹಿಸಿದ ಕ್ಷಣದಲ್ಲೇ ಇವು ರಚಿತವಾಗಿರಬೇಕು ಎನಿಸುತ್ತಿತ್ತು. ಇದನ್ನು ಏಕೆ ಹೇಳುತ್ತಿದ್ದೇನೆಂದರೆ ನನ್ನ ಮಟ್ಟಿಗೆ ಹೆಣ್ಣಿನ ತನ್ನದೇ ಆದ ನೋಟ ಇಲ್ಲಿದೆ ಎನಿಸುವ ಹೊಸ ಪದ್ಯಗಳ ಓದು ಮೊದಲಾದದ್ದು ಇಲ್ಲಿಂದಲೇ. ಆ ಕಾಲದಲ್ಲಿ ನಳಿನೀ ದೇಶಪಾಂಡೆಯುವರ ವ್ಯಕ್ತಿತ್ವದ ನಿಗೂಢತೆಯು ಕುರಿತು ಚರ್ಚೆಗಳಾಗುತ್ತಿದ್ದವು. ಈಗಲೂ ಅದು ಬಗೆಹರಿದಿದೆಯೋ ಇಲ್ಲವೋ ಗೊತ್ತಿಲ್ಲ. ಪ್ರಾಯಃ ಇಲ್ಲ. ಇದು ಸಾಂಕೇತಿಕವೋ ಏನೋ.

ಅಲ್ಲಿಂದೀಚೆಗೆ ಸ್ತ್ರೀ ಕಾವ್ಯ ಯಾವ ರಭಸದಿಂದ ಹರಿದಿದೆ ಎಂದು ಎಲ್ಲರೂ ಬಲ್ಲರು. ಶೋಷಣೆಯ ವಿರುದ್ಧ (ಎಲ್ಲ ಬಗೆಯ ಶೋಷಣೆಯೂ ಕೊನೆಯಲ್ಲಿ ಹೆಣ್ಣಿನ ಶೋಷಣೆಯೇ, ಎಲ್ಲ ಬಗೆಯ ಮಾಲಿನ್ಯವೂ ಕೊನೆಯಲ್ಲಿ ಜಲಮಾಲಿನ್ಯವೇ) ಯಜಮಾನ ಸಂಸ್ಕೃತಿಯ ವಿರುದ್ಧ, ಅಸಮಾನತೆಯ ವಿರುದ್ಧ ಸ್ತ್ರೀಕಾವ್ಯ ಅನೇಕ ಮಟ್ಟಗಳಲ್ಲಿ ಸಿಡಿದೆದ್ದಿದೆ. ಪ್ರತಿಭಾ ನಂದಕುಮಾರ, ಇರುವ ಸ್ಥಿತಿಯನ್ನೇ ವ್ಯಂಗ್ಯ ಮತ್ತು ನಸುಹಾಸ್ಯದಿಂದ ನೋಡುವ ನೋಟ, ಸ.ಉಷಾ ಅವರ ವಿಷಾದದ ಸ್ಥಾಯಿ, ಹೇಮಾ ಅವರ ಅನುಭವಗಳನ್ನು ನಿರ್ಭಿಡೆಯಿಂದ ಮಂಡಿಸುವ ರೀತಿ, ವ್ಯವಸ್ಥೆಯ ವಿರುದ್ಧ ಆಕ್ರೋಶವಂತು ಇದ್ದದ್ದೆ– ಈ ಎಲ್ಲ ಸ್ತರಗಳಲ್ಲಿ ಪ್ರತಿಭಟನೆಯ ಕಾವ್ಯ ಸಮೃದ್ಧವಾಗಿ ಬೆಳೆದಿದೆ. ಆದರೆ ಹೆಣ್ಣಿನ ಗಂಡಿನ ಸಂಬಂಧದ ನಡುವಿನ ಅನಂತ ಮುಖಗಳು ಅನಾವರಣಕ್ಕಾಗಿ ಕಾಯುತ್ತಿವೆ. ನನಗೆ ಫ್ರೆಂಚ್ ಕವಿ ಬೋದಿಲೇರ್ ನೆನಪಾಗುತ್ತಾನೆ. ಬೋದಿಲೇರ್ ಕಾವ್ಯ ಹೆಣ್ಣನ್ನು ಕಂಡ ರೀತಿಗೆ ಸ್ತ್ರೀವಾದ ಹೇಗೆ ಪ್ರತಿಕ್ರಿಯೆ ಮಾಡುತ್ತದೆ ಎಂಬುದು ನಿಜಕ್ಕೂ ಕುತೂಹಲಕರ.

ಪ್ರಾಯಃ ಫ್ರೆಂಚ್ ಸಂಸ್ಕೃತಿಯಂಥ ರಸಿಕ ಸಂಸ್ಕೃತಿಯಲ್ಲಿ ಇದು ಸಾಧ್ಯವೋ ಏನೋ. ಸುಪ್ರಸಿದ್ಧ ಸ್ತ್ರೀವಾದಿ ಲೇಖಿಕಿ, ಸಾರ್ತ್ರೆ ಗೆಳತಿ ಸಿಮೋನ್ ದಿ ಬುವಾ ತನ್ನ 'ದಿ ಸೆಕೆಂಡ್ ಸೆಕ್ಸ್' ಪುಸ್ತಕದಲ್ಲಿ ಫ್ರೆಂಚ್ ಲೇಖಕ Montherlantನ ಒಂದು ಉಲ್ಲೇಖಸವನ್ನು ಕೊಡುತ್ತಾಳೆ. ಆತ ಹೇಳುತ್ತಾನೆ– The only place on the body of Achilles that was vulnerable, was where his mother had held him. ವಜ್ರಕಾಯದ ಎಖಿಲಸ್ಸನ ಪಾದದ ಹಿಮ್ಮಡಿ ಮಾತ್ರ ಮೃದುವಾಗಿತ್ತು. ಅದಕ್ಕೆ ಕಾರಣ ಅವನ ತಾಯಿ ಅಲ್ಲೆ ಅವನನ್ನು ಹಿಡಕೊಂಡು ನೀರಲ್ಲಿ ಮುಳುಗಿಸಿದ್ದು. ಆ ಜಾಗ ಮಾತ್ರ ನದಿಯ ನೀರಿನಿಂದ ಒದ್ದೆಯಾಗದೆ ಉಳಿಯಿತು. ಮತ್ತು ವಜ್ರಕಲ್ಪವಾಗದೆ ಎಖಿಲಸ್ಸನ ದೇಹದಲ್ಲಿ ಮಣ್ಣಿನ ಕಂಪು ಸೂಸುವ ಏಕಮಾತ್ರ ಸ್ಥಾನವಾಯಿತು ಅಲ್ಲಿಗೇ ಏಟುಬಿದ್ದು ಎಖಿಲಸ್ ಸತ್ತದ್ದು. ಇಂಥ ನೋಟಗಳಲ್ಲಿ ಬೋದಿಲೇರ್ ಗೂ Montherlant ಗೂ ಇರುವ ಸಂಬಂಧಗಳು ಮತ್ತು ಒಟ್ಟು ಫ್ರೆಂಚ್ ಮನಸ್ಸು ತೋರಿ ಬರುತ್ತದೆ. ಇದು ನಮ್ಮ ಮಾದರಿಯಾಗಬೇಕೆಂದು ನಾನು ಹೇಳುತ್ತಿದ್ದೇನೆಂದು ಭಾವಿಸಬಾರದು. ನಾನದನ್ನು ಸೂಚಿಸುತ್ತಲೂ ಇಲ್ಲ. ಯಾವ ಮಾದರಿಯನ್ನೂ ಪೂರ್ಣ ಒಪ್ಪುವುದು ಸಾಧ್ಯವಿಲ್ಲ. ಡಾ. ಜಿ.ಎಸ್. ಶಿವರುದ್ರಪ್ಪನವರು ಸ.ಉಷಾ ಅವರ 'ಈ ನೆಲದ ಹಾಡು' ಸಂಕಲನಕ್ಕೆ ಮುನ್ನುಡಿ ಬರೆಯುತ್ತ ಎರಡು ಮಾದರಿಗಳನ್ನು ಹೀಗೆ ಗುರುತಿಸಿದ್ದಾರೆ. 'ನಿಜವಾಗಿ ನೋಡಿದರೆ ಹೊಸ ಕನ್ನಡ ಸಾಹಿತ್ಯ ಸಂದರ್ಭದಲ್ಲಿ, ಅಕ್ಕಮಹಾದೇವಿ ಮತ್ತು ಸಂಚಿ ಹೊನ್ನಮ್ಮ ಇವರಿಬ್ಬರೂ ಮಹಿಳೆಯರಿಗೆ ಸಂಬಂಧಿಸಿದ ಎರಡು ಮಾದರಿಗಳನ್ನು ಪ್ರತಿನಿಧಿಸುತ್ತಾರೆ. ಬಹುಶಃ ಹೊಸಗನ್ನಡದ ಮಹಿಳಾ ಸಾಹಿತ್ಯದ ಹಿಂದೆ ಈ ಎರಡು ಮಾದರಿಗಳೂ ಇರುವಂತೆ ತೋರುತ್ತವೆ. 'ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು' ಎಂಬ ಒಂದೇ ಒಂದು ದಿಟ್ಟತನದ ಆಕ್ಷೇಪಣೆಯ ದನಿಯಿಂದ ಸಾಹಿತ್ಯದ ನೆನಪಿನಲ್ಲಿ ಉಳಿದಿರುವ ಹೊನ್ನಮ್ಮನ 'ಹದಿಬದೆಯ ಧರ್ಮ' ಮೂಲಭೂತವಾಗಿ ಭಾರತೀಯ ಸಾಂಪ್ರದಾಯಿಕ –ಸಾಂಸಾರಿಕ ಚೌಕಟ್ಟಿನಲ್ಲಿ ಯಾವುದೇ ಬದಲಾವಣೆಯನ್ನು ಆಶಿಸದೇ ಗ್ರಹಸ್ಥ ಧರ್ಮವನ್ನು ಪ್ರತಿಪಾದಿಸುವ ಕೃತಿಯಾಗಿದೆ. ನಮ್ಮ ನವೋದಯ ಕಾಲದ ಬಹುಸಂಖ್ಯಾತ ಮಹಿಳಾ ಕಾದಂಬರಿಕಾರ್ತಿಯರ ನಿಲುವು ಬಹುಮಟ್ಟಿಗೆ ಸಂಚಿ ಹೊನ್ನಮ್ಮನ ಮಾದರಿಯನ್ನೆ ಮುಂದುವರೆಸುವ ಸ್ವರೂಪದ್ದಾಗಿದೆ. ಇದಕ್ಕೆ ಪ್ರತಿಯಾಗಿ ಎಂಬಂತೆ, ಇತ್ತೀಚಿನ ಮಹಿಳೆಯರ ಬರಹಗಳು ಅಂದರೆ ಕಥೆ, ಕಾದಂಬರಿ, ಕವಿತೆಗಳು ತಮ್ಮ ಮನೋಧರ್ಮದಲ್ಲಿ ಅಕ್ಕನ ಮಾದರಿಯನ್ನು ಮುಂದುವರೆಸುವಂತಿದೆ ಎನ್ನಬಹುದು. ಅದರಲ್ಲಿಯೂ ಕವಿತೆಗಳಲ್ಲಿ ಅಕ್ಕನನ್ನು ಕುರಿತ ವಸ್ತು ತೀರ ಗಮನಾರ್ಹವಾಗಿ ಕಾಣಿಸಿಕೊಳ್ಳುತ್ತ, ಬಹುಶಃ ಈ ಕವಯತ್ರಿಯರ ಧೋರಣೆಯ ಕೇಂದ್ರ ಪ್ರತೀಕವೂ ಆಗಿ ಪರಿಣಮಿಸಿದೆ. ಅದಮ್ಯವಾದ ಪ್ರೀತಿಯನ್ನು ತುಂಬಿಕೊಂಡ ಹೆಣ್ಣಿನ ವ್ಯಕ್ತಿತ್ವಕ್ಕೆ ಘನತೆಯನ್ನೂ, ಗೌರವವನ್ನೂ ಅಪೂರ್ವವಾದ ಆತ್ಮ ಪ್ರತ್ಯಯವನ್ನೂ

ತಂದುಕೊಟ್ಟ ಅಕ್ಕನ ಬದುಕು ನಮ್ಮ ಕವಯತ್ರಿಯರನೇಕರಿಗೆ ತಕ್ಕ ಪ್ರತಿರೂಪವಾಗಿರುವುದು ಆಶ್ಚರ್ಯವೇನಲ್ಲ.

ಈ ಒಳನೋಟ ಮುಖ್ಯವಾದದ್ದು. ಅಕ್ಕನ ಮಾದರಿ ಪ್ರತಿಭಟನೆಯನ್ನು ಮಾತ್ರವಲ್ಲ, ಪ್ರತಿಭಟನೆಯ ರೂಪವನ್ನೂ ಸೂಚಿಸುತ್ತದೆ. ಅದು ಮುರಿದು ಕಟ್ಟುವ ಮಾದರಿಯಲ್ಲ. ಮುರಿದು, ಕಟ್ಟುವ ಹಂಗನ್ನಿಟ್ಟುಕೊಳ್ಳದ ಮಾದರಿ. ಅಕ್ಕನ ಅಂಕಿತವನ್ನೇ ನೋಡಿ. ವಚನಗಳಲ್ಲಿ ಅವಳ ಛಾಪು ದಟ್ಟವಾಗಿದ್ದರೂ ಅವಳ ಅಂಕಿತ ಚೆನ್ನಮಲ್ಲಿಕಾರ್ಜುನ ಎಂದೇ.(ವಚನಕಾರರಲ್ಲಿಯಾಗಲೀ, ಇತರ ಅನುಭಾವಿಗಳಲ್ಲಿಯಾಗಲೀ ಹೆಣ್ಣ ಅಂಕಿತದಿಂದ ಬರೆದವರುಂಟೇ? ಪ್ರಾಯಃ ಇಲ್ಲ.) ರಾಮಕೃಷ್ಣ ಪರಮಹಂಸರು 'ಜಯರಾಧೆ' ಎಂಬ ಅಂಕಿತ ಬಳಸುತ್ತಿದ್ದರು, ಕ್ವಚಿತ್ತಾಗಿ. ಹಾಗೆಯೇ ದೈವವನ್ನು ಪತಿಯಾಗಿ ಕಂಡು; ಅಕ್ಕ, ಮೀರಾ, ಆಂಡಾಳ್ ಮುಂತಾದವರು ಭವವನ್ನು ದಾಟಿದಂತೆ, ದೈವವನ್ನು ಸತಿಯಾಗಿ ಕಂಡವರುಂಟೆ? ಬಸವಣ್ಣ ತನ್ನ ಅಪೂರ್ವ ವಚನದಲ್ಲಿ 'ಕೂಡಲ ಸಂಗಮನ ನಿಲುವು ಕನ್ನೆಯ ಸ್ನೇಹದಂತಿತ್ತು' ಎನ್ನುತ್ತಾನೆ. ನಾಗಲಿಂಗ ಸ್ವಾಮಿ ಸಮಗಾರ ಭೀಮವ್ವನಲ್ಲಿ ವಿಚಿತ್ರ ಸಮ್ಮಿಳನವನ್ನು ಕಂಡಿದ್ದ. ಖಚಿತವಾಗಿ, ನಮಗೆ ಬೇರೆ ದೃಷ್ಟಾಂತಗಳು ಸಿಗುವುದಿಲ್ಲ. ಅಕ್ಕನ ಈ ತಾದಾತ್ಮ್ಯವೇ ಗಾರ್ಹಸ್ಥ್ಯವನ್ನು ಮೀರಿದ ಸಂಬಂಧವನ್ನು ಪಡೆವ ಹಂಬಲವನ್ನು ಸೂಚಿಸುತ್ತದೆ. ಗಾರ್ಹಸ್ಥ್ಯವನ್ನು ಮೀರಬೇಕಾದ್ದು ಯಾಕಾಗಿ ಎಂದರೆ, ವ್ಯವಸ್ಥೆಯಾಗಲ್ಲದೆ ಗಾರ್ಹಸ್ಥ್ಯಕ್ಕೆ ಬೇರೆ ನೆಲೆ ಇಲ್ಲ ಮತ್ತು ವ್ಯವಸ್ಥೆಯನ್ನು ಪ್ರಶ್ನಿಸದೆ ವಿಧಿ ಇಲ್ಲ. ಅಕ್ಕನ ಈ ಆಧ್ಯಾತ್ಮಿಕ ತಾದಾತ್ಮ್ಯವನ್ನು ಲೌಕಿಕ ನೆಲೆಯಲ್ಲಿ 'ಸಮಾನತೆ'ಯಾಗಿ ವ್ಯಾಖ್ಯಾನ ಮಾಡುವುದು ಸಾಧ್ಯವಾಗುವುದರಿಂದ ಪ್ರತಿಭಟನೆಯ ಸ್ತ್ರೀಕಾವ್ಯಕ್ಕೆ ಅಕ್ಕ ವಿಶೇಷ ಆಕರ್ಷಣೆಯಾಗಿದ್ದಾಳೆ.

ಜತೆಗೆ, ಕಾವ್ಯಸ್ವರೂಪಕ್ಕೂ ಕೂಡಾ ಈ ಒಳನೋಟ ಮುಖ್ಯವಾದದ್ದು. ಹೇಗೆಂದರೆ; ಹೊಸ ಸಂಬಂಧಗಳ ಸಾಧ್ಯತೆಯನ್ನರಸುವ ಕಾವ್ಯ ಹೊಸ ನುಡಿಕಟ್ಟುಗಳನ್ನು ನುಡಿಯಲೇಬೇಕಾಗುತ್ತದೆ. ಹದಿಬದೆಯ ಧರ್ಮವನ್ನು ಅಕ್ಕನ ವಚನಗಳನ್ನು ಹೋಲಿಸಿ ನೋಡಿದರೆ ಇದು ಸ್ಪಷ್ಟವಾಗುತ್ತದೆ.

ಆದರೆ ಅಕ್ಕನ ತಾದಾತ್ಮ್ಯ ಎಂಥ ಆಧ್ಯಾತ್ಮಿಕ ತೀವ್ರತೆ ಪಡೆದಿದೆ ಎಂದರೆ ಹೆಣ್ಣು ಗಂಡೆಂಬ ಭೇದವೇ ಅಲ್ಲಿ ಕರ್ಪೂರದಂತೆ ಕರಗಿಬಿಡುತ್ತದೆ. ಇದಕ್ಕೆ ವಚನಕಾರರ ಆಧ್ಯಾತ್ಮಿಕ ಪರಂಪರೆಯ ಸಮರ್ಥನೆ ಕೂಡಾ ಇದೆ. 'ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥ' ಎಂಬ ದಾಸಿಮಯ್ಯನ ವಚನವೇ ಸಾಕ್ಷಿ. ಆದರೆ ಹೆಣ್ಣು ಗಂಡೆಂಬ ನೆಲೆಯನ್ನುಳಿಸಿಕೊಂಡೇ, ಗಾರ್ಹಸ್ಥ್ಯದ ಅಳಿದುಳಿದ ಅವಶೇಷಗಳಿಂದಲೇ ಹೊಸ ಕುಟುಂಬ ಕಟ್ಟಬೇಕಾದವಳು ಆಧುನಿಕ ಮಹಿಳೆ. ಇದು ಮುರಿದು ಕಟ್ಟಬೇಕಾದ ಕಾಯಕ. ಮತ್ತು ಅಕ್ಕನನ್ನು ಅನುಸರಿಸುವುದು; ಅನುಕರಿಸುವುದು ಕಾವ್ಯದಲ್ಲಿ ಕೂಡಾ ಸೋಗಾಗುತ್ತದೆ. ಹಾಗಾಗಿಯೇ ತನ್ನ ಮಾದರಿಯನ್ನು ತಾನೇ ಹುಡುಕಬೇಕಾಗುತ್ತದೆ; ಬೇರೆ ನೆಲೆಗೆ ಹೊರಳಬೇಕಾಗುತ್ತದೆ.

ಈ ಹಂತದಲ್ಲಿ ಇಬ್ಬರು ಕವಯತ್ರಿಯರು ನೆನಪಾಗುತ್ತಾರೆ. ವೈದೇಹಿ ಮತ್ತು ಸವಿತಾ ನಾಗಭೂಷಣ. ವೈದೇಹಿಯವರ ಶಿವನ ಮೀಸುವ ಹಾಡನ್ನು ನೋಡಿ. ಇಲ್ಲಿ ಶಿವ ಬೂದಿ ಬಳಿದ ಬೈರಾಗಿ; ಜೋಗಿ; ಕಿರಾತ. ಆ ಪದಗಳ ಎಲ್ಲ ಅರ್ಥದಲ್ಲೂ. ಇವನನ್ನು ಕುಟುಂಬ ಸಂಸ್ಕೃತಿಗೆ ಒಗ್ಗಿಸುವುದು ಕಷ್ಟ. ಆದರೆ ಒಗ್ಗಿಸಲೇಬೇಕಾಗಿದೆ. ಏಕೆಂದರೆ ಅದು ಗೌರಿ ಹೆಣ್ಣಿನ ಕರ್ತವ್ಯ ಕೂಡ. ಅವಳು ಮಾತ್ರ ಈ ಕೆಲಸ ಮಾಡಬಹುದಾದ್ದರಿಂದ ಅವಳು ಮಾಡಬೇಕಾಗಿದೆ. ಸ್ನಾನವಿಲ್ಲದೆ ಅಲೆವ ಲೋಕಸಂಚಾರಿಗೆ ಗೃಹಸೌಖ್ಯದ ಮೌಲ್ಯ ತೋರಿಸಬೇಕಾಗಿದೆ. ಜ್ವರಹಿಡಿಸಿಕೊಂಡಿರುವ ಈ ಕಿರಾತನಿಗೆ ಜ್ವರ ಬಿಡಿಸುವ ಕಿರಾತಕಡ್ಡಿ ಕಷಾಯ ಕುಡಿಸುವುದೂ ಅವಳ ಕರ್ತವ್ಯ ಏಕೆಂದರೆ ಅವಳು ಕಟ್ಟುವವಳು. ಕಟ್ಟುವವಳಿಗೆ ಇರಲೇಬೇಕಾದ ಸಹನೆಯ ಜತೆಗೆ ಅವಳ ಗರ್ವಕ್ಕೆ ಪೆಟ್ಟಾಗುತ್ತಿರುವುದು ತಿಳಿಯದೆ ಇಲ್ಲ. ಮಾತಿನಲ್ಲಿ ಶಿವನನ್ನು ಛೇಡಿಸುತ್ತ ಇದ್ದರೂ, ಕರ್ತವ್ಯ, ಗೌರಿಯ ಗರ್ವಕ್ಕೆ ಒಂದು ಆರ್ದ್ರತೆಯನ್ನು ಕೊಟ್ಟಿದೆ. ಗೌರಿ 'ತಲ್ಲಣವ ತಡೆಯುವ ಆರ್ದ್ರಗರ್ವದ ಹುಡುಗಿ.' ಇದು ಅಕ್ಕನ ಮಾದರಿಯಂತೂ ಅಲ್ಲ. 'ಹದಿಬದೆಯ ಧರ್ಮ' ಮಾದರಿಯೂ ಅಲ್ಲ. ಏಕೆಂದರೆ ಹದಿಬದೆಯ ಧರ್ಮದ ಮಾದರಿ ಜಡಗೊಂಡ ಮಾದರಿ. ಇಲ್ಲಿ ವ್ಯವಸ್ಥೆಯನ್ನು ಕಟ್ಟುವವಳೇ ಹೆಣ್ಣು. ಈ ತಿಳುವಳಿಕೆ ಅಪ್ರಜ್ಞಾತವಾಗಿ ಇರುವುದರಿಂದಲೇ ಶಿವ ಅವಳ ಮುಂದೆ ಕೂಸಿನಂತಾಗುತ್ತಾನೆ. ಮತ್ತು ಇದು ಗೌರಿಯಲ್ಲಿಯೂ ಅಪ್ರಜ್ಞಾತವಾಗಿ ಇರುವುದರಿಂದಲೇ ಆಕೆ ತಲ್ಲಣವ ತಡೆಯಬಲ್ಲಳು. ಪ್ರತಿಭಟನೆಯಲ್ಲಿಯೂ ನಾವು ಕಳಕೊಳ್ಳುವಂಥ ಮೌಲಿಕ ಅಂಶಗಳಿರಬಹುದು. ಮತ್ತು ದಾಂಪತ್ಯ ಎನ್ನುವುದು, ಶಿವನಿದ್ದೂ ಶಿವನಿಲ್ಲದಂಥ ಸ್ಥಿತಿಯಲ್ಲೂ ಗಂಡಿಗಿಂತ ಹೆಣ್ಣಿನ ಮೌಲ್ಯವಾಗಿದೆ. ಈ ಮಾದರಿಯನ್ನು ಜಾನಪದ ಮಾದರಿ ಎಂದರೆ ಹೇಗೆ?

ಸವಿತಾ ನಾಗಭೂಷಣ ಪ್ರತಿಭಟನೆಯ ಈ ಸಮಸ್ಯೆಯನ್ನು ಇನ್ನೊಂದೇ ರೀತಿಯಲ್ಲಿ ಎದುರಿಸಿದಂತೆ ತೋರುತ್ತದೆ. ತಾನು ಕಂಡ ನೋಟ, ನೋಟದೊಳಗಿನ ಕನಸು, ಕೇಳಿದ ಸದ್ದು, ಸದ್ದಿನೊಳಗಿನ ದನಿ, ಪಟ್ಟ ಪಾಡು; ಪಾಡಿನೊಳಗಿನ ಹಾಡು–ಇದನ್ನೆಲ್ಲ ಅಬ್ಬರವಿಲ್ಲದ ಪ್ರೀತಿಯಿಂದ ರೇಖಿಸುವುದೇ– ಈ ರೀತಿ, ತನ್ನ ಅನನ್ಯತೆಯನ್ನು ಅದೂ ಕೂಡ ಅಬ್ಬರವಿಲ್ಲದೆ, ಕಾಣಿಸುವ ರೀತಿ. ತನ್ನ ಅನನ್ಯತೆಯನ್ನು ಕಾಣಿಸುವುದೇ, ಹೌದೆನ್ನಿಸುವಂತೆ ಕಾಣಿಸುವುದೇ ಎಲ್ಲ ಪ್ರತಿಭಟನೆಯ ಸಾರವಲ್ಲವೆ? ಈ 'ಅನನ್ಯತೆ' ಕೂಡ, ತನಗೆ ತಾನೇ ಉಂಟಾದ್ದಲ್ಲ. 'ಸ್ವಯಂಭೂ' ಅಲ್ಲ. ಅದು ಇನ್ನೊಬ್ಬನ, 'ಅನ್ಯತೆ'ಯ ಮೇಲೂ ಹೊಂದಿಕೊಂಡಿದೆ ಎಂಬ ಅರಿವು ವಿಶಿಷ್ಟವಾದದ್ದು; 'ನೀನೆಂಬುದಿದ್ದರೆ ನಾನೆಂಬುದೂ ಇಲ್ಲ; ಚಿಂದಿ ಆಯುವ ಹುಡುಗ, ಹೂವು ಮಾರುವ ಹುಡುಗಿ.' ಸ್ತ್ರೀಕಾವ್ಯ ಪ್ರಬುದ್ಧತೆಯ ಕಡೆಗೆ ಹೊರಳುತ್ತಿರುವುದಕ್ಕೆ ಇಷ್ಟು ಸೂಚನೆಗಳು ಸಾಲವೆ?



‘ವೈದೇಹಿ ಅವರ ಕಾಲದ ಉಳಿದ ಕೆಲ ಲೇಖಕಿಯರಂತಲ್ಲ. ರೇಗಿಸುವುದಕ್ಕೋ, ಗರ್ಜಿಸುವುದಕ್ಕೋ, ಪರಚುವುದಕ್ಕೋ ಅವರು ಬರೆಯಲಿಲ್ಲ. ಅವರು ತನಗನಿಸಿದ್ದನ್ನು ತನ್ನ ನಿಶ್ಶಂಕೆಯಲ್ಲಿ ಮತ್ತು ಅನುಮಾನದಲ್ಲಿ ಹಾಡುವ ಹುಡುಗಿಯಂತೆ ಬರೆದರು. ತನ್ನ ಬರಹಕ್ಕೆ ತಾನೇ ಸುಳ್ಳಾಗುತ್ತಾ ಬದುಕಲಿಲ್ಲ. ತನ್ನ ಬದುಕಿಗೆ ತಾನೇ ಎರವಾಗುತ್ತಾ ಬರೆಯಲಿಲ್ಲ. ಅಷ್ಟು ಪ್ರಾಮಾಣಿಕತೆ ಮತ್ತು ಪ್ರತಿಭೆಯಿದ್ದರೆ, ಇನ್ನೇನಾದರೂ ಬೇಕಾ? ಕೆಥರೀನ್ ಮ್ಯಾನ್ಸ್‌ಫೀಲ್ಡ್ ಅಕಾರಣ ನೆನಪಾಗುತ್ತಾಳೆ. ಆಕೆ ವೈದೇಹಿಯಂತಿರಲಿಲ್ಲ ಅಂತಾರೆ. ಬಹುಶಃ ಇದ್ದಳೋ ಏನೋ ಯಾರಿಗೆ ಗೊತ್ತು?’

- **ಜೋಗಿ**

‘ಕಮಲಾದೇವಿ ಚಟ್ಟೋಪಾಧ್ಯಾಯ ಅವರ ಕೃತಿ ‘ಇಂಡಿಯನ್ ವಿಮೆನ್ಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್’ ಎಂಬುದರ ಅನುವಾದ ‘ಭಾರತೀಯ ಮಹಿಳೆಯರ ಸ್ವಾತಂತ್ರ್ಯ ಹೋರಾಟ’ವಾಗಿ ೧೯೮೪ ರಷ್ಟು ಹಿಂದೆ ಪ್ರಕಟವಾಯಿತು. ಅಚ್ಚ ಕನ್ನಡತಿ ಕಮಲಾದೇವಿ ಮಂಗಳೂರಿನಲ್ಲಿ ಜನಿಸಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ವ್ಯಾಪ್ತಿಗೆ ವಿಸ್ತರಿಸಿಕೊಂಡ ಮಹತ್ವದ ಮಹಿಳೆ. ಅವರ ಬದುಕು ಸಾಧನೆಗಳು ಸ್ವಾತಂತ್ರ್ಯ ಹೋರಾಟಕ್ಕಷ್ಟೇ ಮುಗಿಯದೆ ಆಧುನಿಕ ಭಾರತದ ನಿರ್ಮಾಣಕ್ಕೂ ಹಬ್ಬಿರುವಂಥವು. ಆ ಧೀಮಂತ ದೇಶೀಯ ಮಹಿಳೆಯ ವಿಚಾರಗಳು ಆಕೆಯ ಸ್ವಂತ ನೆಲದಲ್ಲೇ ಮುಸುಕಾಗಿ ಹೋಗುತ್ತಿದ್ದ ಕಾಲದಲ್ಲಿ ಅವರ ವಿಚಾರಗಳನ್ನು ಮತ್ತೆ ಕನ್ನಡಿಗರಿಗೆ ನೆನಪಿಸಿಕೊಡುವ ಯತ್ನವೆಂದು ಇಂದು ವೈದೇಹಿಯವರ ಈ ಅನುವಾದ ಕೃತಿಗೆ ಮಹತ್ವವಿದೆ.’

- ಜಿ.ಎನ್. ಸುಮಿತ್ರಾಬಾಯಿ

ವೀಣಾ ಸಂಕನಗೌಡರ	ದಿ. 29-12-2018
(ಉತ್ತರ ಕರ್ನಾಟಕ ಲೇಖಕಿಯರ ಸಂಘ)

# ಸಂದೇಶ

'Good books are the light houses in the ocean of knowledge' ಎಂಬಂತೆ, ಕಥೆ, ಕಾದಂಬರಿ, ಕವನ, ಜೀವನ ಕಥನ, ಪ್ರಭಂಧ ಮಕ್ಕಳ ನಾಟಕ, ಮಕ್ಕಳ ಕಥಾ ಸಂಕಲನ, ಅನುವಾದ, ಸಂಪಾದನೆ ಹೀಗೆ ಸಾಹಿತ್ಯದ ಹತ್ತು ಹಲವು ಕ್ಷೇತ್ರಗಳಿಗೆ ಅರ್ಥಪೂರ್ಣ ಅತ್ಯಮೂಲ್ಯವಾದ ಕೊಡುಗೆಯನ್ನು ಕೊಟ್ಟು, ಸಾರಸ್ವತಲೋಕವನ್ನು ಸಿರಿವಂತಗೊಳಿಸಿದ ವೈದೇಹಿ ಅವರು ತಮ್ಮ ಬದುಕಿನ ಸಾರ್ಥಕ 75 ಸಂವತ್ಸರಗಳನ್ನು ಪೂರೈಸಿರುವ ಈ ಶುಭ ಸಂದರ್ಭದಲ್ಲಿ ಶಿವಮೊಗ್ಗೆಯ ಗೌರವ ಗ್ರಂಥ ಸಮಿತಿಯು ವೈದೇಹಿಯವರ ಅಭಿನಂದನಾ ಗ್ರಂಥವನ್ನು ಹೊರತರುತ್ತಿರುವುದು ಮತ್ತು ಅವರ ಗೌರವಾರ್ಥ ಒಂದು ಒಳ್ಳೆಯ ಸಮಾರಂಭವನ್ನು ಏರ್ಪಡಿಸಲು ಯೋಜಿಸಿರುವ ಕಾರ್ಯ ನಿಜಕ್ಕೂ ಶ್ಲಾಘನೀಯ ಹಾಗೂ ಅಭಿನಂದನಾರ್ಹವಾದದ್ದು.

'ವೈದೇಹಿ' ಎಂಬ ಕಾವ್ಯನಾಮದೊಂದಿಗೆ ಪ್ರಸಿದ್ಧವಾಗಿರುವ ಜಾನಕಿಯವರು, ಕನ್ನಡದ ಪ್ರಮುಖ ಲೇಖಕಿಯರಲ್ಲೊಬ್ಬರು. ತಮ್ಮ ಮೌಲಿಕ ಸಾಹಿತ್ಯಕ್ಕೆ ರಾಜ್ಯ ಹಾಗೂ ರಾಷ್ಟ್ರ ಪ್ರಶಸ್ತಿಗಳನ್ನು ಮುಡಿಗೇರಿಸಿಕೊಂಡವರು. 'ಕ್ರೌಂಚ ಪಕ್ಷಿಗಳು' ಎಂಬ ಕಥಾ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕ್ಯಾಡಮಿ ಪ್ರಶಸ್ತಿ ಪಡೆದ ವೈದೇಹಿಯವರು 'ದಾನಚಿಂತಾಮಣಿ ಅತ್ತಿಮಬ್ಬೆ' ಪ್ರಶಸ್ತಿಗೂ ಭಾಜನರಾಗಿದ್ದಾರೆ.

ಮನೆಮಾತಾದ ಕುಂದಾಪುರದ ಕನ್ನಡದ ಬಳಕೆ, ಹಾಗೂ ಸ್ತ್ರೀ ಲೋಕದ ಸೂಕ್ಷ್ಮ ಅಂಶಗಳ ಅನಾವರಣ ಅವರ ಕಥೆಗಳ ಪ್ರಮುಖ ಲಕ್ಷಣ. ಕರ್ನಾಟಕ ಲೇಖಕಿಯರ ಸಂಘದಿಂದ 'ಅನುಪಮಾ' ಪುರಸ್ಕಾರ ಪಡೆದಿದ್ದಾರೆ.

ವೈದೇಹಿ ಅವರು ನಮ್ಮ ಉತ್ತರ ಕರ್ನಾಟಕದ ಲೇಖಕಿಯರ ಸಂಘದೊಂದಿಗೆ ಒಳ್ಳೆಯ ಒಡನಾಟ ಹೊಂದಿದವರೂ, ಸಂಘದ ಬಗೆಗೆ ಕಳಕಳಿಯುಳ್ಳವರೂ ಆಗಿದ್ದಾರೆ. ಅವರ ಜೀವನ ನಮಗೆಲ್ಲಾ ಸ್ಫೂರ್ತಿದಾಯಕ. ಇಂತಹ ಆತ್ಮೀಯರ

ಗೌರವಾರ್ಥ ಮಹಿಳಾ ಸಾಹಿತ್ಯ ಕುರಿತಂತೆ ವಿಚಾರ ಸಂಕೀರ್ಣವನ್ನು ಧಾರವಾಡದಲ್ಲಿ ಉತ್ತರ ಕರ್ನಾಟಕದ ಲೇಖಕಿಯರ ಸಂಘದ ಸಹಯೋಗದೊಂದಿಗೆ ನೆರವೇರಿಸಬೇಕೆಂಬ ತಮ್ಮ ಅಪೇಕ್ಷೆಯೂ ಸ್ವಾಗತಾರ್ಹವಾದದ್ದು. ನಮ್ಮ ಸಂಘದ ಎಲ್ಲ ಪದಾಧಿಕಾರಿಗಳು, ಸದಸ್ಯರು ಎಲ್ಲರ ಪರವಾಗಿ ಶುಭ ಹಾರೈಕೆಗಳನ್ನು ಸಲ್ಲಿಸುವೆ.

**ಡಾ. ವೀಣಾ ಸಂಕನಗೌಡರ**
ಅಧ್ಯಕ್ಷರು ಮತ್ತು ಪದಾಧಿಕಾರಿಗಳು
ಉತ್ತರ ಕರ್ನಾಟಕ ಲೇಖಕಿಯರ ಸಂಘ
ಧಾರವಾಡ

ವನಮಾಲಾ ಸಂಪನ್ನಕುಮಾರ್
ಅಧ್ಯಕ್ಷರು
ಕರ್ನಾಟಕ ಲೇಖಕಿಯರ ಸಂಘ (ರಿ), ಬೆಂಗಳೂರು

206, 2ನೇ ಮಹಡಿ, ವಿಜಯ ಮ್ಯಾನ್ಷನ್
2ನೇ ತಿರುವು, 2ನೇ ಮುಖ್ಯ ರಸ್ತೆ
ಚಾಮರಾಜಪೇಟೆ, ಬೆಂಗಳೂರು-18

# ಸಂದೇಶ

ಶ್ರೀಮತಿ ವೈದೇಹಿ ಅವರು ಕನ್ನಡದ ಹೆಮ್ಮೆಯ ಪ್ರಮುಖ ಲೇಖಕಿ. ಹೆಣ್ಣಿನ ದೃಷ್ಟಿಕೋನದಿಂದಲೇ ಬದುಕನ್ನು ನೋಡುತ್ತ, ತಮ್ಮ ಕೃತಿಗಳ ಮೂಲಕ ಸಮಸ್ತ ಸ್ತ್ರೀಲೋಕವನ್ನೇ ಅನಾವರಣಗೊಳಿಸಿದ್ದಾರೆ. ಲೋಕಕ್ಕೆ ಸಾಮಾನ್ಯವೆನಿಸುವ ಸಂಗತಿಗಳು ಅವರ ಸೂಕ್ಷ್ಮ ಸ್ತ್ರೀ ಪ್ರಜ್ಞೆಯ ಮೂಲ ವಿಶಿಷ್ಟ ಬರೆಹಗಳಾಗಿ ಹೊರಹೊಮ್ಮಿ ಸಾಹಿತ್ಯ ಕ್ಷೇತ್ರದಲ್ಲಿ ಅವರದ್ದೇ ಆದ ಒಂದು ವಿಶೇಷ ಸ್ಥಾನ ಕಲ್ಪಿಸಿವೆ.

ತಮ್ಮ ಸುತ್ತಲಿನ ಪರಿಸರದ ವಿದ್ಯಮಾನಗಳನ್ನೇ ಲೇಖನಿಯ ವಸ್ತುವಾಗಿಸಿ ಕಥೆ, ಕಾದಂಬರಿ, ಕವಿತೆ, ಮಕ್ಕಳ ನಾಟಕ, ಲಲಿತಪ್ರಬಂಧ, ವ್ಯಕ್ತಿಚಿತ್ರಣಗಳಂತಹ ಅನೇಕ ಅನನ್ಯ ಕೃತಿಗಳನ್ನು ನೀಡಿರುವ ಹೆಗ್ಗಳಿಕೆ ವೈದೇಹಿ ಅವರದ್ದು. ಪ್ರಾದೇಶಿಕ ಭಾಷೆಯಾಗಿ ಸೀಮಿತ ವಲಯದೊಳಗಿದ್ದ ಕುಂದಾಪುರ ಕನ್ನಡವನ್ನು ಲೋಕಕ್ಕೆ ಪರಿಚಯಿಸಿದ ಕೀರ್ತಿಯೂ ಅವರಿಗೇ ಸಲ್ಲಬೇಕು. ವೈದೇಹಿ ಅವರಿಗೆ ಈಗ 75 ರ ಸಂಭ್ರಮ. ಅದು ನಾಡಿನ ಸಂಭ್ರಮವೂ ಹೌದು. ಅವರು ಹೀಗೆಯೇ ಜೀವನ ಪ್ರೀತಿಯೊಂದಿಗೆ ಉತ್ಸಾಹದಿಂದ ಬರೆಯುತ್ತ ನೂರು ಕಾಲ ಸುಖವಾಗಿರಲೆಂದು ಆಶಿಸುತ್ತೇನೆ. ಈ ಸಂದರ್ಭದಲ್ಲಿ ಕರ್ನಾಟಕ ಲೇಖಕಿಯರ ಸಂಘದ ಪರವಾಗಿ ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸುತ್ತಿದ್ದೇನೆ.

ದಿನಾಂಕ: 13.02.2019

(ವನಮಾಲಾ ಸಂಪನ್ನಕುಮಾರ್)
ಅಧ್ಯಕ್ಷರು

**ಕರ್ನಾಟಕ ಲೇಖಕಿಯರ-ವಾಚಕಿಯರ ಸಂಘ(ರಿ)**

ಸ್ಥಾಪನೆ: 5-12-1987
ನೋಂದಣಿ ಸಂಖ್ಯೆ: 193/91-92
'ಸಾಹಿತ್ಯ ಸದನ', ಉರ್ವಸ್ಟೋರ್ಸ್
ಅಶೋಕನಗರ ಅಂಚೆ ಕಚೇರಿ ಹಿಂಬದಿ,
ಮಂಗಳೂರು-575006
ದೂರವಾಣಿ: 0824-2454412

ಅವಿಭಜಿತ ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆ
ಮಂಗಳೂರು
14-1-2019

ರಿಗೆ-
**ಶ್ರೀಮತಿ ಸವಿತಾ ನಾಗಭೂಷಣ**
ನಂ.5, ಸುಡಿ, ಕಲ್ಲಹಳ್ಳಿ ಬಡಾವಣೆ
ವಿನೋಬಾನಗರ, ಶಿವಮೊಗ್ಗ-4

**ವಿಷಯ :- ತಮ್ಮ ನೇತೃತ್ವದಲ್ಲಿ 'ವೈದೇಹಿ ಅಭಿನಂದನಾ ಗ್ರಂಥ' ಹೊರತರುವ ಬಗ್ಗೆ.**

ಮಾನ್ಯರೇ,

ರಾಜ್ಯಮಟ್ಟವನ್ನೂ ಮೀರಿ ಸಾಹಿತ್ಯಲೋಕವನ್ನು ಸಮೃದ್ಧಗೊಳಿಸಿರುವ ಶ್ರೀಮತಿ ವೈದೇಹಿ ಅವರು 75ನೇ ವಸಂತಕ್ಕೆ ಕಾಲಿಡುತ್ತಿರುವ ಈ ಸಂದರ್ಭದಲ್ಲಿ ಅವರ ಬಗ್ಗೆ ಒಂದು ಅಭಿನಂದನಾ ಗ್ರಂಥವನ್ನು ಸಮರ್ಪಿಸಲಿದ್ದೀರೆಂದು ತಿಳಿದು ಅತ್ಯಂತ ಸಂತೋಷವಾಯಿತು. ವೈದೇಹಿಯವರು ನಮ್ಮ ಕ.ಲೇ.ವಾ.ಸಂಘದ ಹಿರಿಯ ಸದಸ್ಯೆಯೂ ಆಗಿರುವುದರಿಂದ ಅವರ 75 ವರುಷಗಳ ಜೀವನ ಮತ್ತು ಸಾಹಿತ್ಯ ಸಾಧನೆಗಳ ಬಗ್ಗೆ ಗ್ರಂಥವೊಂದು ಹೊರಬರುವುದು ನಮ್ಮ ಸಂಘಕ್ಕೂ ಹೆಮ್ಮೆಯ ವಿಷಯವಾಗಿದೆ.

ವೈದೇಹಿಯವರ 75ನೇ ಜನ್ಮದಿನಾಚರಣೆ ಮತ್ತು ತತ್ಸಂಬಂಧಿತ ಗ್ರಂಥ ಸಮರ್ಪಣೆಗೆ ನಮ್ಮ ಕ.ಲೇ.ವಾ.ಸಂಘದ ಅಧ್ಯಕ್ಷರು, ಪದಾಧಿಕಾರಿಗಳು ಮತ್ತು ಸರ್ವಸದಸ್ಯರು ಶುಭಹಾರೈಸುತ್ತೇವೆ. ಪುಸ್ತಕ ಬಿಡುಗಡೆಯಾದ ಮೇಲೆ ನಮ್ಮ ಸಂಘದ ಆಶ್ರಯದಲ್ಲಿ ಒಂದು ವಿಚಾರ ಸಂಕಿರಣವನ್ನು ಏರ್ಪಡಿಸಲೂ ನಾವು ಆಸಕ್ತರಾಗಿದ್ದೇವೆ. ವೈದೇಹಿಯವರ ಸಾಧನೆಗೆ ತಕ್ಕ ಕೊಡುಗೆಯಾಗಿ ಈ ಗ್ರಂಥ ಹೊರಬರಲೆಂದು ಆಶಿಸುತ್ತೇವೆ.

ಇತಿ, ಶುಭಾಶಯಗಳೊಂದಿಗೆ,
**ಶಶಿಲೇಖಾ ಬಿ**
ಅಧ್ಯಕ್ಷರು ಮತ್ತು ಪದಾಧಿಕಾರಿಗಳು
ಕರ್ನಾಟಕ ಲೇಖಕಿಯರ ವಾಚಕಿಯರ ಸಂಘ (ರಿ)
ಸಾಹಿತ್ಯ ಸದನ, ಅಶೋಕನಗರ, ಮಂಗಳೂರು

## 1. ಡಾ. ಕೆ. ಶಿವರಾಮ ಕಾರಂತ

ತಾ. 23.07.1996

ಶ್ರೀಮತಿ ವೈದೇಹಿಯವರಿಗೆ,

ಅಂಚೆಯಲ್ಲಿ- ಸೇಡಿಯಾಪುರವರ ಜೀವನ ಚರಿತ್ರೆ ಬಂದಿದೆ. ಬಹಳ ಚೆನ್ನಾಗಿ ಅವರ ಬದುಕನ್ನು ಕುರಿತು ನಿವೇದಿಸಿದ್ದಾರೆ. ನಿಮ್ಮಿಂದಾಗಿ ಅದು ಪ್ರಕಟಗೊಂಡಿತು-

ಸದ್ಯ ನಾನು ಎಲ್ಲಿಗೆ ಹೋಗುವುದಾದರೂ ಡಾ। ಪ್ರಭುಗಳಿಗೆ ತಿಳಿಸಿ ಹೋಗುತ್ತಿದ್ದೇನೆ. ನಿನ್ನೆ ಮೊನ್ನೆ ಮೊದಲು ಗೊತ್ತು ಮಾಡಿದ ಪ್ರವಾಸವನ್ನು ರದ್ದುಮಾಡಬೇಕಾಯಿತು. ಹೀಗಾಗಿ ಉಡುಪಿಗೆ ಬರುವ ಸಂದರ್ಭದಲ್ಲಿ ಇಣುಕಿ ಹೋಗುತ್ತೇನೆ.

ಇತಿ

**ಶಿವರಾಮ ಕಾರಂತ**

(ಅಸ್ಪೃಶ್ಯರು ಕುರಿತು ಬರೆದ ಪತ್ರ)

ಸಾಲಿಗ್ರಾಮ
8.3.1983

ಶ್ರೀಮತಿ ವೈದೇಹಿಯವರಿಗೆ,

. . . . ಇವತ್ತು ಬೆಳಗ್ಗೆ ಓದಿ ಮುಗಿಸಿದ್ದೇನೆ. ಅದರಲ್ಲಿ ನಿಮ್ಮ ಸ್ವಂತ ಅನುಭವದ ಅನೇಕ ವಿಷಯಗಳು, ಗೃಹಕೃತ್ಯಕ್ಕೆ ಮತ್ತು ಹೆಂಗಸರ ಬಾಳಿಗೆ ಸಂಬಂಧಪಟ್ಟದ್ದು ಆಕರ್ಷಕವಾಗಿ ಬಂದಿದೆ. ಆದರೆ ಬರವಣಿಗೆಯಲ್ಲಿ ಕಾಣಿಸುವ ಗ್ರಾಮ್ಯಶೈಲಿ ಈ ಪ್ರದೇಶದವರಿಗೆ ಹೊರತು ಅನ್ಯರಿಗೆ ಅರ್ಥ ಆಗಲಾರದು. . .

ಇತಿ

**ಶಿವರಾಮ ಕಾರಂತ**

## ೨. ಪೂರ್ಣಚಂದ್ರ ತೇಜಸ್ವಿ

ತಾ. ೨೩.೦೯.೮೪

ವೈದೇಹಿ,

ನೀವು ಕಳಿಸಿದ ಪುಸ್ತಕಗಳೆರಡೂ ತಲುಪಿದವು. ಬರವಣಿಗೆ ನಿರೂಪಣಾ ಶೈಲಿ ಎಲ್ಲದರಲ್ಲೂ ನೀವು ನನ್ನ ಊಹೆಗೂ ಮೀರಿ ಚೆನ್ನಾಗಿ ಬರೆದಿದ್ದೀರಿ. ನನಗಂತೂ ತುಂಬಾ ಸಂತೋಷವಾಯ್ತು. ಈಚಿನ ದಿನಗಳಲ್ಲಿ ನನ್ನೊಡನೆ ಬರೆಯುತ್ತಿರುವ ಕಲಾವಿದರಲ್ಲಿ ಯಾರಿಂದಲಾದರೂ ಕಲಿಯಬಹುದಾದುದು ಇದೆ ಎಂದೆನ್ನಿಸಿದ್ದರೆ ನನಗೆ ಅದು ನಿಮ್ಮಿಂದಲೇ. ನಾನು ಸಹ ಬರಹಗಾರನಾದುದರಿಂದ ಇತರರ ಬರಹಗಳನ್ನು ಮೌಲ್ಯಮಾಪನ ಮಾಡುವುದಕ್ಕಿಂತ ಹೆಚ್ಚಾಗಿ ನನಗೇನು ಉಪಯೋಗವಾದೀತು? ಎನ್ನುವ ದೃಷ್ಟಿಯಿಂದ ನೋಡುವುದೇ ಅಭ್ಯಾಸವಾಗಿಬಿಟ್ಟಿದೆ. ಇದು ನನ್ನ ತಕ್ಷಣದ ಪ್ರತಿಕ್ರಿಯೆ. ನನಗೆ ನಿಮ್ಮ ಬಗ್ಗೆ ನಿಧಾನವಾಗಿ ಏನೆನ್ನಿಸುತ್ತದೆ ಎನ್ನುವುದನ್ನು ಆಮೇಲಿಂದ ಬರೆಯುತ್ತೇನೆ.

ಅದನ್ನು ಓದಿಯೇ ಕಾಗದ ಬರೆಯೋಣೆಂದು ಕುಳಿತಿದ್ದರಿಂದ ತಕ್ಷಣ ಉತ್ತರಿಸಲಿಲ್ಲ. ನೀವಿದನ್ನು ತಪ್ಪು ತಿಳಿಯುವುದಿಲ್ಲೆಂದು ನಂಬಿದ್ದೇನೆ. ನಯನಾ ಪಲ್ಲವಿ ಅವರಿಗೆ ನಾನು ಕೇಳಿದೆನೆಂದು ತಿಳಿಸಿರಿ. ನಿಮ್ಮೆರಡೂ ಪುಸ್ತಕಗಳನ್ನೋದಿ ನನಗೆ ನಿಜಕ್ಕೂ ಅತ್ಯಂತ ಸಂತೋಷವಾಗಿದೆ. ಹೆಚ್ಚೇನು ಹೇಳಲಿ.

ನಿಮ್ಮ,

**ಕೆ.ಪಿ. ಪೂರ್ಣಚಂದ್ರ ತೇಜಸ್ವಿ**

**ತಿ. ಪಿ. ಲಂಕೇಶ್** ತಾ. 28-01-1987

**ಲಂಕೇಶ್ ಪತ್ರಿಕೆ**

ಪ್ರೀತಿಯ ವೈದೇಹಿಯವರೆ,

How fascinatingly you write! ನೀವು ಉಡುಪಿಯಲ್ಲಿ ಸಿಕ್ಕಿದ್ದಾಗ 'ವೈದೇಹಿ' ಅಂದಾಗ ನಾನು ನಿಮ್ಮ ಯಾವ ಕತೆಗಳನ್ನೂ ಓದಿರಲಿಲ್ಲ. ಏನನ್ನೂ ಓದಿರಲಿಲ್ಲ. ನಮ್ಮ ವಿಶೇಷ ಸಂಚಿಕೆಗೆ ಕತೆ ಬರೆಯಲು ನಿಮ್ಮನ್ನು ಕೇಳಿದ್ದು ಮಾತ್ರ ನನಗೆ ನೆನಪಿತ್ತು. ಆಮೇಲೆ ನೀವು ಕಳುಹಿಸಿದ ಆ ಕತೆಯನ್ನೇ ನಾನು ಮೊದಲು ಓದಿದ್ದು. ನಮ್ಮ ಸತ್ಯಮೂರ್ತಿಯವರು 'ಪರವಾಗಿಲ್ಲ, ಸ್ವಲ್ಪ ಉದ್ದವಾಯಿತು' ಅಂದಾಗಲೇ ನಾನು ಓದಿದ್ದು. It was excellent. ಕೆಲಸಗಳ ನಡುವೆ ನಿಮಗೆ ವಿವರವಾಗಿ ಬರೆಯಲಾಗಲಿಲ್ಲ. ಆದರೂ ನಿಮ್ಮ 'ಗೋಲ' ಮತ್ತು 'ಅಂತರಂಗದ ಪುಟಗಳು' ತರಿಸಿಕೊಂಡು ಓದಿದೆ. ಅವನ್ನು ಓದಿ ತಿಂಗಳೇ ಆಯಿತು. ಆದ್ದರಿಂದ, ನೀವು ಈಗ ಅವುಗಳ ಪ್ರತಿ ಕಳಿಸಬೇಕಾಗಿರಲಿಲ್ಲ. ಓದಿ ಆಗಿದೆ. ಅಲ್ಲದೆ, ಅನೇಕರಿಗೆ ಹೇಳಿ ಓದಿಸಿದ್ದೇನೆ.

ಮೊನ್ನೆ ಶರ್ಮ ಸಿಕ್ಕಿದ್ದಾಗ 'ಗೋಲ' ಸಂಕಲನದ ಅತ್ಯುತ್ತಮ ಕತೆಯಾದ 'ಶಕುಂತಲೆ' ಬಗ್ಗೆ ಹೇಳಿದೆ. ಅವರು ತಮ್ಮ 'ಯಾರು ಹಿತವರು ನಿನಗೆ' ಎಂಬ ಕತೆಯ ಬಗ್ಗೆ ಹೇಳುತ್ತಿದ್ದಾಗ, ಒಂದು ರೀತಿಯಲ್ಲಿ ಎರಡೂ ಕತೆಗಳ ವಸ್ತು ಒಂದೇ- ಪ್ರೀತಿಸಿ ಹೊರಟುಹೋದವನನ್ನು ಕುರಿತದ್ದು. ವೈದೇಹಿ ಬರೆದ ಕತೆ, ಎಷ್ಟು ಗ್ರಹಿಕೆಗಳಿಂದ ಕೂಡಿದೆ, ನೋವು ಆತಂಕಗಳಿಂದ ಕೂಡಿದೆ ಎಂದು ಚರ್ಚಿಸಿದೆ. ಈ ಕತೆ ಶಕುಂತಲೆಯ ಬದುಕಿನಿಂದ ಮುಕ್ತವಾಗಿ ಎಲ್ಲ ಮನುಷ್ಯರ ಕತೆಯಾಗುವ ರೀತಿ, ನೀವು ಬರೆಯುವ ವಿವರಗಳ ಬಗ್ಗೆ ಕೂಡ ಅಷ್ಟೆ. ಆಮೇಲೆ......

ಹೇಳುವುದಿಲ್ಲ. ನಾನೊಂದು ಟಿಪ್ಪಣಿ ಮಾಡಬೇಕೆಂದಿದ್ದೇನೆ. ನೀವು ನಿಮ್ಮದೊಂದು ವರ್ಣದ, ಒಂದೆರಡು ಕಪ್ಪುಬಿಳುಪು ಫೋಟೋ ಕಳಿಸಿ. ಆ ಫೋಟೋ ತೆಗೆಸಿದ ಖರ್ಚು ಕಳಿಸಿಕೊಡುತ್ತೇನೆ. ಉಡುಪಿಯಲ್ಲಿ ಆಗದಿದ್ದರೆ ಮಂಗಳೂರಿನಲ್ಲಿ ತೆಗೆಸಿ.

ನೀವು ನನಗೊಂದು ನೀಳ್ಗತೆ ಅಥವಾ ಕಾದಂಬರಿ ಕೊಡಿ. ಮೇಲೆ ನಾನು ಮೆಚ್ಚಿದ್ದಕ್ಕೂ ಇದಕ್ಕೂ ಸಂಬಂಧವಿಲ್ಲ ಎಂದು ನಿಮಗೆ ಹೇಳಬೇಕಿಲ್ಲ. ಹಾಗೆಲ್ಲ ಪೂಸಿ ಮಾಡುವ ಮನುಷ್ಯ ನಾನಲ್ಲ ಎಂಬುದು ನಿಮಗೆ ಗೊತ್ತಿರಬಹುದು. ಬರೆದೂ ಬರೆದೂ ನನ್ನ ಅಕ್ಷರವೆಲ್ಲಾ ಕೆಟ್ಟುಹೋಗಿದೆ.

ಕ್ಷಮಿಸಿ.

ಇತಿ,

**ಪಿ.ಲಂಕೇಶ್**

**4. ಜಿ.ಟಿ. ನಾರಾಯಣರಾವ್**

5-12-1976
ಮೈಸೂರು

ಶ್ರೀಮತಿ 'ವೈದೇಹಿ' ಅವರಿಗೆ ವಿಜ್ಞಾಪನೆಗಳು.

'ಸಾಕ್ಷಿ' ತ್ರೈಮಾಸಿಕದಲ್ಲಿ ನಿಮ್ಮ 'ಗೋಲ' ಎಂಬ ಒಳ್ಳೆಯ ಕವನವನ್ನು ಓದಿ ಸಂತೋಷಗೊಂಡು ಈ ಕಾಗದ ಬರೆಯುತ್ತಿದ್ದೇನೆ.. ಓದುವಾಗ ನಾನೇ ಆ ಪೋರ ಎಂಬ ಭಾವನೆ, ಅದೇ ದಿಟ್ಟತನ, ಅದೇ ಉದ್ವೇಗ, ಅದೇ ಆಸೆ, ಕೊನೆಗೆ ಅದೇ ಹತಾಶೆ ಭಯ ಉಂಟಾದವು. ಈ ತರಹದ ರಸತಲ್ಲೀನತೆ ತರುವಂಥ ನಿಮ್ಮ ಬರವಣಿಗೆ ನಿಜವಾಗಿ ಶ್ರೇಷ್ಠಮಟ್ಟದ್ದಾಗಿದೆ. ಕುಂದಾಪುರದ ಜಾನಕಿಯವರಾದ ನೀವು ('ಸುಧಾ' ದಲ್ಲಿ ಹಿಂದೊಮ್ಮೆ ಓದಿದ ನೆನಪು: ತಪ್ಪಾದರೆ ಕ್ಷಮಿಸಿ) ದ.ಕ.ದ 'ಪುಜ್ಜ'ವನ್ನು ಬಳಸಿದ್ದು ತುಂಬ ಸೊಗಸಾಗಿದೆ. 'ಕಂಡಿರಾ ಸೂರ್ಯನನ್ನು! ಕಂಡಿರುವಿರಾ ಅವನ ಮನೆಯನ್ನು' ಈ ಸಾಲಿನಲ್ಲಿ ಹುದುಗಿರುವ ಭಾವಕಲ್ಪನೆ ವಿವರಣಾತೀತವಾಗಿದೆ. ಮಗುವಿಗೆ ಮನೆಯ ನೆನಪು, 'ಅಮ್ಮ ಕೊಡುವ ಬಿಸಿ ಬಿಸಿ ಹಾಲು' ಇತ್ಯಾದಿಗಳಲ್ಲಿ ಆ ಮುಗ್ಧ ಮನಸ್ಸಿನ ತುಯ್ತ ತುಡಿತ ಚೆನ್ನಾಗಿ ಬಂದಿವೆ.

ಮತ್ತೆ ನಿಮ್ಮ ಕವನದ ಒಂದೊಂದು ಸಾಲನ್ನೂ ಉದಾಹರಿಸಿ ನನ್ನ ನೀರಸ ಗದ್ಯದಲ್ಲಿ ಅದನ್ನು ಮೆಚ್ಚಿ ವಿವರಿಸಲು ನನಗೆ ಇಷ್ಟವಿಲ್ಲ. ಸಮಗ್ರವಾಗಿ 'ಗೋಲ' ನನಗೆ ಅಪೂರ್ವ ಸಂತೋಷ ನೀಡಿದೆ. ಅನುಭವ ಒದಗಿಸಿದೆ. ನಿಮಗೆ ಹಾರ್ದಿಕ ಅಭಿನಂದನೆಗಳು.

ನನ್ನ ಹಿರಿಯ ಸಹೋದ್ಯೋಗಿ ಮಿತ್ರರಾಗಿರುವ ಶ್ರೀಮಾನ್ ಎಚ್ಚೆಸ್ಕೆಯವರಿಗೆ ಇದನ್ನು ಓದಲು ಕೊಟ್ಟೆ. ಅವರು ಇದನ್ನು ಮೆಚ್ಚಿ lofty, symbolic, elevating ಎಂದು ಹೇಳಿದ್ದಾರೆ.

ಇಂತೀ ವಿಜ್ಞಾಪನೆಗಳು
**ಜಿ.ಟಿ. ನಾರಾಯಣರಾವ್**

## 5. ಕೆ.ವಿ. ಸುಬ್ಬಣ್ಣ ತಾ. 23.6.89

('ಧಾಂ ಧೂಂ ಸುಂಟರಗಾಳಿ' (ಟೆಂಪೆಸ್ಟ್)- ಮಕ್ಕಳ ನಾಟಕದ ಸ್ಕ್ರಿಪ್ಟ್ ಮತ್ತು ಪದ್ಯ ತಲುಪಿ ಬರೆದಿರುವುದು)

ಶ್ರೀಮತಿ ವೈದೇಹಿ ಅವರೆ,

ನಿಮ್ಮ ಕಾಗದ, ಕ್ಯಾಲಿಬನ್ ಹಾಡು ತಲುಪಿತು. ವಂದನೆ. ಇನ್ನು ಪ್ರಾಯ: ನಿಮ್ಮಿಂದ ಆಗಬೇಕಾದ್ದು ಸದ್ಯಕ್ಕೆ ಕಾಣುವುದಿಲ್ಲ. ಮತ್ತೆ 2 reading ಮಾಡಿದೆವು. Script ತುಂಬ ಚೆನ್ನಾಗಿ ಬಂದಿದೆ ಎಂದು ಎಲ್ಲರ ಅಭಿಪ್ರಾಯ. ಅಭಿನಂದನೆ. ನಾಟಕ ರಿಹರ್ಸಲ್ ಪ್ರಾರಂಭವಾದ ಮೇಲೆ ಅಗತ್ಯವಿದ್ದಲ್ಲಿ consult ಮಾಡುತ್ತೇವೆ.

ನನ್ನ ಆರೋಗ್ಯ 4 ದಿನ ಬಿಗಡಾಯಿಸಿತು. ಈಗ ವಾಸಿ.

ಎಕ್ಬಾಲ್ ಈಗ ಕಾದು ಕೂತಿದ್ದಾನೆ. ಅವನಿಗೆ ಮ್ಯಾಕ್‌ಬೆತ್ ಸ್ಕ್ರಿಪ್ಟ್ ಮಾಡಿಕೊಡಿ. ನನ್ನ ಯೋಚನೆ ಹೀಗಿತ್ತು.

ಮೂವರು ಮನುಷ್ಯರು (ಜಕ್ಕಿಣಿಯರು) ಗೊಂಬೆ ಆಟ ಪ್ರಾರಂಭಿಸುತ್ತಾರೆ. ಮುಂದೆ ನಾಟಕದ ಪಾತ್ರಗಳೆಲ್ಲ ಗೊಂಬೆಗಳೇ. ಬೇಕಿದ್ದರೆ - ಒಮ್ಮೊಮ್ಮೆ ಅವೂ ಮನುಷ್ಯರ ಗಾಳಿ ತಾಗಿ ಮನುಷ್ಯರಂತೆ ವರ್ತಿಸಬಹುದು. ಹಿಂಸೆ/ ಕೊಲೆ/ ಮೋಸ ಇತ್ಯಾದಿ ಸಂದರ್ಭದಲ್ಲಿ ಅವು ತಲೆ ಓಡದೆ ಮನುಷ್ಯರ ಹತ್ತಿರ consultation ಮಾಡಿಕೊಳ್ಳುತ್ತವೆ.

ಒಟ್ಟು ನಾಟಕ ತಮಾಷೆಯಾಗಿ ಕಾಣಬೇಕು. ಮನುಷ್ಯರ ದುರಾಸೆ-ದುರ್ಗುಣ-ನಿಸ್ಸಹಾಯತೆ- ಇತ್ಯಾದಿ ಹೊಳೆಯಬೇಕು. ಆದರೆ ಅದು ವಸ್ತುವಾಗಿ ನಾಟಕವನ್ನು ಸೀರಿಯಸ್ ಆಗಿಸಬಾರದು. ಇದು ನನ್ನ ಅವತ್ತಿನ ಸ್ಥೂಲ ಯೋಚನೆಯಾಗಿತ್ತು. ನೀವೇ ಯೋಚಿಸಿ ಅಂತಿಮವಾಗಿ ಮಾಡಿಕೊಡಿ.

ಮೂರ್ತಿ ಅವರಿಗೆ ವಂದನೆ. ನಯನಾ ಪಲ್ಲವಿಯರಿಗೆ ನೆನಪು.

ವಂದನೆ,

**ಸುಬ್ಬಣ್ಣ.**

## 6. ಗಿರೀಶ್ ಕಾರ್ನಾಡ್

ತಾ. 30.8.16

ಪ್ರಿಯ ವೈದೇಹಿ,

……… ನಿಮ್ಮ 'ಕತೆ ಕತೆ ಕಾರಣ' ದ ಬಗ್ಗೆ ನಾನೇ ಬರೆಯುವವನಿದ್ದೆ. ತುಂಬಾ ಚೆನ್ನಾಗಿದೆ. ನೀವು ಕನ್ನಡ ಕಥಾಲೋಕವನ್ನು ಹದುರಾಗಿ ನವಿರಾಗಿ ಶ್ರೀಮಂತಗೊಳಿಸಿದ ರೀತಿಯೇ ಅದ್ಭುತವಾದದ್ದು. ನಿಮ್ಮಿಂದ ವೈಯಕ್ತಿಕವಾಗಿ ಕೇಳುವುದಂತೂ ಒಂದು ಖುಷಿಯೇ. ಈ-ಮೇಲ್ ಮಾಡಲಿಕ್ಕೆ ಒಂದು ಕಾರಣ ಬೇಕೇಬೇಕೆಂದೇನಿಲ್ಲ. ಬರೆಯುತ್ತಿರಿ.

ಶುಭಾಶಯಗಳು

**ಗಿರೀಶ**

## 7. ಸಿ.ಎನ್. ರಾಮಚಂದ್ರನ್

18-04-88

ಮಂಗಳೂರು

ಮಾನ್ಯ ವೈದೇಹಿಯವರಿಗೆ,

ಇಂದು 'ಜನವಾಹಿನಿ'ಯಲ್ಲಿ ಪ್ರಕಟವಾಗಿರುವ ನಿಮ್ಮ ಸಂದರ್ಶನವನ್ನು ನಾನು ಓದುತ್ತಾ ಇದ್ದೆ. ಕೂಡಲೇ ಇಂದು-ನಾಳೆ ಎಂದು ನಿಮಗೆ 'ಕೂಡಲೇ' ಬರೆಯಬೇಕೆಂದುಕೊಂಡಿದ್ದ ಅಭಿನಂದನೆಯ ಪತ್ರವನ್ನು ಇನ್ನೂ ಬರೆದಿಲ್ಲ ಎಂದು ನೆನಪಿಗೆ ಬಂದು ತುಂಬಾ ಸಂಕೋಚವಾಯಿತು. ಕೂಡಲೇ ('ಸಂದರ್ಶನ'ವನ್ನು ಅರ್ಧಕ್ಕೇ ನಿಲ್ಲಿಸಿ) ಈ ಪತ್ರವನ್ನು ಬರೆಯುತ್ತಿದ್ದೇನೆ.

ಅನೇಕ ವರ್ಷಗಳಿಂದ ನಿಮ್ಮನ್ನು ಬಲ್ಲ, ನಿಮ್ಮ ಎಲ್ಲಾ ಕೃತಿಗಳನ್ನು ಓದಿರುವ ನನಗೆ, 'ದಾನಚಿಂತಾಮಣಿ' ಪ್ರಶಸ್ತಿ ನಿಮಗೆ ದೊರಕಿರುವುದು ವೈಯಕ್ತಿಕವಾಗಿ ತುಂಬಾ ಸಂತೋಷವನ್ನುಂಟುಮಾಡಿದೆ. ಎಲ್ಲಾ ರೀತಿಯಿಂದಲೂ ಅರ್ಹರಾದ ನಿಮಗೆ ಈ ಪ್ರಶಸ್ತಿ ದೊರಕಿ ಪ್ರಶಸ್ತಿಗೇ ಒಂದು ವಿಧದ ವಿಶ್ವಸನೀಯತೆ (credibility) ಕೊಟ್ಟಿದೆ. ನನ್ನ ಹಾರ್ದಿಕ ಅಭಿನಂದನೆಗಳನ್ನು ಸ್ವೀಕರಿಸಿ ಮತ್ತು ಬಹುಕಾಲ ನಿಮ್ಮಿಂದ ಅರ್ಥಪೂರ್ಣ ಸೃಜನಶೀಲ ಕಾರ್ಯ ಮುಂದುವರಿಯಲಿ.

(ನಿಮ್ಮ ಸಂದರ್ಶನದಲ್ಲಿ ನೀವು ನೈಜವಾಗಿ, ಯಾವ ಒಂದು ಸೋಗೂ ಇಲ್ಲದೆ- public posturing ಇಲ್ಲದೆ- ಅನೇಕ ವಿಷಯಗಳ ಬಗ್ಗೆ ಒಳನೋಟಗಳನ್ನು ನೀಡಿದ್ದೀರಿ.) ಇತ್ತೀಚೆಗೆ ಯಾವುದೋ ಒಂದು ಪ್ರಬಂಧ ಬರೆಯಲು ನಿಮ್ಮ 'ಅಸ್ಪೃಶ್ಯರು' ಮತ್ತು 'ಜಾತ್ರೆ' ಓದಿದೆ. ಹದಿನೈದು ವರ್ಷಗಳ ಹಿಂದೆ ಬರೆಯಲ್ಪಟ್ಟಿದ್ದರೂ 'ಅಸ್ಪೃಶ್ಯರು' ಒಂದು

ಗಣನೀಯ ಕೃತಿ. ಕೊರಗರನ್ನೂ ಸ್ತ್ರೀಯರನ್ನೂ ಸಮಾನವಾಗಿಯೇ ಅಸ್ಪೃಶ್ಯರನ್ನಾಗಿಸುವ ಹಿಂದೂ ಸಮಾಜದ ಆತ್ಮೀಯ ಚಿತ್ರಣ ಇದರಲ್ಲಿದೆ. ಮುಖ್ಯವಾಗಿ ಕೃತಿಯುದ್ದಕ್ಕೂ ಕಂಡುಬರುವ 'ಬಾಲಕಿಯ ದೃಷ್ಟಿಕೋನ' ಅತ್ಯಂತ ಯಶಸ್ವಿಯಾಗಿದೆ. (ಆದರೆ ಕೃತಿಯ ಅಂತ್ಯ ಸಮಾಧಾನಕರವಾಗಿಲ್ಲ. ಹೇಗೋ ಮುಗಿಸಬೇಕೆಂದು ಕೃತಿಯನ್ನು ಮುಗಿಸಿರುವಂತೆ ಕಾಣುತ್ತದೆ.) ಹಾಗೆಯೇ ಬದುಕೇ ಜಾತ್ರೆಯೆಂಬ ರೂಪಕವನ್ನು ಎಲ್ಲಾ ನೆಲೆಗಳಲ್ಲಿಯೂ ಬೆಳೆಸುವ 'ಜಾತ್ರೆ' ಕನ್ನಡ ವಾಙ್ಮಯದಲ್ಲಿಯೇ ಒಂದು ಅಪರೂಪ ಕೃತಿ.

ಮನೆಯಲ್ಲಿ ಎಲ್ಲರಿಗೂ (ಚಿತ್ರದಲ್ಲಿರುವುದು ನಯನಾಳ ಮಗುವೆಂದು ತಿಳಿದು ಕಾಲದ ಓಟದ ಅರಿವಾಗಿ ಒಂದು ಕ್ಷಣ ಮೈ ಜುಮ್ಮೆಂದಿತು) ನನ್ನ ನೆನಪು ಕೊಡಿ.

ಮತ್ತೊಮ್ಮೆ ಅಭಿನಂದನೆಗಳು ಹಾಗೂ ವಂದನೆಗಳೊಡನೆ

ಎನ್ನುವ

**ಸಿ.ಎನ್. ರಾಮಚಂದ್ರನ್**

**8. ಕೆ.ವಿ. ತಿರುಮಲೇಶ್**

ತಾ. 18.04.2017
ಕ್ಯಾಂಪು, ಸೂರಂಬೈಲು

ಪ್ರಿಯ ವೈದೇಹಿ ಅವರಿಗೆ ನಮಸ್ಕಾರಗಳು.

ಇದೇ 21ರಂದು ಹೈದರಾಬಾದಿಗೆ ಮರಳುತ್ತಿದ್ದೇವೆ. (ಆದ್ದರಿಂದ ಸೂರಂಬೈಲಿಗೆ ಬರೀಬೇಡಿ. ಹೈದರಾಬಾದಿಗೆ ಸ್ವಾಗತ!)

ನೀವು ಕೊಟ್ಟ 4 ಪುಸ್ತಕಗಳಲ್ಲಿ (ಸಂಗೀತ ಲೇಖನಗಳನ್ನುಳಿದು) 3 ಪುಸ್ತಕಗಳನ್ನು ಓದಿ ಮುಗಿಸಿದೆ. ಬಿ.ವಿ.ಕಾರಂತ, ಕೋ.ಲ.ಕಾರಂತ ಮತ್ತು ಕತೆಕತೆ ಕಾರಣ. ನಿಮ್ಮ ಕತೆಗಳನ್ನು ಇಷ್ಟೊಂದು ಪ್ರಮಾಣದಲ್ಲಿ ಹಿಂದೆಂದೂ ನಾನು ಓದಿರಲಿಲ್ಲ. ಈಗ ಓದಿ ತುಂಬಾ ಖುಷಿಯಾಯಿತು. ಕತೆಯಿಂದ 'ಸುದೂರ' ಕಾಪಾಡಿಕೊಳ್ಳುವ ನಿಮ್ಮ ತಂತ್ರಗಾರಿಕೆ (ಅದಕ್ಕೆ ಪೂರಕವಾಗಿ ನೀವು ಬಳಸುವ ಕೋಟ ಕನ್ನಡ) ಇಷ್ಟವಾಯಿತು. ನಮ್ಮ ಸಮಾಜದ ಹೆಣ್ಣಿನ ಅತಂತ್ರ ಸ್ಥಿತಿಯನ್ನು ನೀವು ಬಹಳ ಚೆನ್ನಾಗಿ ಚಿತ್ರಿಸುತ್ತೀರಿ. ಕತೆಗಾರ್ತಿಯಾಗಿ ನೀವು ಬಹಳ ಎತ್ತರದಲ್ಲಿದ್ದೀರಿ. ಶುಭಾಶಯಗಳು!

ಮುಂದೆ ಎಂದಾದರೂ–

ಇತಿ
**ಕೆ.ವಿ. ತಿರುಮಲೇಶ್**

9. ಎಸ್. ಮಂಜುನಾಥ್ ತಾ. 15-04-1999
ಮೈಸೂರು

ವೈದೇಹಿಯವರಿಗೆ,

ನಮಸ್ಕಾರ.

'ಜಾತ್ರೆ' ಎಷ್ಟು ಜೀವಂತವಾಗಿದೆ! ವಿವರ ಶ್ರೀಮಂತವಾಗಿದೆ. ಪುಟ್ಟ ಹುಡುಗಿಯ ಸಂಭ್ರಮ ಅರಳಿ ನಿಂತುಬಿಟ್ಟಿದೆ. ನೀವು ಶ್ರೇಷ್ಠ ಲೇಖಕಿ ಹೌದೋ ಅಲ್ಲವೋ ಅನ್ನುವುದಕ್ಕಿಂತ ಮೊದಲು ಗೊತ್ತಾಗುವುದು- ನೀವೊಬ್ಬ ಸಹಜ ಲೇಖಕಿ. ಎಂ.ಕೆ ಬಗ್ಗೆ ಬರೆದಿರುವುದು ಹೆಚ್ಚು ಪಾಲು ನಿಮಗೆ ಅನ್ವಯಿಸುತ್ತದೆ.

'ಜನುಮದ ಜಾತ್ರೆ' ಅಂತ ಬೇಂದ್ರೆ ಮಾತಿದೆ. ನೀವು ಜಾತ್ರೆಯನ್ನೊಂದು ಉದ್ದೇಶಪೂರ್ವಕವಾದ ಸಂಕೇತವನ್ನಾಗಿ ಏನೂ ಮಾಡಿಲ್ಲ. ಅದಿರುವ ಹಾಗೆ, ಜೀವಂತ ಅನುಭವವಾಗಿ ನಮ್ಮನ್ನು ಒಳಗೊಳ್ಳುತ್ತದೆ.

ನನಗೆ 'ಸಣ್ಣ ಸೋಮವಾರ' ನೆನಪಾಯಿತು. ಜೀವನಾನುಭವದ ನಾಸ್ಟಾಲ್ಜಿಯಾ ಮತ್ತು ಅನುಭಾವದೆಡೆಗೆ ಗಮನ- ಈ ಪ್ರಕ್ರಿಯೆ ಎರಡರಲ್ಲೂ ಇದೆ.

ಮಂಜತ್ತೆಯ ಪಾತ್ರ ಅಚ್ಚಳಿಯದಂತಿದೆ. 'ಜಾತ್ರೆ' ಎಂದ ತಕ್ಷಣ ಮನಸ್ಸಿಗೆ ಬರುವುದು ಮಂಜತ್ತೆಯ ರತ್ರಣವೇ! ಮಂಜತ್ತೆ ನಿಮ್ಮನ್ನೆಲ್ಲಾ ರತ್ರಣಕ್ಕೆ ಕರೆದೊಯ್ದ ಗುಂಪಿನಲ್ಲಿ ನಾನೂ ಇರಬೇಕಿತ್ತು ಎಂದು ಆಸೆಯಾಗುತ್ತಿದೆ!

ತುಂಬಾ ಧ್ವನಿಪೂರ್ಣವಾದ, ಸಂಕೇತವಾಗಿ ನಿಲ್ಲುವ ಶ್ರೇಷ್ಠ ಕೃತಿ ನಿಮ್ಮ ಉದ್ದೇಶವೇ ಅಲ್ಲ. 'ಜೀವನ ಎನ್ನುವುದು ಜಾತ್ರೆಯ ಹಾಗೆ' ಎಂದರೆ ಅದೊಂದು ಹಳಸಲು ರೂಪಕವೇ ಆಗಿರುತ್ತಿತ್ತು. ಆದರೆ ಬಾಲ್ಯದ, ಜಾತ್ರೆಯ ಜೀವಂತ ಅನುಭವವನ್ನು ನಮಗೆ ದಾಟಿಸುವ ವಿಶಿಷ್ಟ ಕೃತಿ 'ಜಾತ್ರೆ'. ಹಲವು ಪರಿಣಾಮಕಾರಿಯಾದ overtune ಗಳನ್ನು ಉಳ್ಳಂಥದ್ದು.

ಉದಾ.ಗೆ ಕಡೆಯಲ್ಲಿ ಸಿಕ್ಕುವ ಮೇಮಿಯವ. ನನ್ನ ಕಣ್ಣಲ್ಲೂ ನೀರು ಬರಿಸಿದ ಅವನು. ಯಾಕೆಂದರೆ ಈ ಜಾತ್ರೆಯ ನಂತರ ಮತ್ತೊಮ್ಮೆ ಸಿಕ್ಕಲಾರ ಅವನು. ನಿಮ್ಮ ಬರಹದಲ್ಲಿ ಮಾತ್ರ ಎಂದಿಗೂ ಇರುತ್ತಾನೆ.

'ಜಾತ್ರೆ' ಹೇಗೆ ಪ್ರತಿಯೊಬ್ಬರನ್ನೂ ಮುಂದೆ ಮುಂದೆ ದೂಡುತ್ತದೆ. ಜಾತ್ರೆ ನೋಡುತ್ತಾ ಮುಂದೆ ಹೋದ ಅಮ್ಮ ಮುದುಕಿಯಾದಳು. ಮಗಳು ಅಮ್ಮನಾದಳು. ಅಮ್ಮನಾದ ಮಗಳ ಮಕ್ಕಳೂ ಜಾತ್ರೆ ಸುತ್ತಿದವು....

ಈ ಜಾತ್ರೆಗೆ ನಿಜಕ್ಕೂ ಕೊನೆಯಿಲ್ಲ ಎಂಬುದನ್ನು ನೀವು ತಿಳಿಸಿದ್ದೀರಿ.(ಥ್ಯಾಂಕ್ಸ್.) ಅದೇ ಈ ಕೃತಿಯ ಯಶಸ್ಸು ಎನಿಸುತ್ತದೆ.

* * *

ಇವತ್ತು ನಿಮ್ಮ ಪತ್ರ ಬಂದಿದೆ. ನಾನೇ ಮೊದಲು ಬರೆಯಬೇಕಿತ್ತು. ಈಗಿನ ಕೆಲವೇ ಮುಖ್ಯ ಬರಹಗಾರ/ರ್ತಿ ರಲ್ಲೊಬ್ಬರಾದ ನಿಮಗೆ 'ನಂದಬಟ್ಟಲು' ಸ್ವಲ್ಪ ಇಷ್ಟವಾದ್ದು ನನಗೆ ಖುಷಿಯಾಯ್ತು.

ನೀವು ನನಗೆ ಏಕವಚನದಲ್ಲೇ ಬರೀಬೇಕಿತ್ತು! ನಿಮ್ಮನ್ನು ನೋಡಿ ಬಂದಿದ್ದರ ಬಗ್ಗೆ ನನ್ನ ತಂಗಿಗೆ ವರ್ಣಿಸಿ ಹೇಳಿದ್ದೇನೆ. ನನ್ನ ಉತ್ಸಾಹ ಅವಳಿಗೆ ಕುತೂಹಲಕರವಾಗಿದೆ.

ನನಗೆ ಎರಡು ದಿನದಿಂದ ವೈರಲ್ ಫೀವರ್! ಇನ್ನೂ ಮ ಧ್ಯಾನದಲ್ಲಿ* ಕೆಲವು ಬರಹಗಳನ್ನು ಓದಬೇಕಿದೆ.

ಬರೆಯಿರಿ. ಆಶೀರ್ವಾದ ಮಾಡಿ.

ಮಂಜುನಾಥ್.

---

* ('ಮಲ್ಲಿನಾಥನ ಧ್ಯಾನ'ದಲ್ಲಿ)

## 10. ಡಾ. ಅನುಪಮಾ ನಿರಂಜನ ಅವರ ಕೆಲ ಪತ್ರಗಳು

**ಪತ್ರ – 1**

ತಾ. 6. 9. 85.
ಬೆಂಗಳೂರು

ಪ್ರೀತಿಯ ವೈದೇಹಿ,

. . . ಇಂಜೆಕ್ಷನ್ ಎರಡನೆಯ ಕೋರ್ಸ್ ನಾನು ಎಣಿಸಿದಷ್ಟು ಉಗ್ರವಾಗಿರಲಿಲ್ಲ. ಮನೆಗೆ ಬಂದ ನಾಲ್ಕು ದಿನ ಸ್ವಲ್ಪ ಆಯಾಸವಿತ್ತು. ಅನಂತರ ಓಡಾಡಿಕೊಂಡು, ತೋಟದಲ್ಲಿ ಸುತ್ತಾಡಿಕೊಂಡು, ಪತ್ರಿಕೆ- ಮ್ಯಾಗಸಿನ್ ಕಡೆಗೆ, ಕಾದಂಬರಿ ಸಹ ಓದಿಕೊಂಡು, ಚೆನ್ನಾಗಿ ತಿನ್ನುತ್ತಾ ಕಾಲ ಕಳೆಯುತ್ತಿದ್ದೇನೆ. ಮುಂದಿನ ಕೋರ್ಸ್ ಈ ತಿಂಗಳ 20 ಕ್ಕೆ ಆರಂಭ. ಅಂತೂ ಸೆಪ್ಟೆಂಬರ್ ಕೊನೆಗೆ ಈ ಚಿಕಿತ್ಸೆಯಿಂದ ಬಿಡುಗಡೆ. ಆ ದಿನಕ್ಕಾಗಿ ಕಾಯುತ್ತಿದ್ದೇನೆ.

. . . ಚಿಕಿತ್ಸೆಯ ಕೆಟ್ಟ ಪರಿಣಾಮ ಎಂದರೆ ತಲೆಗೂದಲು ಉದುರುವುದು. ಬಹುಶಃ ಇನ್ನೊಂದು 15 ದಿನದಲ್ಲಿ ನನ್ನ ತಲೆ 'ತಿರುಪತಿ ತಿಮ್ಮಪ್ಪ'ನಿಗೆ ಹೋಗಿ

ಬಂದವರ ಹಾಗಾಗುತ್ತದೆ. ಇಂಜೆಕ್ಷನ್ ಮುಗಿದ ಬಳಿಕ ಮತ್ತೆ ಕೂದಲು ಹುಟ್ಟುತ್ತದೆ. ಅಲ್ಲಿಯವರೆಗೆ ಹೊರಗಿನ ಮಟ್ಟಿಗಾದರೂ ಬಳಸಲೆಂದು ಸೊಗಸಾದ ವಿಗ್ ಒಂದನ್ನು ಮಾಡಿಸಿ ಕೊಂಡಿದ್ದೇನೆ. ನೀವು ಬಂದಾಗ ಆ ಅಲಂಕಾರವನ್ನು ನೋಡಬಹುದು.

ದುಃಖ ನೋವುಗಳ ನೆನಪು ಕಡಮೆಯಾದ ಹಾಗೆ ಮತ್ತೆ ಲವಲವಿಕೆ ಮೂಡುತ್ತಿದೆ. ನಾಳೆ ಬರೆಯಬೇಕಾದ ವಿಷಯಗಳ ಬಗ್ಗೆ ಅಲೋಚಿಸಬಹುದಲ್ಲ ಎಂದು ಮೆದುಳು ಸ್ವಲ್ಪ ಸ್ವಲ್ಪ ಮೈ ಕೊಡವುತ್ತಿದೆ. ಬದುಕು ಹೀಗೇ ಅಲ್ಲವೆ?

. . .

ಎಂದು

ನಿಮ್ಮವಳೇ,

**ಅನುಪಮಾ**

**ಪತ್ರ - 2**

ತಾ. 31. 5. 86

ಬೆಂಗಳೂರು

ಪ್ರೀತಿಯ ವೈದೇಹಿ,

. . .ಸಾವು ಎಲ್ಲಿ ಹೊಂಚಿ ಕುಳಿತಿರುವುದೋ ಏನೋ. ಸದ್ದಿಲ್ಲದೆ ಬಂದು ಬಿಡುತ್ತದೆ. ಹಾಗೆ ಯಾವ ತೊಂದರೆಯೂ ಇಲ್ಲದೆ ಸಾವು ಬರಬೇಕೆಂಬಾಸೆ ನನಗೆ. ಸಿದ್ಧಳಾಗಿದ್ದೇನೆ ಮಾನಸಿಕವಾಗಿ. ಬರುವವರೆಗೂ ನನ್ನ ಕೆಲಸ ನಾನು ಮಾಡಿಕೊಂಡು ಹೋಗುತ್ತಿರುತ್ತೇನೆ. . .

ಗೀತಾ ಕುಲಕರ್ಣಿ ಎಷ್ಟು ಸುಲಭವಾಗಿ ಹೊರಟುಹೋದರು ನೋಡಿ. ಎರಡು ತಿಂಗಳ ಹಿಂದೆ ಅಕಾಡೆಮಿ ಸಮಾರಂಭದಲ್ಲಿ ಸಿಕ್ಕಿ ಬಾಯಿತುಂಬಾ ಮಾತಾಡಿದ್ದರು. ಅವರ ಬಗ್ಗೆ ಪರಿಷತ್ ಆಗಲೀ ಅಕಾಡೆಮಿಯಾಗಲೀ ಒಂದು ಶೋಕಸೂಚಕ ಸಭೆ ಜರುಗಿಸಲಿಲ್ಲ. (ಗಂಡು ಸಾಹಿತಿಗಳಿಗೆ ಮಾತ್ರ ಈ ಮರ್ಯಾದೆ). ಲೇಖಕಿಯ ಸಂಘದ ಪಾರ್ವತಿ (ಎಚ್ ಎಸ್ ಪಾರ್ವತಿ) ಮುಂದಿನವಾರ ಒಂದು ಸಂತಾಪ ಸಭೆ ನಡೆಸುತ್ತಿದ್ದಾರೆ. ಗೀತಾರನ್ನು ನಾವು ಇಷ್ಟಾದರೂ ನೆನೆಯದಿದ್ದರೆ?

ನಿಮ್ಮ

**ಅನುಪಮಾ**

